# ಆಧುನಿಕ ಕಥನ ಸಾಹಿತ್ಯದಲ್ಲಿ ಭೂ ಹೋರಾಟದ ಪ್ರತಿನಿಧೀಕರಣ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ

ಎಂ.ಸಿ.ಮಲ್ಲಿಕಾರ್ಜುನ
ಸಂಶೋಧಕರು
ಕೂಡ್ಲಿಗೆರೆ - ೫೭೭೨೩೩
ಭದ್ರಾವತಿ ತಾ. ಶಿವಮೊಗ್ಗ ಜಿಲ್ಲೆ.

ಮಾರ್ಗದರ್ಶಕರು
ಡಾ|| ಶಿವಾನಂದ ಎಸ್.ವಿರಕ್ತಮಠ
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ
ವಿದ್ಯಾರಣ್ಯ - ೫೮೩ ೨೭೬

226

ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೦೭

# ಆಧುನಿಕ  ಕಥನ ಸಾಹಿತ್ಯದಲ್ಲಿ ಭೂ ಹೋರಾಟದ ಪ್ರತಿನಿಧೀಕರಣ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ)  ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ

**ಎಂ.ಸಿ.ಮಲ್ಲಿಕಾರ್ಜುನ**
ಸಂಶೋಧಕರು
ಕೂಡ್ಲಿಗೆರೆ - ೫೭೭೨೩೩
ಭದ್ರಾವತಿ ತಾ. ಶಿವಮೊಗ್ಗ ಜಿಲ್ಲೆ.

ಮಾರ್ಗದರ್ಶಕರು:
**ಡಾ|| ಶಿವಾನಂದ ಎಸ್.ವಿರಕ್ತಮಠ**
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ
ವಿದ್ಯಾರಣ್ಯ ೫೮೩ ೨೭೬

ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೦೭

## ಪ್ರಮಾಣಪತ್ರ

ಆಧುನಿಕ ಕಥನ ಸಾಹಿತ್ಯದಲ್ಲಿ ಭೂಹೋರಾಟದ ಪ್ರತಿನಿಧೀಕರಣ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧವನ್ನು ಡಾ||ಶಿವಾನಂದ ಎಸ್.ವಿರಕ್ತಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಸದರಿ ಮಹಾಪ್ರಬಂಧವು ಈ ಮೊದಲು ಯಾವ ಪದವಿಗೂ ಸಲ್ಲಿಸಲ್ಪಟ್ಟಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: 09-08-07
ಸ್ಥಳ: ವಿದ್ಯಾರಣ್ಯ

ಎಂ.ಸಿ.ಮಲ್ಲಿಕಾರ್ಜುನ
ಸಂಶೋಧನಾ ವಿದ್ಯಾರ್ಥಿ
ಸಾಹಿತ್ಯ ಅಧ್ಯಯನ ವಿಭಾಗ,
ಕನ್ನಡವಿಶ್ವವಿದ್ಯಾಲಯ ಹಂಪಿ.

## ಮಾರ್ಗದರ್ಶಕರ ದೃಢೀಕರಣ

ಶ್ರೀ ಎಂ.ಸಿ.ಮಲ್ಲಿಕಾರ್ಜುನ ಅವರು ಆಧುನಿಕ ಕಥನ ಸಾಹಿತ್ಯದಲ್ಲಿ ಭೂಹೋರಾಟದ ಪ್ರತಿನಿಧೀಕರಣ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ: 09.08.2007
ಸ್ಥಳ: ವಿದ್ಯಾರಣ್ಯ

ಡಾ|| ಶಿವಾನಂದ ಎಸ್.ವಿರಕ್ತಮಠ
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ,
ಕನ್ನಡವಿಶ್ವವಿದ್ಯಾಲಯ ಹಂಪಿ.

# ಆಧುನಿಕ ಕಥನ ಸಾಹಿತ್ಯದಲ್ಲಿ ಭೂ ಹೋರಾಟದ ಪ್ರತಿನಿಧೀಕರಣ

## ಪರಿವಿಡಿ




ಸಂಗನ್ನಡ' ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ವೈಧಾನಿಕತೆ

೧.೪ ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

## ೧.೦ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಥನಪ್ರಾಕಾರಕ್ಕೆ ವಿಶಿಷ್ಟ ಸ್ಥಾನವಿದೆ. ಭಾರತೀಯ ಸಂದರ್ಭದಲ್ಲಿ ಕನ್ನಡ ಕಥನ ಸಾಹಿತ್ಯವು ಸತ್ವಶಾಲಿ ಹಾಗೂ ವೈವಿಧ್ಯಮಯವಾಗಿ ಬೆಳೆದು ಬಂದಿದೆ. ಇಂತಹ ಆಶಯಗಳು ಸಾಮಾಜಿಕ ಬದುಕಿನ ಸ್ಥಿತ್ಯಂತರಗಳ ಪ್ರತಿರೂಪಗಳಾಗಿ ಕಥನಗಳ ಮೂಲಕ ಅಭಿವ್ಯಕ್ತಗೊಂಡಿವೆ. ಕನ್ನಡ ಕಥನದಲ್ಲಿ, ಸಾಮಾಜಿಕ ಬದುಕಿನ ಭೂತ ಭವಿತವ್ಯದ ಮತ್ತು ವರ್ತಮಾನದ ಸಂಗತಿಗಳು ಸೃಜನಶೀಲ ಕೃತಿಗಳಲ್ಲಿ ಮೈದಾಳಿರುವುದನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಆಧುನಿಕ ಕನ್ನಡ ಕಥನದಲ್ಲಿ ಭೂ ಮತ್ತು ರೈತಪ್ರಶ್ನೆಗಳ ವಸ್ತುವಿನ ಹುಡುಕಾಟದ ಭಾಗವಾಗಿ ಅಧ್ಯಯನ ಕೈಗೊಳ್ಳಲಾಗಿದೆ. ಈ ಅಧ್ಯಯನಕಾರನು ಸಹ ಸ್ವತಃ ರೈತ ಕುಟುಂಬದಿಂದ ಬಂದವನು. ಆದ್ದರಿಂದ ರೈತರ ಸಮಸ್ಯೆಗಳನ್ನು ತುಂಬುಹತ್ತಿರದಿಂದ ಕಂಡಿರುವುದರಿಂದ ಸ್ವಾನುಭವ ಹಾಗೂ ರೈತರ ಸಮಸ್ಯೆಗಳಿಗೆ ಸ್ಪಂದಿಸುವ, ಗ್ರಹಿಸುವ ಬಗೆಯಿಂದಾಗಿ ಈ ಕುರಿತು ಸಮಗ್ರವಾಗಿ ಅಧ್ಯಯನ ಮಾಡುವ ಆಸಕ್ತಿ ಅಧ್ಯಯನಕಾರನಿಗಿದೆ. ಈ ಹಿನ್ನೆಲೆಯಲ್ಲಿ ಚಿಂತನೆಗಳ, ವಾದಗಳ, ಸೃಜನಶೀಲ ಲೇಖಕರು ಇಂತಹ ಪ್ರಶ್ನೆಗಳಿಗೆ ಕತೆ ಕಾದಂಬರಿಗಳ ಮೂಲಕ ಹೇಗೆ ಪ್ರತಿಕ್ರಿಯಿಸಿದ್ದಾರೆ ಮತ್ತು ಪರಿಹಾರ ಕಂಡುಕೊಂಡಿದ್ದಾರೆಂಬುದನ್ನು ಇಲ್ಲಿ ಅಧ್ಯಯನ ನಡೆಸಲಾಗುವುದು.

### ೧.೧ ಅಧ್ಯಯನದ ಉದ್ದೇಶ

ಭೂ ಹೋರಾಟ ಎಂದು ಬಳಸಿರುವ ಪದದಲ್ಲೇ ರೈತಪ್ರಶ್ನೆಯೂ ಅಡಕವಾಗಿದೆ. ಈ ಹಿನ್ನೆಲೆಯಲ್ಲಿ ಭೂಮಿ ಮತ್ತು ರೈತ ಪ್ರಶ್ನೆಗಳನ್ನು ಕಥನಗಳ ಮೂಲಕ ಅಭ್ಯಸಿಸಲಾಗುವುದು. ಭೂ ರೈತ ಪ್ರಶ್ನೆ ಎಂದು ಬಳಸಿರುವ ಪದವು ಇವೆರಡರ ಸಮಸ್ಯೆಗಳನ್ನೇ ಅಧ್ಯಯನ ಮಾಡುವುದಾಗಿದೆ. ಆದ್ದರಿಂದ ಭೂಮಿ ಮತ್ತು ಮನುಷ್ಯನ ನಡುವಿನ ಅಂತರ್ಗತ ಸಂಬಂಧಗಳನ್ನು ಪರಿಶೀಲಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಭೂ ರೈತ ಹೋರಾಟದ ಪರಿಕಲ್ಪನೆಯ ಆಶಯಗಳನ್ನು ಸೃಜಶೀಲ ಕತೆ ಕಾದಂಬರಿಗಳ ಮೂಲಕ ಅಧ್ಯಯನ ಮಾಡುವುದು ಈ ಅಧ್ಯಯನದ ಮುಖ್ಯ ನೆಲೆಯಾಗಿದೆ.

ಭೂಮಿ ಮನುಷ್ಯನ ಅಸ್ಮಿತೆ (Identity)ಯ ಪ್ರಶ್ನೆಯಾಗಿದೆ. ಆದ್ದರಿಂದ ಭೂ ಪ್ರಶ್ನೆ ಎನ್ನುವುದು ಕೇವಲ ಹಂಚಿಕೆ ಪ್ರಶ್ನೆಯಾಗುಳಿದಿಲ್ಲ. ಅದು ಮನುಷ್ಯನ ಅಸ್ತಿತ್ವದ,ಅಧಿಕಾರದ ಹಾಗೂ ಬದುಕಿನ ಪ್ರಶ್ನೆಯಾಗುಳಿದಿದೆ. ಭೂಸಂಬಂಧಿ ಆಶಯಗಳಾದ ಏಣಿಶ್ರೇಣಿ (ಜಾತಿ,ವರ್ಗ), ಜೀತ, ರೈತ ಮಹಿಳೆಯ ಪ್ರಶ್ನೆಗಳನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲು ಯತ್ನಿಸಲಾಗಿದೆ. ಬಂಡವಾಳಶಾಹಿಗಳ ಧೋರಣೆ, ಬಿತ್ತನೆ ಬೀಜದಲ್ಲಿ ಮೋಸ, ಬೆಲೆ ಕುಸಿತ, ಭೂ ಆಕ್ರಮಣಗಳಂಥ ಹಲವು ಅಂಶಗಳನ್ನು ಗುರುತಿಸಲು ಅಧ್ಯಯನದ ಮೂಲಕ ಯತ್ನಿಸಲಾಗುವುದು. ಭೂ ಪ್ರಶ್ನೆಯನ್ನು ಕಥನಗಳ ಮೂಲಕ ಚರ್ಚಿಸುವುದರ ಜೊತೆಗೆ ಭೂ ಹೋರಾಟಗಳನ್ನು ಮುಖ್ಯ ಕೇಂದ್ರವಾಗಿಟ್ಟುಕೊಂಡು ಅಭ್ಯಸಿಸಲು ಯತ್ನಿಸಿದೆ. ಈ ಸಮಕಾಲೀನ ಭೂ ಪ್ರಶ್ನೆಗಳನ್ನು ವಾದಗಳ ನೆಲೆಯಲ್ಲಿ, ಚಿಂತನೆಯ ನೆಲೆಯಲ್ಲಿ, ಭೂಸುಧಾರಣೆಯ ನೆಲೆಯಲ್ಲಿ ಅಧ್ಯಯನ ಮಾಡಲಾಗುವುದು.

ಇಲ್ಲಿ ಭೂಮಿಯನ್ನೇ ಆಧರಿಸಿರುವ ಮನುಷ್ಯಸಮುದಾಯದ ಬದುಕನ್ನು ಪ್ರತಿನಿಧಿಸುವುದು ಎಂಬ ವ್ಯಾಪಕ ನೆಲೆಯ ಮೂಲಕ ಭೂ ಹೋರಾಟವನ್ನು ಅರ್ಥೈಸಿಕೊಳ್ಳಲಾಗಿದೆ. ಇದು ರೈತರ ಬದುಕನ್ನೇ ಅಧ್ಯಯನ ಮಾಡುವುದರಿಂದ ಭೂ ಪ್ರಶ್ನೆ ಮತ್ತು ರೈತ ಪ್ರಶ್ನೆ ಬೇರೆ ಬೇರೆಯಲ್ಲ ಎಂಬುದನ್ನು ಈ ಅಧ್ಯಯನಕಾರ ಸ್ಪಷ್ಟಪಡಿಸುತ್ತಾನೆ. ರೈತ ಮತ್ತು ಭೂ ಪ್ರಶ್ನೆಗಳ ಸಮಸ್ಯೆಗಳು ಅಂದು ಇದ್ದವೂ, ಇಂದಿಗೂ ಇವೆ. ಭೂ ಪ್ರಶ್ನೆ ಕುರಿತು ಆಯಾ ಕಾಲದಲ್ಲಿ ಕಥನಕಾರರು ಹೇಗೆ ಗ್ರಹಿಸಿದ್ದಾರೆಂಬುದನ್ನು ಕಥನಗಳನ್ನು ಅಧ್ಯಯನದ ಮೂಲಕ ಚರ್ಚಿಸಲಾಗುವುದು. ಭೂ ಪ್ರಶ್ನೆಯು ರೈತಸಮುದಾಯದಲ್ಲಿ ಬೇಸಾಯ ವ್ಯವಸ್ಥೆಯ ಚೌಕಟ್ಟನ್ನು ಒಳಗೊಂಡಿದ್ದುದರ ಪರಿಣಾಮವಾಗಿ ಭೂ ಪ್ರಶ್ನೆಗಳು ಏಕಮುಖಿಯಾಗುಳಿದಿಲ್ಲ. ಅವುಗಳು ಹಲವು ಮುಖಗಳನ್ನು ಒಳಗೊಂಡಿವೆ. ಅಳತೆ, ಕರ, ಕಂದಾಯ, ಗೇಣಿ, ಒಡೆತನ, ಕಾನೂನು, ಗೇಣಿದಾರ, ಜೀತಗಾರ, ಭೂಮಾಲೀಕ, ಭೂಮಿ ಹಕ್ಕು, ಸುಧಾರಣೆ ಸೀರಾಪರಿ ಮುಂತಾದ ಹತ್ತು ಹಲವು ಮುಖಗಳಿಂದ ಜ್ವಲಂತ ಸಮಸ್ಯೆಗಳಾಗಿ ಉಳಿದಿವೆ.

ಸಮಕಾಲೀನ ರೈತ ಹೋರಾಟಗಳು ಹಾಗೂ ಭೂ ಹೋರಾಟಗಳನ್ನು ಈ ಅಧ್ಯಯನವು ಗಮನದಲ್ಲಿರಿಸಿಕೊಂಡಿದೆ. ಅಲ್ಲದೆ ಪ್ರಸ್ತುತ ಅಧ್ಯಯನದಲ್ಲಿ ಭೂಹೋರಾಟವೆಂದರೆ ಭೌತಿಕ (ಫಿಸಿಕಲ್)ವಾಗಿ ಮಾತ್ರ ತೆಗೆದುಕೊಳ್ಳದೆ,ವಿವಿಧ ಆಯಾಮಗಳ ಮೂಲಕ ಅಧ್ಯಯನ ಮಾಡಲಾಗುವುದು. ಜೀತ ಪದ್ಧತಿ, ಗೇಣಿದಾರನ ಸಮಸ್ಯೆಗಳನ್ನು ಕಥನಕಾರನ ಗ್ರಹಿಕೆಯ ಮೂಲಕ ಅಧ್ಯಯನ ಮಾಡಲಾಗುವುದು.ಗೇಣಿದಾರ-ಭೂಮಾಲೀಕ, ಶೋಷಿತ-ಶೋಷಕರನ್ನು ಕಥನಕಾರರು ಗ್ರಹಿಸಿರುವ ಕ್ರಮ, ಹಾಗೂ ಭೂ ಸಂಬಂಧಿ ಪ್ರಶ್ನೆಗಳು ಇವರಲ್ಲಿ ಹೇಗೆ ಉದ್ಭವವಾಗಿವೆ? ಈ ರೀತಿಯ ಪ್ರಶ್ನೆಗಳು ಯಾಕೆ ಮತ್ತು ಯಾರನ್ನು ಪ್ರತಿನಿಧಿಸಿದವು?ಎಂಬುದನ್ನು ಕಥಾನಕಗಳ ಮೂಲಕ ನೋಡಲಾಗುವುದು. ಭೂ ಹೋರಾಟಗಳು ಹಾಗೂ ರೈತ ಹೋರಾಟಗಳು ವರ್ತಮಾನದ ಒತ್ತಡಗಳಿಗೆ ಹೇಗೆ ಪ್ರತಿಕ್ರಿಯಿಸಿವೆ? ಅವುಗಳಿಗೆ ಸೃಜನಶೀಲ ಕಥನಕಾರ ಪ್ರತಿಕ್ರಿಯಿಸಿದ ಬಗೆ, ಭೂ ಒಡೆತನ ಮತ್ತು ಭೂ-ಸಂಬಂಧಿ ಪ್ರಶ್ನೆಗಳನ್ನು ಬ್ರಿಟಿಷ್ ಆಡಳಿತ ಹಾಗೂ ಕಾನೂನುಗಳು ಹೇಗೆ ನಿಭಾಯಿಸಿದವು? ಎಂಬುದನ್ನು ಅಧ್ಯಯನ ಮಾಡಲಾಗುವುದು.

ಭೂಮಿ ಮತ್ತು ರೈತರ ಬಿಕ್ಕಟ್ಟುಗಳನ್ನು ಸೃಜನಶೀಲ ಕಥನಕಾರರು ತಮ್ಮ ಕಥಾನಕಗಳಲ್ಲಿ ಅಭಿವ್ಯಕ್ತಿಸಿದ ಬಗೆ ಹಾಗೂ ಇಂತಹ ಅಂಶಗಳಿಗೆ ಕಥನದಲ್ಲಿರಬಹುದಾದ ಪರ್ಯಾಯ ಮೌಲ್ಯಗಳ ಹುಡುಕಾಟವನ್ನು ಅಧ್ಯಯನದಲ್ಲಿ ಗುರುತಿಸಲಾಗುವುದು. ಈ ಎಲ್ಲಾ ಹಿನ್ನೆಲೆಯಲ್ಲಿ ಕೆಲವು ಮುಖ್ಯ ಅಂಶಗಳ ಮೂಲಕ ಅಧ್ಯಯನ ಮಾಡಲಾಗುವುದು.ಅಂತಹ ಅಂಶಗಳು ಈ ಕೆಳಗಿನಂತಿವೆ.

೧ ಭೂ ಸಂಬಂಧಿ ಪ್ರಶ್ನೆ, ರೈತ ಪ್ರಶ್ನೆಗಳು ಆಧುನಿಕ ಕನ್ನಡ ಕತೆ ಮತ್ತು ಕಾದಂಬರಿಗಳಲ್ಲಿ ಯಾವ ಬಗೆಯಲ್ಲಿ ಮೈದಾಳಿವೆ ಎಂಬುದನ್ನು ಪರಿಶೀಲಿಸಲಾಗುವುದು.

೨ ಭೂ ಸಂಬಂಧಿ ನೆಲೆಯಲ್ಲಿ ಜೀತಗಾರಿಕೆ, ರೈತಮಹಿಳೆ ಮತ್ತು ಗೇಣಿದಾರನ ಸಮಸ್ಯೆಗಳನ್ನು ಕಥನಕಾರರು ಹೇಗೆ ಗ್ರಹಿಸಿದ್ದಾರೆಂಬುದನ್ನು ವಿಶ್ಲೇಷಿಸಲಾಗುವುದು.

೩. ಭೂ ಸಂಬಂಧಿ ಸಂಬಂಧಗಳ ಸಾಮಾಜಿಕ ಏಣಿಶ್ರೇಣಿಗಳ (ಜಾತಿ, ವರ್ಗಗಳ) ಮೂಲಕ ಪಡೆದ ಆಯಾಮಗಳನ್ನು ಗುರುತಿಸಲಾಗುವುದು.

೪. ಭೂ ಸಂಬಂಧಿ ಪ್ರಶ್ನೆಗಳು ಹೇಗೆ ಉದ್ಭವವಾದವು? ಇಂತಹ ಪ್ರಶ್ನೆಗಳು ಯಾಕೆ ಮತ್ತು ಯಾರನ್ನು ಪ್ರತಿನಿಧಿಸಿದವು ಎಂಬುದನ್ನು ಕಥಾನಕಗಳಲ್ಲಿ ಪರಿಶೀಲಿಸಲಾಗುವುದು.

೫. ಭೂ ಹೋರಾಟಗಳು ಹಾಗೂ ರೈತ ಹೋರಾಟಗಳು ವರ್ತಮಾನದ ಒತ್ತಡಗಳಿಗೆ ಹೇಗೆ ಪ್ರತಿಕ್ರಿಯಿಸಿವೆ? ಹಾಗೂ ಅವುಗಳಿಗೆ ಸೃಜನಶೀಲ ಕಥನಕಾರ ಹೇಗೆ ಪ್ರತಿಕ್ರಿಯಿಸಿದ್ದಾನೆ ಎಂಬುದನ್ನು ಚರ್ಚಿಸಲಾಗುವುದು.

೬. ಭೂ ಒಡೆತನ ಮತ್ತು ಭೂ ಸಂಬಂಧಿ ಪ್ರಶ್ನೆಗಳನ್ನು ಬ್ರಿಟಿಷ್ ಆಡಳಿತ ಹಾಗೂ ಕಾನೂನುಗಳು ಹೇಗೆ ನಿಭಾಯಿಸಿವೆ?ಎಂಬುದನ್ನು ವಿಶ್ಲೇಷಿಸಲಾಗುವುದು.

೭. ಸಮಕಾಲೀನ ಸಂದರ್ಭದ ರೈತ ಮತ್ತು ಭೂ ಹೋರಾಟಗಳನ್ನು ಅಧ್ಯಯನ ಮಾಡಲಾಗುವುದು. ಇಂತಹ ಆಶಯಗಳನ್ನು ವಾದಗಳ,ಚಿಂತನೆಗಳ ಮೂಲಕ ಚರ್ಚಿಸಲಾಗುವುದು.

೮. ಭೂ ಸಂಬಂಧಿ ನೆಲೆಯ ಪ್ರಾಕೃತಿಕ ವಿಕೋಪಗಳಿಂದಾಗುವ ಭೂಸಮಸ್ಯೆ ಕುರಿತು,ಅಭಿವೃದ್ಧಿಯಿಂದಾದ, ಯೋಜನೆಗಳಿಂದಾದ ಭೂಸಮಸ್ಯೆ ಕುರಿತು ಕಥನಕಾರರು ಪ್ರತಿಕ್ರಿಯಿಸಿದ ಬಗೆಯನ್ನು ಪರಿಶೀಲಿಸಲಾಗುವುದು.

೯. ಕತೆ ಮತ್ತು ಕಾದಂಬರಿಗಳಲ್ಲಿ ಭೂ ರೈತ ಪ್ರಶ್ನೆಗಳನ್ನು ತಾತ್ವಿಕ ಆಶಯವಾಗಿ ಉದಾರವಾದಿ ನೆಲೆ, ಹಕ್ಕಿನ ನೆಲೆ, ವಿಧಿವಾದದ ನೆಲೆ, ಹೋರಾಟದ ನೆಲೆ, ಅನುಕಂಪದ ನೆಲೆ, ದಬ್ಬಾಳಿಕೆ ನೆಲೆ, ಕಾನೂನಿನ ನೆಲೆ, ಕೌಟುಂಬಿಕ ನೆಲೆ, ರೈತ ಮಹಿಳಾ ನೆಲೆ ಮತ್ತು ಜಾಗತಿಕ ನೆಲೆಗಳ ಮೂಲಕ ಅಭ್ಯಸಿಸಲಾಗುವುದು.

೧೦. ಸಾಹಿತ್ಯ ಕೃತಿಗಳಲ್ಲಿರಬಹುದಾದ ಪರ್ಯಾಯ ಮೌಲ್ಯಗಳ ಹುಡುಕಾಟ ನಡೆಸಲಾಗುವುದು. ಅಲ್ಲದೆ ಭೂಮಾಲೀಕನ ಕ್ರೌರ್ಯದ ವಿರುದ್ಧ ಹಾಗೂ ರೈತ ಪರವಾದ ನೆಲೆಯ ಮೂಲಕ ಅಧ್ಯಯನ ಮಾಡಲಾಗುವುದು. ಈ ಕುರಿತು ಸಾಹಿತ್ಯ ಕೃತಿಗಳಲ್ಲಿ ಸೂಚಿಸುವ ಜೀವಪರ ಮೌಲ್ಯಗಳನ್ನು ಗುರುತಿಸಲಾಗುವುದು.

### ೧.೨ ಅಧ್ಯಯನದ ವ್ಯಾಪ್ತಿ

ವಸಹಾತು ಸಂದರ್ಭ ಮತ್ತು ಸ್ವಾತಂತ್ರ್ಯೋತ್ತರ ಸಂದರ್ಭವು ಸಾಮಾಜಿಕ ಬದಲಾವಣೆಯ ಕಾಲವಾಗಿದೆ. ಈ ಎರಡು ಕಾಲಘಟ್ಟಗಳಲ್ಲಿ ಅಭಿವ್ಯಕ್ತಿಗೊಂಡ ಸಾಹಿತ್ಯವನ್ನು ವಿಶ್ಲೇಷಿಸಲು ಅಧ್ಯಯನದ ಚೌಕಟ್ಟಿನಲ್ಲಿ ಪ್ರಯತ್ನಿಸಲಾಗಿದೆ. ವಸಹಾತು ಸಂದರ್ಭ ಹಾಗೂ ರಾಷ್ಟ್ರೀಕರಣಗೊಂಡ ಸಂದರ್ಭದ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಚಳವಳಿಗಳ ಪ್ರಭಾವದಲ್ಲಿ ಆಧುನಿಕ ಕನ್ನಡ ಕಥನ ಸಾಹಿತ್ಯ ಬೆಳೆದು ಬಂದ ಬಗೆಯನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತದೆ.

ಕನ್ನಡ ಸಾಹಿತ್ಯವು ಕಾವ್ಯ, ನಾಟಕ, ಜನಪದ, ಕತೆ, ಕಾದಂಬರಿ ಮೊದಲಾದ ಪ್ರಕಾರಗಳನ್ನು ಒಳಗೊಂಡಿದ್ದು,ನನ್ನ ಅಧ್ಯಯನಕ್ಕೆ ಕತೆ ಮತ್ತು ಕಾದಂಬರಿಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ರೈತ ಮತ್ತು ಭೂ ಪ್ರಶ್ನೆಗಳು ಕಾವ್ಯದ ಮೂಲಕ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದಾಗಿದೆ. ಕುವೆಂಪುರವರ ಅನ್ನದಾತ, ನೇಗಿಲಯೋಗಿ, ಮೊದಲಾದ ಕವಿತೆಗಳನ್ನು ಗಮನಿಸಬಹುದು. ಭೂ ರೈತ ಪ್ರಶ್ನೆಗಳ ಕುರಿತು ಸಮಗ್ರವಾದ ಚಿಂತನೆ ನಡೆಸುವ ಉದ್ದೇಶದಿಂದಾಗಿ ಕತೆ ಮತ್ತು ಕಾದಂಬರಿಗಳನ್ನು ಮಾತ್ರ ಆಯ್ದುಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಕಾವ್ಯ,ನಾಟಕ ಮೊದಲಾದ ಪ್ರಕಾರಗಳನ್ನು ಈ ಅಧ್ಯಯನವು ತನ್ನ ವ್ಯಾಪ್ತಿಯಿಂದ ಕೈಬಿಡಲಾಗಿದೆ.

ಸಮಗ್ರವಾಗಿ ಅಧ್ಯಯನ ಮಾಡುವ ಸಲುವಾಗಿ ಸಮಕಾಲೀನ ರೈತ ಹೋರಾಟಗಳು, ಸಮಕಾಲೀನ ಭೂಸಮಸ್ಯೆಗಳು, ಭೂಸುಧಾರಣೆಯ ಚಾರಿತ್ರಿಕ ಘಟನೆಗಳನ್ನು ವ್ಯಾಪ್ತಿಯೊಳಗೆ ಸೇರಿಸಿಕೊಳ್ಳಲಾಗಿದೆ. ಭೂಮಿಕುರಿತಾಗಿ ಇದುವರೆಗೆ ನಡೆದ ಚಿಂತನೆಗಳು ಹಾಗೂ ವಾದಗಳನ್ನು ಅಧ್ಯಯನದ ವ್ಯಾಪ್ತಿಯೊಳಗೆ ಅಳವಡಿಸಿಕೊಳ್ಳಲಾಗಿದೆ. ಇಲ್ಲದೆ ಕನ್ನಡ ಕಥನ ಪ್ರಕಾರದಲ್ಲಿ ಒಂದೊಂದು ವಸ್ತುವಿಷಯವನ್ನು ಕುರಿತು ಮಹಾಪ್ರಬಂಧವನ್ನು ರಚಿಸುವಷ್ಟು ಆಕರ ಮತ್ತು ವಸ್ತುಗಳಿವೆ. ಆದ್ದರಿಂದ ಈ ಅಧ್ಯಯನದಲ್ಲಿ ಪ್ರಾತಿನಿಧಿಕ ಕಥನಕಾರರ ಭೂ ಸಂಬಂಧಿ ಹಾಗೂ ರೈತ ಪ್ರಶ್ನೆಯ, ಆಶಯವುಳ್ಳ ಪ್ರಾತಿನಿಧಿಕ ಕತೆ ಮತ್ತು ಕಾದಂಬರಿಗಳನ್ನು ಮಾತ್ರ ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಒಂದು ಮಿತಿ ಹಾಕಿಕೊಳ್ಳಲೇ ಬೇಕು. ಇಲ್ಲದೆ ಹೋದಲ್ಲಿ ಅದು ಆದಿ ಅಂತ್ಯವಿಲ್ಲದ ಅಧ್ಯಯನವಾಗುತ್ತದೆ. ಆಧುನಿಕ ಕನ್ನಡ ಕಥನದಲ್ಲಿ ಬರುವ ರೈತ ಪ್ರಶ್ನೆ, ಭೂ ಪ್ರಶ್ನೆಯನ್ನು ಪ್ರತಿನಿಧಿಸುವಂತಹ ಕೃತಿಗಳನ್ನು ಮಾತ್ರ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಒಂದು ವಸ್ತು ವಿಷಯವನ್ನು ಕುರಿತು ಆಳವಾಗಿ ಅರಿಯುವ ಉದ್ದೇಶದಿಂದ ಇಂತಹ ಚೌಕಟ್ಟನ್ನು ರೂಪಿಸಿಕೊಳ್ಳುವುದು ಈ ಅಧ್ಯಯನಕ್ಕೆ ಅಗತ್ಯವೆನಿಸಿದೆ. ಭೂ ಪ್ರಶ್ನೆಯನ್ನು ಪ್ರತಿನಿಧಿಸುವಂತಹ ಪ್ರಾತಿನಿಧಿಕ ಲೇಖಕರನ್ನು ವ್ಯಾಪ್ತಿಯೊಳಗೆ ಸೇರಿಸಿಕೊಳ್ಳಲಾಗಿದೆ. "ಹೀಗಾಗಿ ೧೯ನೇ ಶತಮಾನದ ಅಂತ್ಯದಿಂದ, ೨೦ನೇ ಶತಮಾನದವರೆಗಿನ ಅಂದರೆ ಒಂದು ಶತಮಾನದ ಭೂ ರೈತ ಪ್ರಶ್ನೆಗಳ ಕುರಿತಾದ ಕೆಲ ಪ್ರಾತಿನಿಧಿಕ ಕತೆ ಮತ್ತು ಕಾದಂಬರಿಗಳನ್ನು ಆಯ್ಕೆಮಾಡಿಕೊಂಡು ಅಧ್ಯಯನ ಮಾಡಲಾಗುವುದು. ಈ ಅಧ್ಯಯನ ಬಹುದೊಡ್ಡ ವಿಷಯ ವ್ಯಾಪ್ತಿಯನ್ನು ಹೊಂದಿರುವುದರಿಂದ ಒಬ್ಬ ಲೇಖಕ ಭೂರೈತ ಪ್ರಶ್ನೆ ಒಳಗೊಂಡ ಪ್ರಾತಿನಿಧಿಕ ಕೃತಿಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಏಕೆಂದರೆ ಒಬ್ಬ ದೊಡ್ಡ ಲೇಖಕನ ಎಲ್ಲ ಕೃತಿಗಳಲ್ಲೂ ಭೂರೈತ ಪ್ರಶ್ನೆಗಳು ನೇರವಾಗಿ ಅಲ್ಲದಿದ್ದರೂ ಅಂತರಿಕವಾಗಿ ಗರ್ಭೀಕರಿಸಿಕೊಂಡಿರುತ್ತದೆ. ಆದ್ದರಿಂದ ಈ ಅಧ್ಯಯನಕ್ಕೆ ಸುದೀರ್ಘ ಕಾಲಾವಕಾಶನ್ನು ಬೇಡುತ್ತದೆ. ಆದ್ದರಿಂದ ಇಲ್ಲಿ ಅಧ್ಯಯನ ದೃಷ್ಟಿಯಿಂದ ಮತ್ತು ಕಾಲಾವಧಿಯ ಮಿತಿಯಿಂದಾಗಿ ಲೇಖಕರ ಎಲ್ಲಾ ಕೃತಿಗಳನ್ನು ವಿಶ್ಲೇಷಿಸಲು ಹೋಗದೆ ಕೆಲ ಪ್ರಾತಿನಿಧಿಕ ಕೃತಿಗಳನ್ನು ಆಯ್ಕೆಮಾಡಿಕೊಂಡು ವ್ಯಾಪ್ತಿಯನ್ನು ಮಿತಿಗೊಳಿಸಿಕೊಳ್ಳಲಾಗಿದೆ."

ಸಾಹಿತ್ಯ ಪ್ರಕಾರದ ಪ್ರಧಾನವಾಹಿನಿಯಲ್ಲಿ ಸಾಕಷ್ಟು ಚರ್ಚಿತರಾದ ಪ್ರಾತಿನಿಧಿಕ ಲೇಖಕರನ್ನು

ಕೈಗೆತ್ತಿಗೊಂಡಾಗ ಅವರ ಕೃತಿಗಳಲ್ಲಿ ಭೂಸಂಬಂಧಿ, ರೈತಪ್ರಶ್ನೆ, ಭೂ ಹಕ್ಕು, ಭೂಮಾಲೀಕ, ಶೋಷಣೆ ಮತ್ತು ಗೇಣಿಪ್ರಶ್ನೆಗಳು ಕೆಲವರಿಗೆ ಪ್ರಮುಖವಾಗಿ ಕಂಡಿರಬಹುದು ಅಥವಾ ಕಾಣದೇ ಇರಬಹುದು ಎಂಬ ಅರಿವನ್ನು ಈ ಅಧ್ಯಯನವು ಗಮನದಲ್ಲಿರಿಸಿಕೊಂಡಿದೆ. ಆದ್ದರಿಂದ ಬಹುಸಂಖ್ಯಾತ ರೈತಸಮುದಾಯದ ಸಮಸ್ಯೆಗಳು ಮತ್ತು ಭೂ ಸಮಸ್ಯೆಗಳು ಈ ವ್ಯಾಪ್ತಿಯೊಳಗೆ ಬರುತ್ತವೆ. ಈ ರೀತಿಯ ಬಹುದೊಡ್ಡ ಆಶಯವನ್ನಿಟ್ಟುಕೊಂಡು ಅಧ್ಯಯನ ಕೈಗೊಳ್ಳುವಾಗ ನಿರ್ದಿಷ್ಟವಾದ ಗೆರೆ ಎಳೆದುಕೊಳ್ಳುವುದು ಕಷ್ಟಸಾಧ್ಯದ ಮಾತು. ಏಕೆಂದರೆ ಈ ವಸ್ತುವಿನ ಸಮಸ್ಯೆಗಳು ಸೃಜನಶೀಲ ಲೇಖಕನ ಮೇಲೆ ಪರಿಣಾಮ ಬೀರಬಹುದು ಅಥವಾ ಬೀರದೆ ಇರಬಹುದು. ಆದ್ದರಿಂದ ಇದು ಸಂಕೀರ್ಣ ಸ್ವರೂಪವುಳ್ಳ ಅಧ್ಯಯನವಾಗಿದ್ದು, ಈ ಹಿನ್ನೆಲೆಯಲ್ಲಿ ಭೂ ಪ್ರಶ್ನೆ, ರೈತ ಪ್ರಶ್ನೆಯನ್ನು ಒಳಗೊಂಡಿರುವ ಕೃತಿಗಳನ್ನು ಅಧ್ಯಯನ ಮಾಡಲಾಗುವುದು. ಇದೇ ಕಾಲಕ್ಕೆ ಇಂತಹ ಪ್ರಶ್ನೆಗಳನ್ನು ಒಳಗೊಳ್ಳದ ಕೃತಿಗಳನ್ನು ನಿಬಂಧದ ಪರಿಮಿತಿಯಿಂದಾಗಿ ಕೈಬಿಡಲಾಗುವುದು. ಪ್ರಾತಿನಿಧಿಕ ಲೇಖಕರ ಕೃತಿಗಳನ್ನು ಆಯ್ದುಕೊಂಡು ವಿಶ್ಲೇಷಿಸಲಾಗುವುದು. ಈ ವಸ್ತು ವಿಷಯಕ್ಕೆ ಸಂಬಂಧಿಸಿದಂತೆ ಖ್ಯಾತ ಲೇಖಕರಲ್ಲದೆ ಇತರೆ ಲೇಖಕರ ಮಹತ್ವವನ್ನು ನಿರ್ಲಕ್ಷಿಸದೆ ಚರ್ಚಿಸಲಾಗುವುದು. ಈ ಎಲ್ಲಾ ಅಂಶಗಳ ಹಿಂದೆ ಆಯ್ಕೆಯ ಮಿತಿಗಳಿವೆ ಎಂಬ ಎಚ್ಚರವಿಟ್ಟುಕೊಂಡೇ ಅಧ್ಯಯನ ವ್ಯಾಪ್ತಿಗೊಂದು ಚೌಕಟ್ಟನ್ನು ರೂಪಿಸಿಕೊಳ್ಳಲಾಗಿದೆ.

ಈ ಅಧ್ಯಯನದಲ್ಲಿ ಪ್ರಾತಿನಿಧಿಕವಾಗಿ ಮಾಸ್ತಿ, ಕುವೆಂಪು, ಶಿವರಾಮ ಕಾರಂತ, ಕೊರಡ್ಕಲ್ ಶ್ರೀನಿವಾಸರಾವ್, ರಾವ್‌ಬಹದ್ದೂರ್, ಆನಂದಕಂದ, ನಿರಂಜನ, ನಾ.ಡಿಸೋಜ, ಅನಂತಮೂರ್ತಿ, ಲಂಕೇಶ್, ಪೂರ್ಣಚಂದ್ರತೇಜಸ್ವಿ, ಬರಗೂರು ರಾಮಚಂದ್ರಪ್ಪ, ದೇವನೂರು ಮಹಾದೇವ, ಬೆಸಗರಹಳ್ಳಿ ರಾಮಣ್ಣ, ಕುಂ.ವೀರಭದ್ರಪ್ಪ, ವಿಶುಕುಮಾರ್, ಚನ್ನಣ್ಣವಾಲೀಕಾರ, ಶೇಷನಾರಾಯಣ, ವೈದೇಹಿ, ಅರವಿಂದ ಮಾಲಗತ್ತಿ, ಅಮರೇಶ ನುಗಡೋಣಿ, ಮೊಗಳ್ಳಿಗಣೇಶ್ ಮತ್ತು ಎಂ.ಎಸ್.ವೇದಾ ಮೊದಲಾದವರ ಕೃತಿಗಳನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

"ಕೆಲವು ಪ್ರಾತಿನಿಧಿಕ ಲೇಖಕರನ್ನಷ್ಟೇ ಇಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವುದರ ಹಿಂದಿನ ಉದ್ದೇಶ ಸ್ಪಷ್ಟವಾಗಿಯೇ ಇದೆ. ಅಧ್ಯಯನ ವಿಷಯಕ್ಕೆ ಸೀಮಿತವಾಗಿ ಆಧುನಿಕ ಕಥನ ಸಾಹಿತ್ಯದಲ್ಲಿ ಕಂಡುಬರುವ ಭೂಹೋರಾಟದ ಪ್ರಶ್ನೆಗಳಿಗಷ್ಟೇ ಗಮನವನ್ನು ಕೇಂದ್ರೀಕರಿಸಲಾಗಿದೆ. ಹಾಗಾಗಿ ಈ ವಸ್ತುವನ್ನು ಮೂಲ ಸಾಮಗ್ರಿಯಾಗಿರಿಸಿಕೊಂಡಿರುವ ಅಥವಾ ಈ ವಸ್ತುವಿನ ಕುರಿತು ಸೃಜನಾತ್ಮಕವಾಗಿ ಪ್ರತಿಕ್ರಿಯಿಸಿರುವ ಲೇಖಕರ ಕೃತಿಗಳನ್ನಷ್ಟೇ ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ. ಪ್ರತಿಯೊಬ್ಬ ಲೇಖಕನಿಗೆ ತನ್ನದೇ ಆಯ್ಕೆಗಳಿರುತ್ತವೆ. ಅವನ ಪ್ರಭಾವ,ಅನುಭವ,ಹಿನ್ನೆಲೆ ಪ್ರೇರಣೆಗಳು ಇತರರಿಗಿಂತ ಬೇರೆಯೇ ಆಗಿರುವುದರಿಂದ ಅವನ ಅಭಿವ್ಯಕ್ತಿ ಮಾಧ್ಯಮವಾಗಿ ಮೂಡಿಬರುವ ಸೃಜನಶೀಲ ಕಲಾಕೃತಿಯಲ್ಲೂ ಅದು ಪಡಿಮೂಡುತ್ತದೆ. ಆಧುನಿಕ ಕನ್ನಡದ ಎಲ್ಲಾ ಕಥನಕಾರರು ಭೂ ಪ್ರಶ್ನೆಯನ್ನು ಕುರಿತು ಪ್ರತಿಕ್ರಿಯಿಸಲೇ ಬೇಕೆಂಬ ನಿರೀಕ್ಷೆ ಹಾಸ್ಯಾಸ್ಪದವಾಗುತ್ತದೆ. ಹಾಗಾಗಿ ಈ ಸಮಸ್ಯೆಯನ್ನು ಕುರಿತು ಸ್ಪಂದಿಸಿರುವ ಅದರಿಂದ ಪ್ರಭಾವಿತರಾಗಿರುವ ಲೇಖಕರ ಹಾಗೂ ಅದನ್ನೇ ವಸ್ತುವನ್ನಾಗಿ ಮಾಡಿಕೊಂಡು ಬಂದಿರುವ ಮಾತ್ರವೇ ನನ್ನ ಅಧ್ಯಯನದಲ್ಲಿ ಪರಿಗಣಿಸಲಾಗಿದೆ. ನನ್ನ ಅರಿವಿನ ಪರಿಮಿತಿಯಲ್ಲಿ ನನ್ನ ಅಧ್ಯಯನಕ್ಕೆ ದಕ್ಕಿದ ಕೃತಿಗಳನ್ನಷ್ಟೇ ಇಲ್ಲಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಉಳಿದ ಕೃತಿಗಳು ಮಹತ್ವದವುಗಳಾಗಿದ್ದು, ಒಂದು ವೇಳೆ ಈ ಅಧ್ಯಯನದಲ್ಲಿ ವಿಶ್ಲೇಷಣೆಗೆ ಒಳಗಾಗದೇ ಹೋಗಿದ್ದರೆ ಅದು ನನ್ನ ಅನ್ವೇಷಣೆಯ ಮಿತಿಯಂದೇ ಭಾವಿಸುತ್ತೇನೆ. ಹಾಗೂ ನನ್ನ ಮುಂದಿನ ಅಧ್ಯಯನದಲ್ಲಿ ಅವುಗಳನ್ನು ಪರಿಗಣಿಸುತ್ತೇನೆ."

### ೧.೩ ಅಧ್ಯಯನದ ವೈಧಾನಿಕತೆ

ಒಂದು ವಸ್ತು ವಿಷಯವನ್ನು ಯಾವ ದೃಷ್ಟಿಕೋನ ಮತ್ತು ಯಾವ ನೆಲೆಯಲ್ಲಿ ನೋಡಬೇಕು ಎನ್ನುವುದು ಅಲ್ಲಿನ ಸೈದ್ಧಾಂತಿಕತೆಯ ಸ್ವರೂಪದಿಂದ ನಿರ್ಣಯವಾಗುತ್ತದೆ. ಮಾನವಿಕ ಅಸ್ತಿತ್ವದ ಪ್ರಶ್ನೆಯ ಹುಡುಕಾಟವಾಗಿರುವ ಸಾಂಸ್ಕೃತಿಕ ಅಧ್ಯಯನಗಳಲ್ಲಿ ಇದು ಬಹುಮುಖ್ಯವಾದುದು. ಈ ಅಧ್ಯಯನದ ಸೈದ್ಧಾಂತಿಕ ಸ್ವರೂಪದಲ್ಲಿ ವ್ಯಕ್ತಿನಿಷ್ಠತೆಯ ಸಹಾಯದಿಂದ ಸಾಮಾಜಿಕ ನೆಲೆಯ ಸ್ವರೂಪವನ್ನು ಗ್ರಹಿಸಲು

ಪ್ರಯತ್ನಿಸಲಾಗುವುದು.

### ೧.ವೈಧಾನಿಕತೆಯ ಸ್ವರೂಪ

ಸೈದ್ಧಾಂತಿಕ ಸ್ವರೂಪವನ್ನು ವಿಶ್ಲೇಷಿಸಿಕೊಳ್ಳುವಾಗ ಸಬ್ಜೆಕ್ಟಿವಿಟಿ ಮತ್ತು ಆಬ್ಜೆಕ್ಟಿವಿಟಿಗಳ ಚರ್ಚೆ ಅಗತ್ಯ. ಈ ವಸ್ತುನಿಷ್ಠತೆ ಎಂಬುದು ಪರಿಶುದ್ಧ ವಿಜ್ಞಾನದ ಸಂದರ್ಭದಲ್ಲಿ ಹೆಚ್ಚು ಕಾರ್ಯಪ್ರವೃತ್ತವಾಗಿರುತ್ತದೆ. ಆದರೆ ವ್ಯಕ್ತಿನಿಷ್ಠತೆಯಲ್ಲಿ ಸಾಮಾಜಿಕ ಆಯಾಮವೇ ಮುಖ್ಯವಾಗಿರುತ್ತದೆ. ಪ್ರಸ್ತುತ ಮಹಾಪ್ರಬಂಧದ ಸೈದ್ಧಾಂತಿಕತೆಯನ್ನು ಅನ್ವಯಿಸಿಕೊಳ್ಳುವಾಗ ವ್ಯಕ್ತಿನಿಷ್ಠ ಚೌಕಟ್ಟನ್ನು ಹಾಗೂ ಆ ದೃಷ್ಟಿಕೋನದಲ್ಲಿ ವಿಶ್ಲೇಷಿಸುವ ಆಶಯವನ್ನು ಇಟ್ಟುಕೊಳ್ಳಲಾಗಿದೆ.

ಭೂಮಿ ಮೂಲವಾದ ಸಮಸ್ಯೆಯನ್ನು ವ್ಯಕ್ತಿನಿಷ್ಠ ಆಯಾಮದಲ್ಲಿ ನೋಡಿದಾಗ ವಿವಿಧ ನೆಲೆಯ ಪ್ರಶ್ನೆಗಳನ್ನು ಕಾಣಬಹುದಾಗಿದೆ. ಸಂಕೀರ್ಣ ನೆಲೆಯಲ್ಲಿ ವ್ಯಕ್ತಿನಿಷ್ಠ ಆಶಯಗಳು ಅಧ್ಯಯನದಲ್ಲಿ ಒಳಗೊಂಡಿರುತ್ತವೆ. ಉದಾಹರಣೆಗೆ ಭೂಮಿಗೆ ಸಂಬಂಧಿಸಿದಂತೆ ರೈತರ ಮಳೆ ಬೆಳೆ ಪ್ರಾದೇಶಿಕ ವ್ಯತ್ಯಾಸಗಳು, ಮುಂತಾದ ನೂರಾರು ಸಂಗತಿಗಳಿವೆ. ಸಾಮಾಜಿಕ, ಪ್ರಾದೇಶಿಕ ಭಿನ್ನತೆಗಳ ಹಿನ್ನೆಲೆಯಲ್ಲಿ ನೋಡಬಹುದು. ಈ ರೀತಿಯ ವ್ಯಕ್ತಿ ನೆಲೆಯನ್ನು ಒಡೆದು ನೋಡುವ ಕ್ರಮದಿಂದ ಸೈದ್ಧಾಂತಿಕ ಚೌಕಟ್ಟನ್ನು ರೂಪಿಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಭೂ ರೈತ ಸಮಸ್ಯೆಗಳನ್ನು ಅಧ್ಯಯನ ಮಾಡಲಾಗುವುದು. ಭೂಮಿ ಮೂಲವಾದ ಸಮಸ್ಯೆಗಳನ್ನು ಮೂಲಭೂತವಾಗಿ ಪ್ರಾದೇಶಿಕ, ಪ್ರಾಕೃತಿ ಗುಣ ಮೊದಲಾದ ಆಯಾಮಗಳ ಜೊತೆಗೆ ಎಲ್ಲಾ ಅಂಶಗಳನ್ನು ಕ್ರೊಢೀಕರಿಸಿ ವ್ಯಾಪಕವಾದ ಸೈದ್ಧಾಂತಿಕ ಚೌಕಟ್ಟನ್ನು ರೂಪಿಸಿಕೊಳ್ಳಲಾಗುವುದು. ಸೈದ್ಧಾಂತಿಕತೆಯ ಭಾಗವಾದ ವೈಧಾನಿಕತೆಯು ಸಾಂಸ್ಕೃತಿಕ ಅಂಶಗಳನ್ನು ತಾತ್ವಿಕ ಸ್ವರೂಪದ ಮೂಲಕ ಮಾನವೀಕರಣಗೊಳಿಸುವ ಕ್ರಮದಿಂದ ಅದನ್ನು ಹುಡುಕುವ ಸಾಮುದಾಯಿಕ ಹಿತಚಿಂತನೆಯನ್ನೇ ಸೈದ್ಧಾಂತಿಕ ಸ್ವರೂಪದಲ್ಲಿ ಕಟ್ಟಿಕೊಳ್ಳಲಾಗಿದೆ.

ಸೈದ್ಧಾಂತಿಕತೆಯನ್ನೇ ವಿಶಿಷ್ಟ ಪರಿಕಲ್ಪನೆಯ ಮೂಲಕ ಕಟ್ಟಿಕೊಡುವ ಕ್ರಮವನ್ನು ಭಾಷಾ ವಿಜ್ಞಾನಿಗಳು ಅನುಗಮನ ಮತ್ತು ನಿಗಮನ ಪದ್ಧತಿಗಳನ್ನು ಗುರುತಿಸುತ್ತಾರೆ. ಈ ಅನುಗಮನ ಪದ್ಧತಿಯು ವಸ್ತುನಿಷ್ಠ ನೆಲೆಯ, ಶುದ್ಧ ವಿಜ್ಞಾನದ ನೆಲೆಯಲ್ಲಿ ಸಮಸ್ಯೆಗಳನ್ನು ಹೊರಗಿನಿಂದ ನೋಡುವ ಕ್ರಮವಾಗಿದೆ. ಆದರೆ ನಿಗಮನ ಪದ್ಧತಿಯು ಇದಕ್ಕಿಂತ ಭಿನ್ನವಾದ, ಸಾಮಾಜಿಕ ಆಯಾಮವುಳ್ಳ ಇಲ್ಲಿನ ಸಮಸ್ಯೆಗಳನ್ನು ಒಳಗಿನಿಂದಲೇ ನೋಡುವ ಕ್ರಮವಾಗಿದೆ. ಇದು ಮನುಷ್ಯನ ಸಮಸ್ಯೆಗಳನ್ನು ಒಳಗಿನಿಂದಲೇ ಅಭ್ಯಸಿಸುತ್ತದೆ. ಭೂ-ರೈತ ಸಮಸ್ಯೆಗಳನ್ನು ಸಾಮಾಜಿಕ ಜಗತ್ತಿನೊಳಗೆ ಅಭ್ಯಸಿಸುವ ಉದ್ದೇಶವನ್ನು ಹೊಂದಿದೆ. ಆದ್ದರಿಂದ ಪ್ರಸ್ತುತ ಅಧ್ಯಯನಕ್ಕೆ ನಿಗಮನ ಪದ್ಧತಿಯನ್ನೇ ಅನುಸರಿಸಲಾಗಿದೆ.

### ೨.ಬಹುಶಿಸ್ತೀಯ ವೈಧಾನಿಕತೆ

ಬಹುಶಿಸ್ತೀಯ ಅಧ್ಯಯನ ನನ್ನ ಅಧ್ಯಯನ ವಿಷಯಕ್ಕೆ ಅತ್ಯಂತ ಅವಶ್ಯಕವಾದುದಾಗಿದೆ. ಏಕೆಂದರೆ ನಾನು ಆಯ್ಕೆ ಮಾಡಿಕೊಂಡಿರುವ ವಿಷಯವು ಇತಿಹಾಸ,ಸಮಾಜಶಾಸ್ತ್ರ,ಕಾನೂನು ಸಾಹಿತ್ಯ ಮುಂತಾದ ಅಧ್ಯಯನ ಶಿಸ್ತುಗಳನ್ನು ಆಧರಿಸಿದೆ.

ಬಹು ಶಿಸ್ತೀಯ ವೈಧಾನಿಕತೆಯು ಮುಖ್ಯವಾಗಿ ಒಟ್ಟು ಆಲೋಚನಾ ಕ್ರಮವನ್ನು ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡುವ ಕ್ರಮವಾಗಿದೆ. ಒಂದು ವಸ್ತು ವಿಷಯವು ಏಕಕಾಲಕ್ಕೆ ಹಲವು ಪ್ರಕಾರಗಳ ಮೂಲಕ ಅಧ್ಯಯನಕ್ಕೆ ಒಳಗಾಗುವಂಥದಾಗಿದೆ. ಅಂದರೆ ಪ್ರಸ್ತುತ ಅಧ್ಯಯನವು ಅಂತಹ ವ್ಯಾಪಕತೆಯನ್ನು ಒಳಗೊಂಡಿರುವುದರಿಂದ ಬಹುಶಿಸ್ತೀಯ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಈ ಅಧ್ಯಯನ ವೈಧಾನಿಕತೆಗೆ ಸಂಬಂಧಿಸಿದಂತೆ ಹೇಳುವುದಾದರೆ, ಭೂಸಂಬಂಧಿ ವಸ್ತು ವಿಷಯವನ್ನು ಚಿಂತನೆಗಳ, ವಾದಗಳ, ಹೋರಾಟಗಳ, ವಾಸ್ತವದ ಪ್ರಭಾವಗಳ, ಕಾನೂನು, ಪ್ರಭುತ್ವದ ಮತ್ತು ಏಣಿಶ್ರೇಣಿಗಳ ಬಹುಶಿಸ್ತೀಯ ನೆಲೆಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

ಭೂಮಿ ಪ್ರಶ್ನೆಯನ್ನು ಕೈಗೆತ್ತಿಕೊಂಡಾಗ, ಭೂ ಒಡೆತನದ ಚಾರಿತ್ರಿಕ ಬೆಳವಣಿಗೆ, ಈ ಒಡೆತನ ಯಾರಿಗೆ ಸೇರಬೇಕು, ದಲಿತರಿಗೆ, ರೈತರಿಗೆ ಗೇಣಿರೈತರಿಗೆ ಅಥವಾ ಭೂಮಾಲೀಕರಿಗೆ ಎಂಬ ಸಂಕೀರ್ಣ ಅಂಶಗಳನ್ನು ಕಂಡುಕೊಳ್ಳಲು ಬಹುಶಿಸ್ತೀಯ ಅಧ್ಯಯನ ವಿಧಾನ ಅತ್ಯಂತ ಅವಶ್ಯಕವಾಗಿದೆ. ಭೂ-ರೈತ ಪ್ರಶ್ನೆಗಳು ಆಧುನಿಕ

ಸಂದರ್ಭಗಳಲ್ಲಿ ಅನೇಕ ಪ್ರಶ್ನೆಗಳನ್ನು ಹುಟ್ಟುಹಾಕಿವೆ. ಭೂಉತ್ಪಾದನೆ, ಬಂಡವಾಳಶಾಹಿಗಳ ಸಂಬಂಧ, ಇಂತಹ ಒಟ್ಟಾರೆ ನೆಲೆಯ ಆಶಯಗಳನ್ನು ಸಾಹಿತ್ಯ ಸೃಜಶೀಲ ಕೃತಿಗಳ ಮೂಲಕ ವ್ಯಕ್ತಗೊಳ್ಳುವುದನ್ನು ಬಹುಶಿಸ್ತೀಯ ನೆಲೆಯ ಮೂಲಕ ಅಧ್ಯಯನ ಮಾಡಲಾಗುವುದು.

**೩. ಆಕರಗಳ ಸ್ವರೂಪ**

ಈ ಅಧ್ಯಯನಕ್ಕೆ ಪ್ರಾಥಮಿಕ ಆಕರಗಳಾಗಿ ಕತೆ ಮತ್ತು ಕಾದಂಬರಿಗಳ ಮೂಲ ಪಠ್ಯವನ್ನು ಅಧ್ಯಯನದ ಮೂಲ ದ್ರವ್ಯವಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೆ ಆನುಷಂಗಿಕವಾಗಿ ಪ್ರಕಟಿತ ಚಾರಿತ್ರಿಕ ಅಂಶಗಳು, ಚಿಂತನೆಗಳು, ವಿಮರ್ಶಾ ಲೇಖನಗಳು, ಪ್ರಬಂಧಗಳು, ಮಹಾಪ್ರಬಂಧಗಳು, ಪೂರಕ ಕೃತಿಗಳು, ಪರಾಮರ್ಶನ ಸಾಹಿತ್ಯ ಕೃತಿಗಳನ್ನು ಬಳಸಿಕೊಂಡು ಅಧ್ಯಯನ ಮಾಡಲಾಗಿದೆ.

**೪.ಗುಣಾತ್ಮಕ ವಿಶ್ಲೇಷಣೆ**

ಇದು ಮಾನವಿಕ ಅಧ್ಯಯನವಾಗಿರುವುದರಿಂದ, ಗುಣಾತ್ಮಕವಾಗಿ ಮಾನವಿಕ ಸಂಗತಿಗಳನ್ನು ಗುರುತಿಸುವ ವಿಧಾನವನ್ನು ಇಲ್ಲಿ ಅಳವಡಿಸಿಕೊಳ್ಳಲಾಗಿದೆ. ಪ್ರಸ್ತುತ ರೈತಾಪಿ ನೆಲೆಯ ಅಧ್ಯಯನದ ಗುರಿ ಮುಖ್ಯವಾಗಿ ಮನುಷ್ಯಮುಖಿ ನೆಲೆಯನ್ನು ಹೊಂದಿದೆ. ಭೂಮಾಲೀಕರು ಭೂ ಹಂಚಿಕೆಯನ್ನು ಕುರಿತು ಹೇಳುವುದಿಲ್ಲ. ಆದರೆ ಪ್ರಜಾಪ್ರಭುತ್ವ ಅಥವಾ ಸರ್ಕಾರಿ ನೀತಿ ನಿರೂಪಣೆಗಳಲ್ಲಿ ಒಬ್ಬ ವ್ಯಕ್ತಿ ಅಥವಾ ಮನುಷ್ಯನಿಗೆ ಭೂಮಿಯನ್ನು ಸಮಾನವಾಗಿ ಹಂಚಿಕೆಯಾಗಬೇಕೆಂಬ ಆಶಯವನ್ನು ಕಾನೂನಾತ್ಮಕವಾಗಿ ಈ ರೀತಿ ಹೇಳುತ್ತದೆ. ಇಂಥ ವಸ್ತುಸ್ಥಿತಿಯ ವಿವರಣೆಗಿಂತ ಸಾಮಾಜಿಕ ವ್ಯಕ್ತಿ ಹೊಂದಲೇಬೇಕಾದ ಭೂಮಿಯ ಸಂಬಂಧವನ್ನು ಕುರಿತು ಪ್ರಮಾಣಾತ್ಮಕ ಗ್ರಹಿಕೆಗಿಂತ ಈ ಗುಣಾತ್ಮಕ ನೆಲೆಯ ವಿಧಾನವನ್ನು ಇಲ್ಲಿ ವಿಶೇಷವಾಗಿ ಅನ್ವಯಿಸಲಾಗಿದೆ.

**೧.೪ ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

`ಭೂ ಹೋರಾಟ' ಕುರಿತಂತೆ ಅಧ್ಯಯನ ನಡೆದಿದ್ದರೂ, ಸಮಗ್ರವಾಗಿ ಆಧುನಿಕ ಕನ್ನಡ ಕಥನ ಸಾಹಿತ್ಯದ ಮೂಲಕ ಈ ಕುರಿತ ಅಧ್ಯಯನಗಳು ಇದುವರೆಗೂ ನಡೆದಿಲ್ಲ. ಆದ್ದರಿಂದ ಭೂಸಂಬಂಧಿ ಹಾಗೂ ರೈತ ಸಂಬಂಧಿ ಪ್ರಶ್ನೆಯುಳ್ಳ ಸೃಜನಶೀಲ ಕೃತಿಗಳ ಮೂಲಕ ಸಮಗ್ರವಾಗಿ ಅಭ್ಯಸಿಸುವುದು ಈ ಮಹಾಪ್ರಬಂಧದ ಗುರಿಯಾಗಿದೆ. ಇದಕ್ಕೂ ಮುನ್ನ ಭೂಹೋರಾಟ ಕುರಿತಂತೆ ಅಲ್ಲಲ್ಲಿ ಕೆಲವು ಬಿಡಿಬಿಡಿಯಾದ ಚಿಂತನೆಗಳು ನಡೆದಿವೆ. ಆದ್ದರಿಂದ ಪ್ರಸ್ತುತ ಅಧ್ಯಯನವು ಈವರೆಗೆ ನಡೆದ ಅಧ್ಯಯಗಳಿಗೆ ಸಂಬಂಧಿಸಿದಂತೆ ಪ್ರಕಟಿಸಲಾಗಿರುವ ಕೃತಿಗಳು ಮತ್ತು ಲೇಖನಗಳನ್ನು ವಿಶ್ಲೇಷಿಸಿ ಇವುಗಳಿಗಿಂತ ಭಿನ್ನವಾಗಿ ಮಹಾಪ್ರಬಂಧವನ್ನು ರೂಪಿಸಲು ಪ್ರಯತ್ನಿಸಲಾಗಿದೆ.

**೧.ಭೂ ಹೋರಾಟ ಕುರಿತ ಕೃತಿಗಳು**

ಜಿ.ರಾಜಶೇಖರ್‌ರವರ **"ತೆಲಂಗಾಣ ರೈತ ಹೋರಾಟ(1946-51)"** ವಸ್ತುನಿಷ್ಠ , ಘಟನಾತ್ಮಕ ವಿವರಣೆಯನ್ನು ಒಳಗೊಂಡಿರುವ ಕೃತಿಯಾಗಿದೆ. ರೈತರ ತ್ಯಾಗ, ಬಲಿದಾನಗಳ ಹೋರಾಟದ ಗಾಥೆ ಇದರ ತಿರುಳಾಗಿದೆ. ನಿಜಾಮರ ದಬ್ಬಾಳಿಕೆಯ ಅಟ್ಟಹಾಸ, ಭೂಮಾಲೀಕರ, ಪಾಳೇಗಾರರ, ಸಣ್ಣ ರೈತರ ಸ್ಥಿತಿಗತಿಗಳನ್ನು ಕುರಿತು ಲೇಖಕರು ವಿವೇಚಿಸಿದ್ದಾರೆ.

ಹನುಮಂತ ಅವರ **"ಸಂಡೂರು ಹೋರಾಟ"**ವು ಉಳುವವನಿಗೆ ಭೂ ಒಡೆಯ ಎಂಬ ಹೋರಾಟವನ್ನು ಸಮಾಜವಾದಿ ಪಕ್ಷವು ನಡೆಸಿದ ಬಗೆಗಿನ ವಿವರಗಳನ್ನು ನೀಡುತ್ತದೆ. ಘೋರ್ಪಡೆಯ ಮನೆತನದ ರಾಜಕೀಯಹುನ್ನಾರಗಳ ಕುರಿತ ಮಾಹಿತಿ ನೀಡುವ ಕೃತಿ ಇದಾಗಿದೆ.

ಗಂಗಾರಾಂ ಚಾಂಡಾಳ ಅವರ **"ಕರ್ನಾಟಕ ದಲಿತ ಚಳುವಳಿ ಮತ್ತು ಡಾ.ಬಿ.ಆರ್.ಅಂಬೇಡ್ಕರ್ ಪ್ರಭಾವ"** ಕೃತಿಯು ಕರ್ನಾಟಕದಲ್ಲಿ ದಲಿತ ಸಂಘರ್ಷ ಸಮಿತಿಯು ನಡೆಸಿದ ಐದು ಭೂಹೋರಾಟಗಳ ಕುರಿತು ವಿವೇಚಿಸಿದೆ.

ಪ್ರೊ.ಎಸ್.ಅನಂತನಾರಾಯಣ ಅವರ **"ತೆಲಂಗಾಣ ಹೋರಾಟ"** ಕೃತಿಯಲ್ಲಿ ಕಮ್ಯುನಿಸ್ಟ್ ಪಕ್ಷದ ಹೋರಾಟದ ಸೈದ್ಧಾಂತಿಕ ನೆಲೆಗಟ್ಟುಗಳಿವೆ. ತೆಲಂಗಾಣ ಹೋರಾಟದ ತ್ಯಾಗಬಲಿದಾನಗಳ ಗಾಥೆ ಇದರ ತಿರುಳಾಗಿದೆ.

ಸಿ.ರಾಮಭದ್ರಯ್ಯನವರ **"ಕರ್ನಾಟಕ ಪ್ರಾಂತ ರೈತ ಸಂಘದ ಚರಿತ್ರೆ"** ಕೃತಿಯು ಕರ್ನಾಟಕದಲ್ಲಿ ರೈತ ಸಂಘಟನೆಗಳು ಅಸ್ತಿತ್ವಕ್ಕೆಬಂದ ಬಗೆ, ಈ ಸಂಘಟನೆಗಳು ರೈತರ ಹೋರಾಟಗಳನ್ನು ರೂಪಿಸಿದ ಬಗೆಯನ್ನು ವಿವರಿಸುತ್ತದೆ. ರೈತ ಸಂಘದ ಸಾಧಕ ಬಾಧಕಗಳನ್ನು ವಿಶ್ಲೇಷಣೆ ಮಾಡುವುದು ಈ ಕೃತಿಯ ಮುಖ್ಯ ಆಶಯವಾಗಿದೆ. ಈ ಕೃತಿಯಲ್ಲಿ ಮುಖ್ಯವಾಗಿ ಭೂಮಿಗಾಗಿ ನಡೆದ ಹೋರಾಟವನ್ನು ವಿವೇಚಿಸಿದೆ.

**೨. ಭೂಸುಧಾರಣೆ ಕುರಿತ ಕೃತಿಗಳು**

**"ಕರ್ನಾಟಕದಲ್ಲಿ ಭೂಸುಧಾರಣೆ (ನಾನು ಕೂಡಾ ಹತ್ತಿರದಿಂದ ಕಂಡೆ)"** ಕೃತಿಯ ಲೇಖಕರು ಎಂ.ಎ.ಎಸ್.ರಾಜನ್. ಇವರು ಸರ್ಕಾರದ ಅಧಿಕಾರಿಗಳಾಗಿದ್ದವರು ಮತ್ತು ಭೂಸುಧಾರಣೆ ಕಾಯ್ದೆ ಜಾರಿಗೊಳಿಸುವಾಗ ಇಲಾಖೆಯಲ್ಲಿ ಕಾರ್ಯನಿರ್ವಹಿಸಿದ್ದವರು. ನಿವೃತ್ತಿ ನಂತರ ಈ ಲೇಖಕರು ಭೂಸುಧಾರಣಾ ಕಾಯ್ದೆ ಕುರಿತು ಬರೆದರು. ಈ ಕೃತಿಯಲ್ಲಿ ಕಾಯ್ದೆಯ ಹಿನ್ನೆಲೆ (1961-74ರ) ಮುನ್ನೆಲೆ ಲೋಪದೋಷಗಳನ್ನು ವಿವೇಚಿಸಿದ್ದಾರೆ. ಭೂನ್ಯಾಯಮಂಡಲಿಗಳು ಕಾರ್ಯನಿರ್ವಹಣೆಯ ಬಗೆಯನ್ನು ಚರ್ಚಿಸಿದ್ದಾರೆ.

ಸಂಶೋಧಕ ಕ್ಷೀರಸಾಗರ ಅವರ **"ದಿಕ್ಕುತಪ್ಪಿದ ಕರ್ನಾಟಕ ಭೂಸುಧಾರಣೆ"** ಕೃತಿಯಲ್ಲಿ ಕರ್ನಾಟಕದ ಭೂಸುಧಾರಣೆಯ ಸಂದರ್ಭದಲ್ಲಿ ಸರ್ಕಾರಗಳು ನಡೆದುಕೊಂಡ ರೀತಿ, ನೀತಿಗಳ ಬಗ್ಗೆ ವಿವೇಚಿಸಿದ್ದಾರೆ. ಭೂನ್ಯಾಯಮಂಡಳಿಯ ರಾಜಕೀಯ ಹುನ್ನಾರಗಳನ್ನು ತಮ್ಮ ಕೃತಿಯಲ್ಲಿ ಬಯಲಿಗೆಳೆದಿದ್ದಾರೆ. ದಿಕ್ಕುತಪ್ಪಿರುವ ಭೂಸುಧಾರಣೆಯ ಆಶಯಗಳನ್ನು ಆಧಾರ ಸಹಿತವಾಗಿ ಸಂಶೋಧನಾತ್ಮಕ ನೆಲೆಯ ಮೂಲಕ ವಿಶ್ಲೇಷಿಸಿದ್ದಾರೆ.

ಕೋಣಂದೂರು ವೆಂಕಪ್ಪ ಗೌಡರು **"ಭೂ ಸುಧಾರಣೆ ಸಾಧಕ ಎನ್.ಹುಚ್ಚಮಾಸ್ತಿಗೌಡರ ಜೀವನ ಚರಿತ್ರೆ"** ಎಂಬ ತಮ್ಮ ಕೃತಿಯಲ್ಲಿ ಲೇಖಕರು ಅವರ ಮನೆತನ, ಅವರ ವೈಯಕ್ತಿಕ ಬದುಕುಗಳನ್ನು ಆಪ್ತವಾಗಿ ಚಿತ್ರಿಸಿದ್ದಾರೆ. ಕಂದಾಯ ಮಂತ್ರಿಯಾಗಿ ಗೌಡರ ನಿಷ್ಠುರತೆ ಕರ್ನಾಟಕದಾದ್ಯಂತ ಭೂಸುಧಾರಣಾ ಕಾಯ್ದೆ ಅನುಷ್ಠಾನಗೊಳ್ಳಲು ಕಾರಣವಾದ ಅಂಶಗಳ ಮೇಲೆ ಲೇಖಕರು ಬೆಳಕು ಚೆಲ್ಲುತ್ತಾರೆ.

**"ಭೂ ಸುಧಾರಣೆ ಒಂದು ಚರ್ಚೆ"** ಶಿವಮೊಗ್ಗದಲ್ಲಿ ಚರ್ಚಾಗೋಷ್ಠಿಯನ್ನು ಏರ್ಪಡಿಸಿದ್ದ ಸಂದರ್ಭದಲ್ಲಿ ಮಂಡಿಸಿದ ಪ್ರಬಂಧಗಳು ಇದರಲ್ಲಿ ಅಡಕವಾಗಿವೆ. ಈ ಕೃತಿಯಲ್ಲಿ ಭೂಸುಧಾರಣೆಯ ಸಾಧಕ ಬಾಧಕಗಳನ್ನು ಕುರಿತು ಲೇಖಕರು ವಿವೇಚಿಸಿದ್ದಾರೆ.

ಎಚ್.ಎಸ್.ಮೋಹನ ಚಂದ್ರಗುತ್ತಿ ಅವರು **"ಒಂಟಿ ನಡಿಗೆ"** ಕೃತಿಯಲ್ಲಿ ಭೂಸುಧಾರಣೆ, ಕಾಗೋಡು ಸತ್ಯಾಗ್ರಹ ಮತ್ತು ರೈತ ಹೋರಾಟ ಕುರಿತು ಚರ್ಚಿಸಿದ್ದಾರೆ.

**೩.ಭೂಸುಧಾರಣೆ ಕುರಿತ ಸಂಶೋಧನಾ ಕೃತಿಗಳು**

ಜಿ.ವಿ. ಜೋಷಿಯವರ **"Agrarian Structure and Tenancy Movements"** ಕೃತಿಯು ವಿಶೇಷವಾಗಿ ಉತ್ತರ ಕನ್ನಡ ಜಿಲ್ಲೆಯ ಗೇಣಿದಾರರ ಸಮಸ್ಯೆ ಹಾಗೂ ರೈತ ಹೋರಾಟವನ್ನು ಕುರಿತು ತಾತ್ವಿಕ ಚರ್ಚೆ ನಡೆಸುತ್ತದೆ. ಟೆನೆನ್ಸಿ ಕಾಯ್ದೆಯ ವಿರುದ್ಧ ನಡೆದ ಹೋರಾಟ ಪೂರ್ವ ಮತ್ತು ನಂತರದ ಅವಧಿಯ ಹುಟ್ಟು ಬೆಳವಣಿಗೆ ಕುರಿತು ವಿಶ್ಲೇಷಿಸುತ್ತದೆ.

**೪. ಕಾಗೋಡು ಹೋರಾಟ ಕುರಿತ ಕೃತಿಗಳು**

ಕರ್ನಾಟಕದಲ್ಲಿ ೫೦ರ ದಶಕದಲ್ಲಿ ನಡೆದ ಮಹತ್ವಯುತ ರೈತ ಹೋರಾಟದಲ್ಲಿ **"ಕಾಗೋಡು ಸತ್ಯಾಗ್ರಹ"** ವು ರೈತ ಹೋರಾಟಗಳಲ್ಲೇ ಅತ್ಯಂತ ಮಹತ್ವದ್ದಾಗಿದೆ. ಈ ಹೋರಾಟದಿಂದಾಗಿ ನಾಡಿನ ಸಾಂಸ್ಕೃತಿಕ ಪಲ್ಲಟ ಹಾಗೂ ಸಾಂಸ್ಕೃತಿಕ ಎಚ್ಚರವನ್ನು ಮೂಡಿಸಿದೆ. ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಗಮನ ಸೆಳೆದ ಈ ಹೋರಾಟವು, ಸಹಜವಾಗಿ ಸಾಹಿತ್ಯದ ಮೇಲೂ ತನ್ನ ಪ್ರಭಾವ ಬೀರಿದೆ. ಈ ಹಿನ್ನೆಲೆಯಲ್ಲಿ ಕಾಗೋಡು ಹೋರಾಟ ಕುರಿತು ಬಂದಿರುವ ಕೃತಿಗಳನ್ನು ಇಲ್ಲಿ ವಿವೇಚಿಸಲಾಗಿದೆ.

"ರೈತನ ಕಷ್ಟವನ್ನು ರೈತನೇ ಬಲ್ಲ!" ಸ್ವತಃ ಕಾಗೋಡು ಹೋರಾಟದಲ್ಲಿ ಭಾಗವಹಿಸಿದ್ದ ನಾಯಕ ಗಣಪತಿಯಪ್ಪನವರು ರೈತರನ್ನು ಹೋರಾಟಕ್ಕೆ ಸಿದ್ಧಗೊಳ್ಳುವಂತೆ ಕೃತಿಯಲ್ಲಿ ಪ್ರೇರೇಪಿಸಿದ್ದಾರೆ. ಗೇಣಿ ರೈತರನ್ನು

ಅರಿವಿನ ಪ್ರಜ್ಞೆಯಾಗಿ ರೂಪಿಸುವುದು ಕೃತಿಯ ಮೂಲ ಉದ್ದೇಶವಾಗಿದೆ.

**"ಕಾಗೋಡು ಕ್ರಾಂತಿ:ನೆನಪಿನ ಸಂಚಿಕೆ"** ಕೃತಿಯಲ್ಲಿ ಅನುಭವಿಗಳು, ಹೋರಾಟಗಾರರು, ಸಮಾಜವಾದಿ ನಾಯಕರು ಬರೆದಿರುವ ಲೇಖನಗಳು ಸೇರಿವೆ. ಕಾಗೋಡು ಕ್ರಾಂತಿಯ ವಿವಿಧ ವಿಷಯಗಳ ಮೇಲೆ ಈ ಲೇಖನಗಳು ಬೆಳಕು ಚೆಲ್ಲುತ್ತವೆ.

ಜಿ.ರಾಜಶೇಖರ ಅವರು ನಿರೂಪಿಸಿರುವ **"ಕಾಗೋಡು ಸತ್ಯಾಗ್ರಹ "** ಕೃತಿಯು ವೈಚಾರಿಕತೆ ಘಟನೆಗಳ ಸತ್ಯಾಂಶವನ್ನು ಸ್ವತಃ ಪರಿಶೀಲನೆ ಮಾಡಿಯೇ ಮುಂದೆ ಸಾಗುವುದು. ಸತ್ಯಾಗ್ರಹದ ನಂತರದ ಬೆಳವಣಿಗೆಗಳು, ಭೂಸುಧಾರಣೆ ಕ್ರಮಗಳು, ಸರ್ಕಾರ ಕೈಗೊಂಡ ಕಾರ್ಯಕ್ರಮಗಳನ್ನೂ ಇಲ್ಲಿ ಚರ್ಚಿಸಿದ್ದಾರೆ. ಸಮಾಜವಾದಿ ಪಕ್ಷದ ಸ್ಥಿತಿಗತಿಗಳು, ಮುಂದಿನ ಹೆಜ್ಜೆಗಳನ್ನು ಕುರಿತು ಚಿಂತಿಸಲಾಗಿದೆ. ಕಾಗೋಡು ಸತ್ಯಾಗ್ರಹ ಕುರಿತಂತೆ ಬಂದ ಕೃತಿಗಳಲ್ಲಿ ಇದು ಮೊದಲ ಕೃತಿಯಾಗಿದೆ.

ಸಿ.ಬಿ. ಚಂದ್ರಶೇಖರ್ ಅವರ **"ಕಾಗೋಡು ಒಂದು ನೆನಪು"** ಕೃತಿಯನ್ನು ಒಂದು ಅನುಭವ ಕಥಾನಕವೆಂದೇ ಗುರುತಿಸಬಹುದಾಗಿದೆ. ಸ್ವತಃ ಲೇಖಕರೇ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ತಮ್ಮ ಅನುಭವವನ್ನು ಕಥನ ರೂಪಕ್ಕಿಳಿಸಿದ್ದಾರೆ. ಇದು ಕಾಗೋಡು ರೈತ ಹೋರಾಟ ಕುರಿತಂತೆ ವಾಸ್ತವ ಘಟನೆಯನ್ನು ನಿರೂಪಿಸುವ ಕೃತಿಯಾಗಿದೆ.

ಕರ್ನಾಟಕದಲ್ಲಿ ನಡೆದ ಮಹತ್ತರ ರೈತ ಹೋರಾಟಗಳನ್ನು ಕುರಿತ ಲೇಖನಗಳನ್ನು ಒಳಗೊಂಡಿರುವ **"ಕಾಗೋಡು ಚಳವಳಿ ಸುವರ್ಣ ಸಂಪುಟ"** ಕೃತಿಯನ್ನು ಕನ್ನಡ ವಿಶ್ವವಿದ್ಯಾಲಯ ೨೦೦೨ರಲ್ಲಿ ಪ್ರಕಟಿಸಿದೆ. ಈ ಸಂಪುಟದ ಲೇಖನಗಳನ್ನು ಬರೆದಿರುವ ೭೦ ಮಂದಿ ಲೇಖಕರಲ್ಲಿ, ಅನುಭವಿಗಳು, ರೈತ ಹೋರಾಟದಲ್ಲಿ ತೊಡಗಿಸಿಕೊಂಡ ನಾಯಕರು, ವಿದ್ವಾಂಸರು ಬರೆದ ಬರಹಗಳಿವೆ. ಕಾಗೋಡು ಚಳವಳಿ ಕುರಿತಂತೆ ಅಲ್ಲಲ್ಲಿ ಚೆಲ್ಲಾಪಿಲ್ಲಿಯಾಗಿದ್ದ ಬರವಣಿಗೆಗಳನ್ನು ಈ ಸಂಪುಟದಲ್ಲಿ ಒಟ್ಟುಗೂಡಿಸಲಾಗಿದೆ.ಕಾಗೋಡು ಚಳುವಳಿ ಹಾಗೂ ಇತರೆ ರೈತಹೋರಾಟಗಳ ಸಮಗ್ರತೆಯನ್ನು ತರುವ ನಿಟ್ಟಿನಲ್ಲಿ ಕೃತಿಯ ಸಂಪಾದಕರಾದ ಪ್ರೊ.ಹಿ.ಚಿ.ಬೋರಲಿಂಗಯ್ಯ ಮತ್ತು ಹುಚ್ಚಪ್ಪಮಾಸ್ತರು ಅವರ ಕಾರ್ಯವು ಗಮನಾರ್ಹವಾದುದಾಗಿದೆ.

ಸಂಪುಟದ ಮೊದಲ ಭಾಗದಲ್ಲಿ ಕಾಗೋಡು ಚಳವಳಿಯ ಸಮಗ್ರ ಇತಿಹಾಸ, ಚಾರಿತ್ರಿಕ ಘಟನೆ, ಕಾಗೋಡಿನ ಸಾಂಸ್ಕೃತಿಕ ನೆಲೆ, ಭೌಗೋಳಿಕ ವಿವರ, ಜನಾಂಗದ ಇತಿಹಾಸ, ಭೂಸುಧಾರಣೆ, ಕಾಗೋಡು ಚಳವಳಿಯಲ್ಲಿ ತೊಡಗಿಸಿಕೊಂಡ ನಾಯಕರುಗಳ ವಿವರಗಳನ್ನು ಕಾಣಬಹುದಾಗಿದೆ. ಸಂಪುಟದ ಭಾಗ ಎರಡರಲ್ಲಿ ಕರ್ನಾಟಕದಲ್ಲಾದ ಪ್ರಮುಖ ರೈತ ಹೋರಾಟಗಳ ಕುರಿತಂತೆ ವೈಚಾರಿಕ ಲೇಖನಗಳಿವೆ. ರೈತಹೋರಾಟ, ರೈತಹೋರಾಟದ ತಾತ್ವಿಕ ನೆಲೆ, ಸೈದ್ಧಾಂತಿಕ ನಿಲುವುಗಳನ್ನು ಚರ್ಚಿಸಿದ್ದಾರೆ. ಸಂಪುಟದ ಮೂರನೇ ಭಾಗದಲ್ಲಿ ಸಮಾಜವಾದ ಹಾಗೂ ರಾಷ್ಟ್ರೀಯವಾದದ ಉದಯ ಮೊದಲಾದ ವಿಚಾರಗಳನ್ನು ವಿಶ್ಲೇಷಿಸಲಾಗಿದೆ. ಸಮಾಜವಾದದ ಸೈದ್ಧಾಂತಿಕ ನೆಲೆಗಟ್ಟು, ಸಮಾಜವಾದಿ ನಾಯಕರ ಪರಿಚಯ,ಅವರ ನಾಯಕತ್ವದ ಬಗೆಯನ್ನು ಕುರಿತು ಚರ್ಚಿಸಲಾಗಿದೆ.ಕೊನೆಯ ಅಧ್ಯಾಯದಲ್ಲಿ ರೈತ ಹೋರಾಟಗಾರ (ಎಚ್.ಗಣಪತಿಯಪ್ಪ) ಮತ್ತು ಇಬ್ಬರು ಸಾಹಿತಿಗಳ ಹಾಗೂ ಇಬ್ಬರು ಸಮಾಜವಾದಿ ರಾಜಕೀಯ ನಾಯಕರ ಸಂದರ್ಶನಗಳಿವೆ. ಈ ಸಂದರ್ಶನದಲ್ಲಿ ಅವರ ಧೋರಣೆ, ಸಮಕಾಲೀನ ಬದುಕಿಗೆ ಒಡ್ಡಿಕೊಂಡ ತಾತ್ವಿಕ ನಿಲುವುಗಳು ಹಾಗೂ ರಾಜಕೀಯ ನಿಲುವುಗಳನ್ನು ಸಂದರ್ಶನದ ಮೂಲಕ ವಿಶ್ಲೇಷಿಸಲಾಗಿದೆ.

**"ಮಲೆನಾಡಿನ ರೈತರ ಧೀರೋದಾತ್ತ ಹೋರಾಟದ ಸ್ಮರಣೆ (ಸ್ಮರಣಸಂಚಿಕೆ)"** ಕೃತಿಯು ಕಾಗೋಡು ಹೋರಾಟದಲ್ಲಿ ಭಾಗವಹಿಸಿದ್ದ ಹೋರಾಟಗಾರರ ವಿವರಗಳನ್ನು ಒಳಗೊಂಡಿದೆ. ಮಲೆನಾಡಿನಲ್ಲಿ ರೈತ ಸಂಘಟನೆ ರೂಪುಗೊಂಡ ಬಗೆ, ಅದು ಹೋರಾಟವನ್ನು ರೂಪಿಸಿದ ಬಗೆಯನ್ನು ಇಲ್ಲಿ ಕಾಣಬಹುದಾಗಿದೆ.ಹಾಗೇಯೇ ವೆಂಕಪ್ಪಗೌಡ ಕೋಣಂದೂರು,**ಕಾಗೋಡು ಹೋರಾಟದ ರೂವಾರಿ**, ವಿಷ್ಣುಮೂರ್ತಿ ಹೆಚ್.ಸಿ.(ಸಂ) **ಗೋಪಾಲಗೌಡರ ಡೈರಿ ಪತ್ರಗಳು**,ವಿಷ್ಣುಮೂರ್ತಿ ಹೆಚ್.ಸಿ.(ಸಂ):**ಗೋಪಾಲಗೌಡ ಅಂತರಂಗ ಬಹಿರಂಗ** ಕೃತಿಗಳಲ್ಲಿ ಕಾಗೋಡು ರೈತಹೋರಾಟದ ಆಶಯಗಳನ್ನು ವ್ಯಕ್ತವಾಗಿದೆ.

ಜಿ.ನಾಗೇಶ್‌ರವರ "**ಕಾಗೋಡು ಸತ್ಯಾಗ್ರಹ ನೇತಾರ ಹೆಚ್. ಗಣಪತಿಯಪ್ಪ**" ಕೃತಿಯಲ್ಲಿ ಕಾಗೋಡು ಚಳವಳಿಯ ನೇತೃತ್ವವಹಿಸಿದ್ದ ಹೆಚ್.ಗಣಪತಿಯಪ್ಪನವರನ್ನು ಕೇಂದ್ರವಾಗಿಟ್ಟುಕೊಂಡು, ಕಾಗೋಡಿನ ರೈತ ಹೋರಾಟದ ವಿವರಗಳನ್ನು ನಿರೂಪಿಸಲಾಗಿದೆ.

ಕೂಡ್ಲಿಗೆರೆ ಮಲ್ಲಿಕಾರ್ಜುನ ಅವರ "**ಕಾಗೋಡು ಚಳವಳಿ**" ಕೃತಿಯಲ್ಲಿ ಕಾಗೋಡು ಚಳವಳಿಯ ಇತಿಹಾಸವಿದೆ. ಈ ಚಳವಳಿಯ ಘಟನಾಂಶಗಳು, ಭೂಸುಧಾರಣೆಗೆ ಸಂಬಂಧಿಸಿದಂತೆ ವಿಧಾನಸಭೆ ಹಾಗೂ ವಿಧಾನಪರಿಷತ್ತಿನ ಉಭಯ ಸದನಗಳ ಸದಸ್ಯರ ಭಾಷಣಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

**೬.ರೈತ ಹೋರಾಟಗಳ ಕುರಿತ ಕೃತಿಗಳು**

ಪ್ರೊ. ಎಚ್.ವಿ.ನಾಗೇಶ್ ಮತ್ತು ಎ.ಇ.ಪುನೀತ್‌ರವರ "**ಭಾರತದಲ್ಲಿ ರೈತ ಹೋರಾಟಗಳು**" ಕೃತಿಯು ಮೂಲಭೂತವಾಗಿ ರೈತ ಪ್ರಶ್ನೆಯನ್ನು ಕುರಿತು ಚರ್ಚಿಸುತ್ತದೆ. ರೈತ ಹೋರಾಟದ ಸ್ವರೂಪ ಹಾಗೂ ರೈತರ ಕುರಿತು ಸೈದ್ಧಾಂತಿಕವಾಗಿ ಲೇಖಕರು ವಿಶ್ಲೇಷಣೆ ಮಾಡಿದ್ದಾರೆ. ಭಾರತದ ಇತರೆ ರಾಜ್ಯಗಳಲ್ಲಿ ನಡೆದ ರೈತ ಚಳುವಳಿಗಳ ಕುರಿತು ಇಲ್ಲಿ ಪರಿಶೀಲಿಸಿದ್ದಾರೆ.

ಎಂ.ವಿ.ನಾಡಕರ್ಣಿಯವರ "**ಕರ್ನಾಟಕ ರೈತ ಹೋರಾಟಗಳು(ರಾಷ್ಟ್ರೀಯ ಹಿನ್ನೆಯಲ್ಲಿ ಒಂದು ಅಧ್ಯಯನ)**" ಕೃತಿಯಲ್ಲಿ ರೈತರು ಮತ್ತು ಭಾರತದ ಶಕ್ತಿ ಕೂಟದ ರಾಜಕಾರಣ ಕುರಿತು ವಿವೇಚಿಸಿದ್ದಾರೆ. ಕೃಷಿಯಲ್ಲಿನ ವರ್ಗ ವ್ಯವಸ್ಥೆ ಮತ್ತು ರಾಷ್ಟ್ರೀಯ ಅರ್ಥವ್ಯವಸ್ಥೆಯ ಕುರಿತು ಚರ್ಚಿಸಲಾಗಿದೆ. ಕರ್ನಾಟಕದಲ್ಲಿ ರೈತ ಹೋರಾಟಗಳ ಆಗುಹೋಗುಗಳ, ರೈತ ಹೋರಾಟಗಳ ರಾಜನೈತಿಕ ಮತ್ತು ತಾತ್ವಿಕ ಹಿನ್ನೆಲೆಗಳ ಕುರಿತು ವಿವೇಚಿಸುತ್ತಾರೆ.

ಶಿವಾನಂದ ಗುಬ್ಬಣ್ಣವರ "**ನರಗುಂದ ನವಲಗುಂದ ರೈತ ಹೋರಾಟ**" ಮಲಪ್ರಭಾ ಅಚ್ಚು ಕಟ್ಟು ಪ್ರದೇಶದ ರೈತರ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ನಡೆಸಿದ ಹೋರಾಟವನ್ನು ಕುರಿತ ಕೃತಿಯಾಗಿದೆ. ನರಗುಂದ ನವಲಗುಂದ ರೈತ ಹೋರಾಟದ ಸಮಗ್ರವಾದ ವಸ್ತುನಿಷ್ಠ ಅಧ್ಯಯನವನ್ನು ಇಲ್ಲಿ ಕಾಣಬಹುದು. ಭೌಗೋಳಿಕ ಚಾರಿತ್ರಿಕ ಪರಿಸರ, ಮಲಪ್ರಭಾ ಯೋಜನೆ, ನೀರಾವರಿ ಸಮಸ್ಯೆಗಳು, ಸಂಘಟನೆ ಹಾಗೂ ಹೋರಾಟಗಳು, ಸೋಲುಗೆಲುವುಗಳನ್ನು ವಸ್ತುನಿಷ್ಠ ನೆಲೆಯಲ್ಲಿ ವಿವೇಚಿಸಿದ್ದಾರೆ.

ಪ್ರೊ.ಎಚ್.ವಿ.ನಾಗೇಶ್‌ರವರ "**ಸಾಮಾಜಿಕ ಚಳುವಳಿಗಳು**" ಕೃತಿಯು ಕ್ರಾಂತಿ, ಸತ್ಯಾಗ್ರಹ ಬಂಡಾಯ, ರೈತ ಹೋರಾಟದ ಬಗೆಗಳ ಮೂಲ ಸ್ವರೂಪವನ್ನು ವಿಶ್ಲೇಷಿಸುತ್ತದೆ. ಚಳುವಳಿಗೆ ಪೂರಕವಾದ ಸಾಮಾಜಿಕ ಪರಿಸ್ಥಿತಿ, ಸೈದ್ಧಾಂತಿಕ ವಿಶ್ಲೇಷಣೆಯ ವಿವರಣೆಗಳಿವೆ. ಕರ್ನಾಟಕದಲ್ಲಿ ಸಾಮಾಜಿಕ ಚಳುವಳಿಗಳು ಅಧ್ಯಾಯದಲ್ಲಿ ವಚನಕಾರರ ಚಳುವಳಿ, ಹಿಂದುಳಿದ ವರ್ಗಗಳ ಚಳುವಳಿ, ರೈತ ಚಳುವಳಿ, ಕಾಗೋಡು ಸತ್ಯಾಗ್ರಹ ಮಲಪ್ರಭಾ ರೈತ ಚಳುವಳಿ ಕುರಿತು ವಿಶ್ಲೇಷಣೆ ಮಾಡಿದ್ದಾರೆ.

ಟಿ.ನಾಗರಾಜು ಅವರ "**ಸಾಮಾಜಿಕ ಚಳುವಳಿಗಳು**" ಕೃತಿಯು ಧಾರ್ಮಿಕ ಪ್ರತಿಭಟನಾ ಚಳವಳಿಗಳು, ಸುಧಾರಣಾ ಚಳವಳಿಗಳು, ಹಿಂದುಳಿದ ವರ್ಗಗಳ ಚಳುವಳಿ, ಪ್ರಾದೇಶಿಕ ಚಳವಳಿಗಳು, ಬುಡಕಟ್ಟು ಜನಾಂಗದ ಚಳವಳಿಗಳ ಮೂಲ ಸ್ವರೂಪವನ್ನು ವಿಶ್ಲೇಷಿಸುತ್ತದೆ. ಚಳುವಳಿಗೆ ಪೂರಕವಾದ ಸಾಮಾಜಿಕ ಪರಿಸ್ಥಿತಿ, ಸೈದ್ಧಾಂತಿಕ ವಿಶ್ಲೇಷಣೆಯ ವಿವರಣೆಗಳಿವೆ.ಕರ್ನಾಟಕದ ರೈತ ಚಳವಳಿ, ಭಾರತದಲ್ಲಿ ಮಹಿಳಾ ಚಳವಳಿ, ವಿದ್ಯಾರ್ಥಿ ಚಳವಳಿಗಳ ಕುರಿತು ವಿಶ್ಲೇಷಣೆ ಮಾಡಿದ್ದಾರೆ.

ಎಂ.ವಿ.ನಾಡಕರ್ಣಿಯವರ "**Formers' Movement in India**" ಕೃತಿಯು ರಾಷ್ಟ್ರೀಯ ಕೃಷಿ ಆರ್ಥಿಕ ನೀತಿ ಕುರಿತು ವಿಶ್ಲೇಷಿಸಿದೆ. ತಮಿಳುನಾಡು, ಪಂಜಾಬ್, ಮಹಾರಾಷ್ಟ್ರದ ರೈತ ಹೋರಾಟಗಳು ಹಾಗೂ ಕರ್ನಾಟಕದಲ್ಲಿ ನಡೆದ ಮಲಪ್ರಭಾ ರೈತ ಹೋರಾಟದ ವಿವರಗಳಿವೆ. ಕರ್ನಾಟಕ ರಾಜ್ಯ ರೈತ ಸಂಘದ ಉದಯ, ಅದರ ಬೇಡಿಕೆಗಳು ಮತ್ತು ಬೆಳವಣಿಗೆಗಳನ್ನು ಚಿಂತಿಸಲಾಗಿದೆ. ಕರ್ನಾಟಕದಲ್ಲಿ ದಲಿತರು ಮತ್ತು ರೈತರು ಹೋರಾಟ ಮಾಡಿದ ಬಗೆಯನ್ನು, ಅವುಗಳ ಆಂತರಿಕ ವೈರುದ್ಯಗಳನ್ನು ಗುರುತಿಸುತ್ತದೆ.

"**New Farmers' Movements In India**" ಕೃತಿಯಲ್ಲಿ ಸಂಪಾದಕರಾದ ಟಾಮ್‌ಬ್ರಾಸ್‌ರವರು

ರೈತ ಹೋರಾಟವನ್ನು ನವರೈತ ಹೋರಾಟ ಎಂಬ ಹೊಸ ಪರಿಕಲ್ಪನೆಯ ಮೂಲಕ ಅಧ್ಯಯನ ನಡೆಸಿದ್ದಾರೆ. ಚಿಂತಕರಾದ ಪ್ರೊ. ಟಿ.ಜೆ. ಬೈರೇಸ್, ಟಾಮ್‌ಬ್ರಾಸ್, ಡಿ.ಎನ್.ಧನಗರೆ, ಜೋಯಾ ಹಸನ್,ಮುಜಾಫರ್ ಅಸ್ಸಾದಿ, ಮೊದಲಾದವರು ಆಧುನಿಕ ಭಾರತದ ರೈತ ಹೋರಾಟಗಳನ್ನು ಕುರಿತು ಚಿಂತಿಸಿದ್ದಾರೆ.

**"Peasant Struggles In India"** ಎಂಬ ಸಮಗ್ರ ಸಂಪುಟವನ್ನು ಎ.ಆರ್.ದೇಸಾಯಿಯವರು ಸಂಪಾದಿಸಿದ್ದಾರೆ. ಇದರಲ್ಲಿ ಭಾರತದ ರೈತ ಹೋರಾಟ ಕುರಿತ ಸಮಗ್ರ ಚರಿತ್ರೆ ಹಾಗೂ ಚರ್ಚೆ ನಡೆಸಿದ್ದಾರೆ. ಈ ಸಂಪುಟದಲ್ಲಿ ಕೆ.ಎನ್.ಪಣಿಕ್ಕರ್, ಹಂಸಾ ಆಳ್ವಿ, ಉದಯ್‌ಮೆಹ್ತಾ, ಎ.ಆರ್.ದೇಸಾಯಿ ಮೊದಲಾದ ಲೇಖಕರು ರೈತಹೋರಾಟದ ಸಂಘರ್ಷಗಳ ಕುರಿತು ತಾತ್ವಿಕವಾಗಿ ವಿವೇಚಿಸಿದ್ದಾರೆ.

ಭಾರತೀಯ ಸಂದರ್ಭದಲ್ಲಿ ರೈತರನ್ನು ಕುರಿತು ಆಳವಾದ ಅಧ್ಯಯನ ನಡೆಸಿದವರಲ್ಲಿ ಡಿ.ಎನ್.ಧನಗರೆಯವರು ಮುಖ್ಯರು. ಅವರ **"Peasant Movements In India1920-1950"** ಕೃತಿಯು ಸ್ವಾತಂತ್ರ್ಯಪೂರ್ವ ರೈತ ದಂಗೆಗಳು, ಸತ್ಯಾಗ್ರಹಗಳು, ರೈತ ಸಂಘಟನೆಗಳು ನಡೆಸಿದ ಹೋರಾಟಗಳ ಕುರಿತು ವಿವೇಚಿಸುತ್ತದೆ.

ಆಧುನಿಕ ಸಂದರ್ಭದಲ್ಲಿ ರೈತ ಹೋರಾಟಗಳ ಸ್ವರೂಪ ಕುರಿತು ಸುನೀಲ್ ಸಹಸ್ರಬುದ್ಧೆಯವರು **"The Peasant Movement Today-1986"** ಕೃತಿಯಲ್ಲಿ ರೈತ ಹೋರಾಟಗಳು ಆಧುನಿಕ ಸ್ವರೂಪ ಪಡೆಯುತ್ತಿರುವ ಬಗ್ಗೆ ವಿಶ್ಲೇಷಣೆ ಮಾಡಿರುವುದನ್ನು ಕಾಣುತ್ತೇವೆ.

**"ವಿಧಾನಸಭೆಯಲ್ಲಿ ರೈತ ಸಂಘ (೧೯೯೦-೯೧)"** ಕೃತಿಯಲ್ಲಿ ಕರ್ನಾಟಕ ರಾಜ್ಯ ರೈತಸಂಘವು ವಿಧಾನಸಭೆಯಲ್ಲಿ ಶಾಸಕರಾಗಿದ್ದ ಬಾಬಾಗೌಡ ಪಾಟೀಲ,ಪ್ರೊ.ಎಂ.ಡಿ.ನಂಜುಂಡಸ್ವಾಮಿಯವರು ಮಾಡಿದ ಭಾಷಣವನ್ನು ಸಂಗ್ರಹಿಸಿ ಪ್ರಕಟಿಸಲಾಗಿದೆ. **"ರೈತ ಸರಕಾರದ ಸ್ಥಾಪನೆ ಏಕೆ ಮತ್ತು ಹೇಗೆ?"** (1994) ಕೃತಿಯಲ್ಲಿ ಎನ್.ಎಂ. ಕಂಠಿಯವರು ರೈತ ಸರ್ಕಾರದ ಕನಸುಗಳನ್ನು ಆಶಯಗಳನ್ನು ವಿವರಿಸಿದ್ದಾರೆ. **"ಸರಕಾರಕ್ಕೆ ರೈತನ ಸವಾಲು"**(1987) ಕೃತಿಯನ್ನು ನಾಟಕ ಸ್ವರೂಪದಲ್ಲಿ ಬಸನಗೌಡ ಬಾ.ಪಾಟೀಲ ಅವರು ರಚಿಸಿದ್ದಾರೆ. **"ನಮ್ಮ ನಾಡು"** ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರು ವಾರಪತ್ರಿಕೆಗೆ ಬರೆಯುತ್ತಿದ್ದ ಸಂಪಾದಕೀಯ ಲೇಖನಗಳ ಒಟ್ಟು ಸಂಗ್ರಹ ಕೃತಿಯಾಗಿ ಶಿವಮೊಗ್ಗ ಜಿಲ್ಲಾ ರೈತ ಸಂಘದಿಂದ ಪ್ರಕಟಗೊಂಡಿದೆ. ಸ್ವತಃ ರೈತನಾಯಕರಾಗಿದ್ದ ಪ್ರೊ.ನಂಜುಂಡಸ್ವಾಮಿಯವರು ಸರ್ಕಾರದ ಮೋಸ ವಂಚನೆ ಕುರಿತು ರೈತರಲ್ಲಿ ಮೂಡಿಸುತ್ತಿದ್ದ ಜಾಗೃತಿ,ಪ್ರಜ್ಞೆ ಮತ್ತು ರೈತರು ಮುಂದಿಡಬೇಕಾದ ಹೆಜ್ಜೆ ಕುರಿತು ಸೂಕ್ಷ್ಮವಾಗಿ ಈ ಕೃತಿಯಲ್ಲಿ ವಿವರಿಸುತ್ತಾರೆ. **"ಪರ್ಯಾಯ ಕೃಷಿ ನೀತಿ"** ಎಂಬ ಪ್ರಣಾಳಿಕೆಯನ್ನು ಕರ್ನಾಟಕ ಪ್ರಾಂತ ರೈತ ಸಂಘ ಹಾಗೂ ಕರ್ನಾಟಕ ಪ್ರಾಂತ ಕೃಷಿ ಕೂಲಿಕಾರರ ಸಂಘವು 2003ರಲ್ಲಿ ಪ್ರಕಟಿಸಿದೆ. ಜಾಗತಿಕ ಸಂದರ್ಭದಲ್ಲಿ ಕೃಷಿಕರಿಗೆ, ಭೂಹೀನರಿಗೆ, ಭೂಶಾಸನದಲ್ಲಾಗಿರುವ ಆಮೂಲಾಗ್ರ ಬದಲಾವಣೆ ಕುರಿತಂತೆ ನೂತನ ಕೃಷಿ ನೀತಿ ರೂಪಿಸುವಂತೆ ಎಡ ಸಂಘಟನೆಗಳು ಕೆಲವು ಪರ್ಯಾಯನೀತಿಗಳನ್ನು ಇಲ್ಲಿ ನಿರೂಪಿಸಲಾಗಿದೆ. ಭವಾನಿ ಶಂಕರ್ ಬಿ.ಎಸ್.,**ಬಾಗೂರು ನವಿಲೆ ಗ್ರಾಮ ಸಮೂಹದ ಬವಣೆಗಳು**,ರಾಮಕೃಷ್ಣ ಜಿ.ಮತ್ತು ಎನ್.ಗಾಯತ್ರಿ,**ಹೋರಾಟದ ಹಾದಿಯಲ್ಲಿ ಬಾಗೂರು ನವಿಲೆ ರೈತರು**,ವಿಷ್ಣುನಾಯ್ಕ,**ದುಡಿಯುವ ಕೈಗಳ ಹೋರಾಟದ ಕತೆ** ಕೃತಿಗಳು ಕೂಡಾ ರೈತಹೋರಾಟ ಆಶಯಗಳನ್ನು ವ್ಯಕ್ತಪಡಿಸಿವೆ.

**೬.ರೈತ ಹೋರಾಟ ಕುರಿತ ಸಂಶೋಧನಾ ಕೃತಿಗಳು**

ಮುಝಾಫರ್ ಅಸ್ಸಾದಿಯವರ **"ಪೆಸೆಂಟ್ ಮೂವ್‌ಮೆಂಟ್ ಇನ್ ಕರ್ನಾಟಕ ೧೯೮೦-೧೯೯೪"** ಕೃತಿಯಲ್ಲಿ ಸೈದ್ಧಾಂತಿಕ ನೆಲೆಗಟ್ಟಿನ ಮೂಲಕ ರೈತ ಹೋರಾಟವನ್ನು ನೋಡುವ ಬಗೆಯನ್ನು ಕಾಣಬಹುದು. ಈ ಲೇಖಕರು ಕರ್ನಾಟಕದಲ್ಲಿ ೮೦ರ ದಶಕದಲ್ಲಿ ಹಾಗೂ ೯೦ ದಶಕದಲ್ಲಿ ರೈತ ಚಳವಳಿಗಳು ಕೈಗೊಂಡ ನಿರ್ಣಯಗಳು ಹಾಗೂ ಸರ್ಕಾರದ ಕಾರ್ಯಕ್ರಮಗಳನ್ನು ವಿಮರ್ಶಿಸಿದ್ದಾರೆ. ಜಾಗತೀಕರಣ, ಉದಾರೀಕರಣದ ಪರಿಣಾಮಗಳನ್ನು ಕುರಿತು ತಾತ್ವಿಕವಾಗಿ ಚಿಂತಿಸಿದ್ದಾರೆ.

ಧನಂಜಯಕುಮಾರ್ ಅವರ **"Karnataka Rajya Ryotha Sangha A Socialogical Study**

**of Peasant Organisation"** ಕೃತಿಯು ಸಾಮಾಜಿಕ ನೆಲೆಯಲ್ಲಿ ರಾಜ್ಯ ರೈತ ಸಂಘಟನೆಯು ನಡೆದ ಬಂದ ದಾರಿ, ವಿವಾಹ, ಸಾಮಾಜಿಕ ಸೇವೆ ಮುಂತಾದ ಆಶಯಗಳನ್ನು ಒಳಗೊಂಡಿದೆ. ಮುಖ್ಯವಾಗಿ ರೈತಸಂಘಟನೆಗಳು, ರೈತಹೋರಾಟವನ್ನಲ್ಲದೇ ಸಮಾಜ ಸೇವಾ ಕಾರ್ಯ ಕ್ರಮಗಳನ್ನು ಜಾರಿಗೊಳಿಸಿದ ಬಗೆಯನ್ನು ಈ ಅಧ್ಯಯನ ಶೋಧಿಸುತ್ತದೆ.

ಕೆ.ಎಂ.ಕುಮಾರ್ ಅವರ **"An Analysis of Karnataka Rajya Ryotha Sangha As a Movement-1987-1995"** ಕೃತಿಯು ರೈತ ಹೋರಾಟ ನಡೆದು ಬಂದ ಬಗೆ ಸೈದ್ಧಾಂತಿಕ ನಿಲುವು, ರೈತ ಸಂಘ ಕೈಗೊಂಡ ಕಾರ್ಯಕ್ರಮಗಳ ಕುರಿತು ಪ್ರಸ್ತಾಪಿಸುತ್ತದೆ.

**"ಚಿರಸ್ಮರಣೆಯ ಕಯ್ಯೂರು"** ಕೃತಿಯ ಬಗ್ಗೆ ನಿರಂಜನರೇ ಹೇಳುವಂತೆ "ಈ ಪುಟ್ಟ ಪುಸ್ತಕ ಕಥೆಯಲ್ಲ, ನೀಳ್ಗತೆಯೂ ಅಲ್ಲ. ಇದು ದಾಖಲೆಗಳನ್ನು ಆಧರಿಸಿದ ಪರಿಚಯ ಲೇಖನ ಇತಿಹಾಸ." ಹೀಗಾಗಿ ಈ ಕೃತಿಯಲ್ಲಿ ರೈತಹೋರಾಟದ ಆಶಯಗಳು ವ್ಯಕ್ತವಾಗಿವೆ.

ರಾಮಮನೋಹರ ಲೋಹಿಯಾ ಅವರ **"ಭಾರತದ ರೈತ"** ಕೃತಿಯು ಭಾರತೀಯ ರೈತರನ್ನು ಕುರಿತು ಚಿಂತನೆಗೆ ಒಳಪಡಿಸುವಂತಹ ಕೃತಿಯಾಗಿದೆ.ಭೂ ಹೀನರಿಗೆ ಭೂಮಿಯನ್ನು ನೀಡುವ ಒತ್ತಾಸೆಗಳು, ರೈತನ ಸ್ಥಿತಿಗತಿಗಳು ಆತನ ಮಿತಿಗಳನ್ನು ಕೃತಿಯಲ್ಲಿ ವಿವೇಚಿಸಲಾಗಿದೆ.

ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರ **"ರೈತ ಹೋರಾಟ ಏಕೆ?"** ಕಿರು ಹೊತ್ತಿಗೆಯು ೮೦ರ ದಶಕದಲ್ಲಿ ರೈತ ಚಳವಳಿಗಳು ಪ್ರಸ್ತುತ ಸವಾಲುಗಳನ್ನು ಎದುರಿಸುವ ಬಗೆ ಕುರಿತು ರೈತ ಸಂಘದ ಪ್ರಣಾಳಿಕೆಯ ರೂಪದಲ್ಲಿ ಪ್ರಕಟವಾಗಿದೆ.ಬೆಲೆ ಏರಿಕೆ,ರೈತವಿರೋಧಿ ಧೋರಣೆ,ರೈತರನ್ನು ಸಂಘಟಿಸುವ ಯತ್ನವನ್ನು ಈ ಕೃತಿಯಲ್ಲಿ ಕಾಣುತ್ತೇವೆ.

ಟಿ.ಆರ್.ಚಂದ್ರಶೇಖರ್ ಅವರ **"ಕಬ್ಬು ಬೆಳೆಗಾರರ ಹೋರಾಟ"** ಕೃತಿಯಲ್ಲಿ ಸರ್ಕಾರದ ಧೋರಣೆ, ಸಕ್ಕರೆ ಕಾರ್ಖಾನೆಯ ಆಡಳಿತ ಮಂಡಳಿಯ ವಿಳಂಬ ನೀತಿ ಮೊದಲಾದ ವಿಚಾರಗಳನ್ನು ಖಂಡಿಸಿದ್ದಾರೆ. ರೈತರಿಗೆ ಆಗುತ್ತಿದ್ದ ಅನ್ಯಾಯಗಳ ವಿರುದ್ಧ ಈ ಕೃತಿಯಲ್ಲಿ ಬೆಳಕು ಚೆಲ್ಲುತ್ತಾರೆ.

ತಂಬಂಡ ವಿಜಯ್ ಪೂಣಚ್ಚ ಅವರ **"ರೈತ ಚಳವಳಿಗಳು ಏಕೀಕರಣೋತ್ತರ ಕರ್ನಾಟಕ ಚಳವಳಿ ಸಂಪುಟ ೬"** ಕೃತಿಯಲ್ಲಿ ಕರ್ನಾಟಕದ ಎಲ್ಲಾ ರೈತ ಹೋರಾಟಗಳನ್ನು ಸ್ಥೂಲವಾಗಿ ವಿವರಿಸಲಾಗಿದೆ. ಸ್ವಾತಂತ್ರ್ಯಪೂರ್ವದಲ್ಲಿನ ರೈತ ಸಂಘಟನೆಗಳ ಕಾರ್ಯಕ್ರಮಗಳು, ಸ್ವಾತಂತ್ರ್ಯೋತ್ತರ ಭಾರತ ಹಾಗೂ ಕರ್ನಾಟಕದ ರೈತಹೋರಾಟಗಳನ್ನು ಹಾಗೂ ಇತ್ತೀಚಿನವರೆಗಿನ ರೈತ ಹೋರಾಟಗಳನ್ನು ಕುರಿತು ವಿವರಿಸಿದ್ದಾರೆ.

ಎಸ್.ಚಂದ್ರಶೇಖರ್ ಅವರ **"ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ"** ಕೃತಿಯಲ್ಲಿ ವಸಾಹತುಶಾಹಿ ಸಂದರ್ಭದಲ್ಲಿನ ರೈತರ ಸ್ಥಿತಿಗತಿ, ರೈತರಲ್ಲಿರದ ರಾಷ್ಟ್ರೀಯ ಪ್ರಜ್ಞೆ ಕುರಿತಂತೆ ಲೇಖಕರು ಚಿಂತಿಸಿದ್ದಾರೆ. ಶ್ರೀಮಂತಶಾಹಿ, ಬಂಡವಾಳಶಾಹಿಗಳಷ್ಟೇ ರಾಜಕೀಯ ಸ್ವಾತಂತ್ರ್ಯ ಹೋರಾಟದಲ್ಲಿ ರೈತರು ಭಾಗಿಯಾದ ಬಗೆಯನ್ನು ಇಲ್ಲಿ ನಿರೂಪಿಸಲಾಗಿದೆ.

ವಿಷ್ಣುನಾಯ್ಕ ಅವರ **"ದುಡಿಯುವ ಕೈಗಳ ಹೋರಾಟದ ಕತೆ"** ಕೃತಿಯಲ್ಲಿ ಮುಖ್ಯವಾಗಿ ಉತ್ತರ ಕನ್ನಡ ಜಿಲ್ಲೆಯ ರೈತ ಜನಾಂದೋಲನವನ್ನು ಕುರಿತು ವಿವೇಚಿಸಲಾಗಿದೆ. ದಿನಕರ ದೇಸಾಯಿ ಮತ್ತು ರೈತನಾಯಕರ ಮುಂದಾಳತ್ವದಲ್ಲಿ ನಡೆದ ರೈತ ಹೋರಾಟದ ಯಶೋಗಾಥೆಗಳನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ.

ಎಂ.ಜಿ.ನಾಗರಾಜ್‌ರವರ **"ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು ಸಹಸ್ರಮಾನದ ೧,೨,೩ ಸಂಪುಟ"**ಗಳನ್ನು ಪ್ರತಿಭಾವಂತ ಸಂಸದೀಯಪಟುಗಳ ಪುಸ್ತಕ ಮಾಲಿಕೆಯಡಿಯಲ್ಲಿ ಕರ್ನಾಟಕ ವಿಧಾನಮಂಡಲ ಗ್ರಂಥಾಲಯ ಉಪಸಮಿತಿ ಪ್ರಕಟಿಸಿದೆ. **"ಪ್ರಾಚೀನ ಕರ್ನಾಟಕ ಮತ್ತು ಏಕೀಕರಣ ಪೂರ್ವ ರೈತ ಚಳುವಳಿಗಳು-1955"**ರವರೆಗೆ ಮತ್ತು **"ಏಕೀಕರಣೋತ್ತರ ಸಹಸ್ರಮಾನ ಪೂರ್ವ ರೈತ ಚಳುವಳಿಗಳು ಹಾಗೂ ಸಹಸ್ರಮಾನ ಪೂರಕ ವಿವಿಧ ರೈತ ಚಳುವಳಿ"** ಗಳು ಎಂಬ ಈ ಸಂಪುಟಗಳಲ್ಲಿ ರೈತ ಚಳುವಳಿಯ ಹುಟ್ಟು, ಬೆಳವಣಿಗೆ, ರೈತ ಚಳುವಳಿಯ ಹಿನ್ನೋಟ, ಮುನ್ನೋಟಗಳು, ಭೂಸುಧಾರಣೆ, ಬೆಲೆಹಾನಿ, ರೈತರ ಮೇಲಿನ ಗೋಲಿಬಾರ್.

ಲಾಠಿಪ್ರಹಾರ, ಬಾಗೂರು ನವಿಲೆ ಪ್ರದೇಶದ ರೈತರ ಸಮಸ್ಯೆಗಳು, ಬೆಳೆಯ ಬೆಲೆ ಕುಸಿತ, ಬೆಳೆಗಾರರ ಪ್ರತಿಭಟನೆ, ಕಾಲ್ನಡಿಗೆ ಜಾಥಾ, ರೈತರ ಸರಣಿ ಆತ್ಮಹತ್ಯೆಗಳು, ಸುದ್ದಿಮಾಧ್ಯಮದ ವರದಿಗಳು ಮುಖ್ಯವಾಗಿ ವಿಧಾನಸಭೆಯಲ್ಲಿ ಈ ಬಗ್ಗೆ ನಡೆದ ಚರ್ಚೆಗಳು ಕಂಡುಬರುತ್ತವೆ.

ಡಿ.ಕೆ. ಕುಲಕರ್ಣಿಯವರ **"ಶಿವಮೊಗ್ಗ ಜಿಲ್ಲೆಯಲ್ಲಿ ರೈತ ಸಂಘಟನೆ ಮತ್ತು ಚಳುವಳಿಗಳು"** ಲೇಖನದಲ್ಲಿ ಶಿವಮೊಗ್ಗ ಜಿಲ್ಲೆಯ ರೈತ ಸಂಘಟನೆಯ ಹುಟ್ಟು ಬೆಳವಣಿಗೆ ಅದಕ್ಕೆ ಪೂರಕವಾದ ವಾತಾವರಣ ಕುರಿತಂತೆ ಈ ಲೇಖಕರು ವಿವರಿಸುತ್ತಾರೆ.

ಎಂ.ಚಿದಾನಂದಮೂರ್ತಿಯವರ **"ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ"** ಕೃತಿಯು ಮಧ್ಯಕಾಲೀನ ಸಂದರ್ಭದಲ್ಲಿನ ಭೂ ಒಡೆತನ ಕುರಿತು ವಿವೇಚಿಸುತ್ತದೆ. ಇಂತಹ ಭೂ ಒಡೆತನದ ಅಂಶಗಳನ್ನು ಶಾಸನ ಹಾಗೂ ಹಲವು ಆಧಾರಗಳ ಮೂಲಕ ವಿಶ್ಲೇಷಿಸಿದ್ದಾರೆ.

ಜಿ.ಪಿ.ಬಸವರಾಜು ಅವರ **"ಶಿವಮೊಗ್ಗ ರೈತ ಚಳುವಳಿ"** ಕೃತಿಯು ಶಿವಮೊಗ್ಗ ಜಿಲ್ಲೆಯಲ್ಲಿ ರೈತ ಸಂಘಟನೆ ಹುಟ್ಟು ಬೆಳವಣಿಗೆ, ಹೋರಾಟದ ಸ್ವರೂಪ ಪಡೆದ ಬಗೆ ಮುಂತಾದ ವಿವರಗಳನ್ನು ನಿರೂಪಿಸುತ್ತದೆ.

ವಂದನಾಶಿವ ಅವರ **"ಬತ್ತದ ಚಿಲುಮೆ (ಭಾರತದಲ್ಲಿ ಮಹಿಳೆ ಮತ್ತು ಅಭಿವೃದ್ಧಿ ಮತ್ತು ಇಕಾಲಜಿ)"** ಕೃತಿಯು ಕೃಷಿಯಲ್ಲಿ ತಂತ್ರಜ್ಞಾನದ ಬಳಕೆಯ ತಪ್ಪು ಕಲ್ಪನೆಯ ಬಗ್ಗೆ ಅರಿವು ಮೂಡಿಸುತ್ತದೆ.

ಪ್ರೊ.ಎಂ.ಡಿ.ನಂಜುಂಡಸ್ವಾಮಿ ಅವರ ಕುರಿತ **"ಪ್ರೊಫೆಸರ್ ಎಂ.ಡಿ.ಎನ್."** ಎಂಬ ಕೃತಿಯು ಲೇಖನಗಳ ಸಂಗ್ರಹವಾಗಿದೆ.ಇದರಲ್ಲಿ ನಾಡಿನ ಹಿರಿಯವಿದ್ವಾಂಸರು, ರೈತಹೋರಾಟಗಾರರು,ಸಮಾಜವಾದಿ ಗೆಳೆಯರು, ಸಾಹಿತಿಗಳು ಪ್ರೊ.ಎಂ.ಡಿ.ಎನ್.ರವರ ಕುರಿತು ಬರೆದ ಲೇಖನಗಳಿವೆ. ಒಟ್ಟಾರೆ ಕರ್ನಾಟಕದ ಸಾಂಸ್ಕೃತಿಕ ಜಗತ್ತು ಬೆಳೆದು ಬಂದ ಬಗೆ, ಹೋರಾಟದ ಹಾದಿಯ ಬಗೆ, ಸಮಾಜವಾದಿ ಪಕ್ಷದ ನೆಲೆ, ರೈತ ಸಂಘಟನೆ ಮತ್ತು ರೈತ ಹೋರಾಟ ಕುರಿತ ವಿಸ್ಮಯಗಳಿವೆ. ಪ್ರೊ.ಎಂ.ಡಿ.ನಂಜುಂಡಸ್ವಾಮಿಯವರ ಒಟ್ಟಾರೆ ಚಿಂತನೆಗಳನ್ನು ಈ ಕೃತಿಯಲ್ಲಿ ನೋಡಬಹುದಾಗಿದೆ.

ಏಕೀಕರಣೋತ್ತರ ಚಳವಳಿಗಳ ಸಂಪುಟವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ಪ್ರಕಟಿಸಿದೆ. ಚಳವಳಿ ಸಂಪುಟಗಳಲ್ಲಿ ಎನ್.ಚಿನ್ನಸ್ವಾಮಿ ಸೋಸಲೆ ಅವರ **"ಗಡಿ ಚಳವಳಿಗಳು"** ಸಿ.ಆರ್.ಗೋವಿಂದರಾಜು ಅವರ **"ಕನ್ನಡ ಚಳವಳಿಗಳು"** ಪ್ರೊ.ಲಕ್ಷ್ಮಣ್‌ತೆಲಗಾವಿಯವರ **"ಹಿಂದುಳಿದ ವರ್ಗಗಳ ಮತ್ತು ದಲಿತ ಚಳುವಳಿಗಳು"** ವಿರೂಪಾಕ್ಷಿ ಪೂಜಾರಹಳ್ಳಿ ಅವರ **"ಜಲಸಂಬಂಧಿ ಚಳವಳಿಗಳು"** ಕೆ.ಮೋಹನ್‌ಕೃಷ್ಣರೈ ಅವರ **"ಪರಿಸರ ಚಳವಳಿಗಳು"** ಏಕೆಂದರೆ ಈ ಅಧ್ಯಯನಕಾರನ ಅಧ್ಯಯನಕ್ಕೆ ಈ ಚಳುವಳಿಗಳು ಪೂರಕವಾಗಿರುವುದರಿಂದ ಇವುಗಳನ್ನು ಪರಿಗಣಿಸಲಾಗಿದೆ.

### ೧.೪.೧ ಲೇಖನಗಳು

ಈವರೆಗಿನ ಅಧ್ಯಯನಗಳ ಸಮೀಕ್ಷೆಯಲ್ಲಿ ಈಗಾಗಲೇ ಕೃತಿಗಳ ಕುರಿತು ಆಯಾ ವಿಭಾಗಗಳಲ್ಲಿ ವಿಶ್ಲೇಷಿಸಲಾಗಿದೆ. ಅದೇ ರೀತಿ ಲೇಖನಗಳ ವಿಭಾಗಗಳಲ್ಲೂ ರೈತ ಮತ್ತು ಭೂ ಪ್ರಶ್ನೆಯನ್ನು ಅಭ್ಯಸಿಸಿರುವ ಲೇಖನಗಳನ್ನು ಚರ್ಚಿಸಲಾಗಿದೆ.

**೧.ಕಾಗೋಡು ರೈತ ಹೋರಾಟ ಕುರಿತ ಲೇಖನಗಳು**

ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟದಲ್ಲಿ ಹೆಚ್.ಗಣಪತಿಯಪ್ಪ ಅವರು ಬರೆದಿರುವ **"ಕಾಗೋಡು ರೈತ ಸತ್ಯಾಗ್ರಹ ಮತ್ತು ಗೋಪಾಲಗೌಡರು"** ಎಂಬ ಲೇಖನದಲ್ಲಿ ರೈತ ಹೋರಾಟದ ಮುಂಚೂಣಿ ನಾಯಕರಾಗಿದ್ದ ಗೋಪಾಲಗೌಡರ ಹೋರಾಟದ ನೆಲೆಯನ್ನು ಗುರುತಿಸಿದ್ದಾರೆ. ಇದೇ ಕೃತಿಯಲ್ಲಿ **"ಕಾಗೋಡಿನಲ್ಲಿ ಲೋಹಿಯಾ"** ಎಂಬ ಲೇಖನವನ್ನು ಕೇಶವಭಾಗ್ಯರವರು ಬರೆದಿದ್ದಾರೆ. ಈ ಲೇಖನದಲ್ಲಿ ಡಾ.ರಾಮಮನೋಹರ ಲೋಹಿಯಾರವರು ಕಾಗೋಡಿಗೆ ಆಗಮಿಸಿ, ರೈತ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಬಗೆಯನ್ನು ವಿವರಿಸಿದ್ದಾರೆ.

"**ಜೀವಂತ ಜ್ವಾಲೆ**" ಕೃತಿಯನ್ನು ಕೋಣಂದೂರು ವೆಂಕಪ್ಪಗೌಡರ ಸಂಪಾದಕತ್ವದಲ್ಲಿ ಪ್ರಕಟಿಸಲಾಗಿದೆ. "**ಕಾಗೋಡು ಚಲೋ**" ಎಂಬ ಲೇಖನವನ್ನು ಸ್ವತಃ ಸಮಾಜವಾದಿ ನಾಯಕ ಶಾಂತವೇರಿ ಗೋಪಾಲಗೌಡರು ಬರೆದಿದ್ದಾರೆ. ಚಳುವಳಿಯಲ್ಲಿ ಭಾಗವಹಿಸಿದ್ದ ಕಾಗೋಡಿನ ಪ್ರತಿ ಘಟನೆಗಳನ್ನು ಈ ಲೇಖನದಲ್ಲಿ ಅವರು ನಿರೂಪಿಸಿದ್ದಾರೆ.

"**ಶಾಂತವೇರಿ ಗೋಪಾಲಗೌಡರು**" ಲೇಖನದಲ್ಲಿ ಯು.ಆರ್. ಅನಂತಮೂರ್ತಿಯವರು, ಶಾಂತವೇರಿ ಗೋಪಾಲ ಗೌಡರು ರೈತ ಹೋರಾಟವನ್ನು ನಡೆಸಿದ ಬಗೆಯನ್ನು ವಿಶ್ಲೇಷಿಸಿದ್ದಾರೆ. ಸಂಘಟನಾತ್ಮಕವಾಗಿ ಅವರು ಸವೆಸಿದ ಹಾದಿಯನ್ನು ರೈತರನ್ನು ಹುರಿದುಂಬಿಸಿ ಹೋರಾಟಕ್ಕೆ ಸಿದ್ಧತೆ ನಡೆಸುತ್ತಿದ್ದ ಬಗೆಯನ್ನು ಲೇಖನದಲ್ಲಿ ನಿರೂಪಿಸಿದ್ದಾರೆ.

"**ಗೋಪಾಲಗೌಡ ಶಾಂತವೇರಿ ಅಂತರಂಗ ಬಹಿರಂಗ**" ಕೃತಿಯಲ್ಲಿನ "**ಕಾಗೋಡು ಚಳವಳಿ:ಪಂಡಿತ್ ರಮಾನಂದ ಮಿಶ್ರ ಕಂಡಂತೆ**" ಲೇಖನದಲ್ಲಿ ಕಾಗೋಡು ಚಳವಳಿಯನ್ನು ಮಿಶ್ರ ಅವರು ತಮ್ಮ ತಾತ್ವಿಕ ದೃಷ್ಟಿಕೋನದಿಂದ ನೋಡಿದ್ದಾರೆ.ತಮ್ಮ "**ಟೀಕೆ ಟಿಪ್ಪಣಿ**" ಕೃತಿಯ "**ರೈತರು:ಒಂದು ರಾಜಕೀಯ**" ಲೇಖನದಲ್ಲಿ ರೈತರನ್ನು ಕುರಿತು ಲಂಕೇಶರು ತಾತ್ವಿಕವಾಗಿ ಚರ್ಚಿಸಿದ್ದಾರೆ.

**೨.ಭೂ ಹೋರಾಟ ಕುರಿತ ಲೇಖನಗಳು**

ಉತ್ತರ ಕನ್ನಡ ಜಿಲ್ಲೆಯಲ್ಲಿ ನಡೆದ "**ಸಮಾಜವಾದಿ ರೈತ ಆಂದೋಲನ**" ಕುರಿತಂತೆ ವಿಷ್ಣುನಾಯ್ಕ ಅವರು ತಮ್ಮ ಲೇಖನದಲ್ಲಿ ಬರೆದಿದ್ದಾರೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ರೈತರನ್ನು ಭೂಮಾಲೀಕರು ನಡೆಸಿಕೊಂಡ ಬಗೆ, ಭೂಸುಧಾರಣೆ ನಂತರದಲ್ಲಿ ಭೂಹಂಚಿಕೆನಡೆದ ಬಗೆಯನ್ನು ಈ ಬರಹ ಕಟ್ಟಿಕೊಡುತ್ತದೆ.

ಪ್ರೊ.ಕೆ.ಎನ್.ಕುರುಪ್‌ರವರ "**ಭೂಸ್ವಾಮ್ಯ ಮತ್ತು ಸಾಮಾಜಿಕ ಬದಲಾವಣೆ: ವಸಾಹತುಶಾಹಿಯ ಸಂದರ್ಭದಲ್ಲಿ ದಕ್ಷಿಣ ಕನ್ನಡ**" ಲೇಖನದಲ್ಲಿ ಭೂಸ್ವಾಮ್ಯ ಸಮಾಜಿಕ ಬದಲಾವಣೆ ಕುರಿತಂತೆ ಚಿಂತಿಸಲಾಗಿದೆ.ದಕ್ಷಿಣ ಕನ್ನಡ ಜಿಲ್ಲೆಯ ಭೂವಿನ್ಯಾಸದಲ್ಲಿನ ಬದಲಾವಣೆಗಳನ್ನು ಈ ಲೇಖನದಲ್ಲಿವಿವೇಚಿಸಿದ್ದಾರೆ.

**೩.ಭೂಸುಧಾರಣೆ ಕುರಿತ ಲೇಖನಗಳು**

ಪ್ರೊ.ಹಿ.ಚಿ.ಬೋರಲಿಂಗಯ್ಯ ಅವರ "**ಕರ್ನಾಟಕದಲ್ಲಿ ಭೂಸುಧಾರಣೆ: ಒಂದು ಪಕ್ಷಿನೋಟ**" ಕಾಗೋಡು ಚಳವಳಿ ಲೇಖನವು ಸುವರ್ಣ ಸಂಪುಟದಲ್ಲಿ ಪ್ರಕಟವಾಗಿದೆ. ಈ ಲೇಖನದಲ್ಲಿ ಭೂಸುಧಾರಣೆ ಎಂದರೇನು ಗೇಣಿದಾರಿಕೆಯ ವಿಧಗಳು, ಭೂ ಸುಧಾರಣಾ ಶಾಸನ ಮೊದಲಾದ ವಿಷಯ ಕುರಿತು ಲೇಖಕರು ವಿಶ್ಲೇಷಿಸಿದ್ದಾರೆ. ಎ.ವಿ.ಪ್ರಸನ್ನ ಅವರ "**ಕರ್ನಾಟಕದಲ್ಲಿ ಭೂಸುಧಾರಣೆ** "ಲೇಖನವು ಕರ್ನಾಟಕ ಸಂಗಾತಿಯಲ್ಲಿ ಪ್ರಕಟವಾಗಿದ್ದು, ಭೂಸುಧಾರಣೆ ನಡೆದು ಬಂದ ಬಗೆಯನ್ನು ವಿವೇಚಿಸಿದ್ದಾರೆ.

ಮುಜಾಫರ್ ಅಸ್ಸಾದಿಯವರ "**Karnataka`s New Agriclultural Policy Making Way for Corporate Landlordism**" ( Economic and Political Weekly(EPW)December 30,1995), ಪ್ರೊ. ಅಬ್ದುಲ್ ಅಜೀಜ್‌ರವರ "**Reflections on Land Ceilings Legislation in Karnataka**" ಭೂಸುಧಾರಣೆ ಕುರಿತು ಐಸೆಕ್‌ನ ಪ್ರೊ.ಜಿ.ತಿಮ್ಮಯ್ಯನವರು "**New perspectives on Land Reforms**" ಎಂಬ ಲೇಖನ ಪ್ರಕಟಿಸಿದ್ದಾರೆ. ಭೂಸುಧಾರಣೆಯ ಏನು? ಎಂಬ ಪ್ರಶ್ನೆಯನ್ನಿಟ್ಟುಕೊಂಡು ಸರ್ಕಾರದ ಅಧಿಕಾರಿಯಾಗಿ ನಿವೃತ್ತರಾದ ಎಂ.ಎ.ಎಸ್.ರಾಜನ್‌ರವರು "**Effects of Land Reforms: What Next?**" ಎಂಬ ಲೇಖನ ಬರೆದಿದ್ದಾರೆ. ಕೆ.ಗೋಪಾಲ ಐಯ್ಯರ್ ರವರ " **Implementation of the Land Ceiling Programme**" ಲೇಖನ ಪ್ರಕಟವಾಗಿದೆ. ಪ್ರೊ.ಅಬ್ದುಲ್ ಅಜೀಜ್ ಮತ್ತು ಸುಧೀರ್‌ಕೃಷ್ಣ ಸಂಪಾದಿಸಿರುವ "**Land Reforms in India Karnataka Promises Kept and Missed** -1997" ಸಂಪುಟ ೪ ಈ ಕೃತಿಯಲ್ಲಿ ಭೂಸುಧಾರಣೆ ಕುರಿತು ವಿವೇಚನೆ ಮಾಡಲಾಗಿದೆ. "**The Political Economy of Land Reforms in India**" ಲೇಖನದಲ್ಲಿ ಪ್ರೊ.ಜಿ.ತಿಮ್ಮಯ್ಯ ಮತ್ತು ಅಬ್ದುಲ್ ಅಜೀಜ್‌ರವರು ಭಾರತದ

ಭೂಸುಧಾರಣೆ ಕುರಿತು ಚರ್ಚಿಸಿದ್ದಾರೆ.

"ದಿ ಮೈಸೂರು ಟೆನೆನ್ಸಿ ಆಕ್ಟ್ ೧೯೫೨"ರ ತಿದ್ದುಪಡಿಯಾದ ನಂತರದಲ್ಲಿ ೧೯೫೪ ರಲ್ಲಿ ಸರ್ಕಾರಿ ಮುದ್ರಾಣಾಲಯದಿಂದ ಮುದ್ರಣಗೊಂಡಿದೆ. ಸರ್ಕಾರದ ನೀತಿ ನಿಯಮಗಳನ್ನು ಈ ಕಾಯ್ದೆಯಲ್ಲಿ ನೋಡಬಹುದಾಗಿದೆ."**ಕರ್ನಾಟಕ ಭೂಸುಧಾರಣಾ ಕಾಯ್ದೆ ೧೯೬೧ಇದು ಕರ್ನಾಟಕ ಆಕ್ಟ್No10-೧೯೬೨** " ರಲ್ಲಿ ಪ್ರಕಟಗೊಂಡಿದೆ. ಎಂ.ಎ.ಎಸ್.ರಾಜನ್‌ರವರ **"The Land Reforms Law in Karnataka A Disaiprive account 1979"** ಲೇಖನವನ್ನು ಮುಖ್ಯವಾಗಿ ಗಮನಿಸಬಹುದು.

**೪.ರೈತ ಹೋರಾಟ ಕುರಿತ ಲೇಖನಗಳು**

**"ನಗರ ಡಿವಿಷನ್ನಿನಲ್ಲಿ ನಡೆದ ರೈತರ ದಂಗೆ:ಒಂದು ವಿವೇಚನೆ"** ಕುರಿತ ಲೇಖನದಲ್ಲಿ ಘಟನೆ ನಡೆದ ಹಿನ್ನೆಲೆ ಮತ್ತು ಪರಿಣಾಮ ಕುರಿತಂತೆ ಎಂ.ಸೆಬಾಸ್ಟಿನ್ ಜೋಸೆಫ್ ವಿವೇಚಿಸಿದ್ದಾರೆ.

**"ಕರ್ನಾಟಕ ಚರಿತ್ರೆ ಸಂಪುಟ ೬"**ಇದರಲ್ಲಿ ಸೆಬಾಸ್ಟಿನ್ ಜೋಸೆಫ್ ಮತ್ತು ಯತೀಶ್‌ಕುಮಾರ್‌ರವರು ಬರೆದಿರುವ **"ರೈತ ಬಂಡಾಯ:ಕೆಳಕೊಡಗು ಮತ್ತು ದಕ್ಷಿಣ ಕನ್ನಡಗಳಲ್ಲಿ"** ಎಂಬ ಲೇಖನ ಕೆಳಕೊಡಗು ಮತ್ತು ದ.ಕನ್ನಡಗಳಲ್ಲಿ ನಡೆದ ರೈತ ಬಂಡಾಯದ ಇತಿಹಾಸವನ್ನು ಪ್ರತಿಬಿಂಬಿಸುತ್ತದೆ.

**"ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು"** ಈ ಕೃತಿಯಲ್ಲಿ ಎ.ಎಸ್ ಪ್ರಭಾಕರ ಅವರು **"ಕರ್ನಾಟಕದಲ್ಲಿ ಆದಿವಾಸಿ ರೈತ ಹೋರಾಟಗಳ ಸ್ವರೂಪ"** ಲೇಖನದಲ್ಲಿ ಬುಡಕಟ್ಟು ಜನಾಂಗ ಹೇಗೆ ತನ್ನ ಭೂಮಿಯನ್ನು ಮಾತೃಸ್ವರೂಪವಾಗಿ ಕಾಣುತ್ತಿತ್ತು. ಭೂಮಾಲೀಕರು, ಬಂಡವಾಳಶಾಹಿಗಳು ಬುಡಕಟ್ಟು ಜನಾಂಗಗಳನ್ನು ಹೇಗೆ ಕ್ರೌರ್ಯದಿಂದ ವಂಚಿಸುತ್ತಿದ್ದರೆಂಬುದನ್ನು ವಿಶ್ಲೇಷಿಸುತ್ತಾರೆ.

ಸಿ. ಯತಿರಾಜು ಅವರ ಬರೆದಿರುವ **"ನಕ್ಸಲ್ ಬಾರಿ ರೈತ ದಂಗೆ :ಒಂದು ಚಾರಿತ್ರಿಕ ವಿಶ್ಲೇಷಣೆ"** ನಕ್ಸಲ್ ರೈತ ಹೋರಾಟ ಕುರಿತು ವಿವೇಚಿಸುತ್ತದೆ. ಇದೇ ಸಂಚಿಕೆಯಲ್ಲಿ **"ರೈತ ಚಳವಳಿ :ವಿಶ್ಲೇಷಣೆ ಮತ್ತು ದೃಷ್ಟಿಕೋನ"** ಎಂಬ ಲೇಖನದಲ್ಲಿ ಕಿಶನ್ ಪಟ್ನಾಯಕ್ ರೈತರ ಕುರಿತು ವಿಮರ್ಶಿಸಿದ್ದಾರೆ.

ಜಿ.ರಾಜಶೇಖರ ಅವರ **"ಶಿವಮೊಗ್ಗ ರೈತ ಚಳವಳಿಯ ತಾತ್ವಿಕ ನೆಲೆಗಳು"** ಲೇಖನದಲ್ಲಿ ರೈತ ಹೋರಾಟದ ಹುಟ್ಟು ಬೆಳವಣಿಗೆ ಹಾಗೂ ರೈತರ ಕುರಿತು ತಾತ್ವಿಕ ಚರ್ಚೆ ನಡೆಸಿದ್ದಾರೆ. ಇದೇ ಸಂಚಿಕೆಯ ಲೇಖನವೊಂದರಲ್ಲಿ **"ಭಾರತದ ಪ್ರಜಾಪ್ರಭುತ್ವ ಮತ್ತು ರೈತ ಹೋರಾಟ"** ಕುರಿತಂತೆ ಮುಜಾಫರ್ ಅಸ್ಸಾದಿಯವರು ಭಾರತದ ರೈತ ಹೋರಾಟವನ್ನು ಕುರಿತು ಚರ್ಚಿಸಿದ್ದಾರೆ.

ಡಿ.ಆರ್.ನಾಗರಾಜ್‌ರವರ **"ಆತಂಕಿತ ಹಿಂದೂ ಮತ್ತು ಕುಪಿತ ರೈತ"** ಲೇಖನವೂ ಕನ್ನಡ ಸಾಂಸ್ಕೃತಿಕಲೋಕವನ್ನು, ರೈತಲೋಕವನ್ನು ನವಚಿಂತನೆಗೆ ಹಚ್ಚುವಂತಹ ಲೇಖನವಾಗಿದೆ. ಮುಜಾಫರ್ ಅಸ್ಸಾದಿಯವರ **"ರೈತರ ಆತ್ಮಹತ್ಯೆ ಯಾಕೆ ನಡೆದವು?"** ಎಂಬ ಲೇಖನವು ರೈತರ ಆತ್ಮಹತ್ಯೆಯ ಕುರಿತು ವೈಜ್ಞಾನಿಕ ಮತ್ತು ವಿಶ್ಲೇಷಣಾತ್ಮಕ ಚರ್ಚೆ ನಡೆಸುತ್ತದೆ.

ರಹಮತ್ ತರೀಕೆರೆಯವರು **"ಗಣಪತಿಯಪ್ಪ"**ರವರನ್ನು ಸಂದರ್ಶನ ನಡೆಸಿ, ಪ್ರಸ್ತುತ ಹೋರಾಟದ ಸವಾಲುಗಳು, ನಾಯಕತ್ವ ಕುರಿತಂತೆ ಹಾಗೂ ಅಂದಿದ್ದ ರೈತ ಹೋರಾಟದ ಒತ್ತಡಗಳು, ಮುಂತಾದ ವಿಚಾರ ಕುರಿತಂತೆ ನಿರೂಪಿಸಿದ್ದಾರೆ. ನಟರಾಜ ಹುಳಿಯಾರ್‌ರವರ **"ರೈತ ಚಳವಳಿ:ನ್ಯಾಯಬದ್ಧ ಕನಸುಗಳು"** ಲೇಖನದಲ್ಲಿ ರೈತನ ಆಶಯಗಳು, ರೈತ ಸಂಘಟನೆಯ ಹಾದಿ, ರೈತ ಸಂಘಟನೆ ಎದುರಿಸುತ್ತಿರುವ ಪ್ರಸ್ತುತ ಸವಾಲುಗಳನ್ನು ವೈಚಾರಿಕವಾಗಿ ವಿಶ್ಲೇಷಿಸಲಾಗಿದೆ.

**"ಜಾಗತೀಕರಣ ಮತ್ತು ಭಾರತದ ರೈತ"** ಲೇಖನದಲ್ಲಿ ನಾಗಭೂಷಣ ಪಾಟೀಲ್ ಅವರು ಪ್ರಸ್ತುತ ಜಾಗತಿಕ ಸವಾಲಿನ ಬಿಕ್ಕಟ್ಟು,ರೈತನ ದುಃಸ್ಥಿತಿ, ಬೆಲೆಯುದ್ಧ ಮುಂತಾದ ವಾಸ್ತವಾಂಶಗಳನ್ನು ವಿವೇಚಿಸಿದ್ದಾರೆ.

ಮುಜಾಫರ್ ಅಸ್ಸಾದಿಯವರ **"Chikens"" Greens" and "Ragi Balls" : A Discourse on Kentuky Fried Chickens"**: ಕಾಂಟೆಂಪರರಿ ಸೋಷಿಯಲ್ ಮೂವ್‌ಮೆಂಟ್ಸ್ ಇನ್ ಇಂಡಿಯಾ

ಎಂಬ ನಿಯತಕಾಲಿಕೆಯಲ್ಲಿ ಪ್ರಕಟಗೊಂಡಿದೆ. ದಲಿತ್ಸ್ ಅಂಡ್ ಪೆಸೆಂಟ್ಸ್ :ದಿ ಎಮರ್ಜಿಂಗ್ ಕ್ಯಾಸ್ಟ್ -ಕ್ಲಾಸ್ ಡೈನಾಮಿಕ್ಸ್ ಕೃತಿಯಲ್ಲಿ ಬರೆದ **"Third Attack on Multinationals: Badukalu Bandavala`s re-enactmant of Gandhian Violence"** ಅಲ್ಲದೆ **"Tribals on Warpath: Confronting Eco-Terrorism"** ಲೇಖನವು EPW Oct-5,1996 ರಲ್ಲಿ ಪ್ರಕಟಗೊಂಡಿದೆ. **"Farmers' Suicides Signs of Distress in Rural Economy** ": EPW April 4,1998 ರಲ್ಲಿ ಪ್ರಕಟಗೊಂಡಿದೆ. **"The State and Tribal Rights Confrontation over Land Question"** : EPW August 15-22, 1998 ರಲ್ಲಿ ಪ್ರಕಟಗೊಂಡಿದೆ.**"Seed Tribunal : Intrerrogating Farmers' Suicides"**: EPW Oct-28,2000 ದಲ್ಲಿ ಪ್ರಕಟಗೊಂಡಿದೆ. **"Discourses" Problematizing the Peasant Movement of Karnataka andMaharashtra"**: Social Action Vol.44, July-september-1994ರಲ್ಲಿ ಪ್ರಕಟಗೊಂಡಿದೆ. **"Dunkelism and Peasant Protest in Karnataka; A View from within**:Teaching Politics" ಗೋವಾ ವಿಶ್ವವಿದ್ಯಾಲಯದಲ್ಲಿ ನೀಡಿದ ಉಪನ್ಯಾಸ ಮಾಲಿಕೆಯಲ್ಲಿ ಪ್ರಕಟಗೊಂಡಿದೆ. **"Peasnatry Versus the Indian State Shifting Meanings and Agendas"** The Indian Journal of Social Science, Vol.8,No.4(1995)ರಲ್ಲಿ ಪ್ರಕಟಗೊಂಡಿದೆ. **"Globalisation and The State: Interrogating the Farmers' Movement in India"**: Journal of Social and Economic Development Jan-June-2002 ರಲ್ಲಿ ಪ್ರಕಟಗೊಂಡಿದೆ. **"Globalisation, the State and the Farmers' Movement"**: Journal of Social and Economic Development Jan-June 2002 ರಲ್ಲಿ ಪ್ರಕಟಗೊಂಡಿದೆ.

**"ಕರ್ನಾಟಕ ರೈತ ಹೋರಾಟದ ಆಶೋತ್ತರಗಳು"** ಮಂಡ್ಯ ಜಿಲ್ಲೆಯ ರೈತ ಸಂಘದಿಂದ 1984ರಲ್ಲಿ ಪ್ರಕಟಿಸಲಾಗಿದೆ. ಕರ್ನಾಟಕದ ರೈತರಲ್ಲಿ ಜಾಗೃತಿ ಮೂಡಿಸುವ ಕೃತಿ ಇದಾಗಿದೆ. ಸಿ.ಯತಿರಾಜುರವರ ಆಧುನಿಕ ಭಾರತದ ಭೂ ಆಕ್ರಮಣ ಚಳುವಳಿಗಳು ಲೇಖನವು ಜಾಗತಿಕ ಸಂದರ್ಭದ ಭೂ ಪ್ರಶ್ನೆಕುರಿತಾದ ಕಾಳಜಿಯನ್ನು ವ್ಯಕ್ತಗೊಳಿದೆ. ಎನ್.ಎಂ.ದೊರೆಸ್ವಾಮಿಯವರು ಬರೆದ **"ಹೋರಾಟ ಹೋರಾಟ"** ಸಾಮಾಜಿಕ ನಾಟಕ ರೈತರನ್ನೇ ಕುರಿತು ಬರೆದ ಕೃತಿಯಾಗಿದ್ದು ಇದು 1985 ರಲ್ಲಿ ಪ್ರಕಟಗೊಂಡಿದೆ.**"ಜನಕಲಾಮಂಡಲಿ ಹಾಡುಗಳು"** ಎಂಬ ಕ್ರಾಂತಿಕಾರಿ ಗೀತೆಗಳ ಸಂಕಲನವನ್ನು ಪ್ರಕಟಿಸುವ ಮೂಲಕ ವಿಮುಕ್ತಿ ಪ್ರಕಾಶನ ಚಳುವಳಿಯನ್ನು ಪ್ರೇರೇಪಿಸಿತು. **"ಜನತಾ ಸರ್ಕಾರದಲ್ಲಿ ರೈತರ ಮೇಲೆ ಪೊಲೀಸ್ ದೌರ್ಜನ್ಯ"** ಚಿಕ್ಕಮಗಳೂರು ಮತ್ತು ತುಮಕೂರು ಜಿಲ್ಲೆಗಳಲ್ಲಿ ನಡೆದ ಘಟನೆಯ ವಿವರನ್ನು ಸಚಿತ್ರವಾಗಿ ವರದಿಮಾಡಿ ಪ್ರಕಟಿಸಿದೆ. **"ರೈತ ಚಳವಳಿ-2000ಮತ್ತೆ ಪರ್ಯಾಯ ಸರ್ಕಾರದೆಡೆಗೆ"** ರೈತ ಚಳವಳಿಯ ಆತ್ಮಾವಲೋಕನ1980-2000ದವರೆಗೆ ನಡೆದು ಬಂದ ದಾರಿಯನ್ನು ವಿವೇಚಿಸುತ್ತದೆ.

ರೈತರ ಮನವಿ ,ಪ್ರತಿಭಟನೆ, ಚಳುವಳಿ, ರೈತರ ನೋವು,ಅಧಿಕಾರಿಗಳ ಶೋಷಣೆ, ಕಷ್ಟನಷ್ಟ, ರೈತಮಹಿಳೆಯ ಶೋಷಣೆ,ಬೆಲೆ ಕುಸಿತ ಬೆಳೆ ನಷ್ಟ ಮುಂತಾದ ಅಂಶಗಳು ಜಾನಪದ ಶೈಲಿಯ ರೈತ ಗೀತೆಗಳಾಗಿ ಹೊರ ಹೊಮ್ಮಿವೆ. ಹಿ.ಶಿ.ರಾಮಚಂದ್ರೇಗೌಡ ಅವರ **"ಹೊಂಬಾಳೆ"** ಗೀತೆಗಳು ರೈತನನ್ನು ಬಡಿದೆಬ್ಬಿಸಿದ ಕ್ರಾಂತಿಗೀತೆಗಳಾಗಿವೆ. ಅಲ್ಲದೆ ಆಲ್ದಹಳ್ಳಿ ರಾಮೇಗೌಡ ಮತ್ತು ಅಬ್ಬಾಸ್ ಜಿ ಅಬ್ಬಲಗೆರೆಯವರ **"ಹಸಿರು ದನಿ" "ಹಾವುಗಳು" "ಗ್ರಾಮ ಸ್ವರಾಜ್ಯದೆಡೆಗೆ" "ಒಕ್ಕಲತಿ"** ಇತ್ಯಾದಿ ರೈತ ಕ್ರಾಂತಿಗೀತೆಗಳನ್ನು ರಚಿಸಿದ್ದಾರೆ. ಈ ಗೀತೆಗಳನ್ನು ಖ್ಯಾತ ಗಾಯಕರಾದ ಎಸ್ಪಿ.ಬಾಲಸುಬ್ರಮಣ್ಯಂ, ಮೈಲಾರಪ್ಪ, ಯುವರಾಜ್, ವಸಂತ ಬಿ, ಅನಂತ್, ಬಿ.ಆರ್.ಛಾಯ ಹಾಗೂ ಕೆಲವಕ್ಕೆ ಬಾಲಿಪ್ರಸಾದ್, ಯುವರಾಜ್ ಇವರುಗಳು ಸಂಗೀತ ಸಂಯೋಜನೆ ಮಾಡಿ,ಹಾಡಿ ಜನಪ್ರಿಯಗೊಳಿಸಿದ್ದಾರೆ. ಕರ್ನಾಟಕ ರಾಜ್ಯ ರೈತ ಸಂಘ ಇದನ್ನು ಕ್ಯಾಸೆಟ್ ರೂಪದಲ್ಲಿ ಬಿಡುಗಡೆ ಮಾಡಿ ನಾಡಿದಾದ್ಯಂತ ಬಿತ್ತರಿಸಿದೆ.

ಈ ಕುರಿತು ನಿಯತಕಾಲಿಕೆ ಹಾಗೂ ದಿನಪತ್ರಿಕೆಗಳಲ್ಲಿ, ಮಣ್ಣಿನ ವಾಸನೆ (ದಿನಪತ್ರಿಕೆ) ಅಜೇಯ ವಾಹಿನಿ (ವಾರಪತ್ರಿಕೆ),ನಮ್ಮ ನಾಡು (ದಿನಪತ್ರಿಕೆ), ಪ್ರಜಾವಾಣಿ (ದಿನಪತ್ರಿಕೆ), ಕನ್ನಡಪ್ರಭ (ದಿನಪತ್ರಿಕೆ), ಉದಯವಾಣಿ (ದಿನಪತ್ರಿಕೆ), ವಿಜಯಕರ್ನಾಟಕ(ದಿನಪತ್ರಿಕೆ), ಸಂಯುಕ್ತಕರ್ನಾಟಕ (ದಿನಪತ್ರಿಕೆ), ಡೆಕ್ಕನ್

ಹೆರಾಲ್ಡ್(ದಿನಪತ್ರಿಕೆ),ರುಜುವಾತು (ಮಾಸಪತ್ರಿಕೆ),ಅರಿವು ಬರಹ (ಮಾಸಪತ್ರಿಕೆ), ಮೊದಲಾದ ಪತ್ರಿಕೆಗಳು ರೈತ ಮತ್ತು ಭೂಹೋರಾಟ ಕುರಿತು ಆಯಾಕಾಲಕ್ಕೆ ಸ್ಪಂದಿಸುತ್ತಾ ಬಂದಿವೆ.

ರೈತ ಪ್ರಶ್ನೆ ಮತ್ತು ಭೂಪ್ರಶ್ನೆಯ ಕುರಿತು ಈ ಕೃತಿಗಳು ಒಂದೊಂದು ನೆಲೆಯ ಉದ್ದೇಶಿತ ಗುರಿಯನ್ನು ಮುಟ್ಟಲು ಯತ್ನಿಸಿವೆ.ಆ ಉದ್ದೇಶವನ್ನಿಟ್ಟುಕೊಂಡು ಅಧ್ಯಯನ ನಡೆಸಿರುವುದರಿಂದಾಗಿ ಇವುಗಳಲ್ಲಿ ಸಮಗ್ರತೆ ಸಾಧಿಸುವುದು ಕಷ್ಟವೇ ಸರಿ. ಈ ಎಲ್ಲಾ ಕೃತಿಗಳು ಮತ್ತು ಲೇಖನಗಳನ್ನು ಗಮನಿಸಿಯೂ ಕೂಡಾ,ಈ ಎಲ್ಲವುಗಳಿಗಿಂತ ನನ್ನ ಅಧ್ಯಯನವು ಭಿನ್ನವಾಗಿದೆ.ಕನ್ನಡ ಸಾಹಿತ್ಯದ ಭಾಗವಾದ ಕತೆ ಮತ್ತು ಕಾದಂಬರಿಗಳ ಮೂಲಕ ಭೂಪ್ರಶ್ನೆ,ರೈತ ಪ್ರಶ್ನೆಗಳ ಕುರಿತು ಅಧ್ಯಯನ ನಡೆಸುತ್ತಿರುವುದು ಇಲ್ಲಿನ ವಿಶೇಷತೆಯಾಗಿದೆ. ಅಲ್ಲದೆ ಈ ಪ್ರಶ್ನೆಗಳನ್ನು ವಾದಗಳ,ಚಿಂತನೆಗಳ,ಕಾನೂನು ಮೊದಲಾದ ಸೈದ್ಧಾಂತಿಕ ಚೌಕಟ್ಟಿನ ಮೂಲಕ ಶೋಧಿಸಲು ಪ್ರಯತ್ನಿಸಲಾಗಿದೆ.ಸಾಹಿತ್ಯ ಮತ್ತು ಸಿದ್ಧಾಂತಗಳ ಮೂಲಕ ಇಂತಹ ಪ್ರಶ್ನೆಗಳಿಗೆ ಪರಿಹಾರ,ಪರ್ಯಾಯ ನೆಲೆ ಮತ್ತು ಜೀವಪರ ಮೌಲ್ಯಗಳ ಹುಡುಕಾಟದ ಭಾಗವಾಗಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಭೂಪ್ರಶ್ನೆಯನ್ನು ಸಮಕಾಲೀನ ಸಂದರ್ಭವನ್ನು ಗಮನದಲ್ಲಿಟ್ಟುಕೊಂಡು ವಿಮರ್ಶಿಸಲಾಗುವುದು. ಭೂಪ್ರಶ್ನೆ ಮತ್ತು ರೈತಪ್ರಶ್ನೆಯ ಆಶಯವನ್ನಿಟ್ಟುಕೊಂಡು ಒಟ್ಟಾರೆ ಸೈದ್ಧಾಂತಿಕ ಆಲೋಚನಾ ಕ್ರಮದ ಮೂಲಕ,ಸಾಹಿತ್ಯದ ಮೂಲಕ, ಬಹುಶಿಸ್ತೀಯ ನೆಲೆಯಲ್ಲಿ ಅಭ್ಯಸಿಸಲಾಗುವುದು. ಇಂತಹ ಆಶಯಗಳ ಮೂಲಕ ಇಡೀ ಕರ್ನಾಟಕದ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಟ್ಟ ಬಗೆ, ರೈತ ಮತ್ತು ಭೂ ಪ್ರಶ್ನೆಗೆ ಕಂಡುಕೊಳ್ಳುವ ಪರಿಹಾರ ಕುರಿತು ವಿವೇಚಿಸಲಾಗುವುದು.

ಯಾವುದೇ ಸೃಜನಶೀಲ ಕೃತಿ ಕಟ್ಟಿಕೊಡುವ ಜಗತ್ತು ಅತ್ಯಂತ ಸಂಕೀರ್ಣವಾದುದಾಗಿರುತ್ತದೆ.ನಾವು ನಮ್ಮ ಅಧ್ಯಯನ ವಸ್ತುವಾಗಿ ಅಧ್ಯಯನ ಮಾಡುವ ವಿಷಯಗಳಿಗಷ್ಟೇ ಆ ಕೃತಿಯ ಅರ್ಥ ಸೀಮಿತವಲ್ಲ. ಅದು ಹೊಂದಿರುವ ಅರ್ಥಪರಂಪರೆ ಅದನ್ನು ಮೀರಿರುತ್ತದೆ. ಅಂದರೆ ಕೃತಿಗೆ ತನ್ನದೇ ಆದ ಒಂದು ಸ್ವತಂತ್ರ ಅಸ್ತಿತ್ವವಿರುತ್ತದೆ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡೇ ಕೃತಿಯ ಸಾರ್ವಭೌಮತ್ವಕ್ಕೆ ಚ್ಯುತಿ ಬರದಂತೆ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಎಲ್ಲಾ ಆಶಯಗಳಿಂದಾಗಿ ನನ್ನ ಅಧ್ಯಯನವು ಈವರೆಗೆ ನಡೆದ ಅಧ್ಯಯನಗಳಿಗಿಂತ ಭಿನ್ನ ಅಧ್ಯಯನವಾಗಿದೆ.

# ಅಧ್ಯಾಯ : ಎರಡು

## ಆಧುನಿಕ ಕನ್ನಡ ಕಥಾನಕದಲ್ಲಿ ಭೂ ಹೋರಾಟ : ಸ್ವರೂಪ ವಿಶ್ಲೇಷಣೆ ಮತ್ತು ಸೈದ್ಧಾಂತಿಕ ಚರ್ಚೆ

೨.೧ ಆಧುನಿಕತೆಯ ಚರ್ಚೆ

೨.೨ ಕನ್ನಡ ಕಥಾನಕದ ಸ್ವರೂಪ

೨.೩ ಭೂ ಹೋರಾಟದ ನಿರ್ವಚನ

- ೨.೩.೧ ಹೋರಾಟ
- ೨.೩.೨ ಭೂ ಹೋರಾಟ
- ೨.೩.೩ ಭೂ ಹೋರಾಟದ ಮಾದರಿಗಳು
- ೨.೩.೪ ಭೂ ಒಡೆತನದ ಸ್ವರೂಪಗಳು
- ೨.೩.೫ ರೈತ ಹೋರಾಟದ ಸ್ವರೂಪಗಳು
- ೨.೩.೬ ಗೇಣಿದಾರಿಕೆಯ ಸ್ವರೂಪಗಳು
- ೨.೩.೭ ರೈತ ಮಹಿಳಾ ಸ್ವರೂಪಗಳು
- ೨.೩.೭ ಜೀತಗಾರಿಕೆ ಮತ್ತು ಮನುಷ್ಯ ಮಾರಾಟದ ಆಶಯಗಳು
- ೨.೩.೮ ಪ್ರಾದೇಶಿಕ ನೆಲೆಯಲ್ಲಿ ಭೂ ಪ್ರಶ್ನೆ

೨.೪ ಕನ್ನಡ ಸಾಹಿತ್ಯ ಅಧ್ಯಯನದಲ್ಲಿ ಪ್ರತಿನಿಧೀಕರಣದ ಚರ್ಚೆ

ಭೂಮಿ ಮನುಷ್ಯನ ಪೊರೆಯುವ ತತ್ವವಾಗಿದೆ. ಭೂಮಿ ಬರೀ ರೈತರ ನಡುವಿನ ಸಂಬಂಧವನ್ನು ಮುಖ್ಯವಾಗಿ ಹೇಳುವುದಿಲ್ಲ. ಅದು ಪ್ರತಿಯೊಂದು ಜೀವಿಯ ಅವಿನಾಭಾವ ಸಂಬಂಧವನ್ನು ಒಳಗೊಂಡಿರುವುದರಿಂದ ಬಹುವ್ಯಾಪಕತೆಯನ್ನು ಪಡೆದುಕೊಂಡಿದೆ. ಇಡೀ ಜೀವ ಕೋಟಿಗಳು ಭೂಮಿಯನ್ನೇ ಅವಲಂಬಿಸಿವೆ. ಆದ್ದರಿಂದಾಗಿ ಭೂಮಿಗೆ ಪೊರೆಯುವ ಶಕ್ತಿ, ರಕ್ಷಿಸುವ ನೆಲೆಯನ್ನು ಕಾಣಬಹುದಾಗಿದೆ. ಡಾರ್ವಿನ್‌ನ ಸಿದ್ಧಾಂತದಂತೆ ಭೂಮಿಯ ಮೇಲೆ ಪ್ರತಿಯೊಂದು ಜೀವಿಯು ತನ್ನ ಅಸ್ತಿತ್ವಕ್ಕಾಗಿ ಹೋರಾಟ ನಡೆಸುತ್ತದೆ. ಜಗತ್ತಿನ ಎಲ್ಲಾ ಜೀವಿಗಳು ಭೂಮಿಯ ಮೇಲೆ ಜೀವಿಸುವ ಹಕ್ಕಿದೆ. ಈ ಜೀವಿಗಳು ಭೂಮಿಯ ಜೊತೆಗೆ ಸಂಬಂಧಿತವಾಗಿರುವ ಪ್ರತಿಯೊಂದು ಸವಲತ್ತುಗಳನ್ನು ಪಡೆಯಲು ಸಂಘರ್ಷಕ್ಕೆ ಒಡ್ಡಿಕೊಳ್ಳುತ್ತವೆ. ಆದರೆ ಈ ಅಧ್ಯಯನ ಇಂಥ ವ್ಯಾಪಕ ನೆಲೆಯ ಅಧ್ಯಯನ ಮಾಡುತ್ತಿಲ್ಲ.

ಭೂಮಿ ಬಗೆಗಿನ ಕಲ್ಪನೆಗಳು ವೇದಗಳ ಕಾಲದಲ್ಲಿಯೇ ಭೂಮಿಯನ್ನು ದೇವತೆಯಾಗಿ ಪರಿಭಾವಿಸಿ ಆರಾಧಿಸಿರುವುದನ್ನು ಕಾಣುತ್ತೇವೆ. ಜನಪದದಲ್ಲೂ ಕೂಡಾ ಭೂಮಿಯನ್ನು ತಾಯಿಯ ರೂಪದಲ್ಲಿ ಕಂಡಿರುವುದನ್ನು ಗುರುತಿಸಬಹುದು."ಬೆಳಗಾಗನಾನೆದ್ದು ಯಾರ್ಯಾರ ನೆನೆಯಲಿ ಎಳ್ಳು ಜೀರಿಗೆ ಬೆಳೆಯೋಳ ತಾಯ ಎದ್ದೊಂದು ಗಳಿಗೆ ನೆನೆದೇನ" ಎಂಬ ಈ ಅಂಶಗಳು ಭೂಮಿಯನ್ನು ತಾಯಿ ಸ್ವರೂಪದಲ್ಲಿ ಕಾಣಲು ಯತ್ನಿಸಿದೆ. ಭೂಮಿ ಕುರಿತ ತಾತ್ವಿಕ ಚಿಂತನೆ ನಡೆಸಿರುವ ಡಿ.ಆರ್.ನಾಗರಾಜ್‌ರವರು ಹೇಳುವಂತೆ "ಭೂಮಿಯ ಬಗೆಗಿನ ಮೊದಲ ಭಾರತೀಯ ಚಿಂತನೆಯನ್ನು ಮೇಲು ನೋಟಕ್ಕೆ ಅರ್ಥೈಸುವುದಾದರೆ ಅದು ಸಮೃದ್ಧತೆಗೆ, ಸೃಷ್ಟಿಗೆ ಸಂಕೇತ, ಆಕೆ ಪ್ರೀತಿಯಿಂದ, ವಾತ್ಸಲ್ಯದಿಂದ ಇಡೀ ಲೋಕವನ್ನು ಪೋಷಿಸುತ್ತಾಳೆ. ಈಕೆ ಜಗತ್ತಿಗೆ ತಾಯಿಯಾದ್ದರಿಂದ ಈ ಭೂಮಿಯ ಸಕಲ ಜೀವಿಗಳ ರಕ್ಷಣೆ ಆಕೆಯ ಮೇಲಿದೆ. ಕ್ಷಮೆ, ಸಹನೆ ಎಂಬೆರಡು ಮಹತ್ವದ ಮಾನವೀಯ ಗುಣಗಳನ್ನು ಆಕೆಯ ಹೆಸರಿಗೇ ಸೇರಿಸಲಾಗಿದೆ. ಸಸ್ಯ ಹಾಗೂ ಪ್ರಾಣಿಗಳ ಜೀವನ ಧಾರಣಕ್ಕೆ ಆಕೆಯೇ ಹೊಣೆ. ಒಟ್ಟಾರೆಯಾಗಿ, ಈ ಜಗತ್ತಿನ ಎಲ್ಲ ಸಮೃದ್ಧತೆಗೆ ಆಕೆಯೇ ಹೊಣೆ ಎಂಬಂತೆ ಮೇಲ್ನೋಟಕ್ಕೆ ತೋರುತ್ತದೆ. "ರಕ್ಷಕ" ತತ್ವದ ಸಂಕೇತ ಆಕೆ. ಇದು ಒಂದು ದಿಕ್ಕಿನ ನೋಟ. ಆಕೆಯನ್ನು ಕರುಣಾಮಯಿ ಭೂಮಿತಾಯಿ ಎಂದು ಕರೆಯುವುದೇ ವಾಡಿಕೆ. ಮಾನವನ ಮಾನಸಿಕ ರಚನೆಗಳಲ್ಲಿ ಭೂಮಿ ಪ್ರೀತಿಯ ಪ್ರತೀಕ, ಕೃತಜ್ಞತೆಯ, ವಾತ್ಸಲ್ಯದ ತರಂಗಗಳೆನ್ನೆಬ್ಬಿಸುವುದು ಇದೇ ಕಾರಣಕ್ಕಾಗಿಯೇ ತನ್ನ ಅತ್ಯಂತ ಸಂಕಟದ ಗಳಿಗೆಗಳಲ್ಲಿ, ಚಾರಿತ್ರಿಕ ಹಿಂಸೆಯಿಂದ ಭೀತನಾದ ಕ್ಷಣಗಳಲ್ಲಿ ಮನುಷ್ಯ ಭೂಮಿಯನ್ನು ನೆನೆಯುತ್ತಾನೆ. ಏಕೆಂದರೆ ಒಂದು ದೃಷ್ಟಿಕೋನದ ಪ್ರಕಾರ ಮನುಷ್ಯನಿಗೆ ಸೃಜನಶೀಲ ಶಕ್ತಿಯನ್ನು ನೀಡುವ ಎಲ್ಲ ಮೂಲಭೂತ ಸಂಗತಿಗಳು ಭೂಮಿತತ್ವ ಪ್ರತೀಕದಲ್ಲಿ ಅಡಕವಾಗಿದೆ."[2] ಈ ಭೂಮಿ ತತ್ವದ ಮೂಲಕ ಮನುಷ್ಯ ಸಮಾಜ ತನ್ನ ನೆಲೆಯನ್ನು ಕಂಡುಕೊಂಡಿರುವುದನ್ನು ಗಮನಿಸಬಹುದಾಗಿದೆ. ಭೂಮಿ ಮತ್ತು ಜೀವ ವೈವಿಧ್ಯತೆಯ ಸಂಬಂಧಗಳು ಪ್ರಕೃತಿಯೊಳಗೆ ಬೆರೆತು ಅವುಗಳು ಸಹ ಪ್ರಕೃತಿಯ ಒಂದು ಭಾಗವಾಗಿವೆ. ಹೀಗೆ ಭೂಮಿಯೊಂದಿಗೆ ಭೂ ವ್ಯವಸಾಯ ಸಂಬಂಧಗಳು ಮನುಷ್ಯನ ಅಸ್ತಿತ್ವವನ್ನು ಹಾಗೂ ಬದುಕನ್ನು ರೂಪಿಸಿವೆ.

ಭೂಮಿ ಪ್ರಶ್ನೆ ಇಂದು ನಿನ್ನೆಯದಲ್ಲ,ಅದು ಅಸ್ತಿತ್ವಕ್ಕೆ ಬಂದಾಗಿನಿಂದಲೂ ಇದೆ. ಈ ಕಾರಣಗಳಿಂದಾಗಿ ಭೂಮಿ ಮತ್ತು ಮನುಷ್ಯನ ನಡುವಿನ ಅಂತರ್‌ಸಂಬಂಧಗಳ ಪ್ರಶ್ನೆಗಳು ನಿರಂತರವಾಗಿವೆ. ರಾಮಾಯಣ, ಮಹಾಭಾರತ ಮಹಾಕಾವ್ಯಗಳಲ್ಲೂ, ಚಾರಿತ್ರಿಕವಾಗಿ ಘಟನೆಗಳಲ್ಲೂ ಹಾಗೂ ವಾಸ್ತವದಲ್ಲೂ ನಡೆದಿವೆ. ಪುರಾಣ, ಜನಪದ, ಕತೆ, ಕಾದಂಬರಿ, ನಾಟಕ, ಕಾವ್ಯ ಇತರೆ ಪ್ರಕಾರಗಳಲ್ಲಿ ಇಂತಹ ಸಂಘರ್ಷಗಳ ನೆಲೆಯನ್ನು ಗುರುತಿಸಬಹುದಾಗಿದೆ. ಈ ಎಲ್ಲಾ ಹಿನ್ನೆಲೆಯಲ್ಲಿ ಆಧುನಿಕ ಕನ್ನಡ ಕಥಾನಕದಲ್ಲಿ ಭೂ ಹೋರಾಟದ ಸೈದ್ಧಾಂತಿಕ ಚರ್ಚೆಯನ್ನು ಈ ವಿಭಾಗದಲ್ಲಿ ಅಧ್ಯಯನ ಮಾಡಲಾಗುವುದು. ಈ ಅಧ್ಯಾಯದಲ್ಲಿ ಶೀರ್ಷಿಕೆಯ ಪರಿಕಲ್ಪನೆಯನ್ನು ಬಳಸಿಕೊಂಡಿರುವ ಬಗೆಯನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ.

ಮನುಷ್ಯ ಭೂಮಿಯೊಂದಿಗೆ ವ್ಯವಸಾಯ ಸಂಬಂಧವನ್ನು ಹೊಂದಿದ ದಿನದಿಂದಲೇ ಭೂ ಸಮಸ್ಯೆ ಶುರುವಾಯಿತು. ಆರಂಭದಲ್ಲಿ ಗುಡ್ಡಗಾಡುಗಳಲ್ಲಿ ವಾಸಿಸುತ್ತಿದ್ದ ಮನುಷ್ಯ ವ್ಯವಸಾಯದ ಮೂಲಕ ಆಹಾರೋತ್ಪನ್ನಗಳನ್ನು ಶೋಧಿಸತೊಡಗಿದನು. ಇಂತಹ ಅಲೆಮಾರಿ ಜೀವನ ಸಾಗಿಸುತ್ತಿದ್ದ ಮನುಷ್ಯ ಒಂದೆಡೆ

ನೆಲೆನಿಂತು ಬೇಸಾಯ ಮಾಡತೊಡಗಿದ. ತನಗೆ ಬೇಕಾದ ಆಹಾರೋತ್ಪನ್ನಗಳನ್ನು ಬೇಸಾಯದ ಮೂಲಕ ತಾನೇ ಉತ್ಪಾದನೆ ಮಾಡಿಕೊಳ್ಳಲಾರಂಭಿಸಿದ. ಆರಂಭದಲ್ಲಾದ ಆಹಾರ ಶೋಧನೆಯಿಂದಾಗಿ ಭೂಸಂಬಂಧಗಳು ಮನುಷ್ಯನಲ್ಲಿ ಮತ್ತಷ್ಟು ಗಟ್ಟಿಗೊಳ್ಳತೊಡಗಿದವು.

ಆಹಾರ ಉತ್ಪಾದನೆಗಾಗಿ ಒಟ್ಟಿಗೆ ಸೇರಿ ಬೇಸಾಯ ಮಾಡುವ ಮೂಲಕ ಮಾನವ ಸಹಕಾರಿ ಬೇಸಾಯ ಪದ್ಧತಿಯ ಜೊತೆಗೆ, ಹೆಚ್ಚು ಆಹಾರ ಉತ್ಪಾದನೆಯನ್ನು ಮಾಡತೊಡಗಿದನು. ಹೆಚ್ಚು ಬೆಳೆಯುತ್ತಿದ್ದ ಆಹಾರ ಉತ್ಪನ್ನವನ್ನು ವಿನಿಮಯ ಮಾಡಿಕೊಳ್ಳುವ ಮೂಲಕ ಸಹಕಾರ ತತ್ವವನ್ನು ಅನುಸರಿಸತೊಡಗಿದನು. ಕ್ರಮೇಣ ಆಹಾರೋತ್ಪನ್ನಗಳನ್ನು ವಿನಿಮಯ ಮಾಡಿಕೊಳ್ಳುವ ಬದಲು ಹಣದ ಮೂಲಕ ಅವುಗಳ ಬೆಲೆ ಕಟ್ಟತೊಡಗಿದ. ಅಂದಿನಿಂದಲೇ ಸಾಮಾಜಿಕ ಸಂರಚನೆಯೊಳಗೆ ವ್ಯವಸಾಯ ಸಂಬಂಧಗಳು ಆರ್ಥಿಕ ಸ್ವರೂಪ ಪಡೆದುಕೊಂಡವು. ವ್ಯವಸಾಯೋತ್ಪನ್ನಗಳು ವಾಣಿಜ್ಯೀಕರಣಗೊಳ್ಳತೊಡಗಿದ ಕಾಲದಲ್ಲಿಯೇ ಭೂಮಿಗಾಗಿ ಖಾಸಗಿ ಹಕ್ಕುಗಳು ಹುಟ್ಟಿಕೊಂಡವು. ಆಗ ತಾನು ದುಡಿಯುತ್ತಿದ್ದ ಭೂಮಿಯ ಕುರಿತು ನನ್ನದು, ತನ್ನದು, ಎಂಬ ಮನುಷ್ಯಸಹಜವಾದ ಸ್ವಾರ್ಥಪರ ಸ್ವಭಾವಗಳು ಹುಟ್ಟಿಕೊಂಡವು.

ಈ ಭೂಮಿಯ ಆಕಾಂಕ್ಷೆಯ ಜೊತೆಗೆ ಸ್ವಾರ್ಥಪರತೆಯ ಪರಿಣಾಮವಾಗಿ ಹೆಚ್ಚುಹೆಚ್ಚು ಭೂಮಿಯನ್ನು ಪಡೆಯುವುದು ವ್ಯಕ್ತಿಯ ಪ್ರತಿಷ್ಠೆಯ ಪ್ರಶ್ನೆಯಾಯಿತು. ಇದೇ ಕಾಲಕ್ಕೆ ಮಾನವ ನಾಗರಿಕನಾದಂತೆಲ್ಲಾ ಹೊಸ ಹೊಸ ಆವಿಷ್ಕಾರಗಳಿಗೆ ತೊಡಗಿಕೊಂಡು ಹೊಸ ಯಂತ್ರಗಳನ್ನು ಬಳಸಿ ಹೆಚ್ಚು ಬೆಳೆಯನ್ನು ಬೆಳೆಯತೊಡಗಿದ. ಉತ್ಪಾದಿತವಾದ ಬೆಳೆಯನ್ನು ತಾನೇ ಖಾಸಗಿಯಾಗಿ ಹಾಗೂ ವಾಣಿಜ್ಯ ರೂಪದಲ್ಲಿ ಮಾರಾಟಮಾಡಲು ಮಾರುಕಟ್ಟೆಯನ್ನು ಸೃಷ್ಟಿಸಿಕೊಂಡನು. ಇದರ ಪರಿಣಾಮವಾಗಿ ಸಹಕಾರಿ ಬೇಸಾಯ ಪದ್ಧತಿ ನಶಿಸಿ,ಖಾಸಗಿ ನೆಲೆಯ ಹಾಗೂ ಮಾರುಕಟ್ಟೆ ನೆಲೆಯ ಬೇಸಾಯಪದ್ಧತಿ ಅಸ್ತಿತ್ವಕ್ಕೆ ಬಂದಿತು.

ಇಂಥ ಬೆಳವಣಿಗೆಯ ಮೂಲಕ ಮನುಷ್ಯ ಭೂಮಿಯನ್ನು ತನ್ನ ಆಸ್ಮಿತೆ (Identity)ಯ ಪ್ರಶ್ನೆಯಾಗಿ ಕಂಡುಕೊಂಡನು. ಈ ಭೂಮಿ ಮತ್ತು ರೈತ ಪರಸ್ಪರ ಅಂತರ್‌ಸಂಬಂಧ ಹೊಂದುವುದಕ್ಕೆ ಭೂಮಿ ನಂಬಿಕೆಯ,ವಿಶ್ವಾಸದ ಪ್ರತೀಕವಾಯಿತು. ಹೀಗಾಗಿ ಭೂಮಿ ಇಂದಿಗೂ ಗ್ರಾಮೀಣ ಜನತೆಯ ಭೂವ್ಯವಸಾಯ ಸಂಬಂಧದ ಕೇಂದ್ರ ನೆಲೆಯಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಬಹುತೇಕ ರೈತರು ತಮ್ಮ ಸ್ಥಾನಮಾನದ ಪ್ರಶ್ನೆಯಾಗಿ ಭೂಮಿಯನ್ನು ಪರಿಗಣಿಸಿದ್ದಾರೆ. ಈ ಭೂಮಿ ಸ್ಥಾನಮಾನದ ಪ್ರಶ್ನೆಯಾಗಿ ಬದಲಾದ ಸಂದರ್ಭದಲ್ಲಿಯೇ ಜನರು ಹೆಚ್ಚಾಗಿ ಭೂ ಒಡೆತನ ಹೊಂದುವುದರಿಂದ ಗ್ರಾಮದಲ್ಲಿ ಪ್ರತಿಷ್ಠೆ ಹೆಚ್ಚಾಗುವುದನ್ನು ಗುರುತಿಸಿಕೊಳ್ಳತೊಡಗಿದರು. ಈ ಹಂತದಿಂದಲೇ ಭೂಹೋರಾಟದ ಬೀಜ ಅಂಕುರವಾಗಲು ಕಾರಣವಾಯಿತು. ಭೂಮಿಯ ಮೇಲೆ ತನ್ನ ಹಕ್ಕುಸ್ಥಾಪನೆಗಾಗಿ ಮೋಸ, ವಂಚನೆ ಮೊದಲಾದ ರೂಪಗಳಲ್ಲಿ ಕಾಣತೊಡಗಿದವು. ಸಮಾಜದಲ್ಲಿ ಹೆಚ್ಚು ಭೂಮಿಯನ್ನು ಹೊಂದಿದವನಿಗೆ ಸಾಮಾಜಿಕ ಬದುಕಿನ ಹಿಡಿತ,ರಾಜಕೀಯ ಹಿಡಿತ ಸಾಧಿಸುವುದಕ್ಕೆ ಭೂಮಿ ಆಧಾರವಾಯಿತು. ಇದನ್ನು ಗ್ರಹಿಸಿದ ಮನುಷ್ಯ ತನ್ನ ಸ್ವಾರ್ಥ ಸಹಜ ಸ್ವಭಾವದಿಂದ ಭೂಮಿಯನ್ನು ಹೊಂದುವುದರಿಂದ ತನ್ನ ಪ್ರತಿಷ್ಠೆ, ಸಾಮಾಜಿಕ ಸ್ಥಾನಮಾನ ನಿರ್ಧರಿಸಲ್ಪಡುತ್ತದೆ ಎಂಬ ಅಂಶವನ್ನು ಕಂಡುಕೊಂಡನು. ಇದರಿಂದ ಭೂಮಾಲೀಕ, ಜೀತದಾಳು, ರೈತ, ಗೇಣಿರೈತ, ಒಡೆಯ, ಆಳು, ಜಮೀನ್ದಾರ, ಪಾಳೇಗಾರ ಮುಂತಾದ ವಿವಿಧ ಸಾಮಾಜಿಕವರ್ಗಗಳು ಅಸ್ತಿತ್ವಕ್ಕೆ ಬಂದವು. ಖಾಸಗಿ ಆಸ್ತಿ ಹೊಂದುವುದು ತಮ್ಮ ಪ್ರತಿಷ್ಠೆಯಪ್ರಶ್ನೆ, ಭೂ ಒಡೆತನದಪ್ರಶ್ನೆ, ಅಸ್ತಿತ್ವದ ಪ್ರಶ್ನೆ, ಮಾಲೀಕತ್ವದ ಪ್ರಶ್ನೆ, ಹಕ್ಕಿನ ಪ್ರಶ್ನೆಗಳಾಗಿ ಪರಿಣಮಿಸಿದವು.

### ೨.೧ ಆಧುನಿಕತೆಯ ಚರ್ಚೆ

ಭೂ ಪ್ರಶ್ನೆಯನ್ನು ಅಭ್ಯಸಿಸುವ ಮುನ್ನ, ಆಧುನಿಕತೆಯ ಪರಿಕಲ್ಪನೆಯನ್ನು ವಿಶ್ಲೇಷಿಸಲಾಗುವುದು. ಆಧುನಿಕತೆಯಿಂದಾದ ಸಾಮಾಜಿಕ ಬದಲಾವಣೆ ಮತ್ತು ರೈತ ಸಮುದಾಯದಲ್ಲಾದ ಬದಲಾವಣೆಗಳ ಚಲನೆಯನ್ನು ಗುರುತಿಸಲು ಈ ಅಧ್ಯಯನ ಯತ್ನಿಸಿದೆ.

ಆಧುನಿಕತೆ ಶಬ್ದದ ಮೂಲ 'ಮಾಡರ್ನಸ್' ಎಂಬ ಲ್ಯಾಟಿನ್ ಶಬ್ದದಿಂದ ಬಂದಿದ್ದು, ಇದನ್ನು ಆಂಗ್ಲ ಭಾಷೆಯಲ್ಲಿ ಮಾಡರ್ನ್ ಎಂದು ಕರೆಯಲಾಗಿದೆ.ಮಾಡರ್ನ್ ಎಂಬ ಪದಕ್ಕೆ ಆಧುನಿಕತೆ, ಹೊಸತು ಎಂಬ

ಅರ್ಥವಿದೆ. ಕೈಗಾರಿಕಾ ಕ್ರಾಂತಿಯಿಂದ ಪಾಶ್ಚಾತ್ಯ ಸಾಮಾಜಿಕ, ನಾಗರಿಕ ಬದುಕಿನಲ್ಲಿ ಉಂಟಾದ ಬದಲಾವಣೆಗಳು, ಮೂಡಿಬಂದ ಚಿಂತನೆಗಳು ಹಾಗೂ ಬದಲಾದ ಜೀವನ ಕ್ರಮಗಳನ್ನು ಸಾಮಾನ್ಯವಾಗಿ ಆಧುನಿಕತೆ ಎಂದು ಕರೆಯಲಾಗುತ್ತದೆ.

ಆಧುನಿಕತೆ ಕುರಿತು ನಟರಾಜ್ ಹುಳಿಯಾರ್ ಹೇಳುವಂತೆ "ಆಧುನಿಕತೆ ಒಂದು ಬಹುದೊಡ್ಡ ಆಳುವ ಭಾಷೆಯಾಗಿ, ಸಂಕಥನವಾಗಿ, ವ್ಯವಸ್ಥೆಯಾಗಿ, ಧೋರಣೆಯಾಗಿ, ನಿರ್ದೇಶಿಸುವ ಹಾಗೂ ನಿಯಂತ್ರಿಸುವ ಸಾಧನವಾಗಿ ಮಾನವನ ಪ್ರಜ್ಞೆ ಹಾಗೂ ಸಂವೇದನೆಗಳನ್ನು ನಿರ್ಣಾಯಕವಾಗಿ ಬದಲಿಸುವ ನೋಟಕ್ರಮವಾಗಿ ಪುನರುಜ್ಜೀವನದಿಂದೀಚೆಗೆ ಬೆಳೆದುಬಂದಿತು ಹಾಗೂ ಇಪ್ಪತ್ತನೇ ಶತಮಾನದ ಮುಖವನ್ನೇ ಬದಲಿಸಿತು."[೨]

ಆಧುನಿಕತೆ ಎಂಬುದು ಹೊಸತನ್ನು ಕಂಡುಹಿಡಿಯುವ ವಿಜ್ಞಾನದ ಸಂದರ್ಭದಲ್ಲಿ ಇದು ಬೇರೆ ಬೇರೆಯಾದ ವ್ಯಾಖ್ಯಾನಗಳಿಗೆ ಒಳಗಾಗಿದೆ. ಆದರೆ ಸಾಹಿತ್ಯ ಸಂದರ್ಭದಲ್ಲಿ ಸಂಸ್ಕೃತಿ ನೆಲೆಯ ಮೂಲಕ ಆಧುನಿಕತೆಯನ್ನು ಚಿಂತಿಸುವುದನ್ನು ಕಾಣಬಹುದು. ಆಧುನಿಕತೆಯನ್ನು ವಿಜ್ಞಾನ ತಂತ್ರಜ್ಞಾನ ರೂಪಿಸಿರುವುದಲ್ಲದೆ, ವಸಾಹತುಶಾಹಿನೆಲೆಯ ಮೂಲಕ ಸಂಪ್ರದಾಯವನ್ನು ತೊರೆಯುವ ಮತ್ತು ಶಿಕ್ಷಣದ ಮೂಲಕ ಅರಿವು ಮೂಡಿಸುವ ಪ್ರಕ್ರಿಯೆಯಾಗಿ ಬಂದಿದೆ. ಸಾಂಪ್ರದಾಯಿಕ ಭಾರತೀಯರು, ದೇವರು ಧರ್ಮ, ಆಧ್ಯಾತ್ಮದಲ್ಲಿ ನಾವು ಶ್ರೇಷ್ಠರು ಎಂದು ವಾದಿಸಿದರೆ, ವಿಚಾರವಂತಿಕೆಯಲ್ಲಿ, ಅಭಿವೃದ್ಧಿಯಲ್ಲಿ ಪಾಶ್ಚಾತ್ಯರು ತಾವು ಶ್ರೇಷ್ಠರೆಂದು ವಾದಿಸುವುದಿದೆ. ಆದರೆ ಈ ಎರಡು ಅಂಶಗಳ ಪರಿಣಾಮದಿಂದಾಗಿ ಸಾಹಿತ್ಯವಲಯದಲ್ಲಿ ಅಗಾಧವಾದಂತಹ ಬದಲಾವಣೆ ಮತ್ತು ಬೆಳವಣಿಗೆಗೆ ಕಾರಣವಾಯಿತು. ಗದ್ಯ, ಕತೆ, ಕಾದಂಬರಿ, ಕಾವ್ಯ ಮುಂತಾದ ಹಲವು ಪ್ರಕಾರಗಳ ಸೃಷ್ಟಿಗೆ ಕಾರಣವಾಯಿತು. ಆದರೆ ಆಧುನಿಕತೆಯು ಏಕಕಾಲಕ್ಕೆ ವೈಜ್ಞಾನಿಕ ಮನೋಧರ್ಮ ಮತ್ತು ಸಂಪ್ರದಾಯ ಶರಣತೆಯ ಜೊತೆಜೊತೆಗೇ ಬಂದಿವೆ.

ಆಧುನಿಕತೆಯ ಪ್ರಕ್ರಿಯೆ ರೈತರ ಬದುಕಿನ ಮೇಲೆ ಪರಿಣಾಮ ಬೀರಿದೆ. ಆಧುನಿಕತೆಯು ಭೂ ರೈತರ ಬದುಕನ್ನು ಪರಿವರ್ತಿಸಿದ ಬಗೆಯನ್ನು ಇಲ್ಲಿ ಗಮನಿಸಬಹುದಾಗಿದೆ. ರೈತರು ಆರಂಭದಲ್ಲಿ ಕೊಟ್ಟಿಗೆ ಗೊಬ್ಬರದ ಮೂಲಕ ತಮ್ಮ ನೈಜ ಬೇಸಾಯ ಕ್ರಮದಿಂದ ಉತ್ತಮ ಬೆಳೆಯನ್ನು ಬೆಳೆಯುತ್ತಿದ್ದ. ಆಧುನಿಕತೆಯ ಪ್ರವೇಶದಿಂದ ಭಾರತದಲ್ಲಿ 'ಹೆಚ್ಚು ಆಹಾರ ಬೆಳೆಯಿರಿ' ಎಂಬ ಘೋಷಣೆಯೊಂದಿಗೆ ರೈತರ ಮೇಲೆ ರಾಸಾಯನಿಕ ಬಳಕೆಯನ್ನು ಹೇರಲಾಯಿತು.ರೈತರು ಆರಂಭದಲ್ಲಿ ಇಂಥ ಬಳಕೆಯಿಂದ ಸಂಶಯಗೊಂಡಿದ್ದನು. ಕ್ರಮೇಣ ರೈತರು ತಮ್ಮವೇ ಎಂಬಷ್ಟರಮಟ್ಟಿಗೆ ರಾಸಾಯನಿಕ ಗೊಬ್ಬರಗಳ ಬಳಕೆಗೆ ಅಧೀನವಾಗಿರುವುದನ್ನು ಕಾಣುತ್ತೇವೆ. ಇದರ ಪರಿಣಾಮ ರೈತರ ಭೂಮಿಯಲ್ಲಿನ ಫಲವತ್ತತೆ ನಷ್ಟವಾಗುತ್ತಿರುವುದನ್ನು ಇಂದು ಕಾಣುತ್ತೇವೆ.

ಸ್ವಾತಂತ್ರ್ಯೋತ್ತರ ಭಾರತ ಸರ್ಕಾರವು 'ಹೆಚ್ಚು ಆಹಾರ ಬೆಳೆಯಿರಿ' ಮತ್ತು 'ಹಸಿರುಕ್ರಾಂತಿ'ಯ ಮೂಲಕ ರೈತರನ್ನು ಪ್ರೋತ್ಸಾಹಿಸಲು ಯತ್ನಿಸಿದವು. ಇವು ಹಲವು ಯೋಜನೆಗಳ, ಘೋಷಣೆಯ ಮೂಲಕ ಬೋರ್‌ವೆಲ್‌ಗಳು, ನೀರಾವರಿ ಪಂಪ್‌ಸೆಟ್‌ಗಳಲ್ಲಿ ಬಳಕೆ, ಕೃಷಿ ಸಲಕರಣೆಗಳು, ಟ್ರಾಕ್ಟರ್, ರಾಸಾಯನಿಕಗಳ ಬಳಕೆ ಇವೆಲ್ಲವುಗಳ ಹೆಚ್ಚು ಆಹಾರೋತ್ಪನ್ನ ಮಾಡಲು ಸಹಕಾರಿ ಎಂದು ಬಿಂಬಿಸ ತೊಡಗಿದವು. ಇವುಗಳ ಬಳಕೆ ಹಲವು ಸಮಸ್ಯೆಗಳನ್ನು ರೈತರು ಎದುರಿಸತೊಡಗಿದರು. ಕೃಷಿ ಸಲಕರಣೆಗಳ ಮೂಲಕ ಕೃಷಿಕೂಲಿಕಾರ್ಮಿಕರಿಗೆ ಕೆಲಸವಿಲ್ಲದಂತಾಯಿತು.ಬೇಸಾಯದಲ್ಲಿ ರಾಸಾಯನಿಕ ಬಳಸಿದ ಪರಿಣಾಮ ಭೂಮಿಯಲ್ಲಿ ಪ್ರತಿಕೂಲ ಸ್ಥಿತಿ ನಿರ್ಮಾಣವಾಯಿತು. ಇಂಥ ಬಳಕೆಯಿಂದ ರೈತರು ಹೆಚ್ಚು ಬೆಳೆಯುವ ಆಸೆಯಿಂದ ಕೃಷಿ ಉತ್ಪನ್ನಗಳನ್ನು, ಮಾರುಕಟ್ಟೆ ಆಧಾರಿತ ವಾಣಿಜ್ಯ ಬೆಳೆಗಳನ್ನು ರೈತ ಬೆಳೆಯತೊಡಗಿದ. ಇದು ಕ್ರಮೇಣ ಆಹಾರೋತ್ಪನ್ನದ ಕೊರತೆಗೆ ಕಾರಣವಾಯಿತು. ಹೀಗಾಗಿ ಆಧುನಿಕತೆಯ ಸವಲತ್ತುಗಳ ಬಳಕೆಯಿಂದ ಅಭಿವೃದ್ಧಿ ಮತ್ತು ಜೀವನಶೈಲಿಗಳು ಬದಲಾಗತೊಡಗಿದವು. ಬೇಸಾಯಕ್ಕೆ ಸಾಂಪ್ರಾದಾಯಿಕ ಎತ್ತು ಬಳಕೆ ನಿಂತು,ಟ್ರಾಕ್ಟರ್ ಮತ್ತು ಯಂತ್ರಗಳ ಮೂಲಕ ಉಳುಮೆ ಮಾಡತೊಡಗಿರುವುದನ್ನು ಕಾಣುತ್ತೇವೆ. ಈ ಎಲ್ಲ ಪ್ರಕ್ರಿಯೆಗಳ ಫಲವಾಗಿ ರೈತರ ಬದುಕು ಆಧುನಿಕಗೊಳ್ಳತೊಡಗಿತು.

ಸ್ವಾತಂತ್ರ್ಯ ಭಾರತದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಜಾರಿಗೊಳ್ಳಲು ವಸಾಹತುಶಾಹಿ ಆಡಳಿತ ವ್ಯವಸ್ಥೆ ಒತ್ತಾಯ ತಂದಿದ್ದನ್ನು ಗಮನಿಸಬಹುದು.ಅಲ್ಲದೆ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಸಂಸದೀಯ ಮಾದರಿಯ

ಪ್ರಜಾಪ್ರಭುತ್ವ ವ್ಯವಸ್ಥೆಯಿಂದ ಎಲ್ಲಾ ಪ್ರಜೆಗಳಿಗೂ ಸಮಾನ ಹಕ್ಕು ದೊರೆಯುವಂತಾಯಿತು. ಭಾರತೀಯ ಪ್ರಜೆಗಳಿಗೆ ಸಂವಿಧಾನಾತ್ಮಕವಾದಂತಹ ಮೂಲಭೂತ ಹಕ್ಕುಗಳನ್ನು ಪಡೆಯಲು ಆಧುನಿಕ ನೀತಿಗಳು ಸಹಕಾರಿಯಾದವು.

ಇಂತಹ ಆಧುನಿಕತೆಯಿಂದಾಗಿ ಭಾರತದಲ್ಲಿ ಭೂವಿನ್ಯಾಸಗಳಲ್ಲಾದ ಬದಲಾವಣೆಯನ್ನು ಗಮನಿಬಹುದು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಭೂಸುಧಾರಣೆ ಮತ್ತು ಭೂ ಹಂಚಿಕೆಗೆ ಸಂಬಂಧಿಸಿದಂತೆ ಕಾನೂನು ರಚನೆಗೆ ತೊಡಗಿದ್ದನ್ನು ಕಾಣುತ್ತೇವೆ.ಕಾನೂನುಗಳ ಮೂಲಕ ನ್ಯಾಯಯುತವಾಗಿ ಭೂಮಿ ಹಂಚಿಕೆಯಾಗಬೇಕಾದ ಆಧುನಿಕ ಚಿಂತನಾ ಕ್ರಮದ ಪ್ರಕ್ರಿಯೆಯ ಸ್ವರೂಪವನ್ನು ಕಾಣುತ್ತೇವೆ.ಈ ಹಿನ್ನೆಲೆಯಲ್ಲಿ ರೈತ ಪ್ರಶ್ನೆ ಮತ್ತು ಭೂ ಪ್ರಶ್ನೆಯನ್ನು ಆಧುನಿಕತೆಯ ಮೂಲಕ ಪರಿಹರಿಸಲು ಯತ್ನಿಸಿದರೆ, ಇದೇ ಕಾಲಕ್ಕೆ ಉಳಿದಿದ್ದ ಭೂಮಾಲೀಕ ವರ್ಗ, ಊಳಿಗಮಾನ್ಯಶಾಹಿ ವ್ಯವಸ್ಥೆಯು ಆಧುನಿಕತೆಯ ನೆಪದಲ್ಲಿ ರೈತರನ್ನು ವಂಚಿಸುತ್ತ ಬಂದಿರುವುದನ್ನು ಕಾಣುತ್ತೇವೆ. ಇಂಥ ಕಾರಣಗಳಿಗಾಗಿ ಆಧುನಿಕತೆ ಜನಪರ ನಿಲುವನ್ನು ಹೊಂದಿದ್ದರೂ, ಅದು ಸಾಮ್ರಾಜ್ಯಶಾಹಿಗಳಿಂದ, ಬಂಡವಾಳಶಾಹಿಗಳಿಂದ ಹಾಗೂ ಪಟ್ಟಭದ್ರಹಿತಾಸಕ್ತಿಗಳಿಂದ ತಮ್ಮ ಹಕ್ಕುಗಳನ್ನು ಕಸಿದುಕೊಳ್ಳುವಲ್ಲಿ ಯಶಸ್ವಿಯಾಗಿರುವುದನ್ನು ಕಾಣುತ್ತೇವೆ. ಮಾತ್ರವಲ್ಲದೆ ಇಂತಹ ಸಮಸ್ಯೆಗಳನ್ನು ಆಧುನಿಕ ಸಂದರ್ಭವು ಹೊಸ ರೂಪದಲ್ಲಿ ಹುಟ್ಟುಹಾಕುತ್ತಿವೆ.

## ೨.೨ ಕನ್ನಡ ಕಥಾನಕದ ಸ್ವರೂಪ

ಕಥನ ಎಂಬ ಶಬ್ದವು ಈಚಿನ ದಿನಗಳಲ್ಲಿ ಹೆಚ್ಚಾಗಿ ಬಳಕೆಯಾಗುತ್ತಿದೆ. ಪ್ರಸ್ತುತ ಅಧ್ಯಯನದಲ್ಲಿ ನೇರವಾಗಿ ಆಧುನಿಕ ಕನ್ನಡ ಕತೆ,ಕಾದಂಬರಿಗಳಿಗೆ ಕಥನ ಎಂಬುದಾಗಿ ಅನ್ವಯಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಈ ಅಧ್ಯಯನದಲ್ಲಿ ರೂಪನಿಷ್ಠ ಮತ್ತು ಆಶಯನಿಷ್ಠ ಎರಡು ಅಂಶಗಳ ಮೇಲೆ ಮುಖ್ಯ ಚರ್ಚೆ ಕೈಗೊಳ್ಳಲಾಗುವುದು. ಈ ಅಧ್ಯಯನದ ಕೇಂದ್ರಕಾಳಜಿ ಕಥನಗಳ ಮೂಲಕ ಭೂ ರೈತ ಪ್ರಶ್ನೆಯನ್ನು ವಿಶ್ಲೇಷಣೆಗೆ ಒಳಪಡಿಸುವುದಾಗಿದೆ.

ಆಂಗ್ಲಭಾಷೆಯ Narrativeಗೆ ಸಂವಾದಿಯಾಗಿ ಕನ್ನಡದಲ್ಲಿ ಕಥನ ಎಂಬುದಾಗಿ ಬಳಸಲಾಗುತ್ತಿದೆ. ಪ್ರಸ್ತುತ Narrative, Narration ಅನ್ನು ಕತೆ ಕಾದಂಬರಿಗಳ ಪರ್ಯಾಯವಾಗಿ ಬಳಸುವುದನ್ನು ಕಾಣುತ್ತೇವೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಆಂಗ್ಲಭಾಷೆಯ ಶಾರ್ಟ್ ಸ್ಟೋರಿ (Shotstory) ಗೆ ಸಂವಾದಿಯಾಗಿ ಕತೆ ಎಂಬುದಾಗಿ ಬಳಸಲಾಗುತ್ತಿತ್ತು. ಕತೆಯು ಅಲ್ಪಕಾಲದಲ್ಲಿ ಓದುಗನಿಗೆ ಕತೆ ಹೇಳುವ ಪ್ರಕಾರವಾಗಿದೆ. ಆದರೆ ಘಟನೆಗಳನ್ನು, ವಸ್ತುವಿಷಯಗಳನ್ನು ವಿಸ್ತಾರವಾಗಿ ಹೇಳುವುದನ್ನು ಕಾದಂಬರಿ ಎಂಬುದಾಗಿ ಪರಿಗಣಿಸಲಾಗಿದೆ. ಇದು ಕೂಡಾ ಆಂಗ್ಲಭಾಷೆಯ ನಾವೆಲ್ (Novel) ಗೆ ಸಂವಾದಿಯಾಗಿ ಬಳಸಲಾಗುತ್ತಿದೆ. ಇವೆರಡರ (ಕತೆ,ಕಾದಂಬರಿಗಳ) ಒಟ್ಟು ಮೊತ್ತ, ಲೇಖಕನ ಆಲೋಚನೆಯ ಮೊತ್ತ, ಗ್ರಹಿಕೆಯ ಮೊತ್ತವಾಗಿ ಕಥನ ಎಂಬುದಾಗಿ ಬಳಸಿಕೊಂಡು ಅಧ್ಯಯನ ಮಾಡಲಾಗುವುದು. ಪ್ರಸ್ತುತ ಈ ಬಗೆಯ ಆಕರಗಳನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

ಈ ಕುರಿತು ವಿವಿಧ ವಿದ್ವಾಂಸರು ಚಿಂತಿಸಿರುವುದನ್ನು ಈ ವಿಭಾಗದಲ್ಲಿ ಗಮನಿಸಬಹುದು. ಕಥನ ಎಂಬ ಪರಿಕಲ್ಪನೆಯನ್ನು ಜಗತ್ತಿಗೆ ಪರಿಚಯಿಸಿದವರು ರಷ್ಯನ್‌ವಿದ್ವಾಂಸರು. ಈ ಪರಿಭಾಷೆಯ ಕುರಿತು ಹಲವು ವಿದ್ವಾಂಸರು ಚರ್ಚೆಯನ್ನು ಈ ಕೆಳಗೆ ನೀಡಲಾಗಿದೆ.

ಕಥಾಪ್ರಬಂಧ (Narrative) ಶರೀರವನ್ನು ರೂಪವಾದಿಗಳು, ಕಥೆ (Fable) ಮತ್ತು ವಸ್ತು (Subject) ಎಂದು ವಿಶ್ಲೇಷಿಸಿದ್ದಾರೆ. ಇದನ್ನೇ ಆಧಾರವಾಗಿಟ್ಟುಕೊಂಡು ಮುಂದೆ ರಷ್ಯನ್ ವಿದ್ವಾಂಸರು ಈ ರೀತಿ ವ್ಯಾಖ್ಯಾನಿಸಿದ್ದಾರೆ. ಜನತ್ ಎಂಬ ವಿದ್ವಾಂಸನು ಕಥನವನ್ನು ಮೂರು ಭಾಗಗಳಾಗಿ ವಿಂಗಡಿಸುತ್ತಾನೆ.ಆತನ ಪ್ರಕಾರ " i)ಕತೆ (Story) ii)ಕಥಾಪ್ರಬಂಧ (Narration) ಹಾಗೂ iii) ಕಥನ ಕ್ರಿಯೆ (Narrating). ಕಥೆ ಎಂದರೆ ಕಥನದಲ್ಲಿ ಬರುವ ಘಟನೆಗಳು;ಕಥಾಪ್ರಬಂಧ ಈ ಘಟನಾವಳಿಯನ್ನೊಳಗೊಂಡ ಪ್ರಬಂಧದ ಆಕೃತಿ ಹಾಗೂ ಕಥನ ಕ್ರಿಯೆಯೆಂದರೆ ಕಥಾಪ್ರಬಂಧವನ್ನು ಉತ್ಪಾದಿಸುವ ವಾಸ್ತವ ಅಥವಾ ಕಾಲ್ಪನಿಕ ಕ್ರಿಯೆ."[೩]

ಇ.ಎಂ.ಫಾಸ್ಟರ್ ಅವರು ಇದಕ್ಕಿಂತ ಭಿನ್ನವಾಗಿ "ಕಥೆಯೆಂದರೆ ಕಾಲಕ್ರಮದಲ್ಲಿ ಸಿದ್ಧಪಡಿಸುವ ಕಥನ"

ಎಂದು ಹೇಳಿರುವಲ್ಲಿ ಕಾಲಕ್ಕೆ ಆದ್ಯತೆ ನೀಡಿರುವುದು ಕಂಡುಬರುತ್ತದೆ. ಕಾದಂಬರಿಯ ಕಾಲಘಟ್ಟವನ್ನು ಮತ್ತು ಕಾಲನಿಷ್ಠೆಯನ್ನು ಗ್ರಹಿಸಿ ವ್ಯಕ್ತಗೊಳ್ಳುವ ಕೃತಿಗಳನ್ನು ಕಥನ ಎಂಬ ಅರ್ಥದಲ್ಲಿ ಇವರು ಗ್ರಹಿಸಿರುವುದು ಕಂಡುಬರುತ್ತದೆ.

ಈ ಕುರಿತು ರಿಫ್ಯಾಟರ್ ಎಂಬ ವಿದ್ವಾಂಸ ಹೇಳುವಂತೆ. "ಕಥೆಯೆಂದರೆ... ಕಥನ ಸಂದರ್ಭಿಸುವ ದೇಶ ಕಾಲಗಳ ಭಾಷಿಕ ಪ್ರತಿರೂಪ ಹಾಗೂ ಘಟನೆ ಹಾಗೂ ಪಾತ್ರಗಳ ಭಾಷಿಕ ಪ್ರತಿರೂಪ;ಕಥನ ಕ್ರಿಯೆ ಎಂದರೆ ಕಾಲದ ನಿರ್ವಹಣೆ, ಪಾತ್ರಗಳ ಸೃಷ್ಟಿ,ಕೇಂದ್ರೀಕರಣ, ಕಥನದ ಸ್ತರಗಳ ನಿರ್ಮಿತಿ, ಕಥನ ವೃತ್ತಿಗಳ ಆಯ್ಕೆ."[೪] ಕಥನದ ಸಂದರ್ಭವು, ದೇಶ ಕಾಲಗಳ ಅಭಿವ್ಯಕ್ತಿಯ ಪ್ರತಿರೂಪವಾಗಿ ಕೃತಿಗಳಲ್ಲಿ ಬರುತ್ತವೆ, ಎಂಬುದು ರಿಫ್ಯಾಟರ್‌ರವರ ಸಾರ್ವಕಾಲಿಕವಾದುದಾಗಿದೆ.

ಎಲ್.ಎಸ್.ಶೇಷಗಿರಿರಾಯರು ಹೇಳುವಂತೆ, "Narrative ಎಂಬ ಪದಕ್ಕೆ ನಮ್ಮ ಕಾಲದಲ್ಲಿ ದೊರಕಿರುವ ಅರ್ಥವ್ಯಾಪ್ತಿ, ಮಾನವೀಯ ಸಂಕಥನಗಳಲ್ಲಿ ಘಟಿಸುವ ಎಲ್ಲಾ ಪ್ರತಿರೂಪಣ ಪ್ರಕ್ರಿಯೆಗಳನ್ನೂ ಇಂದು ಕಥನಗಳೆಂದೇ ಗುರುತಿಸಲಾಗುತ್ತಿದೆ. (Cobley,2001:3) ವರ್ತಮಾನ ಪತ್ರಿಕೆಗಳ ವರದಿಗಳು, ಇತಿಹಾಸದ ಪುಸ್ತಕಗಳು, ಕಾದಂಬರಿಗಳು, ಚಲಚ್ಚಿತ್ರಗಳು, ನೃತ್ಯ-ಇವೆಲ್ಲವೂ ಇಂದು Narrative ಪದದ ವ್ಯಾಪ್ತಿಗೆ ಒಳಗಾಗುತ್ತಿವೆ. Fiction-ಎಂದರೆ ಕಾದಂಬರಿ, ಸಣ್ಣಕತೆ ಇತ್ಯಾದಿ ಎಂಬ ಪದ ಹಿಂದೆ ಸರಿದು Narrative ಪದಕ್ಕೆ ತಮ್ಮ ಜಾಗೆಯನ್ನು ಬಿಟ್ಟುಕೊಡುತ್ತಿದೆ."[೫]

ಈ ಮೊದಲು ಪಿಕ್ಷನ್ ಅಥವಾ ನರೇಶನ್ ಎಂಬುದಾಗಿ ಕರೆಯಲಾಗುತ್ತಿತ್ತು. ಆದರೆ ಈ ಪರಿಭಾಷೆಗೆ ಕಥನ ಎಂಬುದನ್ನು ಸಂವಾದಿಯಾಗಿ ಬಳಸಲಾಗುತ್ತಿತ್ತು. ಕಥನ ಅಥವಾ ಸಂಕಥನ ಎಂಬುದು ಇಂದು ಬಹುವ್ಯಾಪಕಾರ್ಥದಲ್ಲಿ ಬಳಕೆಯಾಗುತ್ತಿದೆ. ಇತ್ತೀಚೆಗೆ ಕಥನ ಪರಿಕಲ್ಪನೆಯು ಡೇರಿಡಾ,ಫುಕೋರವರ ಡಿಸ್ಕೋರ್ಸ್ ಎಂಬ ಪದದ ಸಂವಾದಿಯಾಗಿ ಕನ್ನಡದ ಸಂದರ್ಭದಲ್ಲಿ ಸಂಕಥನ ಎಂಬುದಾಗಿ ಬಳಸಲಾಗುತ್ತಿದೆ. ಆದರೆ ಈ ಅಧ್ಯಯನವು ಕತೆ ಮತ್ತು ಕಾದಂಬರಿಗಳ ಮೂಲಕ ಸಾಂಸ್ಕೃತಿಕ, ಸಾಹಿತ್ಯಿಕ,ಮಾನವಿಕ ನೆಲೆಯಲ್ಲಿ ಅಧ್ಯಯನ ಕೈಗೊಳ್ಳುವುದರಿಂದ ಸಂಕಥನ ಎಂಬ ಪರಿಭಾಷೆಯಾಗಿ ಪೂರ್ಣಪ್ರಮಾಣದ ಅರ್ಥದಲ್ಲಿ ಬಳಸುತ್ತಿಲ್ಲ ಎಂಬುದನ್ನು ಅಧ್ಯಯನಕಾರ ಸ್ಪಷ್ಟಪಡಿಸುತ್ತಾನೆ. ಏಕೆಂದರೆ ಇಂದು ವ್ಯಾಪಕಾರ್ಥದಲ್ಲಿ ವಸ್ತು ವಿಷಯಕುರಿತು, ಚರಿತ್ರೆ, ಸಮಾಜಶಾಸ್ತ್ರ, ಚಿಂತನೆ ಮುಂತಾದವುಗಳನ್ನು ಪಠ್ಯಗಳ ಮೂಲಕ ಕಟ್ಟಿಕೊಡುವ ಕೃತಿಗಳನ್ನು ಸಂಕಥನ ಎಂಬುದಾಗಿ ಕರೆಯಲಾಗುತ್ತಿದೆ. ಈಗಾಗಲೇ ಕನ್ನಡದಲ್ಲಿ ಸಂಸ್ಕೃತಿಕಥನ, ಸಾಹಿತ್ಯ ಕಥನ, ಗತಕಥನ, ಪ್ರವಾಸಕಥನ, ಇತಿಹಾಸ ಕಥನ, ಆತ್ಮಕಥನ, ಮಹಿಳಾಸಂಕಥನ ಎಂಬುದಾಗಿ ಬಳಸಲಾಗುತ್ತಿದೆ. ಪ್ರಸ್ತುತ ಈ ಅಧ್ಯಯನವು ಸಾಹಿತ್ಯಿಕ ಸಾಂಸ್ಕೃತಿಕ, ಮಾನವಿಕ, ಅಧ್ಯಯನವಾಗಿರುವುದರಿಂದ ಇದು ಮುಂದೆ ಸಂಕಥನ ಎಂಬುದಾಗಿ ಕರೆದುಕೊಳ್ಳಬಹುದು.

### ೨.೩. ಭೂ ಹೋರಾಟದ ನಿರ್ವಚನ

ಆಧುನಿಕ ಕನ್ನಡ ಕಥನವನ್ನು ಅಭ್ಯಸಿಸುವ ಸಂದರ್ಭದಲ್ಲಿ ಭೂಮಿ ಈ ಅಧ್ಯಯನದ ಮುಖ್ಯ ಕಾಳಜಿಯಾಗಿದೆ. ಆದ್ದರಿಂದ ಭೂ ಹೋರಾಟವನ್ನು ಪರಿಕಲ್ಪನಾತ್ಮಕವಾಗಿ ಅರ್ಥೈಸಿ, ಆಧುನಿಕ ಕನ್ನಡ ಕಥನ ಭೂಮಿ ಪ್ರಶ್ನೆಗೆ ಹೇಗೆ ಪ್ರತಿಕ್ರಿಯಿಸಿದೆ ಎಂಬುದನ್ನು ಈ ಅಧ್ಯಯನದ ಹುಡುಕಾಟದ ಭಾಗವನ್ನಾಗಿ ಪರಿಗಣಿಸಲಾಗಿದೆ. ಈ ಪರಿಕಲ್ಪನೆಯ ಮೂಲಕ ಭೂ ಹೋರಾಟವೆಂದರೇನು ಅದು ನಡೆದ ಬಂದ ದಾರಿ, ಭೂ ಒಡೆತನದ ಇತಿಹಾಸ ಬೆಳವಣಿಗೆ ಮೊದಲಾದ ಆಶಯಗಳನ್ನು ಅಧ್ಯಯನ ಮಾಡಲಾಗುವುದು.

#### ೨.೩.೧. ಹೋರಾಟ

ಹೋರಾಟವೆಂದರೆ ಕ್ರಾಂತಿ, ದಂಗೆ, ಸತ್ಯಾಗ್ರಹ, ಚಳುವಳಿ, ಚಲನವಲನ, ಪರಿವರ್ತನೆ, ಬದಲಾವಣೆ, ಆಂದೋಲನ, ಬಂಡಾಯ, ಮುಷ್ಕರ ಎಂಬ ಮೊದಲಾದ ಅರ್ಥಗಳಲ್ಲಿ ಕರೆಯಲಾಗುತ್ತದೆ.ಸಿರಿಗನ್ನಡ ಅರ್ಥಕೋಶದಲ್ಲಿ ಹೋರಾಟ, ಕ್ರಾಂತಿ, ವ್ಯವಸ್ಥೆಯ ವಿರುದ್ಧ ತಿರುಗಿ ಬೀಳುವುದು, ಪ್ರತಿಭಟನೆ, ಕ್ಷೋಭೆ ಎಂದು ಅರ್ಥೈಸಿದೆ. ಕನ್ನಡ ನಿಘಂಟಿನಲ್ಲಿ ಚಳವಳ, ಚಳುವಳಿ, ಚಳವಳಿ (ನಾಮಪದ) ಚಲನೆ, ಅಲ್ಲಾಡುವಿಕೆ, ಜರುಗುವಿಕೆ, ಚಳವಳಿಸು, ಸಾಮೂಹಿಕ ಕ್ಷೋಭೆ, ಯಾವುದಾದರೂ ಒಂದು ಪದ್ಧತಿ, ಕ್ರಮ ಅಥವಾ ಕಾನೂನಿನ ವಿಷಯವಾಗಿ

ನಡೆಸುವ ಸಾಮಾಜಿಕ ಆಂದೋಲನ ಎಂದು ಅರ್ಥೈಸಿದೆ. ಆಂದೋಲನವೆಂದರೆ ಹೊಸ ಜೀವನ, ಹೊಸ ಜೀವನವೆಂದರೆ ಜನ ಆಲೋಚಿಸುವಂತೆ ಮಾಡುವುದು ಎಂಬುದಾಗಿ ವ್ಯಕ್ತವಾಗುತ್ತದೆ. ಸಮಾಜಶಾಸ್ತ್ರಜ್ಞರಾದ ಪ್ರೊ.ಹೆಚ್.ವಿ.ನಾಗೇಶ್‌ಮತ್ತು ಎ.ಇ. ಪುನೀತ್ ಹೇಳುವಂತೆ " ಚಳುವಳಿ ದಂಗೆ,ಕ್ರಾಂತಿ ಇವೆಲ್ಲ ಸಾಮಾಜಿಕ ಚಲನೆಯ ವಿವಿಧ ರೂಪಗಳು, ಚಲನೆಯ ಗತಿ ಹಾಗೂ ಮಾರ್ಗ ಕಾಲಕಾಲಕ್ಕೆ ಬದಲಾಗುವ ಸಂಭವ ಇದ್ದೇ ಇದೆ. ಸಾಮಾಜಿಕ ಚಳುವಳಿಗಳು ಒಂದು ಹಂತವನ್ನು ದಾಟಿದ ಮೇಲೆ ಹೊಸ ಮಾರ್ಗವನ್ನು ಹಿಡಿಯುವುದು ಹೊಸ ವಿಷಯವೇನಲ್ಲ."[೬]

ಒಟ್ಟಾರೆಯಾಗಿ ಸಾಮಾಜಿಕ ಅಸಮತೋಲನವನ್ನು ಸರಿದೂಗಿಸುವ ಪ್ರಕ್ರಿಯೆಯನ್ನು ಹೋರಾಟ ಎಂದು ಕರೆಯಬಹುದಾಗಿದೆ. ಇದು ಸಾಮಾಜಿಕ ಅಸಮತೋಲನವನ್ನು ಸಮತೋಲನಗೊಳಿಸುವ ಪ್ರಕ್ರಿಯೆ. ಯಾವುದೇ ಒಂದು ವ್ಯವಸ್ಥೆ, ಅದು ಸರಿ ಇರಲಿ, ಇಲ್ಲದಿರಲಿ, ಅನ್ಯಾಯದ ವಿರುದ್ಧ ತಿರುಗಿ ಬೀಳುವುದು, ಪ್ರತಿಭಟಿಸಲಿಕ್ಕೆ, ಹೊಸ ಬದಲಾವಣೆಯನ್ನು ಸ್ಥಾಪಿಸಲು ಮಾಡುವ ಪ್ರಯತ್ನಕ್ಕೆ ಹಾಗೂ ಅನುಯಾಯಿಗಳು ಸಂಘಟಿಸಲು ಮಾಡುವಂತಹ ಯೋಜನೆಗಳನ್ನು ಹೋರಾಟ ಅಥವಾ ಚಳುವಳಿಯೆಂದು ಕರೆಯಬಹುದಾಗಿದೆ.

### ೨.೩.೨. ಭೂ ಹೋರಾಟ

ಭೂಮಿ ಎಂಬ ಪದವು ರೈತರನ್ನೂ ಒಳಗೊಳ್ಳುವುದರಿಂದ ಭೂಮಿ ಮತ್ತು ರೈತರನ್ನಾಧರಿಸಿದ ಸಮಸ್ಯೆಗಳನ್ನು ಕುರಿತು ಅಧ್ಯಯನ ಮಾಡುವುದು ಭೂಹೋರಾಟವಾಗಿದೆ. ಮಾತ್ರವಲ್ಲದೆ ಭೂಮಿಯನ್ನು ಕುರಿತಾದ ಹೋರಾಟವನ್ನು ಮತ್ತು ಭೂಮಿಯೊಂದಿಗಿನ ಬದುಕನ್ನು ಹಾಗೂ ಸಮಸ್ಯೆಗಳನ್ನು ಭೂ ಹೋರಾಟವೆಂದು ಈ ಅಧ್ಯಯನ ಪರಿಗಣಿಸಿದೆ. ಇಲ್ಲಿನ ಅಧ್ಯಯನವು ಇತರೆ ಸಾಮಾಜಿಕ ಹೋರಾಟಗಳನ್ನು ಹೊರತುಪಡಿಸಿ,ಭೂ ಸಂಬಂಧಿ ಹೋರಾಟಗಳನ್ನು ಮಾತ್ರ ಕೇಂದ್ರ ಆಶಯವಾಗಿಟ್ಟುಕೊಂಡು ಅಭ್ಯಸಿಸುತ್ತದೆ. ಭೂ ಹಂಚಿಕೆಯಲ್ಲಾಗಿರುವ ಅಸಮಾನತೆ, ಭೂಮಾಲೀಕರು ಗೇಣಿರೈತರನ್ನು ಕೂಲಿಕಾರ್ಮಿಕರನ್ನು ನಡೆಸಿಕೊಂಡ ಬಗೆಯೇ ಕಾರಣವಾಗಿ ಉಂಟಾಗಿರುವ ಸಾಮಾಜಿಕ ಅಸಮಾನತೆಯಿಂದಾಗಿ ಭೂ ಹೋರಾಟಗಳು ನಡೆದಿವೆ.ಭೂ ಹೋರಾಟವು ಆರಂಭದಲ್ಲಿ ಲೇವಾದೇವಿ, ಗೇಣಿದಾರಿಕೆಯ, ಸಾಲದ ಬಡ್ಡಿಯ ವಿರುದ್ಧದ ಹೋರಾಟವಾಗಿದೆ. ಆರ್ಥಿಕ ಸಬಲತೆಗಾಗಿ ನಡೆದ ಹೋರಾಟವಾಗಿದೆ.ಈ ಹಿನ್ನೆಲೆಯಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಭೂಹೋರಾಟಗಳನ್ನು ಸ್ಥೂಲವಾಗಿ ಪರಿಶೀಲಿಸಬಹುದು.

೧. ಈ ಮೊದಲ ಘಟ್ಟದ ಭೂಹೋರಾಟ ಮೇಲ್ನೋಟಕ್ಕೆ ಆರ್ಥಿಕ ಹೋರಾಟವಾಗಿ ಕಂಡರೂ ಅದು ಆಂತರಿಕವಾಗಿ ಭೂಮಿಗಾಗಿ ನಡೆದ ಹೋರಾಟವಾಗಿವೆ.ಇವು ನೇರವಾಗಿ ಭೂಮಿ ಕುರಿತಾಗದೇ ಭೂ ಪ್ರಶ್ನೆಗಳನ್ನು ಒಳಗೊಂಡ ಹೋರಾಟಗಳಾಗಿವೆ. ಬಂಗಾಲದ ಸನ್ಯಾಸಿ ಫಕೀರರ ದಂಗೆಗಳು,೧೮೫೫ರಲ್ಲಿ ಬ್ರಿಟಿಷರ ವಿರುದ್ಧ ನಡೆದ ಸಂತಾಲರ ಚಳುವಳಿ, ೧೮೭೫ರಲ್ಲಿ ನಡೆದ ಮಾರ್ವಾಡಿ ಹಾಗೂ ಲೇವಾದೇವಿಗಾರರ ವಿರುದ್ಧ ದರ್ಖಿ ರೈತ ಚಳುವಳಿ, ೧೮೭೦ರಿಂದ ೮೫ರವರೆಗೆ ಜಮೀನ್ದಾರರ ವಿರುದ್ಧದ ಬಂಗಾಳದ ಗೇಣಿದಾರರು ನಡೆಸಿದ ಹೋರಾಟ, ಔಧ್‌ದಂಗೆ, ೧೯ನೇ ಶತಮಾನದಲ್ಲಿ ಲೇವಾದೇವಿಗಾರರ ವಿರುದ್ಧ ನಡೆದ ಪಂಜಾಬ್ ರೈತರ ಚಳುವಳಿಗಳೂ ಭೂ ಮತ್ತು ರೈತಹೋರಾಟಗಳನ್ನು ಕೇಂದ್ರವಾಗಿಟ್ಟುಕೊಂಡಿವೆ. ಬಿಹಾರದಲ್ಲಿ ನಡೆದ ಇಂಡಿಗೋ ಪ್ಲಾಂಟರ್ಸ್ ವಿರುದ್ಧ ಚಂಪಾರಣ್ಯ ರೈತ ಹೋರಾಟ ನಡೆದುದನ್ನು ಗಮನಿಸಬಹುದಾಗಿದೆ. ಇವೆಲ್ಲವುಗಳು ವಿಪರೀತ ಬಡ್ಡಿಯಿಂದ ಲೇವಾದೇವಿಗಾರರ ಕಿರುಕುಳ, ಬಿಟ್ಟಿ ದುಡಿಮೆ,ಜೀತದಾಳಾಗಿ ದುಡಿಯುವುದು, ಧಣಿಗಳಿಗೆ ಬೇಕಾದ ಬೆಳೆಯನ್ನು ಕಡ್ಡಾಯವಾಗಿ ಬೆಳೆಯಬೇಕು,ಮುಂತಾದವು ರೈತರ ಮೇಲೆ ನಡೆಯುತ್ತಿದ್ದ ಶೋಷಣೆಯ ವಿರುದ್ಧ ಕ್ಷಿಪ್ರ ಕ್ರಾಂತಿಯ ಮೂಲಕ ಪ್ರತಿಭಟನಾತ್ಮಕವಾಗಿ ಹೋರಾಟ ನಡೆದಿರುವುದನ್ನು ಕಾಣುತ್ತೇವೆ.

೨. ಎರಡನೇ ಹಂತದ ರೈತ ಹೋರಾಟ ನೇರವಾಗಿ ಭೂ ಸಂಬಂಧಿ ಹೋರಾಟವಾಗಿದ್ದು ಇಲ್ಲಿ ಆರ್ಥಿಕ ಪ್ರಶ್ನೆಯು ಜೊತೆಗೆ ಭೂಸಂಬಂಧಿನೆಲೆಯ ಅಂಶಗಳು ವ್ಯಕ್ತವಾಗುತ್ತವೆ. ಇಲ್ಲಿ ಶೋಷಣೆ, ಮೋಸ ವಂಚನೆ, ಅನ್ಯಾಯದ ವಿರುದ್ಧ ರೈತರು ಗೇಣಿದಾರರು, ಕೆಳವರ್ಗದವರು ಭೂಮಾಲೀಕರ ವಿರುದ್ಧ ಸಿಡಿದೆದ್ದಿರುವುದನ್ನು ಕಾಣುತ್ತೇವೆ.

ಈ ಹಂತದ ಹೋರಾಟ ಮೇಲ್ನೋಟಕ್ಕೆ ಭೂಹೋರಾಟವಾಗಿ ಕಂಡರೂ ಅದು ಆಂತರಿಕವಾಗಿ ಆರ್ಥಿಕ

ನೆಲೆಯನ್ನು ಒಳಗೊಂಡಿರುವ ವೈರುಧ್ಯವನ್ನು ಕಾಣುತ್ತೇವೆ. ಇದು ಆರ್ಥಿಕ ಅಸಮಾನತೆಯ ವಿರುದ್ಧದ ಹೋರಾಟವಾಗಿ, ಅಧಿಕಾರಗ್ರಹಣ ಹೋರಾಟವಾಗಿಯೂ ಗುರುತಿಸಬಹುದಾಗಿದೆ. ೧೯೨೭ರಲ್ಲಿ ಆಂಧ್ರಪ್ರದೇಶದಲ್ಲಿ ಜಮೀನ್ದಾರರ ಜುಲುಂ ವಿರುದ್ದ ನಡೆದ ಹೋರಾಟ, ಬಿಹಾರದಲ್ಲಿ ಸ್ವಾಮಿಸಹಜಾನಂದರ ನಾಯಕತ್ವದಲ್ಲಿ ಜಮೀನ್ದಾರರ ವಿರುದ್ಧ ನಡೆದ ಹೋರಾಟ. ದಕ್ಷಿಣ ಭಾರತ ಮತ್ತು ಉತ್ತರ ಪ್ರದೇಶಗಳಲ್ಲಿ ನಡೆದ ಅರಣ್ಯ ಕಾನೂನುಗಳ ದಬ್ಬಾಳಿಕೆಯ ವಿರುದ್ಧ ಹಾಗೂ ಜಮೀನ್ದಾರರ ವಿರುದ್ಧ ನಡೆದ ಹೋರಾಟಗಳು, ಬಿಹಾರ ಮಂತ್ರಿ, ಮಂಡಳದಿಂದ ವಂಚಿತರಾದ ರೈತರು ಬೃಹತ್ ಪ್ರಮಾಣದ ಚಳುವಳಿ, ನಡೆಸಿದರು. ಗ್ವಾಲಿಯರ್‌ನಲ್ಲಿ ಸ್ಥಳೀಯ ಠಾಕೂರರುಗಳ ವಿರುದ್ಧ ನಡೆದ ಹೋರಾಟಗಳು ಪ್ರಮುಖವಾದವು. ಇಲ್ಲಿ ಆರಂಭದ ಭೂಹೋರಾಟ ಸ್ವರೂಪಗಳು ಆರ್ಥಿಕ ನೆಲೆಯನ್ನು ಕಂಡುಕೊಂಡು ನಂತರದಲ್ಲಿ ಭೂಮಿಯತ್ತ ಮುಖಮಾಡಿರುವುದನ್ನು ಕಾಣುತ್ತೇವೆ.

### ೨.೩.೩ ಭೂ ಹೋರಾಟದ ಮಾದರಿಗಳು

ವಸಾಹತು ಸಂದೂರ್ಭ ಹಾಗೂ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಹಲವು ಮಾದರಿಯ ಭೂಹೋರಾಟಗಳನ್ನು ಗುರುತಿಸಬಹುದಾಗಿದೆ. ಇಂತಹ ಮಾದರಿ ಹೋರಾಟಗಳಾದ ಕಮ್ಯುನಿಸ್ಟ್ ಮಾದರಿಯ ಭೂಹೋರಾಟ, ಸಮಾಜವಾದಿ ನೆಲೆಯ ಭೂಹೋರಾಟ, ಭೂದಾನ ಚಳುವಳಿ, ಕಾನೂನು ನೆಲೆಯ ಭೂಹಂಚಿಕೆಯ ಮಾದರಿ, ನಕ್ಸಲ್ ಮಾದರಿಯ ಹೋರಾಟಗಳ ಮೂಲಕ ಭೂಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಯತ್ನಿಸಿರುವುದನ್ನು ಭಾರತೀಯ ಸಂದರ್ಭದಲ್ಲಿ ಗುರುತಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಇಂತಹ ಮಾದರಿ ಹೋರಾಟಗಳನ್ನು ಸ್ಥೂಲವಾಗಿ ಈ ಮುಂದೆ ಪರಿಶೀಲಿಸಲಾಗಿದೆ.

#### ೧. ಕಮ್ಯುನಿಸ್ಟ್ ಮಾದರಿಯ ಭೂ ಹೋರಾಟ

ಮಾರ್ಕ್ಸ್ ಸೈದ್ಧಾಂತಿಕ ನೆಲೆಯಲ್ಲಿ ಕಮ್ಯುನಿಸ್ಟ್ ಪಾರ್ಟಿಯು ಭಾರತದಲ್ಲಿ ಶಸ್ತ್ರಾಸ್ತ್ರಗಳ , ಕ್ಷಿಪ್ರಕ್ರಾಂತಿಯ ಮೂಲಕ ಭೂಸಮಸ್ಯೆಗೆ ಪರಿಹಾರ ಕಂಡುಕೊಳ್ಳಬಹುದೆಂಬ ಆಶಯ ಹೊತ್ತು ಹೋರಾಟ ನಡೆಸಿತು. ಇಂತಹ ಮಾದರಿಯಾಗಿ ಆಂಧ್ರದ ತೆಲಂಗಾಣದಲ್ಲಿ ೧೯೪೬ರಿಂದ ೫೧ವರೆಗೆ ನಡೆದ ರೈತ ಹೋರಾಟವನ್ನು ಗಮನಿಸಬಹುದಾಗಿದೆ. ಇಲ್ಲಿನ ಜಮೀನ್ದಾರರು, ಜಹಗೀರುದಾರರು, ಇನಾಂದಾರರು, ದೇಶಪಾಂಡೆ ಮತ್ತು ದೇಶಮುಖರ ವಿರುದ್ಧ ಇಲ್ಲಿನ ರೈತರು ಹೋರಾಟ ನಡೆಸಿದರು. ಭೂಮಾಲೀಕರು ಸಾವಿರಾರು, ಲಕ್ಷಾಂತರ ಎಕರೆ ಭೂಪ್ರದೇಶವನ್ನು ಹೊಂದಿದ್ದು, ಭೂ ಹೀನ ರೈತರು ಹೋರಾಟದ ಮೂಲಕ ಭೂಮಿಯನ್ನು ಪಡೆದರು. ಇದೇ ರೀತಿ ಕೇರಳದಲ್ಲಿ ನಡೆದ ರೈತಹೋರಾಟಗಳು ಕೂಡಾ ಇಂತಹ ಮಾದರಿಯನ್ನು ಹೊಂದಿವೆ.

#### ೨. ಸಮಾಜವಾದಿ ನೆಲೆಯ ಭೂ ಹೋರಾಟ

ಸಮಾಜವಾದಿ ನೆಲೆಯ ಭೂಹೋರಾಟಗಳು ಅಹಿಂಸಾತ್ಮಕ ನೆಲೆಯ ಗಾಂಧಿಮಾರ್ಗವನ್ನು ಅನುಸರಿಸಿ ಭೂ ಸಮಸ್ಯೆಗೆ ಪರಿಹಾರ ಸೂಚಿಸಲು ಯತ್ನಿಸಿದವು. ಇದು ರೈತರ ಸಾಮಾಜಿಕ ಅಸಮಾನತೆಯನ್ನು ಹೊಡೆದೋಡಿಸಿ ಸಮಾನ ನೆಲೆಯಲ್ಲಿ ಸಮಾನ ಹಕ್ಕು, ಜಾತ್ಯಾತೀತ ಮನೋಧರ್ಮದ ಮೂಲಕ ಸರ್ವರಿಗೂ ಸಮಪಾಲು ಸಮಬಾಳು ಎಂಬ ಸೈದ್ಧಾಂತಿಕ ತಳಹದಿಯ ಮೂಲಕ ಪರಿಹಾರ ಸೂಚಿಸಲು ಯತ್ನಿಸಿತು. ಇಂತಹ ಯತ್ನಗಳು ಕರ್ನಾಟಕದಲ್ಲಿ ನಡೆದುದನ್ನು ಗಮನಿಸಬಹುದು. ೧೯೫೧ ರಲ್ಲಿ ನಡೆದ ಕಾಗೋಡು ಸತ್ಯಾಗ್ರಹ, ೧೯೭೩ರಲ್ಲಿ ನಡೆದ ಸಂಡೂರು ಸತ್ಯಾಗ್ರಹಗಳನ್ನು ಪ್ರಮುಖವಾಗಿ ಗಮನಿಸಬಹುದಾಗಿದೆ.

#### ೩. ಭೂ ದಾನ ಚಳುವಳಿ

ಜಗತ್ತಿನಲ್ಲಿಯೇ ಇದೊಂದು ಮಾದರಿ ಹೋರಾಟವಾಗಿದೆ. ಇದರ ರೂವಾರಿಯಾಗಿದ್ದ ವಿನೋಬಾರವರು ಗಾಂಧಿಯ ಅನುಯಾಯಿಯಾಗಿ, ಗಾಂಧಿ ಮಾದರಿ ಹೋರಾಟವನ್ನು ರೂಪಿಸಿದರು. ಇಲ್ಲಿ ಹೆಚ್ಚುವರಿ ಭೂಮಿಯನ್ನು ಭೂಮಾಲೀಕರಿಂದ ಮನಃಪರಿವರ್ತನೆಯ ಮೂಲಕ ದಾನವಾಗಿ ಪಡೆದು, ಭೂಹೀನರಿಗೆ ಭೂಮಿಯನ್ನು ಹಂಚುವುದು, ಭೂಧಾನಯಜ್ಞ ಚಳುವಳಿ ಮೂಲಕ, ಭೂ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಯತ್ನಿಸಿರುವುದನ್ನು ಕಾಣುತ್ತೇವೆ. ವಿನೋಬಾ ಭಾವೆಯವರು ಅಹಿಂಸಾತ್ಮಕ ಮತ್ತು ಶಾಂತಿ ಮಾರ್ಗದ ಮೂಲಕ ಭೂಸಮಸ್ಯೆಗೆ ಪರಿಹಾರ ಸೂಚಿಸಲು ಯತ್ನಿಸಿದರು. ಆದರೆ ಈ ಭೂದಾನ ಯಜ್ಞಕ್ಕೆ ಆರಂಭದಲ್ಲಿ ಉತ್ತಮ ಪ್ರತಿಕ್ರಿಯೆ ದೊರಕಿತು.

ಉಳ್ಳವರಿಂದ,ಭೂಮಾಲೀಕರಿಂದ ಭೂಮಿಯನ್ನು ಶಾಂತಿ ಮತ್ತು ಅಹಿಂಸಾತ್ಮಕ ಹಾಗೂ ಮನವೊಲಿಕೆಯ ಮೂಲಕ ಹೋರಾಟವನ್ನು ರೂಪಿಸಿರುವುದನ್ನು ಕಾಣಬಹುದು.

**೪. ಕಾನೂನು ನೆಲೆಯ ಭೂ ಹಂಚಿಕೆಯ ಮಾದರಿ**

ಪ್ರಜಾಸತ್ತಾತ್ಮಕ ಸರ್ಕಾರ ಸಂಸದೀಯ ಮಾದರಿಯ ಭೂಸುಧಾರಣಾ ಕಾನೂನು ರಚಿಸಿ ಭೂಮಿಯನ್ನು ಸಮಾನವಾಗಿ ಹಂಚುವುದು. ಈ ಮೂಲಕ ಭೂ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ಒಂದು ಮಾದರಿಯನ್ನಾಗಿ ಸೂಚಿಸಿತು. ಸ್ವತಂತ್ರಭಾರತದ ಆಡಳಿತ ಸರ್ಕಾರವು "ಉಳುವವನೆ ,ನೆಲದೊಡೆಯ"ಎಂಬಂತಹ ಘೋಷಣೆಯ ಮೂಲಕ ಭೂ ಸಮಸ್ಯೆಗೆ ಪರಿಹಾರಕಂಡುಕೊಳ್ಳಲು ಯತ್ನಿಸಿತು.ಇದಕ್ಕಾಗಿ ಮದ್ರಾಸ್ ಟೆನನ್ಸಿ ಆಕ್ಟ್, ಬಂಗಾಳದ ಟೆನೆನ್ಸಿ ಆಕ್ಟ್, ೧೯೫೨ರ ಮೈಸೂರಿನ ಟೆನೆನ್ಸಿ ಆಕ್ಟ್, ಕರ್ನಾಟಕದ ೧೯೬೫ ರ ಭೂ ಸುಧಾರಣಾ ಶಾಸನಗಳು ರಚನೆಯಾಗಿರುವುದನ್ನು ಗಮನಿಸಬಹುದು.೧೯೭೪ರಲ್ಲಿ ದೇವರಾಜ ಅರಸು ಅವರು ತಮ್ಮ ಕ್ರಾಂತಿಕಾರಕ ಭೂಸುಧಾರಣಾ ಕಾಯ್ದೆಯ ತಿದ್ದುಪಡಿಯನ್ನು ೧೯೭೪ರಲ್ಲಿ ಜಾರಿಗೊಳಿಸಿದರು.

**೫. ನಕ್ಸಲ್ ಮಾದರಿಯ ಭೂ ಹೋರಾಟ**

ಈ ಮಾದರಿಯ ಹೋರಾಟವು ಕಮ್ಯುನಿಸ್ಟ್‌ರಂತೆ ಗೆರಿಲ್ಲಾ ಸಶಸ್ತ್ರ ಹೋರಾಟ, ರಕ್ತಕ್ರಾಂತಿಯಿಂದ ಉಳ್ಳವರಿಂದ ಕಿತ್ತು, ಬಡವರಿಗೆ ಹಂಚುವುದರ ಮೂಲಕ ಭೂ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಯತ್ನಿಸಿತು. ಈ ಮಾದರಿಯ ಹೋರಾಟಗಳು ೧೯೬೭ರಲ್ಲಿ ನಡೆದ ಪಶ್ಚಿಮ ಬಂಗಾಳದ ಉತ್ತರ ಭಾಗದ ಜಿಲ್ಲೆಯಾದ ಡಾರ್ಜಿಲಿಂಗ್ ಪ್ರದೇಶದಲ್ಲಿ ನಡೆದಿದೆ. ೧೯೬೮ ರಿಂದ ೭೦ರವರೆಗೆ ನಡೆದ ಆಂಧ್ರಪ್ರದೇಶದ ಶ್ರೀಕಾಕುಲುಂನ ನಕ್ಸಲೀಯ ಹೋರಾಟವು ಕೂಡ ಇದೇ ಮಾದರಿಯಲ್ಲಿತ್ತು. ಪ್ರಸ್ತುತ ಕರ್ನಾಟಕದಲ್ಲಿ ಚಿಕ್ಕಮಗಳೂರು, ಮಂಗಳೂರು ಮತ್ತು ಶಿವಮೊಗ್ಗ ಮಲೆನಾಡು ಪ್ರದೇಶಗಳಲ್ಲಿ ಹೋರಾಟ ನಡೆಯುತ್ತಿದೆ. ಆಂಧ್ರದಲ್ಲಿ ನಡೆಯುತ್ತಿರುವ ನಕ್ಸಲ್ ಹೋರಾಟಗಳು ಇದೇ ಮಾದರಿಯನ್ನು ಒಳಗೊಂಡಿವೆ. ಇಂತಹ ಹೋರಾಟಗಳು ಚೀನಾದ ಮಾವೋ ಸಿದ್ಧಾಂತದ ಪ್ರೇರಣೆಯನ್ನು ಪಡೆದಿವೆ.

ಈ ಮಾದರಿಗಳು ಜಗತ್ತಿನ ಭೂ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಯತ್ನಿಸಿವೆ.ಆದರೆ ಇವು ಎಷ್ಟರಮಟ್ಟಿಗೆ ಪರಿಣಾಮಕಾರಿ ಮತ್ತು ಸೂಕ್ತ ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ಅಭ್ಯಸಿಲಾಗುವುದು. ಪ್ರಸ್ತುತ ಇಲ್ಲಿ ಭೂ ಒಡೆತನ ಪರಿಕಲ್ಪನೆ ಮತ್ತು ಒಡೆತನದ ಅಂಶಗಳು ಪುರಾಣದಲ್ಲಿ, ಆಧುನಿಕ ಸಂದರ್ಭದಲ್ಲಿ ಹೇಗೆ ಗ್ರಹಿಸಲಾಗಿದೆ ಎಂಬುದನ್ನು ಗುರುತಿಸಲು ಯತ್ನಿಸಲಾಗುವುದು.

**೨.೩.೪. ಭೂ ಒಡೆತನದ ಸ್ವರೂಪಗಳು**

ಈ ಭೂ ಒಡೆತನ ಸಮಸ್ಯೆ ಅಂದು ಇತ್ತು, ಈಗಲೂ ಇರುವುದರಿಂದ ಭೂ ಒಡೆತನದ ಪ್ರಶ್ನೆಗಳು ಬೇರೇ ಬೇರೆ ಕಾಲದಲ್ಲಿ ಬೇರೆ ರೀತಿಯದಾದ ಸ್ವರೂಪದಲ್ಲಿ ವ್ಯಕ್ತವಾಗಿವೆ. ಈ ಹಿನ್ನೆಲೆಯಲ್ಲಿ ಭೂ ಒಡೆತನ ಎನ್ನುವುದು ಇಂದು ನಿನ್ನೆಯದಲ್ಲ ಎಂಬುದನ್ನು ಗಮನದಲ್ಲಿರಿಸಿಕೊಂಡು, ಭೂ ಒಡೆತನದ ಅಂಶಗಳು ಬೇರೆ ಬೇರೆ ಕಾಲದಲ್ಲಿ ಬೆಳೆದು ಬಂದ ಬಗೆಯನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ವೇದ ಕಾಲಗಳಿಂದಲೇ ಭೂ ಒಡೆತನದ ಸ್ವರೂಪ ವ್ಯಕ್ತವಾಗಿರುವುದನ್ನು ಕಾಣುತ್ತೇವೆ. ವೇದ ಕಾಲದಲ್ಲಿ ಪಿತ್ರಾರ್ಜಿತ ಆಸ್ತಿಯ ಒಡೆತನ ಹೆಣ್ಣು ಮತ್ತು ಗಂಡಿಗೂ ಸಮಾನವಾಗಿ ದಕ್ಕುತ್ತಿತ್ತು. ಆನಂತರದಲ್ಲಿ ಆಸ್ತಿ ಹಕ್ಕು ಗಂಡಿಗೆ ಸ್ಥಿರಾಸ್ತಿ ಹೆಣ್ಣಿಗೆ ಚರಾಸ್ತಿಗಳಾದ ಒಡವೆ,ಹಸು ಮುಂತಾದ ವಸ್ತುಗಳನ್ನು ನೀಡುವ ಪದ್ಧತಿ ಅಸ್ತಿತ್ವಕ್ಕೆ ಬಂದಿತು. ಆನಂತರದಲ್ಲಿ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಆಸ್ತಿ ಪುರುಷನ ಆಜನ್ಮ ಹಕ್ಕಾಗಿ ಅಸ್ತಿತ್ವ ಪಡೆಯಿತು. ಭೂಮಿಯ ಮೇಲೆ ಖಾಸಗಿ ಒಡೆತನ ಹುಟ್ಟಿಕೊಂಡ ದಿನದಿಂದಲೇ ಸಹಜವಾಗಿ ಭೂ ಒಡೆತನ ಅಸ್ತಿತ್ವಕ್ಕೆ ಬಂದುದನ್ನು ಕಾಣುತ್ತೇವೆ. ಭೂ ಒಡೆತನ ಎಂಬುದು ಒಂದು ಪ್ರದೇಶದ ಆಡಳಿತವನ್ನು ನಿಯಂತ್ರಿಸುವ ಶಕ್ತಿಯಾಗಿ ರಾಜನಲ್ಲಿ ಕೇಂದ್ರೀಕೃತವಾಗಿದ್ದವು. ಈ ರಾಜರು ಯುದ್ಧದಲ್ಲಿ ಗೆದ್ದು ಆ ಭೂ ಪ್ರದೇಶವನ್ನು ವಶಪಡಿಸಿಕೊಂಡು ಆಡಳಿತ ನಡೆಸುವ ಪದ್ಧತಿಯನ್ನು ಕಾಣುತ್ತೇವೆ. ಒಬ್ಬರಾಜ ಆ ಎಲ್ಲಾ ಭೂಭಾಗಕ್ಕೆ ಒಡೆಯನಾಗಿದ್ದ ಪದ್ಧತಿ ಇತ್ತು.

೧. ರಾಮಾಯಣದಲ್ಲಿ, ಕೈಕೇಯಿ ತನ್ನ ಮಗ ಭರತನಿಗೆ ರಾಜ್ಯದ ಒಡೆತನವನ್ನು ದೊರಕಿಸಿಕೊಡುವುದಕ್ಕಾಗಿ,

ದಶರಥ ತನಗೆ ಯಾವಾಗಲೋ ಕೊಟ್ಟಿದ್ದ ಮಾತನ್ನು ಈ ಸಂದರ್ಭದಲ್ಲಿ ಬಳಸಿಕೊಳ್ಳುವ ಮೂಲಕ ಪ್ರಯತ್ನಿಸುತ್ತಾಳೆ. ಈ ಪ್ರಯತ್ನದ ಹಿಂದೆ ರಾಜ್ಯದ ಒಡೆತನದ ಆಸೆ ಅಧಿಕಾರದ ದಾಹ ಇರುವುದನ್ನು ಕಾಣಬಹುದು. ಈ ಪ್ರಕ್ರಿಯೆಯಲ್ಲಿ ಅವಳು ಸಫಲಳಾದರೂ,ಕೌಟುಂಬಿಕ ವಿಘಟನೆಯಲ್ಲಿ ಅದು ಕೊನೆಗೊಳ್ಳುತ್ತದೆ. ಮತ್ತು ಆದರ್ಶ ಮೌಲ್ಯಗಳ ಪ್ರಶ್ನೆ ಮುಖ್ಯವಾಗಿ ಕೊನೆಗೂ ರಾಮನಿಗೇ ಒಡೆತನ ದಕ್ಕುತ್ತದೆ. ರಾಮನ ವನವಾಸಕ್ಕೆ ಹಾಗೂ ದಶರಥನ ಸಾವು,ಸಾವಿನ ನಂತರದ ಎಲ್ಲಾ ದುರಂತಗಳಿಗೂ ಭೂ ಒಡೆತನದ ಪ್ರಶ್ನೆಯೇ ಮುಖ್ಯವಾಗುವುದನ್ನು ರಾಮಾಯಣದಲ್ಲೂ ಕಂಡುಬರುತ್ತದೆ.

೨. ಮಹಾಭಾರತದ ಆರಂಭದಲ್ಲೇ ಶಂತನು ತಾನು ಮದುವೆಯಾಗಬಯಸಿದ ಸತ್ಯವತಿಯನ್ನು ಭೀಷ್ಮನಿಗೆ ನೆಲದ ಒಡೆತನ ತಪ್ಪುತ್ತದೆಂದು ಏಕ ಮಾತ್ರ ಕಾರಣದಿಂದ ಮದುವೆಯಾಗಲಾರದೆ ಅವಳ ಆಸೆಯನ್ನು ಬಿಡದೆ ಕೊರಗುತ್ತಾನೆ. ಇಂಥ ಸಂದರ್ಭದಲ್ಲಿ ಭೀಷ್ಮನೇ ಮುಂದಾಗಿ ಸತ್ಯವತಿಯ ತಂದೆಯನ್ನು ಕಂಡು ಅವನ ಷರತ್ತಿಗೆ ತಾನು ಒಪ್ಪಿರುವುದಾಗಿಯೂ ಸತ್ಯವತಿಯ ಗರ್ಭದಲ್ಲಿ ಜನಿಸಿದ ಮಕ್ಕಳಿಗೆ ಒಡೆತನವನ್ನು ಕೊಡುವುದಾಗಿಯೂ ತನ್ನ ಮಕ್ಕಳು ಒಡೆತನಕ್ಕೆ ಹೋರಾಟ ನಡೆಸಬಹುದೆಂಬ ಸಂಶಯ ಸತ್ಯವತಿಯ ತಂದೆಗಿದ್ದರೆ, ತಾನು ಆ ಜನ್ಮ ಬ್ರಹ್ಮಚಾರಿಯಾಗಿಯೇ ಬದುಕುವುದಾಗಿಯೂ ಪ್ರತಿಜ್ಞೆ ಮಾಡುತ್ತಾನೆ. ಇಲ್ಲೂ ಕೂಡಾ ಭೂಮಿಯ ಪ್ರಶ್ನೆ ಕೌಟುಂಬಿಕ ಸಂಬಂಧಗಳ ಮೇಲೆ ಬೀರುವ ಪರಿಣಾಮಗಳು ಚಿತ್ರಿತವಾಗಿವೆ. ಭೀಷ್ಮ ಆಯುಷ್ಯ ಪೂರ್ತಿ ಬ್ರಹ್ಮಚಾರಿಯಾಗಿಯೇ ಬದುಕಲು ಭೂ ಒಡೆತನದ ಪ್ರಶ್ನೆಯೇ ಕಾರಣವಾಗುತ್ತದೆ.

೩. ಮಹಾಭಾರತದಲ್ಲಿ ಭೂಮಿಯನ್ನು ಧನ ಸಂಪತ್ತಿನಂತೆಯೇ ಜೂಜಿನಲ್ಲಿ ಪಣಕ್ಕಾಗಿ ಇಡಲಾಗುತ್ತದೆ. ಅದನ್ನು ಸೋತ ಧರ್ಮರಾಯ ದುರ್ಯೋಧನನಿಗೆ ಅದನ್ನು ಬಿಟ್ಟುಕೊಡುವುದು ಅನಿವಾರ್ಯವಾಗುತ್ತದೆ. ಜೂಜಿನಲ್ಲಿ ಸೋತು ದುರ್ಯೋಧನನ ಆದೇಶದಂತೆ ವನವಾಸ ಅಜ್ಞಾತವಾಸಗಳನ್ನು ಮುಗಿಸಿ ಬಂದರೂ ಪಾಂಡವರಿಗೆ ದಕ್ಕಬೇಕಾದ ಭೂಮಿಯನ್ನು ಕೊಡಲು ದುರ್ಯೋಧನ ನಿರಾಕರಿಸುತ್ತಾನೆ. ಇದು ಕುರುಕ್ಷೇತ್ರ ಯುದ್ಧಕ್ಕೆ ಪ್ರಮುಖ ಕಾರಣವಾಗುತ್ತದೆ. ಪಾಂಡವರಿಗೆ ನ್ಯಾಯವಾಗಿ ದಕ್ಕಬೇಕಾದ ಭೂ ಒಡೆತನದ ಹಕ್ಕಿನ ನಿರಾಕರಣೆ ಈ ಯುದ್ಧಕ್ಕೆ ಕಾರಣವಾಗುವುದನ್ನು ಮಹಾಭಾರತ ಕಟ್ಟಿಕೊಡುತ್ತದೆ. ಭೂ ಒಡೆತನದ ಮಹತ್ವಾಕಾಂಕ್ಷೆಯೇ ಮಹಾಭಾರತದ ಯುದ್ಧ ನಡೆದು ಅಸಂಖ್ಯಾ ಜೀವಿಗಳ ಸಾವು ನೋವಿಗೆ ಕಾರಣವಾಗುವುದನ್ನು ಮಹಾಭಾರತ ನಿರೂಪಿಸುತ್ತದೆ.

ಪ್ರಾಚೀನ ಭಾರತದಲ್ಲಿ ಭೂ ಒಡೆತನ ಬಹುಪಾಲು ಮೇಲ್ವರ್ಗದವರ ಹಿಡಿತದಲ್ಲಿರುತ್ತಿತ್ತು. ಕೆಳವರ್ಗದವರು, ಗೇಣಿದಾರರು ಮತ್ತು ಸಣ್ಣರೈತರು ಭೂಮಾಲೀಕರ ಶೋಷಣೆಯಿಂದ ಬಲಿಯಾಗುತ್ತಿದ್ದರು. ಈ ಕಾಲಕ್ಕೆ ದಲಿತರಿಗೆ ಭೂ ಒಡೆತನಕ್ಕೆ ಸಂಬಂಧಿಸಿದಂತೆ ಎಂ.ಚಿದಾನಂದಮೂರ್ತಿಯವರು "ಕರ್ನಾಟಕದ ಯಾವ ಶಾಸನದಲ್ಲಾಗಲಿ ಸಾಹಿತ್ಯ ಕೃತಿಯಲ್ಲಾಗಲಿ ಹೊಲೆಯರು ಭೂಮಿಗೆ ಒಡೆಯರಾಗಿದ್ದರೆಂಬುದಕ್ಕೆ ಯಾವುದೇ ಸೂಚನೆಯೂ ಇಲ್ಲ. ವೃತ್ತಿಯಾಗಿ ವ್ಯವಸಾಯ ಅವರಿಗೆ ನಿಷಿದ್ಧ. ಆ ಕಾರಣದಿಂದಲೇ ಅವರು ಹಸು, ಎತ್ತುಗಳನ್ನು ಸಾಕುತ್ತಿದ್ದರೆಂಬುದಕ್ಕೂ ಸೂಚನೆಗಳು ಇಲ್ಲ. ಅವರು ಎಂದಿನಿಂದಲೂ ಹೊಲಗಳಲ್ಲಿ ಕೆಲಸ ಮಾಡುವ ಜೀತದಾಳುಗಳು. ಗೌಡರ ಅಥವಾ ಹಳ್ಳಿಯ ಪ್ರಬಲ ರೈತಾಪಿ ಮನೆಗಳಿಗೆ ಒಂದೊಂದು ಹೊಲೆಯರ ಕುಟುಂಬ ಸೇರುವೆಯಾಗಿದ್ದು ರೈತನ ಯಾವುದೇ ಕೆಲಸವನ್ನು ಅವನು ಮಾಡಿಕೊಡಬೇಕು. ಅವನನ್ನು `ಆಳ್ಮಗ'ಎಂದೂ ಕೆಲವೆಡೆ ಕರೆಯುವುದುಂಟು.

ಆದರೆ ಸಕಲೇಶಪುರ ಪ್ರದೇಶದಲ್ಲಿರುವ ಗಡ್ಡೆ ಮಂಡೆ ಪದ್ಧತಿಯ ಸ್ವರೂಪವನ್ನು ಇಲ್ಲಿ ತಿಳಿಯುವುದು ಪ್ರಸ್ತುತವಾಗಿದೆ. ಊರಿನ ಗೌಡನ ಕೆಲಸಕ್ಕೆ ಮೀಸಲಾದ ಕಟ್ಟಾಳು ಹೊಲೆಯರು ಇರುತ್ತಾರೆ. ಹುಟ್ಟಿನಿಂದಲೇ ಅವರು ಗೌಡನ ಮನೆಯ ಆಳಾಗುತ್ತಾರೆ ಮದುವೆ ಸಾವು, ಗೃಹ ಪ್ರವೇಶ ಇತ್ಯಾದಿಗಳಲ್ಲಿ ಹುಟ್ಟಾಳುವಿನ ಪಾತ್ರ ಗಣನೀಯವಾದುದು. ಗೃಹಪ್ರವೇಶದ ದಿನ ಬಲಿ ತೆಗೆಯಲು ಹಾಕಿದ ಅನ್ನವನ್ನು ಹುಟ್ಟಾಳು ಹೊಲೆಯನು ಗೌಡನ ಯಾವ ಗದ್ದೆಗೆ ಹಾಕುತ್ತಾನೋ ಅದು ಹುಟ್ಟಾಳು ಹೊಲೆಯನ ಸಂತತಿಯ ಆಸ್ತಿಯಾಗುತ್ತದೆ. ಗೌಡ ಸತ್ತಾಗ, ಅವನ ಸ್ವಂತ ಮಗನಿಗಿಂತ ಮಿಗಿಲಾದ ಪಾತ್ರ ಹುಟ್ಟಾಳಿನದು. ಆ ದಿನ ಅವನು ಗಡ್ಡ ಮಂಡೆಗಳನ್ನು ನುಣ್ಣಗೆ ಬೋಳಿಸಿಕೊಳ್ಳುತ್ತಾನೆ. (ಆ ಕಾರಣ ಅವರನ್ನು ಗಡ್ಡ ಮಂಡೆ ಒಕ್ಕಲಿನವರು ಅನ್ನುತ್ತಾರೆ.) ಹೀಗೆ ಗಡ್ಡ ಮಂಡೆ ತೆಗೆಸಿಕೊಂಡಾದ ಮೇಲೆ ಸ್ನಾನ ಮಾಡಿ ತಲೆಗೆ ಎಣ್ಣೆ ಹಚ್ಚಿಕೊಂಡು ಗೌಡರ ಮನೆಯವರು ಕೊಟ್ಟ ಹೊಸ ಬಟ್ಟೆ ಉಟ್ಟು, ಶವದ ಹತ್ತಿರ ಕುಳಿತಿರುತ್ತಾನೆ. ಶವದ ಬಾಯಿಗೆ ಇಟ್ಟ ತಾಂಬೂಲವನ್ನು ಗಡ್ಡ ಮಂಡೆ ಹೊಲೆಯನಿಗೆ

ಕೊಟ್ಟಾಗ ಅವನು ಅಗಿದು ಅದನ್ನು ಗೌಡನ ಯಾವ ಗದ್ದೆಗೆ ಉಗಿಯುತ್ತಾನೋ ಅದು ಅವನಿಗೆ ಸೇರುತ್ತದೆ. ಹನ್ನೊಂದನೆಯ ದಿನದ ತಿಥಿಗೆ ಅವನು ಬಂದಾಗ ಅವನಿಗೆ ಗೌಡ ಬಳಸುತ್ತಿದ್ದ ಹಾಸಿಗೆ ಹೊದಿಕೆ, ತಟ್ಟೆ ಲೋಟ ಬಟ್ಟೆ ಕೊಟ್ಟು ಕಳಿಸುತ್ತಾರೆ."[೮] ಇಲ್ಲಿ ದಲಿತರಿಗೆ ಭೂ ಒಡೆತನವನ್ನು ಅತ್ಯಂತ ನಿಕೃಷ್ಟವಾಗಿ ನೀಡುವ ಪದ್ಧತಿಯನ್ನು ಕಾಣುತ್ತೇವೆ.

ಕಾಲಕ್ರಮೇಣ ಭೂ ಒಡೆತನದ ಆಶಯಗಳು ಅರಸಕೇಂದ್ರಿತವಾಗತೊಡಗಿದವು. ಇಲ್ಲಿ ನೂರಾರು ಹಳ್ಳಿಗಳ ಕೇಂದ್ರ ಬಿಂದುವಾಗಿ ಒಬ್ಬ ಶಕ್ತಿಶಾಲಿ ಅರಸ, ಅಥವಾ ಪಾಳೇಗಾರ ಭೂಮಿಗೆ ಒಡೆಯನಾಗಿ ಆ ಭೂ ಪ್ರದೇಶದ ಒಡೆತನ ಪಡೆಯುವುದನ್ನು ಕಾಣುತ್ತೇವೆ. ಈ ಅರಸ ತನ್ನ ಕ್ಷೇತ್ರದ ಭೂ ವ್ಯಾಪ್ತಿಯನ್ನು ಕೇಂದ್ರೀಕರಿಸಿಕೊಂಡು ಆ ಪ್ರದೇಶದಲ್ಲಿ ವಾಸಿಸುವ ಜನರನ್ನು ತನ್ನ ಅಂಕೆಯಲ್ಲಿಟ್ಟುಕೊಂಡು ಆಡಳಿತ ನಡೆಸುವುದನ್ನು ನೋಡುತ್ತೇವೆ. ಯಾವುದೇ ಒಂದು ಪ್ರಾಂತ್ಯದ ಒಬ್ಬ ರಾಜ ಯುದ್ಧ ಮಾಡಿ ಗೆದ್ದನೆಂದರೆ ಆ ಭೂಭಾಗವೆಲ್ಲವೂ ಆ ರಾಜನ ಒಡೆತನಕ್ಕೆ ಸೇರ್ಪಡೆಯಾಗುತ್ತಿತ್ತು. ಈ ರಾಜರ ಆಡಳಿತದಲ್ಲಿ ಕೃಷಿ ವ್ಯವಸ್ಥೆ ತಂದ ಪರಿವರ್ತನೆಯಾಗಲಿ, ದುಡಿಯುವ ವರ್ಗದ ಜೀವನ ಚಿತ್ರಣವಾಗಲೀ ಅಥವಾ ರೈತರು ಪ್ರಧಾನವಾಹಿನಿಯಲ್ಲಿ ಕಾಣಿಸದೇ ಇರುವುದ್ನು ಗಮನಿಸಬಹುದಾಗಿದೆ. ಇಲ್ಲಿ ರಾಜರು ಮತ್ತು ಪಾಳೆಯಗಾರರು ಭೂಮಿಯ ಒಡೆಯರಾಗಿದ್ದು, ನಂತರದಲ್ಲಿ ಭೂಮಾಲೀಕರು, ಜಮೀನ್ದಾರರು, ವ್ಯಾಪಾರಿಗಳು, ರೈತರು, ಗೇಣಿದಾರರು, ಜೀತದಾಳುಗಳ ವರ್ಗ ಸೃಷ್ಟಿಯಾಗಲು ಕಾರಣವಾಯಿತು.

ಆಧುನಿಕ ಸಂದರ್ಭದ ಭೂ ಒಡೆತನವು ಕಾನೂನು ಸ್ವರೂಪ ಪಡೆದು, ಖಾಸಗಿ ಅಸ್ತಿತ್ವವನ್ನು ಕಾನೂನು ಬದ್ಧಗೊಳಿಸುವ ಪ್ರಕ್ರಿಯೆಯಾಗಿ ರೂಪುಗೊಂಡಿತು. ಭಾರತದಲ್ಲಿ ಮೊಗಲರ ನಂತರ,ಕರ್ನಾಟಕದಲ್ಲಿ ಟಿಪ್ಪುವಿನ ನಂತರ ಒಡೆತನ ಅಸ್ತಿತ್ವ ಹೊಸ ರೂಪ ಪಡೆಯಿತು. ಬ್ರಿಟಿಷರು ಜಾರಿಗೆ ಭೂಒಡೆತನ ನೀತಿಗಳು, ಭೂಒಡೆತನ ಹೊಸ ಚೌಕಟ್ಟನ್ನು ಕಲ್ಪಿಸಿದವು. ವಸಾಹತು ಕಾಲದ ಭೂ ಸಂಬಂಧಗಳು ಬೇರೆ ಬೇರೆ ಪ್ರದೇಶದಲ್ಲಿ ಬೇರೆ ಬೇರೆ ರೂಪಗಳಲ್ಲಿದ್ದವು. ಅವುಗಳೆಂದರೆ ಜೋಡಿದಾರರು,ಇನಾಂದಾರರು,ಜಮ್ಮಾದಾರರು, ಜಹಗೀರುದಾರರು, ವಾರದಾರರು, ಗುತ್ತಿಗೆದಾರರು, ಒಳಗಂದಾಯ, ಗೇಣಿಪದ್ಧತಿ ಮುಂತಾದ ಭೂಸಂಬಂಧಗಳು ಇದ್ದವು. ಸ್ವಾತಂತ್ರ್ಯೋತ್ತರ ಭಾರತದ ಭೂಸುಧಾರಣಾ ನೀತಿಗಳು ಭೂ ಒಡೆತನಕ್ಕೆ ಕಾನೂನಿನ ತಳಹದಿಯನ್ನು ನೀಡಿದವು. ಇದಕ್ಕೆ ಕಾನೂನಿನ ಚೌಕಟ್ಟಿನ ಅಧಿಕೃತತೆ ಬಂದರೂ, ಈ ಮೊದಲಿದ್ದ ಊಳಿಗಮಾನ್ಯಶಾಹಿ ವ್ಯವಸ್ಥೆಯ ಮನೋಧರ್ಮಗಳು ಬದಲಾಗದೆ ಹಾಗೆಯೇ ಉಳಿದವು. ಪಾಳೇಗಾರಿಕೆಯ ಅಂಶವಾದ ಬಿಟ್ಟಿ ದುಡಿಮೆ,ಜೀತ ಪದ್ಧತಿ, ಬಡ್ಡಿ ವ್ಯಾಪಾರ, ಜಾತಿಪದ್ಧತಿಯ ಸಾಮಾಜಿಕ ಅಂತಸ್ತುಗಳು, ಅಸ್ಪೃಶ್ಯತೆ ಮುಂತಾದ ಸಾಮಾಜಿಕ ಅನಿಷ್ಟಗಳು ತುಂಬಿರುವುದನ್ನು ಕಾಣುತ್ತೇವೆ. ಇಂತಹ ವ್ಯವಸ್ಥೆಯಿಂದ ಹೊಸ ಸಮಸ್ಯೆಗಳು ಭೂಮಿಯೊಂದಿಗೆ ತಳುಕುಹಾಕಿಕೊಂಡು, ಜಾತಿ, ವರ್ಗಗಳು, ಏಣಿಶ್ರೇಣಿಗಳು ಹುಟ್ಟಿಕೊಂಡಿವು. ಈ ಹಿನ್ನೆಲೆಯಲ್ಲಿ ಭೂ ಒಡೆತನ ಕುರಿತಾದ ಪರಿಭಾಷೆಯಯಾಗಿ ಊಳಿಗಮಾನ್ಯಶಾಹಿ ಪ್ರಶ್ನೆ, ದಬ್ಬಾಳಿಕೆಯ ಪ್ರಶ್ನೆ, ಪ್ರತಿಷ್ಠೆಯ ಪ್ರಶ್ನೆ, ಶೋಷಣೆಯ ಪ್ರಶ್ನೆಗಳು ಮುಖ್ಯವಾದವು. ಇಂಥ ಅಂಶಗಳು ಕ್ರಾಂತಿಗೆ, ಚಳುವಳಿಗೆ ಕಾರಣವಾಗಿರುವುದಲ್ಲದೆ ಮತ್ತು ಸೃಜನಶೀಲ ಕೃತಿಗಳು ಹುಟ್ಟುವುದಕ್ಕೆ ಮುಖ್ಯ ಪ್ರೇರಣೆಗಳಾಗಿವೆ.

ಆಧುನಿಕ ಸಂದರ್ಭದ ಭೂಮಾಲೀಕನೆಂದರೆ ಯಾರು ಎಂಬ ಪ್ರಶ್ನೆ ಉತ್ತರ ಕಂಡುಕೊಳ್ಳಬೇಕಾಗಿದೆ. ಇಲ್ಲಿ ಭೂಮಾಲೀಕತ್ವ ಗುರುತಿಸುವ ಮಾನದಂಡವಾದರೂ ಯಾವುದು ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಇಲ್ಲಿ ಯಾರು ಕೃಷಿಯ ಮೂಲಕ ಇತರರ ಶ್ರಮವನ್ನು ಶೋಷಿಸುತ್ತಾನೋ ಆತನನ್ನು ಭೂಮಾಲೀಕ ಎಂದು ಗುರುತಿಸಬಹುದಾಗಿದೆ. ಈ ಭೂಮಾಲೀಕ ತನ್ನ ಶ್ರಮವನ್ನು ವ್ಯಯಿಸದೆ, ಮಾರುಕಟ್ಟೆಯ ಮೇಲಿನ ಹಿಡಿತದಲ್ಲಿಟ್ಟುಕೊಂಡು ದೊಡ್ಡ ಭೂಹಿಡುವಳಿಯಿಂದ ಮೇಲುಸ್ತುವಾರಿ ನೋಡಿಕೊಳ್ಳುವ ವ್ಯಕ್ತಿಯನ್ನು ಭೂಮಾಲೀಕ ಎಂದು ಗುರುತಿಸಬಹುದು.ಭಾರತೀಯ ಸಂದರ್ಭದಲ್ಲಿ ಪಾಳೇಗಾರಿಕೆಯ ಬೇರು ಭೂಮಾಲೀಕರು ಎಂಬುದನ್ನು ಈಗಾಗಲೇ ಕಂಡುಕೊಳ್ಳಲಾಗಿದೆ.ಈ ಭೂಮಾಲೀಕತ್ವದ ಶೋಷಣೆಯ ಸ್ವರೂಪ ಮತ್ತು ಜಾತಿಯಾಧಾರದ ಮೇಲೂ ಭೂಮಾಲೀಕರು ಗೇಣಿದಾರ ರೈತನನ್ನು ಶೋಷಿಸುತ್ತಿದ್ದುದು ಕಂಡುಬರುತ್ತದೆ.

### ೨.೩.೫ ರೈತ ಹೋರಾಟ ಸ್ವರೂಪ

ಆಧುನಿಕ ಕನ್ನಡ ಕಥನದಲ್ಲಿ ಭೂಮಿ ಮತ್ತು ರೈತರ ನಡುವೆ ಅವಿನಾಭಾವ ಸಂಬಂಧವಿದೆ. ಭೂಮಿ

ಸಮಸ್ಯೆ ಇದ್ದಲ್ಲಿ ರೈತ ಸಮಸ್ಯೆ ಇದ್ದಂತೆಯೇ, ಭೂಮಿಯನ್ನು ಹೊರತುಪಡಿಸಿ ರೈತನಿಲ್ಲ. ಹೀಗಾಗಿ ರೈತ ಎಂಬ ಶಬ್ದವನ್ನು ಪರಿಕಲ್ಪನಾತ್ಮಕ ನೆಲೆಯಲ್ಲಿ ಅರ್ಥೈಸಲಾಗುವುದು.

ರೈತ ಮತ್ತು ಭೂಮಿಯ ಅಂತರ್‌ಸಂಬಂಧವು, ಬೇಸಾಯವನ್ನೇ ನಂಬಿ ಬದುಕುವ ನೆಲೆಯನ್ನು ಸೂಚಿಸುತ್ತದೆ. ರೈತನ ಅಸ್ತಿತ್ವಕ್ಕೆ ಭೂಮಿಯೇ ಮೂಲಧಾರವಾಗಿದೆ. ಇದು ಆತನ ಭೂ ವ್ಯವಸಾಯ ಸಂಬಂಧಗಳನ್ನು ಗಟ್ಟಿಗೊಳಿಸಿದೆ. ರೈತನಿಗೆ ಭೂ ಒಡೆತನ ಎಂದಿನಿಂದ ಖಾಸಗಿ ಹಕ್ಕಾಯಿತೋ, ಅಂದಿನಿಂದಲೇ ರೈತ ಭೂಮಿಯನ್ನು ತನ್ನ ಅಸ್ತಿತ್ವದ ಪ್ರಶ್ನೆಯಾಗಿ,ಪ್ರತಿಷ್ಠೆಯ ಪ್ರಶ್ನೆಯಾಗಿ ಭಾವಿಸಿದ್ದಾನೆ. ಈ ಅಸ್ತಿತ್ವದ ಪರಿಣಾಮವಾಗಿ ಭೂಮಿ ಮತ್ತು ರೈತ ಸಂಬಂಧಗಳು ಉಂಟಾಗಿ ಸಾಮಾಜಿಕ ಬದುಕಿನಲ್ಲಿ ಅಸಮತೋಲನಗಳಿಂದಾಗಿ ಸಂಘರ್ಷಗಳು ಏರ್ಪಟ್ಟಿವೆ. ರೈತ ಎಂಬ ಪರಿಕಲ್ಪನೆಯನ್ನು ಮೊದಲು ಸ್ಪಷ್ಟಪಡಿಸಿ ಕೊಳ್ಳುವುದು ಅಗತ್ಯ.

### ೧. ರೈತರೆಂದರೆ ಯಾರು?

`ರೈತ' ಪರಿಕಲ್ಪನೆ ವಿಶಾಲತಳಹದಿಯ ಹಾಗೂ ಬಹು ಸಂಕೀರ್ಣಸ್ವರೂಪವನ್ನು ಒಳಗೊಂಡಿದೆ. ರೈತರಲ್ಲಿ ಹಲವು ಬಗೆಯ ಭಿನ್ನಸ್ತರಗಳಿದ್ದಂತೆ,ಅವರ ಸಮಸ್ಯೆಗಳು ಕೂಡಾ ಬೇರೆಬೇರೆಯಾಗಿವೆ. ಆದ್ದರಿಂದ ರೈತ ವಿವಿಧ ಸ್ತರ ರೈತ ಪರಿಕಲ್ಪನೆಯು ಸರಳವಾಗಿ ಅರ್ಥೈಸುವುದು ಸಾಧುವಲ್ಲ. ಹಾಗಾದರೆ ರೈತರೆಂದು ಯಾರು ಎಂಬುದನ್ನು ತೀರ ಸಂಕುಚಿತ ಅರ್ಥದಲ್ಲಿ ಹೇಳುವುದಾದರೆ ತಾವೇ ಕೃಷಿಯಲ್ಲಿ ತೊಡಗಿರುವವರು.ಇವರಲ್ಲಿ ಚಿಕ್ಕಹಿಡುವಳಿ ಇರುವ ಬೇಸಾಯಗಾರರು,ಭೂಮಾಲೀಕರಿಗೆ ಗೇಣಿ ಕೊಟ್ಟು ಬೇಸಾಯ ಮಾಡುವ ರೈತರು,ಕೋರಪಾಲು ರೈತರು,ಲಾವಣಿ ಮಾಡಿಸುವ ಮಧ್ಯಮ ರೈತರು ಸೇರುತ್ತಾರೆ.ಈ ಹಿನ್ನೆಲೆಯಲ್ಲಿ ರೈತ ವರ್ಗವವನ್ನು ಈ ಕೆಳಕಂಡ ಸಮಸ್ಯೆಗಳ ಗ್ರಹಿಕೆಯ ದೃಷ್ಟಿಯಿಂದ ಪರಿಶೀಲಿಸಬಹುದಾಗಿದೆ.ಇದಕ್ಕೂ ಮುನ್ನ ರೈತರ ವಿವಿಧ ತಜ್ಞರ ಅಭಿಪ್ರಾಯವನ್ನು ಸ್ಥೂಲವಾಗಿ ಚರ್ಚಿಸಲಾಗಿದೆ.

ಚೇಂಬರ್ಸ್ ಶಬ್ದಕೋಶದ ಪ್ರಕಾರ "ಭೂ ಒಡೆಯನಾಗಿ, ಇಲ್ಲವೇ ಭೂ ಒಡೆಯನಿಗಾಗಿ, ಹಳ್ಳಿಯಲ್ಲಿದ್ದುಕೊಂಡು ಕೃಷಿ ಕೂಲಿಕಾರನಾಗಿ ಭೂ ಸಾಗುವಳಿ ಮಾಡುವವನು ರೈತ ಎಂದಿದೆ. ಒಂದು ರೀತಿಯಲ್ಲಿ ಭೂ ಸಾಗುವಳಿ ಮಾಡಿ ಅದರ ಮೇಲೆ ಉಪಜೀವಿಸುವವನು ಇಲ್ಲವೇ ಅದಕ್ಕೆ ಹತ್ತಿರವಾದವನು ರೈತ." ಎಂದು ಅರ್ಥೈಸಿದೆ.

"ರೈತರೆಂದರೆ ತಾವೇ ಪ್ರತ್ಯಕ್ಷವಾಗಿ ಬೇಸಾಯದಲ್ಲಿ ತೊಡಗಿರುವವರು, ಇವರಲ್ಲಿ ಚಿಕ್ಕಹಿಡುವಳಿ ಹೊಂದಿದ ಬೇಸಾಯಗಾರರೂ, ಭೂಮಾಲೀಕರಿಗೆ ಗೇಣಿಕೊಟ್ಟು ಬೇಸಾಯ ಮಾಡುವ ಗೇಣಿರೈತರೂ, ತಾವು ಬೆಳೆದ ಬೆಳೆಯಲ್ಲಿ ಪಾಲುಮಾಡಿಕೊಡುವ ಕೋರಪಾಲು ರೈತರೂ, ಸ್ವಲ್ಪಭೂಮಿ ತಾವೇ ಬೇಸಾಯ ಮಾಡಿ ಉಳಿದುದನ್ನು ಲಾವಣಿ ಮಾಡಿಸುವ ಮಧ್ಯಮ ರೈತರೂ ಸೇರುತ್ತಾರೆ. ರೈತಾಪಿ ಪರಿಕಲ್ಪನೆಯನ್ನು ವ್ಯಾಪಕವಾಗಿ ತೆಗೆದುಕೊಂಡರೆ ಆಯಗಾರರನ್ನೂ,ಕೃಷಿ ಕೂಲಿಗಾರರನ್ನು ರೈತರೆಂದು ಕರೆದುಕೊಳ್ಳಬಹುದಾಗಿದೆ."[೧]

ರೈತ ಪರಿಕಲ್ಪನೆಗೆ ಇದುವರೆಗೂ ಖಚಿತವಾದ ವ್ಯಾಖ್ಯಾನ ಇಲ್ಲದಿದ್ದರೂ, ಈ ಹಿಂದೆ ಗ್ರಹಿಸಿರುವ ವಿವಿಧ ರೈತ ಪರ ಸಂಘಟನೆಗಳು ಅರ್ಥೈಸಿಕೊಂಡಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ರೈತ ಎಂಬ ಶಬ್ದವನ್ನು ವರ್ಕರ್ಸ್ ಅಂಡ್ ಪೆಸೆಂಟ್ ಪಾರ್ಟಿಯು "ರೈತರೆಂದರೆ ತನ್ನ ಭೂಮಿಯನ್ನು ತಾನೇ ಕೆಲಸ ಮಾಡುವ ಮತ್ತು ೩೦ ಎಕರೆಗಿಂತ ಕಡಿಮೆ ಭೂಮಿಯನ್ನು ಹೊಂದಿದವರು ಕೃಷಿ ಕಾರ್ಮಿಕರು, ಗ್ರಾಮೀಣ ಕುಶಲ ಕರ್ಮಿಗಳು ಹಾಗೂ ಮೀನುಗಾರರನ್ನು ಸೇರಿಸಿಯೇ ರೈತರನ್ನು ಸಂಘಟಿಸಬೇಕು"[೨] ಎಂದು ನಿರ್ವಚಿಸಿದೆ.

ಈ ಮೇಲಿನ ನಿರ್ವಚನವನ್ನು ಗಮನಿಸಿದಾಗ, ಈ ಶ್ರೇಣೀಕೃತ ಗ್ರಾಮ ವ್ಯವಸ್ಥೆಯಲ್ಲಿ ಕೆಳಹಂತದಲ್ಲಿದ್ದ ಎಲ್ಲ ಕಾರ್ಮಿಕರನ್ನೂ ರೈತ ಕಲ್ಪನೆಯ ನೆಲೆಯಲ್ಲಿ ನೋಡಿರುವುದನ್ನು ಕಾಣುತ್ತೇವೆ. ಇದೇ ಕಾಲಕ್ಕೆ ಶ್ರೀಮಂತ ರೈತರನ್ನು, ವಾಣಿಜ್ಯ ಬೆಳೆಗಾರರನ್ನು ಅದು ತನ್ನ ರೈತಾಪಿ ಪರಿಕಲ್ಪನೆಯ ವ್ಯಾಪ್ತಿಯಿಂದ ಹೊರಗಿಟ್ಟಿದೆ. ಇದರಿಂದಾಗಿ ವರ್ಕರ್ಸ್ ಅಂಡ್ ಪೆಸೆಂಟ್ ಪಾರ್ಟಿ ಎಲ್ಲಾ ವರ್ಗ ವ್ಯವಸ್ಥೆಯಲ್ಲಿ ಸ್ವಂತ ಜಮೀನುಳ್ಳವರನ್ನು, ಸಣ್ಣ ಪ್ರಮಾಣದ ಭೂಮಿ ಹೊಂದಿರುವವರನ್ನು ಗೇಣಿದಾರರು ಎಂದು ಗುರುತಿಸಿದೆ. ಬಡ ರೈತರು ಮತ್ತು ಕೃಷಿ ಕಾರ್ಮಿಕರೆಲ್ಲರನ್ನು ರೈತರೆಂದು ಪರಿಗಣಿಸಿರುವುದು ಪೆಸೆಂಟ್ ಪಾರ್ಟಿಯ ಪ್ರಮುಖ ಆಶಯವಾಗಿದೆ.

ಮಹಾರಾಷ್ಟ್ರದ ಶೇತ್ಕಾರಿ ಸಂಘಟನೆಯ ರೈತನಾಯಕ ಶರದ್‌ಜೋಷಿ ಹೇಳುವಂತೆ "ಯಾರು ತನ್ನ ಭೂಮಿಯನ್ನು ಸ್ವತಃ ಉಳುತ್ತಾನೋ ಅವನೇ ರೈತ. ಯಾರು ಕೃಷಿಯೊಂದಿಗೆ ಸಂಬಂಧ ಇಟ್ಟುಕೊಂಡಿದ್ದಾರೋ ಅಥವಾ ಕೃಷಿಯಿಂದಲೇ ಬದುಕುತ್ತಿದ್ದಾರೋ ಅವರೂ ರೈತರೇ"[೧೧] ಎಂಬ ನಿಲುವನ್ನು ಸ್ಪಷ್ಟಪಡಿಸಲು ಯತ್ನಿಸಿದ್ದಾರೆ. ಆದರೆ ಈ ವ್ಯಾಖ್ಯಾನ ಕುರಿತಂತೆ ಲೇಖಕ ಮುಝಾಫರ್ ಅಸ್ಸಾದಿಯವರು ತಾತ್ವಿಕ ಭಿನ್ನಾಭಿಪ್ರಾಯಹೊಂದಿದ್ದಾರೆ. `ರೈತ' ಎನ್ನುವ ಪದವನ್ನು ಅರ್ಥೈಸುವಾಗ ದ್ವಂದ್ವಗಳನ್ನು ಉದ್ದೇಶಪೂರ್ವಕವಾಗಿಯೇ ಇಟ್ಟುಕೊಂಡಿದೆ ಎಂದು ವಿಶ್ಲೇಷಿಸಿದ್ದಾರೆ. ಏಕೆಂದರೆ "ಇಲ್ಲಿ ಉಳುವವನು, ಉಸ್ತುವಾರಿ ಮಾಡುವವನು, ಜಮೀನುದಾರಿಕೆ ಮಾಡುವವನು, ಶ್ರೀಮಂತ ರೈತ ಮತ್ತು ಬಡ ರೈತರ ನಡುವೆ ಏನೂ ಅಂತರಗಳಿಲ್ಲ."[೧೨] ಎಂದು ಪ್ರತಿಕ್ರಿಯಿಸಿದ್ದಾರೆ. ಇಲ್ಲಿ ಅಸ್ಸಾದಿಯವರು ಶೇತ್ಕಾರಿ ಸಂಘಟನೆಯ ಗೊಂದಲವನ್ನು ಗುರುತಿಸಿದ್ದಾರೆ.

ಈ ಮೇಲಿನ ಅಭಿಪ್ರಾಯಗಳನ್ನು ಪರಿಶೀಲಿಸಿದರೆ ರೈತರೆಂದರೆ ಯಾರು? ಎಂಬುದರ ಬಗ್ಗೆ ಇದುವರೆಗೂ ಯಾವುದೇ ಖಚಿತವಾದ ನಿಲುವಿಗೆ ಬಂದಂತಿಲ್ಲ. ಆದರೆ ಈ ಅಧ್ಯಯನವು ರೈತರೆಂದರೆ ಭೂಮಿಯೊಂದಿಗೆ ಹಾಗೂ ವ್ಯವಸಾಯ ಉತ್ಪನ್ನದಲ್ಲಿ, ತನ್ನ ಶ್ರಮವನ್ನು ತೊಡಗಿಸಿಕೊಂಡಿರುವ ವ್ಯಕ್ತಿಯನ್ನು ರೈತ ಎಂದು ಅರ್ಥೈಸಿಕೊಂಡಿದೆ. ಈ ರೈತ ಪರಿಕಲ್ಪನೆಯ ಧೋರಣೆ ಕಾಲ ಕಾಲಕ್ಕನುಗುಣವಾಗಿ ಬದಲಾಗುತ್ತ ಬಂದಿರುವುದನ್ನು ಕಾಣುತ್ತೇವೆ. ಆದ್ದರಿಂದ ಈ ಅಧ್ಯಯನದಲ್ಲಿ ಕಂಡುಕೊಂಡ ರೈತ ಕಲ್ಪನೆಯನ್ನು ವಿವರಿಸಲೆತ್ನಿಸಲಾಗಿದೆ. ಇಲ್ಲಿ ಕೃಷಿ ಕೂಲಿಕಾರ್ಮಿಕ, ಅತಿ ಸಣ್ಣ ರೈತ, ಸಣ್ಣ ರೈತ, ಮಧ್ಯಮ ರೈತ, ಶ್ರೀಮಂತ ರೈತ, ಭೂಮಾಲೀಕ ರೈತ, ಬಂಡವಾಳಶಾಹಿ ಭೂಮಾಲೀಕ ಎಂಬ ಪರಿಕಲ್ಪನೆಯನ್ನಿಟ್ಟುಕೊಂಡು ಅಭ್ಯಸಿಸಲಾಗಿದೆ.

ರೈತ ಪ್ರಶ್ನೆಗಳು ಒಂದಕ್ಕೊಂದು ಪೂರಕವಾಗಿರುವಂತೆ, ರೈತ ಸಮುದಾಯವು ಹಲವು ಸ್ತರಗಳಲ್ಲಿ ಭೂಮಿಯೊಂದಿಗೆ ಅಂತರ್‌ಸಂಬಂಧಗಳನ್ನು ಹೊಂದಿವೆ. ಹೀಗಾಗಿ "ವ್ಯಕ್ತಿ ಅಥವಾ ಕುಟುಂಬ ಒಂದಲ್ಲಾ ಒಂದು ಬಗೆಯಲ್ಲಿ ಕೃಷಿ ಚಟುವಟಿಕೆಯಲ್ಲಿ ಮತ್ತು ಭೂಮಿಯೊಂದಿಗೆ ಅಂತರ್‌ಸಂಬಂಧದೊಂದಿಗೆ ಸಂವಾದಿಸುವ ಪ್ರಕ್ರಿಯೆಯನ್ನು ರೈತ "ಎಂಬುದಾಗಿ ಈ ಅಧ್ಯಯನ ಒಪ್ಪಿಕೊಂಡಿದೆ. ಈ ಹಿನ್ನೆಲೆಯಲ್ಲಿ ರೈತ ಪರಿಕಲ್ಪನೆಯ ಮೂಲಕ ರೈತರೆಂದರೆ ಯಾರು ಎಂಬುದನ್ನು ಈ ಕೆಳಗಿನ ಅಂಶಗಳಿಂದ ಅರ್ಥೈಸಿಕೊಳ್ಳಲು ಯತ್ನಿಸಿದೆ.

೧. ತನ್ನದೇ ಆದ ಭೂಮಿಯನ್ನು ಹೊಂದಿರದ, ಇತರರ ಭೂಮಿಯಲ್ಲಿ ದುಡಿಮೆಮಾಡಿ ಬರುವ ಒಂದು ನಿರ್ದಿಷ್ಟಮೌಲ್ಯದ ಸಂಪಾದನೆಯಲ್ಲಿ ತನ್ನ ಜೀವನ ನಡೆಸುವವನು, ಕೃಷಿ ಕೂಲಿಕಾರ್ಮಿಕ.

೨. ಯಾವ ರೈತನಲ್ಲಿ ತುಂಡು ಭೂಮಿ ಇದೆಯೊ, ಅದು ಬಂಜರು ಭೂಮಿಯಾಗಿದೆಯೊ,ಅದರಿಂದ ಬರುವ ಉತ್ಪನ್ನದಿಂದ ಅವನ ಮತ್ತು ಅವನ ಕುಟುಂಬದ, ತುತ್ತಿನ ಚೀಲ ತುಂಬಿಸಲು ಸಾಧ್ಯವಿಲ್ಲವೊ. ಅಂಥ ರೈತ ಸ್ವಂತ ಭೂಮಿಯನ್ನು ಇಟ್ಟುಕೊಂಡಿದ್ದರೂ, ಕೃಷಿಕಾರ್ಮಿಕನಂತೆ ದುಡಿಯುವ ವ್ಯಕ್ತಿ. ಈತನನ್ನು ಅತಿ ಸಣ್ಣ ರೈತ ಎನ್ನಬಹುದು.

೩. ಸ್ವಂತ ಭೂಮಿಯನ್ನು ಹೊಂದಿದ್ದು, ತಾನೇ ಸ್ವತಃ ಉಳುಮೆ ಮಾಡಿ ತನ್ನ ಭೂಮಿಯಲ್ಲಿ ದುಡಿಯುವ ಮತ್ತು ಸಂಪೂರ್ಣವಾಗಿ ತನ್ನ ಕುಟುಂಬದ ಸದಸ್ಯರನ್ನೆಲ್ಲ ಕೃಷಿ ಚಟುವಟಿಕೆಯಲ್ಲಿ ತೊಡಗಿಸಿಕೊಂಡ ವ್ಯಕ್ತಿಯೇ, ಸಣ್ಣ ರೈತ.

೪. ಸ್ವಂತ ಭೂಮಿಯ ಮೂಲಕ ಕೃಷಿಯಲ್ಲಿ ತೊಡಗಿಸಿಕೊಂಡು ಭೂಮಿಯೊಂದಿಗಿನ ದುಡಿಮೆಯ ಸಂಬಂಧ ಹೊಂದಿಯೂ,ನೆರೆಯವರ ಶ್ರಮವನ್ನು (ಮುಯ್ಯಾಳು, ಅಂದರೆ ಶ್ರಮಸಹಕಾರ ವ್ಯವಸಾಯ ಪದ್ಧತಿ)ಪಡೆದು, ಕೃಷಿಚಟುವಟಿಕೆಯಲ್ಲಿ ಭಾಗವಹಿಸುವ ವ್ಯಕ್ತಿ ಮಧ್ಯಮ ರೈತ.

೫. ಕೃಷಿಯಲ್ಲಿ ನೇರವಾಗಿ ಭಾಗವಹಿಸದೇ ಇದ್ದರೂ,ಸಂಪೂರ್ಣವಾಗಿ ಕೃಷಿ ಕೂಲಿಕಾರ್ಮಿಕರನ್ನು ಅವಲಂಬಿಸಿ ಕೃಷಿ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವವನು ಶ್ರೀಮಂತರೈತನೆಂದು ಕರೆಸಿಕೊಳ್ಳುತ್ತಾನೆ. ಆದರೆ ಅವನ ಕುಟುಂಬದ ಅವಿದ್ಯಾವಂತರು , ಮಹಿಳೆಯರು ಕೃಷಿ ಚಟುವಟಿಕೆಯಲ್ಲಿ ಪಾಲ್ಗೊಳ್ಳುತ್ತಾರೆ. ಈ ಕುಟುಂಬದ ಯಜಮಾನ ಮನೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾನೆ. ಈತ ಶ್ರೀಮಂತ ರೈತ.

೬. ನೂರಾರು ಎಕರೆ ಅಥವಾ ಅದಕ್ಕೂ ಹೆಚ್ಚು ಭೂಮಿಯನ್ನು ಹೊಂದಿ ಭೂಒಡೆಯನಾಗಿದ್ದುಕೊಂಡು

ನಗರದಲ್ಲಿಯೇ ವಾಸಿಸುವ ಭೂಮಿಯನ್ನೇ ಬಂಡವಾಳವಾಗಿಸಿಕೊಂಡಿರುವ, ಭೂಮಿಯನ್ನು ಉದ್ಯಮವಾಗಿ ಉತ್ಪನ್ನದ ಕೇಂದ್ರವಾಗಿ ಮಾಡಿಕೊಂಡಿರುವ, ಭೂಮಿಯೊಂದಿಗೆ ಯಾವುದೇ ರೀತಿಯ ನಿಕಟ ಸಂಪರ್ಕವಿಲ್ಲದ, ಇನ್ನುಳಿದ ರೈತ ವರ್ಗಗಳಿಂದ ದುಡಿಸಿಕೊಳ್ಳುತ್ತಾ, ಮಾರುಕಟ್ಟೆಯ ಮೂಲಕ ಶೋಷಿಸುವ ವ್ಯಕ್ತಿಯೇ ಭೂಮಾಲೀಕ ರೈತ.

೭. ಸಂಪೂರ್ಣ ರೈತನಲ್ಲದ, ಆದರೆ ರೈತವ್ಯವಸ್ಥೆಯನ್ನು ತನ್ನ ಹಿಡಿದಲ್ಲಿಟ್ಟುಕೊಂಡಿರುವ ಭೂಮಾಲೀಕ, ಈತ ಜಾಗತಿಕ ಮಾರುಕಟ್ಟೆಯ ಹಿಡಿತ ಸಾಧಿಸುವ ಜಾಗತಿಕ ಬಂಡವಾಳಶಾಹಿ ಭೂಮಾಲೀಕ ಅಥವಾ ಅಥವಾ ಗುತ್ತಿಗೆ ಕೃಷಿಕ ಎನ್ನಬಹುದು. ಶ್ರೀಮಂತ ರೈತರನ್ನು ಭೂಮಾಲೀಕರನ್ನು ಮತ್ತು ಸಣ್ಣರೈತರನ್ನು ಹಾಗೂ ಇತರೆ ಎಲ್ಲಾ ರೈತರನ್ನು ಶೋಷಿಸುವುದು ಈತನೇ. ಈತ ಭೂಮಿಯನ್ನು ಕಾರ್ಖಾನೆಯಾಗಿ,ನೋಡುತ್ತಾನೆ. ಈತ ಈಗಾಗಲೇ ಹೊಸಬಗೆಯಲ್ಲಿ ಮಹಾನಗರಗಳಲ್ಲಿರುವ ರಿಲಯನ್ಸ್ ಪ್ರೆಶ್, ಪ್ರೈಮ್ ಬಯೋ, ಎಸ್ಕಾರ್ಟ್ ಲಿಮಿಟೆಡ್, ಮೆಟ್ರೋ ಕ್ಯಾಶ್ ಅಂಡ್ ಕ್ಯಾರಿದಂತಹ ಸಂಸ್ಥೆಗಳ ಮೂಲಕ ಭಾರತಾದ್ಯಂತ ಬಂಡವಾಳವನ್ನು ತೊಡಗಿಸಿಕೊಂಡಿದ್ದಾನೆ. ಈ ವರ್ಗವೇ ಇಲ್ಲಿನ ಭೂಮಿಯನ್ನು ಕಾರ್ಪೋರೇಟ್ ವ್ಯಾಪಾರ ಕೇಂದ್ರಗಳಾಗಿ, ಉತ್ಪಾದನಾ ಕಾರ್ಖಾನೆಯಾಗಿ ಪರಿವರ್ತಿಸುತ್ತಿವೆ. ಉದಾಹರಣೆಗೆ ಈ ಕಂಪೆನಿಗಳು ಕೃಷಿ ಭೂಮಿಯನ್ನು ಖರೀದಿ ಮಾಡುವುದಿಲ್ಲ. ನೀವೊಬ್ಬ ಕೃಷಿಕನಾಗಿದ್ದರೆ, ಹತ್ತೋ, ಇಪ್ಪತ್ತೋ ಎಕರೆ ಜಮೀನಿದೆ ಎಂದಾದರೆ ಅಲ್ಲಿಗೆ ಪೆಪ್ಸಿ ಫುಡ್ಸ್, ಪ್ರೈಮ್‌ಬಯೋನಂಥ ಖಾಸಗಿ ಕಂಪನಿಗಳು ರೈತರ ಜತೆ ಒಪ್ಪಂದ ಮಾಡಿಕೊಳ್ಳುತ್ತವೆ. ಅಂದರೆ ಕಂಪನಿಗಳು ನಿರ್ದೇಶಿಸಿದ ಉತ್ಪನ್ನೇ ಬೆಳೆಯಬೇಕು. ಈ ರೀತಿ ಬೆಳೆದ ಬೆಳೆಗೆ ಪೂರ್ವಭಾವಿಯಾಗಿ ಬೆಲೆ ನಿಗದಿಗೊಳಿಸಿರುತ್ತವೆ. ಬೆಳೆ ಬಂದ ನಂತರ ನಿಗದಿಯಾದ ಬೆಲೆಯನ್ನು ನೀಡಿ ರೈತರ ಉತ್ಪನ್ನವನ್ನು ಖರೀದಿ ಮಾಡುತ್ತವೆ. ಇದೊಂದು ರೀತಿಯ ಗುತ್ತಿಗೆ ಆಧಾರದ ಕೃಷಿಯಾಗಿದೆ. ಈ ವರ್ಗವನ್ನು ಜಾಗತಿಕ ಸಂದರ್ಭದ ಬಂಡವಾಳಶಾಹಿ ಭೂಮಾಲೀಕ ವರ್ಗ ಅಥವಾ ಗುತ್ತಿಗೆ ಕೃಷಿಕ ಎನ್ನಬಹುದು.

ಭೂಮಾಲೀಕ ಮತ್ತು ಬಂಡವಾಳಶಾಹಿ , ಈ ಎರಡು ವರ್ಗಗಳನ್ನು ರೈತರೆಂದು ಕರೆದುಕೊಳ್ಳಬಹುದೇ? ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಈ ಎರಡು ವರ್ಗಗಳಲ್ಲಿ ಗೇಣಿರೈತರ, ಕೂಲಿಕಾರರ ಶ್ರಮವನ್ನು ಬಂಡವಾಳವಾಗಿ ಬಳಸಿಕೊಂಡು ಕೃಷಿವ್ಯವಸ್ಥೆಯನ್ನು ನಿಯಂತ್ರಿಸುತ್ತವೆ. ಈ ವರ್ಗಗಳು ನೇರವಾಗಿ ನಗರ ಸಂಪರ್ಕವನ್ನು ಹೊಂದಿವೆ. ನಗರ ಪ್ರದೇಶದ ಬೇರೆ ಆದಾಯ ಮೂಲಗಳಿಂದ ಇನ್ನುಳಿದ ರೈತವರ್ಗಗಳನ್ನು ಶೋಷಿಸುತ್ತಿದೆ. ಈ ವರ್ಗಗಳು ಕೃಷಿ ಪದ್ಧತಿಯನ್ನು ಮತ್ತು ಭೂಮಿಯನ್ನು ಬಂಡವಾಳವೆಂದೇ ಪರಿಗಣಿಸಿವೆ.

ಬಂಡವಾಳಶಾಹಿ ಭೂಮಾಲೀಕ ವರ್ಗ ತನ್ನ ಜಾಗತಿಕ ಮಾರುಕಟ್ಟೆಯ ಹಿಡಿತದಿಂದಾಗಿ ಉಳಿದ ಎಲ್ಲಾ ರೈತ ವರ್ಗವನ್ನು ತನ್ನ ಅಂಕೆಯಲ್ಲಿಟ್ಟುಕೊಂಡಿದೆ. ಈ ಬಂಡವಾಳಶಾಹಿ ವರ್ಗವು ಅಂತರರಾಷ್ಟ್ರೀಯ ಮಾರುಕಟ್ಟೆ, ನೇರವಾದ ರಾಜಕೀಯ ಸಂಪರ್ಕ, ಅಧಿಕಾರ ಗದ್ದುಗೆಯ ಸಾಮಿಪ್ಯದಿಂದಾಗಿ ಶೋಷಣೆಗೆ ಹಲವು ದಾರಿಗಳಾಗಿವೆ. ಇತರೆ ವರ್ಗದ ರೈತರನ್ನು ಶೋಷಣೆ ಮಾಡುವುದರಿಂದಾಗಿ ಈಚಿನ ದಿನಗಳಲ್ಲಿ ರೈತರು ಮಹಾನಗರದ ನೌಕರಿಯತ್ತ ಮುಖಮಾಡಿ, ನಗರಮುಖೀ ಬದುಕಿನತ್ತ ಸಾಗುತ್ತಿದ್ದಾರೆ. ಈ ಬಂಡವಾಳಶಾಹಿ ಭೂಮಾಲೀಕ ವರ್ಗವು ಹುಟ್ಟಾ ಗ್ರಾಮೀಣ ಪ್ರದೇಶದಿಂದ ಹೊರತುಪಡಿಸಿ ಲಾಭಕೋರತನದಿಂದ ಅಸ್ತಿತ್ವಪಡೆದಿದೆ. ಇದು ಬೃಹತ್ ಬಂಡವಾಳಶಾಹಿ ಭೂಮಾಲೀಕ ವರ್ಗವಾಗಿದ್ದು, ಇದು ನಗರ ಕೇಂದ್ರಗಳಲ್ಲಿ ಅಸ್ತಿತ್ವ ಪಡೆದು ಮಾರುಕಟ್ಟೆ ಮೇಲೆ ಹಿಡಿತ ಸಾಧಿಸುತ್ತ ಬಂದಿದೆ. ಹೀಗಾಗಿ ಗ್ರಾಮೀಣ ಪ್ರದೇಶದಲ್ಲಿ ಶ್ರೀಮಂತ ರೈತ ಮತ್ತು ಭೂಮಾಲೀಕ ಮತ್ತು ಸಾಮಾನ್ಯರೈತ ಎಂಬ ವ್ಯತ್ಯಾಸವೇ ಇರದಂಥ ಸಮಸ್ಯೆಗಳು ಇಂದು ಎದುರಾಗಿವೆ.

ಸಾಮಾನ್ಯ ರೈತನ ಶ್ರಮವನ್ನು ಮತ್ತು ಬಂಡವಾಳವನ್ನು ಶೋಷಿಸುವುದು ಮೇಲ್ವರ್ಗದ ರೈತ ಸಮುದಾಯದ ಆಂತರಿಕ ಸಮಸ್ಯೆಯಾದರೆ, ವಾಸ್ತವದಲ್ಲಿ ಬಾಹ್ಯವಾಗಿ ಕೃಷಿ ಉತ್ಪನ್ನಗಳ ಬೆಲೆ ಮೊದಲಾದವುಗಳ ಮೂಲಕ ಬಂಡವಾಳಶಾಹಿ ವರ್ಗವು, ಇನ್ನುಳಿದ ಎಲ್ಲಾ ರೈತ ವರ್ಗವನ್ನು ಶೋಷಿಸುತ್ತಿದೆ. ಏಕಕಾಲಕ್ಕೆ ದೇಶೀಯ ಮತ್ತು ಬಾಹ್ಯ ಎರಡೂ ನೆಲೆಯ ಸಮಸ್ಯೆಗಳನ್ನು ಎಲ್ಲ ವರ್ಗದ ರೈತರು ಇಂದು ಎದುರಿಸುತ್ತಿದ್ದಾರೆ.

### ೨.೩.೬ ಗೇಣಿದಾರಿಕೆಯ ಸ್ವರೂಪಗಳು

ಭೂಮಾಲೀಕರ ನೆಲೆಯಿಂದಲೇ ಹುಟ್ಟಿದ ವರ್ಗ ಗೇಣಿದಾರಿಕೆಯಾಗಿದೆ. ಹೀಗಾಗಿ ಶತಮಾನಗಳ ಹಿಂದಿನಿಂದಲೂ ಗೇಣಿದಾರಿಕೆಯು ಅಸ್ತಿತ್ವದಲ್ಲಿದೆ.ಈ ಗೇಣಿದಾರರನ್ನು ಹಲವು ಬಗೆಯಲ್ಲಿ ಭೂಮಾಲೀಕ ಶೋಷಣೆ ಮಾಡುತ್ತಿದ್ದುದನ್ನು ಕಾಣುತ್ತೇವೆ. ಭೂಮಾಲೀಕ ಗೇಣಿದಾರರನ್ನು ಆಗಾಗ್ಗೆ ಒಕ್ಕಲೆಬ್ಬಿಸುವುದರಿಂದ ಗೇಣಿರೈತರ ಬದುಕು ಅತಂತ್ರವಾಗಿರುವುದು ಕಂಡುಬರುತ್ತದೆ. ಹೀಗಾಗಿ ಭೂಮಾಲೀಕರ ಅಧೀನದಲ್ಲಿದ್ದ ಗೇಣಿದಾರರನ್ನು ಒಕ್ಕಲೆಬ್ಬಿಸುತ್ತಿದ್ದರಿಂದ ಅವರಲ್ಲಿ ಅಭದ್ರತೆ ಮನೆಮಾಡಿತ್ತು.

೧೯೫೪ ರಲ್ಲಿ ಒಕ್ಕಲೆಬ್ಬಿಸುವುದರ ವಿರುದ್ಧ ಮದ್ರಾಸ್ ಕಾನೂನನ್ನು ಜಾರಿಗೆ ತರಲಾಯಿತು. ಇದರಿಂದ ಮದ್ರಾಸ್ ಪ್ರಾಂತ್ಯ ಕರ್ನಾಟಕದ ಭೂ ಪ್ರದೇಶಗಳಲ್ಲಿದ್ದ ಗೇಣಿರೈತರು ಭೂಮಾಲೀಕರಿಂದ ರಕ್ಷಣೆ ಪಡೆದರು. ಈ ಕಾಯ್ದೆ ಗೇಣಿರೈತರ ಪರವಾಗಿದ್ದರಿಂದ ಭೂಮಾಲೀಕರಿಗೆ ಅನಾನುಕೂಲವೇ ಆಗಿತ್ತು. ಆದರೆ ಆನಂತರದಲ್ಲಿ ಭೂಮಾಲೀಕರ ಒತ್ತಾಯದ ಮೇರೆಗೆ ೧೯೫೬ ರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿ, ತಿದ್ದುಪಡಿ ಮಾಡಲಾಯಿತು. ಇದರಲ್ಲಿ ಭೂಮಾಲೀಕರು ಉಳುಮೆ ಮಾಡುವುದಾದರೆ, ಗೇಣಿ ರೈತರು ಬಿಟ್ಟುಕೊಡುವಂತಾಯಿತು. ಆದರೆ ಅದು ೧೩ ಎಕರೆಗಿಂತ ಕಡಿಮೆ ಇದ್ದಲ್ಲಿ ಗೇಣಿ ರೈತನೇ ಇಟ್ಟುಕೊಳ್ಳುವಂತೆ ಮಾಡಲಾಯಿತು. ಅಲ್ಲದೆ ೧೩ ಎಕರೆ ಮೇಲ್ಪಟ್ಟು ಇದ್ದಲ್ಲಿ ಗೇಣಿ ರೈತನಿಗೆ ಅರ್ಧಭಾಗ ಭೂಮಿಯನ್ನು ಇಟ್ಟುಕಂಡು ಉಳಿದರ್ಧ ಭಾಗವನ್ನು ಭೂಮಾಲೀಕನಿಗೆ ಬಿಟ್ಟುಕೊಡುವಂತೆ ಮಾಡಲಾಯಿತು. ಈ ಕಾಯ್ದೆಯಂತೆ ಭೂಮಾಲೀಕ ಗೇಣಿದಾರನಿಂದ ಹೆಚ್ಚಿನ ಗುತ್ತಿಗೆ ವಸೂಲು ಮಾಡುವುದರ ವಿರುದ್ಧ ನಿಬಂಧನೆಗಳಿದ್ದವು. ೧೯೬೨ ಭೂಸುಧಾರಣಾ ಕಾಯ್ದೆಯು ಕೂಡಾ ಗೇಣಿದಾರರಿಗೆ ಯಾವುದೇ ರೀತಿಯ ರಕ್ಷಣೆಗೆ ಕ್ರಮ ಕೈಗೊಳ್ಳಲಿಲ್ಲ. ಆದರೆ ೧೯೭೪ರ ಭೂಸುಧಾರಣಾ ಕಾಯ್ದೆಯ ತಿದ್ದುಪಡಿಯ ಮುಖ್ಯವಾಗಿ ಗೇಣಿದಾರರ ಸಮಸ್ಯೆ ಬಗೆಹರಿಸಲು ಯತ್ನಿಸಿತು. ಇದರ ಪರಿಣಾಮವಾಗಿ ಗೇಣಿ ಸಂಪೂರ್ಣ ರದ್ದತಿ ಕಾಯ್ದೆಯನ್ನು ಅನುಷ್ಠಾನಗೊಳಿಸಿತು. ಗೇಣಿಗಳ ವಜಾಗೊಳಿಸಿ ಭೂ ಒಡೆತನ ನೀಡಲು ಯತ್ನಿಸಿತು. ಈ ಕಾಯ್ದೆಯಿಂದಾಗ ಸೈನಿಕರು ಮತ್ತು ನಾವಿಕರು ಹೊರತು ಪಡಿಸಿ ಬೇರೆ ಯಾರಿಗೂ ಗೇಣಿಗೆ ನೀಡಲು ಅವಕಾಶವಿಲ್ಲ. ಇದರಿಂದಾಗಿ ಅನೇಕ ಗೇಣಿದಾರರಿಗೆ ನ್ಯಾಯ ದೊರೆಯಲು ಸಹಕಾರಿಯಾಯಿತು.ಎಂಬುದಾಗಿ ಜಾರಿಗೊಳಿಸಿತು.

ಈ ಗೇಣಿದಾರಿಕೆ ಪದ್ಧತಿ ಕರ್ನಾಟಕದಲ್ಲಿ ಹಲವು ಬಗೆಯಲ್ಲಿ ಹಿಂದೆ ಅಸ್ತಿತ್ವದಲ್ಲಿತ್ತು. ಅವುಗಳೆಂದರೆ, ಮೂಲ ಗೇಣಿ, ಚಲಗೇಣಿ,ವಾಯಿದೆ ಗೇಣಿ, ನ್ಯಾಯಗೇಣಿ ಮುಂತಾದ ಪದ್ಧತಿಗಳು ಅಸ್ತಿತ್ವದಲ್ಲಿದ್ದವು. ಅವುಗಳ ಸ್ವರೂಪ ಕುರಿತು ಸ್ಥೂಲವಾಗಿ ವಿವರಿಸಲಾಗಿದೆ.

೧. ಸರ್ಕಾರದ ಭೂಮಿಯನ್ನು ಗೇಣಿಗೆ ಪಡೆದ ರೈತರು ಮೂಲ ಗೇಣಿದಾರರೆಂದು ಪರಿಗಣಿಸಲಾಗುತ್ತದೆ. ಈ ಪದ್ಧತಿ ಕ್ರಮೇಣ ಒಡೆತನವನ್ನು ಪಡೆದುಕೊಳ್ಳುವ ಮಾರ್ಗವಾಗಿದೆ. ಆದರೆ ಭೂಮಾಲೀಕರಿಂದ ಭೂಮಿಯನ್ನು ಗೇಣಿಗೆ ಪಡೆದು ಬೇಸಾಯ ಮಾಡುವ ರೈತರು ಮೂಲಗೇಣಿದಾರರಾಗಿದ್ದರೂ, ಇವರಿಂದ ಪಡೆದ ಸ್ವಲ್ಪಭಾಗದ ಭೂಮಿ ಮಾತ್ರ ಮೂಲಗೇಣಿದಾರರ ಒಡೆತನಕ್ಕೆ ಸೇರುತ್ತಿತ್ತು.ಈ ಮೂಲ ಗೇಣಿಪದ್ಧತಿಯನ್ನು ಶಾಶ್ವತ ಗೇಣಿ ಪದ್ಧತಿಯಂದೇ ಪರಿಗಣಿಸಲಾಗುತ್ತಿತ್ತು. ಭೂಮಾಲೀಕರಿಗೆ ತಪ್ಪದೆ ಪ್ರತಿವರ್ಷವೂ ಗುತ್ತಿಗೆಕೊಟ್ಟುಕೊಂಡು ವಂಶಪಾರಂಪರ್ಯವಾಗಿ ಅನುಭೋಗಿಸಬಹುದಾಗಿತ್ತು.ಇದೊಂದು ರೀತಿಯಲ್ಲಿ ಮೂಲಗೇಣಿದಾರನಲ್ಲೇ ಹಕ್ಕು ಉಳಿದುಕೊಳ್ಳುವುದಾಗಿದೆ.

೨. ಚಲಗೇಣಿಯು ಭೂಮಿಯ ಮೇಲಿನ ತಾತ್ಕಾಲಿಕ ಗೇಣಿ ಹಕ್ಕನ್ನು ಹೊಂದಿರುವ ಲಕ್ಷಣವನ್ನು ತಿಳಿಸುತ್ತದೆ. ಗೇಣಿ ರೈತನ ಬಳಿ ಯಾವುದೇ ರೀತಿಯ ಒಪ್ಪಂದ ಪತ್ರಗಳಿರುವುದಿಲ್ಲ. ಇದು ಕೇವಲ ನಂಬಿಕೆಯ ವಿಶ್ವಾಸದ ಮೇಲಿನದಾಗಿದೆ. ಭೂಮಾಲೀಕ ಯಾವುದೇ ಕಾರಣವಿಲ್ಲದೆ, ತನಗಿಷ್ಟ ಬಂದಾಗ ಗೇಣಿರೈತನನ್ನು ಒಕ್ಕಲೆಬ್ಬಿಸಬಹುದಾಗಿದೆ.

೩.ವಾಯಿದೆ ಗೇಣಿ ಹೆಸರೇ ಸೂಚಿಸುವಂತೆ ಒಂದು ಗೊತ್ತಾದ ಕಾಲಾವಧಿಯವರೆಗೆ ಭೂಮಿಯನ್ನು ಗೇಣಿದಾರರಿಗೆ ನೀಡುವ ಪದ್ಧತಿಯಾಗಿದೆ.ಇದು ಕೂಡಾ ನಂಬಿಕೆಯ ವಿಶ್ವಾಸದ ಮೇಲೆ ನಿಗದಿಗೊಳಿಸಿದ ಕಾಲಾವಧಿಯ ಗೇಣಿ ಭೂಮಿಯನ್ನು ಪಡೆದು ಬೇಸಾಯ ಮಾಡುವುದಾಗಿದೆ. ಭೂಮಾಲೀಕ ನಿರ್ದಿಷ್ಟ ವಾಯಿದೆ ಮುಗಿದ ಬಳಿಕ

ತನ್ನ ಭೂಮಿಯನ್ನು ವಾಪಸ್ಸು ಪಡೆಯಬಹುದಾಗಿದೆ.

೪. ಗೇಣಿದಾರರು ತಮ್ಮ ಜೀವಿತಾವಧಿಯವರೆಗೂ ಭೂಮಿಯನ್ನು ಪಡೆದು ಬೇಸಾಯ ಮಾಡುವ ಪದ್ಧತಿಯೇ ನ್ಯಾಯಗೇಣಿ. ಭೂಮಾಲೀಕನ ಭೂಮಿಯಲ್ಲಿ ಬೇಸಾಯ ಮಾಡುವ ಗೇಣಿದಾರ ಸತ್ತ ಬಳಿಕ ತನ್ನ ಭೂಮಿಯನ್ನು ಹಿಂದಕ್ಕೆ ಪಡೆದುಕೊಳ್ಳುತ್ತಾನೆ.

### ೨.೩.೭ ರೈತ ಮಹಿಳಾ ಸ್ವರೂಪ

ಭಾರತದಲ್ಲಿ ಭೂಮಿಯನ್ನು ಮಾತೃಸ್ವರೂಪ ಹೆಣ್ಣಿಗೆ ಹೋಲಿಸುವುದಿದೆ. ಭೂತಾಯಿಯನ್ನು ರಕ್ಷಕ ತತ್ವದಲ್ಲಿ ಆಕೆಯು ಮನುಷ್ಯರನ್ನು ಪೊರೆಯುವವಳೆಂದು ಪೂಜ್ಯಭಾವನೆಯಿಂದ ನೋಡಲಾಗಿದೆ. ಭೂ ತಾಯಿಯ ಬಗೆಗಿನ ಕಲ್ಪನೆಗಳು ವೇದಗಳ ಕಾಲದಲ್ಲಿಯೇ ಭೂಮಿಯನ್ನು ದೇವತೆಯಾಗಿ ಪರಿಭಾವಿಸಿ ಪುರುಷ ಪ್ರಧಾನ ಸಮಾಜ ಆರಾಧಿಸಿದೆ. ಜನಪದದ ಹೆಣ್ಣುಮಗಳು ಭೂಮಿಯನ್ನು ತಾಯಿಯ ರೂಪದಲ್ಲಿ ಕಂಡಿದ್ದಾಳೆ."ಬೆಳಗಾಗನಾನೆದ್ದು ಯಾರ್ಯಾರ ನೆನೆಯಲಿ ಎಳ್ಳು ಜೀರಿಗೆ ಬೆಳೆಯೋಳ ಭೂಮ್ತಾಯ ಎದ್ದೊಂದು ಗಳಿಗೆ ನೆನೆದೇನ" ಎಂದು ಹಾಡಿದವಳು ರೈತ ಹೆಣ್ಣುಮಗಳೇ. ಆಕೆ ಭೂತಾಯಿಯನ್ನೇ ನೆನೆಯುತ್ತಾಳೆ.

ಆದ್ದರಿಂದ ರೈತಮಹಿಳೆಗೆ ತಮ್ಮದೇ ಆದ ಚಾರಿತ್ರಿಕ ಮಹತ್ವವಿದೆ. ಆಧುನಿಕ ಸಂದರ್ಭದ ರೈತ ಮಹಿಳೆ ಜಟಿಲ ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ. ಈ ಕುರಿತು ವಂದನಾ ಶಿವಾ ಅವರು ಹೇಳುವಂತೆ, "ಕೃಷಿ ಸಂಬಂಧಿತ ಚಟುವಟಿಕೆಗಳು ಶೇ. ೭೦ರಷ್ಟು ಮಹಿಳೆಯರಿಗೆ ಉದ್ಯೋಗ ನೀಡುತ್ತವೆ. ಹಸಿರುಕ್ರಾಂತಿ ಹಾಗೂ ಏಕಬೆಳೆ ಪದ್ಧತಿ ಅವರನ್ನು ನಾಲ್ಕು ಗೋಡೆಗಳೊಳಗೆ ತಳ್ಳಿದೆ. ಬದಲಾದ ಕೃಷಿ ವಿಧಾನ ಆರ್ಥಿಕ ವ್ಯವಸ್ಥೆಯಲ್ಲಿ ಅವರ ಸ್ಥಾನವನ್ನು ಕಸಿದದ್ದಲ್ಲದೆ, ಅವರ ಆರೋಗ್ಯ ಹಾಗೂ ಮಕ್ಕಳ ಬದುಕನ್ನು ದುರ್ಲಭಗೊಳಿಸಿತು." [೧೩]

ಇಂದಿಗೂ ಕೂಡಾ ಗ್ರಾಮಗಳಲ್ಲಿ ಮಹಿಳೆಯರೇ ಹೆಚ್ಚು ಕೃಷಿ ಕೂಲಿಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಅವರ ಕುಟುಂಬವನ್ನು ಸಂಪೂರ್ಣವಾಗಿ ಸರಿದೂಗಿಸಿಕೊಂಡು ಹೋಗುತ್ತಿರುವವಳು ಮಹಿಳೆಯೇ ಆಗಿದ್ದಾಳೆ. ಕೃಷಿಮಹಿಳೆರು ಇಂದು ಆರ್ಥಿಕವಾಗಿ ಸಂಘಟಿತರಾಗುತ್ತಿದ್ದಾರೆ.ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರು ಸ್ವಸಹಾಯ ಸಂಘದಿಂದ ಆರ್ಥಿಕ ಸಬಲತೆಯನ್ನು ಕಾಣುತ್ತಿದ್ದಾಳೆ. ಇದು ಆಶಾದಾಯಕ ಬೆಳವಣಿಗೆಯಾಗಿದೆ.

"ಜಮೀನಿನಿಂದ ತಟ್ಟೆಗೆ ಆಹಾರ ವರ್ಗಾವಣೆಯಲ್ಲಿ ಮಹಿಳೆಯರು ಪ್ರಮುಖ ಪಾತ್ರವಹಿಸಿದರೂ, ಅವರಿಗೆ ಸಲ್ಲಬೇಕಾದ ನ್ಯಾಯಯುತ ಪಾಲು ಸಿಗುತ್ತಿಲ್ಲ. ಬಹುಪಾಲು ಕೃಷಿ ಕೆಲಸ ಮಾಡುವ ಅವರು ಮನೆಯಲ್ಲಿ ಕೊನೆಗೆ ಉಣ್ಣುತ್ತಾರೆ, ಕನಿಷ್ಠ ಪ್ರಮಾಣದಲ್ಲಿ ಉಣ್ಣುತ್ತಾರೆ." [೧೪] ಈ ಮಾತಿನ ಹಿಂದೆ ಕೃಷಿಯಲ್ಲಿ ಮಹಿಳೆಯ ದುಡಿಮೆಗೆ ಸಮಾನತೆ ನೀಡಬೇಕೆಂಬ ಆಶಯವಿದೆ. ಹಲ ಶತಮಾನಗಳಿಂದ ಪುರುಷ ಪ್ರಧಾನ ಸಮಾಜದಲ್ಲಿ ರೈತಮಹಿಳೆ ಶೋಷಣೆಗೆ ಒಳಗಾಗುತ್ತಿರುವ ಸಂದರ್ಭದಲ್ಲಿ ಇಂಥ ಒತ್ತಾಯಗಳು ಕಂಡುಬರುತ್ತಿವೆ. ಆದ್ದರಿಂದ ಆಕೆ ಸಮಾನತೆಯ ಹಕ್ಕನ್ನು ಪಡೆಯಲು ಯತ್ನಿಸುತ್ತಿದ್ದಾಳೆ.

ವಂದನಾ ಶಿವಾ ಅವರು ರೈತಮಹಿಳೆಯರ ಬಗ್ಗೆ ಗಟ್ಟಿದನಿಯಾಗಿ ಹೇಳಿದವರು. ಮಹಿಳೆಯರ ನೀರಿನ ಬಳಕೆಯನ್ನು, ಕುಟುಂಬಕ್ಕೆ ನೀರನ್ನು ಪೂರೈಸುವ ಬಗೆಗೂ ಸಾಕಷ್ಟು ಚರ್ಚೆ ನಡೆಸಿದ್ದಾರೆ. ನೀರುಬಳಕೆಯಲ್ಲೂ ತಾರತಮ್ಯ ನೀತಿಯನ್ನು ಅನುಸರಿಸುತ್ತಿರುವುದನ್ನು ಅವರು ಗುರುತಿಸುತ್ತಾರೆ. ರೈತಮಹಿಳಾ ಕೂಲಿಕಾರ್ಮಿಕರಿಗೆ ನ್ಯಾಯಯುತವಾದ ದುಡಿಮೆಗ ತಕ್ಕ ಕೂಲಿಯನ್ನು ಇಂದಿಗೂ ನೀಡುತ್ತಿಲ್ಲ. ಪುರುಷ ಮತ್ತು ಮಹಿಳಾ ಕೂಲಿಕಾರ್ಮಿಕರ ದುಡಿಮೆಯ ವೇತನದಲ್ಲಿ ಅಂತರ ಇಂದು ಕಾಣುತ್ತಿದ್ದೇವೆ. ರೈತ ಮಹಿಳೆ ಪುರುಷರಷ್ಟೇ ಸಮಾನವಾಗಿ ದುಡಿಯುತ್ತಿದ್ದಾಳೆ. ಆದರೆ ಆಕೆಗೆ ವೇತನದಲ್ಲಿ ತಾರಮ್ಯನೀತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ರೈತಮಹಿಳೆ ಕುಟುಂಬದಲ್ಲಿ ಗೃಹ ಕೆಲಸ ಕಾರ್ಯಗಳು, ಮಕ್ಕಳನ್ನು ಪೊರೆಯುವ ಕೆಲಸ ಎಲ್ಲವನ್ನೂ ಮುಗಿಸಿಕೊಂಡು ಹೊಲಗದ್ದೆಗಳಲ್ಲಿ ಪುರುಷರಷ್ಟೇ ದುಡಿಯುತ್ತಿರುವುದು ನೋಡಿದಲ್ಲಿ, ಪುರುಷನಿಗಿಂತ ಹೆಚ್ಚು ಶ್ರಮವನ್ನು ವ್ಯಯಿಸುವವಳು ರೈತಮಹಿಳೆಯರೇ ಆಗಿದ್ದಾರೆ.

ಮಲೆನಾಡು ಪ್ರದೇಶಗಳಾದ ಶಿವಮೊಗ್ಗ, ಚಿಕ್ಕಮಗಳೂರು ಭಾಗಗಳಲ್ಲಿ ಮಹಿಳೆಯರು ಅಡಿಕೆಸುಲಿಯುವ ಕೆಲಸದಲ್ಲಿ ರೈತಮಹಿಳೆಯೇ ಮುಖ್ಯವಾಗಿ ಕಾರ್ಯನಿರ್ವಹಿಸುತ್ತಿದ್ದಾಳೆ. ಚಿಕ್ಕಮಗಳೂರು,ಕೊಡಗು ಜಿಲ್ಲೆಗಳಲ್ಲಿ ಕಾಫಿತೋಟಗಳಲ್ಲಿ ಕೆಲಸಮಾಡುವವರು ರೈತಮಹಿಳೆಯರೇ ಆಗಿದ್ದಾರೆ. ಹೀಗೆ ನಾಡಿನ ಹಲವು ಭಾಗಗಳಲ್ಲಿ

ರೈತಮಹಿಳೆಯರು ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಹೊಲಗದ್ದೆಗಳಲ್ಲಿದುಡಿಮೆ ಮಾಡುತ್ತಿದ್ದಾರೆ.

ರೈತಮಹಿಳೆ ಕೃಷಿ ಚಟುವಟಿಕೆಗಳ ಎಲ್ಲದರಲ್ಲೂ ಭಾಗಿಯಾದರೂ, ಕಾನೂನಿನಲ್ಲಿ ಒಡೆತನ ಪಡೆಯುವ ಹಕ್ಕು ಮಹಿಳೆಯರಿಗಿದ್ದರೂ ಭೂಹಕ್ಕನ್ನು ಪಡೆಯಲು ಬಹಳಷ್ಟು ಮಂದಿ ರೈತ ಮಹಿಳೆಯರು ಮುಂದೆ ಬರುತ್ತಿಲ್ಲ. ಇದಕ್ಕೆ ಪುರುಷಪ್ರಧಾನ ಸಮಾಜ ವ್ಯವಸ್ಥೆಯೇ ಕಾರಣವಾಗಿದ್ದು, ಭೂಹಕ್ಕನ್ನು ಕೇಳದಂತೆ ಮಾಡಿದೆ. ೨೧ನೇ ಶತಮಾನದ ರೈತ ಮಹಿಳೆಯ ಪ್ರಶ್ನೆಗಳು ಇಂದಿಗೂ ಜ್ವಲಂತವಾಗಿವೆ.

### ೨.೩.೮ ಜೀತಗಾರಿಕೆ ಮತ್ತು ಮನುಷ್ಯ ಮಾರಾಟದ ಆಶಯಗಳು

ಭೂಮಿ ಮತ್ತು ಶ್ರಮ ಒಂದನ್ನೊಂದು ಬಿಟ್ಟಿರಲಾರದಷ್ಟು ಸಂಬಂಧವನ್ನು ಹೊಂದಿವೆ. ಭೂಮಿಯಲ್ಲಿ ಶ್ರಮ ವ್ಯಯಿಸುವವನು ಕೂಲಿಕಾರ್ಮಿಕ, ಜೀತಗಾರ, ರೈತ. ಈ ಹಿನ್ನೆಲೆಯಲ್ಲಿ ಜೀತಗಾರಿಕೆ ಮತ್ತು ಮನುಷ್ಯಮಾರಾಟದ ಧೋರಣೆಗಳನ್ನು ಇಲ್ಲಿ ಅಧ್ಯಯನ ಮಾಡಲಾಗುವುದು. ಕನ್ನಡ ಕಥನದಲ್ಲಿ ಜೀತ ಸಮಸ್ಯೆಯು ಭೂಮಿಯನ್ನು ಆಧರಿಸಿದ್ದು, ಭೂಸಮಸ್ಯೆಯ ಜೊತೆ ಜೊತೆಗೆ ಜೀತಗಾರರ ಸಮಸ್ಯೆಗಳನ್ನು ಅಧ್ಯಯನ ಮಾಡಲಾಗುವುದು. ಇಲ್ಲಿ ಜೀತಗಾರ ಮತ್ತು ರೈತ ಬೇರೆಬೇರೆಯಲ್ಲ. ಅವು ಒಂದೇ ಪರಿಕಲ್ಪನೆಯೊಳಗೆ ಮತ್ತು ಒಂದೇ ವೃತ್ತಿ ಮನೋಧರ್ಮವನ್ನು ಹೊಂದಿವೆ. ಏಕೆಂದರೆ ರೈತ ಮತ್ತು ಜೀತಗಾರರ ನಡುವೆ ಭೂಮಿಯ ಅಂತರ್‌ಸಂಬಂಧಗಳಿವೆ. ಇವರಿಬ್ಬರ ಕೃಷಿಚಟುವಟಿಕೆಯ ಕಾರ್ಯಗಳು ಒಂದೇ ತೆರನಾಗಿವೆ. ರೈತನಿಗೆ ಸ್ವತಂತ್ರ ಅಸ್ತಿತ್ವವಿದ್ದರೆ, ಜೀತಗಾರನಿಗೆ ತನ್ನದೇ ಆದ ಅಸ್ತಿತ್ವ ಇಲ್ಲದೆ ಭೂಮಾಲೀಕರ ಆಶ್ರಯ ಪಡೆದಿರುತ್ತಾರೆ. ಭೂಮಾಲೀಕರಿಂದ ಜೀತಗಾರನ ಶ್ರಮದ ಶೋಷಣೆಯಾಗುತ್ತದೆ. ಇದು ಸಾಮಾಜಿಕ ಅಸಮಾನತೆಯನ್ನುಂಟುಮಾಡುತ್ತದೆ. ಈ ಕಾರಣಗಳಿಂದಾಗಿ ಸಾಮಾಜಿಕ ಸಂಘರ್ಷಕ್ಕೆ ಹಾಗೂ ಹೋರಾಟಕ್ಕೆ ಕಾರಣವಾಗುತ್ತದೆ.

#### ೧ ಜೀತಗಾರಿಕೆ

ಜೀತಗಾರ ಮತ್ತು ಭೂಮಿಯನ್ನು ಬೇರ್ಪಡಿಸಿ ನೋಡಲು ಸಾಧ್ಯವಾಗದು. ಅಲ್ಲದೆ ಜೀತಗಾರ ಮತ್ತು ಭೂಮಾಲೀಕನ ನಡುವಿನ ಸಂಬಂಧಗಳು ಬಹಳ ಹಿಂದಿನಿಂದಲೂ ಬಂದಿದ್ದು, ಒಡೆಯನ ಆಶ್ರಯದಲ್ಲಿ ಆತ ಬದುಕು ಸಾಗಿಸುತ್ತಾನೆ. ಇಲ್ಲಿ ಭೂಮಾಲೀಕ ಅಥವಾ ಜಮೀನ್ದಾರನ ಆಶ್ರಯದಲ್ಲಿ ಕೃಷಿ ಭೂಮಿಯಲ್ಲಿ ದುಡಿಮೆಗಾರನಾಗಿ ಶ್ರಮಿಸುವವನನ್ನು ಜೀತಗಾರ ಎಂದು ಕರೆಯಲಾಗಿದೆ. ತನ್ನ ಧಣಿಯ ಆದೇಶದಂತೆ ಕೃಷಿ ಕೆಲಸ ಕಾರ್ಯಗಳನ್ನು ಅಥವಾ ಬಿಟ್ಟಿಚಾಕರಿಯನ್ನು ಮಾಡುವ ವ್ಯಕ್ತಿ ಜೀತಗಾರ.

ಜೀತದಾಳುಗಳಿಂದಲೇ ಹಲವು ಭಾಗಗಳಲ್ಲಿ ವ್ಯಕ್ತಿನೆಲೆಯಲ್ಲಿ ಮತ್ತು ಸಮುದಾಯದ ನೆಲೆಯಲ್ಲಿ ಭೂ ಹೋರಾಟ ಹಾಗೂ ಸಂಘರ್ಷಗಳು ನಡೆದಿರುವುದು ಕಂಡುಬರುತ್ತದೆ. ಇದಕ್ಕೆ ಉದಾಹರಣೆಯಾಗಿ ಕಾಗೋಡು ಸತ್ಯಾಗ್ರಹ, ಅಂಕೋಲದ ರೈತ ಹೋರಾಟಗಳನ್ನು ಗಮನಿಸಬಹುದಾಗಿದೆ. ಈ ಜೀತದಾಳುಗಳು ಭೂಮಿಯ ಒಡೆತನದಿಂದ ವಂಚಿತರಾಗಿ ಭೂ ಒಡೆತನದ ಹಕ್ಕನ್ನು ಪಡೆಯುವ ಸಲುವಾಗಿ ಹೋರಾಟ ನಡೆಸಿರುವುದನ್ನು ಕಾಣುತ್ತೇವೆ. ಇಂತಹ ಆಶಯಗಳನ್ನು ವಾಸ್ತವದಲ್ಲೂ ಹಾಗೂ ಸಾಹಿತ್ಯ ಕೃತಿಗಳಲ್ಲೂ ಕಾಣಬಹುದಾಗಿದೆ. ಶೋಷಣೆಯ ವಿರುದ್ಧ ಪ್ರತಿಭಟಿಸುವುದರ ಮೂಲಕ ಭೂ ಹೋರಾಟಗಳಲ್ಲಿ ಭಾಗಿಯಾಗಿರುವುದನ್ನು ಕಾಣುತ್ತೇವೆ. ಭೂಮಾಲೀಕರ ದರ್ಪ ದೌರ್ಜನ್ಯ, ಬಿಟ್ಟಿ ಚಾಕರಿ ವಿರುದ್ಧ, ಜೀತಗಾರ, ಗೇಣಿದಾರ, ಸಣ್ಣ ರೈತರು ಪ್ರತಿಭಟನೆ ನಡೆಸಿದ್ದಾರೆ. ನಿಕಟವಾಗಿ ಭೂ ಸಂಬಂಧವನ್ನು ಹೊಂದಿರುವ ಜೀತಗಾರ ಮೂಲಭೂತವಾಗಿ ರೈತನೇ ಎಂಬುದು ಈ ಅಧ್ಯಯನದ ತೀರ್ಮಾನವಾಗಿದೆ. ಹೀಗಾಗಿ ಜೀತ ಸಮಸ್ಯೆಯು ಕೂಡಾ ರೈತಮೂಲದಿಂದ ಹುಟ್ಟಿದುದಾಗಿದೆ.

#### ೨ ಮನುಷ್ಯ ಮಾರಾಟ

ಹಲವು ದಶಕಗಳ ಹಿಂದೆ ಜೀತದಾಳುಗಳನ್ನು ಪ್ರಾಣಿಗಳಂತೆ ಮಾರಾಟ ಮಾಡುತ್ತಿದ್ದರು. ಈ ಹಿನ್ನೆಲೆಯಲ್ಲಿ ರೈತಸಮುದಾಯದ ಮನುಷ್ಯ, ಮಾರಾಟ ಕುರಿತು ವಿಶ್ಲೇಷಿಸಲಾಗಿದೆ. ಕೆಳವರ್ಗದ ವ್ಯಕ್ತಿಗಳನ್ನು ಮತ್ತು ಜೀತಗಾರರನ್ನು ಮನುಷ್ಯರೆಂದೇ ಭಾವಿಸಿರಲಿಲ್ಲ. ಅವರನ್ನು ಪಶುವಿನಂತೆ ಭೂಮಾಲೀಕರು ನಡೆಸಿಕೊಳ್ಳುತ್ತಿದ್ದರು. ಇಲ್ಲಿ ಆರ್ಥಿಕವಾಗಿ, ಉತ್ಪಾದನೆಯಲ್ಲಿ ಹೆಚ್ಚು ಬಲಾಢ್ಯಗೊಂಡ ಮನುಷ್ಯ, ದುರ್ಬಲ ವ್ಯಕ್ತಿಗಳನ್ನು ಹಸು,ನಾಯಿಗಳಂತೆ ಪಶುಗಳಂತೆ ಮಾರಾಟ ಮಾಡಿದ ದುರಂತವನ್ನು ಕಾಣುತ್ತೇವೆ.

ಚರಿತ್ರೆಯಲ್ಲಿ ತೊತ್ತುಗಳ ಮಾರಾಟವು ನಡೆಯುತ್ತಿದ್ದಿತು ಎಂಬುದಕ್ಕೆ ಶಾಸನಾಧಾರಗಳಿವೆ.ಈ ಕುರಿತು ಎಂ.ಚಿದಾನಂದಮೂರ್ತಿಯವರು ಹೇಳುವಂತೆ "ಬಾಲಚಂದ್ರದೇವನ ತತ್ವ ರತ್ನ ಪ್ರದೀಪಿಕೆಯಲ್ಲಿ ಸ್ಪಷ್ಟವಾಗಿ ತೊತ್ತುಗಳಮಾರಾಟವು ನಡೆಯುತ್ತಿದ್ದುದನ್ನು ಹೇಳಿದೆ"ಅಲ್ಲಿ ತೊಳ್ತಿರುಮಂ ಬಂಟರುಮಂ ಈ ದೇಶದಿಂದೊಯ್ದು ಮತ್ತೊಂದು ದೇಶದೊಳೆ ಮಾರಿದೊಡೆ ಪಿರಿದರ್ಥಲಾಭಮಕ್ಕುಮೆಂದು ನುಡಿವುದು ತಾಂ ಕ್ಲೇಶ ವಣಿಜ್ಯೆ" ಹರಿಶ್ಚಂದ್ರ ತನ್ನ ಹೆಂಡತಿ ಮಗನನ್ನು ಮಾರಾಟಕ್ಕೆ ಇಟ್ಟಾಗ ತಲೆಗೆ ಹುಲ್ಲು ಕಟ್ಟಿದ್ದುದನ್ನು ಹೇಳಿದೆ.("ಪೊಡವಿಪತಿ ಸತಿಸುತರ ತಲೆಗಳಲ್ಲಿ ಹುಲುಗಟ್ಟಿ...) ಬಸವಣ್ಣ "ಕೈಯ ಬೋಹರಿಗೆ, ಮಂಡೆಯ ಮೇಲೆ ಸಿಂಬಿ, ಸಿಂಬಕನ ಮನೆಯ ಮಗ ನಾನಯ್ಯ"(ವಚನ ೩೫೪)ಎಂದು ಹೇಳುವಲ್ಲಿ, `ಸಿಂಬಿ' ಪದ ಹುಲ್ಲಿನ ಸರವಿಯನ್ನು ಹೇಳುವಂತೆ ತೋರುತ್ತದೆ. ದಾಸೀ ವಿಕ್ರಯಪತ್ರವೊಂದರಲ್ಲಿ ತಲೆಯ ಮೇಲೆ ಹುಲ್ಲು ಕಟ್ಟಿಕೊಂಡಿದ್ದ ದಾಸಿಯರ ಬಹಿರಂಗ ಮಾರಾಟದ ವಿಷಯವಿದೆ ಇದು ಉತ್ತರ ಭಾರತದ ದಾಖಲು, ದಾಸರು ಹುಲ್ಲು ತಿನ್ನುವ ಪಶುಗಳಂತೆ ಮಾರಾಟಾರ್ಹರು"[೧೫] ಎಂಬುದು ಇಲ್ಲಿ ಧ್ವನಿತವಾಗುತ್ತದೆ.

ಇಲ್ಲಿ ಮನುಷ್ಯ ಮಾರಾಟದ ಸರಕಾಗಿರುವುದನ್ನು ಗಮನಿಸಿದಾಗ, ಒಂದು ಕಾಲಕ್ಕೆ ಜೀತಗಾರ ವ್ಯಕ್ತಿಗಳನ್ನು ಮಾರಾಟ ಮಾಡಿರುವುದನ್ನು ಗುರುತಿಸುತ್ತೇವೆ. ಮನುಷ್ಯ ಮಾರಾಟವನ್ನು ಕುರಿತು ಪ್ರೊ.ಹಿ.ಚಿ. ಬೋರಲಿಂಗಯ್ಯ ಅವರು ಹೇಳುವಂತೆ "ಗುಲಾಮರನ್ನು ಮೊದಲಿಗೆ ತಂದು ಬಿಜಾಪುರದ ಸುಲ್ತಾನರಿಗೆ ಮಾರಿದವರು ಅರಬರೇ ಹೊರತು ಪೋರ್ಚುಗೀಸರಲ್ಲ ಎಂಬ ವಾದಗಳಿವೆ. ಪ್ರಪಂಚದ ಇತಿಹಾಸದಲ್ಲಿ ಮೊದಲಿಗೆ ಆಫ್ರಿಕಾದ ಗುಲಾಮರನ್ನು ಮಾರಾಟ ಮಾಡಿದವರು ಅರಬರು ಅನ್ನುವುದು ನಿಜವಾದರೂ, ಇಂದು ನಿಗ್ರೋ ಸಿದ್ದಿಗಳು ಇರುವ ಸ್ಥಳಗಳು, ಅವರ ನಡೆನುಡಿಗಳು ಮತ್ತು ಪ್ರಭಾವವನ್ನು ವೀಕ್ಷಿಸಿದವರಿಗೆ ಇವರು ಪೋರ್ಚುಗೀಸರ ಪಾಪದ ಕೂಸುಗಳು ಎಂಬುದು ವೇದ್ಯವಾಗುತ್ತದೆ. ಅವರು ಇರುವುದೆಲ್ಲ ಗೋವಾದ ಆಜುಬಾಜಾದ ಉತ್ತರ ಕನ್ನಡದಲ್ಲಿ.ತಮ್ಮ ವಸಾಹತುವಿನ ಭದ್ರತೆ, ಬೆಳವಣಿಗೆಯ ಹಿನ್ನೆಲೆಯಲ್ಲಿ ಅಪಾರ ಸಂಖ್ಯೆಯ ನಿಗ್ರೋಗಳನ್ನು ಕುರಿ ಮಂದೆಯ ರೂಪದಲ್ಲಿ ಹೊಡೆದು ತಂದವರು ಪೋರ್ಚುಗೀಸರು ಎಂಬುದಕ್ಕೆ ಸಾಕಷ್ಟು ದಾಖಲೆಗಳು ಸಿಗುತ್ತವೆ."[೧೬] ಈ ಅಂಶಗಳು ಗುಲಾಮಗಿರಿ ಅಥವಾ ಜೀತಪದ್ಧತಿಯು ಕರ್ನಾಟಕದಲ್ಲಿ ವ್ಯವಸ್ಥಿತವಾಗಿ ಅಧಿಕೃತವಾಗಿ ನೆಲೆಯೂರಿದುದನ್ನು ಅವರು ಗುರುತಿಸುತ್ತಾರೆ. ಮನುಷ್ಯ ಸಮಾಜವನ್ನು ಮಾರಾಟದ ಸರಕಾಗಿ ಕಂಡಿರುವುದು ವಸಾಹತು ಸನ್ನಿವೇಶದಲ್ಲಿ ಎಂಬುದು ಈ ಮೇಲಿನ ಮಾತುಗಳಿಂದ ದೃಢಪಡುತ್ತದೆ.

ಕ್ರಮೇಣ ಸ್ವಾತಂತ್ರ್ಯೋತ್ತರ ಭಾರತವು ಇಂತಹ ಅನಿಷ್ಠ ಪದ್ಧತಿಯನ್ನು ಹೊಡೆದೋಡಿಸಲು ಹಲವು ದಶಕಗಳನ್ನು ತೆಗೆದುಕೊಂಡಿತು. ಭಾರತ ಸರ್ಕಾರ ಮತ್ತು ರಾಜ್ಯಸರ್ಕಾರಗಳು ಈ ಕುರಿತು ಆಮೂಲಾಗ್ರ ಬದಲಾವಣೆ ತರಲು ಯತ್ನಿಸಿರುವುದನ್ನು ಕಾಣುತ್ತೇವೆ. ಭಾರತ ಸರ್ಕಾರ ಜೀತ ವಿಮುಕ್ತ ಕಾಯ್ದೆಯನ್ನು೧೯೭೬ ರಲ್ಲಿ ಜಾರಿಗೊಳಿಸಿದೆ. ಜೀತಪದ್ಧತಿಯನ್ನು ನಿರ್ಮೂಲನೆಗೊಳಿಸುವ ನಿರ್ದಿಷ್ಟಗುರಿಯನ್ನು ಹೊಂದಿ ಸರ್ಕಾರಗಳು ಕಾರ್ಯನಿರ್ವಹಿಸುತ್ತಿರುವುದನ್ನು ಇಂದು ಕಾಣಬಹುದಾಗಿದೆ.

### ೨.೩.೯ ಪ್ರಾದೇಶಿಕ ನೆಲೆಯಲ್ಲಿ ಭೂ ಪ್ರಶ್ನೆ

ಭೌಗೋಳಿಕವಾಗಿ ಕಥನಕಾರರನ್ನು ಅಥವಾ ಕಥನಗಳನ್ನು ವಿಭಾಗಿಸಿಕೊಳ್ಳುವುದು ಸರಿಯಲ್ಲವೆನಿಸಿದರೂ,ಕಥಾವಸ್ತುವಿನ ವೈವಿಧ್ಯತೆಯ ದೃಷ್ಟಿಯಿಂದ ಹಾಗೂ ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಈ ರೀತಿಯ ಅಧ್ಯಯನವು ಉಪಯುಕ್ತವೆಂದು ಈ ಅಧ್ಯಯನ ಗುರುತಿಸಿಕೊಂಡಿದೆ. ಇಂತಹ ಅಧ್ಯಯನಗಳು ಕಥನಕಾರರ ಮತ್ತು ಕಥನಗಳನ್ನು ಬಿಡಿ ಬಿಡಿಯಾಗಿ ಹಾಗೂ ಸ್ಥೂಲವಾಗಿ ಅಧ್ಯಯನ ಕೈಗೊಳ್ಳಲು ಅಧ್ಯಯನಕಾರನಿಗೆ ಸಹಕಾರಿಯಾಗುತ್ತವೆ. ಯಾವುದೇ ಕಥಾಸಂವಿಧಾನವಾಗಿರಲಿ, ಅದು ಪ್ರಾದೇಶಿಕ ಅಥವಾ ಭೌಗೋಳಿಕನೆಲೆಯನ್ನು ಒಳಗೊಂಡಿರುವುದನ್ನುಸಹಜವಾಗಿ ಕಾಣಬಹುದಾಗಿದೆ. ಇಲ್ಲಿ ಭೂಮಿಯಾಗಲೀ, ಕಥನವಾಗಲೀ, ರೈತನಾಗಲೀ, ಜೀತವಾಗಲೀ ಅದು ಪ್ರಾದೇಶಿಕ ವ್ಯಾಪ್ತಿಯ ಅಥವಾ ನೈಸರ್ಗಿಕ ಕಾರಣಗಳಿಂದಾಗಿ ಬೇರೆ ಬೇರೆ ತೆರನಾದ ಸಮಸ್ಯೆಗಳಿಗೆ, ಸವಾಲುಗಳಿಗೆ ಒಡ್ಡಿಕೊಳ್ಳುವ ಪ್ರಕ್ರಿಯೆಗಳಾಗಿವೆ. ಈ ಹಿನ್ನೆಲೆಯಲ್ಲಿ ಭೌಗೋಳಿಕ ಅಥವಾ ಪ್ರಾದೇಶಿಕ ನೆಲೆಯ ಅಧ್ಯಯನವು ಭೂ ಸಮಸ್ಯೆ ಕುರಿತು ಸ್ಥೂಲವಾಗಿ ಶೋಧಿಸಿದೆ.

ಭೌಗೋಳಿಕವಾಗಿ ರಾಷ್ಟ್ರ ಅಥವಾ ರಾಜ್ಯದ ಸಂದರ್ಭದಲ್ಲಿ ಭೂಮಿ ಕುರಿತ ಆಯಾ ಪ್ರದೇಶಗಳಲ್ಲಿ

ತನ್ನದೇ ಆದಂತಹ ಪ್ರಾದೇಶಿಕ ಕಾರಣಗಳಿಗಾಗಿ ಅಥವಾ ನೈಸರ್ಗಿಕ ಕಾರಣಗಳಿಗಾಗಿ ಭೂ ವಿನ್ಯಾಸಗಳಲ್ಲಿ ಹಾಗೂ ಜೀವನ ವಿಧಾನಗಳಲ್ಲಿ ಕಂಡುಬರುವ ಸಂಘರ್ಷಗಳನ್ನು ಗುರುತಿಬಹುದಾಗಿದೆ. ಅಲ್ಲಿ ತನ್ನದೇ ಆದಂತಹ ಪ್ರಾದೇಶಿಕ,ನೈಸರ್ಗಿಕ ಕಾರಣವುಳ್ಳ ಭೂ ಸಮಸ್ಯೆಗಳು ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಸ್ಥೂಲವಾಗಿ ನೈಸರ್ಗಿಕ ವಿಭಾಗೀಕರಣ ಮಾಡಿಕೊಳ್ಳುವುದು ಅಗತ್ಯವೆನಿಸಿದೆ.

ಕಾಲಘಟ್ಟಕ್ಕೆ ಅನುಗುಣವಾಗಿ ಪರಿಶೀಲಿಸಿದರೆ, ಸ್ವಾತಂತ್ರ್ಯಾನಂತರದ ಭಾರತವು ಭೂ ಸಮಸ್ಯೆಯನ್ನು ಬಗೆಹರಿಸಲು ಯತ್ನಿಸಿದೆ. ಈ ಕಾರಣಕ್ಕಾಗಿ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಭೂ ಪ್ರಶ್ನೆಯ ಕಥಾ ವಸ್ತುವಿನ ವೈವಿಧ್ಯತೆಗಳು ಒಬ್ಬೊಬ್ಬ ಲೇಖಕನಲ್ಲಿ ತನ್ನದೇ ಆದ ನೆಲೆಯ ಮೂಲಕ ಮೈದಳೆದಿವೆ. ಒಬ್ಬ ಲೇಖಕ ತನ್ನ ಪ್ರಾದೇಶಿಕ ಒತ್ತಡಗಳನ್ನು ಹಾಗೂ ಭೂ ಸಮಸ್ಯೆಗಳನ್ನು ಪರಿಹರಿಸಲು ಕಂಡುಕೊಳ್ಳುವ ಮುಖ್ಯ ನೆಲೆಯನ್ನು ಇಂತಹ ಕಾರಣಗಳಿಂದ ಗಮನಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಭೌಗೋಳಿಕ ನೆಲೆಯಲ್ಲಿ ಭೂ ಸಮಸ್ಯೆಗಳಿಗೆ ಸೃಜನಶೀಲವಾಗಿ ಪ್ರತಿಕ್ರಿಯಿಸಿರುವುದನ್ನು ಕಥನಕಾರರಲ್ಲಿ ಕಾಣುತ್ತೇವೆ. ಭೌಗೋಳಿಕವಾಗಿ ಅಧ್ಯಯನದ ಅನುಕೂಲಕ್ಕಾಗಿ ಸ್ಥೂಲವಾಗಿ ದಕ್ಷಿಣ ವಲಯ, ಉತ್ತರ ವಲಯ, ಮಲೆನಾಡು, ಕರಾವಳಿ ಪ್ರದೇಶ ಎಂಬುದಾಗಿ ವಿಭಾಗ ಮಾಡಿಕೊಳ್ಳಲಾಗಿದೆ.

**೧. ಮಲೆನಾಡು**

ಮಲೆನಾಡುಪ್ರದೇಶದ ಭೂ ಸಮಸ್ಯೆಗಳು ತನ್ನದೇ ಆದ ಪ್ರಾಕೃತಿಕ ಕಾರಣಗಳಿಂದಾಗಿ ವಿಭಿನ್ನವಾಗಿ ಕಂಡುಬರುತ್ತವೆ. ಈ ಕಾರಣದಿಂದಾಗಿ ಸಾಮಾಜಿಕ ಸಂಘರ್ಷದ ನಿಲುವುಗಳೂ ಬೇರೆ ಬೇರೆಯಾಗಿರುವುದನ್ನು ಕಾಣುತ್ತೇವೆ. ಇಲ್ಲಿನ ಭೂ ಪ್ರದೇಶವು ಕಾಡಿನಿಂದ, ಬೆಟ್ಟಗುಡ್ಡಗಳಿಂದ ಆವೃತವಾಗಿದ್ದು, ವ್ಯವಸಾಯಕ್ಕೆ ಯೋಗ್ಯವಲ್ಲದ ಭೂಮಿಯು ಇಲ್ಲಿ ಹೆಚ್ಚಿದೆ. ಮಲೆನಾಡಿನ ಬಯಲು ಪ್ರದೇಶದಲ್ಲಿ ನೀರಾವರಿ, ತರೀ ಜಮೀನು,ಬಾಗಾಯ್ತು ಜಮೀನುಗಳಿವೆ. ಇಲ್ಲಿನ ರೈತಾಪಿ ಸಮುದಾಯ ತನ್ನದೇ ಕೃಷಿ ಚಟುವಟಿಕೆಯ ಮೂಲಕ ಸ್ವತಂತ್ರ ಬದುಕನ್ನು ಕಟ್ಟಿಕೊಂಡಿದೆ. ಮಲೆನಾಡು ಪ್ರದೇಶಗಳೆಂದು, ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಕೊಡಗು ಭಾಗಗಳನ್ನು ಮಲೆನಾಡು ಪ್ರದೇಶಗಳೆಂದು ಅಧ್ಯಯನದ ದೃಷ್ಟಿಯಿಂದ ಸ್ಥೂಲವಾಗಿ ಗುರುತಿಸಿಕೊಳ್ಳಲಾಗಿದೆ.

೭೦ರ ದಶಕದಲ್ಲಿ ಕರ್ನಾಟಕದಲ್ಲಾದ ಭೂಸುಧಾರಣೆಯ ತಿದ್ದುಪಡಿಯಿಂದ ಭೂ ಹಂಚಿಕೆ ಹಾಗೂ ಭೂಮಿತಿ ಕಾಯ್ದೆಗಳು ಸಂಪೂರ್ಣವಾಗಿ ಜಾರಿಯಾಗಿಲ್ಲ ಎಂಬ ಅಪವಾದಗಳು ಈ ಭಾಗದಲ್ಲಿ ಕೇಳಿ ಬರುತ್ತಿವೆ. ಹೀಗಾಗಿ ಹಾಸನ, ಕೊಡಗು, ಚಿಕ್ಕಮಗಳೂರು ಜಿಲ್ಲೆಯ ಭೂ ಪ್ರದೇಶಗಳು ಹೆಚ್ಚು ಬೆಟ್ಟಗುಡ್ಡ ಪ್ರದೇಶಗಳಿಂದ ಕೂಡಿದ್ದು, ಕಾಫಿ ಎಸ್ಟೇಟ್‌ಗಳ ಮೂಲಕ ಸಾವಿರಾರು ಎಕರೆ ಭೂ ಪ್ರದೇಶವನ್ನು ಈಗಲೂ ಒಳಗೊಂಡಿವೆ. ಈ ಭೂ ಪ್ರದೇಶಗಳು ಭೂಮಿತಿ ಕಾಯ್ದೆಗೆ ಅನ್ವಯವಾಗದಿರುವುದನ್ನು ಕಾಣುತ್ತೇವೆ. ಬ್ರಿಟಿಷರ ಕಾಲದಿಂದಲೂ ಕಾಫಿ ಎಸ್ಟೇಟ್‌ಗಳ ಭೂ ಪ್ರದೇಶವನ್ನು ಕೈಗಾರಿಕಾ ಪ್ರದೇಶವೆಂದು ಗುರುತಿಸಲಾಗಿದೆ. ಈ ಪ್ರದೇಶಗಳಿಗೆ ಭೂ ಸುಧಾರಣಾ ಕಾನೂನು ವಾಸ್ತವದಲ್ಲಿ ಅನ್ವಯಿಸದೇ ಇರುವುದನ್ನು ಕಾಣುತ್ತೇವೆ. ಬ್ರಿಟಿಷರಿಂದ ನಿರ್ಮಾಣಗೊಂಡ ಈ ಪ್ಲಾಂಟೇಷನ್‌ಗಳು ಇಂದು ಆರ್ಥಿಕ ಕೇಂದ್ರಗಳಾಗಿವೆ. ವಾಣಿಜ್ಯ ಬೆಳೆಗಳಾದ ಕಾಫಿ,ಕಿತ್ತಳೆ, ಅಡಿಕೆ, ತೆಂಗು ಏಲಕ್ಕಿ, ಹಾಗೂ ಕರಿಮೆಣಸುಗಳನ್ನು ಸಾವಿರಾರು ಎಕರೆ ಭೂ ಪ್ರದೇಶಗಳಲ್ಲಿ ಬೆಳೆಯಲಾಗುತ್ತದೆ. ಇಲ್ಲಿನ ಬಂಡವಾಳಿಗ ಭೂಮಾಲೀಕ ಮತ್ತು ಪ್ಲಾಂಟೇಶನ್‌ನ ಮಾಲೀಕರು ಇಲ್ಲಿನ ಕೂಲಿ ಕಾರ್ಮಿಕರನ್ನು ಶೋಷಣೆ ಮಾಡುವುದನ್ನು ಕಾಣುತ್ತೇವೆ.

ಆದರೆ ಮಲೆನಾಡು ಭೂ ಪ್ರದೇಶವೆಂದು ಗುರುತಿಸಿಕೊಂಡಿರುವ ಶಿವಮೊಗ್ಗ, ಭೂಸುಧಾರಣೆಯ ಭೂ ಹಂಚಿಕೆಯು ಪರಿಣಾಮಕಾರಿಯಾಗಿ ಜಾರಿಯಾಗಿದೆ. ಈ ಭಾಗದಲ್ಲಿ ದೊಡ್ಡ ಹಿಡುವಳಿದಾರರನ್ನು ಎಲ್ಲಿಯೂ ಕಾಣಲಾಗುವುದಿಲ್ಲ. ಆದರೆ ಬಹುತೇಕ ಭೂ ಪ್ರದೇಶಗಳು ನೀರಾವರಿ ಸವಲತ್ತು ಹಾಗೂ ಫಲವತ್ತತೆಯನ್ನು ಒಳಗೊಂಡಿವೆ. ಈ ಭಾಗದ ರೈತರು ಬತ್ತ,ರಾಗಿ ಮುಂತಾದ ಆಹಾರ ಬೆಳೆಗಳನ್ನು ಮತ್ತು ಅಡಿಕೆ,ಕಬ್ಬು, ರೇಷ್ಮೆ ಮೊದಲಾದ ಪ್ರಮುಖ ವಾಣಿಜ್ಯ ಬೆಳೆಗಳ ಬೆಳೆಯುತ್ತಾರೆ. ಭೂಸುಧಾರಣೆಯ ಸಂದರ್ಭದಲ್ಲಿ ಭೂಮಾಲೀಕರು ಹೆಚ್ಚು ಭೂಮಿಯನ್ನು ಕಳೆದುಕೊಳ್ಳಲಿಲ್ಲ. ಆದರೆ ಮಧ್ಯಮವರ್ಗದ ಭೂಮಾಲೀಕರು ತಮ್ಮ ಭೂಮಿಯನ್ನು

ಕಳೆದುಕೊಂಡಿರುವುದನ್ನು ಗಮನಿಸಿದಾಗ ಇಲ್ಲಿ ದೊಡ್ಡ ಹಿಡುವಳಿದಾರ ಭೂಮಾಲೀಕ ಭೂಸುಧಾರಣೆಯ ಕಾನೂನಿನ ಮೂಲಕ ಬಚಾವಾಗಿರುವುದನ್ನು ಕಾಣುತ್ತೇವೆ.

ಸಾಮಾನ್ಯವಾಗಿ ಈ ಮಲೆನಾಡು ಪ್ರದೇಶಗಳಲ್ಲಿ ಬಂಡವಾಳಶಾಹಿಗಳು, ಭೂಮಾಲಿಕರು, ಜೀತಗಾರ, ಗೇಣಿರೈತ, ಕೃಷಿಕೂಲಿಕಾರ್ಮಿಕರನ್ನು ನ್ಯಾಯಯುತ ವೇತನ ನೀಡದೆ ಶೋಷಿಸುತ್ತಾ ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ೧೯೫೧ರಲ್ಲಿ ನಡೆದ ಕಾಗೋಡು ಸತ್ಯಾಗ್ರಹ ಹಾಗೂ ಇತರೆ ರೈತ ಹೋರಾಟಗಳನ್ನು ಗಮನಿಸಬಹುದಾಗಿದೆ. ಈ ಭಾಗದ ಲೇಖಕರಾದ ಕುವೆಂಪು, ತೇಜಸ್ವಿ, ನಾ.ಡಿಸೋಜ, ಪಿ.ಲಂಕೇಶ್, ಯು.ಆರ್.ಅನಂತಮೂರ್ತಿ, ದೇವನೂರು ಮೊದಲಾದವರ ಸಾಹಿತ್ಯ ಕೃತಿಗಳಲ್ಲಿ ಭೂ ರೈತ ಸಮಸ್ಯೆಗಳ ಆಶಯಗಳನ್ನು ಕಾಣಬಹುದಾಗಿದೆ.

**೨. ಕರಾವಳಿ ಪ್ರದೇಶ**

ಕರಾವಳಿ ತೀರದ ಪ್ರದೇಶವು ಭೌಗೋಳಿಕವಾಗಿ ಕಡಿದಾದ ಬೆಟ್ಟಗುಡ್ಡಗಳಿಂದ, ದಟ್ಟ ಅರಣ್ಯಪ್ರದೇಶಗಳಿಂದ,ಸಮುದ್ರತೀರದಿಂದ ಕೂಡಿದೆ. ಈ ಭಾಗವು ಅಲ್ಪ ಪ್ರಮಾಣದ ಕೃಷಿ ಭೂಮಿಯನ್ನು ಒಳಗೊಂಡಿದೆ. ಈ ಪ್ರದೇಶದಲ್ಲಿ ಪ್ರಧಾನವಾಗಿ ಅಡಿಕೆ, ಬತ್ತ, ತೆಂಗು, ರಾಗಿ, ಕಬ್ಬು, ಮೀನುಗಾರಿಕೆ ಮೊದಲಾದ ಆಹಾರೋತ್ಪಾದನೆ ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತದೆ. ಇದರ ಜೊತೆಗೆ ಬೀಡಿ ಉದ್ಯಮವು ಕೂಡ ಇಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಈ ಭಾಗದಲ್ಲಿ ತೆಂಗಿನ ನಾರಿನ ಉದ್ಯಮಗಳಿಂದ ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಬಹಳಷ್ಟು ಜನರು ಶೋಷಣೆಗೆ ಒಳಗಾಗಿದ್ದಾರೆ. ಪ್ರಾದೇಶಿಕವಾಗಿ ಉತ್ತಮ ವಾಯುಗುಣವನ್ನು ಹೊಂದಿದ್ದು ಮಳೆ ಮತ್ತು ನೀರಾವರಿ ಮೂಲಕ ರೈತರು ಕೃಷಿಯಲ್ಲಿ ತೊಡಗಿರುವುದನ್ನು ಗಮನಿಸಬಹುದಾಗಿದೆ.

ಅಧ್ಯಯನದ ದೃಷ್ಟಿಯಿಂದ ಸ್ಥೂಲವಾಗಿ ಉತ್ತರ ಕನ್ನಡ ಜಿಲ್ಲೆ, ದಕ್ಷಿಣ ಕನ್ನಡ ಜಿಲ್ಲೆ,ಮಂಗಳೂರು ಭಾಗವನ್ನು ಕರಾವಳಿತೀರ ಪ್ರದೇಶವೆಂದು ಗುರುತಿಸಿಕೊಳ್ಳಲಾಗಿದೆ.

ಭೂ ಸುಧಾರಣೆ ಸಂದರ್ಭದಲ್ಲಿ ಭೂ ಹಂಚಿಕೆ ವಿಚಾರದಲ್ಲಿ ಬಹಳಷ್ಟು ಸಮಸ್ಯೆಗಳು ಇಲ್ಲಿ ಉದ್ಭವವಾಗಿದ್ದವು. ಈ ಹಿನ್ನೆಲೆಯಲ್ಲಿ ೧೯೫೦ರಲ್ಲಿ ದಿನಕರ ದೇಸಾಯಿ,ಗಿರಿಪಿಕಳೆ ಮಾಸ್ತರ್‌ರವರ ನೇತೃತ್ವದಲ್ಲಿ ಗೇಣಿ ರೈತರ ಭೂ ಹೋರಾಟ ನಡೆದಿದೆ. ಭೂ ಸುಧಾರಣೆ ಜಾರಿಯಾದ ನಂತರದಲ್ಲೂ ಈ ಭಾಗದಲ್ಲಿ ಭೂ ಹಂಚಿಕೆ ಇನ್ನೂ ಬಗೆಹರಿಯದ ಸಮಸ್ಯೆಯಾಗಿ ಉಳಿದಿದೆ.

ಈ ಪ್ರದೇಶದಲ್ಲಿ ಪ್ರಧಾನವಾಗಿ ಗೇಣಿರೈತರ,ಕೃಷಿಕೂಲಿಕಾರರ ಸಮಸ್ಯೆಗಳು ಪ್ರಧಾನವಾಗಿ ಕಂಡು ಬರುತ್ತವೆ. ಭೂಮಾಲೀಕರ ಶೋಷಣೆ, ಜೀತಗಾರಿಕೆ ಮೊದಲಾದ ಅಂಶಗಳು ಈ ಭಾಗದಲ್ಲಿ ಸಾಮಾನ್ಯವಾಗಿವೆ. ಇಲ್ಲಿ ಕಡಿಮೆ ಪ್ರಮಾಣದ ಭೂಮಿಯನ್ನು ಹೊಂದಿದ್ದರೂ ಕೆಲವೇ ಮಂದಿ ಭೂಮಾಲಿಕರಿದ್ದಾರೆ. ಇದಕ್ಕೆ ಮುಖ್ಯಕಾರಣವೆಂದರೆ, ಈ ಪ್ರದೇಶವು ಬ್ರಿಟಿಷರಿಂದ ನೇರವಾದ ಆಡಳಿತಕ್ಕೊಳಪಟ್ಟಿದೆ. ಆದ್ದರಿಂದ ಈ ಭಾಗದಲ್ಲಿ ಭೂ ಹಂಚಿಕೆಗೆ ಸಂಬಂಧಿಸಿದಂತೆ ಹೆಚ್ಚು ಸಮಸ್ಯೆಗಳು ಕಂಡುಬರುತ್ತವೆ.

ಈ ಭಾಗದ ಲೇಖಕರಾದ ಶಿವರಾಮಕಾರಂತ, ನಿರಂಜನ, ಕೊರಡ್ಕಲ್ ಶ್ರೀನಿವಾಸರಾಯ, ವೈದೇಹಿ, ವಿಶುಕುಮಾರ, ವಿಷ್ಣುನಾಯ್ಕ, ಮೊದಲಾದವರು ಭೂ ಪ್ರಶ್ನೆಯನ್ನು ಪ್ರತಿನಿಧಿಸಿರುವುದು ಕಂಡುಬರುತ್ತದೆ.

**೩. ಉತ್ತರ ವಲಯ**

ಈ ಪ್ರದೇಶ ಸಾಮಾನ್ಯವಾಗಿ ಒಣಭೂಮಿಯನ್ನು ಹಾಗೂ ಒಣಹವೆಯನ್ನು ಹೊಂದಿದೆ. ಇಲ್ಲಿ ಬಯಲು ಸಮತಟ್ಟಾದ ಭೂಪ್ರದೇಶವನ್ನು ಒಳಗೊಂಡಿದೆ. ಇಲ್ಲಿನ ಭೂ ಪ್ರದೇಶವು ನೀರಾವರಿ, ವಿದ್ಯುತ್ ಸಮಸ್ಯೆಗಳನ್ನು ಪ್ರಮುಖವಾಗಿ ಎದುರಿಸುತ್ತಿದೆ. ಈ ಭಾಗವು ಮಳೆಯಾಶ್ರಿತ ಕೃಷಿ ಚಟುವಟಿಕೆಗಳ ಮೂಲಕ ಆಹಾರೋತ್ಪಾದನಾ ಬೆಳೆಗಳಾದ ಗೋಧಿ, ಜೋಳ, ಸಾಂಬಾರಪದಾರ್ಥ ಇತ್ಯಾದಿಗಳನ್ನು ಕೃಷಿಕರು ಬೆಳೆಯುತ್ತಾರೆ. ಪ್ರಾದೇಶಿಕವಾಗಿ ಬೆಳಗಾಂ,ಧಾರವಾಡ,ಬಿಜಾಪುರ, ರಾಯಚೂರು ಬಳ್ಳಾರಿ, ಗುಲ್ಬರ್ಗಾ, ಹಾಗೂ ಬೀದರ್ ಜಿಲ್ಲೆಗಳನ್ನು ಉತ್ತರ ವಲಯ ಎಂದು ಸ್ಥೂಲವಾಗಿ ಗುರುತಿಸಿಕೊಳ್ಳಲಾಗಿದೆ.

ಈ ಭಾಗದಲ್ಲಿ ಚಾರಿತ್ರಿಕವಾಗಿ ಮಹಾರಾಷ್ಟ್ರದ ಮರಾಠಿಗರು ಮತ್ತು ಹೈದ್ರಾಬಾದಿನ ನಿಜಾಮರು ಹಾಗೂ ಪಾಳೆಯಗಾರರು ಆಳ್ವಿಕೆ ನಡೆಸಿರುವುದನ್ನು ಕಾಣುತ್ತೇವೆ. ಇಲ್ಲಿ ಬ್ರಿಟಿಷರಿಂದ ಬಂದ ಜಾಗೀರುದಾರರ ಭೂ

ಹಕ್ಕುಗಳು ಹಾಗೂ ಹೈದ್ರಾಬಾದ್ ಕರ್ನಾಟಕದ ಜಮೀನ್ದಾರಿ ಪದ್ಧತಿ ಹೇರಿಕೆಯಿಂದ ರೈತರ ಶೋಷಣೆ ವ್ಯಾಪಕವಾಗಿ ಕಂಡುಬರುತ್ತದೆ. ಆ ಕಾಲಕ್ಕೆ ಮುಂಬೈ ಪ್ರಾಂತ ಸರ್ಕಾರವು ಜಹಗೀರು ಪದ್ಧತಿ ರದ್ಧತಿ ಕಾನೂನನ್ನು ಜಾರಿಗೊಳಿಸಿದ್ದರಿಂದ ಕೆಲ ರೈತರು ಭೂಒಡೆತನ ಪಡೆಯಲು ಸಾಧ್ಯವಾಯಿತು.

ಭೂ ಸುಧಾರಣೆ ಜಾರಿ ಸಂದರ್ಭದಲ್ಲಿ ಭೂ ಹಂಚಿಕೆಯು ಈ ಭಾಗದಲ್ಲಿ ಸಂಪೂರ್ಣವಾಗಿ ಅನುಷ್ಠಾನವಾಗಿಲ್ಲ. ಏಕೆಂದರೆ ಭೂ ಹಂಚಿಕೆಯ ಪ್ರಶ್ನೆ ಬಂದಾಗ ಇಲ್ಲಿನ ಭೂಮಾಲೀಕರು ಸಾವಿರಾರು ಎಕರೆಗಳಷ್ಟು ಭೂಮಿಯನ್ನು ಬೇರೆಯವರ ಹೆಸರಿನಲ್ಲಿ ನೋಂದಾಯಿಸಿಕೊಂಡರು. ಅಲ್ಲದೆ ನಕಲಿ ಭೂ ದಾಖಲೆಗಳನ್ನು ಸೃಷ್ಟಿಸಿ ತಮ್ಮ ಒಡೆತನವನ್ನು ಭದ್ರಪಡಿಸಿಕೊಂಡರು.

ಈ ಭಾಗದಲ್ಲಿ ನೀರಾವರಿ ಪ್ರದೇಶಗಳು ಸಾಕಷ್ಟು ಪ್ರಮಾಣದಲ್ಲಿಲ್ಲದ ಕಾರಣ ಇಲ್ಲಿನ ಬಹುಪಾಲು ರೈತರು ಭೂಮಿಯ ಬಗೆಗೆ ಆಸಕ್ತಿ ಕಳೆದುಕೊಂಡಿದ್ದಾರೆ. ಭೂಮಿಯ ಮೇಲಿನ ನಿರಾಸಕ್ತಿಯಿಂದಾಗಿ ನಗರ ಪಟ್ಟಣ ಪ್ರದೇಶಗಳಲ್ಲಿ ನೆಲೆಸತೊಡಗಿದ್ದಾರೆ. ಕೆಲವು ಭಾಗಗಳಲ್ಲಿ ಭೂ ಹೋರಾಟಗಳ ಮೂಲಕ ಭೂ ಹಂಚಿಕೆ ಹಾಗೂ ವಿತರಣೆ ಆಗಿರುವುದು ಕಂಡುಬರುತ್ತದೆ. ೧೯೫೩ರಲ್ಲಿ ನೀಲಗಂಗಯ್ಯಪೂಜಾರ ನೇತೃತ್ವದಲ್ಲಿ ನಡೆದ ಹೆಬ್ಬಳ್ಳಿ ಭೂ ಹೋರಾಟ, ೧೯೭೪ರಲ್ಲಿ ನಡೆದ ಸಂಡೂರು ಭೂ ಹೋರಾಟವನ್ನು ಮುಖ್ಯವಾಗಿ ಗಮನಿಸಬಹುದಾಗಿದೆ.

ಈ ಪ್ರದೇಶದಲ್ಲಿ ಭೂಮಿ ಪ್ರಶ್ನೆ ಮುಖ್ಯವಾಗಿದ್ದರೂ, ಭೂಮಾಲೀಕನ ಸಂಪೂರ್ಣ ಹಿಡಿತದಿಂದಾಗಿ, ಶೋಷಣೆ, ಜೀತಗಾರಿಕೆ, ರೈತಪ್ರಶ್ನೆ, ವಿದ್ಯುತ್, ನೀರಿನಪ್ರಶ್ನೆ, ಮೊದಲಾದ ಸಮಸ್ಯೆಗಳು ಪ್ರಧಾನವಾಗಿವೆ. ಇಲ್ಲಿ ದೊಡ್ಡ ದೊಡ್ಡ ಭೂ ಹಿಡುವಳಿದಾರರು ಹೆಚ್ಚು ಭೂಮಿಯನ್ನು ಹೊಂದಿದ್ದು, ದಲಿತರು ಹಾಗೂ ಗೇಣಿದಾರರು ಅಲ್ಪ ಪ್ರಮಾಣದ ಭೂಮಿಯನ್ನು ಹೊಂದಿರುವುದು ಸಾಮಾನ್ಯವಾಗಿದೆ. ಈ ಪ್ರದೇಶವು ಮುಖ್ಯವಾಗಿ ಮಳೆಯನ್ನೇ ಆಧರಿಸಿದ್ದು, ಇಲ್ಲಿನ ಭೂ ಸಮಸ್ಯೆಗಳು ಭಿನ್ನಸ್ವರೂಪ ಪಡೆದಿವೆ.

ಈ ಭಾಗದ ಲೇಖಕರಾದ ಕುಂ.ವೀರಭದ್ರಪ್ಪ,ಶಾಂತರಸ, ಅಮರೇಶ ನುಗಡೋಣಿ,ಮೊದಲಾದವರು ಈ ಪ್ರದೇಶದ ಭೂ ಸಮಸ್ಯೆ ಕುರಿತು ಚರ್ಚಿಸಿರುವುದು ಕಂಡುಬರುತ್ತದೆ.

**೪.ದಕ್ಷಿಣ ವಲಯ**

ಈ ಭಾಗದಲ್ಲಿ ಭಾಗಶಃ ಭೂಮಿಯನ್ನು ಸಮನಾಗಿ ಹಂಚಲ್ಪಟ್ಟಿದ್ದು, ಇಲ್ಲಿ ಬ್ರಿಟಿಷರು ಭೂ ಸುಧಾರಣೆ ವಿಷಯದಲ್ಲಿ ಹಿಂದೆ ಸರಿದಿರುವುದು ಕಂಡುಬರುತ್ತದೆ. ಏಕೆಂದರೆ ಈ ಭಾಗದ ನೀರಾವರಿ ಸೌಲಭ್ಯ ಹಾಗೂ ಕೃಷಿ ಯೋಗ್ಯವಾದ ಭೂಮಿಯಿದ್ದು, ಅಧಿಕ ಆಹಾರೋತ್ಪನ್ನಗಳನ್ನು ಬೆಳೆಯಲಾಗುತ್ತದೆ. ಅಧ್ಯಯನದ ದೃಷ್ಟಿಯಿಂದ ಸ್ಥೂಲವಾಗಿ ಮಲೆನಾಡು ಪ್ರದೇಶವಾದ ಚಿತ್ರದುರ್ಗ, ತುಮಕೂರು, ಕೋಲಾರ, ಬೆಂಗಳೂರು, ಮಂಡ್ಯ, ಮೈಸೂರು ಜಿಲ್ಲೆಗಳ ಕೆಲವು ಭಾಗಗಳನ್ನು ದಕ್ಷಿಣವಲಯ ಪ್ರದೇಶಗಳೆಂದು ಸ್ಥೂಲವಾಗಿ ಗುರುತಿಸಿಕೊಳ್ಳಲಾಗಿದೆ.

ಈ ಭಾಗದ ಕೆಲವು ಪ್ರದೇಶಗಳಲ್ಲಿ ನಗರದ ಬೆಳವಣಿಗೆಗೆ ರೈತರ ಭೂಮಿಯನ್ನು ಆಕ್ರಮಿಸಿಕೊಂಡಿರುವುದು ಕಂಡುಬರುತ್ತದೆ. ಪ್ರಧಾನವಾಗಿ ಬೆಂಗಳೂರು ಮೈಸೂರು ನಗರಗಳ ಸುತ್ತಮುತ್ತ ಐಟಿಬಿಟಿ ನೆಪದಲ್ಲಿ ಕಾರ್ಪೋರೇಟ್ ಸಂಸ್ಥೆಗಳು ಸಣ್ಣ ರೈತರ ತುಂಡು ಭೂಮಿಗಳನ್ನು ವಶಪಡಿಸಿಕೊಂಡಿರುವುದನ್ನು ಕಾಣುತ್ತೇವೆ. ರೈತರ ಫಲವತ್ತಾದ ಭೂಮಿಯನ್ನು ಕೊಳ್ಳುವುದರ ಮೂಲಕ ಸಾವಿರಾರು ಎಕರೆ ಭೂ ಪ್ರದೇಶವನ್ನು ವಶಪಡಿಸಿಕೊಂಡು ಭೂ ಆಕ್ರಮಣ ನಡೆಸುತ್ತಿವೆ. ನವಭೂಮಾಲೀಕತ್ವ ಹೊಂದುವ ಹಾಗೂ ಕಾನೂನಿನ ಒಳಗಿಂಡಿಯ ಮೂಲಕ ನುಗ್ಗುವ ಭೂವಂಚಕ ಪಡೆ ಹಾಗೂ ಭೂಗಳ್ಳರ ಚಟುವಟಿಕೆಯ ತಾಣವಾಗಿ ಈ ಪ್ರದೇಶಗಳು ಕಂಡುಬರುತ್ತಿವೆ.

ನಗರ ಪ್ರದೇಶಗಳಲ್ಲಿ ಬೃಹದಾಕಾರವಾಗಿ ಬೆಳೆಯುತ್ತಿರುವ ಕೈಗಾರಿಕೆ, ಉದ್ಯಮಗಳು, ಕಾರ್ಖಾನೆಗಳು ಇಲ್ಲಿನ ಭೂ ಪ್ರದೇಶವನ್ನು ಆಕ್ರಮಿಸಿಕೊಂಡು ರೈತಾಪಿ ಬದುಕಿನ ಕನಸನ್ನು ನುಚ್ಚುನೂರು ಮಾಡುತ್ತಿವೆ. ರಿಯಲ್ ಎಸ್ಟೇಟ್ ದಂಧೆಯಿಂದ ಲಕ್ಷಾಂತರ ಮೌಲ್ಯದ ಹಣದ ಆಮಿಷದಿಂದ ರೈತರು ಫಲವತ್ತಾದ ಭೂಮಿಯನ್ನು ಕಳೆದುಕೊಳ್ಳುತ್ತಿದ್ದಾರೆ.

ಈ ಭಾಗದ ಲೇಖಕರಾದ ಬೆಸಗರಹಳ್ಳಿ ರಾಮಣ್ಣ,ಮೊಗಳ್ಳಿಗಣೇಶ್, ಬರಗೂರು ರಾಮಚಂದ್ರಪ್ಪ, ಕಾಳೇಗೌಡ ನಾಗವಾರ ಮೊದಲಾದವರನ್ನು ಗಮನಿಸಬಹುದು.

## ೨.೪ ಕನ್ನಡ ಸಾಹಿತ್ಯದಲ್ಲಿ ಪ್ರತಿನಿಧೀಕರಣದ ಚರ್ಚೆ

ಆಧುನಿಕ ಕಥನದಲ್ಲಿ ಭೂ ಹೋರಾಟವನ್ನು ನೋಡುವ ಬಗೆ ಯಾವುದು? ಮತ್ತು ಯಾವ ಅಂಶಗಳು ಪ್ರತಿನಿಧೀಕರಣಗೊಂಡಿವೆ? ಎಂಬುದನ್ನು ಶೋಧಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ. ಭೂ ಸಂಬಂಧಿತ ನೆಲೆಯಲ್ಲಿ ಮುಖ್ಯಸಮಸ್ಯೆಗಳನ್ನು ಗುರುತಿಸಿ ಅವುಗಳು ಕಥನಗಳಲ್ಲಿ ಪ್ರತಿನಿಧೀಕರಣಗೊಂಡ ಬಗೆಯನ್ನು ಹುಡುಕಾಟದ ಭಾಗವಾಗಿ ನೋಡಲು ಪ್ರತಿನಿಧೀಕರಣ ಪದವನ್ನು ಅಧ್ಯಯನದ ಶೀರ್ಷಿಕೆಯಲ್ಲಿ ಬಳಸಲಾಗಿದೆ. ಇಡೀ ಅಧ್ಯಯನವನ್ನು ಪ್ರತಿನಿಧೀಕರಣ ಎಂಬ ಪರಿಕಲ್ಪನೆಯ ಮೂಲಕ ನಡೆಸಲಾಗುವುದು.

ವಾಸ್ತವದಲ್ಲಿ ನಡೆದ ಘಟನೆಯನ್ನು ಕೃತಿಕಾರ ಒಂದು ಮುಖ್ಯ ವಸ್ತುವಾಗಿ ಕಾಣಬೇಕಾದ ಉದ್ದೇಶವೇನು? ಅದು ಹೇಗೆ ಕಾಣಬೇಕು? ಯಾವ ಕಾರಣಕ್ಕಾಗಿ ಕಾಣಬೇಕು ಎಂಬುದು ಮುಖ್ಯ ಚರ್ಚೆಯಾಗಿದೆ. ಆದರೆ ಈ ಕಾಣುವಿಕೆಯ ವಿಶೇಷತೆ ಏನು? ಆತನಿಗೆ ಘಟನೆಯೊಂದು ಮುಖ್ಯವಾಗಿ ಕಂಡ ನಂತರದಲ್ಲಿ ಕೃತಿಕಾರ ತನ್ನ ನಿಲುವನ್ನು ಕಥನರೂಪದಲ್ಲಿ ಓದುಗನ ಮುಂದೆ ಮಂಡಿಸುವ ಉದ್ದೇಶವಾದರೂ ಏನು? ಇಂಥ ಸಂದರ್ಭದಲ್ಲಿ ಘಟನೆ ಕುರಿತು ಯಾವುದಕ್ಕೆ ಪ್ರಾಮುಖ್ಯತೆ ನೀಡುತ್ತಾನೆ ? ಮತ್ತು ಯಾವುದನ್ನು ಪ್ರತಿನಿಧಿಸುತ್ತಾನೆ? ಎನ್ನುವುದು ಅಧ್ಯಯನ ಸಂದರ್ಭಕ್ಕೆ ಮುಖ್ಯವಾಗುತ್ತದೆ. ಇಲ್ಲಿ ಲೇಖಕ ಯಾವುದರ ಪ್ರತಿನಿಧಿಯಾಗಿ ತನ್ನ ಅಭಿವ್ಯಕ್ತಿ ಕ್ರಮವನ್ನು ಕಥನದಲ್ಲಿ ರೂಪಾಂತರಗೊಳಿಸುತ್ತಾನೆ ಎಂಬುದನ್ನು ಗ್ರಹಿಸಲಾಗುವುದು.

ಯಾವುದೇ ಘಟನೆ ಅಥವಾ ವಸ್ತುವನ್ನು ಕಾಲದ ಒತ್ತಡಗಳು, ವಾಸ್ತವತೆ ಮತ್ತು ಕಲ್ಪನೆಯ ಅಂಶಗಳಲ್ಲಿ ಯಾವುದನ್ನು ಪ್ರತಿನಿಧಿಸುತ್ತಾನೋ ಅಂತಹುದನ್ನು ಪ್ರತಿನಿಧೀಕರಣ ಎಂದು ಕರೆಯಬಹುದಾಗಿದೆ. ಒಬ್ಬ ಕಥನಕಾರನು ತನ್ನ ಸಾಂಸ್ಕೃತಿಕ ಒತ್ತಡಗಳು ಹಾಗೂ ಸಮಾಜದ ವಸ್ತುವಿಷಯಗಳ ಕುರಿತು ಪ್ರತಿನಿಧಿಸುವಂತಹ ಅಂಶವನ್ನು ಗಮನಿಸಬೇಕಾಗುತ್ತದೆ. ಐತಿಹಾಸಿಕ ಘಟನೆಯ ಕುರಿತು ಕತೆಯ ರೂಪ ನೀಡುವ ಲೇಖಕ ಆ ಕಾಲವನ್ನು ಕುರಿತು ವಿವರಿಸುತ್ತಾನೆ. ಇತಿಹಾಸ ಸತ್ಯವಾದ ಘಟನೆಯೂ ಕೂಡ. ತನ್ನ ಕಾಲದ ಜೊತೆಗೆ ಕಥನವನ್ನೂ ಪ್ರತಿನಿಧಿಸುವಂತಹ ಅಂಶಗಳನ್ನು ಒಳಗೊಳ್ಳುತ್ತದೆ ಎಂಬುದನ್ನು ಕಾಣುತ್ತೇವೆ.ಇಲ್ಲಿ ಇತಿಹಾಸ ಸತ್ಯವಿರುವಾಗ ಕತೆ ಯಾಕೆ ಬೇಕು? ಎಂಬ ಪ್ರಶ್ನೆ ಮೂಡುತ್ತದೆ. ಇತಿಹಾಸದ ಸತ್ಯವು ಯಥಾವತ್ತಾಗಿ ಬರುತ್ತದೆ. ಆದರೆ ಕಥನಕಾರನಲ್ಲಿ ಇತಿಹಾಸವು ಮರುಹುಟ್ಟು ಪಡೆದು ಬರುವಾಗ ವರ್ತಮಾನದ ಒತ್ತಡಗಳ ಜೊತೆಗೆ ಬೆಳೆಯುತ್ತದೆ ಎಂಬ ಅಂಶವನ್ನು ಗಮನಿಸಲಾಗಿದೆ. ಮಾತ್ರವಲ್ಲದೆ ವರ್ತಮಾನದ ವಾಸ್ತವವನ್ನು ಕಾಲ್ಪನಿಕವಾಗಿ ಪ್ರತಿನಿಧಿಸುವುದರ ಹಿಂದೆ ಇನ್ನುಳಿದ ಸತ್ಯಾಂಶಗಳಿವೆ. ಸಮಾಜಕ್ಕೆ ನೀಡಬೇಕಾದ ಒತ್ತಾಸೆಯ ಆಶಯಗಳು ಕನ್ನಡ ಕಥನದ ಸಂದರ್ಭದಲ್ಲಿ ಲೇಖಕರ ಮೂಲಕ ಧ್ವನಿಸುತ್ತದೆ.

ಈ ಹಿನ್ನೆಲೆಯಲ್ಲಿ ಉದಾಹರಹಣೆಯೊಂದನ್ನು ಗಮನಿಸಬಹುದು ಪಂಪನ ಮಹಾಭಾರತದಲ್ಲಿ ಪಂಪನು ರಾಜನ ಆಶ್ರಯದಲ್ಲಿದ್ದುಕೊಂಡು ರಾಜನನ್ನು ವಿರೋಧಿಸಲು ಕಥಾನಾಯಕನಾಗಿ ಅರ್ಜುನನನ್ನು ರಾಜನೊಂದಿಗೆ ಸಮೀಕರಿಸಿ, ಪ್ರತಿನಾಯಕ ಪಾತ್ರದಲ್ಲಿ ಕರ್ಣನ ಪಾತ್ರವನ್ನು ತರುವುದನ್ನು ಕಾಣುತ್ತೇವೆ.ಅದೇ ರೀತಿ ರನ್ನನ ಗದಾಯುದ್ಧದಲ್ಲಿ ದುರ್ಯೋಧನ ದುರಂತನಾಯಕನಾಗಿ ಪ್ರತಿನಿಧಿನಾಗಿದ್ದಾನೆ. ಯಾವುದೇ ಒಬ್ಬ ಕಥನಕಾರನಿಗೆ ಆಯಾಕಾಲದ ಘಟನೆಗಳು, ಸ್ವಾರಸ್ಯಗಳು ಆತನಿಗೆ ಕಾಣುವ ಕಾಣ್ಕೆಯಾಗಿರುತ್ತವೆ ಎಂಬುದಕ್ಕೆ ಈ ಅಂಶಗಳನ್ನು ಗಮನಿಸಬಹುದು. ಅಲ್ಲದೆ ತತ್ವ ಸಿದ್ಧಾಂತಗಳ ಪ್ರಭಾವಗಳು ಕೂಡ ಲೇಖಕನಲ್ಲಿ ಪ್ರತಿನಿಧೀಕರಣಗೊಂಡಿರುವುದನ್ನು ಕಾಣಬಹುದಾಗಿದೆ. ಇದಕ್ಕೆ ಉದಾಹರಣೆಯಾಗಿ ನಿರಂಜನರ ಚಿರಸ್ಮರಣೆ ಕಾದಂಬರಿಯು ಮಾರ್ಕ್ಸಿಸ್ಟ್ ಚಿಂತನಾಧಾರೆಯನ್ನು ಒಳಗೊಂಡಿದೆ.

ಸಾಹಿತ್ಯವಲಯದಲ್ಲಿ ಸಾಹಿತ್ಯವು ಸಮಾಜದ ಪ್ರತಿಬಿಂಬ ಎಂಬ ವಾದವು ಚಲಾವಣೆಯಲ್ಲಿತ್ತು. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಕಲೆ ಸಮಾಜದ ಪ್ರತಿಬಿಂಬ ಎಂದು ಹೇಳಿರುವುದು ಮಾತ್ರವಲ್ಲ,ಅದು ಸಮಾಜದ ಕನ್ನಡಿ ಎಂದು ವಾದಿಸಿರುವುದನ್ನು ಕಾಣುತ್ತೇವೆ. ಇಲ್ಲಿ ಕಲೆಗಾಗಿ ಕಲೆ,ಬದುಕಿಗಾಗಿ ಕಲೆ ಎಂಬ ಚರ್ಚೆಯಾಗಿರುವುದನ್ನು ಕಾಣುತ್ತೇವೆ. ಯಾವುದೇ ಒಂದು ಪಾತ್ರವಾಗಲೀ ಸಮಾಜದಿಂದ ನೇರವಾಗಿ ನಡೆದು ಬಂದ ಕಲಾತ್ಮಕ ಆಕೃತಿಯಿಂದು ಒಂದು ಕಾಲಕ್ಕೆ ಸಾಹಿತ್ಯ ವಲಯದಲ್ಲಿ ನಂಬಿಕೆಯಿತ್ತು. ಆನಂತರದಲ್ಲಿ ಸಾಹಿತ್ಯವು ಪ್ರತಿಬಿಂಬ ಮಾತ್ರವಲ್ಲ, ಅದು ಗತಿಬಿಂಬ, ಅದು ಚಲನಶೀಲವಾದುದು ಎಂದು ಸಾಹಿತ್ಯ ವಲಯದಲ್ಲಿ

ಚರ್ಚೆಗೊಳಗಾಯಿತು. ಈ ಕುರಿತು ಜಿ.ಎಸ್.ಶಿವರುದ್ರಪ್ಪ ಹಾಗೂ ಇತರ ಕನ್ನಡದ ಲೇಖಕರು ಚರ್ಚಿಸ ತೊಡಗಿದ್ದನ್ನು ಕಾಣಬಹುದು. ಇದು ಸಮಾಜದಲ್ಲಿ ನಡೆದ ಘಟನೆಯ ಗತಿಯನ್ನು ಲೇಖಕ ಅಭಿವ್ಯಕ್ತಿಸುವುದು ಎಂಬ ಅರ್ಥದಲ್ಲಿ ಬಳಸಲಾಗುತ್ತಿತ್ತು.

ಆನಂತರದಲ್ಲಿ ದೇಶ, ಕಾಲ,ಭಾಷೆ, ವಸ್ತು, ಘಟನೆಯ, ಆಶಯ,ಒತ್ತಾಯಗಳ ಜೊತೆಗೆ ಪೂರಕವಾದ ನಿಲುವುಗಳನ್ನು ಸಾಹಿತ್ಯದ ಮೂಲಕ ಲೇಖಕ ಪ್ರತಿನಿಧಿಸುತ್ತಾನೆ ಎಂಬ ವಾದ ಬೆಳೆಯತೊಡಗಿತು. ಈ ಹಿನ್ನೆಲೆಯಲ್ಲಿ ಇತ್ತೀಚಿನ ದಿನಗಳಲ್ಲಿ ಸಾಹಿತ್ಯವಲಯದಲ್ಲಿ ಪ್ರತಿನಿಧೀಕರಣ ಪದವು ಬಳಕೆಯಾಗುತ್ತಿದೆ. ಇಲ್ಲಿ ಪ್ರತಿನಿಧೀಕರಣವನ್ನು ಒಂದು ಪಾರಿಭಾಷಿಕವಾಗಿ ಅಧ್ಯಯನ ಮಾಡಲಾಗಿದೆ.

"ಪ್ರತಿನಿಧೀಕರಣ" ಎಂಬ ಪದವು ರೆಪ್ರೆಸೆಂಟೇಷನ್ ಎಂಬ ಆಂಗ್ಲ ಪದಕ್ಕೆ ಪರ್ಯಾಯವಾಗಿ ಕನ್ನಡದಲ್ಲಿ ಬಳಕೆಯಾಗಿರುವ ಪದವಾಗಿದೆ. ಇದು ಲೋಕ ಸತ್ಯಕ್ಕೆ ಸಾಹಿತ್ಯ ಸತ್ಯದ ಪರ್ಯಾಯನೆಲೆಯಲ್ಲಿ ಬಳಸುವ ಪದವಾಗಿದೆ. ಇಲ್ಲಿ ಅನುಭವ ಸಾಹಿತ್ಯಿಕವಾಗಿ ಸೃಜನಶೀಲ ರೂಪ ಪಡೆದಾಗ, ಅದು ಲೋಕಾನುಭವವಾಗಿ ಸಾಹಿತ್ಯದಲ್ಲಿ ಪ್ರತಿನಿಧಿತ್ವವನ್ನು ಪಡೆಯುತ್ತದೆ. ಹೀಗೆ ಸಾಹಿತ್ಯಸತ್ಯ ಮತ್ತು ಲೋಕಸತ್ಯಗಳು ಒಂದರೊಡನೊಂದು ನೇರವಾಗಿ ಅಂತರ್‌ಸಂಬಂಧವನ್ನು ಹೊಂದಿರುತ್ತವೆ. ಈ ವ್ಯವಸ್ಥೆಯ ಪ್ರಕ್ರಿಯೆಯಲ್ಲಾಗುವ ಘಟನೆಗಳು, ಚಾರಿತ್ರಿಕ ನೋಟಗಳು, ಲೇಖಕರಲ್ಲಿ ಕೃತಿ ಸ್ವರೂಪವಾಗಿ ಮೈದಾಳುತ್ತವೆ.

ಆದ್ದರಿಂದ ಪ್ರತಿನಿಧೀಕರಣವು ಕಥನಕಾರರ ದೃಷ್ಟಿಕೋನ ಮತ್ತು ಧ್ಯೇಯ ಧೋರಣೆಯನ್ನು ವ್ಯಕ್ತಗೊಳಿಸುತ್ತದೆ. ಕಥನಕಾರ ತನ್ನ ಕಾಲದ ವಾಸ್ತವವನ್ನು ಹೇಗೆ ಪ್ರತಿನಿಧಿಸಿದ್ದಾನೆ ಎಂಬುದನ್ನು ತಿಳಿಯುವುದಾಗಿದೆ. ದೇವನೂರು ಮಹಾದೇವ ಅವರ ಕಥನದ ಪ್ರಧಾನನೆಲೆ ಹಸಿವು ಮುಖ್ಯವಾಗಿದ್ದು, ಇದು ಅವರ ಕಥನದಲ್ಲಿ ಪ್ರತಿನಿಧೀಕರಣಗೊಂಡಿದೆ. ಈ ಹಸಿವು ಎಲ್ಲಾ ಕಾಲಕ್ಕೂ, ಎಲ್ಲಾ ವರ್ಗದ, ಎಲ್ಲಾ ಜನತೆಯ ಮುಖ್ಯ ಪ್ರಶ್ನೆಯಾಗಿದೆ. ಈ ಹಿನ್ನೆಲೆಯಲ್ಲಿ ದೇವನೂರರ ಕಥನದಲ್ಲಿ ಪ್ರಧಾನನೆಲೆ ಹಸಿವಿನ ಪ್ರತಿನಿಧೀಕರಣ ಎಂಬುದಾಗಿ ಗುರುತಿಸಬಹುದು.

ಅದೇ ರೀತಿ ವಾಸ್ತವವನ್ನೇ ಕಥನಕಾರ ತದ್ರೂಪೀಕರಣ ಮಾಡುತ್ತಾನೆಯೋ ಅಥವಾ ವಾಸ್ತವದ ಜೊತೆಗೆ ಬರೀ ಕಲ್ಪನೆಯನ್ನೇ ಲೇಖಕ ಮುಂದಿಡುತ್ತಾನೆಯೋ ಎಂಬ ಜಿಜ್ಞಾಸೆಗಳು ಸಾಹಿತ್ಯವಲಯದಲ್ಲಿ ಚರ್ಚಿತವಾಗುತ್ತಿವೆ. ಈಚಿನ ದಿನಗಳಲ್ಲಿ ಪ್ರತಿನಿಧೀಕರಣ ಪದವು ಹೆಚ್ಚು ಬಳಕೆಯಾಗುತ್ತಿದೆ. ಮಹಿಳಾ ಪ್ರತಿನಿಧೀಕರಣ, ಬುಡಕಟ್ಟು ಅಧ್ಯಯನದ ಪ್ರತಿನಿಧೀಕರಣ ಹೀಗೆ ಅಧ್ಯಯನದ ವಸ್ತುಗಳ ಶೋಧಕ್ಕೆ ಈ ಪದವನ್ನು ಬಳಸಲಾಗುತ್ತಿದೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಜಕೀಯ ಪ್ರತಿನಿಧಿ ಪ್ರಜೆಗಳ ಕಷ್ಟ ಸುಖ, ದುಃಖದುಮ್ಮಾನಗಳನ್ನು ಪ್ರತಿನಿಧಿಸುತ್ತಾನೆ. ಆಧುನಿಕ ಸಂದರ್ಭದಲ್ಲಿ ಸಾಹಿತ್ಯದಲ್ಲಷ್ಟೇ ಅಲ್ಲದೆ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ವಲಯಗಳಲ್ಲೂ ಪ್ರತಿನಿಧೀಕರಣ ವ್ಯಕ್ತವಾಗುತ್ತದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಶೈಕ್ಷಣಿಕ ಸಮಸ್ಯೆ, ದಲಿತ ಅಲ್ಪಸಂಖ್ಯಾತರ ಸಮಸ್ಯೆಗಳನ್ನು ಆಳುವ ಸರ್ಕಾರಗಳು ಪ್ರತಿನಿಧಿಸುತ್ತವೆ. ಇಲ್ಲಿ ಬಹುಸಂಖ್ಯಾತ ರೈತವರ್ಗ, ಗ್ರಾಮೀಣ ಜನತೆ, ಹಿಂದುಳಿದವರ ಸಮಸ್ಯೆಗಳ ಕುರಿತು ಸರ್ಕಾರಗಳು ಪ್ರತಿನಿಧಿಸುತ್ತವೆ. ಈ ಹಿನ್ನೆಲೆಯಲ್ಲಿ ಸಾಮಾಜಿಕ ಪ್ರತಿನಿಧೀಕರಣವನ್ನು ಗುರುತಿಸಬಹುದು.

ವಾಸ್ತವದಲ್ಲಿ ಸಾಮಾಜಿಕವಾಗಿ, ರಾಜಕೀಯವಾಗಿ, ಜಾಗತಿಕವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯ ವಲಯದಲ್ಲಿ ತನ್ನ ಸೃಜನಶೀಲ ಕೃತಿಗಳ ಮೂಲಕ ಪ್ರತಿನಿಧಿಸುವ ಅಂಶಗಳನ್ನು ಗುರುತಿಸಬಹುದು. ಇಂತಹ ಒತ್ತಾಯಗಳ ನಡುವೆ ಲೇಖಕ ಪ್ರತಿನಿಧಿಸುವ ನೆಲೆಗಳನ್ನು ಶೋಧಿಸುವುದು ಇಲ್ಲಿ ಮುಖ್ಯ. ಲೇಖಕ ವಾಸ್ತವದ ಜೊತೆಗೆ ತನ್ನ ಕಲ್ಪಿತ ಜಗತ್ತನ್ನು ಕಟ್ಟುವಾಗ ಭೂತ ಮತ್ತು ಭವಿತವ್ಯವನ್ನು ತೋರುವ ಮುಂಗಾಣ್ಕೆಯಾಗಿ ಸಮಸ್ಯೆಯನ್ನು ಪ್ರತಿನಿಧೀಕರಣ ಸ್ವರೂಪದಲ್ಲಿ ವ್ಯಕ್ತಗೊಳಿಸುತ್ತಾನೆ. ಲೇಖಕ ವಾಸ್ತವವನ್ನು ಕಟ್ಟಿಕೊಡುವುದರ ಜೊತೆಗೆ ಭೂತ ಮತ್ತು ಭವಿಷ್ಯತ್ತಿನ ಕಾಣ್ಕೆಯನ್ನು ಕೂಡ ಪ್ರತಿನಿಧಿಸುತ್ತಾನೆ. ಲೇಖಕ ಕಾಲ, ದೇಶ, ಭಾಷೆ, ಸಂಸ್ಕೃತಿಯಂತಹ ಅಂಶಗಳನ್ನು ಕಟ್ಟಿಕೊಡುತ್ತಾನೆ.

ಈ ಹಿನ್ನೆಲೆಯಲ್ಲಿ ಆಧುನಿಕ ಕಥನ ಸಾಹಿತ್ಯದಲ್ಲಿ ಭೂಹೋರಾಟ ಪ್ರತಿನಿಧೀಕರಣಗೊಂಡ ಬಗೆಯನ್ನು ಶೋಧಿಸಲಾಗುವುದು. ಮುಖ್ಯವಾಗಿ ಈ ಅಧ್ಯಯನದಲ್ಲಿ ಭೂಹೋರಾಟ ಪ್ರತಿನಿಧೀಕರಣಗೊಂಡ ಅಂಶವನ್ನು ಕತೆ ಮತ್ತು ಕಾದಂಬರಿಗಳ ಮೂಲಕ ಶೋಧಿಸಲಾಗುವುದು.

**ಕೊನೆ ಟಿಪ್ಪಣಿ**

೧.ಡಿ.ಆರ್.ನಾಗರಾಜ್,ಶಕ್ತಿ-ಶಾರದೆಯ ಮೇಳ, ೨ನೇ ಮುದ್ರಣ, ಪುಟ ೧೦ ,೧೯೯೩
೨.ನಟರಾಜಹುಳಿಯಾರ್, ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ,ಆಧುನಿಕತೆ ಮತ್ತು ಪರಂಪರೆ,ಪುಟ ೨೧
೩ ಎಲ್.ಎಸ್.ಶೇಷಗಿರಿರಾವ್,ಹೊಸಗನ್ನಡ ಸಾಹಿತ್ಯ ಚರಿತ್ರೆ,ಪುಟ೧೨
೪.ಅದೇ ಪುಟ ೧೨
೫.ಅದೇ ಪುಟ ೧೨
೬.ಜಿ.ಎಸ್.ಅಮೂರ,ಕನ್ನಡ ಕಥನ ಸಾಹಿತ್ಯ, ಸಣ್ಣ ಕಥೆ,ಪುಟ ೧೪
೭. ಅದೇ ಪುಟ ೧೫
೭.ಸಿರಿಗನ್ನಡ ಅರ್ಥಕೋಶ
೮.ಪ್ರೊ.ಹೆಚ್.ವಿ.ನಾಗೇಶ್ಮತ್ತು ಎ.ಇ. ಪುನೀತ್,ಭಾರತದ ರೈತ ಹೋರಾಟಗಳು,ಪುಟ ೩೧
೯.ಎಂ.ಚಿದಾನಂದಮೂರ್ತಿ,ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,೧೯೮೫. ಪು. ೫೭.
೧೦.ವರ್ಕರ್ಸ್ ಅಂಡ್ ಪೆಸೆಂಟ್ ಪಾರ್ಟಿ,ಭಾರತದಲ್ಲಿ ರೈತ, ಪು ೩ ಮತ್ತು ೪
೧೧.ರೈತನಾಯಕ ಶರದ್ಜೋಷಿ,ಅಭಿಪ್ರಾಯ,ಶೇತ್ಕಾರಿ ಸಂಘಟನೆ
೧೨.ಬತ್ತದ ಚಿಲುಮೆ, ಮೂಲ ವಂದನಾಶಿವ, ಕನ್ನಡಕ್ಕೆ ಮಾಧವ ಐತಾಳ್,೨೦೦೫ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ.ಪು.೧೨
೧೩. ಬತ್ತದ ಚಿಲುಮೆ, ಮೂಲ ವಂದನಾಶಿವ, ಕನ್ನಡಕ್ಕೆ ಮಾಧವ ಐತಾಳ್,೨೦೦೫ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ.ಪುಟ೨೩
೧೪.ಎಂ.ಚಿದಾನಂದಮೂರ್ತಿ,ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,ಪು. ೫೭
೧೫. ಅದೇ ಪುಟ ೫೮
೧೬. ಹಿ.ಚಿ.ಬೋರಲಿಂಗಯ್ಯ,ನಮ್ಮೊಳಗೊಂದು ಪುಟ್ಟ ಆಫ್ರಿಕಾ, ಪು.೨ ಸಿ.ವಿ.ಜಿ.ಪ್ರಕಾಶನ, ಬೆಂ ೨೦೦೪

## ಅಧ್ಯಾಯ : ಮೂರು

# ಭೂಮಿ ಪ್ರಶ್ನೆ: ಸುಧಾರಣೆ ,ಚಳುವಳಿ ಮತ್ತು ಚಿಂತನೆಗಳು

**೩.೧ ಭೂಸುಧಾರಣೆಯ ಚಾರಿತ್ರಿಕ ಸ್ವರೂಪ**

೩.೧.೧ ಭಾರತದ ಮಟ್ಟದಲ್ಲಿ ಭೂಸುಧಾರಣೆ

೩.೧.೨ ಕರ್ನಾಟಕ ಮಟ್ಟದಲ್ಲಿ ಭೂಸುಧಾರಣೆ

೩.೧.೪ ಕರ್ನಾಟಕದಲ್ಲಿ ಭೂಸುಧಾರಣಾ ಕಾನೂನು

**೩.೨ ಭೂ ಸಂಬಂಧಿ ಚಳುವಳಿ**

೩.೨.೧ ಭೂ ಹೋರಾಟಗಳು

೩.೨.೨ ಕರ್ನಾಟಕ ಸಂದರ್ಭದ ಭೂ ಹೋರಾಟಗಳು

೩.೨.೩ ರೈತರ ಆತ್ಮಹತ್ಯೆಗಳು

೩.೨.೪ ಕಾರ್ಪೊರೇಟ್ ಭೂ ಆಕ್ರಮಣ

೩.೨.೫ ವಿಶೇಷ ಆರ್ಥಿಕ ವಲಯಗಳು (S.E.Z)

೩.೨.೫ ಗುತ್ತಿಗೆ ಕೃಷಿ (Contract Farming)- (A.E.Z)

**೩.೩ ಭೂಮಿ ಕುರಿತ ಚಿಂತನೆಗಳು ಮತ್ತು ಭೂ ಪ್ರಶ್ನೆಗಳು**

೩.೩.೧ ಕಾರ್ಲ್‌ಮಾರ್ಕ್ಸ್ ಚಿಂತನೆ ಮತ್ತು ಭೂಮಿಯ ಪ್ರಶ್ನೆ

೩.೩.೨ ಲೋಹಿಯಾ ಚಿಂತನೆ ಮತ್ತು ಭೂಮಿಯ ಪ್ರಶ್ನೆ

೩.೩.೩ ಗಾಂಧಿ ಚಿಂತನೆ ಮತ್ತು ಭೂಮಿಯ ಪ್ರಶ್ನೆ

೩.೩.೪ ಅಂಬೇಡ್ಕರ್ ಚಿಂತನೆ ಮತ್ತು ಭೂಮಿಯ ಪ್ರಶ್ನೆ

**೩.೩.೩ ಭೂ ಸಂಬಂಧಿ ಪೂರಕ ಹೋರಾಟಗಳು**

೩.೩.೧ ಜಲ ಮತ್ತು ಪರಿಸರ ಹೋರಾಟಗಳು

೩.೩.೨ ದಲಿತ ಸಂಘಟನೆಯ ಭೂ ಹೋರಾಟಗಳು

೩.೩.೩ ರೈತ ಸಂಘಟನೆಯ ಭೂ ಹೋರಾಟಗಳ

# ಭೂ ಪ್ರಶ್ನೆ : ಸುಧಾರಣೆ, ಚಳುವಳಿ ಮತ್ತು ಚಿಂತನೆಗಳು

## ೩.೧ ಭೂಸುಧಾರಣೆಯ ಚಾರಿತ್ರಿಕ ಸ್ವರೂಪ

ಕಥನ ಸಾಹಿತ್ಯದ ಮೂಲಕ ಭೂ ಪ್ರಶ್ನೆ ಅಧ್ಯಯನ ಮಾಡುವುದರ ಜೊತೆಗೆ ಸಮಕಾಲೀನ ಸಂದರ್ಭದ ಭೂ ಸಮಸ್ಯೆಗಳನ್ನು, ಸುಧಾರಣೆಗಳನ್ನು, ಚಳುವಳಿಗಳನ್ನು ಮತ್ತು ಚಿಂತನೆಗಳನ್ನು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗುವುದು. ಈ ನಿಟ್ಟಿನಲ್ಲಿ ಭೂಸುಧಾರಣೆ ಚಾರಿತ್ರಿಕ ಸ್ವರೂಪವಾದ ವಸಾಹುತು ಭಾರತದಲ್ಲಿ ಭೂಸುಧಾರಣೆಯ ಯತ್ನಗಳು,ಸ್ವಾತಂತ್ರ್ಯೋತ್ತರ ಭಾರತದಲ್ಲಿ ಭೂಸುಧಾರಣೆಯ ಯತ್ನಗಳು,ವಸಾಹುತು ಕರ್ನಾಟಕದಲ್ಲಿ ಭೂಸುಧಾರಣೆಯ ಯತ್ನಗಳು,ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಭೂಸುಧಾರಣೆಯ ಯತ್ನಗಳು ಕುರಿತು ವಿಶ್ಲೇಷಿಸಲಾಗುವುದು.

ಭೂ ಸುಧಾರಣೆ ಕುರಿತಂತೆ, ಇಲ್ಲಿನ ಕಾನೂನುಗಳು ಭೂಮಿಯ ಬಗೆಗಿನ ಪರಿಹಾರ ಸೂಚಿಸಿದ ಬಗೆಯನ್ನು ವಿಶ್ಲೇಷಿಸಲಾಗುವುದು. ಚಿಂತನೆಯ ನೆಲೆಯಲ್ಲಿ ಮಾರ್ಕ್ಸ್,ಗಾಂಧೀಜಿ, ಲೋಹಿಯಾ, ವಿನೋಬಭಾವೆ, ಮೊದಲಾದವರ ಚಿಂತನೆಗಳನ್ನು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗುವುದು. ಪ್ರಸ್ತುತ ಸಮಕಾಲೀನ ಸಂದರ್ಭದ ಭೂ ಸಮಸ್ಯೆಗಳನ್ನೂ ಕುರಿತು ವಿವೇಚಿಸಲಾಗಿದೆ.

### ೩.೧.೧ ಭಾರತದ ಮಟ್ಟದಲ್ಲಿ ಭೂಸುಧಾರಣೆ

ಭಾರತದ ರೈತರ ಮೇಲೆ ಬ್ರಿಟಿಷರ ಮತ್ತು ದೇಶಿಯ ಭೂಮಾಲೀಕರ ಶೋಷಣೆ ಮಿತಿಮೀರಿದಾಗಲೆಲ್ಲಾ ಅವರ ವಿರುದ್ಧ ಸಿಡಿದೆದ್ದು ಹೋರಾಟ ಮಾಡಿದ ಇತಿಹಾಸ ರೈತರಿಗಿದೆ. ಸಹಜವಾಗಿ ಗುಡ್ಡಗಾಡುಗಳಲ್ಲಿ ವ್ಯವಸಾಯ ಮಾಡಿಕೊಳ್ಳುತ್ತಿದ್ದ ಜನಾಂಗಗಳ ಜನರನ್ನು ದಾಳಿಗೊಳಿಪಡಿಸಿದಾಗ ತಮ್ಮ ಅಸ್ತಿತ್ವಕ್ಕಾಗಿ ಹೋರಾಟನಡೆಸಿದ ಇತಿಹಾಸವಿದೆ. ಜಮೀನ್ದಾರರ ದಬ್ಬಾಳಿಕೆ, ಬ್ರಿಟೀಷರ ಮಿತಿಮೀರಿದ ಕಂದಾಯ ಹೇರಿಕೆ, ೧೯ನೇ ಶತಮಾನದ ಭೀಕರ ಕ್ಷಾಮಗಳು ಭಾರತದ ರೈತರನ್ನು ಸಿಡಿದೇಳುವಂತೆ ಮಾಡಿತು.

### ೧. ವಸಾಹುತು ಭಾರತದಲ್ಲಿ ಭೂಸುಧಾರಣೆಯ ಯತ್ನಗಳು

ಭಾರತದ ಚರಿತ್ರೆಯಲ್ಲಿ ಭೂ ಸಂಬಂಧಿ ಕೃಷಿ ನೀತಿಗಳನ್ನು ಪ್ರತಿಪಾದಿಸಿದವರು ಮೊಘಲರು. ಭೂಮಿಯ ನಿರ್ವಹಣೆಯನ್ನು ಗಂಭೀರವಾಗಿ ಮೊಘಲ್ ಆಡಳಿತವು ಮಹತ್ವದ ಹೆಜ್ಜೆಯನ್ನಿಟ್ಟಿತು. ಮೊಘಲ್ ಸಾಮ್ರಾಜ್ಯದ ದೊರೆ ಬಾಬರನ ಆಡಳಿತ, ಷೇರ್‌ಷಾನ ಭೂ ಸುಧಾರಣೆಗಳು, ಅಕ್ಬರ್‌ನ ಆಡಳಿತದ ನೀತಿಗಳು ಹಾಗೂ ಭೂ ನಿರ್ವಹಣೆಗಳು ಚಾರಿತ್ರಿಕ ಮಹತ್ವವನ್ನು ಸೂಚಿಸುತ್ತವೆ.

"ಷೇರ್‌ಷಾನು ಮೊಘಲ್" ಆಡಳಿತ ವ್ಯವಸ್ಥೆಯಲ್ಲಿ ಮೊದಲಿಗೆ ಸಮರ್ಥವಾಗಿ ಅಧಿಕೃತ ಭೂ ನಿರ್ವಹಣೆ ಮಾಡಿದ. ಈತ ಭೂಮಾಪನದ ಕೆಲಸವನ್ನು ತನ್ನ ಸಾಮ್ರಾಜ್ಯದಲ್ಲಿ ಜಾರಿಗೊಳಿಸಿದ. ಆ ಮೂಲಕ ರೈತರಿಗೆ ಭೂಮಾಲಿಕತ್ವದ ಹಕ್ಕನ್ನು ನೀಡುವುದು ಈತನ ಉದ್ದೇಶವಾಗಿತ್ತು. ಷೇರ್‌ಷಾನ ಭೂಕಂದಾಯ ಪದ್ಧತಿಯ ಮುಖ್ಯ ಲಕ್ಷಣವೆಂದರೆ "ನಿಜವಾದ ಬೇಸಾಯಗಾರರ ಹಾಗೂ ರಾಜ್ಯದ ನಡುವೆ ಮಧ್ಯವರ್ತಿಗಳಂತೆ ವರ್ತಿಸುತ್ತಿದ್ದ ಜಮೀನುದಾರರನ್ನು ದೂರವಿಟ್ಟಿದ್ದು, ಜಮೀನುದಾರರೆಂದರೆ ರಾಜ್ಯದ ಪರವಾಗಿ ಭೂಕಂದಾಯವನ್ನು ವಸೂಲಿ ಮಾಡುವ ಉದ್ದೇಶದಿಂದ ನೇಮಿಸಲ್ಪಟ್ಟ ಏಜೆಂಟ್ ಅಥವಾ ಗುತ್ತಿಗೆದಾರರಾಗಿದ್ದರು. ಮಧ್ಯವರ್ತಿಗಳೆನಿಸಿಕೊಂಡು ಬೆಳೆದಿದ್ದ ಈ ವರ್ಗವು ಭ್ರಷ್ಟಾಚಾರಿಗಳಾಗಿದ್ದು, ಬೇಸಾಯಗಾರರಿಗೂ ಮತ್ತು ರಾಜ್ಯಕ್ಕೂ ಹೆಚ್ಚು ತೊಂದರೆಯನ್ನುಂಟು ಮಾಡುತ್ತಿದ್ದರು. ಆದ್ದರಿಂದ ಶೇರ್‌ಷಾನು ಈ ಕೆಟ್ಟ ಪದ್ಧತಿಯನ್ನು ನಿರ್ಮೂಲನ ಮಾಡಬೇಕೆಂದು ನಿರ್ಣಯಿಸಿದನು. ಮಧ್ಯವರ್ತಿಗಳ ಪಾತ್ರವನ್ನು ಕೊನೆಗೊಳಿಸಿ ಷೇರ್‌ಷಾನ ಸರ್ಕಾರ ನಿಜವಾದ ಭೂ ಒಡೆಯನ ಜೊತೆ ನೇರವಾದ ಸಂಪರ್ಕವನ್ನು ಸ್ಥಾಪಿಸಿತು. ಇಂತಹ ವ್ಯವಸ್ಥೆಯಿಂದಾಗಿ ಬೇಸಾಯಗಾರರು ಮತ್ತು ಸರ್ಕಾರ ಮಧ್ಯವರ್ತಿಗಳಾಗಿ ಕೆಲಸ ನಿರ್ವಹಿಸುತ್ತಿದ್ದ ಜಮೀನ್ದಾರರ ದುಷ್ಕೃತ್ಯಗಳಿಂದ ಪಾರಾದರು."[1]

ಈ ದೃಢನಿರ್ಧಾರದಿಂದ ರೈತವಾರಿ ಪದ್ಧತಿಯನ್ನು ಷೇರ್‌ಷಾ ಜಾರಿಗೊಳಿಸಿದನು.ಇದರಿಂದ ರೈತರು.

ಗೇಣಿದಾರರು ಮತ್ತು ಸರ್ಕಾರ ನೇರಸಂಪರ್ಕವನ್ನು ಹೊಂದುವುದರ ಮೂಲಕ ಭೂಹಕ್ಕನ್ನು ಅಧಿಕೃತವಾಗಿ ನೀಡಲಾಯಿತು. ಆದರೆ ಇದರ ಉದ್ದೇಶ ಕಂದಾಯದ ಸುಧಾರಣೆ ಮಾಡುವುದೇ ಆಗಿದ್ದು, ಲಾಭದ ಉದ್ದೇಶವನ್ನು ಹೊಂದಿತ್ತು. ರೈತರಿಂದ ನೇರವಾಗಿ ರಾಜ್ಯದ ಬೊಕ್ಕಸಕ್ಕೆ ಬರುವ ಆದಾಯ ಮೂಲವಾಗಿದೆ. ಹೀಗಾಗಿ ಮೊಘಲರ ಕಾಲವನ್ನು ಭೂಕಂದಾಯ ಪದ್ಧತಿಗಳ ಸುಧಾರಣೆಗಳ ಕಾಲ, ಮಧ್ಯವರ್ತಿಗಳ ವಿರುದ್ಧ ರೈತ ಪರವಾದ ಸುಧಾರಣೆಯ ಕಾಲ ಎಂಬುದಾಗಿ ಗುರುತಿಸಬಹುದಾಗಿದೆ.

ಔರಂಗಜೇಬ್‌ನು ಕೂಡಾ ಭೂಸುಧಾರಣೆಯನ್ನುನೀತಿಯನ್ನು ಜಾರಿಗೊಳಿಸಿದ್ದನು. ಈತನ ಕಾಲದಲ್ಲಿ ಭೂಮಿಯ ಕಂದಾಯ ವಸೂಲಿ ಮಾಡಲು ತುಕಡಿ ಭೂಮಿಯನ್ನಾಗಿ ಮಾಡಿಸಿದ್ದ. ಈ ತುಕಡಿ ಭೂಮಿಯ ಕಂದಾಯ ವಸೂಲಿ ಮಾಡುವ ಆಡಳಿತರನ್ನು ಅಮಲ್ದಾರನಿಗೆ ವಹಿಸಲಾಗಿತ್ತು. ಈತನ ಅಧೀನದಲ್ಲಿ ಒಬ್ಬ ಶಿರಸ್ತೇದಾರ ,ಮೂವರು ಗುಮಾಸ್ತರು, ಒಬ್ಬ ತರಾಫದಾರ, ಆರುಮಂದಿ ಜವಾನರು, ಒಬ್ಬ ಮುಖ್ಯಸ್ಥ,ಹಣವನ್ನು ಇಡಲು ಒಬ್ಬ ಷರೀಫ ಹಾಗೂ ಮುನ್ಸಿಯನ್ನು ನೇಮಿಸಲಾಗಿತ್ತು. ಈ ಸುಧಾರಣೆ ಅತ್ಯಂತ ಪ್ರಗತಿಪರವೆಂದು ಕಂಡರೂ ಅಂತಿಮವಾಗಿ ಕಂದಾಯ ವಸೂಲಿ ಮಾಡುವುದೇ ಆಗಿತ್ತು. ಆಡಳಿತದಲ್ಲಿ ಹಲವು ದರ್ಜೆಯ ನೌಕರರನ್ನು ನೇಮಕಮಾಡಿದ್ದು ಬೊಕ್ಕಸಕ್ಕೆ ನಷ್ಟವನ್ನೇ ಉಂಟು ಮಾಡಿತು. ಈತ ೧೭೦೭ ರಲ್ಲಿ ಮರಣ ಹೊಂದಿದನು. ಈತನ ನಂತರ ಮೊಘಲರ ಸಾಮ್ರಾಜ್ಯ ಅತ್ಯಂತ ತ್ವರಿತಗತಿಯಲ್ಲಿ ಅವನತಿಯತ್ತ ಸಾಗಿತು. ಈ ಅವನತಿಯ ಹಿನ್ನೆಲೆಯಲ್ಲಿ ನಿರ್ಮಾಣವಾದ ರಾಜಕೀಯ ಅಸ್ಥಿರತೆ ಹಾಗೂ ಅವ್ಯವಸ್ಥೆ ಸ್ವಾಭಾವಿಕವಾಗಿ ಭಾರತದ ರಾಜಕಾರಣದಲ್ಲಿ ನಿರ್ವಾತವನ್ನು ಸೃಷ್ಟಿಸಿತು. ಅದುವರೆವಿಗೂ ವ್ಯಾಪಾರ ಚಟುವಟಿಕೆಗಳಿಗೆ ಸೀಮಿತವಾಗಿದ್ದ ಕಂಪನಿ ಪ್ರಲೋಭನಕ್ಕೆ ಒಳಗಾಗಿ ಈ ನಿರ್ವಾತವನ್ನು ತುಂಬುವ ಯತ್ನಕ್ಕೆ ಕೈಹಾಕಿ ಅಂತಿಮವಾಗಿ ಯಶಸ್ಸು ಗಳಿಸಿದ್ದು ಭಾರತದ ಇತಿಹಾಸದಲ್ಲಿ ಒಂದು ಮರೆಯಲಾಗದ ಸಂಗತಿ. ಕಂಪನಿಯ ಆರ್ಥಿಕ ಹಿತಾಸಕ್ತಿಯನ್ನು ವೃದ್ಧಿಸಲು ರಾಜಕೀಯ ಅಧಿಕಾರ ಅನಿವಾರ್ಯ ಎಂಬ ಸತ್ಯವನ್ನು ಸಹ ಬ್ರಿಟಿಷರು ಅರಿತರು.

ಹೀಗೆ ಪ್ಲಾಸಿ, ಪಾಣಿಪಟ್, ಬಕ್ಸಾರ್ ಯುದ್ಧಗಳು ಬ್ರಿಟಿಷರನ್ನು ಭಾರತದ ರಾಜಕೀಯ ರಂಗದ ಅತ್ಯಂತ ಮಹತ್ತರ ಶಕ್ತಿಯನ್ನಾಗಿ ಪರಿವರ್ತಿಸಿದುವು. ಮುಂದಿನ ನಾಲ್ಕೈದು ದಶಕಗಳ ಕಾಲ ಅವರನ್ನು ವಿರೋಧಿಸುವ ಶಕ್ತಿಗಳು ಸಾಕಷ್ಟು ಬಲವಾಗಿದ್ದುವಾದರೂ ಆಗ ಬ್ರಿಟಿಷರು ಸಾಧಿಸಿದ ಮೇಲುಗೈ ಸ್ಥಾನದಿಂದ ಅವರನ್ನು ದೂಡುವಷ್ಟು ಬಲಶಾಲಿಗಳಾಗುವ ಅವಕಾಶ ತಪ್ಪಿಹೋಯಿತು. ಆನಂತರ ಉತ್ತರ ಭಾರತದಲ್ಲಿ ಯಾವ ಶಕ್ತಿಯೂ ಅವರನ್ನೆದುರಿಸಿ ನಿಲ್ಲಲಿಲ್ಲ.

ಭಾರತವು ೧೭೫೭ ರ ನಂತರದಲ್ಲಿ ಸಂಪೂರ್ಣವಾಗಿ ಬ್ರಿಟಿಷ್ ಕಂಪೆನಿಯ ಆಡಳಿತಕ್ಕೊಳಪಟ್ಟಿತು. ಈ ಅವಧಿಯಿಂದ ಭಾರತದ ಸ್ವಾತಂತ್ರ್ಯದವರೆಗಿನ ಕಾಲಾವಧಿಯನ್ನು ವಸಾಹುತು ಗುರುತಿಸಬಹುದು. ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಪ್ರಬಲವಾಗಿದ್ದ ವ್ಯವಸಾಯ ಪದ್ಧತಿಯೆಂದರೆ ಜಮೀನ್ದಾರಿ ಪದ್ಧತಿ ಮತ್ತು ರೈತವಾರಿ ಪದ್ಧತಿಯಾಗಿದ್ದವು. ೧.ಈ ಜಮೀನ್ದಾರಿ ಪದ್ಧತಿಯಲ್ಲಿ ಅತಿ ದೊಡ್ಡ ಪ್ರಮಾಣದ ಭೂಮಿಯ ಒಡೆತನವನ್ನು ಹೊಂದಿದ್ದ ಇವರು ಮತ್ತು ಪಾಳೆಗಾರರು,ಸಂಪೂರ್ಣಹಕ್ಕನ್ನು ಪಡೆದುಕೊಂಡಿದ್ದು ಗ್ರಾಮೀಣಪ್ರದೇಶಗಳಲ್ಲಿ ತಮ್ಮ ಹಿಡಿತವನ್ನು ಸಾಧಿಸಿದ್ದರು. ೨. ರೈತವಾರಿ ಪದ್ಧತಿಯಲ್ಲಿ ಭೂ ಒಡೆತನವನ್ನು ರೈತರಿಗೆ ಕೊಡಲಾಗುತ್ತಿತ್ತು. ಇವರು ನೇರವಾಗಿ ಸರ್ಕಾರಕ್ಕೆ ಕಂದಾಯವನ್ನು ಕಟ್ಟುತ್ತಿದ್ದರು. ಈ ಪದ್ಧತಿಯ ಮುಂದುವರೆದ ಭಾಗವಾಗಿ ೧೭೭೩ ರಲ್ಲಿ ಲಾರ್ಡ್ ವಾರನ್‌ಹೆಸ್ಟಿಂಗ್ಸ್‌ನು ಜಾರಿಗೆ ತಂದ ರೆಗ್ಯುಲೇಟಿಂಗ್ ಕಾಯ್ದೆ ಮತ್ತು ಭೂ ಕಂದಾಯ ಸುಧಾರಣಾ ನೀತಿಗಳು ಬಹುಮುಖ್ಯವಾದವುಗಳು.

"೧೭೭೨ರಲ್ಲಿ ಹೇಸ್ಟಿಂಗ್ಸ್" ಐದು ವರ್ಷಗಳ ಕಾಲಮಿತಿಯ ಭೂಕಂದಾಯ ದರವನ್ನು ನಿಗದಿ ಮಾಡಲು ಸರ್ಕ್ಯೂಟ್ ಸಮಿತಿಯನು ರಚಿಸಿದ್ದನು. ಈ ವ್ಯವಸ್ಥೆಯಡಿಯಲ್ಲಿ ಪ್ರತಿ ಜಿಲ್ಲೆಗೂ ಒಬ್ಬ ಕಲೆಕ್ಟರ್‌ನನ್ನು ನೇಮಿಸಲಾಯಿತು. ಈತನ ಸಹಾಯಕ್ಕೆ ಒಬ್ಬ ದಿವಾನ್‌ನನ್ನು ಸಹ ನೇಮಿಸಲಾಯಿತು. ಗೌರ್ನರನ ಮಂಡಳಿಯು ಕಂದಾಯ ಸಮಿತಿಯಾಗಿ ಕಾರ್ಯನಿರ್ವಹಿಸಬೇಕಿತ್ತು. ಈ ಕಂದಾಯ ಸಮಿತಿಯು ಎಲ್ಲಾ ಜಿಲ್ಲೆಗಳ ಕಂದಾಯದ ಲೆಕ್ಕಪತ್ರಗಳ ಪರಿಶೋಧನೆಯನ್ನು ಮಾಡುವ ಜವಾಬ್ದಾರಿಯನ್ನು ಹೊಂದಿತ್ತು. ಪ್ರಾಂತ್ಯ ಅಥವಾ ಜಿಲ್ಲೆಯ ಮಟ್ಟದಲ್ಲಿ ನೇಮಕವಾಗಿದ್ದ ದಿವಾನರುಗಳ ಮೇಲ್ವಿಚಾರಣೆಯ ಅಧಿಕಾರವನ್ನು ಹೊಂದಿದ್ದ ರೈರೆಯಾನ್ ಎಂಬ ಸ್ಥಳೀಯ ಅಧಿಕಾರಿಗಳ ಸಹಾಯದಿಂದ ಕಂದಾಯ ಸಮಿತಿ ಲೆಕ್ಕ ಪರಿಶೋಧನಾ ಕಾರ್ಯವನ್ನು ನಿರ್ವಹಿಸಲು

ವ್ಯವಸ್ಥೆಯನ್ನು ರೂಪಿಸಲಾಯಿತು. ಕಲ್ಕತ್ತಾಗೆ ವರ್ಗಾಯಿಸಲಾದ ಖಜಾನೆಯ ಮೇಲುಸ್ತುವಾರಿಯನ್ನು ನಿರ್ವಹಿಸಲು ಅಕೌಟೆಂಟ್ ಜನರಲ್ಲನ ಹುದ್ದೆಯನ್ನು ಸೃಷ್ಟಿಸಲಾಯಿತು. ಅನೇಕ ರಂಗಗಳಲ್ಲಿ ಸುಧಾರಣೆಯನ್ನು ಜಾರಿಗೆ ತಂದರೂ ಭೂಕಂದಾಯ ದರ ನಿಷ್ಕರ್ಷೆಯಲ್ಲಿ ವಾರನ್ ಹೇಸ್ಟಿಂಗ್ಸ್ ಎಡವಿದನು. ಕಂದಾಯ ವಸೂಲಿ ಮಾಡುವ ಹಕ್ಕನ್ನು ಹರಾಜಿನ ಮೂಲಕ ಅತ್ಯಂತ ಹೆಚ್ಚಿನ ಕಂದಾಯ ವಸೂಲಿ ಮಾಡುವ ಜಮೀನ್ದಾರನಿಗೆ ನೀಡುವ ವ್ಯವಸ್ಥೆಯನ್ನು ಜಾರಿಗೆ ತಂದು ಕೃಷಿಕರ ಕಷ್ಟಗಳ ಪರಂಪರೆಗೆ ಹೇಸ್ಟಿಂಗ್ಸ್‌ನು ನಾಂದಿ ಹಾಡಿದನು. ಕೆಲವೊಮ್ಮೆ ಈಕಂದಾಯ ವಸೂಲಿಯ ಹಕ್ಕನ್ನು ಹರಾಜಿನಲ್ಲಿ ಗಳಿಸಿದ ದಳ್ಳಾಳಿಗಳು ಕೃಷಿಕರೊಂದಿಗೆ ಜಮೀನ್ದಾರಿಗಿಂತಲೂ ಕ್ರೂರವಾಗಿ ವರ್ತಿಸಿದರು. ಈ ರೀತಿಯ ನಿರ್ಣಯಗಳನ್ನು ಗಮನಿಸಿದಾಗ ಈತ ಕಂದಾಯ ಕುರಿತು ಯಾವುದೇ ರೀತಿಯ ಅನುಭವ,ದೂರದೃಷ್ಟಿ ಇರಲಿಲ್ಲ ಎಂಬುದು ಇದರಿಂದ ವ್ಯಕ್ತವಾಗುತ್ತದೆ.

"ಬ್ರಿಟಿಷರು ಹಳ್ಳಿಯ ಸಮುದಾಯಗಳಿಂದ ಆರಂಭದಲ್ಲಿ ಅತ್ಯಧಿಕ ಎಂದರೆ ವಾರ್ಷಿಕ, ನಂತರದಲ್ಲಿ ದ್ವೈವಾರ್ಷಿಕ ಹಾಗೂ ತ್ರೈವಾರ್ಷಿಕ ಗೇಣಿ ಸಂಗ್ರಹಿಸುವ ಮೂಲಕ ಭಾರತದಲ್ಲಿ ಕೃಷಿಕ್ಷೇತ್ರವನ್ನು ಹಿಂಡಿ ಹಿಪ್ಪೆ ಮಾಡಲು ತೊಡಗಿದರು. ಇದರ ಪರಿಣಾಮವಾಗಿ ಹಳ್ಳಿಗಾಡಿನಲ್ಲಿ ಬರ ಉಂಟಾಯಿತು. ಗೇಣಿ ಸಂಗ್ರಹ ವ್ಯವಸ್ಥೆ ಗಟ್ಟಿಗಳಿಸುವ ಭಾಗವಾಗಿ ರೈತರನ್ನು ಹಿಂಡಿಹಿಪ್ಪೆ ಮಾಡುವ ಪ್ರಕ್ರಿಯೆ ಮುಂದುವರೆಯಿತು. ರೈತರ ಜೀವನೋಪಾಯಕ್ಕೂ ಗತಿಯಿಲ್ಲದಂತೆ ದೋಚುವುದನ್ನು ತಡೆಗಟ್ಟಲು ೧೭೯೩ರಲ್ಲಿ "ಖಾಯಂ ಭೂಗಂದಾಯ ಕಾಯಿದೆ"ಯನ್ನು (ಪರ್ಮನೆಂಟ್ ಸೆಟ್ಲಮೆಂಟ್ ಆಕ್ಟ್ ) ಜಾರಿಗೆ ತರಲಾಯಿತು. ಭಾರತದ ಸಂದರ್ಭದಲ್ಲಿ ಬ್ರಿಟಿಷರು ತಮ್ಮ ಊಳಿಗಮಾನ್ಯ ಪದ್ಧತಿಯನ್ನು ಹೇರಿದರು. ಈ ಕಾಯ್ದೆ ಎರಡು ಬಗೆಯ ವ್ಯವಸ್ಥೆಯಾದ ಜಮೀನ್ದಾರಿ, ಜೆಮಿ,ಇನಾಂದಾರಿ ಮಹಲ್ವಾರಿಯನ್ನು ಜಾರಿಗೊಳಿಸಿತು"[೨] ಇಂಥ ಪದ್ಧತಿಯಿಂದ ಆಸ್ತಿಯ ಒಡೆತನ ಆಸ್ತಿ ಮಾರಾಟದ ಮತ್ತು ಖರೀದಿ ಮಾಡುವ ಹಕ್ಕುಗಳುನ್ನು ಮಧ್ಯವರ್ತಿಪಡೆಯಲು ಅನುಕೂಲಕಾರಿಯಾಗಿದ್ದವು.

ಬ್ರಿಟಿಷರ ಹೊಸ ನೀತಿಯಿಂದಾಗಿ ಭೂ ಸಂಬಂಧಗಳು, ಭೂಮಾಲೀಕರ, ಪಾಳೇಗಾರರ ಪರವಾಗಿದ್ದುದರಿಂದ ಬ್ರಿಟಿಷರ ಆಡಳಿತ ಬೆಂಬಲಕ್ಕೆ ಅವರು ನಿಂತರು. ಮಾತ್ರವಲ್ಲದೆ ತಮಗೆ ಬೆಂಬಲ ನೀಡುವಂಥ ಭೂಮಾಲೀಕ ವರ್ಗ ಅಸ್ತಿತ್ವಕ್ಕೆ ಬರಲು ಹಾಗೂ ಅವರ ಹಿತವನ್ನು ಕಾಪಾಡಲು ಕಾರಣವಾಯಿತು. ಇದರ ಪರಿಣಾಮ ಬ್ರಿಟೀಷ್ ಬೆಂಬಲಿತ ದೇಶೀಯ ರಾಜರುಗಳು ಸಂಪೂರ್ಣವಾಗಿ ಭೂಮಿಯ ಒಡೆತನವನ್ನು ಹೊಂದಲು ಸಹಕಾರಿಯಾಯಿತು. ಈ ನೀತಿಯಿಂದಾಗಿ ಕ್ರಮೇಣವಾಗಿ ರಾಜಶಾಹಿತ್ವವನ್ನು ಕೊನೆಗೊಳಿಸಿ ಭೂಮಾಲೀಕರನ್ನಾಗಿ ಪರಿವರ್ತಿಸುವಲ್ಲಿ ಬ್ರಿಟಿಷ್ ಆಡಳಿತ ಪರೋಕ್ಷವಾಗಿ ಯಶಸ್ವಿಯಾಯಿತು.

ಬ್ರಿಟಿಷರು ದೇಶೀಯ ರಾಜರುಗಳು ಹಿಂಸಾತ್ಮಕ ನೆಲೆಯಲ್ಲಿ ಪ್ರತಿರೋಧವನ್ನು ಎದುರಿಸಿದರೂ ಆನಂತರ ರಾಜೀ ಸೂತ್ರವನ್ನು ಅನುಸರಿಸಿ ಬ್ರಿಟಿಷರ ಪರಮಾಧಿಕಾರವನ್ನು ಒಪ್ಪಿಕೊಂಡು ಬಂದಿರುವುದನ್ನು ಚರಿತ್ರೆಯುದ್ದಕ್ಕೂ ಕಾಣುತ್ತೇವೆ. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಗೆ ಮೂಲಭೂತವಾಗಿ ಭಾರತೀಯ ಮಾರುಕಟ್ಟೆ ಮತ್ತು ಕೈಗಾರಿಕೆಯನ್ನು ವಿಸ್ತರಿಸುವುದು ಮುಖ್ಯವಾಗಿತ್ತು. ಇವುಗಳನ್ನು ಆಕ್ರಮಿಸಲು ಭಾರತೀಯ ಪ್ರಾಂತ್ಯಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಆ ಮೂಲಕ ತನ್ನ ಆರ್ಥಿಕ ಸಂಪನ್ಮೂಲವನ್ನು ಹೆಚ್ಚಿಸಿಕೊಳ್ಳುವುದು ಇದರ ಆಂತರಿಕ ಉದ್ದೇಶವಾಗಿತ್ತು. ಬಂಡವಾಳಶಾಹಿ ವ್ಯವಸ್ಥೆಯು ಭಾರತೀಯ ಮಾರುಕಟ್ಟೆಯ ವಿಸ್ತರಣೆ ಮಾಡುವುದು ಮುಖ್ಯ ಉದ್ದೇಶವಾಗಿತ್ತು.

ವಸಾಹುತು ಆಡಳಿತದ ಸಂದರ್ಭದಲ್ಲಿ ರೈಲು ಸಾರಿಗೆ ವ್ಯವಸ್ಥೆ ಜಾರಿಗೆ ತರಲು ಡಾಲ್‌ಹೌಸಿಯು ಭಾರತದ ಅಪಾರ ಪ್ರಮಾಣದ ಕಾಡುಗಳನ್ನು ನಾಶಮಾಡಿ ರೈಲುಮಾರ್ಗಗಳನ್ನು ಹಾಕಲಾಯಿತು. ಬೆಲೆಬಾಳುವ ಮರಗಳನ್ನು ಕಡಿದು ನಾಶಗೊಳಿಸಿ ಭಾರತದ ಅರಣ್ಯ ಸಂಪತ್ತನ್ನು ಕೊಳ್ಳೆಹೊಡೆದರು. ಈ ಸಂದರ್ಭದಲ್ಲಿ ಸಾವಿರ ಸಾವಿರ ಹೆಕ್ಟೇರ್ ಪ್ರದೇಶದ ಅರಣ್ಯ ನಾಶವಾಯಿತು.

೧೮೫೫ ರಲ್ಲಿ ಬ್ರಿಟಿಷರ ವಿರುದ್ಧ ನಡೆದ ಸಂತಾಲರ ಚಳುವಳಿ, ಗಾಂಧಿ ನೇತೃತ್ವದಲ್ಲಿ ಗುಜರಾತ್‌ನ ಬಾರ್ಡೋಲಿ ಸತ್ಯಾಗ್ರಹ ೧೯೨೮ ಮತ್ತು ಚಂಪಾರಣ್ಯ ಸತ್ಯಾಗ್ರಹಗಳ ಮೂಲಕ ರೈತರು ಅತ್ಯಧಿಕ ಸಂಖ್ಯೆಯಲ್ಲಿ ಪಾಲ್ಗೊಂಡ ಪರಿಣಾಮದಿಂದ ಬ್ರಿಟಿಷ್ ಆಡಳಿತವು ಸಂದರ್ಭಕ್ಕೆ ಅನುಸಾರವಾಗಿ ನಡೆದುಕೊಳ್ಳತೊಡಗಿತು. ಗೇಣಿಕಾಯ್ದೆಗೆ ಸುಧಾರಣೆ ತರಲು ರಾಯಲ್ ಕಮಿಷನ್ ಮತ್ತು ಫ್ಲೌಟ್ ಕಮಿಷನ್‌ಗಳು ಭೂಸುಧಾರಣೆ ಕುರಿತು ವರದಿ ನೀಡತೊಡಗಿತು. ಭಾರತಕ್ಕೆ ಸ್ವಾತಂತ್ರ್ಯ ಬರುವ ಮುನ್ನವೇ ಭೂಗೇಣಿ ಸುಧಾರಣೆಯನ್ನು ಜಾರಿಗೆ ತಂದಿತು.

## ೨.ಸ್ವಾತಂತ್ರ್ಯೋತ್ತರ ಭಾರತದಲ್ಲಿ ಭೂಸುಧಾರಣೆಯ ಯತ್ನಗಳು

ವಸಾಹತುಶಾಹಿ ಆಡಳಿತ ವ್ಯವಸ್ಥೆ, ಭೂಮಾಲೀಕರುಗಳು ಗೇಣಿದಾರರನ್ನು,ಸಣ್ಣ ರೈತರನ್ನು ಕಂದಾಯ,ಮಧ್ಯವರ್ತಿಗಳ ಉಪಟಳ ಮುಂತಾದ ಹಿಂಸೆಗಳಿಂದ ಬೇಸತ್ತಿದ್ದರು.ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಭಾರತ ಸರ್ಕಾರ ಅಸ್ತಿತ್ವಕ್ಕೆ ಬಂದಾಗ ಸಣ್ಣರೈತರು, ಬಡ ಕೂಲಿಕಾರ್ಮಿಕರಿಗೆ ಹೊಸ ಭರವಸೆ ಮೂಡಿಸಿತ್ತು. ಆದರೆ ಕಾಂಗ್ರೆಸ್ ಸರ್ಕಾರ ಅಧಿಕಾರಕ್ಕೆ ಬಂದ ನಂತರವೂ ರೈತರ ಮತ್ತು ಕೃಷಿ ಕಾರ್ಮಿಕರ ಸಂಕಷ್ಟಗಳನ್ನು ಪರಿಹರಿಸುವಲ್ಲಿ ವಿಫಲವಾಯಿತು.ಕೃಷಿ ಕ್ಷೇತ್ರದ ಅಭಿವೃದ್ಧಿಗಾಗಿ ಯೋಜಿಸಿದ್ದ ಯೋಜನೆಗಳು ರೈತರ ಸಮಸ್ಯೆಗಳನ್ನು ಬಗೆಹರಿಸುವ ಬದಲು ಮತ್ತಷ್ಟು ಇಕ್ಕಟ್ಟಿಗೆ ಸಿಕ್ಕಿಸಿದವು. ಈ ಎಲ್ಲಾ ಕಾರಣಗಳ ನಂತರವೂ ಭಾರತದಲ್ಲಿ ರೈತ ಚಳುವಳಿ ನಡೆಯಲು ಕಾರಣವಾಯಿತು. ೧೯೪೬ -೫೧ರವರೆಗೆ ನಡೆದ ಆಂಧ್ರದ ತೆಲಂಗಾಣ ರೈತ ಹೋರಾಟ,೧೯೪೬ -೪೭ ರಲ್ಲಿ ಬಂಗಾಳದ ತೇಭಾಗ ಹೋರಾಟ, ೧೯೪೫-೪೬ರಲ್ಲಿ ನಡೆದ ಮಹಾರಾಷ್ಟ್ರದ ಗಿರಿ ಜನರು ನಡೆಸಿದ ವಾರಲಿ ಆದಿವಾಸಿಗಳ ಹೋರಾಟ, ಇದೇ ಕಾಲಕ್ಕೆ ಪಂಜಾಬ್‌ನಲ್ಲಿ ಕಂದಾಯದ ವಿರುದ್ಧ, ಬಿಹಾರದಲ್ಲಿ ಆಹಾರ ದಾನ್ಯಗಳ ಬೆಲೆ ಏರಿಕೆ ವಿರುದ್ಧ, ತಮಿಳುನಾಡಿನಲ್ಲಿ ಮತ್ತು ಮಹಾರಾಷ್ಟ್ರದಲ್ಲಿ ಕೃಷಿಕಾರ್ಮಿಕರ ಹೋರಾಟ, ಕೇರಳದಲ್ಲಿ ಭೂಸುಧಾರಣೆ ಜಾರಿಗೆ ತರಲು ನಡೆಸಿದವು.ಈ ಎಲ್ಲಾ ಹೋರಾಟದ ನೇತೃತ್ವದಲ್ಲಿ ಕಮ್ಯುನಿಸ್ಟ್ ತತ್ವದ ಅಖಿಲಭಾರತದ ಕಿಸಾನ್ ಸಭಾವು ನೇತೃತ್ವವಹಿಸಿತು.

ಭಾರತದಲ್ಲಿ ಇದೇ ಕಾಲಕ್ಕೇ ಪ್ರಜಾಸೋಷಿಯಲಿಸ್ಟ್‌ಪಕ್ಷದ ನೇತೃತ್ವದಲ್ಲಿ ರೈತ ಹೋರಾಟಗಳನ್ನು ನಡೆಸಿತು.೧೯೫೮ರಲ್ಲಿ ಉತ್ತರ ಪ್ರದೇಶದ ಬರಗಾಲ ಪೀಡಿತ ಪ್ರದೇಶದ ರೈತರಿಗೆ ಪರಿಹಾರ ನೀಡಬೇಕೆಂಬ ಹೋರಾಟ,ಬಿಹಾರದಲ್ಲಿ ಭೂಮಿತಿ ಸರಿಯಾಗಿ ಜಾರಿಗೊಳ್ಳಬೇಕೆಂಬ ಹೋರಾಟ,ರಾಜಾಸ್ತಾನದಲ್ಲಿ ನೀರಿನ ಕಂದಾಯದ ವಿರುದ್ಧ ಹೋರಾಟ,ಮಧ್ಯಪ್ರದೇಶದಲ್ಲಿ ರೈತರಿಗೆ ಕೃಷಿ ಕೂಲಿಕಾರ್ಮಿಕರಿಗೆ ಪರಿಹಾರ ಮತ್ತು ಪುನರ್ವಸತಿ ಕಲ್ಪಿಸುವಂತೆ ಹೋರಾಟ,ಭಿಲ್ಲರು ರಾಜಾಸ್ತಾನದಲ್ಲಿ ಅರಣ್ಯಾಧಿಕಾರಿಗಳ ವಿರುದ್ಧ ನಡೆಸಿದ ಹೋರಾಟಗಳು ಮುಖ್ಯವಾದವುಗಳು. ಸ್ವಾತಂತ್ರ್ಯ ಭಾರತದಲ್ಲಿ ಭೂಸುಧಾರಣೆಗೆ ಮುನ್ನ ಈ ರೀತಿಯ ಹೋರಾಟಗಳು ತಕ್ಕ ಭೂಮಿಕೆಯನ್ನು ಸಿದ್ಧಗೊಳಿಸಿದವು.

ಇದು ಆಳುವ ಸರ್ಕಾರದ ಕಣ್ಣು ತೆರೆಸಲು ಕಾರಣವಾಯಿತು.ಈ ಕಾಲಕ್ಕೆ ಕಾಂಗ್ರೆಸ್ ಸರ್ಕಾರದ ರೈತರ ಸಮಸ್ಯೆಗಳನ್ನು ಕೈಗೆತ್ತಿಗೊಳ್ಳದೆ ವಿಧಿಯಲ್ಲ ಎಂಬುದನ್ನು ಅರಿತುಕೊಂಡಿತು. ಹೀಗಾಗಿ ಭೂಸುಧಾರಣೆಯನ್ನು ಜಾರಿಗೊಳಿಸಲು ಮುಂದಾಯಿತು. ೧೯೪೮ ರಲ್ಲಿ ಕಾಂಗ್ರೆಸ್ ವಿಶೇಷ ಸಮ್ಮೇಳನದಲ್ಲಿ ಕೆಲವು ಮುಖ್ಯ ತೀರ್ಮಾನವನ್ನು ಕೈಗೊಂಡಿತು.

"೧.ಸರ್ಕಾರ ಹಾಗೂ ಉಳುಮೆ ಮಾಡುವ ರೈತರ ನಡುವಿನ ಮಧ್ಯವರ್ತಿಗಳನ್ನು ಅಮಾನತ್ತುಗೊಳಿಸಿ ಸಹಕಾರಿ ಬೇಸಾಯ ಮುಂತಾದವನ್ನು ಜಾರಿಗೆ ತರಬೇಕು.

೨.ಭೂಮಿತಿಯನ್ನು ಜಾರಿಗೆ ತರಬೇಕು. ಮಿತಿಗಿಂತ ಹೆಚ್ಚಿನ ಭೂಮಿಯನ್ನು ಸಹಕಾರಿ ಸಂಸ್ಥೆಗಳಿಗೆ ವಹಿಸಿಕೊಡಬೇಕು.

೩. ಸಣ್ಣ ಹಿಡುವಳಿಯನ್ನು ಕ್ರೋಢಿಕರಿಸಿ ಇನ್ನು ಮುಂದೆ ಹೋಳಾಗುವುದನ್ನು ತಡೆಗಟ್ಟಬೇಕು. ಎನ್ನುವ ಸಲಹೆಗಳನ್ನು ಮುಂದಿಟ್ಟಿತು."[೩]

ಆನಂತರದಲ್ಲಿ ಅರ್ಥಶಾಸ್ತ್ರಜ್ಞ "ಡಾ.ಜೆ.ಸಿ.ಕುಮಾರಪ್ಪನವರ ನೇತೃತ್ವದಲ್ಲಿ ಕೃಷಿ ಸುಧಾರಣಾ ಸಮಿತಿ"ಯನ್ನು ರಚಿಸಿದರು. ಈ ಸಮಿತಿಯ ವರದಿಯು ತನ್ನ ಎಡಪಂಥೀಯ ನಿಲುವನ್ನು ಹೊಂದಿದ್ದರಿಂದ ಕಾಂಗ್ರೆಸ್ ಬಹುಪಾಲು ಬಲಪಂಥೀಯ ನಾಯಕರು ಇಂಥ ವರದಿಯನ್ನು ತಳ್ಳಿಹಾಕಿದರು. ೧೯೫೦ ರಲ್ಲಿ ನಾಸಿಕ್‌ನಲ್ಲಿ ಎ.ಐ.ಸಿ.ಸಿ ಸಮ್ಮೇಳನದಲ್ಲಿ ಜಮೀನ್ದಾರಿ, ಜಹಗಿರ್‌ದಾರಿ ಮುಂತಾದ ಊಳಿಮಾನ್ಯ ಭೂಮಾಲೀಕತನವನ್ನು ತೊಡೆದು ಹಾಕಲು ತೀರ್ಮಾನಿಸಲಾಯಿತು. ೧೯೫೩ರಲ್ಲಿ ಪುನಃ ರಾಷ್ಟ್ರೀಯ ಕಾಂಗ್ರೆಸ್ ನಡೆಸಿ ಪ್ರತಿಯೊಂದೂ ರಾಜ್ಯವು ಭೂ ಸಂಬಂಧಿ ವಿವರ ಮಾಹಿತಿಯನ್ನು ಸಂಗ್ರಹಿಸಿ ಭೂಮಿತಿಯನ್ನು ಹೇರಬೇಕು. ಈ ಉದ್ದೇಶದಿಂದ ಹೆಚ್ಚುವರಿ ಭೂಮಿಯನ್ನು ಭೂಹೀನರಿಗೆ ಹಂಚುವುದಾಗಿತ್ತು.

೧೯೫೭ ರಲ್ಲಿ ನಡೆದ ಅಖಿಲಭಾರತಕಾಂಗ್ರೆಸ್ ಅಧಿವೇಶನದಲ್ಲಿ ಭೂಸುಧಾರಣೆಯಲ್ಲಿ ನಿಧಾನ ನೀತಿಯ ಬಗ್ಗೆ ಚರ್ಚೆಗೊಳಗಾಯಿತು. ಕೆಲ ಬಲಪಂಥೀಯ ನಾಯಕರು ಈ ರೀತಿಯ "ಪ್ರಗತಿಗೆ ಅಡ್ಡಿಯುಂಟಾಗಿರುವುದು ಭೂಸಂಬಂಧಗಳಲ್ಲಾಗಲಿ ಹಿಡುವಳಿಗಳ ಗಾತ್ರದಲ್ಲಾಗಲಿ ಅಲ್ಲ. ಹೆಚ್ಚಿನ ಉತ್ಪಾದನೆಗೆ ತೊಡಗಿರುವ ತಾಂತ್ರಿಕ ವಿಫಲತೆಯಲ್ಲಿ. ಆದ್ದರಿಂದ ಸರಿಯಾದ ತಂತ್ರಜ್ಞಾನವನ್ನು ವ್ಯವಸಾಯ ಕ್ಷೇತ್ರದಲ್ಲಿ ಬಳಸಿದರೆ ಸಮಸ್ಯೆಯ ಪರಿಹಾರವಾಗುತ್ತದೆ."[೪] ಇಂಥ ಅಭಿಪ್ರಾಯವನ್ನು ವ್ಯಕ್ತಗೊಳಿಸಿದರು. ೧೯೫೯ರಲ್ಲಿ ನಾಗಪುರದಲ್ಲಿ ನಡೆದ ಅಧಿವೇಶನದ ಸಮಿತಿಯಲ್ಲಿ ತೀರ್ಮಾನಿಸಲಾದ ಭೂಮಿತಿ ವಿಷಯವನ್ನು ೧೯೬೧ರಲ್ಲಿ ಕಾನೂನಾಗಿ ಸರ್ಕಾರವು ಜಾರಿಗೊಳಿಸಿತು.

೬೦-೭೦ ದಶಕದಲ್ಲಿ "ತಾಂತ್ರಿಕ ಅಭಿವೃದ್ಧಿ", "ಹಸಿರುಕ್ರಾಂತಿ" ಯೋಜನೆಗಳನ್ನು ಭಾರತ ಸರ್ಕಾರವು ಘೋಷಿಸಿತು. ಈ ಯೋಜನೆಗಳ ಹುಸಿತನಗಳು ರೈತರಿಗೆ ಬೇಗ ಅರ್ಥವಾಗತೊಡಗಿದವು. ಕರ್ನಾಟಕ ತಮಿಳುನಾಡು, ಬಿಹಾರ, ಹೈದ್ರಾಬಾದ್, ಕೇರಳ ಮುಂತಾದ ರಾಜ್ಯಗಳಲ್ಲಿ ಭೂ ಸುಧಾರಣೆ ಕುರಿತು ರೈತರಿಂದ ಒತ್ತಡಗಳು ಬಂದವು.

ಆನಂತರದಲ್ಲಿ ೧೯೪೫ರ ಮಹಾಯುದ್ಧದ ನಂತರದಲ್ಲಿ ಯುದ್ಧೋತ್ತರ ಅಂತರರಾಷ್ಟ್ರೀಯ ಭೂಸುಧಾರಣಾ ರೂವಾರಿಯಾದ ವೂಲ್ಫ್ ಲೆಡೆಜಿನ್ಸ್ಕಿಯ ಭಾರತದ ಭೂಸುಧಾರಣಾ ನೀತಿ ಕುರಿತು ಸುಬೋಧಮಿತ್ರ ಹೀಗೆ ಬರೆಯುತ್ತಾರೆ. "ಲೆಡೆಜಿನ್ಸ್ಕಿಯು ೧೯೬೪-೧೯೭೫ರವರೆಗೆ ಭಾರತದಲ್ಲಿ ನೆಲೆಸುತ್ತಾರೆ. ಈ ಅವಧಿಯಲ್ಲಿ ಭೂ ಸುಧಾರಣೆಯ ತಂತ್ರೋಪಾಯಗಳನ್ನು ಅಭಿವೃದ್ಧಿ ಪಡಿಸುತ್ತಾರೆ. ಅವರು ಭೂಹಂಚಿಕೆ ಬದಲು ಭೂಮಿತಿಯನ್ನು ಭಾರತದ ಮುಂದಿಡುತ್ತಾರೆ. ಕಳೆದ ಶತಮಾನದ ಅರವತ್ತು ಮತ್ತು ಎಪ್ಪತ್ತು ದಶಕದ ಬೆಳವಣಿಗೆಯಾದ ರೈತ ಚಳುವಳಿಗಳನ್ನು ಪರಿಗಣಿಸಿ, ಅಪಾಯದ ವಿರುದ್ಧ ಹೋರಾಡಲು ಭೂಸುಧಾರಣೆ ಕಾರ್ಯಕ್ರಮವನ್ನು ಚುರುಕುಗೊಳಿಸಬೇಕೆಂದು ಅವರು ಸರ್ಕಾರಕ್ಕೆ ಬೋಧನೆ ಮಾಡಿದ್ದಾರೆ."[೫]

ಭಾರತದ ಮಟ್ಟದಲ್ಲೂ ಭೂಸುಧಾರಣೆ , ಭೂ ಹಂಚಿಕೆ ಮತ್ತು ಭೂಮಿತಿಯು ಪರಿಣಾಮಕಾರಿಯಾಗಿ ನಡೆಯದೇ ಇರುವುದನ್ನು ಕಾಣುತ್ತೇವೆ. ಆದರೆ ಇತ್ತೀಚಿನ ದಿನಗಳಲ್ಲಿ ಹೊಸ ಬಗೆಯ ಭೂಸಮಸ್ಯೆಗಳು ಶುರುವಾಗಿವೆ. ಈಗಾಗಲೇ ಜಾರಿಗೊಳ್ಳುತ್ತಿರುವ ವಿಶೇಷ ವಿತ್ತವಲಯ ಕಾಯ್ದೆಯ ಮೂಲಕ ಭಾರತದಲ್ಲಿ ಭೂಕಬಳಿಕೆ ನಡೆಯುತ್ತಿದೆ. ಹೀಗಾಗಿ ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಗಳ ಮೇಲೆ ಇಂಥ ನಿರ್ದೇಶನ ನೀಡಿದೆ. ಇದನ್ನು ಕೆಲವು ರಾಜ್ಯಗಳು ಕೇಂದ್ರದ ಆದೇಶದಂತೆ ಪಾಲಿಸುತ್ತ ಬಂದಿವೆ.

### ೩.೧.೨ ಕರ್ನಾಟಕ ಮಟ್ಟದಲ್ಲಿ ಭೂಸುಧಾರಣೆ

ಕರ್ನಾಟಕದಲ್ಲಿ ಹಲ ಶತಮಾನಗಳಿಂದ ಭೂಮಾಲೀಕರ,ಪಾಳೇಗಾರರ,ಬ್ರಿಟಿಷರ ಅನ್ಯಾಯದ ವಿರುದ್ಧ, ಶೋಷಣೆಯ ವಿರುದ್ಧ ರೈತರೊಳಗಿದ್ದ ಆಕ್ರೋಶ ಸ್ಫೋಟಗೊಳ್ಳ ತೊಡಗಿತು. ತಮಗಾದ ಅನ್ಯಾಯವಿರುದ್ಧ ನ್ಯಾಯ ಪಡೆಯಲು ಕರ್ನಾಟಕದ ರೈತರು ಸಿಡಿದೆದ್ದಿರುವುದನ್ನು ಕಾಣುತ್ತೇವೆ. ಈ ನಾಡಿನ ಭೂ ಸುಧಾರಣಾ ಆಶಯವನ್ನು ಅರ್ಥೈಸಿಕೊಳ್ಳುವ ಮುನ್ನ; ಚಾರಿತ್ರಿಕವಾಗಿ ವಿಜಯನಗರದ ಆಡಳಿತ, ಮೈಸೂರು ರಾಜ್ಯ ಆಡಳಿತ ಮುಂತಾದವರ ಆಡಳಿತದಲ್ಲಿ ಬೇಸಾಯ ಕ್ಷೇತ್ರದಲ್ಲಿದ್ದ ಭೂಸಂಬಂಧವನ್ನು ಸ್ಥೂಲವಾಗಿ ಅಧ್ಯಯನ ಮಾಡಲಾಗುವುದು.

### ೧. ವಸಾಹತು ಕರ್ನಾಟಕದಲ್ಲಿ ಭೂಸುಧಾರಣೆಯ ಯತ್ನಗಳು

ಕರ್ನಾಟಕ ಸಂದರ್ಭದಲ್ಲಿ ವಿಜಯನಗರದ ಆಡಳಿತದ ಭೂ ನಿರ್ವಹಣೆಯನ್ನು ಪಾಳೆಯಗಾರರ ಉಸ್ತುವಾರಿಯಲ್ಲಿ ನೋಡಿಕೊಳ್ಳಲು ರಾಜರು ವ್ಯವಸ್ಥೆಗೊಳಿಸಿದರು. ಆಯಾ ಪ್ರಾಂತ್ಯದ ಪಾಳೆಯಗಾರರು ತಮ್ಮ ಅಂಕೆಯಲ್ಲಿಟ್ಟುಕೊಂಡು ರೈತರನ್ನು ನಿಯಂತ್ರಿಸುತ್ತಿದ್ದರಿಂದ, ಕ್ರಮೇಣ ಇವರು ಮುಂದೆ ದೊಡ್ಡ ಜಮೀನ್ದಾರರಾಗಿ ಮಾರ್ಪಾಡಾದರು. ಇಲ್ಲಿ ಪಾಳೆಯಗಾರರಲ್ಲದೆ ವಂಶಪಾರಂಪರ್ಯವಾಗಿ ಬಂದಿದ್ದ ೧೨ ರೀತಿಯ ಆಯಗಾರರಿದ್ದರು. ಅವುಗಳಲ್ಲಿ ಶಾನುಭೋಗ, ಗೌಡ, ಕಮ್ಮಾರ, ಬಡಗಿ, ಅಗಸ, ಪಂಚಾಂಗಿ, ನಾಯಿಂದ (ಶಾಸ್ತ್ರ ಹೇಳುವವನು), ಮಾದಿಗ , ಅಕ್ಕಸಾಲಿ, ತಳವಾರ , ನೀರಗಂಟಿ ಮತ್ತು ಕುಂಬಾರ. ಆದರೆ ಈ ಶಾನುಭೋಗ ಮತ್ತು ಗೌಡ ಇವರು ಪ್ರತಿಯೊಂದು ಹಳ್ಳಿಯ ಲೆಕ್ಕ ಪತ್ರವನ್ನು ನಿಭಾಯಿಸಬೇಕಾಗಿತ್ತು. ಮೂಲಕ ರೈತರು ನೇರವಾಗಿ ರಾಜ್ಯದ ಬೊಕ್ಕಸಕ್ಕೆ

ತೆರಿಗೆಯನ್ನು ಕಟ್ಟಬೇಕಾಗಿತ್ತು.

ಆನಂತರದಲ್ಲಿ ಮೈಸೂರು ರಾಜರ ಆಳ್ವಿಕೆಯು ಭೂ ವ್ಯವಸ್ಥೆ ಕುರಿತು ತನ್ನದೇ ಆದ ನಿಯಮವನ್ನು ರೂಪಿಸಿತು. "ಚಿಕ್ಕದೇವರಾಜ ೧೬೭೨ ರಿಂದ ೧೭೦೪ರವರೆಗೆ" ತನ್ನ ಅಧಿಕಾರವಧಿಯಲ್ಲಿ ಭೂ ಒಡೆತನದ ಹಕ್ಕನ್ನು ತನ್ನಲ್ಲೇ ಕೇಂದ್ರೀಕರಿಸಿಕೊಂಡನು."ಎಲ್ಲ ಭೂಮಿಯು ರಾಜ್ಯದ ಒಡೆತನಕ್ಕೆ ಸೇರಿದ್ದರಿಂದ ಭೂಮಿ ಉಳುವ ರೈತರೆಲ್ಲರೂ ಗೇಣಿದಾರರೆನಿಸಿಕೊಂಡರು. ಹೀಗೆ ತಮ್ಮ ಭೂಮಿಯ ಹಕ್ಕನ್ನು ಕಳೆದುಕೊಂಡ ನಂಜನಗೂಡಿನ ಜಂಗಮ ರೈತರು ಚಿಕ್ಕದೇವರಾಜನ ವಿರುದ್ಧ ದಂಗೆ ಎದ್ದರು. ಈತನ ಆಳ್ವಿಕೆ ನಂತರ ಪಾಳೆಯಗಾರಿಕೆ ಅಡಳಿತ ಮತ್ತೆ ತಲೆ ಎತ್ತಿತು."[೬] ಇದರಿಂದಾಗಿ ಕರ್ನಾಟಕದಲ್ಲಿ ಭೂ ನಿರ್ವಹಣೆಯ ಕುರಿತು ಚಿಕ್ಕದೇವರಾಜರ ಇಂಥ ಹೊಸ ಪ್ರಯೋಗಗಳು ವಿಫಲವಾಗತೊಡಗಿದವು. ಅಂತಿಮವಾಗಿ ಪಾಳೆಯಗಾರಿಕೆಯ ಆಡಳಿತ ವ್ಯವಸ್ಥೆಯು ಭೂಮಾಲೀಕರಿಗೆ ಅನುಕೂಲವಾಗುವಂತೆ ನಿಯಮಗಳನ್ನು ಪುನಃ ಅಸ್ತಿತ್ವಕ್ಕೆ ತಂದವು.

೧೭೬೧ ರಿಂದ ೧೭೯೯ ರವರೆಗೆ ಮೈಸೂರು ರಾಜ್ಯವು ಮುಸ್ಲಿಂ ಆಡಳಿತಕ್ಕೆ ಒಳಪಟ್ಟಿತು. ಈ ಅವಧಿಯಲ್ಲಿ ಅಧಿಕಾರಕ್ಕೆ ಬಂದ ಹೈದರಾಲಿಯ ಮೈಸೂರು ರಾಜ್ಯದ ಪಾಳೆಯಗಾರರನ್ನು ಪ್ರಾಬಲ್ಯವನ್ನು ಹತ್ತಿಕ್ಕಲು ಯತ್ನಿಸಿದನು. ಆದರೆ ಪಾಳೆಯಗಾರರು ಇದನ್ನು ಸಹಿಸದೇ ಈತನ ಆಡಳಿತದ ಮೇಲೆ ದಂಗೆ ಏಳುತ್ತಿದ್ದರು. ೧೭೮೨ರ ನಂತರ ತನ್ನ ತಂದೆಯ ಸ್ಥಾನಕ್ಕೆ ಬಂದ ಟಿಪ್ಪುವು ಪಾಳೆಯಗಾರರ ವಿರುದ್ಧ ಹೋರಾಟ ನಡೆಸಿ ಸಂಪೂರ್ಣ ಅಧಿಕಾರವನ್ನು ಪಡೆದುಕೊಂಡನು.ಈತ ಅಧಿಕಾರ ಬಂದ ಹೊಸತರಲ್ಲಿ ಕಂದಾಯ ನೀತಿಯಲ್ಲಿ ಮಹತ್ತರ ಬದಲಾವಣೆ ತರಲುಯತ್ನಿಸಿದರು. ಇದರಿಂದಾಗಿ ಪಾಳೆಯಗಾರರ ಅಂತ್ಯದಿಂದ ಭೂಮಿಯನ್ನು ವಶಪಡಿಸಿಕೊಂಡು ನೇರವಾಗಿ ಗೇಣಿ ರೈತರಿಗೆ ಜಮೀನನ್ನು ನೀಡಲಾಯಿತು.

ಮೈಸೂರು ರಾಜ್ಯದ ಆಡಳಿತದಲ್ಲಿ ಟಿಪ್ಪು ಆಡಳಿತದಲ್ಲಿ ಭೂ ನಿರ್ವಹಣೆ ಕುರಿತು ಹೆಚ್ಚು ಮಹತ್ವ ಪಡೆಯಿತು. ಈತನ ಆಡಳಿತಕ್ಕೊಳಪಟ್ಟ ಭೂಮಿಯನ್ನೆಲ್ಲಾ ತುಕಡಿಯನ್ನಾಗಿ ಮಾಡಿದ. "ಟಿಪ್ಪುಸುಲ್ತಾನ್ ಆಡಳಿತ ಕಾಲದಲ್ಲಿ ಹೊಸ ಭೂಕಂದಾಯ ವಿಧಾನವನ್ನು ರೂಪಿಸಲಾಯಿತು. ಇವನ ಆಡಳಿತಕ್ಕೆ ಒಳಪಟ್ಟ ಭೂಮಿಯನ್ನೆಲ್ಲ ತುಕಡಿಗಳಾಗಿ ವಿಭಾಗಿಸಲಾಯಿತು. ಈ ತುಕಡಿಗಳ ಉದ್ದೇಶ ಕಂದಾಯ ವಸೂಲು ಮಾಡುವುದೇ ಆಗಿತ್ತು."[೭] ಈ ತುಕಡಿ ಭೂಮಿಯ ಕಂದಾಯ ವಸೂಲಿ ಮಾಡುವ ಆಡಳಿತರನ್ನು ಅಮಲ್ದಾರನಿಗೆ ವಹಿಸಲಾಗಿತ್ತು. ಈತನ ಅಧೀನದಲ್ಲಿ ಒಬ್ಬ ಶಿರಸ್ತೇದಾರ ,ಮೂವರು ಗುಮಾಸ್ತರು,ಒಬ್ಬ ತರಾಫದಾರ, ಆರುಮಂದಿ ಜವಾನರು,ಒಬ್ಬ ಮುಖ್ಯಸ್ಥ,ಹಣವನ್ನು ಇಡಲು ಒಬ್ಬ ಷರೀಫ ಹಾಗೂ ಮುನ್ಷಿಯನ್ನು ನೇಮಿಸಲಾಗಿತ್ತು.ಇದೇ ಪದ್ಧತಿಯನ್ನು ಮೊಗಲ ಕಾಲದಲ್ಲೂ ಕಾಣುತ್ತೇವೆ.

ಕರ್ನಾಟಕ ಸಂದರ್ಭದಲ್ಲಿ ಭೂ ನಿಯಂತ್ರಣದ ಯೋಜನೆ ರೂಪಿಸಿದ ಟಿಪ್ಪುವು ಈ ಸಂದರ್ಭದಲ್ಲಿ ಮಹತ್ವದ ನಿರ್ಧಾರವನ್ನು ಕೈಗೊಂಡನು. "ಸರ್ಕಾರಿ ಅಧಿಕಾರಿಗಳಿಗೆ ಭೂಮಾಲೀಕತ್ವವನ್ನು ನಿರಾಕರಿಸಿದ್ದು, ಒಬ್ಬ ರೈತನಿಗೆ ಒಂದು ಮೋಜಣಿಗಿಂತ ಹೆಚ್ಚಿನ ಭೂಮಿಯನ್ನು ಕೊಡುತ್ತಿರಲಿಲ್ಲ. ರೈತರು ಹಿಂದೆ ಕೊಡಬೇಕಾಗಿದ್ದ ಬಾಕಿಯನ್ನು ಪಾವತಿಮಾಡಿದ ಮೇಲೆಯೇ ಮುಚ್ಚಳಿಕೆ ಬರೆಸಿಕೊಂಡು ಈ ಭೂಮಿಯನ್ನು ಕೊಡಲಾಗುತ್ತಿತ್ತು. ಭೂಮಿಯನ್ನು ಪಾಳುಗೆಡವಿದ್ದರೆ ರೈತರು ದಂಡ ತೆರಬೇಕಾಗುತ್ತಿತ್ತು."[೮] ಇಂತಹ ಪ್ರಗತಿಪರವಾದ ಭೂ ಸುಧಾರಣೆ ನೀತಿಯನ್ನು ಟಿಪ್ಪು ಜಾರಿಗೆತಂದನು.

ಇವನ ಆಡಳಿತದಲ್ಲಿ ಜಹಗೀರು ಪದ್ಧತಿ ಜಾರಿಯಲ್ಲಿತ್ತು. ಇಲ್ಲಿ ಸರ್ಕಾರಿ ಅಧಿಕಾರಿಗಳಿಗೆ ಜಹಗೀರು ಭೂಮಿಗಳನ್ನು ನೀಡುವುದು. ಜಹಗೀರು ಪಡೆದವರು ಜೀವನ ಪರ್ಯಂತ ಬಳಸಿ ಸತ್ತ ನಂತರ ಆ ಭೂಮಿ ಸರ್ಕಾರದ ಒಡೆತನಕ್ಕೆ ಸೇರುತ್ತಿತ್ತು. ಜಹಗೀರು ಪಡೆದು ವಂಶಪರಂಪರೆಯಾಗಿ ಅನುಭವಿಸಬಹುದಾಗಿತ್ತು. ಭೂಸುಧಾರಣೆಯ ಜೊತೆಗೆ ಇನಾಂತಿ ಭೂಮಿಯನ್ನು ನೀಡುವ ಪದ್ಧತಿಯನ್ನು ಟಿಪ್ಪು ಅನುಸರಿಸುತ್ತಿದ್ದನು. ಇನಾಂತಿಗಳೆಂದರೆ ಕಂದಾಯರಹಿತ ಮಂಜುರಾತಿಗಳಾಗಿದ್ದವು. ಇವುಗಳನ್ನು ಮುಸ್ಲಿಂ ನಾಯಕರುಗಳಿಗೆ, ದೇವಸ್ಥಾನಗಳಿಗೆ ನೀಡಿದನು. ಟಿಪ್ಪುವು ಪ್ರಗತಿಪರ ಆಡಳಿತ ಸುಧಾರಣೆಯ ಜೊತೆಗೆ, ಆಡಳಿತ ನ್ಯೂನ್ಯತೆಗಳಾದ ಕಂದಾಯ ವಸೂಲಿ ಮಾಡುವ ಸಲುವಾಗಿ ಅತೀ ಹೆಚ್ಚು ಅಮಲ್ದಾರರನ್ನು ನೇಮಿಸಿದುದು, ಕಂದಾಯ ಸೋರಿಕೆ ಮತ್ತು ಆದಾಯಕ್ಕಿಂತ ಖರ್ಚು ಹೆಚ್ಚಾಗಲು ಕಾರಣವಾಯಿತು.

"೧೭೭೨ ರಲ್ಲಿ ಮಲಬಾರ್ ಪ್ರದೇಶವೆಲ್ಲ ಕಂಪನಿಯ ವಶವಾಯಿತು. ೧೭೯೯ ರಲ್ಲಿ, ಟಿಪ್ಪು ಮಡಿದ ಮೇಲೆ, ಕಂಪನಿಯ ಅಧಿಕಾರ ಅಬಾಧಿತ. ಮಲಬಾರ್ ಜಿಲ್ಲೆಯಾಯಿತು. ಅದಕ್ಕೊಬ್ಬ ಆಂಗ್ಲ ಕಲೆಕ್ಟರ್. ಆ ಜಿಲ್ಲೆಯಲ್ಲಿ ದಕ್ಷಿಣದ್ದೇ ಕಾಸರಗೋಡು ತಾಲ್ಲೂಕು. ಬೇರೆ ಬೇರೆ ಸಾಮಾಜಿಕ ಪದ್ಧತಿ, ಭೂ ವ್ಯವಸ್ಥೆ ಇದ್ದವರನ್ನು ಒಟ್ಟಿಗೆ ಕಟ್ಟಿ ಒಂದು ತಾಲ್ಲೂಕು ನಿರ್ಮಿಸಿದ್ದರಲ್ಲಿ, ಒಡೆದು ಆಳುವ ಸಾಮ್ರಾಜ್ಯಶಾಹಿ ಕುಯುಕ್ತಿಯನ್ನು ಕಾಣುತ್ತೇವೆ. ಹೀಗಾಗಿ ಮಲಬಾರ್ ಜಿಲ್ಲೆಯಲ್ಲಿ ಇರಬೇಕಾಗಿದ್ದ ತಿರಿಕರಪುರ ಚರ್ವತ್ತೂರು, ನೀಲೇಶ್ವರ ಕಯ್ಯೂರು ಮುಂತಾದವು ದಕ್ಷಿಣ ಕನ್ನಡದ ಕಲೆಕ್ಟರನ ಅಧೀನವಾದವು."[೮]

ಇದರಿಂದ ವಸಾಹತುಶಾಹಿ ವ್ಯವಸ್ಥೆಯು ರೈತರನ್ನು ನಡೆಸಿಕೊಳ್ಳುತ್ತಿದುದ್ದು ತಮ್ಮ ವಿರುದ್ಧದ ಅಧಿಕಾರ ನಿಯಂತ್ರಣದೊಂದಿಗೆ ರೈತರಿಂದ ವಸೂಲಿ ಮಾಡುತ್ತಿದ್ದ ಅವೈಜ್ಞಾನಿಕ ಕಂದಾಯವನ್ನು ಹೆಚ್ಚುವರಿಯಾಗಿ ನೀಡುವುದರ ವಿರುದ್ಧ ರೈತರು ಒಳಗೊಳಗೆ ಕುದಿಯುತ್ತಿದ್ದರು. ಬಡ ರೈತ ಒಕ್ಕಲುಗಳ ದಾರುಣ ಸ್ಥಿತಿಯು, ಭೂಮಿಯೊಂದಿಗಿನ ಸಂಬಂಧಗಳು ಕಯ್ಯೂರು ರೈತ ಹೋರಾಟದ ಸ್ವರೂಪದಲ್ಲಿ ಸ್ಫೋಟಗೊಳ್ಳತೊಡಗಿತು. ಭೂಮಾಲೀಕರ, ಬಂಡವಾಶಾಹಿ ರೈತ ವರ್ಗವು ದೇಶೀಯ ನೆಲೆಯ ಸಣ್ಣ ರೈತ ಒಕ್ಕಲುಗಳನ್ನು ಶೋಷಣೆ ಮಾಡುತ್ತ ಬಂದುದರ ಪರಿಣಾಮವಾಗಿ ರೈತ ಒಕ್ಕಲುಗಳು ಏಕಕಾಲದಲ್ಲಿ ಬ್ರಿಟಿಷ್ ವಿರೋಧಿಯಾಗಿಯೂ, ಭೂಮಾಲೀಕ ವಿರೋಧಿಯಾಗಿಯೂ ಹೋರಾಟ ನಡೆಸಿದವು.

೧೭೯೯ರಲ್ಲಿ ಬ್ರಿಟಿಷರ ವಿರುದ್ಧ ಹೋರಾಟದಲ್ಲಿ ಸಾವನ್ನಪ್ಪಿದ. ಟಿಪ್ಪು ನಂತರ ದಿವಾನ್‌ಪೂರ್ಣಯ್ಯನವರ ಆಡಳಿತದಲ್ಲಿ ಪುನಃ ಪಾಳೇಗಾರರು ತಲೆಎತ್ತಿ ದೊಡ್ಡ ಜಮೀನ್ದಾರರಾಗಿ ಅಸ್ತಿತ್ವ ಪಡೆದರು. ಈ ಅವಧಿಯಲ್ಲಿ ಪಟೇಲರು, ಶಾನುಭೋಗರು,ಪೋಲೀಸರು ಸಾವಿರಾರು ಎಕರೆ ಜಮೀನುಗಳನ್ನು ತಮ್ಮ ಖಾತೆಗೆ ನೋಂದಾಯಿಸಿಕೊಂಡರು. "ವಂಶಪಾರಂಪರ್ಯದಿಂದ ಬಂದ ಆಸ್ತಿಯ ಹಕ್ಕನ್ನು ಸಕ್ರಮಗೊಳಿಸಿದ, ಹೆಚ್ಚಿನ ಪ್ರಮಾಣದಲ್ಲಿದ್ದ ಇನಾಂತಿ ಭೂಮಿಗಳಲ್ಲಿ ಬಹಳಷ್ಟು ಜೋಡಿ ಇನಾಂತಿಗಳಾಗಿ ಪರಿವರ್ತಿಸಿ ಹಗುರ ಕಂದಾಯ ಹೇರಿದ ಕೀರ್ತಿ ಪೂರ್ಣಯ್ಯನವರಿಗೆ ಸಲ್ಲುತ್ತದೆ."[೯] ಇವರ ಅಧಿಕಾರಾವಧಿಯಲ್ಲಿ ವಂಶಪಾರಂಪರ್ಯ ಆಸ್ತಿಯನ್ನು ರಕ್ಷಿಸುವುದು ಮತ್ತು ಕಂದಾಯದ ದರವನ್ನು ಕಡಿಮೆಗೊಳಿಸಿರುವುದು ಕಂಡುಬರುತ್ತದೆ.

"೧೭೯೯ರ ಒಪ್ಪಂದದ ನಂತರ ಮೈಸೂರು ಸಂಸ್ಥಾನದ ವಿದ್ಯಮಾನಗಳಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕೈವಾಡವಿತ್ತೆಂಬ ಅಂಶವನ್ನು ಗಮನಿಸಬಹುದಾಗಿದೆ. ಆದರೆ ರೈತರ ಅತೃಪ್ತಿಯನ್ನು ಕೆರಳಿಸುವಲ್ಲಿ ಇದರ ಪಾತ್ರ ಗೌಣ ಎನ್ನಬಹುದಾಗಿದೆ. ಆದರೂ ೨೪ ಲಕ್ಷ ರೂ.ಗಳ ಸಬ್ಸಿಡಿಯನ್ನು ಕೊಡಲೇ ಬೇಕೆನ್ನುವ ಒತ್ತಾಯ ಕಂದಾಯವನ್ನು ಹೆಚ್ಚಿಸಲು ಕಾರಣವಾಯಿತು. ನಗರ ಡಿವಿಷನ್ನಿನ ರೈತ ಹೋರಾಟದಿಂದ ಸರ್ಕಾರದ ಅಧಿಕಾರಿಶಾಹಿಯ ಕೈಗಳಲ್ಲಿ ಮೂಕವಾಗಿ ನರಳಿದ್ದ ಎಲ್ಲ ರೈತಾಪಿವರ್ಗಗಳೂ ಈ ದಂಗೆಯಲ್ಲಿ ಪಾಲ್ಗೊಂಡರು. ಕೆಲವು ಅಧಿಕಾರಿಗಳ ಕುತಂತ್ರದಿಂದಾಗಿ ಈ ಚಳುವಳಿ ಆರಂಭವಾಯಿತಾದರೂ ಮುಂದೆ ಸಾವಿರಾರು ಜನ ರೈತರು ಸೇರಿದ್ದರಿಂದ ಚಳುವಳಿಯ ಸ್ವರೂಪವೇ ಬದಲಾಯಿತು. ಈ ದಂಗೆ ವ್ಯಾಪಕವಾದ ನೆಲೆಯನ್ನು ಪಡೆಯಿತು. ಸರ್ಕಾರದ ವಿರೋಧಿಯಾಗಿ, ವರ್ತಕರ ವಿರೋಧಿಯಾಗಿ ರೈತರ ದಂಗೆ ರೂಪುಗೊಂಡಿತು."[೧೦]

೧೮೧೧ ರಿಂದ ೧೮೩೧ರವರೆಗೆ "ಮಹಾರಾಜ ಕೃಷ್ಣರಾಜ ಒಡೆಯ"ರ ಆಳ್ವಿಕೆಯಲ್ಲಿ ಬ್ರಿಟಿಷರಿಗೆ ಹೆಚ್ಚಿನ ಕಂದಾಯ ವಸೂಲಿ ಮಾಡಿಕೊಡಬೇಕಾಗಿತ್ತು. ದೇವಸ್ಥಾನ, ಮಠ ಮುಂತಾದವುಗಳಿಗೆ ಉದಾರವಾಗಿ ಇನಾಂತಿ ಭೂಮಿಯನ್ನು ನೀಡುವಂತೆ ತಮ್ಮ ಭೂಸುಧಾರಣೆಯನ್ನು ಜಾರಿಗೊಳಿಸಿದರು. ಇವರ ಬಂಧುಗಳಿಗೆ ಭೂಮಂಜೂರಾತಿಯಿಂದ ಅನುಕೂಲವಾಗಲೆಂದು ಕಾಯಂ ಗುತ್ತಾ ,ನಿರೂಪ ಜಮೀನುಗಳನ್ನು ನೀಡಿದ್ದರು.

ಇವರ ಆಡಳಿತಾವಧಿಯಲ್ಲಿ ಗೇಣಿರೈತರಿಗಾಗಿ ಹಲವು ಬಗೆಯ ಗೇಣಿಪದ್ಧತಿಯನ್ನು ಜಾರಿಗೊಳಿಸಿದ್ದರು. ಅವುಗಳು ಕಂದಾಯ ಜಮೀನು, ಬತಾಯಿ ಜಮೀನು, ಅಮಾನಿತಲಾವು ಜಮೀನು, ಶ್ರಯಗೇಣಿ, ಕಾಯಂ ಗುತ್ತಾ ಹಳ್ಳಿಗಳು ಮತ್ತು ಜೋಡಿ ಜಮೀನು ಈ ವಿಧಾನದಿಂದ ರೈತರು ಕಂದಾಯ ಕಟ್ಟುತ್ತಿದ್ದರಿಂದ ಭೂಒಡೆತನವು ರೈತರಲ್ಲೇ ಉಳಿಯುತ್ತಿತ್ತು. ಉಳಿದ ಕೆಲ ಜಮೀನುಗಳಲ್ಲಿ ಸರ್ಕಾರವೇ ವಸೂಲಿ ಮಾಡುತ್ತಿದ್ದರಿಂದ ಸರ್ಕಾರವೇ ಭೂ ಒಡೆತನವನ್ನು ಹೊಂದಿರುತ್ತಿತ್ತು.

ಟಿಪ್ಪುವಿನ ನಂತರದಲ್ಲಿ ೧೮೩೧ ರಿಂದ ೧೮೮೧ರವರೆಗೆ ನೇರವಾಗಿ ಬ್ರಿಟಿಷರು ಮೈಸೂರು ರಾಜ್ಯದ

ಕೆಲ ಭಾಗಗಳನ್ನು ತಮ್ಮ ಆಡಳಿತದ ವಶಕ್ಕೆ ತೆಗೆದುಕೊಂಡರು. ಆಗಿನ ಮೈಸೂರುರಾಜ್ಯದಲ್ಲಿ ಬ್ರಿಟಿಷರು ಮೊದಲಿಗೆ ಭೂಮಿಗೆ ಸಂಬಂಧಿಸಿದಂತೆ ಮೋಜಣೆ ಮತ್ತು ಆಸ್ತಿ ವ್ಯವಸ್ಥೆಯ ಇಲಾಖೆಯನ್ನು ಸ್ಥಾಪಿಸಿ ಸರ್ಕಾರಕ್ಕೆ ಸೇರಿದ್ದ ಭೂಮಿಯ ಸರಹದ್ದು ಮತ್ತು ಬೇಸಾಯದಿಂದ ಬೆಳೆಯುವ ಭೂಮಿಯನ್ನು ಗುರುತಿಸಿದರು.

ಅವುಗಳೆಂದರೆ " ೧.ಸರ್ಕಾರದ ಜಮೀನು ರೈತವಾರಿ ಪದ್ಧತಿಯಲ್ಲಿ ಕೃಷಿ ಗೊಳಪಡುತ್ತಿತ್ತು. ರೈತವಾರಿ ಪದ್ಧತಿಯಲ್ಲಿ ಎರಡು ವಿಧಾನಗಳಿದ್ದವು. ಸರ್ಕಾರದ ಭೂಮಿಗೆ ಗೇಣಿದಾರರಾದ ರೈತರು. ಕಂದಾಯ ಕಟ್ಟುತ್ತಿದ್ದರು. ಅಥವಾ ಬತಾಯಿ ರೂಪದಲ್ಲಿ ಅಂದರೆ ಬೆಳೆಯ ಬೆಳೆಯಲ್ಲಿ ಗೊತ್ತಾದ ಪಾಲಿನ ಧಾನ್ಯವನ್ನು ಸರ್ಕಾರಕ್ಕೆ ನೀಡುತ್ತಿದ್ದರು.

೨.ಇನಾಂತಿ ಭೂಮಿ ಕಂದಾಯದಿಂದ ವಿನಾಯಿತಿ ಪಡೆದ ಭೂಮಿ. ರೈತವಾರಿ ಕೃಷಿ ಪದ್ಧತಿ ಇದ್ದ ಸ್ಥಳಗಳಲ್ಲಿ ಬಹಳಷ್ಟು ಭೂಒಡೆಯರ ಹಿಡುವಳಿಗಳು ಗೇಣಿದಾರರಿಂದ ಕೃಷಿ ಮಾಡಲ್ಪಡುತ್ತಿದ್ದವು. ಆಗಿನ ಗೇಣಿಪದ್ಧತಿಯ ರೂಪಗಳು, ವಾರಗೇಣಿದಾರ ಬೆಳೆದ ಬೆಳೆಯಲ್ಲಿ ಅರ್ಧಭಾಗ ಭೂಮಾಲೀಕನಿಗೆ ಕೊಡಬೇಕಾಗಿತ್ತು. ಮೂಕುಪ್ಪಗೇಣಿದಾರ ಮೂರನೇ ಒಂದು ಭಾಗದ ಬೆಳೆಯನ್ನು ಭೂಮಾಲೀಕನಿಗೆ ನೀಡಬೇಕಿತ್ತು. ಅರೆಗಂದಾಯ ಗೇಣಿದಾರ ನಾಲ್ಕನೇ ಒಂದು ಭಾಗವನ್ನು ಭೂಮಾಲೀಕನಿಗೆ ಕೊಡಬೇಕಾಗಿತ್ತು. ಇದರಲ್ಲಿ ಗೇಣಿದಾರ ಅರ್ಧ, ಭೂಮಾಲೀಕ ಅರ್ಧ ಕಂದಾಯವನ್ನು ಕಟ್ಟಬೇಕಿತ್ತು. ವೊಲಕಂದಾಯಗೇಣಿದಾರ ಗೊತ್ತುಪಡಿಸಿದ ಮೊತ್ತದ ಧಾನ್ಯವನ್ನು ಭೂಮಾಲೀಕನಿಗೆ ಕೊಡಬೇಕಾಗಿತ್ತು."[೧೦.೨]

"ಕೆಳಕೊಡಗು ಪುತ್ತೂರು ಸುಳ್ಯ ತಾಲ್ಲೂಕುಗಳು ಮೊದಲಿಗೆ ಕೊಡಗಿನ ರಾಜ ಚಿಕ್ಕವೀರರಾಜನ ಅಧೀನವಾಗಿದ್ದವು. ೧೮೩೪ರಲ್ಲಿ ಅವುಗಳು ಕೆನರಾ ಜಿಲ್ಲಾಧಿಕಾರಿಯ ಅಧೀನಕ್ಕೆ ಒಳಪಟ್ಟವು. ಬ್ರಿಟಿಷ್ ಕಂಪೆನಿಯ ಆಡಳಿತದ ಅನುಕೂಲಕ್ಕಾಗಿ ಈ ಬದಲಾವಣೆ ಮಾಡಲಾಗಿತ್ತು. ಬ್ರಿಟಿಷ್ ನಿಯಂತ್ರಿತ ಕೆನರಾ ಜಿಲ್ಲೆಯಲ್ಲಿ ಇದ್ದ ಭೂಕಂದಾಯ ಪದ್ದತಿ ಕೊಡಗಿನ ಸಾಂಪ್ರದಾಯಿಕ ಕೃಷಿ ವ್ಯವಸ್ಥೆಗಿಂತ ಮೂಲಭೂತವಾಗಿ ಬೇರೆಯೇ ಸ್ವರೂಪವನ್ನು ಪಡೆದುಕೊಂಡಿತ್ತು. ೧೮೩೪ರ ನಂತರದಲ್ಲಿ ಭೂಕಂದಾಯವನ್ನು ನಗದು ರೂಪದಲ್ಲಿ ಪಾವತಿಮಾಡಲು ಕೇಳಲಾಯಿತು. ಇದರ ಪರಿಣಾಮವಾಗಿ ವರಮಾನದ ಅರ್ಧಭಾಗವನ್ನು ನೀಡುವುದು ಎಂದಾಗಿ ಇದರಿಂದ, ರೈತರು ಬೆಳೆದ ಬೆಳೆಗೆ ಮಾರುಕಟ್ಟೆಯಲ್ಲಿ ನಷ್ಟ ಅನುಭವಿಸುವಂತಾಯಿತು. ನಗದು ಹಣವನ್ನು ಕಂದಾಯ ರೂಪದಲ್ಲಿ ಪಾವತಿ ಮಾಡುವುದು ರೈತರಿಗೆ ಕಷ್ಟವಾಯಿತು. ಇದರ ಪರಿಣಾಮವಾಗಿ ರೈತರು ಬ್ರಿಟಿಷರ ವಿರುದ್ಧ ಬಂಡಾಯವೇಳಬೇಕಾಯಿತು. ಕಂದಾಯದ ದರವನ್ನು ಮರುಪರಿಷ್ಕರಿಸಿ ನಿಗಧಿಗೊಳಿಸಿದ್ದು ರೈತರ ಕೆಂಗಣ್ಣಿಗೆ ಗುರಿಯಾಯಿತು. ರೈತವಾರಿ ಪದ್ದತಿಯಿಂದಾಗಿ ಕಂದಾಯ ನೀಡದೆ ಇದ್ದ ರೈತರಿಗೆ ಬಾಕಿ ವಸೂಲಿ ಮಾಡಲು ರೈತರ ಜಮೀನನ್ನು ಸರ್ಕಾರವೇ ಮಾರಿ ಬಿಡುತ್ತಿತ್ತು. ಕಂದಾಯ ಪಾವತಿ ಮಾಡುವ ಸಲುವಾಗಿ ಶ್ರೀಮಂತರು ರೈತರಿಂದ ಸಾಲಪಡೆಯುತ್ತಿದ್ದರು.ಕಂದಾಯವನ್ನು ಅತ್ಯಂತ ಕಟ್ಟುನಿಟ್ಟಾಗಿ ವಸೂಲಿ ಮಾಡಿದ ಪರಿಣಾಮವಾಗಿ ರೈತರು ಬಂಡಾಯವೇಳಲು ಕಾರಣವಾಯಿತು."[೧೧]

"ಕಮಿಷನರ್ ಬೌರಿಂಗ್‌ನು" ೧೮೬೧ರಲ್ಲಿ ಮೈಸೂರು ರಾಜ್ಯದ ಆಡಳಿತದ ವಹಿಸಿಕೊಂಡನು.ಈತನ ದೂರದೃಷ್ಟಿ ಪ್ರಗತಿಪರವಾದ ಧೋರಣೆಯಿಂದಾಗಿ ಮೈಸೂರು ಭೂಭಾಗದಲ್ಲಿ ಅಭಿವೃದ್ಧಿಯತ್ತ ಸಾಗಿತು.ಬೇಸಾಯಕ್ಕೆ ಅನುಕೂಲವಾಗುವಂತೆ ಕೆರೆ ಕಟ್ಟೆನ್ನು ನಿರ್ಮಿಸಿ, ಕೆಲ ಕೆರೆಗಳನ್ನು ದುರಸ್ತಿಗೊಳಿಸಿದನು.ರಸ್ತೆ ನಿರ್ಮಾಣ,ಪಶ್ಚಿಮಘಟ್ಟದಲ್ಲಿ ಕಾಫಿ ಏಲಕ್ಕಿ ಬೆಳೆಯನ್ನು ಬೆಳೆಯಲು ಪ್ರೋತ್ಸಾಹಿಸಿದನು.

"೧೮೬೪ರಲ್ಲಿ ಇನಾಂತಿ ಆಯೋಗ"ವನ್ನು ಬ್ರಿಟಿಷ್ ಆಡಳಿತ ವ್ಯವಸ್ಥೆ ರಚಿಸಿತು. ಈ ಕುರಿತು ೧೮೬೬ ರಲ್ಲಿ ಇನಾಂತಿ ಭೂಮಿಯನ್ನು ಸರ್ವೇಮಾಡಲಾಯಿತು.ಈ ಸಂದರ್ಭದಲ್ಲಿ ಲಿವೀಸ್‌ರವರು ೧೩ ರೀತಿಯ ಇನಾಂತಿ ಬಗೆಗಳನ್ನು ಗುರುತಿಸುತ್ತಾರೆ. ಅವುಗಳೆಂದರೆ, ಸರ್ವಮಾನ್ಯ ಇನಾಂತಿ, ಅರ್ಧಮಾನ್ಯ ಇನಾಂತಿ, ಜೋಡಿಗ್ರಾಮ ಇನಾಂತಿ, ಜೋಡಿ ಅಗ್ರಹಾರ ಇನಾಂತಿ, ಸ್ಥಳ ಅಥವಾ ಮಹಲ್ ಜೋಡಿ, ಬತಮಾನ್ಯ ಅಥವಾ ಬ್ರಹ್ಮದಾಯ, ದೇವಾದಾಯ ಅಥವಾ ಧರ್ಮಾದಾಯ, ಉಂಬಳಿ ಮತ್ತು ಉತ್ತಮ.ಕುಳಿಗಾದಿ,ಕೊಡಗಿ ಇನಾಂ,ಬವಡಿ ದಾಸವಂದ ಇನಾಂತಿ, ಕೆರೆಬಂಡಿ ಮತ್ತು ಕೆರೆಕುಳ ಇನಾಂತಿ, ಪಟ್ಟಗದ್ದೆ ಎಂಬುದಾಗಿ ಗುರುತಿಸಿದ್ದರು.

ಮೈಸೂರು ಪ್ರಾಂತ್ಯದಲ್ಲಿ ಗೇಣಿದಾರರಿಗೆ ೧೮೮೮ರ "ಭೂಕಂದಾಯ ಶಾಸನ" ಜಾರಿಯಾಯಿತು. ಈ

ಕನ್ನಡ ಗ್ರಂಥಾಲಯ.
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶಾಸನದ ಪ್ರಕಾರ ಗೇಣಿದಾರರು ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳುವ ಅವಕಾಶವನ್ನು ನೀಡಲಾಗಿತ್ತು.ಆದರೆ ಈ ಶಾಸನವು ಭೂಮಾಲೀಕರ ಪರವಾಗಿ ಗೇಣಿ ರೈತರಿಗೆ ಅನಾನುಕೂಲಕಾರಿಯಾಗುವಂತಹ ಹಲವು ನ್ಯೂನ್ಯತೆಗಳಿದ್ದವು.

"೧೯೨೧ ರಲ್ಲಿ ಮಾಪಿಳ್ಳೆ ದಂಗೆ"ಯು, ಸಾಮ್ರಾಜ್ಯಶಾಹಿಗೆ ಎದುರಾದ ಸ್ಫೋಟ ಎಂದು ಕರೆಯಬಹುದಾಗಿದೆ. ಈ ದಂಗೆ ರಾಷ್ಟ್ರೀಯತೆಯಿಂದ ಪ್ರೇರಿತವಾಗಿದ್ದರೂ, ಒಂದೇ ಪಂಗಡಕ್ಕೆ ಸೀಮಿತವಾಗಿದ್ದು ತೋಳ್ಬಲದ ಪ್ರದರ್ಶನವನ್ನು ಹೊಂದಿದ್ದ ಗುಂಪಿನ ದಂಗೆಯನ್ನು, ಬ್ರಿಟಿಷ್ ತುಪಾಕಿಗಳ ಮೂಲಕ ಹತ್ತಿಕ್ಕಲಾಯಿತು. ಇದರಿಂದಾಗಿ ರೈತರ ಬಂಡಾಯವು ವಿಫಲವಾಯಿತು.ಆದರೆ ಈ ದಂಗೆಯ ಹಿಂದಿನ ಉದ್ದೇಶವಿದ್ದುದು, ರೈತರಿಗೆ ವಿಧಿಸುತ್ತಿದ್ದ ಕಂದಾಯ ತೆರಿಗೆ ಪದ್ಧತಿಯನ್ನು ವಿರೋಧಿಸುವುದಾಗಿತ್ತು

ಬಾಂಬೆ ಪ್ರಾಂತ್ಯದ ಗೇಣಿದಾರರಿಗೆ ಯಾವುದೇ ರೀತಿ ಕಾನೂನು ಇರಲಿಲ್ಲ. ೧೯೩೯ರಲ್ಲಿ ಮೊದಲ ಬಾರಿಗೆ "ಬಾಂಬೆಗೇಣಿ ಕಾನೂನು" ಜಾರಿಗೆ ತರಲಾಯಿತು. ಇದರ ಪರಿಣಾಮ "ಸರ್ವೆ ಮತ್ತು ಸೆಟ್ಲಮೆಂಟ್" ಮಾಡಿದರೆ ಕ್ರಮೇಣ ಭೂ ಒಡೆತನ ಗೇಣಿದಾರರ ಪಾಲಾಗುತ್ತದೆ ಎಂಬ ಭಯ ಇನಾಂದಾರರಿಗಿತ್ತು.ಇದು ಇನಾಂದಾರರು ಗೇಣಿದಾರರ ವಿರುದ್ಧ ಹಲವಾರು ರೀತಿಯ ಅಪವಾದಗಳನ್ನು ಹೊರಿಸಿದರು. ಗೇಣಿದಾರರೂ ಕೂಡ ಇದರ ವಿರುದ್ಧ ದನಿಎತ್ತಿ ಹೋರಾಟ ನಡೆಸಲು ಮುಂದಾದರು.ಇದರ ಪರಿಣಾಮವಾಗಿ ಶಾಸನವು ಹೆಚ್ಚು ಕಾಲ ಉಳಿಯಲಿಲ್ಲ.

೧೮೭೬ರಿಂದ ೧೮೭೮ ರ ಅವಧಿಯಲ್ಲಿ ಆಹಾರ ಉತ್ಪಾದನೆಯಲ್ಲಿ ಕೊರತೆ, ಭೀಕರ ಬರಗಾಲದಿಂದಾಗಿ ಬ್ರಿಟಿಷರು ತಮ್ಮ ಆಡಳಿತಾಧಿಕಾರವನ್ನು ಪುನಃ ಮೈಸೂರು ರಾಜರಿಗೆ ವಹಿಸಿಕೊಟ್ಟರು. ೧೮೮೧ರಿಂದ ೧೯೪೭ರವರೆಗೆ ಮೈಸೂರು ರಾಜರು ಸ್ವಾತಂತ್ರ್ಯ ಪಡೆಯುವವರೆಗೂ ಆಡಳಿತಾಧಿಕಾರವನ್ನು ನಡೆಸಿದರು. ಮೈಸೂರು ಮಹರಾಜರುಗಳಾದ ಚಾಮರಾಜ ಒಡೆಯರ್ ೧೮೯೪, ಕೃಷ್ಣರಾಜ ಒಡೆಯರ್ ೧೯೪೦, ಜಯಚಾಮರಾಜ ಒಡೆಯರ್ ೧೯೪೭ರವರೆಗೆ ಮೈಸೂರು ರಾಜ್ಯದಲ್ಲಿ ಆಳ್ವಿಕೆ ನಡೆಸಿದರು.

049120

### ೨.ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಭೂಸುಧಾರಣೆಯ ಯತ್ನಗಳು

ಬ್ರಿಟಿಷ್ ಆಡಳಿತ ವ್ಯವಸ್ಥೆ ತಮ್ಮ ಆಡಳಿತ ಬಿಟ್ಟುಕೊಡುವುದರ ಜೊತೆಗೆ ಎರಡು ರೀತಿಯ ಬೆಳವಣಿಗೆಗೆ ಅವಕಾಶ ಮಾಡಿಕೊಟ್ಟಿತು. ಒಂದನೆಯದಾಗಿ ರಾಷ್ಟ್ರೀಯತೆಯ ಹುಟ್ಟು ಬೆಳವಣಿಗೆಗೆ ಪೂರಕವಾಗಿ ಕೆಲಸ ಮಾಡತೊಡಗಿತು. ಎರಡನೆಯದಾಗಿ ರಾಷ್ಟ್ರೀಯ ಪ್ರಜ್ಞೆಯೊಂದಿಗೆ ಶೈಕ್ಷಣಿಕ, ಸಾಮಾಜಿಕ ಅರಿವು, ಸಮಾನತೆ ಬಗ್ಗೆ ಬೆಳಕನ್ನು ಚೆಲ್ಲತೊಡಗಿತು. ಇದರಿಂದಾಗಿ ರೈತರು ಸ್ವಾಭಿಮಾನದಿಂದ ಬದುಕಲು ಪ್ರೇರೆಪಿಸಿತು.

ವಸಾಹತುಶಾಹಿ ವ್ಯವಸ್ಥೆಯು ಭೂಮಿಯನ್ನು ವಾಣಿಜ್ಯೀಕರಣ ಮತ್ತು ಖಾಸಗೀಕರಣಕ್ಕೆ ಸಂಪೂರ್ಣವಾಗಿ ಒಳಪಡಿಸಿತು. ಇದರಿಂದ ಬಡ ರೈತ, ದಲಿತರು ಹಾಗೂ ಕೃಷಿ ಕೂಲಿಕಾರ್ಮಿಕರಿಗೆ ಭೂಮಿ ದೊರೆಯದೆ ಅವರು ಹೆಚ್ಚಿನ ಶೋಷಣೆಗೆ ಒಳಗಾದರು. ಕೈಗಾರಿಕೆಯ ಪರಿಣಾಮದಿಂದಾಗಿ ಭೂಮಿಯು ಭೂಮಾಲೀಕರ ಮತ್ತು ಬಂಡವಾಳಶಾಹಿಗಳ ಅಧೀನದಲ್ಲಿ ಉಳಿಯುವಂತಾಯಿತು. ಇತರೆ ಬಹುಸಂಖ್ಯಾತ ವರ್ಗವಾದ ರೈತ ಮತ್ತು ಕಾರ್ಮಿಕ ವರ್ಗವು ದುಡಿಯುವ ವರ್ಗವಾಗಿ ಅಸ್ತಿತ್ವಕ್ಕೆ ಬಂದಿತು. ಭೂಮಿಯ ಒಡೆತನ ಕೇವಲ ಕೆಲವೇ ಮಂದಿಗಳ ಒಡಿತದಲ್ಲಿ, ಕೆಲವೇ ಮಂದಿಗಳ ಒಡೆತನಕ್ಕೆ ಮಾತ್ರ ಸೀಮಿತವಾಯಿತು. ಈ ಭೂಮಾಲೀಕರು ಬ್ರಿಟೀಷರ ಕೃಪಾಕಟಾಕ್ಷ ಮತ್ತು ಸ್ವನಿಯಂತ್ರಣದಿಂದಾಗಿ ಎರಡೂ ಕಡೆಯಿಂದ ರೈತರ ಮೇಲೆ ತಮ್ಮ ಹಿಡಿತ ಸಾಧಿಸಿದರು.ಈ ಎಲ್ಲಾ ಹಿನ್ನೆಲೆಯಲ್ಲಿ ಸ್ವಾತಂತ್ರ್ಯೋತ್ತರ ಕರ್ನಾಟಕದ ರಾಜಕೀಯ ಇತಿಹಾಸವನ್ನು ಸ್ಥೂಲವಾಗಿ ಗಮನಿಸಬಹುದು.

ಸ್ವಾತಂತ್ರ್ಯ ನಂತರದ ಕರ್ನಾಟಕದಲ್ಲಿ ಮಹತ್ತರವಾದ ರಾಜಕೀಯ ಬದಲಾವಣೆಯನ್ನು ಕಂಡಿತು. ೧೯೪೭ರಲ್ಲಿ ಒಂಭತ್ತು ಸದ್ಯರಿದ್ದ ಮಧ್ಯಕಾಲೀನ ಮೈಸೂರು ರಾಜ್ಯ ಸರ್ಕಾರ ಅಸ್ತಿತ್ವಕ್ಕೆ ಬಂದು ಇದರ ಹಂಗಾಮಿ ಮುಖ್ಯಮಂತ್ರಿಯಾಗಿ ಕೆ.ಸಿ.ರೆಡ್ಡಿಯನ್ನು ನೇಮಿಸಲಾಯಿತು. ಇದು ತಾತ್ಕಾಲಿಕವಾಗಿದ್ದರಿಂದ ೧೯೫೦ರಲ್ಲಿ ಮೈಸೂರು ರಾಜ್ಯ ಶಾಸನಬದ್ಧವಾಗಿ ಭಾರತದ ಗಣತಂತ್ರದ ಒಂದು ಭಾಗವಾಯಿತು. ಆನಂತರದಲ್ಲಿ ಕಾಂಗ್ರೆಸ್ಸಿನ ಕೆ.ಸಿ.ರೆಡ್ಡಿಯವರನ್ನೇ ಮುಖ್ಯಮಂತ್ರಿಯನ್ನಾಗಿ ಮಾಡಲಾಯಿತು. ೧೯೫೨ ರಿಂದ ೧೯೫೬ ರವರೆಗೆ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಕೆಂಗಲ್‌ಹನುಮಂತಯ್ಯನವರು ಮುಖ್ಯಮಂತ್ರಿಯಾದರು. ಇದಕ್ಕೂ ಮುನ್ನ ಹೈದ್ರಾಬಾದ್ ಕರ್ನಾಟಕ, ಬಾಂಬೆ ಕರ್ನಾಟಕ, ಮದ್ರಾಸ್‌ಕರ್ನಾಟಕದ ಹಂಚಿಹೋಗಿದ್ದ ಕನ್ನಡಿಗರು ೧೯೫೬ರಲ್ಲಿ

ವಿಶಾಲ ಕರ್ನಾಟಕದ ಸ್ಥಾಪನೆಗೆ ಒತ್ತಾಯಿಸಿದರು.  ಈ ಒತ್ತಾಯಕ್ಕೆ ಮುಖ್ಯಮಂತ್ರಿಗಳು ಸ್ಪಂದಿಸದಿದ್ದ ಕಾರಣದಿಂದಾಗಿ ಅಧಿಕಾರದಿಂದ ಕೆಳಗಿಳಿಯಬೇಕಾಯಿತು. ಆನಂತರದಲ್ಲಿ ಕಡಿದಾಳ್ ಮಂಜಪ್ಪ ಮುಖ್ಯಮಂತ್ರಿಯಾಗಿದ್ದರೂ ವಿಶಾಲಕರ್ನಾಟಕದ ಸ್ಥಾಪನೆಯ ಬಗ್ಗೆ ಯಾವುದೇ ರೀತಿಯ ಅಸಮ್ಮತಿ ಸೂಚಿಸಲಿಲ್ಲ. ೧೯೫೬ ರಲ್ಲಿ ನವೆಂಬರ್ ನಲ್ಲಿ ವಿಶಾಲ ಕರ್ನಾಟಕವು ಅಸ್ತಿತ್ವಕ್ಕೆ ಬಂದಿತು. ೧೯೭೩ ರಲ್ಲಿ ಮೈಸೂರು ರಾಜ್ಯ ಹೆಸರು ಅಳಿದು, ಕರ್ನಾಟಕ ಎಂದು ಪುನರ್‌ನಾಮಕರಣವಾಯಿತು. ೧೯೫೬ರಿಂದ ೧೯೭೨ರವರೆಗೆ ಎಸ್.ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿದ್ದರು. ೧೯೭೧ರಲ್ಲಿ ಪ್ರಜಾಸೋಷಿಯಲಿಸ್ಟ್ ಪಕ್ಷವು ವಿರೋಧ ಪಕ್ಷ ಸ್ಥಾನದಲ್ಲಿದ್ದು ಜನಪರ ಬೇಡಿಕೆಗಳನ್ನು ಸಮರ್ಥವಾದಿಸುತ್ತಿತ್ತು. ೧೯೬೯ರಲ್ಲಿ ನಿಜಲಿಂಗಪ್ಪನವರು ತಮ್ಮದೇ ಆದ ಕಾಂಗ್ರೆಸ್ ಪಕ್ಷವನ್ನು ಅಸ್ತಿತ್ವಕ್ಕೆ ತಂದರು. ಇದರಿಂದ ಕೇಂದ್ರದಲ್ಲಿದ್ದ ಇಂದಿರಾ ಕಾಂಗ್ರೆಸ್‌ಗೆ ಒಬ್ಬ ಸಮರ್ಥ ನಾಯಕತ್ವವನ್ನು ಹುಡುಕಾಟ ನಡೆಸುತ್ತಿತ್ತು. ಈ ಸಮಯದಲ್ಲಿ  ದೇವರಾಜ ಅರಸು ಅವರು ಇಂದಿರಾ ಕಾಂಗ್ರೆಸ್‌ಪಕ್ಷದ ನೇತೃತ್ವ ವಹಿಸಿದರು. ೧೯೭೧ರಲ್ಲಿ ಪ್ರಚಂಡ ಬಹುಮತದೊಂದಿಗೆ ಇಂದಿರಾ ಕಾಂಗ್ರೆಸ್ ಅಸ್ತಿತ್ವಕ್ಕೆ ಬರಲು ಅರಸು ಅವರು ಮುಖ್ಯ ಕಾರಣರಾದರು. ಇದರಿಂದಾಗಿ ಅರಸು ಅವರು ಮುಖ್ಯಮಂತ್ರಿಯಾಗಿ ಕ್ರಾಂತಿಕಾರಕ ಭೂಸುಧಾರಣಾ ತಿದ್ದುಪಡಿಯನ್ನು ಜಾರಿಗೆ ತರಲು ಕಾರಣರಾದರು. ಈ ಎಲ್ಲಾ ಹಿನ್ನೆಲೆಯಲ್ಲಿ  ರಾಜಕೀಯ ಸ್ಥಿತ್ಯಂತರದ ಜೊತೆಗೆ ಭೂ ರೈತ ಹೋರಾಟಗಳು ಭೂಸುಧಾರಣೆಗೆ ಒತ್ತಾಯ ತಂದಿರುವುದನ್ನು ಸ್ಥೂಲವಾಗಿ ಇಲ್ಲಿ ಗಮನಿಸಬಹುದು.

ಸ್ವಾತಂತ್ರ್ಯೋತ್ತರ ಕರ್ನಾಟಕದ ಭೂ ಒಡೆತನಗಳು ಸಾಮಾನ್ಯವಾಗಿ ಮೇಲ್ಜಾತಿಯವರ ಹಿಡಿತದಲ್ಲಿದ್ದವು. ಹೀಗಾಗಿ ೧೯೩೦ ರಲ್ಲಿ ದಿನಕರ ದೇಸಾಯಿಯವರ ನೇತೃತ್ವದಲ್ಲಿ ಆಂಕೋಲಾದ ಗೇಣಿ ರೈತರ ಹೋರಾಟ ತೀವ್ರವಾಗಿತ್ತು. ೧೯೪೪ ರಲ್ಲಿ ಸಿದ್ಧಾಪುರ, ಆಂಕೋಲಾ, ಹೊನ್ನಾವರ, ಭಟ್ಕಳ ಹಾಗೂ ಗೋಕರ್ಣಗಳಲ್ಲಿ ದಿನಕರರ ನೇತೃತ್ವದಲ್ಲಿ ರೈತರ ಸಭೆಗಳು ನಡೆಸಿದ್ದುದು, ರಾಷ್ಟ್ರಮಟ್ಟದಲ್ಲಿ ಗಮನಸೆಳೆಯಿತು.  ೧೯೫೧ರ ಗೇಣಿರೈತರು ನಡೆಸಿದ ಶಿವಮೊಗ್ಗ ಜಿಲ್ಲೆಯ ಕಾಗೋಡು ಸತ್ಯಾಗ್ರಹ ಹೋರಾಟವು ಬಹುಮುಖ್ಯ ಪಾತ್ರವಹಿಸಿತು. ೧೯೬೯ರಲ್ಲಿ ದಿನಕರ ದೇಸಾಯಿಯವರು ಕಾಂಗ್ರೆಸ್ ಸರ್ಕಾರದ ಭ್ರಷ್ಟಾರದ ಮತ್ತು ಆಡಳಿತ ಹೊಲಸನ್ನು ಗುಡಿಸಿ ಹಾಕುವುದರ ಸಂಕೇತವಾಗಿ ರೈತರೊಂದಿಗೆ ದೊಡ್ಡದಾಗಿ ಪೊರಕೆ ಮೆರವಣಿಗೆಯನ್ನು ಮಾಡಿದರು.

ರಾಷ್ಟ್ರ ಮಟ್ಟದಲ್ಲಿ ಭೂಸುಧಾರಣಾ ಒತ್ತಡಗಳು ಕರ್ನಾಟಕದ ಮೇಲೂ ಪ್ರಭಾವ ಬೀರಿದವು. ಕರ್ನಾಟಕದ ಭೂಸುಧಾರಣಾ ಮೊದಲ ಶಾಸನವಾಗಿ "ಮೈಸೂರು ಟೆನನ್ಸಿ ಕಾಯ್ದೆ"ಯನ್ನು ೧೯೫೨ರಲ್ಲಿ ಮಂಡಿಸಿತು. ಇದು ಆನಂತರದಲ್ಲಿ ಕೆಲವು ಪ್ರಾಂತ್ಯಗಳಲ್ಲಿ ೧೯೫೪ರಲ್ಲಿ ಜಾರಿಯಾಯಿತು. ಇದು ಭೂಮಾಲೀಕರ ಪರವಾದ ಶಾಸನವಾದ್ದರಿಂದ ಸರ್ಕಾರದ ವಿರುದ್ಧ ಗೇಣಿರೈತರು ಕೂಗು ಮುಗಿಲು ಮುಟ್ಟಿತ್ತು.ಆಗಿನ ಮುಖ್ಯಮಂತ್ರಿಯಾಗಿದ್ದ ಕಡಿದಾಳ್ ಮಂಜಪ್ಪನವರು ೧೯೫೪ರಲ್ಲಿ "ಧಾರ್ಮಿಕ ಜಹಗೀರಿ ಮತ್ತು ಇನಾಂ ರದ್ಧತಿ" ಶಾಸನವನ್ನು ಜಾರಿಗೊಳಿಸಿದರು. ಇದು ಕರ್ನಾಟಕದ ರೈತರನ್ನು ಸಮಾಧಾನಪಡಿಸಲಿಲ್ಲ. ಇದರ ಪರಿಣಾಮವಾಗಿ ಕರ್ನಾಟಕದಲ್ಲಿ ೧೯೫೫ರಲ್ಲಿ "ಇನಾಂ ರದ್ದತಿ" ಕಾನೂನುನನ್ನು ಆಗಿನ ಸರ್ಕಾರವು ಜಾರಿಗೊಳಿಸಿತು.

ಮದ್ರಾಸ್ ಪ್ರಾಂತ್ಯಕ್ಕೆ ಸೇರಿದ್ದ ಕರ್ನಾಟಕದ ಕೆಲವು ಭಾಗಗಳಲ್ಲಿ ರೈತರನ್ನು ಒಕ್ಕಲೆಬ್ಬಿಸುವುದರ ವಿರುದ್ಧ ಮದ್ರಾಸ್ ಪ್ರಾಂತ್ರ್ಯದಲ್ಲಿ ೧೯೫೪ರಲ್ಲಿ "ಮದ್ರಾಸ್ ಟೆನೆನ್ಸಿ ಆಕ್ಟ್" ನ್ನು ರೂಪಿಸಿ ಜಾರಿಗೊಳಿಸಿತು. ಇದು ಮೈಸೂರು ಟೆನನ್ಸಿ ಕಾಯ್ದೆಯಲ್ಲಿ ಗೇಣಿದಾರರನ್ನು ಒಕ್ಕಲೆಬ್ಬಿಸುವ ನೀತಿಗೆ ವಿರುದ್ಧವಾಗಿ ಈ ಕಾಯ್ದೆಗೆ  ಜಾರಿಯಾಯಿತು. ೧೯೫೬ರ ಮದ್ರಾಸ್ ಟೆನೆನ್ಸಿ ಆಕ್ಟ್‌ನಿಂದ ಹೆಚ್ಚಿನ ಗುತ್ತಿಗೆ ವಸೂಲು ಮಾಡುವುದರ ವಿರುದ್ಧ ನಿಬಂಧನೆಗಳಿದ್ದು, ಅವರು ಬೆಳೆಯುತ್ತಿದ್ದುದರ ಶೇಕಡ ೩೩ರಿಂದ ೪೦ ಭಾಗ ಮಾತ್ರ ಭೂಮಾಲೀಕನಿಗೆ ಕೊಡುವಂತೆ ಕಾನೂನು ರೂಪಿಸಲಾಗಿತ್ತು. ಈ ಎಲ್ಲ ಕಾನೂನುಗಳು ಗೇಣಿದಾರರ ಹಾಗೂ ಸಣ್ಣ ಭೂಮಾಲೀಕರ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ರೂಪಿಸಿದ ಕಾನೂನುಗಳಾಗಿದ್ದವು. ಈ ಕಾಯ್ದೆಯು ಗೇಣಿದಾರರ ಒಕ್ಕಲುಗಳಿಗೆ ಅನುಕೂಲವಾಗಬೇಕೆಂಬ ಸದುದ್ದೇಶದಿಂದಲೇ ಮದ್ರಾಸ್ ಟೆನೆನ್ಸಿ ಕಾಯ್ದೆ ಅನುಷ್ಠಾನಗೊಳಿಸಲಾಯಿತು.

ಇದೇ ಸಂದರ್ಭದಲ್ಲಿ ಕರ್ನಾಟಕ ಸರ್ಕಾರದಲ್ಲಿ ವಿರೋಧಪಕ್ಷವಾಗಿ ಕೆಲಸ ಮಾಡುತ್ತಿದ್ದ ಪ್ರಜಾಸೋಷಿಯಲಿಸ್ಟ್ ಪಕ್ಷವು ಗೇಣಿ ಸಮಸ್ಯೆಯನ್ನು ಗಂಭೀರವಾಗಿ ತೆಗೆದುಕೊಂಡು ಭೂಸುಧಾರಣಾ ಶಾಸನ ತರಲು ಒತ್ತಾಯಿಸುತ್ತಿತ್ತು. ಇದರ ಒತ್ತಾಯದಿಂದಾಗಿ ಬಿ.ಡಿ.ಜತ್ತಿ ನೇತೃತ್ವದಲ್ಲಿ ೧೯೬೧ ಭೂಸುಧಾರಣಾ ಶಾಸನ

ಸಮಿತಿಯು ಅಸ್ತಿತ್ವಕ್ಕೆ ಬಂದಿತು. ಆಗಿನ ಕಂದಾಯ ಮಂತ್ರಿಗಳಾಗಿದ್ದ ಕಡಿದಾಳ್‌ಮಂಜಪ್ಪನವರು ೧೯೫೮ರ ಭೂಸುಧಾರಣಾ ಬಿಲ್‌ನ್ನು ಶಾಸನಸಭೆಯ ಮುಂದಿಟ್ಟರು. ಆನಂತರದಲ್ಲಿ ಜಂಟಿ ಸಮಿತಿಯು ತನ್ನು ವರದಿಯನ್ನು ೧೯೬೧ರಲ್ಲಿ ವಿಧಾನಸಭೆಯ ಮಂದಿಟ್ಟಿತು. ಇದು ಅಲ್ಪಪ್ರಮಾಣದ ಬದಲಾವಣೆಯೊಂದಿಗೆ ೧೯೬೧ರಲ್ಲಿ ರಾಷ್ಟ್ರಪತಿಯವರ ಒಪ್ಪಿಗೆಗೆ ಕಳುಹಿಸಲಾಯಿತು. ೫.೩.೧೯೬೨ ರಲ್ಲಿ ರಾಷ್ಟ್ರಪತಿಯವರು ಅಂಗೀಕಾರ ದೊರೆತು ಕರ್ನಾಟಕದಲ್ಲಿ "ಕರ್ನಾಟಕ ಭೂಸುಧಾರಣಾ ಶಾಸನ"ವಾಗಿ ಅಸ್ತಿತ್ವ ಪಡೆಯಿತು. ಆಗಿನ ಸರ್ಕಾರವು ೧೯೬೪ರಲ್ಲಿ "ಕರ್ನಾಟಕ ಭೂಕಂದಾಯ ಶಾಸನ"ವು ಕಾಯ್ದೆಯಾಗಿ ರಾಜ್ಯದಲ್ಲಿ ಅಧಿಕೃತವಾಗಿ ಜಾರಿಗೊಳಿಸಿತು.

### ೩.೧.೪ **ಕರ್ನಾಟಕದಲ್ಲಿ ಭೂಸುಧಾರಣಾ ಕಾನೂನು**

ಭೂಸುಧಾರಣಾ ಕಾಯ್ದೆಯನ್ನು ಜಾರಿಗೊಳಿಸುವ ಮೂಲಕ ಬಡವರಿಗೆ, ಗೇಣಿರೈತರಿಗೆ, ಕೂಲಿಕಾರ್ಮಿಕರಿಗೆ, ಭೂಹೀನರಿಗೆ ಜಾತ್ಯಾತೀತವಾಗಿ ಭೂಮಿಯನ್ನು ಸರ್ಕಾರದ ಮೂಲಕ ಹಂಚುವ ಕಾರ್ಯಕ್ರಮವನ್ನು ಭೂಸುಧಾರಣೆ ಎಂದು ಅರ್ಥೈಸಬಹುದಾಗಿದೆ.

ಭೂಸುಧಾರಣೆ ಕುರಿತು ನಿರ್ಧಿಷ್ಟ ವ್ಯಾಖ್ಯಾನವಿಲ್ಲದಿದ್ದರೂ, ಈ ಕುರಿತು "ಭೂಮಿಯ ಒಡೆತನ, ಹತೋಟಿ ಹಾಗೂ ಉಪಯೋಗದ ವಿಚಾರವಾಗಿ ಬಳಕೆಯಲ್ಲಿರುವ ಪದ್ಧತಿಯಲ್ಲಿ, ಒಡೆತನದ ಪುನರ್ ಹಂಚಿಕೆ ಮತ್ತು ಭೂ ಮಾನವ ಸಂಬಂಧಗಳಲ್ಲಿ ಮಾರ್ಪಾಡು ತರುವುದು ಈ ಎರಡು ಉದ್ದೇಶಗಳಿಗಾಗಿ ಸರ್ಕಾರವು ತಲೆಹಾಕುವಿಕೆ ಎಂಬ ಅರ್ಥದಲ್ಲಿ ಆ ಪದ ಬಳಕೆಯಾಗಿದೆ."[೧೨]

ಈ ಕಾಯ್ದೆಯ ಉದ್ದೇಶ ಭೂಮಿ ಇಲ್ಲದವರಿಗೆ ನ್ಯಾಯಯುತವಾಗಿ ಕಾನೂನಿನ ಮೂಲಕ ಭೂ ಒಡೆತನವನ್ನು ವರ್ಗಾಯಿಸುವ ಪ್ರಕ್ರಿಯೆಯಾಗಿದೆ. ಭೂಪ್ರಶ್ನೆಯನ್ನು ಪರಿಹರಿಸಲು ಕಾನೂನಾತ್ಮಕ ಹೋರಾಟದ ಮೂಲಕ ನ್ಯಾಯಯುತವಾಗಿ ಉಳುಮೆ ಮಾಡುವವನಿಗೆ ಭೂಹಕ್ಕನ್ನು ನೀಡುವುದಾಗಿದೆ.ಅಂದರೆ ನಿಜವಾದ ದುಡಿಮೆಗಾರ ರೈತನಿಗೆ ಭೂ ಹಕ್ಕನ್ನು ನೀಡುವ ಮೂಲಕ ಆತನನ್ನು ರೈತನಾಗಿಸುವ ಪ್ರಕ್ರಿಯೆಯೇ ಭೂಸುಧಾರಣೆಯಾಗಿದೆ.ಇನ್ನೂ ಸರಳವಾಗಿ ಹೇಳುವುದಾದರೆ ರೈತನಿಗೆ ಭೂ ಹಕ್ಕು ನೀಡುವುದರ ಮೂಲಕ ರೈತನ ಬದುಕನ್ನು ಸುಧಾರಿಸುವುದನ್ನ ಭೂಸುಧಾರಣೆ ಎನ್ನಬಹುದಾಗಿದೆ.ಭೂಸುಧಾರಣೆ ಆಶಯವನ್ನು ಕುರಿತು ಎಂ.ಎ.ಎಸ್.ರಾಜನ್ ಹೀಗೆ ಗುರುತಿಸುತ್ತಾರೆ.

"ಎ. ೧.ಭೂಮಿಯ ಪುನರ್ ಹಂಚಿಕೆ ೨.ಗೇಣಿದಾರಿಕೆಯ ಸುಧಾರಣೆಗಳು ಇವುಗಳ ಗುರಿ.

**ಬಿ.** ೧. ಆದಾಯ ಮತ್ತು ಸಂಪತ್ತಿನಲ್ಲಿ ಹೆಚ್ಚಿನ ಸಮಾನತೆ ತರುವುದು. ೨.ಕೃಷಿ ಸಾಮರ್ಥ್ಯವನ್ನು ಹೆಚ್ಚಿಸುವುದು ಇವುಗಳನ್ನು ಸಾಧಿಸಲು.

**ಸಿ.** ೧.ಸರ್ಕಾರದಿಂದ ಆರಂಭವಾದ ಸುಧಾರಣಾ ಶಾಸನ ೨. ಶಾಸನಬದ್ಧ ಸಾರ್ವಜನಿಕ ಕಾರ್ಯಕ್ರಮ ಇವುಗಳನ್ನು ಕಾರ್ಯಗತ ಮಾಡುವುದು."[೧೩]

ಇಲ್ಲಿ ಎಲ್ಲರೂ ಸಮಾನವಾದ ಭೂಸಂಪತ್ತು ಹೊಂದಬೇಕೆಂಬ ಆಶಯ ಕಾಣುತ್ತೇವೆ. ಆದರೆ ವಾಸ್ತವದಲ್ಲಿ ಅದು ಎಷ್ಟರಮಟ್ಟಿಗೆ ಸಾಧ್ಯವಾಗಿದೆ ಎಂಬುದನ್ನು ಯೋಚಿಸಬೇಕಾದ ವಿಚಾರವಾಗಿದೆ. ಪ್ರಸ್ತುತ ಅಧ್ಯಯನದ ಮಟ್ಟಿಗೆ ಕರ್ನಾಟಕ ಭೂಸುಧಾರಣೆಯ ಹುಟ್ಟು ಬೆಳವಣಿಗೆ ಕುರಿತು ಅಧ್ಯಯನ ಮಾಡಲಾಗುವುದು.ಕರ್ನಾಟಕದ ಭೂ ವಿನ್ಯಾಸಗಳಲ್ಲಾದ ಬದಲಾವಣೆ ಮತ್ತು ರಾಜಕೀಯ ಹುನ್ನಾರ ಮೊದಲಾದ ಅಶಯಗಳನ್ನು ಗುರುತಿಸಲಾಗಿದೆ.

ಕರ್ನಾಟಕದಲ್ಲಿ ಭೂ ವ್ಯವಸಾಯ ಸಂಬಂಧಗಳಲ್ಲಿ ಆಮೂಲಾಗ್ರ ಬದಲಾವಣೆ ತರುವ ನಿಟ್ಟಿನಲ್ಲಿ ಕರ್ನಾಟಕ ಸಮಗ್ರ ಭೂಸುಧಾರಣಾ ಕಾನೂನು ೧೯೬೨ರಲ್ಲಿ ಭೂ ಸಮಸ್ಯೆಯನ್ನು ಬಗೆಹರಿಸಲು ಯತ್ನಿಸಿತು. ಬಿ.ಡಿ. ಜತ್ತಿಯವರ ಭೂಸುಧಾರಣಾ ಶಾಸನ ಕುರಿತು "ಕೇಂದ್ರದ ಭೂಸುಧಾರಣಾ ಆಯೋಗದ ಸಲಹೆಗಳನ್ನು ಹೆಚ್ಚಿನ ಬದಲಾವಣೆಗಳಿಗೆ ಒಳಪಡಿಸದೆ ನೇರವಾಗಿ ಒಪ್ಪಿ, ಬಿ.ಡಿ.ಜತ್ತಿ ಕಮಿಟಿಯ ಭೂಸುಧಾರಣಾ ಆಯೋಗ ಇಲ್ಲಿಯ ಸಂಕೀರ್ಣತೆಗಳನ್ನು ಗಣಿಸದೆ ಸಾಮಾನ್ಯೀಕರಣದತ್ತ ಹೆಜ್ಜೆಹಾಕಿದ್ದು ಒಂದು ಪ್ರಗತಿಪರ ಹೆಜ್ಜೆಯಾಗಲಾರದು." ಎಂದು ಕ್ಷೀರಸಾಗರ ಅವರು ಟೀಕಿಸಿದ್ದಾರೆ. ಇಲ್ಲಿ ಕರ್ನಾಟಕದ ಭೂ ವ್ಯವಸ್ಥೆಯನ್ನು ಅರ್ಥೈಸಿಕೊಳ್ಳದೆ ಕೇಂದ್ರ ಸರ್ಕಾರದ ಭೂ ಸುಧಾರಣಾ ಆಯೋಗದ ಸಲಹೆಯನ್ನು ಅನಾಮತ್ತಾಗಿ ಒಪ್ಪಿಕೊಳ್ಳುವುದು

ಎಷ್ಟರಮಟ್ಟಿಗೆ ಸರಿ. ಇಲ್ಲಿ ಗೇಣಿದಾರರ ರಕ್ಷಣೆಯ ಬದಲು ಭೂಮಾಲೀಕರ ರಕ್ಷಣೆಯ ಪರವಾಗಿದ್ದವು ಎಂಬುದು ಇಲ್ಲಿ ಕಂಡುಬರುತ್ತದೆ. ಅಲ್ಲದೆ ಶಾಸನವು ಗೇಣಿದಾರರನ್ನು ಒಕ್ಕಲೆಬ್ಬಿಸುವುದಕ್ಕಾಗಿಯೇ ಕಾಯ್ದೆಯನ್ನು ರೂಪಿಸಿದಂತಿದೆ. ಇಲ್ಲಿಗೇಣಿದಾರರಿಗೆ ಭೂಮಾಲೀಕರು ನೀಡಿದ್ದ ಭೂಮಿಯನ್ನು ವಾಪಸ್ಸು ಪಡೆಯಲು ಈ ಕಾಯ್ದೆ ಅನುಕೂಲಕರವಾಯಿತು

"೧೯೬೨ ರ ಭೂಸುಧಾರಣಾ ಶಾಸನ"ವು ಜಾರಿಗೊಳಿಸಲು ನಿಧಾನ ನೀತಿಯನ್ನು ಅನುಸರಿಸಿತು. ರಾಷ್ಟ್ರಪತಿಯವರ ಒಪ್ಪಿಗೆ ಪಡೆದ ಮೇಲೂ ಈ ಶಾಸನವನ್ನು ಸರ್ಕಾರವು ೧೯೬೫ ರಲ್ಲಿ ಕಾರ್ಯಾನುಷ್ಠಾನಗೊಳಿಸಿತು. ಈ ಅವಧಿಯಲ್ಲಿ ಭೂಮಾಲೀಕರುಗಳಿಗೆ ತಮ್ಮ ಆಸ್ತಿಯನ್ನು ಕಾಪಾಡಿಕೊಳ್ಳಲು ಅವಕಾಶ ದೊರೆಯಿತು. ಈ ವಿಳಂಬ ನೀತಿಯು ಗೇಣಿರೈತರನ್ನು ಕೆರಳಿಸಿತು. ಇದರ ಪರಿಣಾಮ ಭೂಮಾಲೀಕರು ಗೇಣಿರೈತರನ್ನು ಒಕ್ಕಲೆಬ್ಬಿಸಿತೊಡಗಿದರು. ಈ ಶಾಸನದಿಂದ ಸಾವಿರಾರು ಗೇಣಿದಾರರು ಹಾಗೆಯೇ ಉಳಿದು ಬಿಟ್ಟರು.

"೧೯೬೨ರ ಭೂಸುಧಾರಣೆ"ಯ ಕಾಯ್ದೆಯಲ್ಲಿ ಹಿಡುವಳಿಗಳ ಮೇಲೆ ಭೂಪರಿಮಿತಿಯನ್ನು ಜಾರಿಗೊಳಿಸಲಾಯಿತು. ಈ ಭೂ ಪರಿಮಿತಿಯಲ್ಲಿದ್ದ ಭೂಮಾಲೀಕರ ಹೆಚ್ಚುವರಿ ಜಮೀನುಗಳನ್ನು ಸರ್ಕಾರಕ್ಕೆ ಒಪ್ಪಿಸಲಾಯಿತು. ಜಮೀನನ್ನು ೭ ವರ್ಗಗಳಾಗಿ ವರ್ಗೀಕರಣಗೊಳಿಸಿ ಭೂಪರಿಮಿತಿಯನ್ನು ಜಾರಿಗೊಳಿಸಲಾಯಿತು. ಈ ವರ್ಗಗಳಿಗನುಸಾರವಾಗಿ ಒಂದು ಕುಟುಂಬ ೨೭ ಎಕರೆಯಿಂದ ೨೧೬ ಎಕರೆಗಳವರೆಗೂ ಭೂಮಿಯನ್ನು ತನ್ನ ಒಡೆತನದಲ್ಲಿ ಇಟ್ಟುಕೊಳ್ಳಲು ಈ ಕಾನೂನಿನಲ್ಲಿ ಅವಕಾಶವಿತ್ತು.ಇಂಥ ಪ್ರಮಾದದಿಂದ ಭೂಮಾಲೀಕರು ಮತ್ತಷ್ಟು ಭೂಮಿಯನ್ನು ಅವಕಾಶ ಮಾಡಿಕೊಟ್ಟಂತಾಯಿತು.

ಈ ಶಾಸನ ಜಾರಿಗೆ ಬಂದ ಸಂದರ್ಭದಲ್ಲಿ ಬಹಳಷ್ಟು ಗೇಣಿದಾರರನ್ನು ಭೂಮಾಲೀಕರು ಒಕ್ಕಲೆಬ್ಬಿಸುವ ಮೂಲಕ ತಮ್ಮ ಭೂಮಿಯನ್ನು ವಶಕ್ಕೆ ತೆಗೆದುಕೊಂಡರು. ಇದೇ ಕಾಲಕ್ಕೆ ಈ ಕಾಯ್ದೆಯು ರೈತರಿಗೆ ಅನುಕೂಲಕಾರಿಯಾಗದೆ ಹೆಚ್ಚು ಭೂಮಾಲೀಕರ ಹಿತವನ್ನಷ್ಟೇ ಕೇಂದ್ರವಾಗಿಟ್ಟುಕೊಂಡಿತು. ಇದು ಮುಂದೆ ಭೂಮಾಲೀಕರನ್ನು ರಕ್ಷಿಸಿ ಗೇಣಿದಾರರನ್ನು ಒಕ್ಕಲೆಬ್ಬಿಸಿದವು. ಈ ಕಾಯ್ದೆ ತೀವ್ರವಿವಾದಕ್ಕೆ ಒಳಗಾಗಿ ಮತ್ತು ಭೂಮಾಲೀಕರ ಪರವಾಗಿದ್ದ ಕರ್ನಾಟಕ ಭೂಸುಧಾರಣಾ ಕಾನೂನನ್ನು ಅಮೂಲಾಗ್ರ ಬದಲಾವಣೆಗಾಗಿ ೧೯೬೨ ರ ಕಾನೂನನ್ನು ತಿದ್ದುಪಡಿಗಾಗಿ ಜನತೆ ಒತ್ತಾಯಿಸಿತು.

ಈ ಒತ್ತಡವು ಒಂದು ದಶಕದವರೆಗೂ ಇದ್ದ ಪರಿಣಾಮವಾಗಿ ೧೯೭೪ರ ಭೂಸುಧಾರಣಾ ತಿದ್ದುಪಡಿಗೆ ಮುಖ್ಯ ಪ್ರೇರಣೆಯಾಯಿತು. ಹಿಂದುಳಿದ ವರ್ಗದ ನೇತಾರ ಮುಖ್ಯಮಂತ್ರಿ ದೇವರಾಜಅರಸು ೧೯೬೨ರ ಭೂಸುಧಾರಣೆ ಕಾಯ್ದೆಯನ್ನು ಆಮೂಲಾಗ್ರ ತಿದ್ದುಪಡಿ ಮಾಡುವ ಮೂಲಕ ಜನಸಾಮಾನ್ಯರ ಗಮನಸೆಳೆದರು.ಕರ್ನಾಟಕದ ಮಟ್ಟಿಗೆ ಭೂಸುಧಾರಣೆ ಕಾಯ್ದೆ ಇಡೀ ರಾಷ್ಟ್ರಕ್ಕೇ ಮಾದರಿಯಾದ ಕಾನೂನನ್ನು ಜಾರಿಗೊಳಿಸಿತು. ಇದು ಬಡರೈತರಿಗೆ, ಗೇಣಿದಾರರಿಗೆ, ಭೂಹೀನರಿಗೆ ಪರಿಹಾರ ಕಲ್ಪಿಸಿಕೊಡಲು ಯತ್ನಿಸಿತು. ಬಹುಸಂಖ್ಯಾತ ರೈತವರ್ಗದ ಸಮಸ್ಯೆಯನ್ನು ಬಗೆಹರಿಸಲು ಭೂ ಹಂಚಿಕೆ ಮೂಲಕ ,ಭೂಮಿ ಹಕ್ಕನ್ನು ವರ್ಗಾಯಿಸುವ ಮೂಲಕ ಯತ್ನಿಸಿತು. ಈ ಭೂಸುಧಾರಣೆ ಕಾಯ್ದೆ ತಿದ್ದುಪಡಿ ಮಾಡುವ ಮುನ್ನ ಅರಸು ಅವರು ಈ ವಿಷಯ ಕುರಿತು ವಿಚಾರಸಂಕಿರಣ ಏರ್ಪಡಿಸಿ ತಜ್ಞರಿಂದ ಅಭಿಪ್ರಾಯವನ್ನು ಪಡೆದರು. ೧೯೭೨ರಲ್ಲಿ ಮೈಸೂರಿನಲ್ಲಿ ನಡೆದ ಈ ವಿಚಾರ ಸಂಕಿರಣದಲ್ಲಿ ವ್ಯಕ್ತವಾಗಿರುವ ಅಭಿಪ್ರಾಗಳನ್ನು ಗಮನಿಸಬಹುದಾಗಿದೆ.

ಎ. ೧೯೭೦ ರಲ್ಲಿ ಡಿ.ಜವರೇಗೌಡ ಹೇಳುವಂತೆ, "ಸಮಾನತೆಯನ್ನು ಸಾಧಿಸುವುದು ನಿಜಕ್ಕೂ ದೊಡ್ಡ ಸಾಧನೆಯೇ ಸರಿ. ಆದರೆ ಈ ಸಮಾನತೆ ಯಾವುದೋ ಒಂದು ಕ್ಷೇತ್ರದಲ್ಲಿ ಮಾತ್ರ ಸಾಧಿಸಿದರೆ ಏನೂ ಅಲ್ಲ. ಸಮಾನತೆ ಅನ್ನುವುದು ಭೂಪರಿಮಿತಿಯಿಂದಾಗಿ ಬಂದ ಹೆಚ್ಚುವರಿ ಭೂಮಿಯನ್ನು ಹಂಚಿದಾಕ್ಷಣಕ್ಕೆ ವ್ಯವಸಾಯ ಕ್ಷೇತ್ರದಲ್ಲಿ ಸಮಾನತೆ ಸಾಧಿಸಿದಂತಲ್ಲ. ಪಟ್ಟಣದಲ್ಲಿ ಕೇಂದ್ರೀಕೃತವಾಗಿರುವ ಆಸ್ತಿ ಮತ್ತು ಬಂಡವಾಳದ ಬಗ್ಗೆ ಸಮಾನತೆಯ ಸೊಲ್ಲಿಲ್ಲ. ದೊಡ್ಡ ದೊಡ್ಡ ಹೊಟೇಲ್ಲುಗಳು ಸಿನಿಮಾ ಮಂದಿರಗಳು ಇವುಗಳೆಲ್ಲಾ ಭೂಸುಧಾರಣಾ ಕಾನೂನಿನ ಚೌಕಟ್ಟಿಗೆ ಸಿಕ್ಕದೆ ಹೊರಗೇ ಉಳಿದುಬಿಡುವುದರಿಂದ ನಾವು ಯಾವ ರೀತಿಯ ಸಮಾನತೆಯ ಬಗ್ಗೆ ಮಾತನಾಡುತ್ತಿದ್ದೇವೆ ಅನ್ನುವುದು ಪ್ರಶ್ನಾರ್ಥಕವಾಗುತ್ತದೆ. "

ಬಿ. ೧೯೭೧ ರಲ್ಲಿ ಇದಕ್ಕಿಂತ ಭಿನ್ನವಾಗಿ ವಿ.ಕೆ. ನಟರಾಜ್ ಹೇಳುವಂತೆ "ಭೂಸುಧಾರಣಾ ಕಾನೂನು

ಆರ್ಥಿಕವಾಗಿ ನಿರಾಶಾದಾಯಕವಾದ ಸಣ್ಣ ಹಿಡುವಳಿಗಳನ್ನು ಸೃಷ್ಟಿಸುವುದರಿಂದ ಮಾರುಕಟ್ಟೆಗೆ ಸರಬರಾಜಾಗುವ ವ್ಯವಸಾಯೋತ್ಪಾದನೆ ಅದರಲ್ಲೂ ಆಹಾರೋತ್ಪಾದನೆಯಲ್ಲಿ ಕೊರತೆ ಉಂಟಾಗಬಹುದು."

**ಸಿ.** ೧೯೭೩ ರಲ್ಲಿ ಎಲ್.ಶ್ರೀಕಂಠಯ್ಯ ಹೇಳುವಂತೆ " ಭೂಪರಿಮಿತಿಯ ಕಾನೂನಿನ ಪ್ರಕಾರ ಹೆಚ್ಚಿನ ಭೂಮಿ ಹೊಂದಲು ಸಾಧ್ಯವಾಗದ್ದರಿಂದ ವ್ಯವಸಾಯ ಕ್ಷೇತ್ರದ ಬಂಡವಾಳ ಇತರೆ ಕ್ಷೇತ್ರಗಳಿಗೆ ವರ್ಗಾವಣೆ ಹೊಂದುವುದರಿಂದ ವ್ಯವಸಾಯ ಕ್ಷೇತ್ರದ ಪರಿಸ್ಥಿತಿ ಗಂಭೀರವಾಗುತ್ತದೆ."

**ಡಿ.** ೧೯೭೪ ರಲ್ಲಿ ಪಿ.ಕೆ.ಮಿಶ್ರ ಅವರು ಹೇಳುವಂತೆ " ಧಾರ್ಮಿಕ, ಆರ್ಥಿಕ, ಜಾತೀಯ ರಾಜಕೀಯ ಮತ್ತು ಸಾಂಸ್ಕೃತಿಕ ಪ್ರಾಬಲ್ಯ ಪಡೆದಿರುವ ಶ್ರೀಮಂತ ರೈತರು ಶೋಷಣೆಗೆ ಒಳಗಾಗಿ ಧ್ವನಿ ಕಳೆದುಕೊಂಡ ರೈತರು ಕಾನೂನನ್ನು ಬಳಸಿಕೊಳ್ಳದಂತೆ ತಡೆಯುತ್ತಾರೆ. ಈ ಕಾರಣಕ್ಕಾಗಿ ಬಡರೈತರು ಅರ್ಜಿ ಸಲ್ಲಿಸಲೂ ಆಗದೆ ನಿಸ್ಸಹಾಯಕರಾಗುತ್ತಾರೆ." [೧೫]

೧.ಜವರೇಗೌಡರ ಅಭಿಪ್ರಾಯದಲ್ಲಿ ಗ್ರಾಮೀಣ ರೈತರ ಭೂ ಹಂಚಿಕೆ ವಿಚಾರ ಮಾಡದೇ ಇರುವುದು ಮತ್ತು ಯಥಾಸ್ಥಿತಿ ವಾದವನ್ನೇ ಮಂಡಿಸುತ್ತಿರುವುದನ್ನು ಗಮನಿಸಬಹುದು. ಒಂದು ವೇಳೆ ಸಮಾನತೆಯನ್ನು ತರಲು ಹೊರಟರೇ ನಗರ ಪ್ರದೇಶಗಳಲ್ಲೂ ಸಮಾನತೆ ತರಬೇಕೆಂಬ ವಾದವನ್ನು ಮಂಡಿಸುತ್ತಾರೆ.ಇವರ ಉದ್ದೇಶ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವುದೇ ಆಗಿದೆ. ಭೂಹಂಚಿಕೆಯ ವಿಚಾರದಿಂದಲೇ ಸಮಾನತೆ ತರಲು ಸಾಧ್ಯವಿಲ್ಲ ಎಂದು ನಿರಾಶೆಯನ್ನುವ್ಯಕ್ತಪಡಿಸುತ್ತಿರುವುದು ಭೂಮಾಲೀಕರ ಪರವಾದ ಚರ್ಚೆಯಾಗಿದೆ.

೨.ನಟರಾಜ್ ಅಭಿಪ್ರಾಯದಲ್ಲಿ ಬಹುಸಂಖ್ಯಾತ ರೈತಾಪಿ ವರ್ಗವನ್ನು ಕೈಬಿಡುವ ಯೋಚನೆಯಿಂದ ಭೂಮಾಲಿಕ ವರ್ಗವನ್ನು ಮರುಸೃಷ್ಟಿಸುವ ಉದ್ದೇಶ ಹೊಂದಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಈ ವಿಚಾರದಲ್ಲಿ ಉತ್ಪಾದನೆ ಲೆಕ್ಕಚಾರದಲ್ಲಿ ಬಹುಸಂಖ್ಯಾತ ವರ್ಗದ ಹಿತಾಸಕ್ತಿಯನ್ನು ಕಡೆಗಣಿಸುತ್ತಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ.ಇದು ಬಂಡವಾಳಶಾಹಿರೈತನನ್ನು ಅಸ್ತಿತ್ವಕ್ಕೆ ತರಲು ಚಿಂತಿಸಿದಂತಿದೆ.

೩.ಶ್ರೀಕಂಠಯ್ಯನವರ ಅಭಿಪ್ರಾಯ ಭೂಸುಧಾರಣೆ ಎಂಬುದು ಬೇಸಾಯ ಕ್ಷೇತ್ರದಿಂದ ಇತರೆ ಬಂಡವಾಳ ವರ್ಗಾವಣೆಯಾಗುವುದೆಂಬ ಆತಂಕ ವ್ಯಕ್ತಪಡಿಸಿದ್ದಾರೆ.

೪.ಶ್ರೀಮಂತ ರೈತರ ಆಪಾಯವನ್ನು ಕುರಿತು ಪಿ.ಕೆ.ಮಿಶ್ರ ಅವರು ಗಂಭೀರವಾಗಿ ಪ್ರತಿಕ್ರಿಯಿಸಿದ್ದಾರೆ. ರೈತರ ಪರವಾಗಿ ಚಿಂತಿಸಿದ್ದಾರೆ.

ಈ ಎಲ್ಲಾ ಅಭಿಪ್ರಾಯಗಳ ಸಾಧಕ ಬಾಧಕಗಳನ್ನು ಗಮನದಲ್ಲಿರಿಸಿಕೊಂಡು ಕೆಲವು ಅಂಶಗಳನ್ನು ಗಮನದಲ್ಲಿಸಿಕೊಂಡು, ಕರ್ನಾಟಕದಲ್ಲಿ ಭೂಸುಧಾರಣೆ ಕಾಯ್ದೆಯನ್ನು ಸಮಗ್ರ ತಿದ್ದುಪಡಿಗಳ ಮೂಲಕ, ಮುಖ್ಯಮಂತ್ರಿ "ದೇವರಾಜಅರಸು" ಅವರು ೧೯೭೪ರಲ್ಲಿ ಅನುಷ್ಠಾನಗೊಳಿಸಿದರು. ಈ ಭೂಸುಧಾರಣಾ ನೀತಿ ಬಹುಪಾಲು ಬಡವರ ಸಣ್ಣರೈತರ, ಗೇಣಿರೈತರ ಪರವಾಗಿತ್ತು. ಈ ಕಾರಣದಿಂದ ಈ ಕಾಯ್ದೆ ಕ್ರಾಂತಿಕಾರಕ ಭೂ ಸುಧಾರಣಾಕಾಯ್ದೆ ಎಂದೇ ಜನಪ್ರಿಯವಾಗಿದೆ.೧೯೭೪ರಲ್ಲಿ ಪ್ರಮುಖ ಅಂಶಗಳನ್ನು ಸ್ಥೂಲವಾಗಿ ಗಮನಿಸಬಹುದಾಗಿದೆ.

ಮಾರ್ಚ್ ೧.೧೯೭೪ರ ನಂತರದ ಎಲ್ಲಾ ಗೇಣಿ ಭೂಮಿಯು ಸರ್ಕಾರದ ವಶಕ್ಕೆ ಹೋಗುತ್ತದೆ.

"೧. ಸೈನಿಕ ಮತ್ತು ನಾವಿಕರ ಹೊರತಾಗಿ ಮೇಲ್ಕಂಡ ದಿನಾಂಕದ ನಂತರ ಯಾರೂ ಗೇಣಿ ವ್ಯವಸಾಯವನ್ನು ಮುಂದುವರೆಸುವಂತಿಲ್ಲ.

೨. ಈ ದಿನಾಂಕದ ಭೂನ್ಯಾಯ ಮಂಡಳಿಗಳು ತೀರ್ಮಾನ ಮಾಡುವ ಕಾಲದವರೆಗೂ ಗೇಣಿ ಭೂಮಿ ಗೇಣಿಯನ್ನಾಗಲಿ ಭೂಕಂದಾಯದ ಹತ್ತು ಪಟ್ಟನ್ನಾಗಲಿ ಗೇಣಿದಾರನು ಭೂಮಾಲೀಕನಿಗೆ ಕೊಡದೆ ಸರ್ಕಾರಕ್ಕೆ ಸಲ್ಲಿಸಬೇಕು.

೩.ಈ ಸಮಯದಲ್ಲಿ ಗೇಣಿದಾರ ಉಪಗೇಣಿಗೆ ಕೊಟ್ಟರೆ ಅಥವಾ ಹಸ್ತಾಂತರ ಮಾಡಿದರೆ ಅದು ಅಸಿಂಧುವಾಗುತ್ತದೆ.

೪.ಗೇಣಿದಾರನು ಒಬ್ಬರಿಗಿಂತ ಹೆಚ್ಚು ಒಡೆಯರ ಭೂಮಿಯನ್ನು ಗೇಣಿ ವ್ಯವಸಾಯ ಮಾಡುತ್ತಿದ್ದರೆ, ಯಾವ ಗೇಣಿ ಭೂಮಿ ತನಗೆ ಬೇಕು ಅನ್ನುವ ಆಯ್ಕೆ ಗೇಣಿದಾರನದಾಗಿರುತ್ತದೆ.

೫. ಈ ದಿನಾಂಕದ ನಂತರ ಗೇಣಿದಾರ ಇದ್ದಕ್ಕಿದ್ದಂತೆಯೇ ಒಡೆತನ ಪಡೆದುಕೊಳ್ಳಲಾಗುವುದಿಲ್ಲ. ಗೇಣಿದಾರ ಫಾರಂ ನಂ.೭ ರಲ್ಲಿ ತಾಲ್ಲೂಕು ಭೂನ್ಯಾಯಮಂಡಳಿಗೆ ಸರ್ಕಾರ ಗೊತ್ತುಪಡಿಸಿದ ದಿನಾಂಕದೊಳಗೆ ಅರ್ಜಿ ಸಲ್ಲಿಸಬೇಕು. ಗೊತ್ತಾದ ದಿನಾಂಕದೊಳಗೆ ಅರ್ಜಿಸಲ್ಲಿಸದಿದ್ದರೆ ಆತನು ತನ್ನ ಗೇಣಿ ಹಕ್ಕನ್ನು ಕಳೆದುಕೊಳ್ಳುತ್ತಾನೆ.ಭೂನ್ಯಾಯಮಂಡಳಿಗಳ ತೀರ್ಮಾನವೇ ಕೊನೆಯ ತೀರ್ಮಾನವಾಗುತ್ತದೆ.

೬.ಗೇಣಿದಾರ ಭೂ ಒಡೆತನ ಪಡೆದುಕೊಳ್ಳಲು ಎ,ಬಿ ಮತ್ತು ಸಿ ವರ್ಗದ ಭೂಮಿಗೆ ನಿವ್ವಳ ವಾರ್ಷಿಕ ಆದಾಯದ ೧೫ ಪಟ್ಟನ್ನು ಡಿ ವರ್ಗದ ಭೂಮಿಯಾಗಿದ್ದರೆ ೨೦ ಪಟ್ಟನ್ನು ಸರ್ಕಾರಕ್ಕೆ ಕೊಡಬೇಕು. ಶೇ. ನಾಲ್ಕೂವರೆ ಬಡ್ಡಿಯ ದರದಲ್ಲಿ ೨೦ ವರ್ಷಗಳ ಕಂತಿನಲ್ಲಿ ಈ ಹಣವನ್ನು ಕಟ್ಟಬಹುದು.

೭. ಪೂರ್ತಿ ಹಣ ಕೊಟ್ಟ ನಂತರವೇ ಗೇಣಿದಾರರಿಗೆ ಆ ಭೂಮಿಯ ಒಡೆತನವನ್ನು ಕೊಡಲಾಗುವುದು. ನಂತರ ಸತತವಾಗಿ ೩ ವರ್ಷಗಳವರೆಗೆ ಈ ಜಮೀನನ್ನು ಅವನು ಸ್ವತಃ ವ್ಯವಸಾಯ ಮಾಡದೆ ಬೀಡು ಬಿಟ್ಟಿದ್ದರೆ ಅದು ಸರ್ಕಾರಕ್ಕೆ ಸೇರುತ್ತದೆ.

೮.ಭೂ ಪರಿಮಿತಿಗಿಂತ ಹೆಚ್ಚಿನ ಭೂಮಿ ಹೊಂದಿರುವ ಭೂಮಾಲೀಕರು ಫಾರಂ ನಂ. ೧೧ ರಲ್ಲಿ ಗೊತ್ತಾದ ಸಮಯದೊಳಗೆ ತಹಶೀಲ್ದಾರರಿಗೆ ಡಿಕ್ಲರೇಷನ್ ಅರ್ಜಿ ಸಲ್ಲಿಸಬೇಕು.

೯. ೨೪.೧.೧೯೭೧ರ ನಂತರ ಭೂಮಿಯನ್ನು ವರ್ಗಾವಣೆ ಮಾಡಿದ್ದರೆ ಈ ವರ್ಗಾವಣೆಯಾಗಿರುವ ಭೂಮಿಯನ್ನು ಭೂ ಪರಿಮಿತಿಯೊಳಗೆ ಲೆಕ್ಕಕ್ಕೆ ತೆಗೆದುಕೊಂಡು ಹೆಚ್ಚುವರಿ ಭೂಮಿಯನ್ನು ರಾಜ್ಯ ಸರ್ಕಾರ ತನ್ನ ಅಧೀನಕ್ಕೆ ತೆಗೆದುಕೊಳ್ಳುತ್ತದೆ.

೧೦.ವ್ಯವಸಾಯೇತರ ಉದ್ಯಮಗಳಿಂದ ಬರುವ ವಾರ್ಷಿಕ ಆದಾಯ ೧೨ಸಾವಿರ ರೂ.ಗಳಿಗಿಂತ ಹೆಚ್ಚಿದ್ದರೆ ಇನ್ನು ಮುಂದೆ ಆತ ಭೂಮಿಯನ್ನು ಪಡೆಯುವ ಹಕ್ಕಿಲ್ಲ.

೧೧.ಪ್ರತಿಯೊಂದು ತಾಲ್ಲೂಕಿನಲ್ಲೂ ಕಡೆಯ ಪಕ್ಷ ಒಂದೊಂದು ಭೂನ್ಯಾಯಮಂಡಳಿಗಳನ್ನು ರಚಿಸಲಾಯಿತು.

೧೨. ಭೂಮಿಯ ವರ್ಗೀಕರಣವನ್ನನುಸರಿಸಿ ಭೂಮಿತಿಯನ್ನು ಹೇರಲಾಗಿದೆ. ಒಂದು ಕುಟುಂಬ ಎ ವರ್ಗದ ಭೂಮಿಯಾದರೆ ೧೦ ಎಕರೆಯನ್ನೂ, ಬಿ ವರ್ಗದ ಭೂಮಿಯಾದ ೨೦ ಎಕರೆಗಳನ್ನೂ, ಸಿ. ಮತ್ತು ಡಿ ವರ್ಗದ ಭೂಮಿಯಾದರೆ ೪೦ ಎಕರೆಗಳಷ್ಟು ಭೂಮಿಯ ಒಡೆತನವನ್ನೂ ಹೊಂದಿರಬಹುದು."[೧೬]

ಈ ಸುಧಾರಣೆಯು ಭೂಮಾಲೀಕರಲ್ಲಿ ಬೇರೂರಿದ್ದ ಊಳಿಗಮಾನ್ಯಶಾಹಿ ಮನೋಧರ್ಮಕ್ಕೆ ಸ್ವಲ್ಪಮಟ್ಟಿಗೆ ಪೆಟ್ಟು ನೀಡಿತು. ಆದರೆ ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಊಳಿಗಮಾನ್ಯ ಮತ್ತು ಅರೆ ಊಳಿಗಮಾನ್ಯ ವ್ಯವಸ್ಥೆ ಹಾಗೆಯೇ ಉಳಿದುಕೊಳ್ಳಲು ಕಾರಣವಾಯಿತು. ಈ ಸುಧಾರಣೆಯ ಹಿಂದೆ ಕೆಲ ಭೂಮಾಲೀಕರು ಹಾಗೆಯೇ ಉಳಿದುಕೊಂಡರು. ಇನ್ನುಳಿದ ರೈತರನ್ನು ಭೂಮಾಲೀಕರು ಶೋಷಿಸುತ್ತಿರುವುದನ್ನು ಇಂದಿಗೂ ಗುರುತಿಸಬಹುದಾಗಿದೆ. ಈಗಲೂ ಹಳ್ಳಿಗಳಲ್ಲಿ ಮೇಲ್ಜಾತಿಯ, ಮೇಲ್ವರ್ಗದ ರೈತಾಪಿಗಳಲ್ಲಿ ಊಳಿಗಮಾನ್ಯಶಾಹಿ ವರ್ತನೆಯನ್ನು ಕಾಣುತ್ತೇವೆ. ಅಲ್ಲದೆ ಕೆಲವು ಭಾಗಗಳಲ್ಲಿ ಪರಿಣಾಮಕಾರಿಯಾಗಿ ಭೂಹಂಚಿಕೆಯಾಗಲಿಲ್ಲ. ಚಿಕ್ಕಮಗಳೂರು,ಕೊಡಗು ಬೆಟ್ಟಗುಡ್ಡ ಪ್ರದೇಶಗಳಾದ ಪ್ಲಾಂಟೇಶನ್‌ಗಳಿಗೆ ಭೂ ಪರಿಮಿತಿ ಅನ್ವಯವಾಗದೇ ಉಳಿಯಿತು.

"೧೯೭೪ರ ಭೂಸುಧಾರಣೆ ಕಾಯ್ದೆ"ಯ ಸಮಗ್ರ ತಿದ್ದುಪಡಿಯು ಪ್ರಗತಿದಾಯಕವಾಗಿದ್ದರೂ ಕೆಲವು ಲೋಪದೋಷಗಳನ್ನು ಒಳಗೊಂಡಿವೆ.ಭೂಸುಧಾರಣೆಯಲ್ಲಿ ೧೯೭೪ರ ತಿದ್ದುಪಡಿ ಆಗಿನ ಆಳುವ ಸರ್ಕಾರಕ್ಕೆ ತಾನು ಅಧಿಕಾರದಲ್ಲಿ ಮುಂದುವರೆಯುವುದು ತೀರ ಅಗತ್ಯವಾಗಿತ್ತು. ಈ ಭೂಸುಧಾರಣೆ ರಾಜಕೀಯ ಉದ್ದೇಶದಿಂದ ಕೂಡಿತ್ತು,ಎಂಬ ಅಪವಾದವಿದೆ. ಆದರೆ ಭೂಸುಧಾರಣಾ ತಿದ್ದುಪಡಿಯ ಆಶಯ ಬಡವರಿಗಾಗಿ, ಕೂಲಿಕಾರ್ಮಿಕರಿಗಾಗಿ, ಸಣ್ಣರೈತರ ಪರವಾಗಿದ್ದುದು ಇಲ್ಲಿ ಮುಖ್ಯವಾಗಿ ಗಮನಿಸಬಹುದಾಗಿದೆ. ಈ ಭೂಸುಧಾರಣಾ

ಕಾಯ್ದೆ ತಿದ್ದುಪಡಿಯ ಉದ್ದೇಶವು ಅತ್ಯಂತ ಪ್ರಗತಿಪರವಾದ ಆಶಯವನ್ನು ಹೊತ್ತು ಭೂ ನೀತಿಯನ್ನು ರೂಪಿಸಿರುವುದು ಪ್ರಗತಿದಾಯಕವಾಗಿವೆ.

ಇಲ್ಲಿ ಒಟ್ಟಾರೆಯಾಗಿ ಗಮನಿಸಿದಾಗ, ಸಂವಿಧಾನಾತ್ಮಕ ಪ್ರಜಾಪ್ರಭುತ್ವ ಸರ್ಕಾರದಲ್ಲಿ ಭೂಮಿಯನ್ನು ಸಮಾನವಾಗಿ ಹಂಚುವ ಮತ್ತು ಕಾನೂನು ಮೂಲಕ ಯಾವುದೇ ಜಾತಿಬೇಧವಿಲ್ಲದೆ, ಸಮಾನ ನೆಲೆಯಲ್ಲಿ ಭೂ ಹಂಚಿಕೆ ಮಾಡುವ ಯತ್ನವಿತ್ತು. ಉಳುವವನೇ ಹೊಲದೊಡೆಯ ಎಂಬ ಘೋಷಿತ ವಾಕ್ಯವೇ ಸೂಚಿಸುವಂತೆ ಭೂಹೀನ ರೈತರಿಗೆ ಒಡೆತನವನ್ನು ನೀಡುವ ಉದ್ದೇಶ ಹೊಂದಿದೆ.

### ೩.೨.೧ ಭೂ ಹೋರಾಟಗಳು

ಭಾರತೀಯ ಸಂದರ್ಭದಲ್ಲಿ ರೈತರು ದೇಶದ ನಾನಾ ಭಾಗಗಳಲ್ಲಿ ಭೂ ಹಕ್ಕನ್ನು ಪಡೆಯಲು ಜೊತೆಗೆ ವಿವಿಧ ಬೇಡಿಕೆಗಳಾದ ಕಂದಾಯ, ಗೇಣಿಯ ವಿರುದ್ಧ ಮುಂತಾದವುಗಳ ವಿರುದ್ಧ ಹೋರಾಟ ನಡೆಯಿತು.ಬ್ರಿಟಿಷರು ಮತ್ತು ಭೂಮಾಲೀಕರ ಶೋಷಣೆಯ ವಿರುದ್ಧ ಭಾರತದ ರೈತರು ಶತಮಾನಗಳಿಂದಲೂ ಸಿಡಿದೆದ್ದು ಹೋರಾಟ ನಡೆಸಿದ್ದಾರೆ. ಭಾರತ ಮತ್ತು ಕರ್ನಾಟಕ ಮಟ್ಟದ ಭೂ ಹೋರಾಟಗಳನ್ನು ಸ್ಥೂಲವಾಗಿ ಅಧ್ಯಯನ ಮಾಡಲಾಗವುದು.

### ೧.ಭಾರತದ ಮಟ್ಟದಲ್ಲಿ ಭೂಹೋರಾಟಗಳು

೧೭೭೨-೮೦ರಲ್ಲಿ ಬಂಗಾಲದ ಕೆಲವು ಜಿಲ್ಲೆಯ ಕೆಲವು ಭಾಗಗಳಲ್ಲಿ "ಸನ್ಯಾಸಿ ಫಕೀರರು ದಂಗೆ" ನಡೆಸಿದರು. ಯುದ್ಧ, ಬಡತನ, ಬರಗಾಲ ಉಳುವ ಭೂಮಿಯನ್ನು ಕಳೆದುಕೊಂಡವರು ಜಮೀನ್ದಾರರನ್ನು ಮುತ್ತಿಗೆ ಹಾಕಿ ಹೆದರಿಸಿ ದವಸ ಧಾನ್ಯ ಹಾಗೂ ಒಡವೆ ವಸ್ತುಗಳು ಕೇಳಿದರು. ಸರ್ಕಾರಿ ಖಜಾನೆಗೆ ರವಾನೆಯಾಗುತ್ತಿದ್ದ ಹಣದ ಪೆಟ್ಟಿಗೆಯನ್ನು ಆಯಕಟ್ಟಿನ ಜಾಗಗಳಲ್ಲಿ ನಿಂತು ಕಸಿದುಕೊಂಡು ಸಿಕ್ಕಿದ ಹಣವನ್ನು ಕೊಳ್ಳುತ್ತಿದ್ದರು.

೧೮೫೫ - ೫೬ರವರೆಗೆ ಬ್ರಿಟಿಷರ ವಿರುದ್ಧ ನಡೆದ ಬಿಹಾರ ಮತ್ತು ಒರಿಸ್ಸಾದ ಗುಡ್ಡಗಾಡುಪ್ರದೇಶದ "ಸಂತಾಲರು ಚಳುವಳಿ" ನಡೆಸಿದರು. ಬ್ರಿಟಿಷರು ೧೭೯೩ ರಲ್ಲಿ ಜಮೀನ್ದಾರಿ ಪದ್ಧತಿಯನ್ನು ಜಾರಿಗೆ ತಂದಿದ್ದರಿಂದ, ಭೂಮಾಲೀಕರು ಸಾವಿರಾರು ಎಕ್ರೆಯ ಭೂಒಡೆಯರಾದರು.ಇದರ ಪರಿಣಾಮವಾಗಿ ಸಂತಾಲರು ತಮ್ಮ ಭೂಮಿಯನ್ನು ಕಳೆದುಕೊಳ್ಳತೊಡಗಿದರು.ಈನೆಲ ನಮ್ಮದು ಈ ನೆಲ ಬಿಟ್ಟುಹೋಗಿ ಅಥವಾ ಗೇಣಿಕೊಡಿ ಎಂದು ದಂಗೆಯನ್ನು ನಡೆಸಿದರು.

೧೮೬೦ ರಲ್ಲಿ ನೀಲಿಬೆಳೆಯನ್ನು ಬೆಳೆಯುವಂತೆ ಯೂರೋಪಿಯನ್ನರು ಬಂಗಾಲದ ರೈತರು ಮತ್ತು ಭೂಮಾಲೀಕರನ್ನು ಒತ್ತಾಯಿಸಿದರು.ಯೂರೋಪಿಯನ್ನರು ಹೇಳಿದಷ್ಟು ಭೂಮಿಯಲ್ಲಿ ನೀಲಿಬೆಳೆಯನ್ನು ಬೆಳೆಯುವುದು ಕಡ್ಡಾಯವಾಗಿತ್ತು. ಒಂದು ಬೆಳೆಯದಿದ್ದಲ್ಲಿ ಚಿತ್ರಹಿಂಸೆ ನೀಡಿ ಸಾಯಿಸಿಬಿಡುತ್ತಿದ್ದರು.ಪ್ಲಾಂಟೇಶನ್ ಮಾಲೀಕರ ಹಿಂಸೆಯ ವಿರುದ್ಧ ದೊಡ್ಡ ಮಟ್ಟದಲ್ಲಿ ಹೋರಾಟ ನಡೆಯಿತು.

೧೮೭೫ರಲ್ಲಿ ನಡೆದ ಮಾರ್ವಾಡಿ ಹಾಗೂ ಲೇವಾದೇವಿಗಾರರ ವಿರುದ್ಧ "ದಕ್ಕನಿನ ದಂಗೆ" ನಡೆಯಿತು. ಪಶ್ಚಿಮ ಮಹಾರಾಷ್ಟ್ರದ ಪುಣೆ ಮತ್ತು ಅಹಮದ್‌ನಗರ,ಸತಾರ್ ಮತ್ತು ಸೊಲ್ಲಾಪುರಗಳಲ್ಲೂ ಸಹ ಹಬ್ಬಿತು. ಇದು ಬಡ್ಡಿ ಲೇವಾದೇವಿಯ ವಿರುದ್ಧವೇ ರೈತರು ಹೂಡಿದ ಹೋರಾಟವಾಗಿದೆ.

ಮದರಾಸು ಪ್ರಾಂತ್ಯಕ್ಕೆ ಸೇರಿದ್ದ ಮಲಬಾರು ಈಗ ಕೇರಳದಲ್ಲಿದೆ. ೧೮೩೬-೧೯೨೧ ರವರೆಗೆ ಇಲ್ಲಿನ ಮಾಪಿಳ್ಳೆರೈತರು ಭೂಮಾಲೀಕರ ವಿರುದ್ಧ ಮತ್ತು ಬ್ರಿಟಿಷ್ ಸರ್ಕಾರದ ವಿರುದ್ಧ ಬಹು ದೀರ್ಘಕಾಲ ಹಿಂಸಾತ್ಮಕವಾಗಿ ಹೋರಾಟ ನಡೆಸಿದರು.

೧೯೨೮ ರಲ್ಲಿ ಗುಜರಾತ್ ರಾಜ್ಯದ ಸೂರತ್ ಜಿಲ್ಲೆಯ ಬಾರ್ಡೋಲಿ ಗ್ರಾಮದಲ್ಲಿ ವಲ್ಲಭಬಾಯಿ ನೇತೃತ್ವದಲ್ಲಿ ಹೋರಾಟ ನಡೆಸಲಾಯಿತು.ಇಲ್ಲಿನ ಭೂಮಾಲೀಕ ಪಟಿದಾರರು ಶ್ರೀಮಂತ ರೈತರು. ಇವರು ದಕ್ಷಿಣ ಆಫ್ರಿಮುಂತಾದೆಡೆಯಿಂದ ವ್ಯಾಪಾರ ಮಾಡಿ ಬಾರ್ಡೋಲಿಯ ಸುತ್ತಮುತ್ತ ಹೆಚ್ಚಿನ ಜಮೀನುಗಳನ್ನು ಪಟಿದಾರರು ಖರೀದಿಸಿದರು. ಇವರು ಈ ಭಾಗದ ಗೇಣಿದಾರರಾದ ದೊಬ್ಲಾ,ನಾಯಿಕ,ಚೋದ್ರಾ,ಗಾಮಿಟ ಇವರುಗಳಿಗೆ ಭೂಮಿಯನ್ನು ಗೇಣಿಗೆ ಕೊಟ್ಟು ೧೦ರಿಂದ ೨೦ ಪಟ್ಟು ಪಟಿದಾರರು ಗೇಣಿಪಡೆಯುತ್ತಿದ್ದರು. ಇಂಥ ಜಮೀನಿಗಳಿಗೆ ಬನಿಯಾ ಜಾತಿಯ ಲೇವಾದೇವಿಗಾರರು ಗೇಣಿದಾರರಿಗೆ ಸಾಲನೀಡಿ ವಿಪರೀತ ಬಡ್ಡಿ ವಿಧಿಸುತ್ತಿದ್ದರು. ಪಟಿದಾರ

ಮತ್ತು ಬನಿಯಾ ಈ ಇಬ್ಬರ ಶೋಷಣೆ ಮಿತಿಮೀರಿದಾಗ ಇವರ ವಿರುದ್ಧ ಗೇಣಿದಾರರು ಹೋರಾಟ ನಡೆಸಿದರು.

೧೯೪೫ -೪೭ರಲ್ಲಿ ಮುಂಬೈ ಪ್ರಾಂತದ ಠಾಣೆ ಜಿಲ್ಲೆಯ ಅರಣ್ಯಗಳಲ್ಲಿ ವಾರಲಿ ಜನರು ವಾಸಿಸು ಆದಿವಾಸಿಗಳು. ಪಾರ್ಸಿ,ಪಠಾಣರು,ಇರಾನಿ,ಮಾರವಾಡಿ ಜನಾಂಗದವರು ವಾರಲಿ ಜನಾಂಗದ ಭೂಮಿಯನ್ನು ಕಡಿಮೆ ಬೆಲೆಗೆ ಹತ್ತಿಪ್ಪತ್ತು,ನೂರಿನ್ನೂರು ರೂಪಾಯಿಗಳಿಗೆ ಕೊಂಡರು.ಇಂಥ ಮೋಸದ ವಾರಲಿಯರ ಎಲ್ಲಾ ಭೂಮಿಯನ್ನು ಆಕ್ರಮಿಸಿಕೊಂಡರು. ಆನಂತರ ಭೂಮಾಲೀಕರು ವಾರಲೀಯರ ನೆಲದಲ್ಲಿ ವಾರಲಿಯರನ್ನೇ ಗೇಣಿದಾರರನ್ನಾಗಿ ಮಾಡಿಕೊಂಡರು.ಇವರು ವಾರಲಿಯರನ್ನು ಹಲವಾರು ಬಗೆಯಲ್ಲಿ ಶೋಷಣೆ ಮಾಡತೊಡಗಿದರು.ಕಿಸಾನ್‌ಸಭಾದ ಮೂಲಕ ಭೂಮಾಲೀಕರ ವಿರುದ್ಧ ಹೋರಾಟ ನಡೆಸಿ ಬಂಧನ ವಿಮುಕ್ತರಾದರು.

೧೯೪೬-೪೭ ರಲ್ಲಿ ಬಂಗಾಳದ ಕೆಲವು ಜಿಲ್ಲೆಗಳಲ್ಲಿ ರೈತರು ನಡೆಸಿದ "ತೇಭಾಗ ಚಳುವಳಿ" ಮುಖ್ಯವಾದುದಾಗಿದೆ. ಇಲ್ಲಿನ ಬರ್ಗದಾರರನ್ನು ರೈತಮಕ್ಕಳೆಂದು, ಇಲ್ಲಿನ ಜೋತೆದಾರರನ್ನು ಭೂಮಾಲೀಕರೆಂದು ಕರೆಯಲಾಗುತ್ತದೆ.ತಾವು ಬೆಳೆದ ಬೆಳೆಯಲ್ಲಿ ಅರ್ಧಭಾಗವನ್ನು ಜೋತೆದಾರರಿಗೆ ನೀಡಬೇಕಿತ್ತು. ಆದರೆ ಬರ್ಗದಾರರು ತಾವು ಬೆಳೆದ ಮೂರುಪಾಲು ಫಸಲಿನಲ್ಲಿ ಎರಡು ಪಾಲು ತಾವು ಇಟ್ಟುಕೊಂಡು ಇನ್ನುಳಿದ ಒಂದು ಪಾಲನ್ನು ಜೋತೆದಾರರಿಗೆ ನೀಡಬೇಕೆಂಬುದೇ ಹೋರಾಟಕ್ಕೆ ಮುಖ್ಯಕಾರಣವಾಯಿತು.ಈ ಪದ್ಧತಿಯು ಬ್ರಿಟಿಷರಿಂದ ಬಂದುದಾಗಿದೆ. ಈ ಪದ್ಧತಿಯಿಂದಾಗಿ ಬರ್ಗದಾರರು ಸಾಲಗಾರರಾಗಿ ಹಲಬಗೆಯ ಶೋಷಣೆಗೆ ಒಳಗಾದರು.ಇದರ ವಿರುದ್ಧ ಹೋರಾಟನಡೆಸಲು ಸಿದ್ಧರಾಗಿ ಕಿಸಾನ್‌ಸಭಾವು ನೇತೃತ್ವವಹಿಸಿಕೊಂಡು ಹೋರಾಟ ನಡೆಸಿದರು.

೧೯೪೬ ರಿಂದ೫೧ ರವರೆಗೆ ನಡೆದ "ಆಂದ್ರದ ತೆಲಂಗಾಣ ರೈತಹೋರಾಟ"ವನ್ನು ಕಮ್ಯುನಿಸ್ಟ್‌ಪಾರ್ಟಿ ನಾಯಕತ್ವ ವಹಿಸಿಕೊಂಡಿತು. ಇಲ್ಲಿನ ಭೂಮಾಲೀಕರುಗಳಾದ ಜಹಗೀರುದಾರರು, ಇನಾಂದಾರರು, ದೇಶಪಾಂಡೆ,ದೇಶಮುಖರ ಹಾಗೂ ನಿಜಾಮರ ವಿರುದ್ಧ ನಡೆದ ಬಹುದೊಡ್ಡ ಹೋರಾಟವಾಗಿದೆ. ಈ ಹೋರಾಟವು ದೇಶದಲ್ಲಿ ಅತಿದೊಡ್ಡ,ವ್ಯಾಪಕವಾದ ಹೋರಾಟವಾಗಿ ಯಶಗಳಿಸಿತು.ಕಮ್ಯುನಿಷ್ಟರು,ಆಂಧ್ರಮಹಾಸಭಾ ಸದಸ್ಯರು ಒಟ್ಟುಗೂಡಿ ಹೋರಾಟನಡೆಸಿದರು. ಇಲ್ಲಿನ ಭೂಮಾಲೀಕರು ಸಾವಿರಾರು,ಎಕರೆ ಭೂಪ್ರದೇಶವನ್ನು ಹೊಂದಿದ್ದಲ್ಲದೆ ಹಲವು ರೀತಿಯ ಶೋಷಣೆಗೆ ಕಾರಣರಾಗಿದ್ದರು. ಇದು ಭೂಹೀನ ರೈತರನ್ನು ಕೆರಳಿಸಿತು. ಭೂಮಿಯನ್ನು ಪಡೆಯುವ, ಶೋಷಣೆಯಿಂದ ವಿಮುಕ್ತಿಹೊಂದುವ ಸಲುವಾಗಿ ಭೂಹೀನ ರೈತರು ರಕ್ತಕ್ರಾಂತಿಯ ಮೂಲಕ ಹೋರಾಟ ನಡೆಸಿ ಯಶಸ್ಸನ್ನು ಪಡೆದರು.

೧೯೬೭ರಲ್ಲಿ ನಡೆದ ಪಶ್ಚಿಮಬಂಗಾಳದ ಉತ್ತರ ಭಾಗದ ಜಿಲ್ಲೆಯಾದ ಡಾರ್ಜಿಲಿಂಗ್ ಪ್ರದೇಶವನ್ನ, ನಕ್ಸಲ್‌ಬಾರಿ ಪ್ರದೇಶವೆಂದು ಗುರುತಿಸಲಾಗುತ್ತದೆ.ಇಲ್ಲಿನ ಬುಡಕಟ್ಟು ಜನಾಂಗಗಳಾದ ಮುಂಡಾ, ಒರಾವೋ, ರಾಜಬಂಶಿ ಮೊದಲಾದ ಬುಡಕಟ್ಟು ಜನಾಂಗವು,ಭೂಮಾಲೀಕರ ವಿರುದ್ಧ ತಮ್ಮ ತೋಳ್ಬಲಪ್ರಯೋಗದ ಮೂಲಕ ಹೋರಾಟನಡೆಸಿ ಭೂಮಿಯನ್ನು ವಶಪಡಿಸಿಕೊಂಡರು. ಇದೊಂದು ರೀತಿಯ ಕಮ್ಯುನಿಸ್ಟ್ ಮಾದರಿಯ ಗೆರಿಲ್ಲಾ ಸಶಸ್ತ್ರ ಹೋರಾಟವಾಗಿದೆ. ಇಲ್ಲಿ ಜಮೀನುದಾರರು ಸಂಗ್ರಹಿಸಿಟ್ಟ ಧಾನ್ಯವನ್ನು ವಶಪಡಿಸಿಕೊಂಡು ಬಡವರಿಗೆ ಹಂಚುವುದು, ಸಾಲಪತ್ರಗಳನ್ನು ವಶಪಡಿಸಿಕೊಂಡು ನಾಶಗೊಳಿಸುವುದು, ಶಾಲೆ ಪಂಚಾಯಿತಿ ಅಧಿಕಾರಗಳನ್ನು ಸ್ಥಳೀಯರಿಗೆ ವಹಿಸವುದು, ಇವು ಹೋರಾಟದ ಮುಖ್ಯ ಉದ್ದೇಶಗಳಾಗಿದ್ದವು.

೧೯೬೮ರಿಂದ ೭೦ರವರೆಗೆ ನಡೆದ ಆಂಧ್ರಪ್ರದೇಶದ ಶ್ರೀಕಾಕುಲುಂ ಜಿಲ್ಲೆಯ ಪಾರ್ವತೀಪುರಂ,ಪತ್ತಪಟ್ನಂ, ಸೋಮಪೇಟಾ,ಇಚ್ಚಾಪುರಂ ಮತ್ತು ತೆಕ್ಕಲಿ ೬ತಾಲ್ಲೂಕಿನಲ್ಲಿ ನಕ್ಸಲೀಯ ಹೋರಾಟ ನಡೆಯಿತು.ಕೇವಲ ಆಸ್ತಿಪಾಸ್ತಿಯನ್ನು ನಾಶಮಾಡಿದರೆ ಸಾಲದು ವೈರಿಯನ್ನು ನಾಶಮಾಡಬೇಕೆಂಬ ಆಶಯವನ್ನು ಈ ಹೋರಾಟ ಹೊಂದಿದೆ. ಇಡೀ ಹೋರಾಟವು ಅಧ್ಯಕ್ಷ ಮಾವೋ ವಿಚಾರಗಳಿಗೆ ಅನುಗುಣವಾಗಿ ನಡೆಯಬೇಕು. ಎಲ್ಲರೂ ಚೀನಾದ ಕಮ್ಯುನಿಷ್ಟ್‌ಮಾದರಿಯಾಗಿ ಮಾತೃಸಂಸ್ಥೆಯೆಂದು ಅಂಗೀಕರಿಸಬೇಕೆಂದು ನಕ್ಸಲರು ಭಾವಿಸಿದ್ದರು. ಶ್ರೀಕಾಕುಲಂ ನಕ್ಸಲ್ ಹೋರಾಟದ ನೇತೃತ್ವವನ್ನು ಚಾರುಮಜುಂದಾರ ವಹಿಸಿಕೊಂಡಿದ್ದನು.

**೩.೨.೨ ಕರ್ನಾಟಕ ಮಟ್ಟದಲ್ಲಿ ಭೂ ಹೋರಾಟಗಳು**

ಕರ್ನಾಟಕದ ಸಂದರ್ಭದಲ್ಲಿ ವಿವಿಧ ಭಾಗಗಳಲ್ಲಿ ಭೂ ಹಕ್ಕಿಗಾಗಿ, ಶೋಷಣೆಯ ವಿರುದ್ಧವಾಗಿ ಭೂ ಹೋರಾಟಗಳು ನಡೆದಿರುವುದನ್ನು ಗಮನಿಸಬಹುದಾಗಿದೆ. ಇಲ್ಲಿ ಸಮಕಾಲೀನ ಹಾಗೂ ವಾಸ್ತವದ

ಭೂಹೋರಾಟಗಳನ್ನ ಅಧ್ಯಯನ ಮಾಡಲಾಗುವುದು.

೧೭೯೯ ರಲ್ಲಿ ನಡೆದ ದುಂಡಿಯಾವಾಘ ಮತ್ತು ಸಂಗಡಿಗರ ಆದಿವಾಸಿಗಳ ದಂಗೆ, ೧೮೦೩ರಲ್ಲಿ ಬಳ್ಳಾರಿಯ ಪಾಳೇಗಾರರ ದಂಗೆ, ೧೮೨೪ರಲ್ಲಿಕಿತ್ತೂರ ದೇಸಾಯಿಗತಿಗಾಗಿ ನಡೆದ ಹೋರಾಟ, ೧೮೩೦ರಲ್ಲಿ ಸಂಗೊಳ್ಳಿರಾಯಣ್ಣನ ಬಂಡು, "೧೮೩೦ ರಿಂದ ೧೮೩೧ ರವರೆಗೆ ನಡೆದ ಬೂದಿಬಸಪ್ಪನ ಬಂಡು", ೧೮೩೫ ೩೭ರಲ್ಲಿ ನಡೆದ ಕೊಡಗು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಪುಟ್ಟಬಸಪ್ಪನ ಬಂಡು, ೧೮೫೭ರ ಹಲಗಲಿ ಬೇಡರ ಬಂಡು, ೧೮೫೭ರಲ್ಲಿ ನಡೆದ ನರಗುಂದದ ಬಾಬಾಸಾಹೇಬನ ಬಂಡು ಮತ್ತು ೧೮೫೮ರ ಮುಂಡರಗಿ ಭೀಮರಾಯನ ಬಂಡುಗಳು ವಸಾಹತು ಕರ್ನಾಟಕದಲ್ಲಿ ನಡೆದ ಹೋರಾಟಗಳಾಗಿವೆ. ಈ ಪೈಕಿ ಬೂದಿಬಸಪ್ಪನ ಬಂಡು ಮುಖ್ಯವಾಗಿ ರೈತಾಪಿ ಅಂಶವನ್ನು ಒಳಗೊಂಡಿತ್ತು. ಉಳಿದವು ತಾವು ಕಳೆದುಕೊಂಡ ಅಧಿಕಾರ, ಸವಲತ್ತುಗಳನ್ನು ಪುನಃ ಪಡೆಯಲು ಕೆಲವು ವ್ಯಕ್ತಿಗಳು ಹಾಗೂ ಮನೆತನಗಳು ನಡೆಸಿದ ಪುನಸ್ಥಾಪನೆಯ ಹೋರಾಟಗಳಾಗಿದ್ದವು.

ಹಳೆಯ ಮೈಸೂರು ರಾಜ್ಯದಲ್ಲಿ ರೈತವಾರಿ ಪದ್ಧತಿಯನ್ನು ಹೊಂದಿದ್ದು ಸಾಮಾನ್ಯ ರೈತರಿಗೆ ಹೆಚ್ಚಿನ ಹೊರೆಯಾಗುತ್ತಿತ್ತು. ಮೈಸೂರು ಚರಿತ್ರೆಯಲ್ಲಿ ಮೊದಲ ಸಾಂಘಿಕ ರೈತ ಹೋರಾಟವು ಚಿಕ್ಕದೇವರಾಜರ ಕಾಲದಲ್ಲಿ ನಡೆಯಿತು. ಈತನ ಕಾಲದಲ್ಲಿ ರೈತರ ಮೇಲೆ ವಿಪರೀತ ಕಂದಾಯ ತರಿಗೆಯನ್ನು ವಸೂಲಿ ಮಾಡುತ್ತಿದ್ದರು. ಇಂಥ ಕಂದಾಯ ನೀತಿಯಿಂದಾಗಿ ರೈತರು ದಂಗೆ ಎದ್ದರು. ಈ ರೈತ ದಂಗೆಗೆ ಜಂಗಮ ಸನ್ಯಾಸಿಗಳು ನೇತೃತ್ವವಹಿಸಿಕೊಂಡರು. ಆನಂತರದಲ್ಲಿ ಚಿಕ್ಕದೇವರಾಜ ರೈತ ದಂಗೆಯನ್ನು ಹತ್ತಿಕ್ಕಲು ರೈತ ಮುಖಂಡರನ್ನು, ಜಂಗಮರನ್ನು ಮಾತುಕತೆಗೆ ಕರೆದು ಗುಡಾರದೊಳಗೆ ಹಾಕಿಸಿ ಕೊಲ್ಲಿಸಿದ.

ಬಾರ್ಡೋಲಿಯ ಮಾದರಿಯಲ್ಲಿ ಕಾರವಾರ ಜಿಲ್ಲೆಯ ಆಂಕೋಲೆ, ಸಿರ್ಸಿ ಮತ್ತು ಸಿದ್ಧಾಪುರ ತಾಲ್ಲೂಕಿನಲ್ಲಿ ರೈತ ಹೋರಾಟಗಳು ನಡೆದವು. ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನಲ್ಲಿ ಕರನಿರಾಕರಣೆ ಚಳುವಳಿ, ೧೯೩೦ರಲ್ಲಿ ಆಂಕೋಲೆ ರೈತರು ಉಪ್ಪಿನ ಸತ್ಯಾಗ್ರಹ, ಅರಣ್ಯಸತ್ಯಾಗ್ರಹ ಮತ್ತು ಹುಲ್ಲಬಲನ್ನಿ ಕರನಿರಾಕರಣೆಯ ಹೋರಾಟ ನಡೆಸಿದರು. ೧೯೩೧ರಲ್ಲಿ ಸಿರ್ಸಿ ಸಿದ್ಧಾಪುರ ಅಡಿಕೆ ಬೆಳೆ ನಷ್ಟದಿಂದ ರೈತರು ಜಿಲ್ಲಾಧಿಕಾರಿಗೆ ಮನವಿ ನೀಡಿದರು.

೧೯೩೮ - ೩೯ರಲ್ಲಿ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಈಸೂರು ಗ್ರಾಮದಲ್ಲಿ ರೈತರು ಚಳುವಳಿ ನಡೆಸಿದರು. ಚಳುವನ್ನು ಹತ್ತಿಕ್ಕಲು ಹೋಗಿದ್ದ ಅಧಿಕಾರಿಗಳ ಕೊಲೆಯಾಯಿತು. ಇದರ ಪರಿಣಾಮವಾಗಿ ಸರ್ಕಾರವು ರೈತರ ಮೇಲೆ ದಬ್ಬಾಳಿಕೆ ನಡೆಸಿ ಆರು ಮಂದಿ ರೈತರನ್ನು ಗಲ್ಲಿಗೇರಿಸಿತು. ೧೯೪೨ರಲ್ಲಿ ರೈತ ಮುಖಂಡರು ಹೊರ ಬಂದು ರೈತಸಂಘರನ್ನು ಸ್ಥಾಪಿಸಲು ಯತ್ನಿಸಿದರು. ಜೋಡಿ ಇನಾಂ ಪದ್ಧತಿ ವಿರುದ್ಧ ಕಬ್ಬಿಗೆ ನ್ಯಾಯ ಬೆಲೆಯ ನೀಡುವಂತೆ ಒತ್ತಾಯಿಸಿ ಎಚ್.ಕೆ.ವೀರಣ್ಣಗೌಡರು ಮಂಡ್ಯದಲ್ಲಿ ಹೋರಾಟ ನಡೆಸಿದರು.

೧೯೫೦ರಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ದಿನಕರದೇಸಾಯಿ, ಗಿರಿಪಿಕಳೆ ನೇತೃತ್ವದ ಗೇಣಿರೈತರ ಸಮಸ್ಯೆಗಳ ಕುರಿತು ಹೋರಾಟ ನಡೆಸಿತು. ಉತ್ತರ ಕನ್ನಡ ಜಿಲ್ಲೆಯಲ್ಲಿ ರೈತರಿಗಾಗುತ್ತಿದ್ದ ಅನ್ಯಾಯ, ಶೋಷಣೆ ವಿರುದ್ಧ ಹೋರಾಟವನ್ನು ಕಟ್ಟಿದರು. ಈ ನಿಟ್ಟಿನಲ್ಲಿ ರೈತ ಸಮಸ್ಯೆಗಳನ್ನು ಪರಿಹರಿಸಲು ರೈತ ಸಂಘಟನೆಯನ್ನು ಸ್ಥಾಪಿಸಿದರು. ಗೇಣಿ ರೈತರನ್ನು ಭೂಮಾಲೀಕರು ನಡೆಸಿಕೊಳ್ಳುತ್ತಿದ್ದ ರೀತಿ, ಗೇಣಿಯ ಪ್ರಮಾಣ, ಶೋಷಣೆಗಳ ವಿರುದ್ಧ ಹೋರಾಟ ನಡೆಸಿತು.

೧೯೫೦ರಲ್ಲಿ ಮಂಗಳೂರು ಬಳಿಯ ಮುಲ್ಕಿಯಲ್ಲಿ ಭೂಮಾಲೀಕರು, ಗೇಣಿದಾರರನ್ನು ಭೂಮಿಯಿಂದ ಒಕ್ಕಲೆಬ್ಬಿಸುವುದರ ವಿರುದ್ಧ ಹೋರಾಟ ನಡೆಸಿದರು. ಜಮೀನಿನಿಂದ ಹೊರದೂಡಲು ಜಮೀನು ಮಾಲೀಕರು ರೈತರ ಮನೆಗಳನ್ನು ಧ್ವಂಸಮಾಡಿ ಸಾಗುವಳಿ ಮಾಡಿದ ಜಮೀನುಗಳನ್ನು ವಶಪಡಿಸಿಕೊಳ್ಳುತ್ತಿದ್ದರು. ಕಮ್ಯುನಿಸ್ಟ ಸಿದ್ಧಾಂತದ ಕರ್ನಾಟಕ ಪ್ರಾಂತ ರೈತ ಸಂಘದ ಜಿಲ್ಲಾ ಸಂಘವು ರೈತರಿಗೆ ಆಗುತ್ತಿದ್ದ ಅನ್ಯಾಯದ ವಿರುದ್ಧ ಕಾ.ಕೃಷ್ಣಶೆಟ್ಟರ ನೇತೃತ್ವದಲ್ಲಿ ಹೋರಾಟವನ್ನು ರೂಪಿಸಿದರು. ಈ ಹೋರಾಟದ ಫಲವಾಗಿ ಮದ್ರಾಸ್ ಸರ್ಕಾರವು ಟೆನನ್ಸಿ ಕಾಯ್ದೆಯನ್ನು ಜಾರಿಗೊಳಿಸಿತು.

೧೯೫೦ - ೫೧ ರಲ್ಲಿ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಪುಟ್ಟ ಗ್ರಾಮವಾದ ಕಾಗೋಡಿನಲ್ಲಿ ನಡೆದ ಗೇಣಿರೈತರ ಹೋರಾಟವು ರಾಷ್ಟ್ರಮಟ್ಟದಲ್ಲಿ ಗಮನಸೆಳೆಯಿತು. ಈಗೇಣಿ ರೈತಹೋರಾಟವು ಆರಂಭದಲ್ಲಿ

ಅಳತೆಯ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಕಾಗೋಡು ಒಡೆಯರ ವಿರುದ್ಧ ಸತ್ಯಾಗ್ರಹವನ್ನು ಆರಂಭಿಸಿತು.ಹಲವು ತಿಂಗಳುಗಳ ಕಾಲ ನಡೆದ ಹೋರಾಟವು ಕ್ರಮೇಣ ತೀವ್ರಸ್ವರೂಪವನ್ನು ಪಡೆಯಿತು. ಇದರ ನೇತೃತ್ವವನ್ನು ಗೇಣಿರೈತಮುಖಂಡ ಎಚ್.ಗಣಪತಿಯಪ್ಪ ವಹಿಸಿಕೊಂಡಿದ್ದರು.ಕ್ರಮೇಣ ಸಮಾಜವಾದಿ ಪಕ್ಷದ ಪ್ರವೇಶದಿಂದಾಗಿ ಅಳತೆಯ ಬೇಡಿಕೆ ಹಿಂದೆ ಸರಿದು ಉಳುವವನೇ ನೆಲದೊಡೆಯ ಎಂಬುದು ಮುಖ್ಯಬೇಡಿಕೆಯ ಹೋರಾಟವಾಯಿತು. ಈಚಳುವಳಿಯಲ್ಲಿ ಶಾಂತವೇರಿಗೋಪಾಲಗೌಡರು, ರಾಮಮನೋಹರ ಲೋಹಿಯಾ, ಜಯಪ್ರಕಾಶ್‌ನಾರಾಯಣ್, ಕರ್ನಾಟಕ ಸಮಾಜವಾದಿ ನಾಯಕರೆಲ್ಲರೂ ಈ ಸತ್ಯಾಗ್ರಹದ ದನಿಯಾದರು. ಈ ಸತ್ಯಾಗ್ರಹವು ನೇರವಾಗಿ ಭೂಸುಧಾರಣಾ ಆಶಯವನ್ನಿಟ್ಟುಕೊಂಡು ನಡೆಸಿದ ಹೋರಾಟವಾಗಿರಲಿಲ್ಲ. ಒಡೆಯರಿಗೆ ಗೇಣಿ ಅಳತೆ ಪ್ರಮಾಣ ಕಡಿಮೆ ಮಾಡಬೇಕೆಂಬ ಬೇಡಿಕೆಯನ್ನಷ್ಟೇ ಮುಂದಿಟ್ಟಿತ್ತು. ಭೂಸುಧಾರಣೆಗೆ ನೇರ ಪರಿಣಾಮ ಬೀರದೆ ಇದ್ದರೂ ಈ ಚಳುವಳಿಯು ಭೂಸುಧಾರಣೆಗೆ ಒತ್ತಾಯ ತಂದಿತೆಂಬುದು ಗಮನಾರ್ಹಸಂಗತಿ.

೧೯೫೩ರಲ್ಲಿ ಧಾರವಾಡ ಜಿಲ್ಲೆಯಲ್ಲಿದ್ದ ಹೆಬ್ಬಳ್ಳಿ ಗ್ರಾಮದ ಜಹಗೀರುದಾರರ ಮನೆತನವು ಸುಮಾರು ೧೨ ಸಾವಿರ ಎಕರೆ ಭೂ ಪ್ರದೇಶವನ್ನು ಒಳಗೊಂಡಿತು. ಆಗ ಮುಂಬೈ ಸರ್ಕಾರವು ಗೇಣಿರದ್ಧತಿಕಾಯ್ದೆಯನ್ನು ಜಾರಿಗೊಳಿಸಿತು. ಈ ಹಿನ್ನೆಲೆಯಲ್ಲಿ ಮುಂಬೈ ಪ್ರಾಂತದ ಧಾರವಾಡವನ್ನು ಪ್ರತಿನಿಧಿಸಿದ್ದ ಶಾಸಕ ನೀಲಗಂಗಯ್ಯ ಪೂಜಾರ ಅವರು ಈ ಕಾಯ್ದೆಯ ಪ್ರಕಾರ ಜಹಗೀರುದಾರರ ಜಮೀನನ್ನು ವಶಪಡಿಸಿಕೊಳ್ಳಲು ಯತ್ನಿಸಿದರು. ಜಹಗೀರುದಾರರ ಒಡೆತನದಲ್ಲಿದ್ದ ೧೨ಸಾವಿರ ಎಕರೆ ಭೂ ಪ್ರದೇಶವನ್ನು ಹಂಚಲು ಕಾನೂನು ಸಮರವನ್ನು ಸಾರಿ ಅದರಲ್ಲಿ ಜಯಕಂಡರು. ಈ ಕಾನೂನು ಸಮರಕ್ಕಾಗಿ ಹಲವು ಬಾರಿ ಜಿಲ್ಲಾಧಿಕಾರಿಯ ಕಛೇರಿಗೆ ಭೇಟಿ ನೀಡಿ ಮನವಿ ಸಲ್ಲಿಸಿದ್ದರು. ಇದರ ಫಲವಾಗಿ ಆಗಿದ್ದ ಮೈಸೂರು ಸರ್ಕಾರದ ಮುಖ್ಯಮಂತ್ರಿಯಾಗಿದ್ದ ಬಿ.ಡಿ.ಜತ್ತಿಯವರು ಜಹಗೀರು ಭೂಮಿಯನ್ನು ಹಂಚಿಕೆ ಮಾಡುವಂತೆ ಆದೇಶಿಸಿದರು. ಆಗ ತಲಾ ೪೮ ಎಕರೆ ಭೂ ಪ್ರದೇಶವನ್ನು ೩.೨೦ ರೈತರಿಗೆ, ತಲಾ ೧೬ ಎಕರೆಯಂತೆ ಕೂಲಿಕಾರ್ಮಿಕರಿಗೆ ಭೂಹೀನರಿಗೆ ಹಂಚಲಾಯಿತು. ಇದೊಂದು ರೀತಿಯಲ್ಲಿ ಸುದ್ದಿಯಾಗದೆ ತಣ್ಣಗೆ ನಡೆದ ಕಾನೂನು ಸಮರದ ಭೂಹೋರಾಟವೆನ್ನಬಹುದು.

೧೯೫೬ರಲ್ಲಿ ಕಮ್ಯುನಿಸ್ಟ್‌ಮೂಲದ ಕರ್ನಾಟಕಪ್ರಾಂತ ರೈತ ಸಂಘವು ಅಸ್ತಿತ್ವಕ್ಕೆ ಬಂದಿತು. ಈ ಸಂಘವು ಕರ್ನಾಟಕದಾದ್ಯಂತ ಭೂಹೋರಾಟವನ್ನು ನಡೆಸಿ ಭೂಹೀನರಿಗೆ ಭೂಮಿಯನ್ನು ನೀಡುತ್ತಾ ಬಂದಿದೆ.ಭೂಸುಧಾರಣಾ ಶಾಸನ ಶೀಘ್ರ ಅನುಷ್ಠಾನಗೊಳ್ಳಬೇಕೆಂಬ ಒತ್ತಾಯವನ್ನು ಸಂಘಟನೆಯು ತಂದಿತು. ಈ ಸಂಘಟನೆಯು ಮುಖ್ಯ ಧ್ಯೇಯವಾಗಿ ಭೂಪ್ರಶ್ನೆಯನ್ನು ಮುಂದಿಟ್ಟುಕೊಂಡು ಕರ್ನಾಟಕದಲ್ಲಿ ಹೋರಾಟ ನಡೆಸಿತು. ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಎಲ್ಲಿ ಭೂ ಅನ್ಯಾಯವಾಗುತ್ತದೋ ಅಲ್ಲಿ ಪ್ರಾಂತಸಂಘ ಹೋರಾಟ ನಡೆಸುತ್ತಾ ಬಂದಿದೆ.

"ಕಾಗೋಡು ಸತ್ಯಾಗ್ರಹ" ನಂತರದಲ್ಲಿ ಕರ್ನಾಟಕದಲ್ಲಿ ಸಮಾಜವಾದಿ ಪಕ್ಷಗಳು ನಡೆಸಿದ ಭೂ ಹೋರಾಟಗಳು ಮುಖ್ಯವಾದವುಗಳು. ೧೯೬೯ರಲ್ಲಿ ನಡೆದ ಬಗರ್‌ಹುಕುಂ ಜಮೀನಿನ ಆಕ್ರಮಣ ಹೋರಾಟ ಮುಖ್ಯವಾದುದು. ಇದು ಶಿಕಾರಿಪುರ,ಸೊರಬ,ಸಾಗರ, ಶಿವಮೊಗ್ಗ ತಾಲ್ಲೂಕುಗಳಲ್ಲಿ ಭೂಮಿಯು ಅರಣ್ಯ ಪ್ರದೇಶಕ್ಕೆ ಒಳಪಟ್ಟಿತ್ತು. ಇದನ್ನು ಭೂಹೀನರಿಗೆ ಹಂಚಲು ಸಮಾಜವಾದಿ ನಾಯಕರು ೧೦ಸಾವಿರ ಎಕರೆ ಭೂಪ್ರದೇಶವನ್ನು ಆಕ್ರಮಿಸಿಕೊಂಡು ಭೂಹೀನರಿಗೆ ಹಂಚಿದರು.

೧೯೭೩ರಲ್ಲಿ ಬಳ್ಳಾರಿಯ ಜಿಲ್ಲೆಯ ಬಳಿ ಸಂಡೂರು ಗ್ರಾಮದಲ್ಲಿ ನಡೆದ ಸತ್ಯಾಗ್ರಹವು ಭೂಮಿಗಾಗಿ ನಡೆದ ಹೋರಾಟಗಳಾಗಿವೆ. ಇದಲ್ಲದೆ ೧೯೬೯ ರಲ್ಲಿ ಶಿಕಾರಿಪುರ, ಸೊರಬ, ಸಾಗರ, ಶಿವಮೊಗ್ಗ ತಾಲ್ಲೂಕುಗಳಲ್ಲಿ ಸೋಷಿಯಲಿಸ್ಟ್ ಪಾರ್ಟಿಯ ನೇತೃತ್ವದಲ್ಲಿ ೧೦,೦೦೦ ಎಕರೆ ಭೂಮಿಯನ್ನು ವಶಪಡಿಸಿಕೊಂಡು ಭೂಹೀನರಿಗೆ ಭೂಮಿಯನ್ನು ಹಂಚಲಾಯಿತು.

ಕರ್ನಾಟಕ ಪ್ರಾಂತ ರೈತಸಂಘದ ವತಿಯಿಂದ ೧೯೭೩ರಲ್ಲಿ ಕಮ್ಯುನಿಸ್ಟ್ ನಾಯಕ ಎ.ಕೆ.ಗೋಪಾಲನ್‌ರವರ ನೇತೃತ್ವದಲ್ಲಿ ಕೋಲಾರ ಜಿಲ್ಲೆಯ ತಿಮ್ಮಸಹಳ್ಳಿಯಲ್ಲಿ ಭೂ ಆಕ್ರಮಣ ಚಳುವಳಿಯಿಂದ ೩೦೦ ಎಕರೆ ಭೂಮಿ ವಶಪಡಿಸಿಕೊಂಡು ರೈತರಿಗೆ ಹಂಚಲಾಯಿತು. ಇದೇ ಅವಧಿಯಲ್ಲಿ ಶಿಡ್ಲಘಟ್ಟ ತಾಲೂಕಿನ ಈಗಲೇಟಿ ತಿಮ್ಮಸಂದ್ರದಲ್ಲಿ ೨೦೦ ಎಕರೆ ಅರಣ್ಯಭೂಮಿಯನ್ನು, ಚಿಂತಾಮಣಿಯ ವಿವಿಧೆಡೆಯ ೫೦೦ ಎಕರೆ ಭೂಮಿ ವಶಪಡಿಸಿಕೊಂಡು ಬಡರೈತರಿಗೆ ಹಂಚಲಾಯಿತು.೧೯೬೯ರಲ್ಲಿ ಉತ್ತರಕನ್ನಡ ಜಿಲ್ಲೆಯ ಹಳಿಯಾಳ ತಾಲ್ಲೂಕಿನ ಸಾತ್ನಳಿ, ಬ್ಯಾಪಳ್ಳಿ, ರಾಮಾಪುರ, ದೋಮಗೇರಾಪಳ್ಳಿಗಳ ಅರಣ್ಯಭೂಮಿ ಸ್ವಾಧೀನಪಡಿಸಿಕೊಳ್ಳುವ ಮೂಲಕ

ಕಿಸಾನ್‌ಸಭಾವು ಹೋರಾಟ ನಡೆಸಿ ಭೂಮಿಯನ್ನು ಪಡೆದು ಭೂಹೀನರಿಗೆ ಹಂಚಿತು.

೧೯೭೪ರಲ್ಲಿ ದಲಿತಸಂಘರ್ಷ ಸಮಿತಿವತಿಯಿಂದ ಚಂದಗೋಡು ಭೂಹೋರಾಟ ನಡೆಸಿ ೬೦೦ ಎಕರೆ ಬಗರ್‌ಹುಕುಂ ಭೂಮಿಯನ್ನು ದಲಿತರಿಗೆ ಹಂಚಲಾಯಿತು. ೧೯೮೫ರಲ್ಲಿ ಹೊಸಕೋಟೆಯ ನಾಯಗ ನಾಯಕನ ಕೋಟೆಯಲ್ಲಿ ರೈತರು ಮತ್ತು ಕೃಷಿ ಕೂಲಿಕಾರ್ಮಿಕರು ಭೂ ಹೋರಾಟ ನಡೆಸಿ ವಶಪಡಿಸಿಕೊಂಡರು. ೧೯೮೧ರಲ್ಲಿ ಗಂಗಾವತಿ ಮತ್ತು ಬಳ್ಳಾರಿಯಲ್ಲಿ ನಡೆದ ದಲಿತ ಸಂಘರ್ಷ ಸಮಿತಿಯು ಭೂ ಹೋರಾಟ ನಡೆಸಿದುದರಿಂದ ಭೂಹೀನ ರೈತರು ಭೂಮಾಲೀಕರಾದರು. ಈ ಸಮಿತಿಯು ಹಿರೇಜಂಕಲ್, ಕನಕಗಿರಿಯಲ್ಲಿ ಭೂ ಹೋರಾಟ ನಡೆಸಿ ಭೂಮಿಯನ್ನು ವಶಪಡಿಸಿಕೊಂಡು ಭೂಹೀನರಿಗೆ ಹಂಚಿತು.

೧೯೮೦ರಲ್ಲಿ ನಡೆದ ನರಗುಂದ ನವಲಗುಂದ ರೈತಹೋರಾಟವು ಬಹುಮುಖ್ಯವಾದುದಾಗಿದೆ. ಬೆಳಗಾವಿ ಜಿಲ್ಲೆಯ ಸವದತ್ತಿ,ಧಾರವಾಡ ಜಿಲ್ಲೆಯ ನವಲಗುಂದ,ನರಗುಂದ ಮಲಪ್ರಭಾ ರೈತ ಹೋರಾಟವು ರಾಷ್ಟ್ರದ ಗಮನಸೆಳೆಯಿತು.ಇದು ಮುಂದೆ ಕರ್ನಾಟಕದ ಮಟ್ಟದಲ್ಲಿ ರೈತ ಸಂಘಟನೆ ಅಸ್ತಿತ್ವಕ್ಕೆ ಬರಲು ಕಾರಣವಾಯಿತು.೧೯೮೦ರಲ್ಲಿ ಪ್ರೊ.ಎಂ.ಡಿ.ನಂಜುಸ್ವಾಮಿ,ಹೆಚ್.ಎಸ್.ರುದ್ರಪ್ಪ,ಎನ್.ಡಿ.ಸುಂದರೇಶ್ ನೇತೃತ್ವದಲ್ಲಿ ಕರ್ನಾಟಕ ರಾಜ್ಯ ರೈತಸಂಘವು ಅಸ್ತಿತ್ವಕ್ಕೆ ಬಂದಿತು.

೧೯೮೦-೮೧ರಲ್ಲಿ ನಡೆದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಭಾರತೀಯ ಜನತಾಪಕ್ಷ ನೇತೃತ್ವದಲ್ಲಿ ಅಕ್ರಮ ಭೂಮಿಯನ್ನು ಸಕ್ರಮಗೊಳಿಸುವ ಹೋರಾಟವು ಮುಖ್ಯವಾದುದು. ಈ ಹೋರಾಟದ ನೇತೃತ್ವವನ್ನು ಡಾ.ವಿ.ಎಸ್.ಆಚಾರ್ಯ, ಸದಾನಂದಗೌಡ ವಹಿಸಿದ್ದರು.ಇದರ ಪರಿಣಾಮವಾಗಿ ಗೇಣಿದಾರರಿಗೆ, ಕೃಷಿ ಕೂಲಿಕಾರ್ಮಿಕರಿಗೆ ಹೋರಾಟದ ಮೂಲಕ ಭೂಮಿಯನ್ನು ಸಕ್ರಮಗೊಳಿಸಿ ಇವರು ಹಂಚಿದರು.

೧೯೮೪ರಲ್ಲಿ ಕರ್ನಾಟಕ ರಾಜ್ಯ ಪ್ರಾಂತರೈತ ಸಂಘ ಪಿಕೆಟಿಂಗ್ ಮೂಲಕ ಭೂ ಹೋರಾಟ ನಡೆಸಿ, ಭೂಮಿಯನ್ನು ವಶಪಡಿಸಿಕೊಂಡು ಭೂಹೀನರಿಗೆ ಹಂಚಲಾಯಿತು. ದಲಿತ ಸಂಘರ್ಷಸಮಿತಿಯು ಲಿಂಗಸೂಗೂರಿನ ಮೆದಕಿನಾಳದಲ್ಲಿ ಭೂ ಹೋರಾಟ ನಡೆಸಿ ೬೭ ಎಕರೆ ಭೂಮಿಯನ್ನು ವಶಪಡಿಸಿಕೊಂಡು ಭೂಹೀನರಿಗೆ ಭೂಮಿಯನ್ನು ಹಂಚಲಾಯಿತು. ಇದೇ ಅವಧಿಯಲ್ಲಿ ದಲಿತ ಸಂಘರ್ಷ ಸಮಿತಿಯು ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲ್ಲೂಕಿನ ಮಹಮದ್‌ನಗರ ಬಸಾಪುರ, ಶಿವಪುರ, ಬಂಡಿ ಹರ್ಲಾಪುರ, ಹತ್ತಿವಟ್ಟಿ, ನಾರಾಯಣಪೇಟೆ ಪ್ರದೇಶದಕ್ಕೆ ಸೇರಿದ ೩೭೭೦ ಎಕರೆ ಭೂಮಿಯನ್ನು ವಶಪಡಿಸಿಕೊಂಡು ಭೂಮಿಯನ್ನು ಹಂಚಿತು. ಹೊನ್ನಾಳಿ ಭೂ ಹೋರಾಟ, ಚಂದಗೋಡು, ನಾಗಸಂದ್ರ, ಮರಸಪಲ್ಲಿ, ಗುಳ್ಳಹಳ್ಳಿ ಕಾವಲ್, ದೇವಲಾಪುರ, ಕಾದೇಹಳ್ಳಿ ಗೆಜ್ಜಲುಗಟ್ಟಾ, ಕವಿತಾಳ, ಕಬ್ಬಿನಹಳ್ಳಿಗಳ ದಲಿತ ಸಂಘರ್ಷಸಮಿತಿಯು ಹೋರಾಟ ನಡೆಸಿ ಭೂಹೀನರಿಗೆ ಭೂಮಿಯನ್ನು ಹಂಚಿತು.

೧೯೯೦ರಲ್ಲಿ ರಾಯಚೂರು ರೈತ ಕೂಲಿಕಾರ್ಮಿಕರ ಸಂಘವು ಅಸ್ತಿತ್ವಕ್ಕೆ ಬಂದಿತು. ಪೀಪಲ್‌ವಾರ್‌ಗ್ರೂಪ್ಸ್ ಸಹಯೋಗದೊಂದಿಗೆ ನಕ್ಸಲೈಟ್ ಹಿನ್ನೆಲೆಯ ಸಂಘಟನೆಯು ಗೇಣಿರೈತರ ಮತ್ತು ಕೃಷಿಕೂಲಿಕಾರರ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಹೋರಾಟ ನಡೆಸುತ್ತಾ ಬಂದಿದೆ. ಈ ವರ್ಗದ ಭೂಹೀನ ರೈತರಿಗೆ ಭೂಮಿಯನ್ನು ಒದಗಿಸುವ ಗುರಿಯಾಗಿಸಿಕೊಂಡು ಹೋರಾಟ ನಡೆಸುತ್ತಾ ಬಂದಿದೆ.

೧೯೯೪-೯೫ರಲ್ಲಿ ಹಾನಗಲ್ಲು, ಬ್ಯಾಡಗಿಯಲ್ಲಿ ಭೂ ಆಕ್ರಮಣ ಚಳುವಳಿಯಿಂದ ೧೫೦೦ ಎಕರೆ ಭೂಮಿಯನ್ನು ವಶಪಡಿಸಿಕೊಂಡು ಸಂಘವು ಭೂಹೀನರಿಗೆ ಹಂಚಿತು. ಕರ್ನಾಟಕ ಪ್ರಾಂತ ರೈತ ಸಂಘವು ೧೯೯೮ರಲ್ಲಿ ಬಾಗೂರು ನವಿಲೆ ರೈತ ಹೋರಾಟದಿಂದ ತಮ್ಮ ಜಮೀನುಗಳ ರಕ್ಷಣೆ, ಬೆಳೆಗಳ ರಕ್ಷಣೆ, ಅಂತರ್ಜಲ ಕುಸಿತ ತಡೆಯುವಿಕಾಗಿ ಹೋರಾಟ ನಡೆಸಿ ಸರ್ಕಾರದ ಗಮನ ಸೆಳೆಯಿತು.ದಲಿತ ಸಂಘರ್ಷ ಸಮಿತಿಯು ಹೋರಾಟದ ಮೂಲಕ ೧೯೯೭ರಲ್ಲಿ ಭದ್ರಾವತಿಯ ಸಿದ್ಲಿಪುರದಲ್ಲಿ ಭೂಪಾಳಂ ಎನ್ನುವ ಜಮೀನ್ದಾರನ ೩೩ ಎಕರೆ ನೀರಾವರಿ ಜಮೀನನ್ನು ವಶಪಡಿಸಿಕೊಡು, ದಲಿತರಿಗೆ ಭೂಮಿಯನ್ನು ಹಂಚುವುದರ ಮೂಲಕ ಭೂಮಾಲೀಕರನ್ನಾಗಿಸಿತು.

೧೯೯೮ ರಲ್ಲಿ ಬಾಗೂರು ನವಿಲೆ ರೈತಹೋರಾಟವು ಬಹುಮುಖ್ಯವಾದ ಹೋರಾಟವಾಗಿದೆ. ಸುರಂಗ ಮಾರ್ಗದ ಮೂಲಕ ಹೇಮಾವತಿ ನದಿ ನೀರಿನ ನಾಲೆಯನ್ನು ಅಗೆದುದರಿಂದಾಗಿ ಸಾವಿರಾರು ಎಕರೆ ಫಲವತ್ತಾದ ಭೂಪ್ರದೇಶವು ಬಂಜರು ಭೂಮಿಯಾಗಿ ರೈತರು ತಮ್ಮ ನೆಲದಲ್ಲಿಯೇ ನಿರ್ವಸತಿಕರಾದರು. ಈಸಮಸ್ಯೆ ಕುರಿತು ಸರ್ಕಾರದ ವಿರುದ್ಧ ಕರ್ನಾಟಕ ಪ್ರಾಂತ ರೈತ ಸಂಘದ ನೇತೃತ್ವದಲ್ಲಿ ರೈತರು ಹೋರಾಟ ನಡೆಸಿದರು. ಅಂತಿಮವಾಗಿ ಸರ್ಕಾರವು ಗೋಲಿಬಾರ್ ಮೂಲಕ ಹೋರಾಟವನ್ನು ಹತ್ತಿಕ್ಕಿತು.

೧೯೮೦ರಿಂದ ಇದುವರೆಗೂ ಮೈಸೂರು, ಚಾಮರಾಜನಗರ ಜಿಲ್ಲೆಯ ಬುಡಕಟ್ಟು ಜನಾಂಗಗಳಾದ ಜೇನುಕುರುಬರು, ಇರುಳಿಗರು, ಎರವರು, ಬೆಟ್ಟಕುರುಬರು ವಾಸಿಸುತ್ತಿದ್ದಾರೆ. ಇವರಿಗೆ ಸ್ವಯಂಸೇವಾ ಸಂಸ್ಥೆಗಳು ತಮ್ಮ ಹೋರಾಟದ ಮೂಲಕ ಭೂ ಹಂಚಿಕೆ ಮಾಡಿವೆ. ಮೈಸೂರು, ಚಾಮರಾಜನಗರ ಜಿಲ್ಲೆಯಲ್ಲಿ ಬುಡಕಟ್ಟು ಸಮುದಾಯ ಅರಣ್ಯದಲ್ಲಿ ವಾಸಿಸುತ್ತಿದ್ದಾರೆ. ಅರಣ್ಯ ಕಾಯ್ದೆಯ ಮೂಲಕ ಅರಣ್ಯ ಇಲಾಖೆಯವರು ಬುಡಕಟ್ಟು ಜನಾಂಗವನ್ನು ತೆರವುಗೊಳಿಸಿದ್ದಾರೆ. ಇದರ ಪರಿಣಾಮ ಕಾಡಿನ ಉತ್ಪನ್ನಗಳಿಂದ ಬದುಕುತ್ತಿದ್ದ ಇವರಿಗೆ ನೆಲೆಯಿಲ್ಲದಂತಾಯಿತು. ಇಲ್ಲಿ ವಾಸಿಸುತ್ತಿದ್ದ ಸುಮಾರು ೫೦ಸಾವಿರ ಮಂದಿ ಬುಡಕಟ್ಟು ಜನರು ನಿರಾಶ್ರಿತರಾದರು. ತಮ್ಮ ಮೂಲ ಕಸುಬನ್ನು ಬಿಟ್ಟು ಜೀತಗಾರರಾಗಿ, ಕೂಲಿಕಾರ್ಮಿಕರಾಗಿ ಗ್ರಾಮ ಮತ್ತು ಪಟ್ಟಣ ಸೇರುವಂತಾಯಿತು. ಇದನ್ನು ಗಮನಿಸಿದ ಇಲ್ಲಿನ ಸ್ವಯಂ ಸೇವಾ ಸಂಸ್ಥೆಗಳು ಅವರ ಸಮಸ್ಯೆಯನ್ನು ಪರಿಹರಿಸಲು ಮುಂದಾದವು. ಈ ಭಾಗದ ಫೆಡಿನಾ ವಿಕಾಸ, ನಿಸರ್ಗ, ಡೆವಲಪ್ ಥ್ರೂ ಎಜುಕೇಷನ್ ಸಂಸ್ಥೆಗಳ ಮೂಲಕ ಸರ್ಕಾರಿ ಜಮೀನನ್ನು ಇವರಿಗೆ ಹಂಚಿವೆ. ಇಲ್ಲಿ ಸುಮಾರು ೨೫೦೦ ಎಕರೆ ಭೂಪ್ರದೇಶವನ್ನು ಸರ್ಕಾರದಿಂದ ವಶಪಡಿಸಿಕೊಂಡು ಬುಡಕಟ್ಟು ಜನಾಂಗಕ್ಕೆ ಭೂಮಿಯನ್ನು ಹಂಚಲಾಗಿದೆ. ಈ ಸಂಸ್ಥೆಗಳು ಸರ್ಕಾರಿ ಖಾಲಿ ಜಮೀನನ್ನು ಗುರುತಿಸಿ ಬುಡಕಟ್ಟು ಜನಾಂಗಗಳಿಗೆ ಭೂಮಿಯನ್ನು ಹಂಚುವ ಕಾರ್ಯಕ್ರಮವನ್ನು ರೂಪಿಸಿಕೊಂಡು ಇವರಿಗೆ ಸಹಕಾರ ನೀಡುತ್ತಿದ್ದಾರೆ.

### ೩.೨.೩ ರೈತರ ಆತ್ಮಹತ್ಯೆಗಳು

ಬೆಳೆಗೆ ನಿಗಧಿತ ಬೆಲೆಸಿಗದಿರುವುದು, ಬೆಲೆಗಳ ಏರಿಳಿತ, ಬೆಳೆಸಾಲ, ರಾಷ್ಟ್ರೀಕೃತಬ್ಯಾಂಕ್ ಸಾಲ, ಮಾರುಕಟ್ಟೆಯ ವಂಚನೆ, ಲೇವಾದೇವಿಸಾಲಗಳು ರೈತರ ಆತ್ಮಹತ್ಯೆಗೆ ಕಾರಣಗಳು ಮೇಲ್ನೋಟಕ್ಕೆ ಕಂಡುಬರುತ್ತವೆ. ಆದರೆ ರೈತರ ಆತ್ಮಹತ್ಯೆಗೆ ಭೂಮಿ ಪ್ರಮುಖ ಕಾರಣವಾಗಿದೆ. ಏಕೆಂದರೆ ಭೂಮಿ ಸ್ಥಿರಾಸ್ತಿಯಾಗಿದ್ದು, ಅದು ಮೌಲ್ಯವುಳ್ಳದ್ದು. ಇದರಿಂದ ರೈತರು ತಮ್ಮ ಭೂಮಿಯನ್ನು ಒತ್ತೆ ಇಟ್ಟು ಸಾಲ ಪಡೆಯಲು ಸಾಧ್ಯವಾಗಿದೆ. ಸ್ಥಿರಾಸ್ತಿಯನ್ನು ಆಧಾರವಾಗಿಟ್ಟುಕೊಂಡು ಸಾಲ ನೀಡಲು ಲೇವಾದೇವಿದಾರರು,ಬ್ಯಾಂಕ್‌ಗಳು ಮುಂದಾಗುತ್ತವೆ.

ಯಾವುದೇ ರಾಷ್ಟ್ರೀಕೃತ ಬ್ಯಾಂಕು, ಲೇವಾದೇವಿಗಾರ, ಸೊಸೈಟಿಗಳು ಸಾಲನೀಡುವಾಗ ಭೂಮಿಯನ್ನು ಅಡಮಾನವಾಗಿಟ್ಟುಕೊಂಡು ಸಾಲನೀಡುತ್ತವೆ. ಪ್ರಾಕೃತಿಕ ವಿಕೋಪದಿಂದಾಗಿ ಸರಿಯಾದ ಬೆಳೆಯಾಗದೆ, ಸರಿಯಾದ ಬೆಲೆದೊರೆಯದೆ, ರೈತ ತನ್ನ ಭೂಮಿಯನ್ನು ಕಳೆದುಕೊಳ್ಳುವ ಭಯದಿಂದಾಗಿ ಆತ್ಮಹತ್ಯೆಗೆ ಮುಂದಾಗುವುದನ್ನುಗಮನಿಸಬಹುದು. "ರೈತರ ಆತ್ಮಹತ್ಯೆ ಕೂಡ ಒಂದು ಪ್ರತಿಭಟನೆಯ ರೂಪವೇ. ಈ ಹಿನ್ನೆಲೆಯಲ್ಲಿ ರೈತರ ಆತ್ಮಹತ್ಯೆಗೆ ಸಾಲ ಅಥವಾ ಬೆಳೆ ನಾಶವೆ ಕಾರಣವೆಂದು ವಾದಿಸುವುದಿಲ್ಲ. ಬದಲಾಗಿ ರೈತರ ಅಸ್ತಿತ್ವದ ಕುರುಹಾದ ಭೂಮಿಯನ್ನು ಕಳೆದುಕೊಳ್ಳುವ ಭಯ ಅವರನ್ನು ಆತ್ಮಹತ್ಯೆಗೆ ಪ್ರೇರೇಪಿಸಿದೆ. ಇಲ್ಲಿ ಗ್ರಾಮೀಣ ಪ್ರದೇಶದ ರೈತನ ಏಕೈಕ ಅಸ್ತಿತ್ವದ ಕುರುಹು ನಷ್ಟವಾಗುವ ಹೆದರಿಕೆ ಇರುತ್ತದೆ. ರೈತ ತನ್ನ ಸಾವಿನ ಮೂಲಕ ಆ ಕುರುಹನ್ನು ಉಳಿಸಿಕೊಳ್ಳಲು ನೋಡುತ್ತಾನೆ." [೧೭]

"೧೯೯೭ರ ನಂತರ ಭಾರತದಲ್ಲಿ ೨೦,೦೦೦ಕ್ಕೂ ಹೆಚ್ಚು ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಜಾಗತಿಕ ಸಂಸ್ಥೆಗಳು ಹೇಳುವ ಮುಕ್ತ ವ್ಯಾಪಾರ ವಾಸ್ತವದಲ್ಲಿ ಹೇರಲ್ಪಟ್ಟ ವ್ಯಾಪಾರ. ಇದನ್ನು ತೃತೀಯ ಜಗತ್ತಿನ ಸಣ್ಣ ರೈತರ ಮೇಲೆ ಮೇಲೆ ಹೇರಲಾಗುತ್ತಿದೆ. ಮಟ್ಟಸ ಆಟದ ಮೈದಾನ ಹಾಗೂ ಕ್ಷಮತೆ ಕುರಿತಂತೆ ಜೇನಿನಂತಹ ಮಾತನ್ನಾಡುತ್ತಲೇ ಹೆಚ್ಚು ಸಬ್ಸಿಡಿ ನೀಡಿ ಉತ್ಪಾದಿಸಿದ ಧಾನ್ಯವನ್ನು ವಿಶ್ವಮಾರುಕಟ್ಟೆಯಲ್ಲಿ ತುಂಬಿ ಸಣ್ಣ ಉತ್ಪಾದಕರನ್ನು ನಾಶಪಡಿಸಲಾಗುತ್ತಿದೆ."[೧೭೩] ಹೀಗಾಗಿ ಜಾಗತೀಕರಣ ರೈತರ ಆತ್ಮಹತ್ಯೆಗೆ ಹೇಗೆ ಎಂಬುದು ಇದರಿಂದ ಮನದಟ್ಟಾಗುತ್ತದೆ. ಜಾಗತಿಕ ಒಪ್ಪಂದದ ಪರಿಣಾಮವಾಗಿ ಹೊರರಾಷ್ಟ್ರಗಳಿಂದ ಆಮದಾಗುವ ಕೃಷಿ ಉತ್ಪನ್ನಗಳಿಗೆ ತೆರಿಗೆ ವಿನಾಯಿತಿ ದೊರೆಯುತ್ತದೆ. ಇದರಿಂದಾಗಿ ವಿದೇಶಿ ಬಂಡವಾಳಿಗರು ತೆರಿಗೆ ವಿನಾಯಿತಿಯ ಲಾಭಪಡೆದು, ದೊಡ್ಡಪ್ರಮಾಣದಲ್ಲಿ ಕೃಷಿ ಉತ್ಪನ್ನಗಳನ್ನು ಭಾರತಕ್ಕೆ ರಫ್ತು ಮಾಡುತ್ತಿದ್ದಾರೆ. ಹಾಗಾಗಿ ಅಗ್ಗದ ಬೆಲೆಗೆ ರೈತರ ಉತ್ಪನ್ನಗಳು ಮಾರುಕಟ್ಟೆಯಲ್ಲಿ ದೊರೆಯುತ್ತಿವೆ. ಈ ಕಾರಣದಿಂದಾಗಿ ಸ್ಥಳೀಯ ರೈತನ ಮೇಲೆ ನೇರ ಪರಿಣಾಮ ಉಂಟಾಗುತ್ತಿದೆ. ಇಂದು ಭಾರತದಲ್ಲಿ ರೈತ ಯಾವ ಬೆಳೆ ಬೆಳೆದರೂ ನಿಗದಿಯಾದ ಬೆಲೆ ದೊರೆಯುತ್ತಿಲ್ಲ. ಉದಾಹರಣೆಗೆ ಕಬ್ಬು,ತೊಗರಿ,ಟೊಮೋಟೊ ಮೊದಲಾದ ಬೆಳೆಗಾರರು ಇಂದು ಕಂಗಾಲಾಗಿದ್ದಾರೆ. ತಮ್ಮ ಬೆಳೆಯನ್ನು ಬೀದಿಗೆ ಎಸೆದು ಪ್ರತಿಭಟಿಸುವ ಪರಿಸ್ಥಿತಿ ಎದುರಾಗಿದೆ. ಅಲ್ಲದೆ ವಿದೇಶಿ ಕಂಪೆನಿಗಳು, ವಿದೇಶಿಯರು ರೈತರ ಭೂಮಿಯನ್ನು ಲಪಟಾಯಿಸುತ್ತಿರುವುದು ಸ್ಥಳೀಯ ರೈತನಲ್ಲಿ ಮತ್ತಷ್ಟು ಆತಂಕ ಮೂಡಿಸಿದೆ.

ಇದರೊಂದಿಗೆ ರೈತರ ಆತ್ಮಹತ್ಯೆಗೆ ಪರೋಕ್ಷವಾಗಿ ಸರ್ಕಾರವೇ ಪ್ರೊತ್ಸಾಹಿಸುತ್ತಿರುವ ದುರಂತವನ್ನು ಕಾಣಬಹುದಾಗಿದೆ. ಸರ್ಕಾರ ಘೋಷಿಸುತ್ತಿರುವ ಸಾಲಮನ್ನಾ, ಬಡ್ಡಿಮನ್ನಾ, ಬೆಂಬಲ ಬೆಲೆ ಯೋಜನೆಗಳು ರೈತರನ್ನು ಸ್ವಾಭಿಮಾನಿಯನ್ನಾಗಿ ಮಾಡದೆ, ಸೋಮಾರಿಗಳನ್ನಾಗಿ, ಸಾಲಗಾರರನ್ನಾಗಿ ಮಾಡುತ್ತಿರುವ ರಾಜಕೀಯ ಹುನ್ನಾರಗಳನ್ನು ಕಾಣಬಹುದಾಗಿದೆ. ಸರ್ಕಾರದ ಭರವಸೆಗಳನ್ನು ನಂಬಿ ರೈತರು ಬೇಸಾಯದಲ್ಲಿ ಬಂಡವಾಳವನ್ನು ತೊಡಗಿಸಿ ಬೆಲೆಗಾಗಿ ಕಾಯುತ್ತಿದ್ದಾರೆ. ಆದರೆ ರೈತರ ಬೆಳೆಗಳಿಗೆ ನಿಗಧಿಯಾದ ಬೆಲೆದೊರೆಯದೇ ಬೆಳೆಯನ್ನು ಬೀದಿಗೆ ಎಸೆಯುವ ಪರಿಸ್ಥಿತಿ ನಿರ್ಮಾಣವಾಗಿದೆ. ಈ ಕಾರಣಗಳಿಂದಾಗಿಯೂ ರೈತ ಹತಾಶನಾಗಿ, ಸಾಲತೀರಿಸಲಾಗದೆ ಆತ್ಮಹತ್ಯೆಯ ದಾರಿಹಿಡಿದಿದ್ದಾನೆ.

ಜಾಗತಿಕ ಶಕ್ತಿಗಳ ಹಿಡಿತದಿಂದಾಗಿ ರೈತರ ಆತ್ಮಹತ್ಯೆಗಳು ಹೆಚ್ಚಾಗುತ್ತಿರುವುದನ್ನು ಗುರುತಿಸಬಹುದು. ಜಾಗತಿಕ ಒಪ್ಪಂದದ ಪರಿಣಾಮವಾಗಿ ಬೀಜಸ್ವಾಮ್ಯ ಹಕ್ಕುಗಳಿಂದ ಭಾರತದ ನೆಲದಲ್ಲಿ ವಿದೇಶಿ ಕಂಪನಿಯ ಬೀಜ ಮಾರಾಟದಿಂದ ರೈತ ಬಿತ್ತಿ ಬೆಳೆದು ನಷ್ಟ ಅನುಭವಿಸಿ ಆತ್ಮಹತ್ಯೆಯ ದಾರಿ ಹಿಡಿದ್ದಾನೆ. ಈಗಾಗಲೇ ಬಿ.ಟಿ. ಹತ್ತಿ ತಳಿಯಯಿಂದ ಮೋಸಕ್ಕೊಳಗಾಗಿ ರೈತರು ಆತ್ಮಹತ್ಯೆ ಮಾಡಿಕೊಂಡಿರುವುದನ್ನು ಗಮನಿಸಬಹುದು. ನಿಶ್ಯಕ್ತನನ್ನಾಗಿ ಮಾಡುವ ತಂತ್ರಗಳಿಂದ, ತಮ್ಮ ಕಂಪೆನಿಗಳಲ್ಲೇ ಬೀಜವನ್ನು ಕೊಳ್ಳುವ ಮತ್ತು ಅದರ ಸ್ವಾಮ್ಯತೆಯನ್ನು ತಮ್ಮಲ್ಲಿಯೇ ಇಟ್ಟುಕೊಳ್ಳುತ್ತಿವೆ. ಇದರ ಅಡ್ಡ ಪರಿಣಾಮಗಳಿಂದ ಇಲ್ಲಿನ ಭೂಮಿಯಲ್ಲಿ ಸತ್ವ ಇಲ್ಲದಂತಾಗಿದೆ. ಅಲ್ಲದೆ ನುಸಿಪೀಡೆ, ಕಬ್ಬಿನ ಬಿಳಿರೋಗ ಮೊದಲಾದ ಮಾರಕ ರೋಗಗಳು ರೈತನನ್ನು ತತ್ತರಿಸುವಂತೆ ಮಾಡಿ ಆತ್ಮಹತ್ಯೆಗೆ ದೂಡುತ್ತಿವೆ.

ಕೇಂದ್ರ ಸರ್ಕಾರದ ಅಂಗಸಂಸ್ಥೆಯಾದ "ರಾಷ್ಟ್ರೀಯ ಅಪರಾಧ ದಾಖಲೆಗಳ ಸಮಿತಿ" ಬಿಡುಗಡೆ ಮಾಡಿರುವ ಪಟ್ಟಿಯ ಪ್ರಕಾರ ೧೯೯೩ ರಿಂದ ಇದುವರೆಗೂ ದೇಶದಲ್ಲಿ ಒಂದು ಲಕ್ಷದ ಇಪ್ಪತ್ತು ಸಾವಿರ ರೈತರು ಆತ್ಮಹತ್ಯೆ ಮಾಡಿಕೊಂಡು ಸತ್ತಿದ್ದಾರೆ"[೧೭೮]ಎಂದು ತಿಳಿಸಿದೆ. ಇದರಲ್ಲಿ ಕರ್ನಾಟದ ಪಾಲು ೮ ಸಾವಿರಕ್ಕೂ ಹೆಚ್ಚು. ರೈತರ ಆತ್ಮಹತ್ಯೆ ಕುರಿತಾಗಿ ಸರ್ಕಾರದ ಬಳಿ ಸರಿಯಾದ ಮಾಹಿತಿ, ಅಂಕಿ ಅಂಶಗಳಿಲ್ಲ. ಏಕೆಂದರೆ ಪಟ್ಟಾದಾರರ ರೈತರನ್ನಷ್ಟೇ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ರೈತರ ಆತ್ಮಹತ್ಯೆ ಎಂದು ಪರಿಗಣಿಸಿ ಪಟ್ಟಿಗೆ ಸೇರಿಸುತ್ತಿದೆ.ಇನ್ನುಳಿದ ಗೇಣಿರೈತರು,ಗುತ್ತಿಗೆ ಮಾಡುವ ರೈತರು,ರೈತ ಮಹಿಳೆ,ರೈತರ ಮಕ್ಕಳು ಸಾಲದ ಅವಮಾನಕ್ಕೆ ತುತ್ತಾಗಿ ಸತ್ತರೆ ಅವುಗಳನ್ನು ಕೌಟುಂಬಿಕ ಜಗಳದ ಸಾವುಗಳೆಂದೇ ಪರಿಗಣಿಸಲಾಗುತ್ತಿದೆ. ಹಾಗಾದರೆ ಜಮೀನಿನ ಅಧಿಕಾರ ಹೊಂದಿರದ ವ್ಯಕ್ತಿಗಳ ಸಾವುಗಳು ಎಷ್ಟು? ಎಂಬುದಕ್ಕೆ ಸರ್ಕಾರದ ಬಳಿ ಉತ್ತರವಿಲ್ಲ.

ಕರ್ನಾಟಕದಲ್ಲಿ ಮಂಡ್ಯ, ಬೀದರ್, ಬೆಳಗಾವಿ, ಬೀಜಾಪುರ ಜಿಲ್ಲೆಗಳ ಕಬ್ಬುಬೆಳೆಗಾರರು, ಗುಲ್ಬರ್ಗಾ, ದಾವಣಗೆರೆ, ರಾಯಚೂರು, ಕೊಪ್ಪಳ ಭಾಗಗಳ ಹತ್ತಿ, ತೊಗರಿ, ಶೇಂಗಾಬೆಳೆಗಾರರು, ಮೈಸೂರು, ಚಾಮರಾಜನಗರ, ಕೊಡಗಿನ ರೈತರು ಹೊಗೆಸೊಪ್ಪು, ಹತ್ತಿ, ಹಿಪ್ಪನೇರಳೆ (ರೇಷ್ಮೆ) ಬೆಳೆಗಾರರು, ಹಾಸನದ ಆಲೂಗೆಡ್ಡೆ, ಕಬ್ಬು ಬೆಳೆಗಾರರು ಹೆಚ್ಚಿನದಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಕಬ್ಬು ಬೆಳೆದ ರೈತರು ಮಂಡ್ಯ, ಬೀದರ್, ಬೆಳಗಾವಿ, ಬೀಜಾಪುರ ಜಿಲ್ಲೆಗಳಲ್ಲಿ ಎರಡೂವರೆ ವರ್ಷವಾದರೂ ಕಬ್ಬು ಅರೆಯಲು ಅವಕಾಶ ಸಿಗದೆ ಕಂಗಾಲಾಗಿದ್ದಾರೆ. ರಾಜ್ಯದ ತೊಗರಿ ಹತ್ತಿ ಬೆಳೆಗಾರರ ಸಹ ಇದಕ್ಕಿಂತ ಭಿನ್ನವಾಗಿಲ್ಲ. ಕಳೆದ ವರ್ಷ ಕಳಪೆ ಹತ್ತಿ ಬೀಜ, ನಿಷ್ಪ್ರಯೋಜಕ ಕೀಟನಾಶಕಗಳ ಹೊಡೆತ ತಿಂದು ರೈತರು ತೊಗರಿ ಬೆಳೆ ಬೆಳೆದು ಆತ್ಮಹತ್ಯೆ ಮಾಡಿಕೊಂಡಿದ್ದಾರೆ.

ರಾಜ್ಯ ಸರ್ಕಾರಗಳು ದಿವಾಳಿಯಾಗಿವೆ, ಬ್ಯಾಂಕ್‌ಗಳು ರೈತರಿಗೆ ಸಾಲ ನೀಡುತ್ತಿಲ್ಲ. ಸಹಕಾರ ಸಂಘಗಳು ಹರಿದು ಹಂಚಿಹೋಗಿವೆ.ಮಾರುಕಟ್ಟೆ ವ್ಯವಸ್ಥೆಯೂ ಉತ್ತಮವಾಗಿಲ್ಲ.ಆಡಳಿತ ನಡೆಸುವ ಸರ್ಕಾರಗಳಿಗೆ ರಾಜಕೀಯ ಒತ್ತಡಗಳು ಹೆಚ್ಚಾಗಿ ಮೇಲ್ನೋಟಕ್ಕೆ ಕಣ್ಣೀರೊರೆಸುವ ಕೆಲಸಕ್ಕೆ ಕೈಹಾಕುತ್ತಿವೆ. ಸರ್ಕಾರವು ರೈತ ಬೆಳೆದ ಬೆಳೆಯನ್ನು ಬೆಂಬಲ ಬೆಲೆ ಘೋಷಿಸಿ, ಸರಿಯಾದ ಕಾಲಕ್ಕೆ ಕೊಳ್ಳದೆ ವಂಚಿಸುತ್ತಿದೆ. ಇದರಿಂದಾಗಿ ಹಲವಾರು ಮಂದಿ ರೈತರು ಆತ್ಮಹತ್ಯೆಮಾಡಿಕೊಳ್ಳುತ್ತಿರುವುದು ದಿನಪತ್ರಿಕೆಗಳಲ್ಲಿ ನಿತ್ಯವು ವರದಿಯಾಗುತ್ತಿವೆ. ಸರ್ಕಾರದ ಯೋಜನೆಗಳು ಸರಿಯಾದ ಸಮಯಕ್ಕೆ ಯೋಗ್ಯವ್ಯಕ್ತಿಗೆ ದೊರೆಯದೇ ಇರುವ ಕಾರಣಕ್ಕೂ ಆತ್ಮಹತ್ಯೆಗಳು ಸಂಭವಿಸುತ್ತಿವೆ. ಸರ್ಕಾರವು ಯೋಜನೆಗಳನ್ನು ಕೇವಲ ಭಿಕ್ಷೆಯಂತೆ ಸಬ್ಸಿಡಿ, ಪರಿಹಾರ ಧನವನ್ನು ನೀಡಿ ರೈತರನ್ನು ಹತಾಶಮನೋಭಾವನೆಗೆ ತಳ್ಳುತ್ತಿರುವುದು ಕಂಡುಬರುತ್ತಿದೆ. ಏಕೆಂದರೆ ನೀರಾವರಿ ಯೋಜನೆಯ ಮೂಲಕ, ಕೃಷಿ ಸಲಕರಣೆ ಒದಗಿಸುವ ಮೂಲಕ, ಉತ್ತಮ ಬೀಜ, ತಳಿಗಳನ್ನು ಒದಗಿಸುವ ಮೂಲಕ ರೈತನನ್ನು ಸ್ವಾಭಿಮಾನಿ

ರೈತನನ್ನಾಗಿ ಮಾಡುತ್ತಿಲ್ಲ.

### ೩.೨.೪ ಕಾರ್ಪೊರೇಟ್ ಭೂ ಆಕ್ರಮಣ

ಪ್ರಸ್ತುತ ಜಾಗತಿಕ ಸಂದರ್ಭದಲ್ಲಿ ಹೊಸ ಬಗೆಯ ಭೂ ಸಮಸ್ಯೆಗಳು ಉದ್ಭವವಾಗಿವೆ. ಭಾರತದ ಸಂದರ್ಭದಲ್ಲಿ ಉದಾರೀಕರಣ, ಖಾಸಗೀಕರಣ, ಜಾಗತೀಕರಣದ ಪರಿಣಾಮವು ದಟ್ಟವಾಗಿ ಹರಡಿದೆ. ಇದರ ಪರಿಣಾಮವು ಕರ್ನಾಟಕದ ಮೈಲೂ ಬಿದ್ದಿದೆ. ಕರ್ನಾಟಕ ಸರ್ಕಾರವು ೧೯೯೮ರಲ್ಲಿ ಸಾರ್ವಜನಿಕ ಹಿತಾಸಕ್ತಿ ಕಾಯ್ದೆಯನ್ನು ರೂಪಿಸಿತು. ಇದರಲ್ಲಿ ಸಾರ್ವಜನಿಕ ಉದ್ದೇಶವನ್ನಿಟ್ಟುಕೊಂಡು ಎಷ್ಟು ಪ್ರಮಾಣದ ಭೂಮಿಯನ್ನಾದರೂ ಕೊಳ್ಳಬಹುದೆಂದು ನಿರ್ದೇಶನ ನೀಡಿದೆ. ಇದು ವಿದೇಶಿ ಕಂಪೆನಿಗಳಿಗೆ, ಬಂಡವಾಳಶಾಹಿಗಳಿಗೆ ಭೂಮಿಯನ್ನು ಕೊಳ್ಳಲು ಸಹಕಾರಿಯಾಯಿತು. ಖಾಸಗಿ ಸಂಸ್ಥೆಗಳು ಹಾಗೂ ಬಂಡವಾಳಿಗರು ಮತ್ತು ಕಾರ್ಪೊರೇಟ್ ಸಂಸ್ಥೆಗಳು ಉದ್ಯೋಗ ಒದಗಿಸುವ ಸಾರ್ವಜನಿಕ ಉದ್ದೇಶದ ನೆಪವೊಡ್ಡಿ ಸಾವಿರಾರು ಎಕರೆ ಭೂಮಿಯನ್ನು ಕಬಳಿಸಲು ಅನುಕೂಲಕಾರಿ ಶಾಸನವಾಯಿತು. ಈ ನೀತಿಯಿಂದಾಗಿ ವಿದೇಶಿ ಕಂಪೆನಿಗಳು ಮತ್ತು ಬಂಡವಾಳಿಗರು, ಕರ್ನಾಟಕದಲ್ಲಿ ಭೂಮಿಯನ್ನು ಕೊಳ್ಳಲು ಮುಕ್ತ ಅವಕಾಶ ದೊರೆತಂತಾಯಿತು. ಇದು ಕರ್ನಾಟಕದಲ್ಲಿ ನಿರುದ್ಯೋಗಿಗಳಿಗೆ ಉದ್ಯೋಗ ಒದಗಿಸುವ ನೆಪದಲ್ಲಿ ಇಂದು ಸಾವಿರಾರು ಎಕರೆ ಫಲವತ್ತಾದ ಭೂಪ್ರದೇಶವನ್ನು ಕಬಳಿಸುವುದಕ್ಕೆ ದಾರಿ ಮಾಡಿಕೊಟ್ಟಂತಾಗಿದೆ. ಬೆಂಗಳೂರುನಗರದಲ್ಲಿ ಭೂಮಿಯನ್ನು ಆಕ್ರಮಿಸಿಕೊಂಡು ಈಗಾಗಲೇ ಬೃಹತ್ ಕಟ್ಟಗಳು ಎದ್ದಿವೆ. ಕಾರ್ಪೊರೇಟ್ ಸಂಸ್ಥೆಗಳಾದ ಫೆಡಿಲಿಟಿ, ಡೆಲ್, ಐಬಿಎಂ, ಸಿಂಫೋನಿ, ಎಚ್‌ಪಿ, ಅಕ್ಸೆಂಚರ್, ಎಂಫಸಿಸ್, ಒರಾಕಲ್ ಮುಂತಾದ ಸಾವಿರಾರು ಕಂಪೆನಿಗಳು ಕರ್ನಾಟಕದಲ್ಲಿ ನೆಲೆಯೂರಿವೆ. ಭಾರತದ ಮೂಲ ಇನ್ಫೋಸಿಸ್, ವಿಪ್ರೋನಂಥ ಕಂಪೆಗಳಿಗೆ ಸರ್ಕಾರವೇ ಮುಂದೆ ರೈತರ ಫಲವತ್ತಾದ ನೂರಾರು,ಸಾವಿರಾರು ಎಕರೆ ಭೂಪ್ರದೇಶವನ್ನು ನೀಡುತ್ತಿದೆ. ಕೈಗಾರಿಕಾಭಿವೃದ್ಧಿಗೋಸ್ಕರ ಸರ್ಕಾರವೇ ರೈತರ ಫಲವತ್ತಾದ ಭೂಮಿಯನ್ನು ವಶಪಡಿಸಿಕೊಳ್ಳುತ್ತಿದೆ.

ರೈತರ ಫಲವತ್ತಾದ ಭೂಮಿಯನ್ನು ಬೃಹತ್ ಮೊತ್ತದ ಆಮಿಷ ಒಡ್ಡಿ ವಶಪಡಿಸಿಕೊಳ್ಳುವ ಸ್ಥಿತಿ ನಿರ್ಮಾಣವಾಗಿದೆ. ಇಲ್ಲಿನ ರೈತರು ತಮ್ಮ ಭೂಮಿಯನ್ನು ಕಳೆದುಕೊಂಡು ಬೀದಿಪಾಲಾಗಿ, ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುವ ಸ್ಥಿತಿ ಎದುರಾಗಿದೆ. ಮಹಾನಗರಗಳ ಸುತ್ತಮುತ್ತ ಇರುವ ರೈತರ ಫಲವತ್ತಾದ ವ್ಯವಸಾಯ ಭೂಮಿಯನ್ನು ಸಾರ್ವಜನಿಕ ಹಿತಾಸಕ್ತಿ ಕಾನೂನಿನ ಮೂಲಕ ಸರ್ಕಾರವೇ ವಶಪಡಿಸಿಕೊಳ್ಳುತ್ತಿದೆ. ಇದು ಬಡ ರೈತರಿಗೆ ಮತ್ತು ಸಣ್ಣ ಹಿಡುವಳಿದಾರರಿಗೆ ನುಂಗಲಾರದ ತುತ್ತಾಗಿದೆ. ಇಲ್ಲಿ ರೈತರು ಎರಡು ರೀತಿಯ ಸಾಂಸ್ಕೃತಿಕ ಬಿಕ್ಕಟ್ಟನ್ನು ಎದುರಿಸುತ್ತಿದ್ದಾರೆ. ಒಂದೆಡೆ ಮೋಜಿನಬದುಕು, ನಗರದ ಆಕರ್ಷಕ ಜೀವನಶೈಲಿಗೆ ಮರುಳಾಗುತ್ತಿರುವುದು ಕಂಡುಬರುತ್ತಿದೆ. ಇನ್ನೊಂದೆಡೆ ತನ್ನ ರೈತಾಪಿ ಬದುಕಿನ ಸುಗ್ಗಿ ದಿನಗಳು ಇಂದು ಮರೆಯಾಗುತ್ತಿವೆ. ಇಂಥ ಹೊಸ ಜೀವನ ವಿಧಾನಕ್ಕೆ, ಹೊಂದಿಕೊಂಡು ಬದುಕುವ ಅನಿವಾರ್ಯತೆಯನ್ನು ರೈತರಲ್ಲಿ ಕಾಣುತ್ತಿದ್ದೇವೆ. ಈ ಮೋಜಿನ ಬದುಕು, ಜೀವನ ಶೈಲಿ ರೂಪಿಸಿಕೊಂಡು ರೈತ ತನ್ನ ಸಾಂಸ್ಕೃತಿಕ ದಾರಿದ್ರ್ಯವನ್ನು ಅನುಭವಿಸುತ್ತಿದ್ದಾನೆ. ರೈತರು ಖಾಸಗಿ ಕಂಪೆನಿಯವರಿಗೆ ತಮ್ಮ ಭೂಮಿಯನ್ನು ಮಾರುತ್ತಿದ್ದಾರೆ. ಖಾಸಗಿ ಸಂಸ್ಥೆಗಳಿಗೆ, ವಿದೇಶಿ ಕಂಪೆನಿಗಳಿಗೆ ಮೂಲಸೌಕರ್ಯ ಒದಗಿಸುವುದು, ಸರ್ಕಾರದ ಹೊಣೆಯಾಗಿದೆ.ಇದು ರೈತನ ಭೂಮಿಯನ್ನು ವಿಲೇವಾರಿ ಮಾಡಲು ಮತ್ತಷ್ಟು ಸಹಕಾರಿಯಾಗಿದೆ.

### ೨.೩.೫ ವಿಶೇಷ ಆರ್ಥಿಕ ವಲಯ -ಭೂ ಆಕ್ರಮಣ (S.E.Z)

ಜಾಗತೀಕರಣದ ಸಂದರ್ಭದಲ್ಲಿ ಆಮದು ರಫ್ತು ವಲಯಕ್ಕೆ ಹೊಸ ನೀತಿಯನ್ನು ರಚಿಸಲು ಭಾರತ ಸರ್ಕಾರ ಶಾಸನೀಯ ಮಹತ್ವ ನೀಡಲು ಯತ್ನಿಸಿತು. ಇದರ ಕೂಸಾಗಿ ಹುಟ್ಟಿದ್ದು ೨೦೦೫ರಲ್ಲಿ ವಿಶೇಷ ಆರ್ಥಿಕ ವಲಯದ ಕಾಯ್ದೆ(Special Economic Zones)ಯನ್ನು ಸಂಸತ್ತಿನಲ್ಲಿ ಪಾಸು ಮಾಡಲಾಯಿತು. ಇದನ್ನು ಎಲ್ಲಾ ರಾಜ್ಯಗಳು ಇದರ ನೀತಿಗಳನ್ನು ಹೇಗಿಯೋ ಹಾಗೆಯೇ ಅನುಸರಿಸುವಂತೆ ಭಾರತ ಸರ್ಕಾರ ನಿರ್ದೇಶನ ನೀಡಿತು. ವಿಶೇಷ ಆರ್ಥಿಕ ವಲಯ ನಿಯಮಗಳು ೨೦೦೬ ಇದು ೧೦.೨.೨೦೦೬ರಿಂದ ಜಾರಿಗೆ ಬಂದಿತು. ಈಗಾಗಲೇ ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು, ಕೇರಳ, ಚಂಢಿಗರ್, ಹರ್ಯಾಣಾ, ಗುಜರಾತ್, ಮಧ್ಯಪ್ರದೇಶ, ಒರಿಸ್ಸಾ, ರಾಜಸ್ಥಾನ ಮತ್ತು ಉತ್ತರಾಂಚಲ ರಾಜ್ಯಗಳು ಈಗಾಗಲೇ ವಿಶೇಷ ಆರ್ಥಿಕ ವಲಯದ ನೀತಿಯನ್ನು ಘೋಷಿಸಿವೆ.

"ವಿಶೇಷ ಆರ್ಥಿಕ ವಲಯಗಳು ಎಂಬುದು ನಿರ್ದಿಷ್ಟವಾಗಿ ಮೀಸಲಿರಿಸಿದ, ಸುಂಕರಹಿತ, ವಿಶೇಷ ವಲಯ ಹಾಗೂ ವ್ಯಾಪಾರ ವ್ಯವಹಾರಗಳು ಮತ್ತು ಸುಂಕಗಳ ದೃಷ್ಟಿಯಿಂದ ವಿದೇಶೀ ಪ್ರದೇಶ ಎಂದು ಪರಿಗಣಿಸಲ್ಪಡುತ್ತದೆ."[೧೮]

ಇವುಗಳು ನಿರ್ದಿಷ್ಟ ಉದ್ದೇಶಕ್ಕಾಗಿ ಗೊತ್ತುಮಾಡಿದ ಪ್ರದೇಶಗಳು. ಸೇವೆ, ವ್ಯಾಪಾರ ವ್ಯವಹಾರಗಳ ಮತ್ತು ಕೈಗಾರಿಕೆಯ ದೃಷ್ಟಿಯಿಂದ ವಿದೇಶಿ ಪ್ರದೇಶಗಳಂತೆ ಗುರುತಿಸಲಾಗುತ್ತದೆ. ಇಲ್ಲಿ ಆಮದು ಸುಂಕಗಳ ರಿಯಾಯಿತಿ ಹಾಗೂ ಇತರೆ ತರಿಗೆಗಳು, ವಿದೇಶಿ ಹೂಡಿಕೆಗಳು ಮತ್ತು ಇತರೆ ವ್ಯವಹಾರಗಳಿಗೆ ಸಂಬಂಧಿಸಿದಂತೆ ಅತಿಯಾಗಿ ಉದಾರ ನೀತಿಯನ್ನು ಅನುಸರಿಸುತ್ತದೆ. ವಿದೇಶಿ ಶೇರು ಮತ್ತು ಬಂಡವಾಳವನ್ನು ಪೂರ್ವಾನುಮತಿ ಇಲ್ಲದೆ ದೇಶದೊಳಗೆ ತರಬಹುದು. ಇಂಥ ವ್ಯವಹಾರಗಳನ್ನು ಭಾರತೀಯ ರಿಸರ್ವ್‌ಬ್ಯಾಂಕ್‌ಗೆ ವರದಿ ಮಾಡಿದರಿ ಸಾಕು. ಈ ರೀತಿಯ ಮುಕ್ತ ಅವಕಾಶಗಳು ದೊರೆತ ನಂತರದಲ್ಲಿ ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಗೆ ಅಗತ್ಯವಾದ ಕನಿಷ್ಟ ಭೂಮಿಯನ್ನು ಒದಗಿಸಿಕೊಡುವುದು ಸರ್ಕಾರಗಳ ಜವಾಬ್ದಾರಿಯಾಗಿದೆ.

ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಗಾಗಿ ನಿಗಧಿಪಡಿಸಿರುವ ಕನಿಷ್ಠ ಭೂಮಿ ಅಂದರೆ ಸಾವಿರಾರು ಹೆಕ್ಟೇರ್ ಭೂ ಪ್ರದೇಶವನ್ನು ಪಡೆಯುವುದಾಗಿದೆ. ಬಹುಉತ್ಪನ್ನಗಳಿಗೆ ೧೦೦೦ ಹೆಕ್ಟೇರ್ ಭೂಪ್ರದೇಶ,ಸೇವೆಗಳಿಗಾಗಿ ೧೦೦ ಹೆಕ್ಟೇರ್, ನಿರ್ದಿಷ್ಟ ವಲಯ ಬಂದರು ಅಥವಾ ವಿಮಾನ ನಿಲ್ದಾಣಗಳಿಗೆ ೧೦೦ ಹೆಕ್ಟೇರ್,ಮುಕ್ತ ವ್ಯಾಪಾರ ಮತ್ತು ಉಗ್ರಾಣಗಳಿಗೆ ೪೦ ಹೆಕ್ಟೇರ್‌ಗಳನ್ನು ಒದಗಿಸಬೇಕೆಂದು ಸರ್ಕಾರದ ನಿಯಮವಿದೆ. ಈ ಭೂಪ್ರದೇಶದಲ್ಲಿ ಮೂಲಭೂತ ಸೌಕರ್ಯ ನೀರು, ವಿದ್ಯುತ್ ಮುಂತಾದ ಸೌಕರ್ಯ ಒದಗಿಸಿಕೊಡುವುದು ಕೂಡಾ ಸರ್ಕಾರದ ಕರ್ತವ್ಯವಾಗಿದೆ.

ಈ ವಿಶೇಷ ಆರ್ಥಿಕ ವಲಯದ ಉದ್ದೇಶವು ಹೆಚ್ಚುವರಿ ಆರ್ಥಿಕ ಚಟುವಟಿಕೆಗಳ ಸೃಷ್ಟಿಸುವುದು. ಸರಕು ಸೇವೆಗಳ ರಫ್ತಿಗೆ ಉತ್ತೇಜನ ನೀಡುವುದು. ದೇಶಿಯ ಹಾಗೂ ವಿದೇಶೀ ಮೂಲಗಳಿಂದ ಬಂಡವಾಳಗಳ ಹೂಡಿಕೆಗಳ ವೃದ್ಧಿಸುವುದು.ಇಂಥ ವಲಯಗಳಿಂದ ಉದ್ಯೋಗಾವಕಾಶಗಳನ್ನು ಸೃಷಿಸುವುದು. ಈ ವಲಯಗಳಿಂದ ಮೂಲ ಸೌಕರ್ಯಗಳ ನಿರ್ವಹಣೆ ಮಾಡುವುದು. ಭಾರತದ ಸಾರ್ವಭೌಮತೆ ಮತ್ತು ಅಖಂಡತೆಯ ರಕ್ಷಣೆ,ರಾಷ್ಟ್ರದ ಭದ್ರತೆ ಹಾಗೂ ಇತರೆ ದೇಶಗಳೊಂದಿಗೆ ಮೈತ್ರಿ ಸಂಬಂಧ ಉಳಿಸಿಕೊಳ್ಳುವುದು. ಈ ಉದ್ದೇಶಗಳ ಹಿಂದೆ ಭೂಕಬಳಿಕೆಗೆ ದಾರಿ ಮಾಡಿಕೊಡುವುದು ಮತ್ತು ಸ್ಥಳೀಯ ಗುತ್ತಿಗೆದಾರರನ್ನು ಶ್ರೀಮಂತರನ್ನಾಗಿ ಮಾಡುವುದಾಗಿದೆ. ರೈತರು ಬೇಸಾಯ ಭೂಮಿಯನ್ನು ಕಳೆದುಕೊಂಡು ಭೂಹೀನರಾಗುತ್ತಾರೆ, ಕೃಷಿ ಕೂಲಿಕಾರ್ಮಿಕರು ನಿರುದ್ಯೋಗಿಗಳಾಗುತ್ತಾರೆ. ಈ ಕುರಿತು ಜನತಾದಳ (ಯು) ಅಧ್ಯಕ್ಷ ಶರದ್‌ಯಾದವ್ ಅಭಿಪ್ರಾಯದಲ್ಲಿ "ವಿಶೇಷ ಆರ್ಥಿಕ ವಲಯಗಳ ಕಾಯ್ದೆಯು ಭಾರತದ ಅತಿ ದೊಡ್ಡ ಸ್ಥಿರಾಸ್ತಿ ಹಗರಣ"[೧೯] ಎಂದಿದ್ದಾರೆ.

ಈ ಕಾಯ್ದೆಯಿಂದ ಬಂಡವಾಳಿಗರಿಗೆ ಅನೇಕ ರಿಯಾತಿಗಳನ್ನೂ ಸಹ ನೀಡಿದೆ. ವಿಶೇಷ ಆರ್ಥಿಕ ವಲಯಗಳ ಅಭಿವೃದ್ಧಿದಾರನಿಗೆ ವಸತಿ, ಶಿಕ್ಷಣ, ಮನರಂಜನೆ, ಮುಂತಾದವುಗಳಿಗೆ ನೂರರಷ್ಟು ತೆರಿಗೆ ವಿನಾಯಿತಿ ಘೋಷಿಸಲಾಗಿದೆ.ಸೇವಾ ತೆರಿಗೆಗಳು, ಕೇಂದ್ರ ಮಾರಾಟ ತೆರಿಗೆಗಳಿಗೆ ವಿನಾಯಿತಿ ನೀಡಲಾಗಿದೆ. ಆಮದು ರಫ್ತು ಸುಂಕಗಳಿಗೆ ಮತ್ತು ಉತ್ಪಾದನಾ ತೆರಿಗಳಿಗಳ ಮೇಲೂ ವಿನಾಯಿತಿಯಿದೆ.ವಿದೇಶಿ ನೇರ ಹೂಡಿಕೆ,ಬ್ಯಾಂಕಿಂಗ್ ,ವಿಮೆ ಹಾಗೂ ವಿದೇಶಿ ವಾಣಿಜ್ಯ ಸಾಲಗಳು, ಕಂಪನಿಗಳ ಕಾಯ್ದೆಯಿಂದ, ಔಷಧಿಗಳು, ಸೌಂದರ್ಯಸಾಧನಗಳು, ಉಪಗುತ್ತಿಗೆ, ಕೃಷಿ ಗುತ್ತಿಗೆಯಿಂದ ವಿನಾಯಿತಿಗಳು ಲಭ್ಯವಾಗಿವೆ. ಕೃಷಿ ಉತ್ಪನ್ನ ಉಪಕರ ಕಾಯ್ದೆ, ಸಕ್ಕರೆ ಉಪಕರ ಕಾಯ್ದೆ, ಸೆಣಬು ಉಪಕರಕಾಯ್ದೆ, ಮಸಾಲೆ ಪದಾರ್ಥಗಳ ಉಪಕರ ಕಾಯ್ದೆ, ಚಹಾ ಕಾಯ್ದೆ, ಕಾಫಿಕಾಯ್ದೆ, ರಬ್ಬರ್‌ಕಾಯ್ದೆ, ಜವಳಿಕಾಯ್ದೆ ಇವುಗಳಿಗೆ ತೆರಿಗೆಗಳು ಮತ್ತು ಸುಂಕಗಳು ಹಾಗೂ ಉಪಕರಗಳಿಂದ ವಿನಾಯಿತಿ ನೀಡಲಾಗಿದೆ.

"ವಿಶೇಷ ಆರ್ಥಿಕವಲಯಗಳ ಸ್ಥಾಪನೆಗೆ ಕನಿಷ್ಠ ಭೂ ಪ್ರದೇಶವನ್ನು ನಿಗದಿಪಡಿಸಲಾಗಿದೆ. ಈವರೆಗೆ ಅನುಮೋದನೆ ಪಡೆದ ವಲಯದ ಸ್ಥಾಪನೆಗೆಗಾಗಿ ಕಂಪನಿಗಳು ಸರ್ಕಾರ ಸುಮಾರು ೧,೩೪,೦೦೦ ಹೆಕ್ಟೇರ್ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳಲು ಪ್ರಯತ್ನಿಸುತ್ತಿವೆ. ಕೆಲವು ಕಂಪನಿಗಳೆಂದರೆ,ರಿಲಯನ್ಸ್ ನವಿ ಮುಂಬೈ ೧೧,೭೦೦ ಹೆಕ್ಟೇರ್, ಗುರ್‌ಗಾಂವ್ ಹರ್ಯಾಣಾ ೧೦,೦೦೦ ಹೆಕ್ಟೇರ್,ರಿಲಯನ್ಸ್ ಎಲ್ಲಾ ವಲಯಗಳಿಗೆ ಒಟ್ಟಾಗಿ ೪೦,೦೦೦ ಹೆಕ್ಟೇರ್,ಗುಜರಾತಿನ ಜಾಮ್‌ನಗರ ಬಳಿ ಎಸ್ಸಾರ್‌ಗ್ರೂಪ್ ೧೧೦೦ ಹೆಕ್ಟೇರ್,ಕಲ್ಯಾಣಿ ಗ್ರೂಪ್

೧೧,೦೦೦ ಹೆಕ್ಟೇರ್, ಸಹರಾ ಗ್ರೂಪ್ ೮,೦೦೦ ಹೆಕ್ಟೇರ್, ಮಹೇಂದ್ರ ೪೦೦೦ ಹೆಕ್ಟೇರ್, ಯೂನಿಟೆಕ್ ೮೦೦೦ ಹೆಕ್ಟೇರ್,ವೇದಾಂತ ೩೪೭ ಹೆಕ್ಟೇರ್,ಹಿಂಡಾಲ್ಕೋ ೮೫೦ ಹೆಕ್ಟೇರ್,ಮಹಾರಾಷ್ಟ್ರ ಸರ್ಕಾರವು ಬಾಂಬೆ ಟೆನನ್ಸಿ ಅಂಡ್ ಅಗ್ರಿಕಲ್ಚರಲ್ ಲ್ಯಾಂಡ್ಸ್ ಆಕ್ಟ್ ೧೯೪೮ರ ಕಾಯ್ದೆ ಪ್ರಕಾರ ಭೂಸ್ವಾಧೀನಕ್ಕೆ ಅನುಮತಿ ನೀಡಿದೆ."[20]

ಈ ಸಂಸ್ಥೆಗಳೆಲ್ಲವೂ ಸರ್ಕಾರೀ ಬೆಲೆಯನ್ನು ರೈತರಿಗೆ ನೀಡಿ,ಭೂಮಿಯನ್ನು ಕೊಳ್ಳುತ್ತಿವೆ. ಆನಂತರದಲ್ಲಿ ಈ ಭೂಮಿಯನ್ನು ಮೂಲಸೌಕರ್ಯಗಳ ಮೂಲಕ ಅಭಿವೃದ್ಧಿಪಡಿಸಿ ಕೋಟ್ಯಾಂತರ ರೂಪಾಯಿಗಳಿಗೆ ಮಾರಿಕೊಳ್ಳುತ್ತವೆ. ಇದೊಂದು ರೀತಿಯಲ್ಲಿ ಬೃಹತ್ ಗುತ್ತಿಗೆದಾರರನ್ನು ಸೃಷ್ಟಿಸಿ ಲಾಭಕೋರತನದ ಬೃಹತ್‌ಜಾಲವಾಗಿದೆ.ಇದೊಂದು ರೀತಿಯಲ್ಲಿ ಕಾನೂನಾತ್ಮಕ ಭೂದಂಧೆಯಾಗಿದೆ. ಈಗಾಗಲೇ ಕೋಲ್ಕತ್ತಾದ ನಂದಿಗ್ರಾಮದಿಂದ ಭೂಹೋರಾಟ ಆರಂಭವಾಗಿದ್ದು, ಕರ್ನಾಟಕದ ಬೆಂಗಳೂರುನಗರ ಸಮೀಪದ ನಂದಗುಡಿ ಗ್ರಾಮದ ರೈತರ ಪ್ರತಿಭಟನೆಯ ಕಿಡಿಗಳು ಹತ್ತಿಕೊಂಡಿವೆ. ಇದೀಗ ಆಂಧ್ರದ ಖಮ್ಮಂ ಜಿಲ್ಲೆಯ ಮುದಿಗೊಂಡ ಗ್ರಾಮದಲ್ಲಿ ಕಮ್ಯುನಿಷ್ಟರಾದ ಸಿಪಿಐ ಮತ್ತು ಸಿಪಿಎಂ ನೇತೃತ್ವದಲ್ಲಿ ಭೂಹೀನರಿಗೆ ಭೂಮಿಯನ್ನು ಕೊಡಿಸಲು ಹೋರಾಟ ನಡೆಸುತ್ತಿದೆ. ಈಗಾಗಲೇ ಈ ಹೋರಾಟದಿಂದ ಎಂಟು ಮಂದಿ ರೈತರು ಪೊಲೀಸರ ಗುಂಡಿಗೆ ೨೮.೭.೨೦೦೭ರಂದು ಬಲಿಯಾಗಿದ್ದಾರೆ. ವಿದೇಶಿ ಮತ್ತು ಸ್ಥಳೀಯ ಬಂಡವಾಳಿಗರ ಮೇಲೆ ಭೂ ಆಕ್ರಮಣದ ವಿರುದ್ಧ ರೈತರ ಹೋರಾಟ ಆರಂಭವಾಗಿದೆ.

ಈ ವಿದೇಶಿ ಬಂಡವಾಳಿಗರು ಸಾವಿರಾರು ಎಕರೆ ಭೂಮಿಯನ್ನು ಯಾವುದೇ ವರ್ಗದ ಜಮೀನನ್ನು ಕೊಳ್ಳೆಯೊಡೆಯುವುದೇ ಆಗಿದೆ. "ವಿಶೇಷ ಆರ್ಥಿಕವಲಯಗಳು ಸ್ಥಾಪನೆಯಾಗುತ್ತಿರುವ ವೇಗ, ಕ್ರಮ ಮತ್ತು ವಿಧಾನಗಳು ಜನರ ಆತಂಕ ಮತ್ತು ತೀವ್ರ ವಿರೋಧಕ್ಕೆಡೆಮಾಡಿಕೊಟ್ಟಿವೆ. ಹಳ್ಳಿಗಳು ಮತ್ತು ಗ್ರಾಮಗಳನ್ನೇ ಈ ಯೋಜನೆ ಆಪೋಶನ ತೆಗೆದುಕೊಳ್ಳುತ್ತಿದೆ. ಬಹುಪಾಲು ಕಡೆಗಳಲ್ಲಿ ಫಲವತ್ತಾದ ಕೃಷಿಭೂಮಿಯನ್ನು ವಶಪಡಿಸಿಕೊಳ್ಳಲಾಗುತ್ತಿದೆ. ಭೂಮಿ ಕಳೆದುಕೊಳ್ಳುತ್ತಿರುವವರಿಗೆ ನ್ಯಾಯಯುತ ಪರಿಹಾರ ನೀಡಲಾಗುತ್ತಿಲ್ಲ. ಅವರ ಪುನರ್ವಸತಿಗೆ ಯಾರೂ ತಲೆ ಕೆಡಿಸಿಕೊಳ್ಳುತ್ತಿಲ್ಲ. ಒಂದಷ್ಟು ಹಣವನ್ನು ಬಡ ಭೂಒಡೆಯರಿಗೆ ಬಿಸಾಡಿ ವಿಶಾಲ ಭೂ ಪ್ರದೇಶಗಳನ್ನು ಬಂಡವಾಳಗಾರರು ತಮ್ಮ ಕೈವಶ ಮಾಡಿಕೊಳ್ಳುತ್ತಿದ್ದಾರೆ."[21]

ಇಂಥ ಭೂ ಆಕ್ರಮಣ ನೀತಿಗಳ ಹಿಂದಿನ ರಾಜಕೀಯ ಹುನ್ನಾರವನ್ನು ಗಮನಿಸಬಹುದು. ಇದು ರೈತನಿಗೆ ಮುಂದೆ ಕಾದಿರುವ ಆಪಾಯಗಳ ಮುನ್ಸೂಚನೆಯಾಗಿ ಕಂಡುಬರುತ್ತದೆ. ಒಂದೆಡೆ ರೈತ ತನ್ನ ಅಸ್ತಿತ್ವ ಕಳೆದುಕೊಳ್ಳುತ್ತಿದ್ದು, ಮತ್ತೊಂದೆಡೆ ಭೂಮಿಯೊಂದಿಗಿನ ಅಂತರ್‌ಸಂಬಂಧವನ್ನು ಕಡಿದುಕೊಳ್ಳುತ್ತಿದ್ದಾನೆ. ವಿಶೇಷ ಆರ್ಥಿಕವಲಯದ ನೆಪದಲ್ಲಿ ಭಾರತದ ಮಾರುಕಟ್ಟೆಯನೆಲೆಯ ಭೂಪ್ರದೇಶವನ್ನು ಆಕ್ರಮಿಸಿಕೊಂಡು ಬರುತ್ತಿರುವುದರ ಹಿಂದೆ ನವವಸಾಹತುಶಾಹಿ ಸ್ಥಾಪನೆಯ ಉದ್ದೇಶ ಸ್ಪಷ್ಟವಾಗಿ ಗೋಚರವಾಗುತ್ತಿದೆ.

ಇದೊಂದು ರೀತಿಯಲ್ಲಿ ಬಡ ರೈತರನ್ನು ದೋಚಿ ರಿಯಲ್ ಎಸ್ಟೇಟ್ ದಂಧೆಯ ಮೂಲಕ ದೊಡ್ಡ ದೊಡ್ಡ ಬಂಡವಾಳಗಾರರನ್ನು ಬಹುರಾಷ್ಟ್ರೀಯ ಕಂಪೆನಿಯ ಮಾಲೀಕರನ್ನಾಗಿಸುವ ಪ್ರಯತ್ನ. ಅಲ್ಲದೆ ಇಂತಹ ಬಂಡವಾಳಶಾಹಿಗಳು ವಿಶ್ವದ ಶ್ರೀಮಂತರ ಪಟ್ಟಿಯಲ್ಲಿ ಸ್ಥಾನ ಪಡೆಯುವಂತೆ ಮಾಡುವ ನೀತಿಯನ್ನು ಸರ್ಕಾರಗಳೇ ರೂಪಿಸುತ್ತಿವೆ. ವಿದೇಶಿಗರಿಗೆ ಭಾರತೀಯ ರೈತನ ಭೂಮಿಯೊಂದಿಗಿನ ಅಂತರ್‌ಸಂಬಂಧಗಳು ಅರ್ಥವಾಗುವುದಿಲ್ಲ. ಅತ್ಯಂತ ವ್ಯವಸ್ಥಿತವಾಗಿ ಕರುಣೆಯೇ ಇಲ್ಲದೆ ವಿದೇಶಿ ಬಂಡವಾಳಿಗರು ಭೂಲೂಟಿ ಮಾಡುತ್ತಿದ್ದಾರೆ.ಅಲ್ಲದೆ ಬಂಡವಾಳಿಗರಿಗೆ ಹಾಗೂ ವಿದೇಶಿಗರಿಗೆ ರಿಯಲ್ ಎಸ್ಟೇಟ್‌ಗಲು ಕಾಳಸಂತೆಯಲ್ಲಿ ಭೂಮಿಯನ್ನು ಮಾರುತ್ತಿದ್ದಾರೆ.

ಇಂತಹ ಆತಂಕಗಳನ್ನು ಕುರಿತು ಖ್ಯಾತ ಇತಿಹಾಸಕಾರ ಸುಮಿತ್ ಸರ್ಕಾರ್ ಹೇಳುವಂತೆ, "ಇದು ಆಧುನಿಕ ಭಾರತದ ಅತ್ಯಂತ ಬೃಹತ್ತಾದ ಭೂ ಆಕ್ರಮಣ ಚಳುವಳಿ ಯಾವುದೇ ಹೋರಾಟವಿಲ್ಲದೆ ಸಾವಿರಾರು ಎಕರೆ ಭೂಮಿಯನ್ನು ಕೈವಶಮಾಡಿಕೊಳ್ಳುವ ವಿನೂತನ ವಿಧಾನ"[22] ಎಂದಿದ್ದಾರೆ.

ಇಲ್ಲಿ ಹಣದ ಥೈಲಿ ಹಿಡಿದು ಬರುವ ಈ ವಿದೇಶಿ ಕಂಪೆನಿಗಳು ರೈತರ ಭೂಮಿಯನ್ನು ಕೊಳ್ಳುವುದರ ಮೂಲಕ ತಣ್ಣಗೆ ರೈತರನ್ನು ನಿರ್ವಸತಿಕರನ್ನಾಗಿ ಮಾಡುತ್ತಿವೆ. ಇಲ್ಲಿ ಯಾವುದೇ ಹೋರಾಟವಿಲ್ಲ, ಕೇವಲ ಹಣದ ಥೈಲಿಯ ಮೂಲಕ ಈ ನೆಲದ ರೈತ ನಿವಾಸಿಗಳನ್ನು ಹೊರಗಟ್ಟುತ್ತಿದ್ದಾರೆ. ಇಲ್ಲಿ ತಮಗೆ ಗುಲಾಮರಾಗಿ ವಿಧೇಯರಾಗಿ ನಡೆದುಕೊಳ್ಳುವಂತಹ ವ್ಯಕ್ತಿಗಳನ್ನು ಇಟ್ಟುಕೊಂಡು ಈ ದೇಶದ ಮಾನವ ಸಂಪನ್ಮೂಲವನ್ನು

ಕೊಳ್ಳೆಹೊಡೆಯುವುದು ಇವರ ಸಂಚಾಗಿದೆ.

ಭೂ ವ್ಯವಸಾಯ ಸಂಬಂಧಗಳನ್ನು ತಲ್ಲಣಗೊಳಿಸುತ್ತಿರುವ ಜಾಗತೀಕರಣ ಉದಾರೀಕರಣ ನೀತಿಗಳುರೈತರ ಬದುಕನ್ನು ಅತಂತ್ರಗೊಳಿಸುತ್ತಿವೆ. ಇದರ ಪರಿಣಾಮ ಇಲ್ಲಿನ ರೈತರೇ ತಲ್ಲಣಗೊಂಡು ಹರಿದು ಹಂಚಿಹೋಗುತ್ತಿರುವ ಭೂಮಿಯನ್ನು ನೋಡಿ ಮೌನವಾಗಿ ಕುಳಿತಿದ್ದಾರೆ. ಈಗ ರಸ್ತೆ ಅಗಲೀಕರಣ, ನೈಸ್ ಕಂಪೆನಿಯ ಕಾರಿಡಾರ್ ಯೋಜನೆ, ಐಟಿ.ಪಾರ್ಕ್, ಬಿ.ಟಿ.ಪಾರ್ಕ್, ಮುದ್ರಣಪಾರ್ಕ್, ಮಹಿಳಾ ಉದ್ಯಮಪಾರ್ಕ್ ಮುಂತಾದ ಬೃಹತ್ ಯೋಜನೆಗಳ ಮೂಲಕ ದಾಂಗುಡಿಯಿಟ್ಟು ಭೂಮಿಯನ್ನು ಕಬಳಿಸುತ್ತಿವೆ. ಸರ್ಕಾರದ ಮುಖ್ಯಸ್ಥರು ಹಾಗೂ ರಾಜಕೀಯ ನಾಯಕರು ತಮಗೆ ಬೇಕಾದ ರೀತಿಯಲ್ಲಿ ಭೂ ಕಾಯ್ದೆಗಳನ್ನ ತಿದ್ದುಪಡಿ ಮಾಡಿ ರೈತರನ್ನು ದಿಕ್ಕುತಪ್ಪಿಸುತ್ತಿದ್ದಾರೆ. ಇಲ್ಲಿ ಪ್ರಜಾಪ್ರಭುತ್ವದ ಜನಪರ ಸರ್ಕಾರಗಳು ಮತ್ತು ಜನಪ್ರತಿನಿಧಿಗಳು, ಯಾರಪರವಾಗಿದ್ದಾರೆ, ಎಂಬ ಆತಂಕ ಎಲ್ಲರಲ್ಲಿ ವ್ಯಕ್ತವಾಗುತ್ತಿದೆ. ಇಂತಹ ಭೂ ಆಕ್ರಮಣಗಳನ್ನು ತಡೆಗಟ್ಟಲು ಸ್ಥಳೀಯರು ರೈತರು ಅಲ್ಲಲ್ಲಿ ಹೋರಾಟ ನಡೆಸುತ್ತಿದ್ದರೂ, ಹಣದ ಥೈಲಿಯ ಮೂಲಕ ಮಟ್ಟಹಾಕಲಾಗುತ್ತಿದೆ. ವಿದೇಶಿ ಕಂಪೆನಿಗಳು ಇಂತಹ ತಂತ್ರಗಳ ಮೂಲಕ ರೈತರ ಭೂಮಿಯನ್ನು ಕಬಳಿಕೆ ಮಾಡುವುದನ್ನು ಕರಗತ ಮಾಡಿಕೊಂಡಿವೆ.

ನಗರ ಮತ್ತು ಮಹಾನಗರ ಪ್ರದೇಶಗಳಲ್ಲಿ ಬೃಹತ್‌ನಗರಗಳ ನಿರ್ಮಾಣದ ನೆಪದಲ್ಲಿ ವಿಶೇಷ ಆರ್ಥಿಕವಲಯ ಯೋಜನೆಯ ನೆಪದಲ್ಲಿ ಸರ್ಕಾರವೇ ಭೂಮಿಯನ್ನು ಆಕ್ರಮಿಸಿಕೊಳ್ಳುತ್ತಿದೆ.ವಿಜಯಕರ್ನಾಟಕ ಪತ್ರಿಕಾ ವರದಿಯ ಪ್ರಕಾರ

"೧.ಕೈಗಾರಿಕೆ ಉದ್ದೇಶಕ್ಕೆಂದು ಕೆಐಎಡಿಬಿ ಬೆಂಗಳೂರು ನಗರ ಜಿಲ್ಲೆ ಉತ್ತರ ತಾಲ್ಲೂಕಿನ ಜಾಲ ಹೋಬಳಿಯ ಬಿ.ಕೆ.ಪಾಳ್ಯ, ಸಿಂಗಹಳ್ಳಿ, ಅರೇಬನ್ನಿಮಂಗಲ, ಗೊಲ್ಲಹಳ್ಳಿಗೆ ಸೇರಿದ ೧೨೯೪ ಎಕರೆ ಭೂಮಿ ಸ್ವಾಧೀನಕ್ಕೆ ಆಗಸ್ಟ್ ೮,೨೦೦೬ರಂದು ಅಧಿಸೂಚನೆ ಹೊರಡಿಸಿದೆ.

೨.ಇಟಾಸ್ಕ ಎಂಬ ಐಟಿ ಕಂಪೆನಿಗಾಗಿ ಬೆಂಗಳೂರು ಉತ್ತರ ತಾಲ್ಲೂಕಿನ ಬಂಡಿಕೋಡಿಗೇಹಳ್ಳಿಗೆ ಸೇರಿದ ೪೬೬ ಎಕರೆ ಭೂಮಿ ಸ್ವಾಧೀನಕ್ಕೆ ನವೆಂಬರ್ ೩,೨೦೦೬ರಂದು ಇನ್ನೊಂದು ಅಧಿಸೂಚನೆ ಹೊರಡಿಸಲಾಗಿದೆ.

೩. ಹಾರ್ಡ್‌ವೇರ್‌ಪಾರ್ಕ್ ಸ್ಥಾಪನೆಗಾಗಿ ಬೆಂಗಳೂರು ಉತ್ತರ ತಾಲ್ಲೂಕಿನ ಜಾಲ ಹೋಬಳಿ, ಹೂವಿನಾಯ್ಕನಹಳ್ಳಿ, ಮಹದೇವನಗರ, ಕೋಡಿಗೇಹಳ್ಳಿ ಮತ್ತು ಬಾಗಲೂರು ಗ್ರಾಮಕ್ಕೆ ಸೇರಿದ ೯೧೮ ಎಕರೆ ಭೂಮಿ ಸ್ವಾಧೀನಕ್ಕೆ ಡಿಸೆಂಬರ್ ೨೬, ೨೦೦೬ ರಂದು ಅಧಿಸೂಚನೆ ಹೊರಡಿಸಲಾಗಿದೆ.

೪. ವಿಮಾನ ಬಿಡಿಭಾಗ ತಯಾರಿಕೆ ಕಾರ್ಖಾನೆಗಾಗಿ ಬೆಂಗಳೂರು ಉತ್ತರ ಹಾಗೂ ದೇವನಹಳ್ಳಿ ತಾಲ್ಲೂಕಿಗೆ ಸೇರಿದ ದುಮ್ಮನಹಳ್ಳಿ, ಸಿಂಗಹಳ್ಳಿ, ಉಣಸೂರು, ಜೊನ್ನಹಳ್ಳಿ, ಬಾಲದಿಮ್ಮನಹಳ್ಳಿ, ಕವಡದಾಸನಹಳ್ಳಿ, ಭಟ್ರಮಾರೇನಹಳ್ಳಿ ಹಾಗೂ ಬೆಟ್ಟಕೋಟೆ ಗ್ರಾಮಗಳಿಗೆ ಸೇರಿದ ೧೦೯೯ ಎಕರೆ ಭೂಮಿ ಸ್ವಾಧೀನಕ್ಕೆ ಜನವರಿ ೧೦ ೨೦೦೭ರಂದು ಅಧಿಸೂಚನೆ ಹೊರಡಿಸಲಾಗಿದೆ."[೨೩]

ಈ ವಿವರಗಳನ್ನು ಗಮನಿಸಿದಾಗ ಒಟ್ಟು ೩೬೬೨ ಎಕರೆ ಫಲವತ್ತಾದ ಭೂ ಪ್ರದೇಶವನ್ನು ಆಕ್ರಮಿಸಿಕೊಳ್ಳಲು ಸರ್ಕಾರವೇ ಮುಂದಾಗಿದೆ. ಇಲ್ಲಿಯ ಗ್ರಾಮೀಣ ಜನತೆಯ ಬದುಕು ಹಾಗೂ ಅವರಿಗೆ ಭೂಮಿಯೊಂದಿಗಿದ್ದ ಅಂತರ್ ಸಂಬಂಧಗಳನ್ನು, ಹಣದ ಥೈಲಿಯು ಮೂಲಕವೇ ವಿನಾಶದಂಚಿಗೆ ಕೊಂಡೊಯ್ಯುತ್ತಿದೆ.

ಕೈಗಾರಿಕೆ ಅಭಿವೃದ್ಧಿಗೆಂದು ರಾಜ್ಯ ಸರ್ಕಾರ ಕೆಐಎಡಿಬಿ ಮೂಲಕ ರಾಜ್ಯಾದ್ಯಂತ ಸಾವಿರಾರು ಎಕರೆ ಭೂಮಿಯನ್ನು ವಶಪಡಿಸಿಕೊಂಡಿದೆ. "ಕರ್ನಾಟಕ ಸರ್ಕಾರವು ೧೯೪೭ ರಿಂದ ೨೦೦೫ ರವರೆಗೆ ಬೆಂಗಳೂರು ನಗರ ಹಾಗೂ ಬೆಂಗಳೂರು ಗ್ರಾಮಾಂತರ ಪ್ರದೇಶದಲ್ಲಿ ಒಟ್ಟು ೧೬,೬೬೮ ಎಕರೆ ಕೃಷಿಭೂಮಿಯನ್ನು ರೈತರಿಂದ ವಶಪಡಿಸಿಕೊಂಡಿದೆ. ಆದರೆ ೨೦೦೬ರ ಏಪ್ರಿಲ್‌ರಿಂದ ೨೦೦೭ರ ಮೇ ವರೆಗೆ ಒಟ್ಟು ೨೧,೭೩೦ ಎಕರೆ ಭೂಪ್ರದೇಶವನ್ನು ರೈತರಿಂದ ವಶಪಡಿಸಿಕೊಂಡಿದೆ."[೨೪]

ಈ ಕಂಪೆನಿಗಳಿಗೆ ರೈತ ತನ್ನ ಭೂಮಿಯನ್ನು ಮಾರಿದ ನಂತರ ಆತ ತನ್ನ ಭೂಮಿ ಎಂಬ ಭಾವನೆಯಿಂದ

ಅದರ ಹತ್ತಿರ ಸುಳಿಯಲಿಕ್ಕೂ ಆಗದ ಸ್ಥಿತಿಯನ್ನು ಇಂದು ಕಾಣುತ್ತೇವೆ. ಈ ಹೊಸ ಪೋಷಾಕಿನೊಂದಿಗೆ ನಗರದ ಸುತ್ತಮುತ್ತಲಿನ ಭೂ ಪ್ರದೇಶವನ್ನು ಆಕ್ರಮಿಸುವ ಮೂಲಕ ನವ ಭೂಮಾಲೀಕರಾಗುತ್ತಿರುವುದು ಕಂಡುಬರುತ್ತಿದೆ. ಇದರ ಪರಿಣಾಮ ನಗರ ಪ್ರದೇಶಗಳ ಸುತ್ತಮುತ್ತ ಎಸ್ಟೇಟ್ ಏಜೆನ್ಸಿಗಳು, ಲ್ಯಾಂಡ್‌ಮಾಫಿಯಾಗಳು ತಲೆ ಎತ್ತತೊಡಗಿವೆ. ಇವುಗಳು ಭೂಮಿಯನ್ನು ಲಾಭದ ಗಳಿಕೆಯಾಗಿ, ಅದನ್ನು ಹಣದ ಸ್ವರೂಪವಾಗಿ ನೋಡಲಾಗುತ್ತಿವೆ.

ಜಿಲ್ಲೆಗೊಂದು ವಿಶೇಷ ಆರ್ಥಿಕ ವಲಯವನ್ನು ಸ್ಥಾಪಿಸುವ ಉದ್ದೇಶವನ್ನು ಸರ್ಕಾರ ಹೊಂದಿದೆ. ಈಗಾಗಲೇ ಬೆಂಗಳೂರು, ಹಾಸನ ಮತ್ತು ಮಂಗಳೂರಿನಲ್ಲಿ ವಿಶೇಷ ವಿತ್ತವಲಯ ಸ್ಥಾಪನೆಗೆ ಸರ್ಕಾರದಿಂದ ಅನುಮೋದನೆ ದೊರೆತಿದೆ. ಜಿಲ್ಲಾ ಕೇಂದ್ರಗಳಿಗೆ ಹಾಗೂ ರಾಜ್ಯ ಹೆದ್ದಾರಿಗಳಿಗೆ ಹೊಂದಿಕೊಂಡಿರುವ ಭೂಮಿಯನ್ನು ವಶಪಡಿಸಿಕೊಂಡು ವಿಶೇಷ ಆರ್ಥಿಕವಲಯದ ಸ್ಥಾಪನೆ ಮಾಡುವ ಉದ್ದೇಶ ಹೊಂದಿದೆ.

ಸರ್ಕಾರದ ಹೊಸ ಯೋಜನೆಯಂತೆ ಬೃಹತ್‌ಬೆಂಗಳೂರಿನ ಸುತ್ತಮುತ್ತಲಿನ ಭೂಮಿಗೀಗ ಚಿನ್ನದ ಬೆಲೆ ಬಂದಿದೆ. ಇಲ್ಲಿನ ನಾಗರಿಕರಲ್ಲಿ ಭೂಮಿಯ ಬಗೆಗಿನ ಆಕಾಂಕ್ಷೆಗಳು ದಿನೇ ದಿನೇ ಹೆಚ್ಚುತ್ತಿವೆ. ಪ್ರತಿಯೊಬ್ಬ ವ್ಯಕ್ತಿಯೂ ತುಂಡು ಭೂಮಿಯನ್ನು ಪಡೆದೇ ತೀರುವ ಆಕಾಂಕ್ಷೆಹೊಂದಿದ್ದಾನೆ. ಇದಕ್ಕಾಗಿ ಇದೀಗ ಹೊಸ ಬಗೆಯ ಭೂಮಾಫಿಯಾಗಳು ಶುರುವಾಗಿವೆ. ಆಸ್ತಿ ಮಾರಾಟಕ್ಕೂ ಹೊರಗುತ್ತಿಗೆ ಸಂಸ್ಥೆಯಾದ ಮಾರ್ಕೆಟಿಂಗ್ ಪ್ರೊಸೆಸಿಂಗ್ ಔಟ್‌ಸೋರ್ಸಿಂಗ್ ಇಂದು ಕೊಳ್ಳುವವರಿಗೆ, ಮಾರುವವರಿಗೆ ಕಾನೂನಿನ, ಹಣಕಾಸಿನ ನೆರವು ನೀಡುವ ಉದ್ದೇಶವನ್ನು ಹೊಂದಿದೆ. ಆ ಮೂಲಕ ಇಲ್ಲಿನ ಭೂಮಿಯನ್ನು ಕೊಳ್ಳೆಹೊಡೆಯಲಾಗುತ್ತಿದೆ.

ಹೀಗಾಗಿ ಬೆಂಗಳೂರು ಮಹಾಗರದಲ್ಲಿ ಇಂದು ಭೂಮಿ ಅಡಿಗಳ ಲೆಕ್ಕಾಚಾರದಲ್ಲಿ ಹೆಚ್ಚು ಹಣದ ಮೂಲಕ ಅಸ್ತಿತ್ವ ಪಡೆಯುತ್ತಿದೆ. ನಗರ ಪ್ರದೇಶದಲ್ಲಿ ಪ್ರತಿಯೊಬ್ಬ ವ್ಯಕ್ತಿ ಕನಿಷ್ಟ ಕಡೆಯ ಪಕ್ಷ ೩೦x೪೦ ಅಡಿಗಳಷ್ಟಾದರೂ ಭೂಮಿಯನ್ನು ಪಡೆಯುವ ಹಂಬಲವನ್ನು ಎಲ್ಲೆಡೆ ಕಾಣಲಾಗುತ್ತಿದೆ. ಇದಕ್ಕೆ ಪೂರಕವೆಂಬಂತೆ ಸೈಟ್‌ಕೊಳ್ಳಲು ರಾಷ್ಟ್ರೀಕೃತ ಬ್ಯಾಂಕುಗಳು ಲಕ್ಷಾಂತರ ರೂಪಾಯಿಗಳ ಸಾಲ ನೀಡಲು ತಾಮುಂದೆ ಎಂದು ನಾಮುಂದೆ ಪೈಪೋಟಿ ನಡೆಸುತ್ತಿವೆ.

ಇದೇ ಕಾಲಕ್ಕೆ ರೈತರ ಕೃಷಿ ಭೂಮಿಗೆ ಸಾಲ ನೀಡದೆ ಆತನ ಬೆಳೆಯಾಧಾರದ ಮೇಲೆ ರಾಷ್ಟ್ರೀಕೃತ ಬ್ಯಾಂಕ್‌ಗಳು ಸಾಲ ನೀಡಲು ತಾರತಮ್ಯ ತೋರುತ್ತಿವೆ. ಈ ರಾಷ್ಟ್ರೀಕೃತ ಬ್ಯಾಂಕುಗಳು ನಗರಪರವಾದ ಧೋರಣೆಯನ್ನು ಹೊಂದಿರುವುದು ಕಂಡುಬರುತ್ತದೆ. ಇದರ ಪರಿಣಾಮ ನಗರ ಪ್ರದೇಶದ ಸುತ್ತಮುತ್ತ ಇರುವ ರೈತರ ಭೂಮಿಗೆ ಚಿನ್ನದ ಬೆಲೆ ಬಂದಿದ್ದು, ಈ ಭೂಮಿಗಳು ಲೇಔಟ್‌ಗಳಾಗಿ ಮಾರ್ಪಾಡಾಗುತ್ತಿವೆ. ಆರ್ಥಿಕ ಮೌಲ್ಯದ ಗ್ರಾಮಾಂತರ ಪ್ರದೇಶದ ಕೃಷಿ ಭೂಮಿಗೆ ಹೋಲಿಸಿ ನೋಡಿದಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶಗಳ ಅಂತರ ಬೃಹತ್ತಾಗಿ ಕಂಡುಬರುತ್ತಿದೆ. ಇಂದು ಹಳ್ಳಿಯಲ್ಲಿರುವ ರೈತ, ನಗರವಾಸಿಯಾಗಿ ಪಟ್ಟಣದಲ್ಲಿ ತನ್ನ ನೆಲೆ ಕಂಡುಕೊಳ್ಳುತ್ತಿದ್ದಾನೆ. ಏಕಕಾಲಕ್ಕೆ ರೈತನನ್ನು ನಗರ ಪ್ರದೇಶದ ಆಸುಪಾಸಿನಲ್ಲಿ ನಿರ್ವಸತಿಕನನ್ನಾಗಿ ಮಾಡಿ, ಗ್ರಾಮೀಣ ಪ್ರದೇಶದ ರೈತನನ್ನು ನಗರವಾಸಿ ಮಾಡುವ ಹುನ್ನಾರ ನಡೆಯುತ್ತಿದೆ.

ಇತ್ತ ವಿದ್ಯಾವಂತ ಯುವ ಸಮುದಾಯ ಜಾಗತಿಕ ಸಂದರ್ಭದ ಹೊಡೆತಕ್ಕೆ ಸಿಕ್ಕಿ ಐಟಿ, ಬಿಟಿ, ಬಿಪಿಓಗಳ ಮೂಲಕ ಉದ್ಯೋಗದ ಆಕರ್ಷಣೆಗೆ ಒಳಗಾಗಿದೆ. ಇಲ್ಲಿನ ಆಕರ್ಷಕ ವೇತನ, ವಿಶೇಷ ಸೌಲಭ್ಯಗಳಿಂದಾಗಿ ಕಾರ್ಪೊರೇಟ್ ಸಂಸ್ಥೆಗಳು ತಮ್ಮತ್ತ ಯುವಜನತೆಯನ್ನು ಸೆಳೆದುಕೊಳ್ಳುತ್ತಿವೆ. ಇದರ ನೇರ ಪರಿಣಾಮ ಕೃಷಿಯ ಬಗೆಗೆ ಹಾಗೂ ಭೂಮಿಯ ಬಗೆಗೆ ಆಸಕ್ತಿ ಇಲ್ಲದಂತೆ ಮಾಡಿವೆ. ಜಾಗತಿಕ ಸಂದರ್ಭದ ಅಗತ್ಯಗಳು ಯುವ ಸಮುದಾಯಕ್ಕೆ ಆಕರ್ಷಕ ಹಾಗೂ ಸಮಾಜದಲ್ಲಿ ಪ್ರತಿಷ್ಠೆಯ ಪ್ರಶ್ನೆಯಾಗಿ ಕಂಡುಬರುತ್ತಿವೆ. ಮುಂದಿನ ದಿನಗಳಲ್ಲಿ ಕೃಷಿಕರಿಲ್ಲದೆ ಇದರ ನೇರ ಪರಿಣಾಮ ಆಹಾರ ಉತ್ಪಾದನೆಯ ಮೇಲಾಗುವ ಮುನ್ಸೂಚನೆಯಾಗಿ ಕಂಡುಬರುತ್ತದೆ. ಈ ಎಲ್ಲಾ ಆಕರ್ಷಣೆಗಳಿಂದಾಗಿ ಭೂ ಪ್ರಶ್ನೆ ಹಿಂದೆ ಸರಿದು ನೌಕರಶಾಹಿ ಪ್ರಬಲವಾಗುತ್ತಿದೆ.

### ೨.೩.೬ ಗುತ್ತಿಗೆ ಕೃಷಿ - ರೈತಸಲ್ಲದ ರೈತನ ಭೂ ಆಕ್ರಮಣಗಳು (A.E.Z)

ಜಾಗತೀಕರಣ,ಉದಾರೀಕರಣ ಮತ್ತು ಖಾಸಗೀಕರಣದ ನೆಪದಲ್ಲಿ ಈಗಾಗಲೇ ವಿಶೇಷ ಆರ್ಥಿಕ ವಲಯಗಳು ಸ್ಥಾಪನೆಗೆ ವಿದೇಶಿಯ ಮತ್ತು ದೇಶಿಯ ಬಂಡವಾಳ ತೊಡಗಿಸುವಂತೆ ಅಧಿಕೃತವಾಗಿ ಸಂಸದೀಯ ಮಾನ್ಯತೆ ದೊರೆತಿದೆ. ಇದಕ್ಕೂ ಮುನ್ನವೇ ೨೦೦೩ರಲ್ಲಿ ಗುತ್ತಿಗೆ ಕೃಷಿ (Contract Farming) ಪದ್ಧತಿಯನ್ನು

ಭಾರತದಲ್ಲಿ ಅನುಷ್ಠಾನಗೊಳಿಸಲು ಮಾನ್ಯತೆ ದೊರೆತಿದೆ. ಈ ಹೊಸ ನೀತಿಯಿಂದ ಕೃಷಿ ಕ್ಷೇತ್ರದಲ್ಲಿ ಅತಿ ಹೆಚ್ಚು ಉತ್ಪಾದನೆ ಮತ್ತು ಆಮದು,ರಫ್ತು (Agri Export Zones)ಮಾಡುವುದರಿಂದ ಹೆಚ್ಚಿನ ಲಾಭ ಗಳಿಸಬಹುದೆಂಬ ಉದ್ದೇಶದಿಂದ ಜಾರಿಯಾಗಿದೆ. ಹಾಗಾದರೆ ಗುತ್ತಿಗೆ ಕೃಷಿ ಎಂದರೇನು ಎಂಬುದಕ್ಕೆ ಇದು ಕೂಡಾ ವಿಶೇಷ ಆರ್ಥಿಕ ವಲಯಗಳಂತೆ ಕಾರ್ಯನಿರ್ವಹಿಸುತ್ತದೆ. ಉದಾಹರಣೆ ಈ ಕಂಪೆನಿಗಳು ಕೃಷಿ ಭೂಮಿಯನ್ನು ಖರೀದಿ ಮಾಡುವುದಿಲ್ಲ. ನೀವೊಬ್ಬ ಕೃಷಿಕನಾಗಿದ್ದರೆ, ಹತ್ತೋ,ಮೂವತ್ತೋ ಎಕರೆ ಜಮೀನಿದೆ ಎಂದಾದರೆ ಅಲ್ಲಿಗೆ ಮೆಟ್ರೋ ಕ್ಯಾಶ್ ಅಂಡ್ ಕ್ಯಾರಿ, ಪೆಪ್ಸಿ ಫುಡ್ಸ್, ಪ್ರೈಮ್‌ಬಯೋನಂಥ ಖಾಸಗಿ ಕಂಪನಿಗಳು ರೈತರ ಜತೆ ಒಪ್ಪಂದ ಮಾಡಿಕೊಳ್ಳುತ್ತವೆ. ಅಂದರೆ ರೈತರು ಕಂಪನಿಗಳು ನಿರ್ದೇಶಿಸಿದ ಉತ್ಪನ್ನೇ ಬೆಳೆಯಬೇಕು. ಈ ರೀತಿ ಬೆಳೆದ ಬೆಳೆಗೆ ಪೂರ್ವಭಾವಿಯಾಗಿ ಬೆಲೆ ನಿಗದಿಗೊಳಿಸಿರುತ್ತವೆ. ಬೆಳೆ ಬಂದ ನಂತರ ನಿಗದಿಯಾದ ಬೆಲೆಯನ್ನು ನೀಡಿ ರೈತರ ಉತ್ಪನ್ನವನ್ನು ಖರೀದಿ ಮಾಡುತ್ತವೆ. ಇದೇ ಗುತ್ತಿಗೆ ಕೃಷಿ ಪದ್ಧತಿಯಾಗಿದೆ.

ಭಾರತದಲ್ಲಿ ಮೊದಲಿಗೆ ಪಂಜಾಬ್ ರಾಜ್ಯದಲ್ಲಿ ಪ್ರಾಯೋಗಿಕವಾಗಿ ಈ ನೀತಿಯನ್ನು ಅನುಸರಿಸಲಾಯಿತು.ಈ ಹೊಸ ಪದ್ಧತಿ ಬಂದಾಗ ಪಂಜಾಬ್ ರೈತರು ಖುಷಿಗೊಂಡಿದ್ದರು. ಇಂಥ ಖಾಸಗಿ ಕಂಪನಿಗಳು ಪಂಜಾಬ್ ರೈತರಲ್ಲಿ ಒಪ್ಪಂದ ಮಾಡಿಕೊಂಡವು. ವರ್ಷಕ್ಕೆರಡು ಬೆಳೆ ಬೆಳೆಯಬಹುದಾದ ಭತ್ತಕ್ಕೆ ಪ್ರತಿಕ್ವಿಂಟಾಲ್‌ಗೆ ೧೩೫೦ ರೂಪಾಯಿಗಳನ್ನು ನಿಗದಿಗೊಳಿಸಿತ್ತು. ಆದರೆ ಈ ಕಂಪನಿಗಳು ಬೆಳೆ ಬಂದ ನಂತರದಲ್ಲಿ ಪ್ರತಿಕ್ವಿಟಾಲ್ ಬತ್ತಕ್ಕೆ ೭೦೦ ರೂಪಾಯಿ ಮಾತ್ರ. ಈ ಪದ್ಧತಿಯನ್ನು ಗಮನಿಸಿದಾಗ, ೧೮೬೦ರಲ್ಲಿ ಬಂಗಾಳದಲ್ಲಿ ನೀಲಿ ಬೆಳೆಗಾರರ ಸ್ಥಿತಿಯನ್ನು ನೆನಪಿಸುತ್ತದೆ. ಈ ಗುತ್ತಿಗೆ ಪದ್ಧತಿಯು ಮುದೊಂದು ದಿನ ಲಾಭ ತರುವಂಥ, ತಾನು ಹೇಳಿದ ವಾಣಿಜ್ಯ ಬೆಳೆಗಳನ್ನೇ ಬೆಳೆಯಲು ನಿರ್ದೇಶಿಸಬಹುದು. ಇದರಿಂದ ಆಹಾರೋತ್ಪನ್ನದ ಕೊರತೆ ಎದುರಿಸುವುದರ ಜೊತೆಗೆ, ಇಲ್ಲಿನ ರೈತರನ್ನು ಕ್ರಮೇಣ ಕೂಲಿಕಾರ್ಮಿಕರನ್ನಾಗಿ ಮಾಡಿಕೊಂಡು, ಈ ಗುತ್ತಿಗೆ ಕೃಷಿಕ ಭೂಮಾಲೀಕನಾಗುವ ಕಾಲ ದೂರವಿಲ್ಲ.ಇದೊಂದು ರೀತಿಯಲ್ಲಿ ಕೃಷಿಯಲ್ಲಿ ಉತ್ಪಾದನೆಯ ಲಾಭದ, ಆರ್ಥಿಕ ವೃದ್ಧಿಯ ಮತ್ತು ಅಭಿವೃದ್ಧಿಯ ಹೆಸರಿನಲ್ಲಿ ಸದ್ದಿಲ್ಲದೆ ತಣ್ಣಗೆ ನಡೆಯುತ್ತಿರುವ ಭೂ ಆಕ್ರಮಣವೆಂದೇ ಗುರುತಿಸಬಹುದು.

ಈಗಾಗಲೇ ಇಂಥ ಗಾಳಿ ಕರ್ನಾಟಕಕ್ಕೂ ಬೀಸಿದೆ.೧೮.೭.೨೦೦೭ ರಂದು ಕರ್ನಾಟಕ ಸರ್ಕಾರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ಕಾಯಿದೆಗೆ ತಿದ್ದುಪಡಿ ತರಲಾಗಿದೆ. ಈ ತಿದ್ದುಪಡಿಯ ಮೂಲಕ ಮೆಟ್ರೋ ಕ್ಯಾಶ್ ಅಂಡ್ ಕ್ಯಾರಿ, ರಿಯಲನ್ಸ್ ಫುಡ್ ಮುಂತಾದ ಕಂಪೆನಿಗಳಿಗೆ ದಾರಿ ಮಾಡಿಕೊಟ್ಟಂತಾಗಿದೆ. ರೈತರ ಹಿತಕಾಯುವಂಥ ರೈತರ ಉತ್ಪನ್ನಗಳಿಗೆ ಒಳ್ಳೆಯ ಬೆಲೆ,ದಲ್ಲಾಳಿಗಳ ದಂಧೆಯಿಂದ ಮುಕ್ತಗೊಳಿಸುವಂಥ ಆಶಯವನ್ನು ಸರ್ಕಾರವು ಹೊಂದಿತ್ತು. ಆದರೆ ಈ ಕಾಯ್ದೆಗೆ ತಿದ್ದುಪಡಿ ತಂದಿರುವುದು ರೈತರ ಬುಡಕ್ಕೆ ಪೆಟ್ಟು ನೀಡುವಂತಾಗಿದೆ. ಈ ಕಾಯ್ದೆಯ ತಿದ್ದುಪಡಿಗೆ ಕೇಂದ್ರಸರ್ಕಾರದ ಒತ್ತಾಯವೂ ಸಹ ಇದೆ. ಇದರಿಂದಾಗಿ ಇಂದು ಸ್ಥಳೀಯ ವ್ಯಾಪಾರಿಗಳು, ರೈತರು ಸೇರಿ ಕಾಯ್ದೆಯ ತಿದ್ದುಪಡಿಯ ವಿರುದ್ಧ ಹೋರಾಟ ನಡೆಸಲು ಸಿದ್ಧತೆ ನಡೆಸುತ್ತಿದ್ದಾರೆ.

### ೩.೩ ಭೂಮಿ ಕುರಿತ ಚಿಂತನೆಗಳು ಮತ್ತು ಭೂ ಪ್ರಶ್ನೆಗಳು

ಭೂ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಜಗತ್ತಿನಲ್ಲಿ ಹಲವು ಚಿಂತನೆಗಳು ಮೂಡಿಬಂದಿವೆ. ಹಾಗೆಯೇ ಭಾರತೀಯ ಸಂದರ್ಭದಲ್ಲಿ ಭೂ ಪ್ರಶ್ನೆ ಕುರಿತು ಆಲೋಚಿಸಿ, ಭೂ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಹಲವು ಚಿಂತಕರು ಯತ್ನಿಸಿದ್ದಾರೆ. ಭೂ ಪ್ರಶ್ನೆಯನ್ನು ಬಗೆಹರಿಸಲು ಚಳವಳಿಗಳ ಮೂಲಕ, ಭೂ ಸುಧಾರಣೆಗಳ, ಆಲೋಚನೆಗಳ ಮೂಲಕ ಯತ್ನಿಸಿರುವುದನ್ನು ಗಮನಿಸಬಹುದು. ಮಾರ್ಕ್ಸ್ ಚಿಂತನೆ ಮತ್ತು ಭೂಮಿಯ ಪ್ರಶ್ನೆ,ಲೋಹಿಯಾ ಚಿಂತನೆ ಮತ್ತು ಭೂಮಿಯ ಪ್ರಶ್ನೆ, ಗಾಂಧಿ ಚಿಂತನೆ ಮತ್ತು ಭೂಮಿಯ ಪ್ರಶ್ನೆ ಹಾಗೂ ಅಂಬೇಡ್ಕರ್ ಚಿಂತನೆ ಮತ್ತು ಭೂಮಿಯ ಪ್ರಶ್ನೆಗೆ ಹೇಗೆ ಪ್ರತಿಕ್ರಿಯಿಸಿದೆ ಎಂಬುದನ್ನು ವಿಭಾಗದಲ್ಲಿ ಅಧ್ಯಯನ ಮಾಡಲಾಗುವುದು. ಚಿಂತಕರ ಮತ್ತು ಭೂ ಪ್ರಶ್ನೆಗಳ ನೆಲೆಯಲ್ಲಿ ಅಧ್ಯಯನದಲ್ಲಿ ಕರ್ನಾಟಕದ ಸಂದರ್ಭದ ಲೇಖಕರನ್ನು ಆಂಶಿಕವಾಗಿ ಚರ್ಚಿಸಲಾಗಿದೆ.

ಚಿಂತಕರ ಭೂ ರೈತ ಪ್ರಶ್ನೆಯನ್ನು ಅಧ್ಯಯನ ಮಾಡಲು ಇವರ ಅನುಯಾಯಿಗಳನ್ನು ಮತ್ತು ಚಿಂತನೆಗಳನ್ನು ಚರ್ಚಿಸಲಾಗಿದೆ. ಗಾಂಧಿ ಚಿಂತನೆಯ ಮತ್ತು ಗಾಂಧೀವಾದದಲ್ಲಿ ವಿನೋಬಾ ಭಾವೆ, ಗಣಪತಿಯಪ್ಪ, ಪ್ರೊ.ಎಂ.ಡಿ.ಎನ್., ಮುಂತಾದವರನ್ನು ವಿಶ್ಲೇಷಣೆ ಮಾಡಲಾಗಿದೆ. ಈ ಚಿಂತನೆಗಳು ಮುಂದುವರೆಯುವ,

ಬೆಳೆಯುವ ಪ್ರಕ್ರಿಯೆಯಾಗಿ ವಾದಗಳು ಹುಟ್ಟಿಕೊಂಡಿರುವುದರಿಂದ ಆ ನೆಲೆಯಲ್ಲೇ ಇಲ್ಲಿನ ಅಧ್ಯಯನ ಮಾಡಲಾಗಿದೆ.

### ೩.೩.೧ ಕಾರ್ಲ್ಸ್‌ಮಾರ್ಕ್ಸ್ ಚಿಂತನೆ ಮತ್ತು ಭೂಮಿಯ ಪ್ರಶ್ನೆ

ಕಾರ್ಲ್ ಮಾರ್ಕ್ಸ್ ಹೆಚ್ಚಾಗಿ ಕಾರ್ಮಿಕ ವರ್ಗವನ್ನು ಕುರಿತು ಚಿಂತಿಸಿದರೂ ಕೆಲವೊಮ್ಮೆ ರೈತರನ್ನು ಕುರಿತು ಆಲೋಚಿಸಿರುವುದನ್ನು ಕಾಣುತ್ತೇವೆ. ಮಾರ್ಕ್ಸ್ ಮುಖ್ಯವಾಗಿ ಖಾಸಗಿ ಆಸ್ತಿಯ ರದ್ದತಿ ಉತ್ಪದನಾ ಸಾಧನಗಳ ರಾಷ್ಟ್ರೀಕರಣದಿಂದ ಮಾತ್ರ ಜಗತ್ತಿನಲ್ಲಿ ಶೋಷಣೆ ನಿಲ್ಲುತ್ತದೆ ಎಂದು ಪ್ರತಿಪಾದಿಸಿದ. ಕೂಲಿಕಾರರು ಮಾಲೀಕರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ,ಅವರು ಪ್ರಭುತ್ವವನ್ನು ವಶಪಡಿಸಿಕೊಂಡು ತಮ್ಮದೇ ಆದ ರಾಜ್ಯವನ್ನು ಸ್ಥಾಪಿಸುತ್ತಾರೆ ಎಂದು ಮಾರ್ಕ್ಸ್ ನಂಬಿದ್ದ.

"ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಮಾನವನ ತನ್ನ ಶ್ರಮದಿಂದ, ತಾನು ಉತ್ಪಾದಿಸಿದ ವಸ್ತುವಿನಿಂದ ಹಾಗೂ ಕೊನೆಗೆ ಇತರರಿಂದ ಪರಕೀಯನಾಗುತ್ತಾನೆ. ಅಲ್ಲದೆ ಬಂಡವಾಳವಾದಿ ಸಮಾಜದಲ್ಲಿ ಪರಕೀಯ ಪ್ರಜ್ಞೆ ಅನುಭವಿಸಲು ಖಾಸಗಿ ಒಡೆತನವೇ ಮುಖ್ಯ ಕಾರಣ."[೨೫] ಇಲ್ಲಿಮಾರ್ಕ್ಸ್ ಖಾಸಗೀ ಹಕ್ಕುಗಳನ್ನು ಸಂಪೂರ್ಣವಾಗಿ ವಿರೋಧಿಸುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಈ ಖಾಸಗಿ ಒಡೆತನವನ್ನೇ ರದ್ದುಮಾಡಬೇಕು, ತನ್ನ ಶ್ರಮದಿಂದ ಉತ್ಪಾದಿಸುವ ವಸ್ತುವನ್ನು ತಾನೇ ಅನುಭೋಗಿಸಬೇಕೆಂಬ ವಾದವನ್ನು ಬಂಡವಾಳಶಾಹಿಗಳ ಎದುರು ಇಡುತ್ತಾರೆ.ಇದರಿಂದ ಕಾರ್ಮಿಕ ಅಥವಾ ಶ್ರಮಿಕ ಯಾವುದೇ ರೀತಿಯಲ್ಲಿ ಶೋಷಣೆಗೆ ಒಳಗಾಗಬಾರದು ಎಂಬ ಆಶಯ ಮಾರ್ಕ್ಸ್‌ನಲ್ಲಿ ಕಾಣುತ್ತೇವೆ. ಇಲ್ಲಿ ಖಾಸಗಿ ಆಸ್ತಿಕಲ್ಪನೆ ನಿರ್ಮೂಲನೆಯಾಗುವುದರಿಂದ ಒಡೆತನ ಪ್ರಶ್ನೆ ಉದ್ಭವವಾಗದು. ಶ್ರಮಿಕನೇ ಒಡೆಯನಾಗಬೇಕು. ಆತ ಉತ್ಪಾದಿಸಿದ ವಸ್ತುವಿಗೆ ಆತನೇ ಒಡೆತನ ಹೊಂದಬೇಕು. ಇದು ಮಾರ್ಕ್ಸ್‌ನ ಆಶಯವಾಗಿದೆ.

"ಎಲ್ಲಿಯವರೆಗೆ ಬಂಡವಾಳಶಾಹಿ ವ್ಯವಸ್ಥೆ ರೈತರನ್ನು ಶೋಷಿಸುತ್ತ ಇರುತ್ತದೋ ಅಲ್ಲಿಯವರೆಗೆ ರೈತ ಹೋರಾಟ ನಡೆಯುತ್ತಲೇ ಇರುತ್ತದೆ. ಬಂಡವಾಳಶಾಹಿಗಳಿಂದ ಕೂಲಿ ಪಡೆಯುವ ರೈತರು ತಾವು ನಿರ್ವಹಿಸಿದ ಶ್ರಮಕ್ಕಿಂತ ಕೂಲಿ ಕಡಿಮೆಯಿರುತ್ತದೆ ಎಂಬುದು ಗೊತ್ತೇ ಆಗುವುದಿಲ್ಲ. ಈ ವ್ಯತ್ಯಾಸವೆಲ್ಲ ಬಂಡವಾಳಗಾರರ ಕೈಸೇರುತ್ತದೆ. ಆಗ ರೈತ ಶೋಷಣೆಗೆ ಒಳಗಾಗುತ್ತಾನೆ. ದಂಗೆ ಆರಂಭವಾಗುತ್ತದೆ."[೨೬] ಮಾರ್ಕ್ಸ್‌ನಿಗೆ ರೈತರ ಬಗೆಗಿದ್ದ ಒಲವು ಮತ್ತು ಆರ್ಥಿಕ ಕಲ್ಪನೆಗಳು ಇದರಿಂದ ವ್ಯಕ್ತವಾಗುತ್ತವೆ.

ಆದರೆ ಕಾರ್ಲ್‌ಮಾರ್ಕ್ಸ್‌ನು ಒಂದೆಡೆ ರೈತ ವರ್ಗವನ್ನು ನಿರ್ಲಕ್ಷ್ಯ ನೆಲೆಯಿಂದಲೇ ನೋಡಿರುವುದನ್ನು ಕಾಣುತ್ತೇವೆ. ೧೮೪೮ರಲ್ಲಿ ನಡೆದ ಫ್ರೆಂಚ್‌ಕ್ರಾಂತಿಯಲ್ಲಿ ರೈತರು ಭಾಗವಹಿಸಲು ಹಿಂದೆ ಸರಿದಿದ್ದುದರಿಂದ ರೈತರ ಮೇಲಿನ ನಂಬುಗೆಯನ್ನು ಮಾರ್ಕ್ಸ್ ಕಳೆದುಕೊಂಡನು. ರೈತರು ಕ್ರಾಂತಿಮಾಡಲು ಅರ್ಹರೇ ಎಂಬುದು ಈತನ ಮೂಲಭೂತ ಪ್ರಶ್ನೆಯಾಗಿತ್ತು. ಈ ಕುರಿತು ಮಾರ್ಕ್ಸ್ ಹೇಳುವಂತೆ, "ಫ್ರೆಂಚ್ ಕ್ರಾಂತಿಯ ಸಂದರ್ಭದಲ್ಲಿ ನಗರದ ಕಾರ್ಮಿಕರು ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ದಂಗೆಯೆದ್ದಾಗ ಗ್ರಾಮೀಣ ರೈತರು ತಮ್ಮ ಭೂಮಾಲೀಕರ ವಿರುದ್ಧ ಸಾರ್ವತ್ರಿಕ ದಂಗೆ ನಡೆಸಲಿಲ್ಲ. ಅಷ್ಟೇ ಅಲ್ಲ, ಕಾರ್ಮಿಕರ ಕ್ರಾಂತಿ ಪ್ರಯತ್ನಗಳಿಗೆ ಬೆಂಬಲ ಕೊಡಲಿಲ್ಲ. ಅವರು ಪ್ರತಿಗಾಮಿಗಳೆಂದೂ ಹಳೆಯ ಕೃಷಿ ವ್ಯವಸ್ಥೆಯ ವರ್ಗ ಪದ್ಧತಿಗೆ ಅಂಟಿಕೊಂಡಿರುವ ಮೂಢ ಜನರೆಂದೂ ಛೀಮಾರಿ ಹಾಕಿದ್ದಾನೆ. ಇದೇ ವ್ಯಗ್ರಭಾವದಿಂದ ಅವನು ರೈತರನ್ನು ವ್ಯಕ್ತಿತ್ವವಿಲ್ಲದ, ಒಗ್ಗೂಡಲು ಬಾರದ ಬಟಾಟೆ ಮೂಟೆಗಳೆಂದು ಗೇಲಿ ಮಾಡಿದ್ದಾನೆ."[೨೭]

"ಖಾಸಗಿ ಆಸ್ತಿ ಒಂದು ವರ್ಗಕ್ಕೆ ಶಕ್ತಿಯನ್ನು, ಇನ್ನೊಂದು ವರ್ಗಕ್ಕೆ ದುಃಖವನ್ನು ತರುತ್ತದೆ.ಖಾಸಗಿ ಆಸ್ತಿಯ ನಿರ್ಮೂಲನದಿಂದ ಈ ದುಃಖ ನಿವಾರಣೆಯ ಅಗತ್ಯವಿದೆ"[೨೮] ಎಂದು ಹೇಳಿದ್ದಾನೆ.

ಮಾರ್ಕ್ಸ್‌ವಾದದ ಮುಂದುವರೆದ ಭಾಗವಾಗಿ ಅವರ ಅನುಯಾಯಿಗಳಾದ ಏಂಗೆಲ್ಸ್, ಲೆನಿನ್ ಮತ್ತು ಮಾವೋ ಮೊದಲಾದ ನಾಯಕರು ತಮ್ಮ ರೈತಪರವಾದ ಚಿಂತನೆಯನ್ನು ಪರಿಚಯಿಸಿದರು. ಈ ನಾಯಕರು ಕಮ್ಯುನಿಸಂ ತತ್ವವನ್ನೇ ತಮ್ಮ ಆಲೋಚನೆಯ ಆಧಾರವಾಗಿಟ್ಟುಕೊಂಡು ರೈತಪರ ತಮ್ಮ ನಿಲುವುಗಳನ್ನು ಪ್ರತಿಪಾದಿಸಿದ್ದಾರೆ.

ಮಾರ್ಕ್ಸ್‌ನ ಅನುಯಾಯಿ ಏಂಗೆಲ್ಸ್ ಕೂಡಾ ರೈತರ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸುತ್ತಾನೆ. ಇಲ್ಲಿ ರೈತ ವರ್ಗವನ್ನು ಮೂರು ಗುಂಪುಗಳಾಗಿ ವಿಂಗಡಿಸಿ ಅದರಲ್ಲಿ ಹೋರಾಟದ ಕಿಡಿ ಹಚ್ಚಬಲ್ಲ ಮತ್ತು ಸಂಘಟನಾತ್ಮಕ ಹೋರಾಟ ನಡೆಸಬಲ್ಲ ವರ್ಗವನ್ನು ಗುರುತಿಸುತ್ತಾನೆ. ಈ ಕುರಿತು, "ಒಂದು ವರ್ಗ ಭೂಮಾಲೀಕರ ವರ್ಗ. ಇವರು ಗ್ರಾಮವಾಸಿಗಳಾದರೂ ಕ್ರಾಂತಿಗೆ ವಿರುದ್ಧವಾಗಿದ್ದಾರೆ. ಚಿಕ್ಕ ರೈತರೂ ಗೇಣಿ ರೈತರೂ ಕೂಡಿದ ಇನ್ನೊಂದು ವರ್ಗವಿದೆ. ಇವರೂ ಕೂಡ ಕ್ರಾಂತಿಕಾರರಲ್ಲ. ಮೂರನೆಯ ವರ್ಗದಲ್ಲಿ ಭೂಮಿಹೀನ ಕೃಷಿ ಕೂಲಿಕಾರರಿದ್ದಾರೆ. ಈ ಮೂರು ವರ್ಗಗಳಲ್ಲಿ ಕೃಷಿ ಕೂಲಿಕಾರರು ಮಾತ್ರ ಕೃಷಿಯೇತರ ಕಾರ್ಮಿಕರೊಡನೆ ಕೂಡಿಕೊಂಡು ಹೋರಾಟ ನಡೆಸಿ ಕ್ರಾಂತಿ ತರಬಲ್ಲರು."[೨೯] ಎಂಬುದು ಏಂಗೆಲ್ಸ್‌ನ ನಂಬಿಕೆಯಾಗಿದೆ. ಇಲ್ಲಿ ಮೂಲಭೂತವಾಗಿ ರೈತರಲ್ಲಿ ಸಂಘಟನೆಯಿಲ್ಲ. ಈ ಭೂಮಾಲೀಕ ರೈತವರ್ಗ ಆಡಳಿತಪರವಾಗಿದ್ದು ಅದು ಕ್ರಾಂತಿ ವಿರೋಧಿಯಾಗಿ ವರ್ತಿಸುವುದನ್ನು ಇಂದಿಗೂ ಕಾಣುತ್ತೇವೆ. ಯಾವಾಗಲೂ ರಾಜಕೀಯ ಕುರಿತು ಅಷ್ಟೇನು ಆಸಕ್ತಿವಹಿಸದ ಈ ವರ್ಗವು ಇಂದಿಗೂ ಅಂತಹ ಸ್ಥಿತಿಯಲ್ಲಿದೆ. ಈ ಹಿನ್ನೆಲೆಯಲ್ಲಿ ಕೃಷಿ ಕೂಲಿಕಾರ್ಮಿಕರು ಕೃಷಿಯೇತರ ಕಾರ್ಮಿಕರ ಜೊತೆಗೂಡಿ ತಮಗಾಗುವ ಅನ್ಯಾಯದ ವಿರುದ್ಧ ಬಂಡವಾಳಶಾಹಿ ವಿರುದ್ಧ ಭೂಮಾಲೀಕರ ವಿರುದ್ಧ ಹೋರಾಟದಲ್ಲಿ ಭಾಗವಹಿಸಿ ಕ್ರಾಂತಿ ತರಬಲ್ಲರು ಎಂಬುದು ಏಂಗೆಲ್ಸ್‌ರ ನಂಬಿಕೆ.

ಇಂಥ ಆಲೋಚನೆಗಳು ಭಾರತಕ್ಕೂ ಕಾಲಿಟ್ಟ ನಂತರದಲ್ಲಿ ಮಾರ್ಕ್ಸ್ ಸಿದ್ಧಾಂತದ ತಳಹದಿಯ ಮೇಲೆ ಇಲ್ಲಿ ಅನೇಕ ಹೋರಾಟಗಳು ನಡೆದವು. ಈ ಕಾರಣಕ್ಕಾಗಿ ಭಾರತದಲ್ಲಿ ಇಂದಿಗೂ ಶಕ್ತಿಯುತವಾದ ಕಾರ್ಮಿಕ ಸಂಘಟನೆಗಳು ಅಸ್ತಿತ್ವದಲ್ಲಿವೆ. ಅಲ್ಲದೆ ಈ ಕಾರ್ಮಿಕ ಸಂಘಟನೆಗಳು ರೈತರನ್ನು ಒಗ್ಗೂಡಿಸಲು ಯತ್ನಿಸಿರುವುದು ಕಂಡುಬರುತ್ತದೆ. ಇದರ ಪರಿಣಾಮ ಭಾರತದಲ್ಲಿ ಮಾರ್ಕ್ಸ್‌ವಾದಿಗಳು ರೈತರನ್ನು ಸಂಘಟಿಸಲು ಯಶಸ್ವಿಯಾಗಿ, ಅನೇಕ ಕ್ರಾಂತಿಕಾರಕ ಹೋರಾಟಗಳಲ್ಲಿ ಭಾಗವಹಿಸಿ ಯಶಸ್ವಿಯಾಗಿದ್ದಾರೆ.

ಭಾರತದಲ್ಲಿ ಕಮ್ಯುನಿಸ್ಟ್ ಪಕ್ಷವು ೧೯೨೦ ರಲ್ಲಿ ಉದಯವಾಯಿತು. ಎಂ.ಎನ್.ರಾಯ್‌ರವರು ಆಗಿನ ಸ್ಥಾಪಕ ಸದಸ್ಯರಾಗಿದ್ದರು. ಕಾರ್ಮಿಕ ಹಾಗೂ ರೈತರಿಂದ ಸಾಧ್ಯವಾಗಬಹುದಾದ ಭಾರತದ ಕ್ರಾಂತಿಯು ರಷ್ಯಾದ ಮಾದರಿಯಲ್ಲೇ ಇರುತ್ತದೆ ಎಂಬುದು ಇವರ ನಿಲುವಾಗಿತ್ತು. ರಾಯ್ ಅವರಿಗೆ ಈ ರೀತಿಯ ದೂರದೃಷ್ಟಿ ಹಾಗೂ ರೈತರ ಕುರಿತಾದ ಅವರ ಕಾಳಜಿಗಳು ಈ ನಿಲುವಿನಲ್ಲಿ ವ್ಯಕ್ತವಾಗಿವೆ.ಅಲ್ಲದೆ ರೈತರ ಬಗೆಗಿದ್ದ ನಿಲುವುಗಳು, ಹೋರಾಟದ ಹಾದಿಗಳು ಇವರಲ್ಲಿ ಸ್ಪಷ್ಟವಾಗಿ ಕಾಣುತ್ತವೆ. "ತೀವ್ರ ನಿರ್ಲಕ್ಷ್ಯಕ್ಕೊಳಗಾಗಿದ್ದ ರೈತರ ಪ್ರಶ್ನೆಗಳು, ಜಮೀನುದಾರರಲ್ಲಿದ್ದ ನೂರಾರು ಎಕರೆ ವಿಸ್ತಾರವಾದ ಎಸ್ಟೇಟುಗಳು, ರೈತರಲ್ಲಿದ್ದ ತೀವ್ರ ನಿರ್ಲಕ್ಷ್ಯಕ್ಕೊಳಗಾದ ಭೂಮಿಯ ಬಯಕೆ ಮತ್ತು ಭಾರತದ ಹಳ್ಳಿಗಳಲ್ಲಿದ್ದ ಎದೆಗುಂದಿಸುವ ಬಡತನ ಇವುಗಳೆಲ್ಲ ರಾಯ್ ನಿಲುವನ್ನು ಮತ್ತಷ್ಟು ಗಟ್ಟಿಗೊಳಿಸಿದವು."[೩೦]

ಈ ಮಾತಿನಿಂದ ಅವರಿಗೆ ರೈತರ ಬಗೆಗಿದ್ದ ಅರಿವು ಅವರ ಸಮಸ್ಯೆಗಳನ್ನು ಅರ್ಥೈಸಿಕೊಂಡು ಹೋರಾಟವನ್ನು ರೂಪಿಸಿರುವುದನ್ನು ಕಾಣುತ್ತೇವೆ. ಇದೇ ಕಾಲಕ್ಕೆ ಭಾರತದಲ್ಲಿ ರಾಷ್ಟ್ರೀಯ ಕಾಂಗ್ರೆಸ್‌ಗೆ ಪ್ರತಿನಾಯಕತ್ವವಾಗಿ ಕಮ್ಯುನಿಸ್ಟ್ ಸಿದ್ಧಾಂತದ ತಳಹದಿಯ ಮೇಲೆ ಇಂತಹ ನಾಯಕರು ಬಂದಿರುವುದನ್ನು ಗುರುತಿಸಬಹುದಾಗಿದೆ. ಈ ಪಕ್ಷದ ಮತ್ತೊರ್ವ ನಾಯಕರಾದ ಸಿ.ಆರ್.ದಾಸ್ ಭಾರತದಲ್ಲಿ ರೈತ ಕಾರ್ಮಿಕ ಪಕ್ಷವನ್ನು ಹುಟ್ಟುಹಾಕಿದರು. ರೈತರು ಮತ್ತು ಕಾರ್ಮಿಕರ ಹಾಗೂ ನಾಯಕರ ನಡುವಿನ ಗೊಂದಲದಿಂದಾಗಿ ಯುನೈಟೆಡ್ ಫ್ರಂಟ್ ಮತ್ತು ಕಿಸಾನ್ ಸಭಾಗಳು ಅಸ್ತಿತ್ವಕ್ಕೆ ಬಂದವು. ಇದರ ನಡುವೆ ಬಿಹಾರ್ ಪ್ರೊವಿನ್ಸಿಯಲ್ ಕಿಸಾನ್ ಸಭಾವು ಕೂಡ ಅಸ್ತಿತ್ವಕ್ಕೆ ಬಂದಿತು. ಅದೂ ಕೂಡಾ ರೈತ ಪ್ರಶ್ನೆಯನ್ನು ಪ್ರಮುಖವಾಗಿ ಕಂಡುಕೊಳ್ಳತೊಡಗಿ ಅದಕ್ಕೆ ಪರಿಹಾರವನ್ನು ಸೂಚಿಸಲು ಯತ್ನಿಸಿತು.

ಆಗಿನ ಆಂಧ್ರಪ್ರದೇಶದಲ್ಲಿ ರೈತರ ಪ್ರಶ್ನೆ ಜ್ವಲಂತವಾಗಿದ್ದ ಸಂದರ್ಭದಲ್ಲಿ, ಆಂಧ್ರಪ್ರಾಂತೀಯ ರೈತರ ಅಸೋಸಿಯೇಷನ್ ಸ್ಥಾಪನೆ ಮಾಡಲಾಯಿತು. ಈ ಸಂಘಕ್ಕೆ ಪ್ರೊ.ಎನ್.ಜಿ.ರಂಗಾರವರು ನಾಯಕತ್ವವಹಿಸಿಕೊಂಡರು. ಈ ಸಂದರ್ಭದಲ್ಲಿ,ಇವರಿಗೆ ಶ್ರೀಮಂತ ರೈತನಾಯಕ ಎಂಬ ಅಪವಾದ ಹೊರಿಸಲಾಯಿತು. ಇಂತಹ ನಾಯಕತ್ವದಿಂದ ತಾವು ಹೊರಬಂದು ಬಡವರ ಪರವಾದ ನಾಯಕತ್ವವನ್ನು ಸ್ವಾಮಿಸಹಜಾನಂದರಿಗೆ ವಹಿಸಲಾಯಿತು. ಈ ಸಂದರ್ಭದಲ್ಲಿ ಅಖಿಲಭಾರತ ಕಿಸಾನ್‌ಸಭಾ ಮತ್ತು ಸಿಪಿಐ ಎಡಪಂಥೀಯ ರೈತ ದಂಗೆಗಳನ್ನು ಸಂಘಟಿಸಿ ಬಂಗಾಳದ ತೆಭಾಗ ಹೋರಾಟವನ್ನು ೧೯೪೬ರಿಂದ ೪೭ ರವರೆಗೆ

ನಡೆಸಿತು. ಆನಂತರದಲ್ಲಿ ತೆಲಂಗಾಣ ರೈತದಂಗೆ ೧೯೪೬ರಿಂದ ೫೧ರವರೆಗೆ ನಡೆಸಿತು. ಈ ಕ್ರಾಂತಿಗಳಲ್ಲಿ ಕಮ್ಯುನಿಸ್ಟ್ ಸೈದ್ಧಾಂತಿಕ ತಳಹದಿಯ ಮೇಲೆ ರೈತ ಸಂಘಟನೆಗಳು ಹೋರಾಟಗಳಲ್ಲಿ ಯಶಸ್ವಿಯಾಗಿರುವುದನ್ನು ಕಾಣುತ್ತೇವೆ.

ಮಾರ್ಕ್ಸ್ ಸೈದ್ಧಾಂತಿಕ ತಳಹದಿಯ ಕಮ್ಯುನಿಸ್ಟ್ ಸಂಘಟನೆಯಾದ ಕಿಸಾನ್ ಸಭಾದ ಘಟಕವು ಕರ್ನಾಟಕದಲ್ಲೂ ಅಸ್ತಿತ್ವಕ್ಕೆ ಬಂದಿತು. ಇಂತಹ ಸಂಘಟನಾತ್ಮಕ ರೈತ ಹೋರಾಟವು ೧೯೩೦ರಲ್ಲಿ ಅಂಕೋಲಾದಲ್ಲಿ ನಡೆದಿರುವುದನ್ನು ಗಮನಿಸಬಹುದು. ಕರನಿರಾಕರಣೆ ಚಳುವಳಿಯ ಮೂಲಕ ಕರಾವಳಿ ಪ್ರದೇಶದುದ್ದಕ್ಕೂ ರೈತ ಹೋರಾಟವನ್ನು ಸಂಘಟಿಸಲಾಯಿತು. ಈ ಭಾಗದ ನಾಯಕರಾದ ದಿನಕರ ದೇಸಾಯಿ, ಗಿರಿ ಪಿಕಳೆ, ಎಸ್.ಉಪಾಧ್ಯಾಯ, ಎನ್.ಜಿ.ಮಾಳಸೇಕರ್, ಪುರುಷೋತ್ತಮ ಜೋಗನಾಯಕ್ ಮೊದಲಾದವರು ಕಮ್ಯುನಿಸ್ಟ್ಸೈದ್ಧಾಂತಿಕ ತಳಹದಿಯಮೇಲೆ ರೈತ ಹೋರಾಟವನ್ನು ರೂಪಿಸಿದರು. ಇದೇ ಕಾಲಕ್ಕೆ ೧೯೪೨ರಲ್ಲಿ ಈಸೂರು ಗ್ರಾಮದಲ್ಲಿ ಈ ಸಂಘಟನೆಯು ರೈತ ಚಳವಳಿಯನ್ನು ನಡೆಸಿರುವುದನ್ನು ಕಾಣುತ್ತೇವೆ. ಮಂಗಳೂರಿನ ಮೂಲ್ಕಿಯಲ್ಲಿ ನಡೆದ ಭೂ ಹೋರಾಟವನ್ನು ಕಿಸಾನ್ ಸಭಾವು ಕೆಗೆತ್ತಿಕೊಂಡು ಹೋರಾಟ ನಡೆಸಿ ಭೂಮಿಯನ್ನು ಭೂಹೀನರಿಗೆ ಹಂಚಿತು. ಆನಂತರದಲ್ಲಿ ಕಿಸಾನ್ ಸಭಾದ ನಾಯಕರೇ ಈ ಸಂಘಟನೆಯ ಹೆಸರನ್ನು ಬದಲಾಯಿಸಿ "ಕರ್ನಾಟಕ ರಾಜ್ಯ ಪ್ರಾಂತ ರೈತ ಸಂಘ" ಎಂಬ ಹೆಸರಿನಲ್ಲಿ ಕರ್ನಾಟಕದಾದ್ಯಂತ ಹೋರಾಟ ನಡೆಸುತ್ತಾ ಬಂದಿರುವುದು ಕಂಡುಬರುತ್ತದೆ. ಈ ಸಂಘಟನೆಯ ಹೋರಾಟಗಳು ಮೈಸೂರು, ಕೋಲಾರ, ಹೈದ್ರಾಬಾದ್ ಕರ್ನಾಟಕ, ಕೊಡಗು, ಹಳಿಯಾಳದ ಅರಣ್ಯ ಭೂಮಿ ಆಕ್ರಮಣ ಚಳುವಳಿ, ತಾತಗುಣಿ ಎಸ್ಟೇಟ್ ಕೃಷಿ ಕಾರ್ಮಿಕರ ಹೋರಾಟ, ಹೊಸಕೋಟೆ ತಾಲ್ಲೂಕು ಭೂ ಹೋರಾಟ, ಮಲಪ್ರಭ ರೈತ ಹೋರಾಟ, ಭೂ ನ್ಯಾಯಮಂಡಳಿಗಳ ಅನ್ಯಾಯದ ವಿರುದ್ಧ ಹೋರಾಟ, ಬಳ್ಳಾರಿ ಗಿರಿಜನರ ಹೋರಾಟಗಳು, ಇತ್ತೀಚಿನ ಬಾಗೂರು ನವಿಲೆ ರೈತ ಹೋರಾಟದವರೆಗೂ ಈ ಸಂಘಟನೆಯು ಭೂ ಸಂಬಂಧಿ ಹೋರಾಟಗಳನ್ನುನಡೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ.

ಕಿಸಾನ್ಸಭಾ ಹಾಗೂ ರೈತ ಸಂಘಟನೆಯ ಮೂಲಕ ಮಾರ್ಕ್ಸ್‌ವಾದ ಹೊಸ ಹರವು ಪಡೆದು ರೈತ ಸಮಸ್ಯೆಗೆ ಹಾಗೂ ಭೂ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಭಾರತದಲ್ಲಿ ಯತ್ನಿಸಿರುವುದನ್ನು ಗುರುತಿಸಲಾಗಿದೆ. ಈ ಮಾರ್ಕ್ಸ್‌ವಾದದಲ್ಲಿ ಕ್ಷಿಪ್ರಕ್ರಾಂತಿಯ ಮೂಲಕ ಬಂಡವಾಳಶಾಹಿಯನ್ನು ಬಗ್ಗು ಬಡಿದು ಆಡಳಿತವನ್ನು ತನ್ನ ವಶಕ್ಕೆ ಪಡೆಯಬೇಕೆಂಬ ಆಶಯವನ್ನು ಕಾರ್ಮಿಕವರ್ಗ, ರೈತವರ್ಗ ಹೊಂದಿರುವುದು ಕಂಡುಬರುತ್ತದೆ. ಆದರೆ ಇಂಥ ಹೋರಾಟಗಳು ಭಾರತದಂಥ ಪ್ರಜಾಪ್ರಭುತ್ವ ರಾಷ್ಟ್ರಗಳಿಗೆ ಎಷ್ಟರಮಟ್ಟಿಗೆ ಸಾಧ್ಯ ಎಂಬುದು ಆಲೋಚಿಸಬೇಕಾದ ಸಂಗತಿಯಾಗಿದೆ. ಬಂಡವಾಳಶಾಹಿಯ ನಾಶವೇ ಮಾರ್ಕ್ಸ್‌ವಾದದ ವಿಜಯ ಮತ್ತು ಕಾರ್ಮಿಕರೇ ಮಾಲೀಕರಾಗಬೇಕೆಂಬ ಹಂಬಲವನ್ನು ಇದು ಹೊತ್ತಿದೆ. ಇದು ವಾಸ್ತವದಲ್ಲಿ ಇಂಥ ವಾದದಿಂದ ಭೂಮಿ ಕುರಿತಾಗಲೀ ಖಾಸಗಿ ಒಡೆತನವನ್ನು ನಾಶಗೊಳಿಸುವ ಆಶಯಗಳು ಎಷ್ಟರಮಟ್ಟಿಗೆ ನಡೆಯುತ್ತವೆ ಎಂಬುದು ಚಿಂತನಾರ್ಹವಾಗಿವೆ.

ಮಾರ್ಕ್ಸ್‌ವಾದವು ಭಾರತದಲ್ಲಿ ಹೊಸ ರೂಪು ತಳೆದು ಹೊಸಬಗೆಯಲ್ಲಿ ಭೂ ಸಮಸ್ಯೆಗೆಪರಿಹಾರ ಸೂಚಿಸಲು ಯತ್ನಿಸಿದೆ. ಈ ಕುರಿತು ಕರ್ನಾಟಕದ ಸಂದರ್ಭದಲ್ಲಿ ಮಾರ್ಕ್ಸ್‌ವಾದೀ ನೆಲೆಯ ಚಿಂತಕರನ್ನು ಕುರಿತು ಮುಂದೆ ವಿಶ್ಲೇಷಿಸಲಾಗಿದೆ.

### ೧. ದಿನಕರ ದೇಸಾಯಿ

ಕರ್ನಾಟಕದಲ್ಲಿ ಗೇಣಿರೈತರ ಹೋರಾಟದ ಕಿಡಿಯನ್ನು ಹಚ್ಚಿದವರಲ್ಲಿ ದಿನಕರ ದೇಸಾಯಿಯವರು ಪ್ರಮುಖರು. ೧೯೩೦ ರಿಂದ ೧೯೫೦ರವರೆಗೆ ಉತ್ತರ ಕನ್ನಡ ಜಿಲ್ಲೆಯಲ್ಲಿ ರೈತರಿಗಾಗುತ್ತಿದ್ದ ಅನ್ಯಾಯ, ಶೋಷಣೆ ವಿರುದ್ಧ ಹೋರಾಟವನ್ನು ಕಟ್ಟಿದರು. ಈ ನಿಟ್ಟಿನಲ್ಲಿ ರೈತ ಸಮಸ್ಯೆಗಳನ್ನು ಪರಿಹರಿಸಲು ರೈತ ಸಂಘಟನೆಯನ್ನು ಸ್ಥಾಪಿಸಿದರು. ಗೇಣಿ ರೈತರನ್ನು ಭೂಮಾಲೀಕರು ನಡೆಸಿಕೊಳ್ಳುತ್ತಿದ್ದ ರೀತಿ, ಗೇಣಿಯ ಪ್ರಮಾಣ, ಶೋಷಣೆಗಳು ದೇಸಾಯಿಯವರನ್ನು ಚಳುವಳಿಯನ್ನು ರೂಪಿಸುವಂತೆ ಪ್ರೇರೇಪಿಸಿತು.

ದೇಸಾಯಿಯವರು ರೈತ ಸಂಘಟನೆಯ ಮೂಲಕ ಸಭೆಯನ್ನು ಸೇರಿಸಿ ಗೇಣಿರೈತರನ್ನು ಹೋರಾಟಕ್ಕೆ ಅಣಿಗೊಳಿಸುತ್ತಿದ್ದರು. ಅದೇ ಕಾಲಕ್ಕೆ ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಯ ಅಜೀವ ಸದಸ್ಯರಾಗಿದ್ದ ದಿನಕರರು

ರೈತರ ಕೂಲಿಕಾರರ, ಮೀನುಗಾರರ, ಕೃಷಿಕಾರ್ಮಿಕರ ಸಮಸ್ಯೆಗಳನ್ನೆಲ್ಲಾ ಅರಿಯತೊಡಗಿದ್ದರು. ರೈತರು ತಮಗಾದ ಅನ್ಯಾಯದ ವಿರುದ್ಧ, ಭೂಮಾಲೀಕರ ವಿರುದ್ಧ ಗೇಣಿ ರದ್ಧತಿ ಮಾಡುವ ವಿಚಾರದಲ್ಲಿ ಭೂಮಾಲೀಕರ ಜೊತೆಗೆ ನೇರವಾಗಿ ಹೋರಾಟಕ್ಕೆ ಇಳಿಯುತ್ತಿದ್ದರು. ಈ ಕುರಿತು ದಿನಕರ ದೇಸಾಯಿ ಹೇಳುವಂತೆ "ಉಳುವವನೆ ನೆಲದ ಒಡೆಯನಾಗಬೇಕಾದುದು ನ್ಯಾಯ. ತಮ್ಮ ತಮ್ಮ ಹೊಲದ ಒಡೆತನ ಪಡೆಯುವುದು ರೈತರ ಜನ್ಮಸಿದ್ಧ ಹಕ್ಕು. ಆದ್ದರಿಂದ ನಮ್ಮ ಭೂಮಾಲೀಕರು ಈ ವಿಷಯದಲ್ಲಿ ಹಟಮಾರಿತನದ ವಿಚಾರವನ್ನು ಬಿಟ್ಟುಕೊಟ್ಟರೆ? ಅವರಿಗೆ ಒಳ್ಳೆಯದು. ಈಗಿರುವ ಗೇಣಿ ದರವನ್ನು ೧:೩, ೧:೫, ೧:೧೦ ಹೀಗೆ ಇಳಿಸುತ್ತಾ ಹೋಗಿ ಮುಂದೆ ತಮ್ಮ ಹೆಸರಿನಲ್ಲಿರುವ ಜಮೀನನ್ನು ರೈತರಿಗೆ ಖಾತೆ ಹಾಕಿ ಕೊಡುವ ದೊಡ್ಡ ಮನಸ್ಸು ಅವರು ಮಾಡಲಿ. ಮಧ್ಯಮ ವರ್ಗದ ಭೂಮಾಲೀಕರು ಭೂಮಿ ಕಳೆದುಕೊಳ್ಳುವುದರಿಂದ ತೊಂದರೆಗೊಳಗಾಗದಂತೆ ನೋಡಿಕೊಳ್ಳುವ ಹೊಣೆ ಸರ್ಕಾರದ್ದು. ರೈತನಿಂದ ಸರಕಾರವು ಭೂಮಾಲೀಕರಿಗೆ ಒಂದೇ ಗಂಟಿನಲ್ಲಿ ಪರಿಹಾರ ನೀಡಲಿ. ಬಹಳ ಶ್ರೀಮಂತ ಭೂಮಾಲೀಕರಿಗೆ ಸರಕಾರ ಧನಸಹಾಯ ನೀಡುವ ಅವಶ್ಯಕತೆಯಿಲ್ಲ."[೩೧]

ಈ ರೀತಿ ದೇಸಾಯಿಯವರ ನಿಲುವು ಸಾಮಾನ್ಯ ರೈತರ ಪರವಾಗಿತ್ತು. ಆಗಿದ್ದ ಭೂಮಾಲೀಕರ ಹಿಡಿತದಲ್ಲಿ ಭೂಮಿಯನ್ನು ಕೊಡಿಸುವಲ್ಲಿ ತಮ್ಮದೇ ಸೈದ್ಧಾಂತಿಕ ನೆಲೆಯ ಭೂ ಹೋರಾಟದಲ್ಲಿ ತೊಡಗಿದ್ದರು. ಇಂತಹ ಹೋರಾಟದಿಂದಾಗಿ ಈ ಭಾಗದ ಭೂಮಾಲೀಕರ ಕೆಂಗಣ್ಣಿಗೆ ದೇಸಾಯಿಯವರು ಗುರಿಯಾದರು. ಇದರ ಪರಿಣಾಮವಾಗಿ ಭೂಮಾಲೀಕರು ಅವರನ್ನು ಹಾವಳಿ ಮಂಜ ಎಂದು ಕರೆಯುತ್ತಿದ್ದರು. ಇಲ್ಲಿ ಪ್ರಬಲವಾಗಿದ್ದ ಭೂಮಾಲೀಕ ವರ್ಗವನ್ನು ಎದುರು ಹಾಕಿಕೊಂಡು ಭೂ ಹೋರಾಟಕ್ಕೆ ಇಳಿದ ದೇಸಾಯಿಯವರಿಗೆ ಗಡಿಪಾರಿನ ಶಿಕ್ಷೆ ಭೂಮಾಲೀಕರಿಂದ ಆಗುತ್ತದೆ.

ಈ ಬಗ್ಗೆ ವಿಷ್ಣುನಾಯ್ಕರು ಹೇಳುವಂತೆ "ಅಂಕೋಲಾ ಹಾಗೂ ಗೋಕರ್ಣ ಸೀಮೆಯ ರೈತರು ಗೇಣಿ ಕೊಡುವುದನ್ನೇ ನಿಲ್ಲಿಸಿದರು. ಇದರಿಂದ ಕಾಂಗ್ರೆಸ್ ಪಕ್ಷದಲ್ಲಿ ಭೂಮಾಲೀಕರು ಒಟ್ಟಾಗಿ ಮುಂಬಯಿ ಸರ್ಕಾರಕ್ಕೆ ದಿನಕರರನ್ನು ಉತ್ತರ ಕನ್ನಡ ಜಿಲ್ಲೆಯಿಂದ ಐದು ವರ್ಷದವರೆಗೆ ಹದ್ದುಪಾರು ಮಾಡುವಂತೆ ಹೇಳಿದರು. ದಿನಕರರು ಗಡಿಪಾರಾದರೂ ನಿಷ್ಕ್ರಿಯರಾಗದೆ ಇನ್ನೂ ಹೆಚ್ಚು ಕ್ರಿಯಾಶೀಲರಾಗಿ ಕೆಲಸದಲ್ಲಿ ತೊಡಗಿಕೊಳ್ಳುವಂತಾಯಿತು."[೩೨] ದೇಸಾಯಿಯವರನ್ನು ಗಡಿಪಾರು ಮಾಡುವುದರ ಹಿಂದೆ ಹೋರಾಟದ ತೀವ್ರತೆ ಇನ್ನೂ ಹೆಚ್ಚಾಗಿದ್ದುದನ್ನು ಕಾಣುತ್ತೇವೆ. ಇದಕ್ಕೆ ಪೂರಕವೆಂಬಂತೆ ರೈತ ನಾಯಕತ್ವವನ್ನು ಗಿರಿ ಪಿಕಳೆ ಮಾಸ್ತರರು ಹಾಗೂ ಇತರ ರೈತನಾಯಕರು ವಹಿಸಿಕೊಳ್ಳುತ್ತಾರೆ. ಅವರು ಗಡಿಪಾರಾದಾಗ ರೈತ ಚಳುವಳಿ ತಣ್ಣಗಾಗುವುದು ಎಂದು ತಿಳಿದಿದ್ದ ಭೂಮಾಲೀಕರ ನಂಬಿಕೆ ಸುಳ್ಳಾಗತೊಡಗಿತು. ಅವರ ಅನುಪಸ್ಥಿತಿಯಲ್ಲಿ ಶೇಷಗಿರಿ ಪಿಕಳೆ ಚಳುವಳಿಯನ್ನು ಸಮರ್ಥವಾಗಿ ಸಂಘಟಿಸಿದರು.ಇದು ಭೂಮಾಲೀಕರ ವಿರುದ್ಧ ಹೋರಾಟದ ತೀವ್ರತೆ ಪಡೆದುದರ ಜೊತೆಗೆ ಹೋರಾಟದ ಗಂಭೀರತೆಯನ್ನು ಪಡೆಯಿತು.

ದೇಸಾಯಿಯವರು ೧೯೩೫ರ ಟೆನನ್ಸಿ ಕಾಯ್ದೆ ಜಾರಿಗೊಳಿಸಬೇಕೆಂಬ ಪ್ರಮುಖ ಕಾರ್ಯಕ್ರಮವನ್ನು ತಮ್ಮ ಹೋರಾಟದಲ್ಲಿ ರೂಪಿಸಿಕೊಂಡಿದ್ದರು. ಆದರೆ ದೇಸಾಯಿವರ ಹದ್ದು ಪಾರಿನಿಂದ ರೈತ ಸಂಘದ ಕೆಲವು ಚಟುವಟಿಕೆಗಳು ತಾತ್ಕಾಲಿಕವಾಗಿ ಸ್ಥಗಿತಗೊಂಡಿದ್ದವು. ೧೯೩೯ರ ಟೆನನ್ಸಿ ಕಾಯಿದೆ ತರಬೇಕೆಂಬ ಅಂಕೋಲಾ ರೈತ ಸಂಘದ ಬೇಡಿಕೆ ಪೂರ್ತಿಯಾಗದೆ ಹಾಗೇ ಉಳಿಯಿತು. ಕರ್ನಾಟಕದಲ್ಲಿದ್ದ ಊಳಿಗಮಾನ್ಯಶಾಹಿ ವ್ಯವಸ್ಥೆ ವಿರುದ್ಧ ಬಂಡೆದ್ದು ಭೂ ಪ್ರಶ್ನೆ ಪರಿಹಾರ ಕಂಡುಕೊಳ್ಳಲು ದೇಸಾಯಿಯವರು ಯತ್ನಿಸಿದ್ದು ಮಹತ್ವದ ಮೈಲುಗಲ್ಲಾಗಿದೆ.

ಇವರ ಆಶಯದಂತೆ ಗೇಣಿ ಪದ್ಧತಿ ಕ್ರಮೇಣ ನಿಲ್ಲಬೇಕು, ಭೂಮಾಲೀಕರು ತಾವೇ ಸ್ವತಃ ದೊಡ್ಡ ಮನಸ್ಸು ಮಾಡಿ ಭೂಮಿಯನ್ನು ಗೇಣಿ ರೈತರಿಗೆ ಬಿಟ್ಟುಕೊಡಬೇಕೆಂಬ ಷರತ್ತುಗಳನ್ನು ಹಾಕಿದರು. ಭೂಮಾಲಿಕರು ಭೂಮಿಯನ್ನು ಕಳೆದುಕೊಳ್ಳುವುದರಿಂದ ಭೂಮಾಲೀಕರಿಗಾಗುವ ನಷ್ಟವನ್ನು ಸರ್ಕಾರವೇ ತುಂಬಿಕೊಡಬೇಕೆಂಬ ಆಶಯ ಅವರದಾಗಿತ್ತು. ಕ್ರಮೇಣ ಗೇಣಿ ಪದ್ಧತಿಯನ್ನು ರದ್ದುಗೊಳಿಸುವುದು ದೇಸಾಯಿಯವರ ಮುಖ್ಯವಾದ ಉದ್ದೇಶವಾಗಿತ್ತು. ಆದರೆ ಇಂಥ ವಿಚಾರಗಳು ಭೂಮಾಲೀಕ ವ್ಯವಸ್ಥೆಗೆ ಸಹಿಸದ ವಿಚಾರವಾಗಿತ್ತು. ಇಂತಹ ವಿಶಾಲ ತಳಹದಿಯ ಮೂಲಕ ಭೂಮಿಯ ಕುರಿತು ಪರಿಹಾರ ಕಂಡುಕೊಳ್ಳಲು ಹೊಸ ವಿಧಾನವನ್ನು ಕರ್ನಾಟಕಕ್ಕೆ ಹಾಕಿಕೊಟ್ಟಿದ್ದನ್ನು ಇಲ್ಲಿ ಮುಖ್ಯವಾಗಿ ಗಮನಿಸಬಹುದಾಗಿದೆ.

### ೩.೩.೨ ಲೋಹಿಯಾ ಚಿಂತನೆ ಮತ್ತು ಭೂಮಿಯ ಪ್ರಶ್ನೆ

ಸಮಾಜವಾದಿ ಸಿದ್ಧಾಂತವನ್ನು ಭಾರತೀಯ ನೆಲಕ್ಕೆ ಒಗ್ಗುವಂತೆ ಪ್ರತಿಪಾದಿಸಿದ ಚಿಂತಕರಲ್ಲಿ ರಾಮಮನೋಹರ ಲೋಹಿಯಾರವರು ಪ್ರಮುಖರು. ಲೋಹಿಯಾವಾದವೆಂದರೆ ಸಮಾಜವಾದವೇ ಎಂಬ ದೃಷ್ಟಿಕೋನ ಭಾರತದಲ್ಲಿ ಬೆಳೆದಿದೆ.

ಸ್ವಾತಂತ್ರ್ಯೋತ್ತರ ಭಾರತದ ಆರಂಭದಲ್ಲಿ ನೆಹರೂರವರ ಎದುರು ಸಮರ್ಥ ಪ್ರತಿಪಕ್ಷದ ನಾಯಕರಂತಿದ್ದವರು, ಲೋಹಿಯಾರವರು. ಲೋಹಿಯಾರವರು ತಮ್ಮದೇ ಸೈದ್ಧಾಂತಿಕ ತಳಹದಿಯ ಮೂಲಕ ನೊಂದವರ ಬದುಕಿಗೆ ದನಿಯಾಗಲು ಕಾರಣರಾದರು.ಸ್ವಾತಂತ್ರ್ಯೋತ್ತರ ಭಾರತದಲ್ಲಿ ಸಮಾಜವಾದದ ನಾಯಕತ್ವವನ್ನು ಹೊಂದಿದ್ದ ಲೋಹಿಯಾರವರು ರೈತ ಮತ್ತು ಭೂ ಸಮಸ್ಯೆಗಳ ಕುರಿತು ಗಂಭೀರವಾಗಿ ಚಿಂತಿಸಿ ಅವುಗಳನ್ನು ಮುಖ್ಯವಾಹಿನಿಗೆ ತಂದರು.ಆದರೆ ಅವರ ದೂರದೃಷ್ಟಿಯಿಂದ,ಸಮಗ್ರ ಹಿತಸಾಧನೆ, ಕಡುಬಡವರ ರೈತಪರ, ಯುವಜನಾಂಗದ ಮೇಲಿನ ನಂಬಿಕೆ ಲೋಹಿಯಾರವರನ್ನು ರಾಷ್ಟ್ರಮಟ್ಟದಲ್ಲಿ ದೊಡ್ಡ ಶಕ್ತಿಯಾಗಿ ರೂಪಿಸಿತು. ಸಮಾಜವಾದಿ ತಾತ್ವಿಕತೆಯ ಆಶಯವನ್ನು ಒಳಗೊಂಡಿದ್ದರೂ ಭಾರತದ ನೆಲಕ್ಕೆ ಹೊಂದುವಂತಹ ತಾತ್ವಿಕ ಸಂರಚನೆಯಿಂದಾಗಿ ಲೋಹಿಯಾವಾದ ಭಾರತದಲ್ಲಿ ಅಸ್ತಿತ್ವಪಡೆಯಿತು.

ಲೋಹಿಯಾರವರು ರಾಷ್ಟ್ರ ರಾಜರಾಜಕಾರಣದಲ್ಲಿ ಪ್ರತಿನಾಯಕತ್ವವನ್ನು ಹೊಂದಿ ತಮ್ಮದೇ ಆದ ಸೈದ್ಧಾಂತಿಕ ಒಲವನ್ನು ಭಾರತದಲ್ಲಿ ಬಿತ್ತಿದರು. ಏಕೆಂದರೆ ಆಗಿನ ಕಾಲಕ್ಕೆ ಕಾಂಗ್ರೆಸ್ ನಾಯಕತ್ವ ಭೂಮಾಲೀಕರ, ಜಮೀನ್ದಾರರ ರಕ್ಷಣೆಗೆ ನಿಂತಿತ್ತು. ಅಲ್ಲದೆ ಪ್ರತಿಪಕ್ಷದ ನಾಯಕತ್ವ ತುಂಬುವಂತಹ ಸಮರ್ಥನಾಯಕರು ಇರಲಿಲ್ಲ. ಆದರೆ ಬಹುಮುಖ್ಯವಾಗಿ ಸ್ವತಂತ್ರ ಭಾರತಕ್ಕೆ ರೈತರ ಪ್ರಶ್ನೆಗಳು ಮುಖ್ಯವಾಗಿದ್ದವು. ಆದ್ದರಿಂದ "ದೊಡ್ಡ ದೊಡ್ಡ ಜಮೀನ್ದಾರರನ್ನು ಬಿಟ್ಟು, ಭಾರತದ ಉಳಿದ ಬಹುಸಂಖ್ಯಾತ ರೈತರೇ ಸಮಾಜವಾದವನ್ನು ಬೆಳೆಸುವವರು ಎಂದು ಲೋಹಿಯಾ ನಂಬಿದ್ದರು."[೩೩] ಅವರ ಈ ನಂಬಿಕೆ, ಸ್ವತಂತ್ರಭಾರತದ ಅಭಿವೃದ್ಧಿಯ ಚಿಂತನೆ ಮೂಲಭೂತವಾಗಿ ದೀನ ದಲಿತರ, ರೈತರ, ಮಹಿಳೆಯರ ಪರವಾಗಿ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವ ಆಶಯವನ್ನೇ ಹೊಂದಿದೆ.

ಈ ಮೊದಲೇ ಸ್ವಂತತ್ರ ಭಾರತದ ಆಶಯಗಳು ಪಟ್ಟಭದ್ರ ಹಿತಾಸಕ್ತಿಯ ಕೈ ಸೇರಿದ್ದವು. "ಜಮೀನ್ದಾರಿ ಮತ್ತು ಬಂಡವಾಳಶಾಹಿಗಳ ಅತಿಕ್ರಮಣ, ಜಾತಿಪದ್ಧತಿಯ ಅನಿಷ್ಟಗಳು ಭಾರತದ ಆರ್ಥಿಕತೆ ಸಮಾಜಿಕತೆಗಳನ್ನು ನಿಯಂತ್ರಿಸುತ್ತಿವೆ. ಇವುಗಳನ್ನು ಕೇಂದ್ರವಾಗಿಟ್ಟುಕೊಳ್ಳದ ನಮ್ಮ ಯಾವ ತತ್ವ ವಾದಗಳಿಗೂ ಅರ್ಥವಿಲ್ಲ ಎಂಬ ಸತ್ಯವನ್ನು ಲೋಹಿಯಾ ಬಲ್ಲವರಾಗಿದ್ದರು."[೩೪]

ಲೋಹಿಯಾರವರು ರೈತ ಸಮಸ್ಯೆಗಳಿಗೆ ಪರಿಹಾರವೆಂದರೆ ಸರ್ಕಾರವೇ ಕೃಷಿ ಸೇನೆಯನ್ನು ನೇಮಿಸಿ ಆಹಾರ, ಬಟ್ಟೆ ಮತ್ತು ವಸತಿಗಳನ್ನು ಒದಗಿಸುವುದು ಎಂಬುದಾಗಿ ಭಾವಿಸಿದ್ದರು. ಆದರೆ ಈ ತತ್ ಕ್ಷಣದ ಸ್ವತಂತ್ರ ಭಾರತಕ್ಕೆ ಪರಿಹಾರ ಒದಗಿಸುವುದಾದಲ್ಲಿ ಅದು ಸರ್ಕಾರವೇ ಕೃಷಿ ಸೇನೆ ಮೂಲಕ ಭಾಗಿಯಾಗಬೇಕೆಂಬುದು ಲೋಹಿಯಾರವರ ಚಿಂತನೆಯಾಗಿತ್ತು.

ಬೆವರಿನ ಬಗೆಗೆ ನಂಬಿಕೆ ಮತ್ತು ಅದರ ಒಡೆತನವನ್ನು ದುಡಿಮೆಗಾರನಿಗೆ ವಹಿಸಬೇಕೆಂಬ ಆಶಯ ಅವರ ಮಾತಿನಲ್ಲಿ ವ್ಯಕ್ತವಾಗುತ್ತದೆ. "ಮಣ್ಣನ್ನು ಖುದ್ದಾಗಿ ಉಳವವನಿಗೇ ಒಪ್ಪಿಸಬೇಕು. ಆಗ ಮಾತ್ರ ದೇಶದ ಅಭಿವೃದ್ಧಿ ಸಾಧ್ಯ."[೩೫] ಎಂದು ಅಭಿವೃದ್ಧಿಯ ಕಲ್ಪನೆಯನ್ನು ನಮ್ಮ ಮುಂದಿಡುತ್ತಾರೆ. ಇನ್ನು ಮುಂದುವರೆದು ಭಾರತದ ಕೃಷಿ ಸಮಸ್ಯೆಯನ್ನು ಕುರಿತು ಈ ಕ್ಷೇತ್ರದ ದುಡಿಮೆಗಾರರ ಹಿನ್ನೆಲೆಯಲ್ಲಿ ನೋಡಬೇಕೆಂಬ ಪರಿಹಾರವನ್ನು ಸೂಚಿಸುತ್ತಾರೆ. ಇಲ್ಲಿ ಎಂತಹ ದುಡಿಮೆಗಾರರಿಗೆ ಭೂಮಿ ದಕ್ಕಬೇಕಾಗಿದೆ ಎಂಬುದರ ಬಗೆಗಿನ ನಿಲುವನ್ನು ವ್ಯಕ್ತಪಡಿಸುತ್ತಾರೆ.

ಲೋಹಿಯಾರವರು ಭೂ ಸಮಸ್ಯೆಗೆ ಪರಿಹಾರ ಕಂಡುಕೊಂಡಿರುವುದು ಭೂಮಾಲೀಕರಿಂದ ಭೂಮಿಯನ್ನು ಕಸಿಯುವುದರ ಮೂಲಕ, ಅವರಿಂದ ಪಡೆದು ಭೂರಹಿತರಿಗೆ ನೀಡುವುದು. ಶೋಷಿತರಾದ ಗೇಣಿ ರೈತರಿಗೆ ಹಾಗೂ ಭೂ ರಹಿತರಿಗೆ ಇನಾಂ ಜಮೀನುಗಳನ್ನು ಕೊಡಿಸುವುದು ಇವರ ಮುಖ್ಯ ಉದ್ದೇಶವಾಗಿತ್ತು. ಸತ್ಯಾಗ್ರಹದ ಮೂಲಕ,

ಹೋರಾಟದ ಮೂಲಕ ಈ ಸಮುದಾಯಕ್ಕೆ ಅರಿವು ಮೂಡಿಸಿ ಅನ್ಯಾಯಕ್ಕೆ ನ್ಯಾಯ ದೊರಕಿಸಿಕೊಡುವ ಉದ್ದೇಶವನ್ನು ಹೊಂದಿದ್ದರು. ಈ ಹಿನ್ನೆಲೆಯಲ್ಲಿ ಭಾರತೀಯ ಸಂದರ್ಭದಲ್ಲಿ ಲೋಹಿಯಾರವರು ಭೂ ಪ್ರಶ್ನೆಗೆ ಪರಿಹಾರ ಕಂಡುಕೊಳ್ಳುವಲ್ಲಿ ಬಹುಮುಖ್ಯಪಾತ್ರವಹಿಸಿರುವುದು ಕಂಡುಬರುತ್ತದೆ.

ಇಲ್ಲಿ ರೈತರ ಸಾಮಾಜಿಕ ಅಸಮಾನತೆಯನ್ನು ಹೊಡೆದೊಡಿಸಿ ಸಮಾನ ನೆಲೆಯಲ್ಲಿ ಸಮಾನ ಹಕ್ಕು, ಜಾತ್ಯಾತೀತ ಮನೋಧರ್ಮದ ಮೂಲಕ ಸರ್ವರಿಗೂ ಸಮಪಾಲು ಸಮಬಾಳು ಎಂಬ ಸೈದ್ಧಾಂತಿಕ ನೆಲೆಯಲ್ಲಿ ಭೂಮಿ ಕುರಿತಾಗಿ ಪರಿಹಾರ ಸೂಚಿಸಲು ಯತ್ನಿಸಿತು. ಆರ್ಥಿಕ ಅಸಮಾನತೆಯನ್ನು ಹೊಡೆದೋಡಿಸಿ ಆರ್ಥಿಕ ಸಮತೋಲನ ಕಾಪಾಡುವ ನಿಟ್ಟಿನಲ್ಲಿ ಹೆಜ್ಜೆ ಹಾಕಬೇಕೆಂಬ ಸೈದ್ಧಾಂತಿಕ ತಳಹದಿಯ ಮೇಲೆ ಸಮಾಜವಾದ ಭಾರತದ ರೈತನ ಸಮಸ್ಯೆಗೆ ಪರಿಹಾರಕಂಡುಕೊಳ್ಳಲು ಯತ್ನಿಸಿತು.

ಸಮಾಜವಾದದ ಆಶಯ ಕುರಿತು ನಿಂಗಪ್ಪ ಮುದೇನೂರು ಹೇಳುವಂತೆ "ಸಮಾಜವಾದ, ಸಮತಾವಾದ, ಸರ್ವೋದಯ ಇವೆಲ್ಲ ಒಂದು ಸಮಾನತೆಯನ್ನು ಸಾಮಾಜಿಕವಾಗಿ ರಾಜಕೀಯವಾಗಿ, ಆರ್ಥಿಕವಾಗಿ, ಜಾತಿರಹಿತ, ವರ್ಗರಹಿತ ಹಿನ್ನೆಲೆಯಲ್ಲಿ ಕಟ್ಟಬೇಕೆಂಬ ಬಲವಾದ ಆಶಯವುಳ್ಳ ಪದಗಳಾಗಿದ್ದವು. ಒಂದೊಂದು ಪದವೂ ಇಲ್ಲಿ ವ್ಯಕ್ತಿಯ ಸಂಘಟಿತ ಮನೋಭಾವ, ಅವನ ನಾಯಕತ್ವದ ಸ್ವರೂಪವನ್ನು ನೆನಪಿಸುತ್ತವೆ."[೩೬] ಈ ರೀತಿಯ ಸಮಾಜವಾದವು ರೈತರ ಸಮಸ್ಯೆಗೆ ಹಾಗೂ ಭೂ ಸಮಸ್ಯೆ ಕುರಿತಾಗಿ ಕೆಲವು ಪರಿಹಾರಗಳನ್ನು ಸೂಚಿಸುವ ಸೈದ್ಧಾಂತಿಕ ನಿಲುವು ಗಮನಿಸಬಹುದಾಗಿದೆ.

"೧. ಬಲಾತ್ಕಾರದ ಕೆಲಸ, ರೈತರ ಸಮಸ್ಯೆಯನ್ನು ದೂರಮಾಡಿ, ಇನಾಂ ಜಮೀನುಗಳನ್ನು ರೈತರಿಗೆ ದೊರಕಿಸುವುದು.

೨.ಭೂ ಹಿಡುವಳಿದಾರರು, ದೊಡ್ಡದೊಡ್ಡ ಶ್ರೀಮಂತರು, ರಾಜರುಗಳ ಹಿಡಿತದಲ್ಲಿದ್ದ ಆಸ್ತಿ ಹಂಚಿಕೆಯಾಗುವುದು.

೩. ಖಾಸಗಿ ಒಡೆತನಕ್ಕೆ ಮೊದಲ ಪೆಟ್ಟು ನೀಡಿ ವಂಶಪಾರಂಪರ್ಯ ಅಧಿಕಾರಕ್ಕೆ ಕಡಿವಾಣ ಹಾಕುವುದು.

೪. ಶೋಷಿತರು, ಮಹಿಳೆಯರು, ದಲಿತರ ಹಕ್ಕು ಬಾಧ್ಯತೆಗಳಿಗಾಗಿ ನಿರಂತರ, ಹೋರಾಟ ನಡೆಸುವುದು ಹಾಗೂ ಉಳುವವ ನೆಲದ ಒಡೆಯ ಎನ್ನುವ ಹೊಸ ಸಮಾಜದ ಅರಿವನ್ನು ಹುಟ್ಟು ಹಾಕುವುದು.

೫. ಗುತ್ತಿಗೆ ಭೂಮಿಗಳನ್ನು ಮರಳಿ ಪಡೆಯುವುದು .

೬. ಅರಣ್ಯ, ಬೇಟೆಯ ಹಕ್ಕನ್ನು ಬಿಟ್ಟುಕೊಡುವಂತೆ ಒತ್ತಾಯಿಸುವುದು.

೭. ವ್ಯವಸಾಯ ಕ್ಷೇತ್ರದಲ್ಲಿ ಸಾಮಂತವಾದಿ ಮಾನವ ಸಂಬಂಧಗಳನ್ನು ಕಳಚುವುದು ಮತ್ತು ದುಡಿಮೆಗೆ ಹೆಚ್ಚಿನ ಆದ್ಯತೆಯನ್ನು ನೀಡುವುದು.

೮.ಗಾಂಧೀಜಿಯ ಅಹಿಂಸಾತ್ಮಕ ಮಾರ್ಗದಲ್ಲಿ ಚಳುವಳಿಗಳನ್ನು ರೂಪಿಸುವುದು."[೩೭]

ಇಂತಹ ಅಂಶಗಳ ಮೂಲಕ ರೈತರ ಮೂಲ ಸಮಸ್ಯೆಗಳನ್ನು ಪರಿಹರಿಸಬಹುದೆಂದು ಸಮಾಜವಾದವು ಭಾವಿಸಿತು. ಮೂಲಭೂತವಾಗಿ ರೈತರ ಸಮಸ್ಯೆಗಳಿಗೆ ಪರಿಹಾರ ಕಂಡುಕೊಂಡಲ್ಲಿ ದೇಶದ ಅಭಿವೃದ್ಧಿ ಸಾಧ್ಯ ಎಂಬ ನಿಲುವನ್ನು ಸಮಾಜವಾದ ಹೊಂದಿರುವುದು ಇದರ ಆಶಯದಲ್ಲಿ ವ್ಯಕ್ತವಾಗುತ್ತದೆ.

ಭಾರತದಲ್ಲಿ ಸಮಾಜವಾದವು ರೈತರ ಪ್ರಶ್ನೆಗಳಿಗೆ ಗಂಭೀರವಾಗಿ ಚಿಂತಿಸತೊಡಗಿದ್ದು ಮತ್ತು ಸಹನೆಯಿಂದ ಅವರ ಸಮಸ್ಯೆಗಳ ಕಡೆ ಗಮನಹರಿಸಿದೆ. ಸಮಾಜವಾದವು ರೈತಕಾಳಜಿಯನ್ನು ಕೇಂದ್ರವಾಗಿಟ್ಟುಕೊಂಡಿದ್ದರಿಂದ, "ಉಳುವವನಿಗೇ ಭೂಮಿ, ಸಾಗುವಳಿಯಾಗದ ಭೂಮಿಗೆ ಕೃಷಿಸೇನೆ, ಸಣ್ಣ ಸಣ್ಣ ಯಂತ್ರಣ ಘಟಕಗಳ ಮೂಲಕ ಕೈಗಾರೀಕರಣ, ಒಂದು ಸಂಸಾರಕ್ಕೆ ಒಂದು ಹಸು ಮತ್ತು ಕನಿಷ್ಠ ೩೦ ಎಕರೆ ಭೂಮಿಯ ಮರುವಿಂಗಡಣೆ, ಕೈಗಾರಿಕೆ ಮತ್ತು ವ್ಯವಸಾಯದ ಬೆಲೆಗಳಲ್ಲಿ ಸಮಾನತೆ ಹಾಗೂ ಚತುಸ್ತಂಭ ರಾಷ್ಟ್ರ ಅಸ್ತಿತ್ವಕ್ಕೆ ತರುವುದು."[೩೮] ಇಂತಹ ಜನಪ್ರಿಯ, ಜನಪರವಾದಂತಹ ಆಶಯವನ್ನು ಸಮಾಜವಾದವು ಹೊಂದಿರುವುದನ್ನು ಗುರುತಿಸಬಹುದಾಗಿದೆ. ಇನ್ನೂ ಒಂದು ಹೆಜ್ಜೆ ಮುಂದೆ ಭೂ ಒಡೆತನಕ್ಕೆ ಸಂಬಂಧಿಸಿದಂತೆ ಲೋಹಿಯಾರವರು

ಹೇಳಿರುವುದನ್ನು ಗಮನಿಸಬಹುದು. "ಭಾರತದ ಭೂ ಸಮಸ್ಯೆಗಿರುವ ಒಂದೇ ಒಂದು ಪರಿಹಾರವೇನೆಂದರೆ ಧೈರ್ಯದಿಂದ ಆಲೋಚಿಸುವುದು ಮತ್ತು ಸ್ಥೈರ್ಯದಿಂದ ಕ್ರಿಯಾಶೀಲರಾಗುವುದು. ವಾಸ್ತವವಾಗಿ ಭೂಮಿಯಲ್ಲಿ ಬೆವರು ಸುರಿಸುವವನಿಗೇ ಬೆಳೆಯ ಒಡೆತನ ಸಿಗುವಂತಾಗಬೇಕು. ಈ ಸರಳ ತತ್ವವನ್ನು ಕಾನೂನು ಮಾಡಲೇಬೇಕು."[೩೯] ಈ ಸಮಾಜವಾದದ ಆಶಯದಲ್ಲಿ ದುಡಿಯುವವನೇ ಹೊಲದೊಡಯನಾಗಬೇಕೆಂಬ ಆಶಯ ವ್ಯಕ್ತವಾಗಿದೆ. ವಾಸ್ತವದಲ್ಲಿ ಭೂಮಾಲೀಕ ವ್ಯವಸ್ಥೆ, ಭೂಮಾಲೀಕ ಪರವಾದ ಸರ್ಕಾರಗಳಿಂದಾಗಿ ಸಮಾಜವಾದಿಗಳಿಗೆ ಉಳಿದ ಏಕೈಕ ಮಾರ್ಗವೆಂದರೆ ಧೈರ್ಯದಿಂದ ಆಲೋಚಿಸುವುದು ಸ್ಥೈಯದಿಂದ ಕ್ರಿಯಾಶೀಲರಾಗುವುದು ಎಂಬ ತತ್ವವನ್ನು ಸಾಮಾನ್ಯ ರೈತನ ಮುಂದಿಟ್ಟು ಹೋರಾಟದ ದಾರಿಯನ್ನು ತುಳಿಯಲು ಪ್ರೇರೇಪಿಸಿತು.

ಸಮಾಜವಾದದ ಜೊತೆಗೆ ಲೋಹಿಯಾರವರು ಭಾರತದಲ್ಲಿ ಸಪ್ತ ಕ್ರಾಂತಿಯ ಸೂತ್ರವನ್ನು ನೀಡಿದರು. ಗಂಡು ಹೆಣ್ಣು ನಡುವೆ ಸಮಾನತೆ, ಜಾತಿ ಅಸಮಾನತೆ ತೊಲಗಿಸುವುದು, ಜಾಗತಿಕ ಪ್ರಭುತ್ವವಾದಿ ಆಳ್ವಿಕೆ ಪರವಾದ ಚಿಂತನೆ, ಖಾಸಗಿ ಬಂಡವಾಳ ಅಸ್ತಿತ್ವ ಅದರ ವ್ಯಾಮೋಹದ ವಿರುದ್ಧ, ಪ್ರಜಾಪ್ರಭುತ್ವವಾದಿ ಮಾರ್ಗಗಳ ದಾರಿ, ಶಸ್ತ್ರಾಸ್ತ್ರಗಳ ವಿರುದ್ಧ, ಸತ್ಯಾಗ್ರಹದ ಪರವಾಗಿ ಸಪ್ತಕ್ರಾಂತಿ ಸೂತ್ರವನ್ನು ಘೋಷಿಸಿದ್ದರು. ಈ ಎಲ್ಲಾ ನೆಲೆಯಿಂದ ಭಾರತದಲ್ಲಿ ಬಹುದೊಡ್ಡ ಬೌದ್ಧಿಕ ವರ್ಗವನ್ನು ತನ್ನತ್ತ ಸೆಳೆಯುವಲ್ಲಿ, ಯುವವಿದ್ಯಾರ್ಥಿಗಳು, ಬುದ್ಧಿಜೀವಿಗಳು ಮುಂತಾದವರನ್ನು ಸೆಳೆದು ಅವರುಗಳಿಗೆ ಹೊಸ ನಾಯಕತ್ವನ್ನು ನೀಡಿದುದನ್ನು ಗಮನಿಸಬಹುದು. ಅದೇ ಕಾಲಕ್ಕೆ ಹಳ್ಳಿಗಾಡಿನ ಜನಜೀವನದ ಬಗ್ಗೆ ಗಂಭೀರವಾಗಿ ಚಿಂತಿಸಿದ್ದನ್ನು ಗಮನಿಸಬಹುದಾಗಿದೆ.

ಕರ್ನಾಟಕದ ಸಮಾಜವಾದಿ ಆಂದೋಲನಗಳನ್ನು ಐತಿಹಾಸಿಕ ಹೋರಾಟಗಳೆಂದೇ ಭಾವಿಸಲಾಗಿದೆ. ೧೯೫೧ರಲ್ಲಿ ನಡೆದ ಕಾಗೋಡು ಸತ್ಯಾಗ್ರಹ, ಸಂಡೂರು ರೈತಹೋರಾಟ, ೧೯೬೯ ಆಗಸ್ಟ್ ೧೫ ರ ಚಳುವಳಿಗಳು ಮುಖ್ಯವಾದವುಗಳು.ಸಮಾಜವಾದವು ತನ್ನ ಸೈದ್ಧಾಂತಿಕ ಪ್ರಭಾವದಿಂದಾಗಿ ಸಮರ್ಥ ನಾಯಕತ್ವವನ್ನು ತಂದುಕೊಟ್ಟವರಲ್ಲಿ ಶಾಂತವೇರಿಗೋಪಾಲಗೌಡ ಮುಖ್ಯರಾಗಿದ್ದಾರೆ. ಅವರು ಕಾಗೋಡು ಸತ್ಯಾಗ್ರಹದ ನಾಯಕತ್ವವಹಿಸಿಕೊಂಡ ನಂತರದಲ್ಲಿ ಸಮಾಜವಾದ ಚಳುವಳಿಗೆ ಹೆಚ್ಚಿನ ಮಹತ್ವ ಬಂದಿತು. ಮುಂದೆ ರಾಜಕೀಯವಾಗಿಯೂ ಕರ್ನಾಟಕದಲ್ಲಿ ಸಮಾಜವಾದಪಕ್ಷ ಅಸ್ತಿತ್ವವನ್ನು ಪಡೆಯಿತು. ಸಮಾಜವಾದವನ್ನು ರಾಷ್ಟ್ರಮಟ್ಟದ ನಾಯಕರ ಜೊತೆಗೆ ಕರ್ನಾಟಕದ ನಾಯಕರು ಸೇರಿದ್ದರಿಂದ ಸಮಾಜವಾದದ ಚಿಂತನೆಗಳು ಕರ್ನಾಟಕದಾದ್ಯಂತ ನೆಲೆಯೂರಲು ಕಾರಣವಾಯಿತು.

ಕರ್ನಾಟಕದಲ್ಲಿ ಸಮಾಜವಾದಿ ನಾಯಕರುಗಳಾದ ಶಾಂತವೇರಿ ಗೋಪಾಲಗೌಡರು, ಸಿಜಿಕೆ ರೆಡ್ಡಿ, ನೀಲಗಂಗಯ್ಯ ಪೂಜಾರ್, ಕಡಿದಾಳು ಶಾಮಣ್ಣ, ಮುಲ್ಕಾಗೋವಿಂದರೆಡ್ಡಿ, ಎಸ್.ಶಿವಪ್ಪ, ವೈ.ಆರ್.ಪರಮೇಶ್ವರಪ್ಪ, ಎ.ಜಿ.ಸದಾಶಿವರಾಯರು, ಎಸ್.ವೆಂಕಟರಾಂ, ಕೆ.ಜಿ.ಮಹೇಶ್ವರಪ್ಪ ಮೊದಲಾದವರು ಕರ್ನಾಟಕದಲ್ಲಿ ಸಮಾಜವಾದವನ್ನು ಕಟ್ಟಿ ಬೆಳೆಸಿದರು.

ರೈತ ಸಂಘಟನೆಗಳ ಮೂಲಕ ಸಮಾಜವಾದಿ ನೆಲೆಯ ಚೌಕಟ್ಟನ್ನು ಕಟ್ಟಿಕೊಟ್ಟ ಪ್ರೊ.ಎಂ.ಡಿ.ನಂಜುಂಡಸ್ವಾಮಿ, ಕಡಿದಾಳು ಶಾಮಣ್ಣ, ಕೆ.ರಾಮದಾಸ್, ಪ್ರೊ.ರವಿವರ್ಮ ಕುಮಾರ್, ಮೊದಲಾದವರು ಕರ್ನಾಟಕದಲ್ಲಿ ರೈತರಿಗೆ ಜಾಗೃತಿಯನ್ನು ಮೂಡಿಸಿದರು.ಕರ್ನಾಟಕದಲ್ಲಿ ಸಮಾಜವಾದಿ ಆಂದೋಲನವು ಕನ್ನಡದ ಹಲವು ಲೇಖಕರಿಗೆ ಕಲಾವಿದರಿಗೆ ಸ್ಪೂರ್ತಿಯಾಯಿತು.ಇವರಲ್ಲಿ ಯು.ಆರ್.ಅನಂತಮೂರ್ತಿ, ಕೆ.ಪಿ.ಪೂರ್ಣಚಂದ್ರತೇಜಸ್ವಿ, ದೇವನೂರು ಮಹಾದೇವ, ಪಿ.ಲಂಕೇಶ್, ಚಂದ್ರಶೇಖರಪಾಟೀಲ, ಪ್ರೊ.ಹಿ.ಶಿ.ರಾಮಚಂದ್ರೇಗೌಡ ಸಾಹಿತ್ಯ ಕ್ಷೇತ್ರದಲ್ಲಿ ಬಹುಮುಖ್ಯರು.

### ೧. ಶಾಂತವೇರಿ ಗೋಪಾಲಗೌಡರು

ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಬಹುದೊಡ್ಡ ಹೆಸರು ಶಾಂತವೇರಿ ಗೋಪಾಲಗೌಡರದು. ರಾಜಕೀಯದಲ್ಲಿ ಮುತ್ಸದ್ದಿತನ, ಪಾಂಡಿತ್ಯಗಳು ಅವರಿಗೆ ಸಮಾಜವಾದದ ಮೂಲಕ ಬಳುವಳಿಯಾಗಿ ಬಂದಿವೆ. ಕರ್ನಾಟಕದಲ್ಲಿ ಸಮಾಜವಾದ ಪಕ್ಷ ನೆಲೆಯೂರುವಂತೆ ಮಾಡಿ ಶಾಂತವೇರಿ ಗೋಪಾಲಗೌಡರು ಆ ಪಕ್ಷದಿಂದ ಗೆದ್ದು ಶಾಸನಸಭೆ ಆಯ್ಕೆಯಾಗಿ, ಪಕ್ಷ ಬಲವರ್ಧನೆ ಮಾಡಿದರು. ಈ ಸಂದರ್ಭದಲ್ಲಿ ಕರ್ನಾಟಕದ ರೈತ ಪ್ರಶ್ನೆಗಳನ್ನು ಗಂಭೀರವಾಗಿ ಪರಿಗಣಿಸಿ, ಅವರ ಸಮಸ್ಯೆಗಳನ್ನು ವಿಧಾನಸಭೆಯಲ್ಲಿ ಅಧಿಕಾರಯುಕ್ತವಾಗಿ ಮಾತನಾಡಿ

ಸರ್ಕಾರದ ಗಮನಸೆಳೆದರು.

ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷದ ನಾಯಕತ್ವಕ್ಕೆ ಪರ್ಯಾಯ ಶಕ್ತಿಯಾಗಿ ಸಮಾಜವಾದಿ ಪಾರ್ಟಿಯನ್ನು ಹಿಡಿದೆತ್ತಿ ನಿಲ್ಲಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಸಮಾಜವಾದಿ ಪಕ್ಷ ತನ್ನ ಪ್ರಣಾಳಿಕೆಯಲ್ಲಿ ಮುಖ್ಯವಾಗಿ ರೈತ ಪ್ರಶ್ನೆ ಮತ್ತು ಭೂ ಪ್ರಶ್ನೆ ಪ್ರಸ್ತಾಪ ಮಾಡಿದ್ದುದು ಯುವಜನತೆಯನ್ನು,ರೈತರನ್ನು, ಮಹಿಳೆಯರನ್ನು ಆಕರ್ಷಿಸಲು ಕಾರಣವಾಯಿತು.

ಇದೇ ಕಾಲಕ್ಕೆ ಕಾಗೋಡಿನಲ್ಲಿ ನಡೆಯುತ್ತಿದ್ದ ರೈತ ಹೋರಾಟಕ್ಕೆ ಶಾಂತವೇರಿ ಗೋಪಾಲಗೌಡರು ನೇತೃತ್ವ ವಹಿಸಿದ ನಂತರದಲ್ಲಿ ಹೋರಾಟದ ತೀವ್ರತೆ ಹೆಚ್ಚಾಯಿತು. ಅಲ್ಲದೆ ಕರ್ನಾಟಕದಲ್ಲಿ ಸಮಾಜವಾದಿ ಪಕ್ಷ ಅಸ್ತಿತ್ವ ಕಂಡುಕೊಳ್ಳಲು ಈ ಹೋರಾಟ ರಾಷ್ಟ್ರಮಟ್ಟದಲ್ಲಿ ಗಮನಸೆಳೆಯಿತು. ಲೋಹಿಯಾ, ಜಯಪ್ರಕಾಶ್‌ನಾರಾಯಣ ಮೊದಲಾದ ರಾಷ್ಟ್ರೀಯ ನಾಯಕರು ಭಾಗವಹಿಸಿದ್ದರಿಂದ ಈ ಚಳವಳಿಯಲ್ಲಿ ಭಾಗವಹಿಸಿದ್ದರಿಂದ ಮಹತ್ವಬಂದಿತು. ಈ ಮಹಾನ್ ನಾಯಕರ ಸೈದ್ಧಾಂತಿಕ ಒಲವು ಕರ್ನಾಟಕದಲ್ಲಿ ಜನಪ್ರಿಯವಾಯಿತು. ಈ ನಾಯಕರು ವಿದ್ಯಾರ್ಥಿಯುವ ಮುಂದಾಳುಗಳನ್ನು ಜನಪರ ಹೋರಾಟಗಳಲ್ಲಿ ತೊಡಗಿಸಿಕೊಳ್ಳುವಂತೆ ಮಾಡಿದರು.

ಕಾಗೋಡು ರೈತ ಹೋರಾಟದಿಂದಲೇ ಗೌಡರು ಭೂ ಸಮಸ್ಯೆ ಕುರಿತು ಪರಿಹಾರ ಕಂಡುಕೊಳ್ಳಲು ಯತ್ನಿಸಿದರು. ಆಗಿನ ಕಾಂಗ್ರೆಸ್ ಪಕ್ಷದಲ್ಲಿ ಬಹುಪಾಲು ಭೂಮಾಲೀಕರೇ ಇದ್ದಾಗ ಏಕಾಂಗಿಯಾಗಿ ಭೂಹೀನ ರೈತರ ಪರವಾಗಿ ಶಾಸನಸಭೆಯಲ್ಲಿ ವಿಚಾರವನ್ನು ಮಂಡಿಸಿದರು.ಇದು ಬಹುಸಂಖ್ಯಾತ ರೈತಾಪಿ ಸಮುದಾಯದ ಭೂ ವಂಚಿತರಿಗೆ ಭೂಮಿ ದೊರೆಯಿತು. ಅವರು ಶಾಸನಸಭೆಯ ಒಳಗೆ ಹಾಗೂ ಹೊರಗು ವೈಜ್ಞಾನಿಕ ಕಾರಣಗಳ ಮೂಲಕ ಹೋರಾಟ ನಡೆಸಿ ಭೂಸಮಸ್ಯೆ ಪರಿಹಾರ ಸೂಚಿಸಲು ಯತ್ನಿಸಿದರು.

ಭೂ ಹಂಚಿಕೆಯ ಕುರಿತು ತಮ್ಮದೇ ಆದ ಚಿಂತನೆಯಲ್ಲಿ ಪರಿಹಾರ ಕಂಡುಕೊಳ್ಳುವಲ್ಲಿ ಗೋಪಾಲಗೌಡರು ಯತ್ನಿಸಿದ್ದನ್ನು ಗಮನಿಸಬಹುದು. "ನನ್ನ ಅಭಿಪ್ರಾಯದಲ್ಲಿ ಭೂಮಿಯು ಒಂದು ಆಸ್ತಿಯ ಪಟ್ಟಿಯಲ್ಲಿ ಸೇರಿರುವುದು ತಪ್ಪು. ಭೂಮಿಯನ್ನು ಆಸ್ತಿ ಪಟ್ಟಿಯಿಂದ ಬಂಧಮುಕ್ತ ಮಾಡಬೇಕು. ಅದು ಉತ್ಪತ್ತಿಯ ಸಾಧನವಾಗಿರುವುದರಿಂದ ಯಾರು ಭೂಮಿಯನ್ನು ಉಳುಮೆ ಮಾಡುತ್ತಾರೋ, ಯಾರು ಭೂಮಿಯ ಮೇಲೆ ಕೃಷಿ ಕೆಲಸ ಮಾಡಿ ಅದರಿಂದ ಉತ್ಪನ್ನ ಮಾಡುತ್ತಾರೋ, ಆ ಉತ್ಪನ್ನ ಅವರ ಸೊತ್ತಾಗಬೇಕು. "[೪೦] ಇಲ್ಲಿ ಭೂ ಒಡೆತನ ಯಾರದ್ದಾಗಬೇಕೆಂಬ ಆಶಯವನ್ನು ವ್ಯಕ್ತಪಡಿಸುತ್ತಾರೆ. ಭೂಮಿ ಖಾಸಗಿಯಾಗಿ ಪರಿಗಣಿಸದೆ ಸಾರ್ವಜನಿಕ ಆಸ್ತಿಯಾಗಿ ಮತ್ತು ಭೂಮಿಯಲ್ಲಿ ಶ್ರಮವಹಿಸುವ ವ್ಯಕ್ತಿಗಳ ಸೊತ್ತಾಗಬೇಕೆಂಬುದು ಇವರ ಆಶಯವಾಗಿತ್ತು. "ಭೂಮಿ ಮಾರತಕ್ಕ ಕೊಳ್ಳತಕ್ಕ ವಸ್ತು ಆಗಬಾರದು. ಮನುಷ್ಯನ ಅಸ್ತಿತ್ವಕ್ಕೆ ಅದು ಬಲಿಯಾಗಬಾರದು ಎಂಬ ಒಂದು ನೀತಿಯನ್ನು ನಾವು ಇಟ್ಟುಕೊಳ್ಳುವುದು ಬಹಳ ಉಚಿತ ಎಂದು ಕಾಣುತ್ತೆ."[೪೧]

ರೈತ ಮತ್ತು ಭೂಮಿ ನಡುವೆ ಅಂತರ್‌ಸಂಬಂಧಗಳಿರುವುದರಿಂದ ಭೂಮಿಯನ್ನು ಮಾರಾಟದ ಸರಕಾಗಿ ನೋಡಬಾರದೆಂಬ ಆಶಯವನ್ನು ಗೌಡರು ವ್ಯಕ್ತಪಡಿಸುತ್ತಾರೆ. ಭೂಮಿ ಪ್ರಶ್ನೆಗೆ ಸಮಾಜವಾದದ ನೆಲೆಯಲ್ಲಿ ಪರಿಹಾರ ಕಂಡುಕೊಳ್ಳಲು ಯತ್ನಿಸುವ ಗೌಡರು ಭೂಮಿತಿಯನ್ನು ಕುರಿತು "ಬರೀ ಟೆನೆನ್ಸಿ ಕಾನೂನು ಅಥವಾ ರದ್ದಾಯಿತಿ ಮಸೂದೆ ಮಾಡಿ ನಾವು ಸ್ವಸ್ಥವಾಗಿ ಇರುವುದಕ್ಕೆ ಸಾಧ್ಯವಾಗುವುದಿಲ್ಲ. ಅಥವಾ ಅಷ್ಟಕ್ಕೆ ಬಿಟ್ಟರೆ, ನಮ್ಮ ರೈತರ ಅಭಿವೃದ್ಧಿ ಆಯಿತು ಅಥವಾ ಭೂಮಿ ಸಮಸ್ಯೆ ಪರಿಹಾರವಾಯಿತು ಎಂದು ತಿಳಿದುಕೊಳ್ಳುವುದಕ್ಕೆ ಸಾಧ್ಯವಿಲ್ಲ. ನಮ್ಮ ಸಂಸ್ಥಾನದಲ್ಲಿ ಯಾರಿಗೇ ಆಗಲಿ ಅವರ ಕುಟುಂಬಕ್ಕೆ ಅನುಸಾರವಾಗಿ ಎಷ್ಟು ಭೂಮಿಯನ್ನು ಅವರ ಸ್ವಂತ ಶ್ರಮದಿಂದ ಉಳುಮೆ ಮಾಡಬಹುದೋ ಅಷ್ಟು ಭೂಮಿಗಿಂತ ಹೆಚ್ಚಿಗೆ ಭೂಮಿ ಯಾರು ಇಟ್ಟುಕೊಳ್ಳತಕ್ಕದ್ದಲ್ಲ ಅದೆಲ್ಲಾ ಸರ್ಕಾರಕ್ಕೆ ಸೇರಬೇಕು"[೪೨] ಭೂಮಿತಿಯಿಂದ ದೊಡ್ಡ ಹಿಡುವಳಿದಾರರು ಭೂಮಿಯನ್ನು ಸರ್ಕಾರಕ್ಕೆ ವಹಿಸಿಕೊಡಬೇಕೆಂಬುದು ಅವರ ಆಶಯವಾಗಿತ್ತು. ಭೂಮಿ ಹಂಚಿಕೆಯಾಗಲೀ, ಭೂಮಿತಿಯಾಗಲೀ ಸಮಾಜವಾದದ ಸೈದ್ಧಾಂತಿಕ ತಳಹದಿಯ ಮೇಲೆ ಭೂ ವಿತರಣೆಯಾಗಬೇಕೆಂಬುದು, ಗೌಡರ ನಿಲುವಾಗಿದೆ. ಯಾವುದೇ ಭೂ ಕಾಯ್ದೆಗಳಾಗಲೀ ಅವುಗಳು ರೈತನ ಶಕ್ತಿ ಸಾಮರ್ಥ್ಯಗಳ ಆಧಾರದ ಮೇಲೆ ಭೂ ವಿತರಣೆಯಾಗಬೇಕೆಂಬ ಬಯಕೆ ಗೌಡರಲ್ಲಿ ಕಂಡುಬರುತ್ತದೆ. ಸ್ವತಃ ಕಾಗೋಡು ಸತ್ಯಾಗ್ರಹದಲ್ಲಿ ಭಾಗವಹಿಸಿ ಗೇಣಿದಾರ ರೈತರ ಸಮಸ್ಯೆಯನ್ನು ಅರಿತವರಾಗಿದ್ದರಿಂದ ಈ ಬಗ್ಗೆ ಸ್ಪಷ್ಟ ಕಲ್ಪನೆಗಳು ಅವರಿಂದ

ವ್ಯಕ್ತವಾಗಿವೆ. ಭೂ ಸಮಸ್ಯೆ ಇಂದು ನಿನ್ನೆಯವಲ್ಲ ಎಂಬುದನ್ನು ಅರಿತಿದ್ದ ಅವರು ರಾಷ್ಟ್ರದಲ್ಲಿ ಭೂ ಸಮಸ್ಯೆಯನ್ನು ಮೂರು ಮಾರ್ಗಗಳಲ್ಲಿ ಬಗೆಹರಿಸಬಹುದೆಂದು ತಿಳಿದಿದ್ದರು.

ಅವುಗಳೆಂದರೆ "ಒಂದು ಕಮ್ಯುನಿಸ್ಟರ ತೆಲಂಗಾಣ ಮಾರ್ಗ, ಎರಡು ಕಾನೂನು ಮಾಡಿ ಭೂಮಿಯನ್ನು ಸಮಾನವಾಗಿ ಹಂಚಿಕೆ ಮಾಡತಕ್ಕ ಮಾರ್ಗ, ಮೂರನೆಯದು ಇತ್ತೀಚೆಗೆ ವಿನೋಬಾ ಭಾವೆಯವರು ಆಚರಣೆಗೆ ತಂದಿರತಕ್ಕ ಭೂಮಿಯನ್ನು ಇದ್ದವರಿಂದ ದಾನವಾಗಿ ತೆಗೆದುಕೊಂಡು ಇಲ್ಲದವರಿಗೆ ಹಂಚಿಕೆ ಮಾಡತಕ್ಕ ಮಾರ್ಗ."[೪೩] ಈ ಅಭಿಪ್ರಾಯದಲ್ಲಿ ಭೂಹಂಚಿಕೆ ಕುರಿತ ಮಾರ್ಗಗಳನ್ನು ಸ್ಪಷ್ಟವಾಗಿ ಗುರುತಿಸಿದ್ದಾರೆ. ಆದರೆ ಈ ಮೂರು ಮಾರ್ಗಗಳಿಂದಲೂ ಭೂ ಸಮಸ್ಯೆಯನ್ನು ಪರಿಹರಿಸಲು ಎಷ್ಟರಮಟ್ಟಿಗೆ ಸಾಧ್ಯ ಎಂಬುದನ್ನು ಆಲೋಚಿಸಬೇಕಾದ ವಿಚಾರವಾಗಿದೆ.

### ೨.ನೀಲಗಂಗಯ್ಯ ಪೂಜಾರ

ನೀಲಗಂಗಯ್ಯ ಪೂಜಾರ ಸಮಾಜವಾದಿ ಸೈದ್ಧಾಂತಿಕ ಪ್ರಭಾವದಲ್ಲಿ ಬೆಳೆದು ಬಂದವರು. ಧಾರವಾಡ ಜಿಲ್ಲೆಯಲ್ಲಿ ನೆಲೆಸಿರುವ ನೀಲಗಂಗಯ್ಯ ಪೂಜಾರ ಅವರು ಜನಪರ ಹೋರಾಟಗಳಿಗೆ ಸದಾ ಬೆಂಬಲಿಸುತ್ತ ಬಂದವರು. ಆ ಮೂಲಕ ಜನಪರ ಹೋರಾಟಗಳಿಗೆ ತೀವ್ರವಾಗಿ ಸ್ಪಂದಿಸುತ್ತಾ ಬಂದಿದ್ದಾರೆ. ಇವರು ಬಾಂಬೆ ಕರ್ನಾಟಕದ, ಮುಂಬೈ ಪ್ರಾಂತ್ಯದ ಪ್ರಜಾಸೋಷಲಿಸ್ಟ್‌ಪಕ್ಷದ ಶಾಸಕರಾಗಿ ಒಮ್ಮೆ ಆಯ್ಕೆಯಾಗಿದ್ದರು. ಈ ಸಂದರ್ಭದಲ್ಲಿ ಧಾರವಾಡ ಜಿಲ್ಲೆಯ ಬಳಿಯಿರುವ ಹೆಬ್ಬಳ್ಳಿ ಗ್ರಾಮದಲ್ಲಿ ೧೯೫೩ರಲ್ಲಿ ಹೆಬ್ಬಳ್ಳಿ ಜಹಗೀರುದಾರರ ಭೂಮಿಯನ್ನು ದಲಿತರಿಗೆ, ಗೇಣಿದಾರರಿಗೆ, ರೈತರಿಗೆ ಕೊಡಿಸುವಲ್ಲಿ ಪ್ರಮುಖ ಪಾತ್ರವಹಿಸಿದರು. ಭೂಮಿ ಪ್ರಶ್ನೆಯನ್ನು ಪರಿಹರಿಸಲು ಇವರು ಕಂಡುಕೊಂಡ ಮಾರ್ಗವೆಂದರೆ ಕಾನೂನು ಸಮರದ ಮೂಲಕ.

೧೯೫೩ರಲ್ಲಿ ಹೆಬ್ಬಳ್ಳಿ ಮನೆತನ ಸುಮಾರು ೧೨ ಸಾವಿರ ಎಕರೆ ಜಹಗೀರು ಭೂ ಪ್ರದೇಶವನ್ನು ಒಳಗೊಂಡಿತು. ಆಗಿನ ಕಾಲಕ್ಕೆ ಮುಂಬೈ ಗೇಣಿರದ್ಧತಿಕಾಯ್ದೆ ಜಾರಿಯಾಯಿತು. ಈ ಹಿನ್ನೆಲೆಯಲ್ಲಿ ಧಾರವಾಡವನ್ನು ಪ್ರತಿನಿಧಿಸಿದ್ದ ಶಾಸಕ ನೀಲಗಂಗಯ್ಯ ಪೂಜಾರ ಅವರು ಈ ಕಾಯ್ದೆಯ ಪ್ರಕಾರ ಜಹಗೀರುದಾರರ ಜಮೀನನ್ನು ವಶಪಡಿಸಿಕೊಳ್ಳಲು ಯತ್ನಿಸಿದರು. ಇಲ್ಲಿನ ಜಹಗೀರುದಾರರ ಒಡೆತನದಲ್ಲಿದ್ದ ೧೨ಸಾವಿರ ಎಕರೆ ಭೂ ಪ್ರದೇಶವನ್ನು ಹಂಚಲು ಕಾನೂನು ಸಮರವನ್ನು ಸಾರಿ ಅದರಲ್ಲಿ ಜಯಕಂಡರು. ಈ ಕಾನೂನು ಸಮರಕ್ಕಾಗಿ ಹಲವು ಬಾರಿ ಜಿಲ್ಲಾಧಿಕಾರಿಯ ಕಛೇರಿಗೆ ಭೇಟಿ ನೀಡಿ ಮನವಿ ಸಲ್ಲಿಸಿದರು. ಇದರ ಫಲವಾಗಿ ಆಗಿದ್ದ ಮೈಸೂರು ಸರ್ಕಾರದ ಮುಖ್ಯಮಂತ್ರಿಯಾಗಿದ್ದ ಬಿ.ಡಿ.ಜತ್ತಿಯವರು ಜಹಗೀರು ಭೂಮಿಯನ್ನು ಹಂಚಿಕೆ ಮಾಡುವಂತೆ ಆದೇಶಿಸಿದರು. ಆಗ ತಲಾ ೪೮ ಎಕರೆ ಭೂ ಪ್ರದೇಶವನ್ನು ೩೨೦ ರೈತರಿಗೆ, ತಲಾ ೧೬ ಎಕರೆಯಂತೆ ಕೂಲಿಕಾರ್ಮಿಕರಿಗೆ ಭೂಹೀನರಿಗೆ ಹಂಚಲಾಯಿತು. ಇದೊಂದು ರೀತಿಯಲ್ಲಿ ಸುದ್ದಿಯಾಗದೆ ತಣ್ಣಗೆ ನಡೆದ ಕಾನೂನು ಸಮರದ ಭೂ ಹೋರಾಟವೆಂದೇ ಗುರುತಿಸಬಹುದಾಗಿದೆ.

### ೩. ದೇವರಾಜ ಅರಸು

ಹಿಂದುಳಿದ ವರ್ಗಕ್ಕೆ ಆತ್ಮಸ್ಥೈರ್ಯ, ರಾಜಕೀಯ ಅಧಿಕಾರ ಮತ್ತು ಸಮರ್ಥ ನಾಯಕತ್ವವನ್ನು ತಂದುಕೊಟ್ಟ ಧೀಮಂತ ವ್ಯಕ್ತಿತ್ವ ದೇವರಾಜ ಅರಸರದು. ೭೦ರ ದಶಕದ ಅನಿರೀಕ್ಷಿತ ರಾಜಕೀಯ ಬೆಳವಣಿಗೆಯಿಂದ ಹಿಂದುಳಿದ ವರ್ಗಕ್ಕೆ ನಾಯಕತ್ವ ದೊರೆಯಿತು. ಕರ್ನಾಟಕದ ರಾಜ್ಯ ರಾಜಕಾರಣದಲ್ಲಿ ಹಲವು ದಶಕಗಳ ಕಾಲದವರೆಗೂ ಮೇಲ್ಜಾತಿಗಳ ಕೈಯಲ್ಲಿದ್ದ ರಾಜಕೀಯ ಅಧಿಕಾರ, ಹಿಂದುಳಿದ ವರ್ಗದ ಕೈಗಳಿಗೆ ವರ್ಗಾವಣೆಯಾಗಿದ್ದುದು ಮುಖ್ಯ ಸಂಗತಿಯಾಯಿತು. ಈ ಕಾಲಕ್ಕೆ ಬಹುಪಾಲು ಹಿಂದುಳಿದ ವರ್ಗದ ನಾಯಕರುಗಳು ಚುನಾವಣೆಯಿಂದ ಆರಿಸಿಬಂದಿದ್ದು ಕೂಡ ಬಹುಮುಖ್ಯವಾಯಿತು.

ಹಿಂದುಳಿದ ವರ್ಗಗಳ ಸಾಮೂಹಿಕ ನಾಯಕತ್ವದಿಂದಾಗಿ ಭೂ ಪ್ರಶ್ನೆಯನ್ನು ಪರಿಹರಿಸಲು ಇಲ್ಲಿ ಸಹಕಾರಿಯಾದುದನ್ನು ಕಾಣುತ್ತೇವೆ. ಈ ಮುನ್ನ ಕಾಂಗ್ರೆಸ್ ಪಕ್ಷ ಆಡಳಿತದಲ್ಲಿದ್ದ ನಾಯಕರೆಲ್ಲರೂ ಬಹುಪಾಲು ಮೇಲ್ಜಾತಿಯ ಭೂಮಾಲೀಕರಾಗಿದ್ದವರು. ೧೯೬೨ರ ಭೂಸುಧಾರಣಾ ಕಾಯ್ದೆಗಳು ಭೂಮಾಲೀಕರ ರಕ್ಷಣೆಗಾಗಿಯೇ ಇದ್ದಂಥವುಗಳಾಗಿದ್ದವು. ಈ ಕಾಯ್ದೆಗೆ ಆಮೂಲಾಗ್ರ ತಿದ್ದುಪಡಿ ತರುವುದಕ್ಕೆ ಮುನ್ನ ಊಳಿಗ ವ್ಯವಸ್ಥೆ ಪ್ರತಿರೋಧ ಅರಸು ಸರ್ಕಾರದ ಮೇಲೆ ನಡೆಯುತ್ತಿದ್ದುದನ್ನು ಕಂಡುಬರುತ್ತದೆ. ಇಂತಹ ಶಕ್ತಿಯ ವಿರುದ್ಧ ನಿಂತು ಭೂ ಪ್ರಶ್ನೆಗೆ

ಪರಿಹಾರ ಕಂಡುಕೊಳ್ಳಲು ಯತ್ನಿಸಿರುವುದು ದೊಡ್ಡ ಸಾಧನೆಯೆಂದೇ ಗುರುತಿಸಬಹುದಾಗಿದೆ.

ದೇವರಾಜ ಅರಸು ಅವರು ಭೂ ಪ್ರಶ್ನೆಯನ್ನು ಪರಿಹರಿಸಲು ರಾಜಕೀಯ ಅವಕಾಶವನ್ನು ಬಳಸಿಕೊಂಡು ಹಿಂದುಳಿದ ಸಮುದಾಯಕ್ಕೆ ದನಿಯಾದರು. ಈ ಕಾಲಕ್ಕೆ ಹಿಂದುಳಿದ ವರ್ಗಕ್ಕೆ ರಾಜಕೀಯ ಅವಕಾಶವಾಗಲೀ, ಅಧಿಕಾರವಾಗಲೀ, ಸ್ಥಾನಮಾನವಾಗಲೀ ಲಭ್ಯವಿರಲಿಲ್ಲ. ಈ ಹಿನ್ನೆಲೆಯಲ್ಲಿ ಅರಸು ಅವರು ಭೂ ಸುಧಾರಣೆಗಾಗಿ ರಾಜಕೀಯ ಅವಕಾಶಕ್ಕಾಗಿ ಕಾದಿದ್ದರ ಫಲವಾಗಿ ಇಂದು ಸಾವಿರಾರು ಭೂಹೀನ ರೈತರು ಭೂಮಾಲೀಕರಾಗಿರುವುದನ್ನು ಕಾಣುತ್ತೇವೆ.

ಭೂಸುಧಾರಣೆಯ ಪ್ರಧಾನ ಆಶಯವಾಗಿ ಉಳುವವನೇ ನೆಲದೊಡೆಯ ಎನ್ನುವ ಆಶಯದ ಹಿಂದೆ ಭೂಹೀನರಿಗೆ ಭೂ ಒಡೆತನ ಲಭ್ಯವಾಗಿರುವುದನ್ನು ಕಾಣಬಹುದಾಗಿದೆ. ಭೂಮಾಲೀಕರ ಹಿಡಿತದಲ್ಲಿದ್ದ ಭೂಮಿಯನ್ನು ಭೂಹೀನರಿಗೆ ದೊರೆಯುವಂತೆ ಭೂ ನ್ಯಾಯಮಂಡಳಿ ಸ್ಥಾಪಿಸಿ ಸ್ಥಳೀಯರಿಗೆ ಭೂ ಹಕ್ಕು ನೀಡಲು ಅಧಿಕಾರ ನೀಡಿದರು. ಈ ನ್ಯಾಯಮಂಡಳಿಗಳಿಗೆ ಸ್ಥಳೀಯ ಅಧಿಕಾರಿಗಳು, ಕ್ಷೇತ್ರದ ಶಾಸಕರು, ರೈತ ಪ್ರತಿನಿಧಿಗಳು, ದಲಿತ ಪ್ರತಿನಿಧಿಗಳು ಇರುವಂತೆ ಕಾನೂನನ್ನು ರಚಿಸಲಾಯಿತು. ಭೂ ಸ್ವಾಧೀನಕ್ಕಾಗಿ ಗೇಣಿದಾರ ಕೊಡಬೇಕಾದ ಹಣವನ್ನು ರಾಜ್ಯದ ಭೂ ಅಭಿವೃದ್ಧಿ ಬ್ಯಾಂಕಿನಿಂದ ಆರ್ಥಿಕ ನೆರವನ್ನು ನೀಡುವಂತೆ ಮಾಡಿದರು. ಇದೇ ಸಂದರ್ಭದಲ್ಲಿ ಕ್ರಾಂತಿಕಾರಕವಾದ ಜೀತಪದ್ಧತಿ ನಿಷೇಧ, ಮಲಹೊರುವ ಪದ್ಧತಿ ನಿಷೇಧಿಸಿ ಅಧಿಕೃತವಾಗಿ ಪೌರಕಾರ್ಮಿಕರೆಂದು ಕಾನೂನು ಜಾರಿಗೊಳಿಸಿದರು.

ಅರಸುರವರ ಸಾಮಾಜಿಕ ಕಾಳಜಿಯಿಂದ ಬಡತನ ನಿರ್ಮೂಲನೆ,ಕೂಲಿಕಾರ್ಮಿಕರಿಗೆ ಕನಿಷ್ಠ ಕೂಲಿ, ಋಣಪರಿಹಾರ, ಜನತಾಮನೆಗಳ ನಿರ್ಮಾಣಯೋಜನೆ, ಭಾಗ್ಯಜ್ಯೋತಿ, ವೃದ್ಧಾಪ್ಯವೇತನ ಮೊದಲಾದ ಜನಪ್ರಿಯ ಯೋಜನೆಗಳನ್ನು ರೂಪಿಸುವುದರ ಮೂಲಕ ದೀನ ದಲಿತರ ಬದುಕಿಗೆ ಆಶಾಕಿರಣವಾದರು. ನಿರುದ್ಯೋಗಿಗಳ ಸ್ಟೈಫಂಡರಿ ಯೋಜನೆ, ವಿದ್ಯಾರ್ಥಿಗಳಿಗೆ ಉಚಿತ ಊಟ, ಉಚಿತ ವಸತಿ, ಶಿಷ್ಯವೇತನ, ಶುಲ್ಕ ರಿಯಾಯಿತಿ ಮೊದಲಾದ ಆಕರ್ಷಕ ಕಾರ್ಯಕ್ರಮಗಳನ್ನು ಜಾರಿಗೊಳಿಸಿದರು.

ಈ ಕಾರಣಕ್ಕಾಗಿ ಅರಸು ಅವರ ಕಾಲದ ಸುಧಾರಣಾ ನೀತಿಗಳು ಜನಪ್ರಿಯ ಮತ್ತು ಜನಮನ ಗೆದ್ದಿವೆ. ಇವರ ಆಡಳಿತ ಕರ್ನಾಟಕದಲ್ಲಿ ಹೊಸದೊಂದು ಯುಗವನ್ನು ಆರಂಭಿಸಿದಂತಾಯಿತು. ಭೂಹೀನರಿಗೆ, ಗೇಣಿದಾರರಿಗೆ, ದಲಿತರಿಗೆ ಇವರ ಆಡಳಿತಾವಧಿಯಲ್ಲಿ ಭೂಮಾಲೀಕತ್ವ ದಕ್ಕುವಂತಾಯಿತು. ಆದರೆ ಇವರ ಆಡಳಿತದಲ್ಲಿ ಭ್ರಷ್ಟಾಚಾರ ಬೃಹತ್ ಪ್ರಮಾಣದಲ್ಲಿ ಬೆಳೆಯಿತು ಎಂಬ ಅಪವಾದವಿದೆ. ಅಲ್ಲದೆ ಭೂ ನ್ಯಾಯಮಂಡಳಿಗಳ ಮೂಲಕ ಭೂ ಹಂಚಿಕೆಯ ಪರಿಹಾರವು ಮೋಸದಿಂದ, ವಂಚನೆಯಿಂದ, ಸ್ವಜಾತಿ ಹಿತಾಸಕ್ತಿಯಿಂದ ಕೂಡಿತ್ತು ಎಂಬ ಅಪವಾದವಿದೆ. ಇನ್ನೂ ಕೆಲವು ಭಾಗಗಳಲ್ಲಿ ಭೂಹಂಚಿಕೆ ಆಗದೇ ಉಳಿಯಿತು, ಅಲ್ಲದೆ ಕಾಫಿಎಸ್ಟೇಟ್‌ಗಳಲ್ಲಿ ಭೂಮಿತಿ ಕಾನೂನು ಜಾರಿಯಾಗದೇ ಉಳಿಯಿತು ಎಂಬ ಅಪವಾದಗಳಿವೆ. ಆದರೆ ಕೆಲವು ಪ್ರದೇಶಗಳ ಮಟ್ಟಿಗಾದರೂ ಪರಿಣಾಮಕಾರಿಯಾದಂತಹ ಭೂಸುಧಾರಣೆಯಾಗಿರುವುದು ಆಶಾದಾಯಕ ಬೆಳವಣಿಗೆಯಾಗಿದೆ.

**೩.೩.೨.೧೧ ಕಡಿದಾಳು ಶಾಮಣ್ಣ**

ಕಡಿದಾಳು ಶಾಮಣ್ಣನವರು ಕರ್ನಾಟಕ ರಾಜ್ಯ ರೈತ ಸಂಘದ ಮುಂಚೂಣಿ ನಾಯಕರಾಗಿದ್ದಾರೆ. ಪ್ರೊ.ಎಂ.ಡಿ.ಎನ್., ಕೆ.ರಾಮದಾಸ್, ತೇಜಸ್ವಿ, ಸಮಾಜವಾದಿ ಗೆಳೆಯರ ಬಳಗದಲ್ಲಿ ಶಾಮಣ್ಣನವರು ಒಬ್ಬರಾಗಿದ್ದಾರೆ. ಇವರು ಅನೇಕ ಪ್ರಗತಿಪರ ಹೋರಾಟಗಳಲ್ಲಿ ತೊಡಗಿಸಿಕೊಂಡವರು. ರೈತ ಸಂಘಟನೆಯೊಂದಿಗೆ ತಾತ್ವಿಕ ಸಂಘರ್ಷವನ್ನು ಸದಾ ಇಟ್ಟುಕೊಂಡು ಬಂದವರಾಗಿದ್ದಾರೆ. ಇವರು ಭೂ ಪ್ರಶ್ನೆ ಕುರಿತು ಯೋಚಿಸಿದರಲ್ಲದೆ ಸ್ವತಃ ಬಗರ್ ಹುಕುಂ ಅರಣ್ಯ ಭೂಮಿಯನ್ನು ಕೊಡಿಸುವಲ್ಲಿ ಹೋರಾಟದಲ್ಲಿ ಭಾಗವಹಿಸಿದ್ದವರು.ಇಂಥ ಮಾದರಿಯಲ್ಲಿ ಭೂ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವಲ್ಲಿ ಯತ್ನಿಸಿದರು.

ಸಾಗರ, ಸೊರಬ, ತೀರ್ಥಹಳ್ಳಿ ತಾಲ್ಲೂಕುಗಳ ಭಾಗದಲ್ಲಿ ಬಗರ್‌ಹುಕುಂ ಸಾಗುವಳಿ ಭೂಮಿ ಹಂಚಿಕೆಯಲ್ಲಿ ದಲಿತರಿಗೆ ಭೂಹೀನ ರೈತರಿಗೆ ಭೂಮಿ ದೊರಕಿಸಿಕೊಡುವಲ್ಲಿ ಸತತ ಹೋರಾಟ ನಡೆಸುತ್ತಾ ಬಂದಿದ್ದಾರೆ. ಭೂಹಂಚಿಕೆಯ ವಿಚಾರದಲ್ಲಿ ಸರ್ಕಾರಗಳು, ಬಗರ್‌ಹುಕುಂ ಸಾಗುವಳಿ ಅರಣ್ಯ ಭೂಮಿಯನ್ನು

ನೀಡದೆ ವಂಚಿಸುತ್ತಿತ್ತು. ಈ ಸಂದರ್ಭದಲ್ಲಿ ರೈತರನ್ನು ಜಾಗೃತಿಗೊಳಿಸಿ ಹೋರಾಟದ ಮೂಲಕ ಸರ್ಕಾರದ ಗಮನಸೆಳೆದು ಪರಿಹಾರ ಒದಗಿಸಲು ಯತ್ನಿಸಿದ್ದಾರೆ.

ತುಂಗಾಯೋಜನೆಯ ಹಿನ್ನೀರಿನಿಂದ ಹಲವಾರು ಗ್ರಾಮಗಳ ಮುಳುಗಡೆಯಾದ ಸಂದರ್ಭದಲ್ಲಿ ನಿರ್ವಸತಿಕರಿಗೆ ಸ್ವತಃ ತಾವೇ ಮುಂದೆ ನಿಂತು ಪರಿಹಾರ ಕೊಡಿಸಿದ್ದಾರೆ. ಈ ಭಾಗದ ಜನರಿಗೆ ಭೂಮಿ ಮತ್ತು ವಸತಿಯನ್ನು ಕಳೆದುಕೊಂಡ ನಿರಾಶ್ರಿತರಿಗೆ ಪರಿಹಾರ ಕೊಡಿಸುವ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಇಂದಿಗೂ ಪ್ರಗತಿಪರ ಸಂಘಟನೆಯ ಮೂಲಕ ಶಾಮಣ್ಣನವರು ಗುರುತಿಸಿಕೊಂಡಿದ್ದಾರೆ.

### ೩.೩.೪ ಗಾಂಧಿ ಚಿಂತನೆ ಮತ್ತು ಭೂಮಿಯ ಪ್ರಶ್ನೆ

ಗಾಂಧೀಜಿಯವರು ಭಾರತೀಯ ಸಂದರ್ಭದಲ್ಲಿ ಬಹುದೊಡ್ಡ ನಾಯಕತ್ವ ತಂದುಕೊಟ್ಟು, ಸಮಗ್ರವಾದಂತಹ ರಾಷ್ಟ್ರೀಯ ಪ್ರಜ್ಞೆಯನ್ನು ಜನರಲ್ಲಿ ಮೂಡಿಸಲು ಯತ್ನಿಸಿದರು. "ತಾನು ವ್ಯವಸಾಯ ಮಾಡಬಲ್ಲಷ್ಟು ಭೂಮಿಯಿರುವ ರೈತ ಇತರರನ್ನು ಶೋಷಿಸಲಾರ."[೪೪] ಎಲ್ಲರೂ ಭೂಒಡೆತನ ಹೊಂದಬೇಕೆಂಬ ಸದಾಶಯ ಈ ಮಾತಿನಲ್ಲಿ ವ್ಯಕ್ತವಾಗುತ್ತದೆ. ಬಹುಪಾಲು ರೈತರು ಇರುವ ಈ ದೇಶದಲ್ಲಿ ಪ್ರತಿಯೊಬ್ಬ ವ್ಯಕ್ತಿ ತಾನು ಸ್ವತಂತ್ರ ಬೇಸಾಯಗಾರನಾದರೆ ಆತ ಭೂಮಾಲೀಕನಾದಂತೆ ಆದ್ದರಿಂದ ಇತರರನ್ನು ಶೋಷಿಸಲಾರ ಎಂಬ ಆಶಯವನ್ನಿಟ್ಟುಕೊಂಡು ತಮ್ಮ ಚಿಂತನೆಯನ್ನು ವ್ಯಕ್ತಪಡಿಸಿದ್ದಾರೆ.

ಗಾಂಧೀಜಿಯವರು ಸಮಗ್ರ ಭಾರತದ ಕನಸು ಕಂಡವರು, ಜೊತೆಗೆ ಗ್ರಾಮಸ್ವರಾಜ್ಯದ ಕನಸನ್ನು ಅನುಷ್ಠಾನಗೊಳಿಸಲು ಯತ್ನಿಸಿದರು. ರೈತ ಕಾಳಜಿ ಕುರಿತು ಗಾಂಧೀಜಿ ಚಿಂತನೆ ನಡೆಸಿದ್ದರೂ ಮುಖ್ಯವಾಗಿ ಅವರ ಚಿಂತನೆಗಳು ರಾಷ್ಟ್ರೀಯ ಹೋರಾಟದತ್ತ ಕೇಂದ್ರೀಕೃತವಾಗಿವೆ. ಗಾಂಧೀಜಿಯವರು ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ಬಹು ಸಂಖ್ಯಾತ ರೈತವರ್ಗವನ್ನುಸೇರಿಸಿಕೊಳ್ಳುವುದು ಮುಖ್ಯವೆಂದು ಭಾವಿಸಿದ್ದರು. ಮಾತ್ರವಲ್ಲದೆ ಗಾಂಧೀಜಿಯವರು ಬಹುಸಂಖ್ಯಾತ ರೈತ ವರ್ಗವನ್ನು ಸೆಳೆದರೂ, ಶ್ರೀಮಂತ ಭೂಮಾಲೀಕರ ವಿರುದ್ಧದ ರೈತರ ಸಿಟ್ಟನ್ನು ರಾಷ್ಟ್ರೀಯ ಹೋರಾಟದ ಕಡೆ ತಿರುಗಿಸಿದರು.

ಗಾಂಧೀಜಿಯವರು ದೇಶದ ಬಾಹ್ಯ ಬಿಕ್ಕಟ್ಟನ್ನು ಪರಿಹರಿಸಿದಂತೆ ಅಂತರಿಕ ಸಮಸ್ಯೆಗಳನ್ನು ಪರಿಹರಿಸುವಲ್ಲಿ ದೃಢನಿರ್ಧಾರ ಕೈಗೊಳ್ಳಲಿಲ್ಲ. ಉದಾಹರಣೆಗೆ ಗಡಿ ಸಮಸ್ಯೆ ಕುರಿತು, ಹಿಂದು ಮುಸ್ಲಿಂ ರಾಷ್ಟ್ರಗಳ ವಿಭಾಗೀಕರಣ ಸಂದರ್ಭದಲ್ಲಿ, ಸ್ಥಳೀಯ ರೈತ ಪ್ರಶ್ನೆಗಳನ್ನು ಪರಿಹರಿಸುವಲ್ಲಿ, ಮೊದಲಾದವುಗಳಿಗೆ ಗಾಂಧೀಜಿಯ ಪ್ರತಿಕ್ರಿಯೆಗಳು ಇಂದಿಗೂ ಚರ್ಚಾರ್ಹವಾಗಿವೆ. ಆದರೆ ಸಂಪೂರ್ಣವಾದ ಸ್ಥಳೀಯ ರೈತರ ಸಮಸ್ಯೆಗಳಿಗೆ ಸ್ಪಂದಿಸಲಿಲ್ಲ ಎಂದು ಹೇಳಲಾಗದು.

ಗಾಂಧೀಜಿಯವರ ಕಾರ್ಯಕ್ರಮಗಳಲ್ಲಿ ಭೂಪ್ರಶ್ನೆಯಾಗಲಿ, ಸಣ್ಣರೈತರ ಸಮಸ್ಯೆಯಾಗಳಾಗಲಿ, ಅವರಿಗೆ ಮುಖ್ಯವಾಗದೆ ರಾಷ್ಟ್ರೀಯ ಹೋರಾಟವೇ ಮುಖ್ಯವಾಗಿತ್ತು. ಈ ಕುರಿತು ಮುಜಾಫರ್ ಅಸ್ಸಾದಿ ಹೇಳುವಂತೆ. "ಈ ಸ್ಥಳೀಯ ಸಮಸ್ಯೆಯನ್ನು ರಾಷ್ಟ್ರ ಪರಿಹರಿಸಿಕೊಳ್ಳಬೇಕೆಂಬ ಒತ್ತಾಸೆಯನ್ನು ಗಾಂಧಿಯವರು ಮುಂದಿಟ್ಟರು. ಹೀಗಾಗಿ ಬಹು ದೊಡ್ಡ ಸಮಸ್ಯೆಯಾದ ಭೂ ಪ್ರಶ್ನೆ ಪರಿಹರಿಸದೆ ಗಾಂಧೀಜಿ ಹಿಂದೆ ಸರಿದಿದ್ದುದನ್ನು ಗಮನಿಸಬೇಕು."[೪೫]

ಈ ಕಾರಣಕ್ಕಾಗಿ ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ಸ್ಥಳೀಯ ಪ್ರಶ್ನೆಗಳು ಹಾಗೆಯೇ ಉಳಿದವು. ಇದಕ್ಕೆ ಪೂರಕವಾಗಿ ಈ ಮಾತನ್ನು ಗಮನಿಸಬಹುದು. "ಗಾಂಧಿ ಪ್ರಕಾರ ಆಂತರಿಕ ವೈರುದ್ಯಗಳನ್ನು ರಾಷ್ಟ್ರೀಯ ಹೋರಾಟದಲ್ಲಿ ಮುಂದಕ್ಕೆ ತಂದು ಬಿಟ್ಟರೆ ಅಥವಾ ಕೇಂದ್ರ ಬಿಂದುವಾಗಿ ಮಾಡಿಬಿಟ್ಟರೆ ಅದು ರಾಷ್ಟ್ರೀಯ ಹೋರಾಟಕ್ಕೆ ತಡೆಯಾಗಿರುತ್ತದೆ, ಓಸ್ನಡೆಯಾಗುತ್ತದೆ ಎಂದು ಗಾಂಧಿ ಗ್ರಹಿಸಿದ್ದರು. ಯಾವುದೇ ಕಾರಣಕ್ಕೂ ಆಂತರಿಕ ವೈರುಧ್ಯಗಳು ಸ್ವಾತಂತ್ರ್ಯದ ನಂತರ, ಸ್ವಾತಂತ್ರ್ಯ ಭಾರತ ತಿದ್ದಿಕೊಳ್ಳಬೇಕು ಎಂಬ ಭಾವವನ್ನು ಮುಂದಿಟ್ಟುಬಿಟ್ಟರು."[೪೬] ಇದೇ ಕಾಲಕ್ಕೆ ರಾಷ್ಟ್ರೀಯ ಹೋರಾಟದ ಇತರೆ ನಾಯಕರುಗಳಿಗೆ ಈ ಪ್ರಶ್ನೆ ಮುಖ್ಯವಾಗಿ ಕಾಣದೆ ಮೌನವಹಿಸಿರುವುದು ವ್ಯಕ್ತವಾಗುತ್ತದೆ.

ಗಾಂಧೀಜಿ ರೈತ ಪರವಾಗಿದ್ದು, ರೈತ ವಿರೋಧಿ ನಿಲುವನ್ನು ತಾಳದೆ, ರೈತರೊಂದಿಗೆ ಬೆರೆತು ರೈತ ಸಮಸ್ಯೆಗೆ ಸ್ಪಂದಿಸಿರುವುದು ಕಂಡುಬರುತ್ತದೆ. ೧೯೧೭ರಲ್ಲಿ ಚಂಪಾರಣ್ಯ ಸತ್ಯಾಗ್ರಹದ ನಾಯಕತ್ವ ವಹಿಸಿದರು.

ಇಲ್ಲಿ ಮಳೆಬೆಳೆ ತೃಪ್ತಿಕರವಾಗಿ ಆಗದಿದ್ದಾಗ, ಅಧಿಕಾರಿಗಳು ಬಲವಂತವಾಗಿ ಕಂದಾಯ ವಸೂಲಿ ಮಾಡುವುದರ ವಿರುದ್ಧವಾಗಿ ಕರನಿರಾಕರಣೆ ಚಳುವಳಿಯಲ್ಲಿ ಭಾಗವಹಿಸಿದ್ದರು. ಅಲ್ಲದೆ ಖೇಡ ಸತ್ಯಾಗ್ರಹ,ಬಾರ್ಡೋಲಿ ಸತ್ಯಾಗ್ರಹಗಳಲ್ಲಿ ಭಾಗವಹಿಸಿ ರೈತ ಪರವಾಗಿ ನಿಂತರು.

ಗಾಂಧೀಜಿಯವರಲ್ಲಿ ರೈತರ ಸಮಸ್ಯೆಗಳು ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ಮುಖ್ಯಹೋರಾಟವಾಗಿ ಪ್ರಧಾನವಾಹಿನಿಗೆ ಬರದೇ ಇದ್ದುದನ್ನು ಕಾಣಬಹುದಾಗಿದೆ. ಈ ಕಾರಣಕ್ಕಾಗಿಯೇ ರೈತ ಪ್ರಶ್ನೆಗಳಲ್ಲಿ ಪ್ರಧಾನವಾದ ಭೂ ಪ್ರಶ್ನೆ ಸ್ವತಂತ್ರ ಭಾರತದ ಸಂದರ್ಭದಲ್ಲಿ ಇತ್ಯರ್ಥವಾಗದೆ ಉಳಿಯಿತು. ಬಹುಸಂಖ್ಯಾತ ರೈತ ವರ್ಗ ಭೂ ಸಮಸ್ಯೆಯನ್ನು ರಾಷ್ಟ್ರೀಯ ಹೋರಾಟದ ಒಂದುಭಾಗ ಎಂದು ನಂಬಿತ್ತು. ಇದು ರಾಷ್ಟ್ರೀಯ ಹೋರಾಟದ ಒಂದಂಶವಾಗದೇ ಹುಸಿಗೊಳ್ಳುತ್ತಾ ಹೋದಂತೆ ರೈತರು ನಿರಾಶಾಭಾವನೆ ತಳೆದರು. ಇದೇ ಕಾಲಕ್ಕೆ ಭೂಮಾಲೀಕರು, ಪಾಳೆಯಗಾರರು ಪುನಃ ಭೂಮಾಲೀಕರಾಗಿ ಅಸ್ತಿತ್ವ ಪಡೆದರು.

ಗಾಂಧಿವಾದದ ನಡೆಯನ್ನು ಕುರಿತು ಅರವಿಂದ ಮಾಲಗತ್ತಿ ಹೇಳುವಂತೆ "ಗಾಂಧಿವಾದವು ಪರಿವರ್ತನೆ ಮಾಡುವ ಅನುಕಂಪಾಧಾರಿತ ಧೋರಣೆಯೊಂದಿಗೆ ವ್ಯವಸ್ಥೆಯನ್ನು ಬದಲಾಯಿಸಬಹುದು ಎಂದು ಬಯಸುತ್ತದೆ."[೪೭] ಗಾಂಧೀವಾದವು ವ್ಯವಸ್ಥೆ ಮತ್ತು ಬದಲಾವಣೆಗಳನ್ನು ಹಕ್ಕೊತ್ತಾಯದಂತೆ ಪಡೆಯಲು ಯತ್ನಿಸದೆ ಇರುವುದನ್ನು ಕಾಣುತ್ತೇವೆ.ಇಂತಹ ಅನುಕಂಪಾಧಾರಿತ ಹೋರಾಟಗಳೆಲ್ಲವೂ ಅಹಿಂಸಾತ್ಮಕ ನೆಲೆಯಲ್ಲಿ ಅನುಕಂಪದ ಆಧಾರದ ಮೇಲೆ ಕಾರ್ಯರೂಪಕ್ಕೆ ಬಂದಿರುವುದನ್ನು ಗಮನಿಸಬಹುದು.ಆದ್ದರಿಂದ ಇಲ್ಲಿ ಮಾರ್ಕ್ಸ್‌ವಾದಕ್ಕೆ ಪ್ರತಿಯಾಗಿ ಮನಃಪರಿವರ್ತನೆಯ ಮೂಲಕ,ಸುಧಾರಣೆಯ ಮೂಲಕ ಸಮಾನ ನೆಲೆಯ ಮೂಲಕ ಪರಿಹಾರ ಕಲ್ಪಿಸಲು ಅವರು ಸೂಚಿಸುತ್ತಾರೆ. ಈ ಹಿನ್ನೆಲೆಯಲ್ಲಿ ಸುಧಾರಣಾವಾದದ ಕಲ್ಪನೆಯ ಕೂಸಾಗಿ `ಭೂದಾನ ಚಳವಳಿ`ಯನ್ನು ವಿನೋಬಾ ಅವರು ಹುಟ್ಟುಹಾಕಿದರು.

ಗಾಂಧಿವಾದವು ವಿಶ್ವಸ್ತಿಕೆಯ ಸಿದ್ಧಾಂತವನ್ನು ಪ್ರತಿಪಾದಿಸಲು ಯತ್ನಿಸಿ, ಭೂಮಿ ಮತ್ತು ಒಡೆತನ ಕುರಿತು ವಿವೇಚಿಸಿರುವುದನ್ನು ಚಿಂತಿಸಿದೆ. ಗಾಂಧಿಯ ಪ್ರಕಾರ ದುಡಿಮೆಗಾರನೇ ನಿಜವಾದ ಒಡೆಯ, ಅವುಗಳನ್ನು ಹೊಂದಿರುವಂತ ವ್ಯಕ್ತಿ ಒಡೆಯನಲ್ಲ ಎಂಬುದರೊಂದಿಗೆ ಅಂತಿಮವಾಗಿ ಅದರ ಒಡೆತನ ಸಮಾಜದ್ದಾಗಿದೆ ಎಂಬುದಾಗಿ ಪ್ರತಿಪಾದಿಸಲು ಯತ್ನಿಸುತ್ತಾರೆ. ಪ್ಯಾರಲಾಲ್ ೧೯೫೨ರಲ್ಲಿ ಪ್ರಕಟಿಸಿರುವಂತೆ.

"೧. ವಿಶ್ವಸ್ಥ ವ್ಯವಸ್ಥೆಯೆನ್ನುವುದು, ಸಮಾಜದಲ್ಲಿರುವ ಪ್ರಸ್ತುತ ಬಂಡವಾಳಶಾಹಿ ವ್ಯವಸ್ಥೆಯನ್ನು ಸಮತಾ ವ್ಯವಸ್ಥೆಗೆ ಪರಿವರ್ತಿಸುವ ಒಂದು ಮಾರ್ಗವಾಗಿದೆ. ಇಲ್ಲಿ ಬಂಡವಾಳಶಾಹಿ ವ್ಯವಸ್ಥೆಗೆ ಅವಕಾಶವೇ ಇಲ್ಲ. ಆದರೆ ಮಾಲೀಕ ವರ್ಗಕ್ಕೆ ತನ್ನನ್ನು ಸುಧಾರಿಸಿಕೊಳ್ಳಲು ಒಂದು ಅವಕಾಶವನ್ನು ಕಲ್ಪಿಸಿಕೊಡುತ್ತದೆ.

೨. ತನ್ನ ಕಲ್ಯಾಣದ ದೃಷ್ಟಿಯಿಂದ ಸಮಾಜವೇ ಆಸ್ತಿಯ ಖಾಸಗಿ ಒಡೆತನಕ್ಕೆ ಕೆಲಮಟ್ಟಿನ ಅವಕಾಶ ಕೊಡಬಹುದಾದರೂ ಅದನ್ನು ಬಿಟ್ಟು ಬೇರೆ ಯಾವುದೇ ರೀತಿಯ ಖಾಸಗಿ ಆಸ್ತಿಯ ಒಡೆತನದ ಹಕ್ಕನ್ನೂ ಅದು ಒಪ್ಪುವುದಿಲ್ಲ.

೩. ಸಂಪತ್ತಿನ ಒಡೆತನ ಮತ್ತು ಬಳಕೆಗಳ ಮೇಲೆ ಕಾನೂನಿನ ನಿಯಂತ್ರಣವಿಟ್ಟುಕೊಳ್ಳುವುದನ್ನು ಅದು ನಿರಾಕರಿಸುವುದಿಲ್ಲ.

೪. ಈ ರೀತಿ, ರಾಜ್ಯ ನಿಯಂತ್ರಣವುಳ್ಳ ವಿಶ್ವಸ್ಥ ವ್ಯವಸ್ಥೆಯಡಿಯಲ್ಲಿ ಯಾವುದೇ ವ್ಯಕ್ತಿ ತನ್ನ ಸಂಪತ್ತನ್ನು ತನ್ನ ಸ್ವಾರ್ಥದ ತೃಪ್ತಿಗಾಗಲಿ ಅಥವಾ ಸಮಾಜದ ಹಿತಕ್ಕೆ ವಿರೋಧವಾಗಿಯೇ ಆಗಲಿ ವಶದಲ್ಲಿಟ್ಟುಕೊಳ್ಳಲು ಇಲ್ಲವೇ ಬಳಸಿಕೊಳ್ಳಲು ಸ್ವತಂತ್ರನಾಗಿರುವುದಿಲ್ಲ.

೫.ಗೌರವದಿಂದ ಬದುಕಲು ಬೇಕಾಗುವ ಕನಿಷ್ಠ ವೇತನದ ಪ್ರಮಾಣವನ್ನು ನಿರ್ಧರಿಸಬೇಕು ಎಂಬ ಅಪೇಕ್ಷೆಯಿರುವ ಹಾಗೇ ಸಮಾಜದಲ್ಲಿ ಯಾವುದೇ ವ್ಯಕ್ತಿ ಗಳಿಸಲು ಅವಕಾಶವಿರುವ ಆದಾಯಕ್ಕೂ ಒಂದು ಗರಿಷ್ಟಮಿತಿ ನಿರ್ಧಾರವಾಗಬೇಕು.

೬.ಗಾಂಧಿ ಕಲ್ಪನೆಯ ಅರ್ಥ ವ್ಯವಸ್ಥೆಯಲ್ಲಿ, ಉತ್ಪಾದನೆ ಸ್ವರೂಪ ಸಾಮಾಜಿಕ ಅಗತ್ಯಗಳ ಆಧಾರದ ಮೇಲೆ ನಿರ್ಧಾರವಾಗುತ್ತದೆಯಲ್ಲದೆ, ವೈಯಕ್ತಿಕ ಲಹರಿ ಅಥವಾ ವೈಯಕ್ತಿಕ ದುರಾಶೆಗಳ ಮೇಲೆ ನಿರ್ಧಾರಗೊಳ್ಳುವುದಿಲ್ಲ."

ಗಾಂಧೀವಾದ ಎರಡು ರೀತಿಯ ದ್ವಂದ್ವ ನಿಲುವನ್ನು ಹೊಂದಿರುವುದು ವ್ಯಕ್ತವಾಗುತ್ತದೆ. ಒಡೆತನ ಕುರಿತಂತೆ ಗಾಂಧೀವಾದವು ಚರ್ಚೆ ಮಾಡಿದೆ. ಖಾಸಗಿ ಆಸ್ತಿಯ ಪರಿಕಲ್ಪನೆಯನ್ನು ಒಪ್ಪುತ್ತಲೇ ಅದು ಸಮಾಜದ ಒಡೆತನದಲ್ಲಿರಬೇಕು ಎಂಬುದಾಗಿ ಬಯಸುತ್ತದೆ. ಭೂಮಿಯನ್ನು ಸರ್ಕಾರ ನಿಯಂತ್ರಿಸಬೇಕೆಂಬ ಆಶಯ ವ್ಯಕ್ತಪಡಿಸುತ್ತದೆ.

ಗಾಂಧೀವಾದವು ಆಸ್ತಿಯ ಒಡೆತನ ಕುರಿತು ಚರ್ಚಿಸುವಂತೆ ಇತರೆ ಗ್ರಾಮಸ್ವರಾಜ್ಯ ಕಲ್ಪನೆಯತ್ತಲೂ ಗಮನಹರಿಸುತ್ತದೆ. ಈ ವಾದವು ಗ್ರಾಮಸ್ವರಾಜ್ಯ ನೆಲೆಯಲ್ಲಿ ಭೂ ಪ್ರಶ್ನೆಗೆ ಪರಿಹಾರವನ್ನು ಕಂಡುಕೊಳ್ಳಲು ಯತ್ನಿಸಿರುವುದನ್ನು ಕಾಣುತ್ತೇವೆ. ಭೂಮಿಯು ಇಡೀ ಗ್ರಾಮಕ್ಕೆ ಸೇರಬೇಕು, ಗ್ರಾಮಪಂಚಾಯಿತಿ ಹೆಸರಿನಲ್ಲಿ ಒಂದೇ ಖಾತೆಗೆ ವರ್ಗಾಯಿಸಬೇಕು. ಆನಂತರ ಅದರ ಪುನರ್ ಹಂಚಿಕೆಯಾಗಬೇಕು. ಮೊದಲು ಹೆಚ್ಚು ಭೂಮಿ ಪಡೆದಿದ್ದವರಿಗೆ ಸ್ವಲ್ಪ ಹೆಚ್ಚು ಭೂಮಿ ಕೊಡಬಹುದಾದರೂ ಭೂ ಹೀನರಿಗೆ ಭೂಮಿಯನ್ನು ತಪ್ಪದೇ ಕೊಡಬೇಕು. ದನಕರುಗಳಿಗಾಗಿ ಗೋಮಾಳಕ್ಕೆ, ದೇವಾಲಯಕ್ಕೆ, ಆಟದ ಮೈದಾನಕ್ಕೆ, ಶಾಲೆ, ಮನರಂಜನೆಯ ಸ್ಥಳ ನಾಟಕ ಮಂದಿರ, ಸಭಾಭವನ ಮೊದಲಾದವುಗಳಿಗೆ ಸ್ಥಳಗಳನ್ನು ಕಾಯ್ದಿರಿಸಬೇಕು. ಹೆಚ್ಚು ಭೂಮಿ ಉಳ್ಳವರಾಗಲಿ, ಕಡಿಮೆ ಭೂಮಿ ಉಳ್ಳವರಾಗಲಿ ಅವರು ಸ್ವಂತ ಜಮೀನಿನಲ್ಲಿ ಉಳುಮೆ ಮಾಡಲು ಪ್ರೇರೇಪಿಸಬೇಕು. ಗ್ರಾಮ ಪಂಚಾಯಿತಿಯೂ ಜನರಿಗೆ ಉದ್ಯೋಗ ಒದಗಿಸಬೇಕು. ಸತತ ದುಡಿಮೆ, ಅಧಿಕ ಉತ್ಪತ್ತಿ, ದವಸ ಧಾನ್ಯಗಳ ಸಮೃದ್ಧಿ, ಸಾಧಿಸಲ್ಪಡಬೇಕು. ಸೋಮಾರಿತನಕ್ಕೆ, ಮೈಗಳ್ಳತನಕ್ಕೆ, ನಿರುದ್ಯೋಗಕ್ಕೆ, ಅರೆ ಉದ್ಯೋಗಕ್ಕೆ ಭಿಕ್ಷಾಟನೆಗೆ ಇಲ್ಲಿ ಅವಕಾಶವಿಲ್ಲ ಎಂಬ ಚಿಂತನೆಯ ಮೂಲಕ ಭೂ ಪ್ರಶ್ನೆಯನ್ನು ಬಗೆಹರಿಸಲು ಯತ್ನಿಸುತ್ತದೆ.

ಗಾಂಧೀವಾದವು ಏಕ ಕಾಲಕ್ಕೆ ರಾಷ್ಟ್ರೀಯ ಹೋರಾಟ ಮತ್ತು ಸ್ಥಳೀಯ ಸಾಮಾಜಿಕ ಸಮಸ್ಯೆಗಳನ್ನು ಸಹ ಜೊತೆ ಜೊತೆಗೆ ಕೊಂಡೊಯ್ಯುವುದನ್ನು ಕಾಣಬಹುದುದಾಗಿದೆ. ಖಾದಿ ಗ್ರಾಮೋದ್ಯೋಗ, ಗುಡಿಕೈಗಾರಿಕೆ, ಹರಿಜನೋದ್ಧಾರ, ಅಸ್ಪೃಶ್ಯತೆನಿವಾರಣೆ, ಮಧ್ಯಪಾನನಿಷೇಧ, ಮಹಿಳಾ ಕಲ್ಯಾಣ, ರಾಷ್ಟ್ರೀಯ ಶಿಕ್ಷಣ ಮೊದಲಾದ ಕಾರ್ಯಕ್ರಮಗಳನ್ನು ಜಾರಿಗೆ ತರಲು ಯತ್ನಿಸಿದುದನ್ನು ಗಮನಿಸಬಹುದಾಗಿದೆ.

ರೈತಾಪಿ ಬದುಕಿನೊಂದಿಗೆ ಗ್ರಾಮಸ್ವರಾಜ್ಯ ಕಲ್ಪನೆಯ ಮೂಲಕ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಗಾಂಧೀಜಿಯವರು ಸಣ್ಣ ಹಾಗೂ ಗುಡಿ ಕೈಗಾರಿಗೆ, ನಶಿಸುವುದರ ಬಗ್ಗೆ ತುಂಬು ಕಾಳಜಿಯಿಂದ ಎಚ್ಚರಿಕೆ ಮೂಡಿಸುತ್ತಿದ್ದನ್ನು ಗಮನಿಸಬಹುದಾಗಿದೆ. ಆಧುನಿಕತೆಯ ಪ್ರವೇಶದ ನಂತರ ಭಾರತದಲ್ಲಿ ಬೃಹತ್ ಕೈಗಾರಿಕೆಗಳು ತಲೆಎತ್ತತೊಡಗಿದ್ದರಿಂದ ಇಲ್ಲಿನ ಸ್ಥಳೀಯ ಉದ್ದಿಮೆಗಳು ಅಪಾಯದ ಅಂಚಿಗೆ ಹೋಗುತ್ತವೆಂಬ ವಿಚಾರ ಅರಿತಿದ್ದರು. ಗ್ರಾಮೀಣ ಕರಕುಶಲ, ಕೈಕಸುಬುಗಳು ಬೆಳವಣಿಗೆಯಾಗಬೇಕು, ಇದರಿಂದ ಹೆಚ್ಚಿನ ಉದ್ಯೋಗಾವಕಾಶ ದೊರೆತು ದೇಶದ ಸಮಸ್ಯೆಯನ್ನು ಬಗೆಹರಿಸಬಹುದೆಂಬ ಆಶಯವನ್ನು ಗಾಂಧೀವಾದ ಹೊಂದಿತ್ತು.

### ೧. ವಿನೋಬಾ ಭಾವೆ

ವಿನೋಬಾಭಾವೆಯವರು ಗಾಂಧೀಜಿಯವರ ತತ್ವ ಸಿದ್ಧಾಂತಗಳನ್ನು ಮೆಚ್ಚಿಕೊಂಡು ಅವರ ಅನುಯಾಯಿಯಾಗಿದ್ದವರು. ಭಾವೆಯವರು ಸರ್ವೋದಯ ತತ್ವದ ಮೇಲೆ ಸಂಪೂರ್ಣ ನಂಬಿಕೆಯನ್ನು ಹೊಂದಿದ್ದವರು. ಸತ್ಯ, ಅಹಿಂಸೆ, ಶಾಂತಿ, ಮನಃಪರಿವರ್ತನೆಯಂತಹ ತಾತ್ವಿಕ ಚಿಂತನೆಯ ಮೂಲಕ ತೊಡಗಿಸಿಕೊಂಡು ತಮ್ಮ ಕಾರ್ಯಕ್ರಮವನ್ನು ರೂಪಿಸಿದರು. ಇಂತಹ ತಾತ್ವಿಕ ಸಿದ್ಧಾಂತದೊಂದಿಗೆ ಭಾರತದಲ್ಲಿ ತಮ್ಮದೇ ಆದ ಛಾಪನ್ನು, ಭೂದಾನಯಜ್ಞದ ಮೂಲಕ ಬಿಂಬಿಸಲು ಯತ್ನಿಸಿದರು. ಭಾವೆಯವರು ಭೂ ಹಂಚಿಕೆ ಕುರಿತು ಸಾಮಾಜಿಕ ಆಂದೋಲನ ನಡೆಸಿದುದು ನೂತನ ಬಗೆಯದಾಗಿತ್ತು. ಈ ಆಂದೋಲನದ ಉದ್ದೇಶ, ಮನಃ ಪರಿವರ್ತನೆ, ಶಾಂತಿ, ಸತ್ಯ, ಅಹಿಂಸೆಯ ನೆಲೆಯಲ್ಲಿ ಭೂಹಂಚಿಕೆ ಮಾಡಲು ಯತ್ನಿಸುವುದಾಗಿತ್ತು. ಏಕೆಂದರೆ ಭಾವೆಯವರ ಭೂ ಆಂದೋಲನ ಶುರುವಾದ ಸಂದರ್ಭದಲ್ಲಿಯೇ ಆಂಧ್ರದಲ್ಲಿ ಕಮ್ಯುನಿಸ್ಟ್ ಪಾರ್ಟಿ ಶಸ್ತ್ರಸಜ್ಜಿತ ರೈತಹೋರಾಟ ನಡೆಸುತ್ತಿತ್ತು. ಇದೇ ಕಾಲಕ್ಕೆ ಶಾಂತಿ ಮಂತ್ರ ಜಪಿಸಿಕೊಂಡು ಹಳ್ಳಿಯತ್ತ ನಡೆದು ಭೂಮಾಲೀಕರ ಮನಃಪರಿವರ್ತನೆ ಮಾಡಲು ಹೊರಟಿದ್ದುದು, ಆ ಕಾಲಕ್ಕೆ ಬಹು ದೊಡ್ಡ ಆಂದೋಲನವಾಗಿ ಕಂಡುಬರುತ್ತದೆ. ಇಲ್ಲಿ ಗಾಂಧೀಜಿಯವರಿಗಿಂತ ಹೆಚ್ಚು ಪ್ರಾಯೋಗಿಕ ನೆಲೆಯಲ್ಲಿ ಭಾವೆಯವರು ಕಾರ್ಯಕ್ರಮ ರೂಪಿಸಿರುವುದನ್ನು ಕಾಣುತ್ತೇವೆ.

ಭೂದಾನ ಕುರಿತು ಎ.ಎಸ್.ಪ್ರಭಾಕರ್ ಹೇಳುವಂತೆ "ಕರ್ನಾಟಕದ ಮಟ್ಟಿಗೆ ೬೧ರ ದಶಕದಲ್ಲಿ ರೈತ ಹೋರಾಟಗಳೂ ಸಹ ಮಂಕು ಕವಿಸಿಕೊಂಡಿದ್ದವು. ಅವು ಹೆಚ್ಚಾಗಿ ವಿನೋಬಾ ಭಾವೆಯವರ ಭೂದಾನದ ಕಡೆಗೆ ಮುಖಮಾಡಿ ಕುಳಿತು ಬಿಟ್ಟಿದ್ದವು. ಭೂದಾನ ಚಳುವಳಿ ಹುಟ್ಟಿಕೊಂಡಿದ್ದೇ ತೆಲಂಗಾಣದ ಪ್ರಕ್ಷುಬ್ದ ಸ್ಥಿತಿಯನ್ನ ದೃಷ್ಟಿಯಲ್ಲಿಟ್ಟುಕೊಂಡು. ಅಲ್ಲದೇ ಅಲ್ಲಿನ ಕಮ್ಯುನಿಸ್ಟರ ಪ್ರಭಾವವನ್ನ ಶತಾಯಗತಾಯ ಕಡಿಮೆ ಮಾಡುವಲ್ಲಿ, ಆಳುವ ಕಾಂಗ್ರೆಸ್ ಪಕ್ಷ ಮಾಡಿದ ಹಲವು ಹುನ್ನಾರುಗಳಲ್ಲಿ, ಮಾನವೀಯವಾಗಿ ಕಾಣುತ್ತಿರುವುದು ಈ ಭೂದಾನದ ಚಳುವಳಿ ಮಾತ್ರ. ಭೂಮಾಲೀಕರ ಮನಸ್ಸನ್ನು ಪರಿವರ್ತಿಸಿ ಭೂ ಹಂಚಿಕೆಯಲ್ಲಿ ಅಸಮಾನತೆಯನ್ನ ಕಡಿಮೆ ಮಾಡುವುದು, ಮತ್ತು ಭೂ ರಹಿತರಿಗೆ ಜಮೀನು ಸಿಗುವಂತೆ ಮಾಡುವುದು ಈ ಭೂದಾನ ಚಳುವಳಿಯ ಉದ್ದೇಶವಾಗಿತ್ತು."[೪೯]

ಈ ಹಿನ್ನೆಲೆಯಲ್ಲಿ ತೆಲಂಗಾಣ ರೈತಹೋರಾಟವು ಆಂಧ್ರದಲ್ಲಿ ಕಮ್ಯುನಿಸ್ಟ್ ಸಂಘಟನೆ ಹಾಗೂ ಕಿಸಾನ್ ಸಭಾ ನೇತೃತ್ವದಲ್ಲಿ ಶಸ್ತ್ರಾಸ್ತ್ರಗಳ ಮೂಲಕ, ಕ್ರಾಂತಿಕಾರ ನೆಲೆಯಲ್ಲಿ ರೈತ ಹೋರಾಟ ನಡೆಸುತ್ತಿತ್ತು. ಈ ಸಂದರ್ಭದಲ್ಲಿಯೇ ತೆಲಂಗಾಣಕ್ಕೆ ವಿನೋಬಾಭಾವೆಯವರು ಕಾಲಿರಿಸಿದರು. ಗಾಂಧಿತತ್ವದಲ್ಲಿ ನಂಬಿಕೆಯುಳ್ಳ ಭಾವೆಯವರು ಭೂದಾನ ಮತ್ತು ಗ್ರಾಮದಾನದ ಬಗ್ಗೆ ಹೆಚ್ಚು ಈ ಭಾಗದಲ್ಲಿ ಪ್ರಚಾರಗೊಳಿಸಿದರು. ಇದರಿಂದಾಗಿ ತೆಲಂಗಾಣ ಪ್ರದೇಶದಲ್ಲಿ ಶ್ರೀಮಂತ ರೈತರ ಮನವೊಲಿಸಿ ಭೂಮಿಯನ್ನು ದಾನವಾಗಿ ಪಡೆದು ಬಡರೈತರಿಗೆ ಹಂಚಲು ಸಕ್ರಿಯರಾದರು. ಇಂತಹ ಹೊಸ ಪ್ರಯೋಗವನ್ನು ಆ ಭಾಗದ ರೈತ ಜನತೆ ಕುತೂಹಲದಿಂದ ಗಮನಿಸುತ್ತಿದ್ದರು. ತೆಲಂಗಾಣದ ಪ್ರದೇಶದ ಕೆಲವು ಗ್ರಾಮಗಳಲ್ಲಿ ಭೂದಾನ ಪಡೆಯುವಲ್ಲಿ ಯಶಸ್ವಿಯಾದರು. ವಿನೋಬ ಭಾವೆಯವರ ಭೂದಾನ ಕುರಿತು ಕ್ಷೀರಸಾಗರ ಹೇಳುವಂತೆ, "ಕ್ರಾಂತಿಕಾರಕ ಪ್ರಯತ್ನ ಬಿಟ್ಟು ಶಾಂತಿಯುತವಾದ ಮಾರ್ಗ ಅನುಸರಿಸಬೇಕು ಎಂದು ನಂಬಿಕೊಂಡ ಭಾವೆಯವರು ಬಲವಂತವಾಗಿ ಶ್ರೀಮಂತ ರೈತರಿಂದ ಭೂಮಿಯನ್ನು ಕಿತ್ತುಕೊಳ್ಳಬಾರದು, ಆದರೆ ಶ್ರೀಮಂತರ ಮನಒಲಿಸಿ ಅವರೇ ಭೂಮಿಯನ್ನು ಬಿಟ್ಟುಕೊಡುವಂತೆ ಮಾಡಬೇಕೆಂದು ನಂಬಿಕೊಂಡಿದ್ದರು. ಹೀಗೆ ಬಂದ ಭೂದಾನವನ್ನು ಬಡ ರೈತರಿಗೆ ಹಾಗೂ ಕೃಷಿ ಕಾರ್ಮಿಕರಿಗೆ ಹಂಚುವ ಯೋಜನೆಗಳನ್ನಿಟ್ಟುಕೊಂಡಿದ್ದರು."[೫೦]

ಈ ಚಳುವಳಿಯ ಉದ್ದೇಶವನ್ನು ವಿವರಿಸುತ್ತಾ ವಿನೋಬಾ ಭಾವೆ ಹೀಗೆ ಅಭಿಪ್ರಾಯಪಡುತ್ತಾರೆ. "ನ್ಯಾಯ ಮತ್ತು ಸಮಾನತೆ ಇರುವ ಸಮಾಜದಲ್ಲಿ ಭೂಮಿಯು ಎಲ್ಲ ಜನರಿಗೂ ಸೇರಿದ ಆಸ್ತಿ. ಆದ್ದರಿಂದಲೇ ನಾವು ದಾನಕ್ಕಾಗಿ ಭಿಕ್ಷೆ ಬೇಡುವುದಿಲ್ಲ. ನ್ಯಾಯವಾಗಿ ಪ್ರತಿಯೊಬ್ಬ ಬೇಸಾಯಗಾರನಿಗೂ ದೊರೆಯಬೇಕಾದ ಭೂ ಭಾಗವನ್ನು ಆಗ್ರಹಪೂರ್ವಕವಾಗಿ ಕೇಳುತ್ತೇವೆ. ಆದ್ದರಿಂದ ಇಲ್ಲಿ ನಾವು ಪ್ರಾಮುಖ್ಯ ಕೊಡುವುದು ಜಮೀನ್ದಾರರ ದಾನಬುದ್ಧಿಗಲ್ಲ, ಅವರ ನ್ಯಾಯಪರತೆಗೆ"[೫೧] ಇಲ್ಲಿ ದಾನದ ಕಲ್ಪನೆಯ ವಿಸ್ತಾರತೆಯ ಆಶಯದಿಂದ ಭೂಸಮಸ್ಯೆಗೆ ಪರಿಹಾರ ಸೂಚಿಸಲು ಯತ್ನಿಸಿದರು. ದಾನ ಎನ್ನುವುದು ಬೇಡುವ ಕ್ರಿಯೆಯಲ್ಲ ಎಂಬ ವಿಶಾಲತಳಹದಿಯ ಮೂಲಕ ಭೂದಾನ ಚಳವಳಿಯನ್ನು ರೂಪಿಸಿದರು. ದಾನವೆಂಬುದು ಆಗ್ರಹಪೂರ್ವವಾದ ಹಕ್ಕಿನ ಪ್ರಕ್ರಿಯೆಯಾಗಿ ಭೂದಾನಯಜ್ಞದ ಉದ್ದೇಶವನ್ನು ಅವರು ವ್ಯಕ್ತಪಡಿಸಿದ್ದಾರೆ.

ಭೂದಾನ ಚಳುವಳಿಯ ಮುಖ್ಯ ಉದ್ದೇಶಗಳು ಈ ರೀತಿ ಇವೆ. "೧.ಬಡತನ ನಿರ್ಮೂಲನ. ೨.ಭೂಮಾಲೀಕರ ಹೃದಯದಲ್ಲಿ ಪ್ರೇಮಭಾವದ ವಿಕಾಸವನ್ನುಂಟು ಮಾಡಿ ಆ ಮೂಲಕ ನೈತಿಕ ವಾತಾವರಣವನ್ನು ಉನ್ನತಗೊಳಿಸುವುದು.

೩.ಭೂಮಾಲೀಕರು ಮತ್ತು ಭೂ ರಹಿತ ಬಡವರ ನಡುವಿನ ವರ್ಗದ್ವೇಷವನ್ನು ದೂರಮಾಡುವುದು. ಪರಸ್ಪರ ಪ್ರೇಮ ಹಾಗೂ ಸದ್ಭಾವನೆಯ ಬಂಧನವನ್ನು ದೃಢಪಡಿಸಿ ಸಮಾಜ ಶಕ್ತಿಶಾಲಿಯಾಗುವಂತೆ ಮಾಡುವುದು.

೪.ಯಜ್ಞ, ದಾನ, ತಪ ಈ ಮೂರು ಅಪೂರ್ವ ದರ್ಶನಗಳ ಆಧಾರದ ಮೇಲೆ ಸ್ಥಾಪಿತವಾಗಿರುವ ಭಾರತೀಯ ಸಂಸ್ಕೃತಿಯ ಪುನರುತ್ಥಾನ ಮತ್ತು ಉನ್ನತಿ ಸಾಧ್ಯವಾಗುವಂತೆ ಮಾಡುವುದು.

೫. ದೇಶದಲ್ಲಿ ಶಾಂತಿ ಸ್ಥಾಪಿಸುವುದು. ೬. ದೇಶದಲ್ಲಿ ಶಾಂತಿ ಸ್ಥಾಪನೆಯಾದರೆ ಆ ಮೂಲಕ ವಿಶ್ವಶಾಂತಿ ಸ್ಥಾಪನೆಗೆ ಸಹಾಯ ದೊರೆಯುವುದು. ೭. ಭೂದಾನ ಯಜ್ಞದ ಮೂಲಕ ವಿಭಿನ್ನ ರಾಜಕೀಯ ಪಕ್ಷಗಳನ್ನು ಪರಸ್ಪರ ಹತ್ತಿರ ತರುವುದು."[೫೨] ಇಲ್ಲಿ ಭೂದಾನ ಚಳುವಳಿ ಮನ ಪರಿವರ್ತನೆಯ ಒಂದು ಮಹಾ

ಚಳುವಳಿಯಾಗಿದ್ದು ಒಂದು ಹೊಸ ವಿಚಾರ ಶಕ್ತಿಗೆ ಪೂರಕ ವಾತಾವರಣವನ್ನು ಮತ್ತು ಜೀವನ ಮೌಲ್ಯಗಳನ್ನು ಪ್ರತಿಪಾದಿಸುತ್ತದೆ.

ಭಾವೆಯವರು ಭೂಮಿಯನ್ನು ದಾನವಾಗಿ ಪಡೆಯುವ ಕಾರ್ಯಕ್ರಮವನ್ನು ಆಂಧ್ರಕ್ಕೆ ಸೀಮಿತಗೊಳಿಸದೆ, ಬಿಹಾರ, ಉತ್ತರ ಪ್ರದೇಶಗಳಲ್ಲೂ ಸಂಚರಿಸಿ ಭೂದಾನ ಯಜ್ಞದ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. ೧೯೫೧ರಿಂದ ಭೂದಾನ ಕಾರ್ಯಕ್ರಮ ರೂಪಿಸಿಕೊಂಡ ಅವರು ಪಡೆದ ಭೂಮಿ. "ಮಾರ್ಚ್ ೧೯೬೮ರ ಕೊನೆಯ ವೇಳೆಗೆ ಭೂದಾನದಿಂದ ಬಂದ ಭೂಮಿ ೪೨ಲಕ್ಷ ಎಕರೆಗಳು, ಇದರಲ್ಲಿ ೧೮.೫ ಲಕ್ಷ ಎಕರೆ ಭೂಮಿ ವ್ಯವಸಾಯ ಯೋಗ್ಯವಲ್ಲದ್ದು ಮತ್ತು ಕಾನೂನಿನ ಗೊಂದಲಕ್ಕೊಳಗಾಗಿದ್ದ ಭೂಮಿ, ಇದುವರೆಗೆ ಹಂಚಿಕೆಯಾದ ಭೂಮಿ ೧೧.೭೫ ಲಕ್ಷ ಎಕರೆಗಳು ಮಾತ್ರ."[೫೨] ಇದೇ ಕಾಲಕ್ಕೇ ಭೂದಾನ ನೀಡಿದ ಭೂಮಿಯು ಉತ್ತಮ ಗುಣ ಮಟ್ಟ ಹೊಂದಿತ್ತೇ? ಫಲವತ್ತತೆಯನ್ನು ಹೊಂದಿತ್ತೇ? ಇಲ್ಲವೇ? ಎಂಬ ಪ್ರಶ್ನೆಗಳು ವ್ಯಕ್ತವಾಗುತ್ತವೆ.

ಆದರೆ ಕಾಲಕ್ರಮೇಣ ಭೂದಾನ ಆಂದೋಲನ ವಿಫಲವಾಗಲು ವ್ಯವಸಾಯ ಯೋಗ್ಯವಲ್ಲದ ಭೂಮಿ ದಾನವಾಗಿ ಬಂದಿರುವುದು ತಿಳಿಯುತ್ತದೆ. ಈ ಕುರಿತು ಕ್ಷೀರಸಾಗರ ಹೇಳುವಂತೆ, "ಗ್ರಾಮದ ಸರ್ವತೋಮುಖ ಅಭಿವೃದ್ಧಿಯನ್ನು ಮಾಡುವುದಕ್ಕಾಗಿ ೧೯೫೬ರ ವೇಳೆಗೆ ೧೫೭೫ ಹಳ್ಳಿಗಳನ್ನು ಗ್ರಾಮದಾನವಾಗಿ ಪಡೆದುಕೊಂಡರೂ ಕೇವಲ ೧೦೦ ಹಳ್ಳಿಗಳಲ್ಲಿ ಮಾತ್ರ ಉದ್ದೇಶಿತ ಗುರಿಮುಟ್ಟಲು ಸಾಧ್ಯವಾಯಿತು."[೫೪]

ಈ ಕಾಲಕ್ಕಾಗಲೇ ಭೂದಾನ ಕುರಿತು ಹಳ್ಳಿಗಳ ಜನತೆಯಲ್ಲಿದ್ದ ನಿರಾಶ ಭಾವನೆಯ ಜೊತೆಗೆ ಅದು ಪ್ರೋತ್ಸಾಹದಾಯಕವಾಗಿಲ್ಲದೆ ಇರುವ ಕಾರಣವಿರಬಹುದು. ರಾಷ್ಟ್ರಮಟ್ಟದಲ್ಲಿ ಭೂಸುಧಾರಣೆಗೆ ಪರಿಹಾರ ಒದಗಿಸುವ ನಿಟ್ಟಿನಲ್ಲಿ ಭೂದಾನ ಚಳುವಳಿ ಕಾರ್ಯಕ್ರಮವು ಕರ್ನಾಟಕದಲ್ಲಿಯೂ ಜಾರಿಗೊಳಿಸಲು ಯತ್ನಿಸಿತು. ಆಗಿನ ಕಾಂಗ್ರೆಸ್ ಸರ್ಕಾರ ಭೂ ದಾನ ವಿಧೇಯಕವನ್ನು ಶಾಸನಸಭೆಯಲ್ಲಿ ಮಂಡಿಸಿತು. ಇದನ್ನು ಸಮಾಜವಾದಿ ನಾಯಕ ಶಾಂತವೇರಿ ಗೋಪಾಲಗೌಡರು ಪ್ರಬಲವಾಗಿ ವಿರೋಧಿಸಿದರು. " ವಿನೋಬಾ ಭಾವೆ ಚಳುವಳಿಯನ್ನು ನಾನು ಮೊದಲಿನಿಂದಲೂ ಸಂಶಯಾಸ್ಪದ ದೃಷ್ಟಿಯಲ್ಲಿ ನೋಡುತ್ತಾ ಬಂದವನು. ಈ ಸೂತ್ರವನ್ನು ದೇಶದ ಮುಂದೆ ಇಡುವುದಾದರೆ ಕ್ರಾಂತಿಯು ಮೌನವಾಗುತ್ತೆ. ಮಂದವಾಗುತ್ತೆ. ವರ್ಗ ಸಂಘರ್ಷಕ್ಕೆ ಅಡ್ಡಿ ಬರುತ್ತೆ. ಈ ಭೂದಾನದಿಂದ ಭೂ ಸಮಸ್ಯೆ ಬಗೆಹರಿಯುವುದಿಲ್ಲ. ಕಾಗೋಡು ಚಳುವಳಿಯನ್ನು ನಾವು ಅಹಿಂಸಾತ್ಮಕ ಮಾರ್ಗದಿಂದಲೇ ಮಾಡಿದೆವು. ಇದೊಂದು ಬೇಡುವ ಕ್ರಿಯೆ ಆಗಿರದೆ, ಗೇಣಿದಾರನ ಹಕ್ಕಿನ ಪಾಲು ಪಡೆಯುವ ಹೋರಾಟವಾಗಿತ್ತು. ಈಗಿರುವ ಗೇಣಿದಾರನ ಜೊತೆಗೆ ಭೂದಾನ ಗೇಣಿದಾರನೋರ್ವನನ್ನು ವಿನೋಬಾ ಸೃಷ್ಟಿಸಲು ಹೊರಟಿದ್ದು, ಭೂ ಸಮಸ್ಯೆ ಪವಾಡದಿಂದ ಬಗೆಹರಿಯುವುದಿಲ್ಲ ಎಂಬುದು ನನ್ನ ಅನಿಸಿಕೆ."[೫೫] ಗೌಡರ ನಿಲುವಿನಲ್ಲಿ ಭೂದಾನಚಳುವಳಿಯು ಕರ್ನಾಟಕದ ಮಟ್ಟಿಗೆ ಹೊಸ ಗೇಣಿದಾರನನ್ನು ಸೃಷ್ಟಿಸುವಂತಾಗುತ್ತದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಕ್ರಾಂತಿ, ಪ್ರತಿಭಟನೆಗಳಿಗೆ ಅರ್ಥವಿಲ್ಲದಂತಾಗುತ್ತದೆ ಎಂಬ ಗ್ರಹಿಕೆಯಿಂದಾಗಿ ಬಾವೆಯವರ ಭೂದಾನವನ್ನು ವಿರೋಧಿಸುತ್ತಾರೆ.

ಆದರೆ ಭೂದಾನ ಕುರಿತಂತೆ ಸ್ವತಃ ವಿನೋಬಾ ಭಾವೆಯವರೇ ಹೀಗೆ ನುಡಿಯುತ್ತಾರೆ "ಅರಿವು ಮತ್ತು ಪ್ರೀತಿಯಿಂದ ನಾನು ಭೂಮಿಯನ್ನು ಪಡೆದುಕೊಳ್ಳದಿದ್ದರೆ ಕಮ್ಯುನಿಷ್ಟರಲ್ಲಿ ನಿಷ್ಠೆ ಮತ್ತು ನಂಬಿಕೆಯನ್ನಿಡುತ್ತೇನೆ. ಸರ್ವೋದಯದ ಮಾರ್ಗ ಸರಿಹೋಗದಿದ್ದರೆ ಕಮ್ಯುನಿಸಂ ಒಂದೇ ಉದ್ದೇಶಿತ ಗುರಿಯನ್ನು ಮುಟ್ಟಬಲ್ಲದು."[೫೬] ಎಂದು ನಿರಾಶೆಯಿಂದ ನುಡಿಯುತ್ತಾರೆ. ಅವರ ಮಾತಿನಲ್ಲಿಯೇ ಭೂ ಆಂದೋಲನವು ಇಳಿಮುಖವಾಗುತ್ತಿರುವುದನ್ನು ಕಾಣುತ್ತೇವೆ. ಇದು ಕ್ರಮೇಣ ರೈತ ವರ್ಗಕ್ಕೂ ಮನವರಿಕೆಯಾಗಿ, ಭೂ ದಾನ ಚಳುವಳಿ ಕ್ರಮೇಣವಾಗಿ ಮರೆಯಾಗುತ್ತ ಬಂದಿರುವುದು ಕಾಣಬಹುದಾಗಿದೆ.

**೨.ಕಡಿದಾಳು ಮಂಜಪ್ಪ**

ತೀರ್ಥಹಳ್ಳಿ ತಾಲ್ಲೂಕಿನ ಮಂಜಪ್ಪನವರು, ಗಾಂಧಿ ತತ್ವ ಸಿದ್ಧಾಂತಗಳಲ್ಲಿ ಅಚಲವಿಶ್ವಾಸ ಹೊಂದಿದ್ದರು. ವಿದ್ಯಾರ್ಥಿದೆಸೆಯಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಜೈಲು ವಾಸ ಅನುಭವಿಸಿದ್ದರು. ೧೯೪೫ರಲ್ಲಿ ಮಲೆನಾಡು ಗೇಣಿ ರೈತ ಸಂಘ ಸ್ಥಾಪಿಸಿದ್ದರು.

ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ತೀರ್ಥಹಳ್ಳಿ ಕ್ಷೇತ್ರದಿಂದ ಆಯ್ಕೆಯಾದ ಕಡಿದಾಳುಮಂಜಪ್ಪನವರು ೧೯೪೫ ರಲ್ಲಿ ಶಿವಮೊಗ್ಗ ಜಿಲ್ಲೆಯ ನ್ಯಾಯ ವಿಧಾಯಕ ಸಭೆಗೆ ಆಯ್ಕೆಗೊಂಡಿದ್ದರು. ಪುನಃ ೧೯೫೨ರಲ್ಲಿ ತೀರ್ಥಹಳ್ಳಿ,

ಕ್ಷೇತ್ರದಿಂದ ವಿಧಾನಸಭೆಗೆ ಆಯ್ಕೆಯಾಗಿದ್ದರು. ಕಡಿದಾಳರು ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರ ಅವಧಿಯಲ್ಲಿ ಕಂದಾಯಮಂತ್ರಿಯಾಗಿದ್ದರು. ಇನಾಂ ರದ್ದತಿ ಕಾಯ್ದೆ ರೆವಿನ್ಯೂ ಬೋರ್ಡ್ ರಚಿಸಿ ರೈತರ ಪರವಾದ ಕಾಯ್ದೆ ರೂಪಿಸಿದರು.

ಸಾಗರ ತಾಲ್ಲೂಕು ರೈತ ಸಂಘಕ್ಕೆ ಕಡಿದಾಳು ಮಂಜಪ್ಪನವರು ನಾಯಕರಾಗಿ ಮಾರ್ಗದರ್ಶನ ನೀಡುತ್ತಿದ್ದರು. ಸಾಗರ ತಾಲೂಕು ರೈತ ಸಂಘ ತೆಗೆದುಕೊಂಡ ಅನೇಕ ನಿರ್ಣಯಗಳಿಗೆ ಕಡಿದಾಳು ಮಂಜಪ್ಪನವರು ಯಾವುದೇ ರೀತಿಯ ಪರಿಹಾರ ಒದಗಿಸಲು ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ ಕಾಂಗ್ರೆಸ್ ಪಕ್ಷದಲ್ಲಿ ಶಾಸಕರಾಗಿದ್ದ ಕಾರಣ ತಮ್ಮ ಸರ್ಕಾರದ ವಿರುದ್ಧ ತಿರುಗಿ ಬೀಳದ ಸ್ಥಿತಿಯಲ್ಲಿದ್ದರು.ಕಾಗೋಡು ರೈತ ಹೋರಾಟದಲ್ಲಿ ಸಮಾಜವಾದಿ ಪಕ್ಷ ಮತ್ತು ರೈತ ಸಂಘಟನೆಗಳ ಹೋರಾಟದ ತೀವ್ರತೆಯಾಗಿದ್ದ ಸಂದರ್ಭದಲ್ಲೂ ಯಾವುದೇ ಪ್ರತಿಕ್ರಿಯೆ ನೀಡಲಾಗದ ಸ್ಥಿತಿಯಲ್ಲಿದ್ದರು.

ಕಂದಾಯ ಮಂತ್ರಿಯಾಗಿದ್ದ ಇವರು ಅನೇಕ ರೈತರ ಪರವಾದ ನಿಲುವು ತಾಳಿ, ಮೈಸೂರು ಗೇಣಿ ಶಾಸನ, ಮೈಸೂರು ಇನಾಂ ರದ್ದತಿ ಕಾಯ್ದೆಯನ್ನು ೧೯೬೧ ರಲ್ಲಿ ಜಾರಿಗೆ ತಂದರು. ಕರ್ನಾಟಕ ಭೂಸುಧಾರಣಾ ಮಸೂದೆಗೆ ಕಡಿದಾಳು ಮಂಜಪ್ಪನವರು ರೈತರ ಪರ ನಿಲುವನ್ನು ಹೊಂದಿ ಕಾನೂನು ತರಲು ಶ್ರಮಿಸಿದರು.

**೩. ಗಣಪತಿಯಪ್ಪ**

ಗಣಪತಿಯಪ್ಪನವರು ಗಾಂಧೀಜಿಯವರ ತತ್ವ ಸಿದ್ಧಾಂತಗಳಲ್ಲಿ ನಂಬಿಕೆಯುಳ್ಳವರು. ಸ್ವತಃ ರಾಷ್ಟ್ರೀಯ ಹೋರಾಟಗಳಲ್ಲಿ ಭಾಗವಹಿಸಿದ್ದವರು. ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನ ಹೊಸೂರು ಗ್ರಾಮದ ಇವರು ೧೯೨೪ರಲ್ಲಿ ಹುಟ್ಟಿದ್ದು. ಕ್ವಿಟ್‌ಇಂಡಿಯಾ ಚಳುವಳಿ ಹಾಗೂ ರಾಷ್ಟ್ರೀಯ ಹೋರಾಟಗಳಲ್ಲಿ ಸ್ವತಃ ಭಾಗವಹಿಸಿ ಭೂಗತರಾಗಿ ಹೋರಾಟ ಮಾಡಿದ್ದಾರೆ. ಇಂತಹ ಹೋರಾಟದ ಪರಿಣಾಮವಾಗಿ ಸರ್ಕಾರಿ ಸೇವೆಯಲ್ಲಿದ್ದ ಗಣಪತಿಯಪ್ಪ ತಮ್ಮ ಹುದ್ದೆಯನ್ನು ಕಳೆದುಕೊಂಡರು. ಆನಂತರದಲ್ಲಿ ಸಾಗರ ತಾಲ್ಲೂಕಿನ ಹಿರೇನಲ್ಲೂರಿಗೆ ಬಂದು ನೆಲೆಸಿ, ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದರು. ಕಾಗೋಡು ಒಡೆಯರ ದರ್ಪ, ಶೋಷಣೆಗಳನ್ನು ಗಮನಿಸಿದ ಗಣಪತಿಯಪ್ಪನವರು ಸುಮ್ಮನೆ ಕೂರಲಿಲ್ಲ. ಕಾಗೋಡು ಗೇಣಿರೈತರನ್ನು ಸಂಘಟಿಸಿ ಅದರ ನಾಯಕತ್ವವನ್ನು ವಹಿಸಿಕೊಂಡ ಗಣಪತಿಯಪ್ಪ ೧೯೫೧ ರಲ್ಲೇ ಗೇಣಿದಾರರ ರೈತ ಸಂಘವನ್ನು ಸ್ಥಾಪಿಸಿದರು. ಗೇಣಿರೈತರಿಗಾಗುತ್ತಿದ್ದ ಅನ್ಯಾಯದ ವಿರುದ್ಧ ಈ ಭಾಗದ ರೈತರನ್ನು ಸಂಘಟಿಸಿ ಜಾಗೃತಿ ಮೂಡಿಸಿದರು. ಈ ಹೋರಾಟ ಸಮಾಜವಾದಿ ಪಕ್ಷದ ನಾಯಕರು ಸೇರಿ ರಾಷ್ಟ್ರಮಟ್ಟದಲ್ಲಿ ಗಮನ ಸೆಳೆಯುವಂತಹ ಹೋರಾಟವಾಗಿ ಪರಿಣಮಿಸಿತು. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಭೂಸುಧಾರಣೆಗೆ ಒತ್ತಾಯ ತಂದ ಹಲವು ಹೋರಾಟಗಳಲ್ಲಿ ಕಾಗೋಡು ಸತ್ಯಾಗ್ರಹ ಮುಖ್ಯವಾದುದಾಗಿದೆ.

ಕಾಗೋಡು ಸತ್ಯಾಗ್ರಹ ಅಹಿಂಸಾತ್ಮಕ ರೈತ ಹೋರಾಟವಾಗಿ ನಡೆದಿರುವುದನ್ನು ಕಾಣುತ್ತೇವೆ. ಏಕೆಂದರೆ ಈ ಹೋರಾಟದಲ್ಲಿ ಭಾಗವಹಿಸಿದ್ದ ನಾಯಕರೆಲ್ಲರೂ ಗಾಂಧೀಜಿಯವರ ಸೈದ್ಧಾಂತಿಕ ಒಲವುಳ್ಳರಾಗಿದ್ದು, ಶಾಂತಿಯುತವಾದ ಹೋರಾಟ ನಡೆಸಿದ್ದುದನ್ನು ಕಾಣುತ್ತೇವೆ. ಅಲ್ಲದೆ ಕಾಗೋಡು ರೈತ ಹೋರಾಟದಲ್ಲಿ ಭಾಗವಹಿಸಿದ್ದ ಬಹುತೇಕ ಮುಖಂಡರು ರಾಷ್ಟ್ರೀಯ ಹೋರಾಟಗಳಲ್ಲಿ ಭಾಗವಹಿಸಿದ್ದವರು. ಈ ಹಿನ್ನೆಲೆಯಲ್ಲಿ ಕಾಗೋಡು ಸತ್ಯಾಗ್ರಹದಲ್ಲಿ ಎಲ್ಲಿಯೂ ಚಳುವಳಿಗಾರರಿಂದ ಹಿಂಸಾತ್ಮಕ ಘಟನೆಗಳು ಸಂಭವಿಸಲಿಲ್ಲ. ಭೂಮಾಲೀಕರಿಂದಲೇ ಸತ್ಯಾಗ್ರಹಿಗಳಿಗೆ ಲಾಠಿ ಏಟು, ಕಿರುಕುಳ ನಡೆದರೂ ಚಳುವಳಿಗಾರರು ಪ್ರತಿಯಾಗಿ ಮೌನ ಮೆರವಣಿಗೆ, ಜಮೀನಿನಲ್ಲಿ ಉಳುಮೆ ಮಾಡುವ ಅಹಿಂಸಾತ್ಮಕ ಮಾರ್ಗದ ಗಾಂಧೀ ತತ್ವದಂತೆ ಸತ್ಯಾಗ್ರಹ ನಡೆಸಿದರು. ಗೇಣಿ ರೈತ ಸಮಸ್ಯೆಗಳನ್ನು ಆಳವಾಗಿ ಅರಿತಿದ್ದ ಗಣಪತಿಯಪ್ಪನವರು ಭೂಮಾಲೀಕ ಶೋಷಣೆ ಮಿತಿ ಮೀರಿದ ಸಂದರ್ಭದಲ್ಲಿ ಗೇಣಿ ರೈತರ ಸ್ವಾಭಿಮಾನದ ಕಿಡಿಯಾಗಿ ನಿಂತರು.

ಭೂ ಸುಧಾರಣೆ ಕುರಿತ ಪ್ರಶ್ನೆಗೆ ಗಣಪತಿಯಪ್ಪನವರು "ಭೂಸುಧಾರಣೆ ಎಲ್ಲ ಜನರ ಸುಖ ಸಮೃದ್ಧಿಯನ್ನು ಸಾಧಿಸುವ ಅವರ ಸಂಪೂರ್ಣವಾಗಿ ಸ್ವಾತಂತ್ರ್ಯವನ್ನು ರಕ್ಷಿಸುವ ಒಂದು ಸಮಗ್ರ ಯೋಜನೆಯ ಅಂಗವಾಗಿ ರೂಪುಗೊಳ್ಳಬೇಕು."[೫೭] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಭೂ ಸುಧಾರಣೆ ಸಮಗ್ರವಾದ ಸ್ವಾತಂತ್ರ್ಯ ಮತ್ತು ಹಕ್ಕನ್ನು ನೀಡುವುದಾಗಿದೆ ಎಂದು ಅವರು ತಿಳಿಸಿದ್ದಾರೆ.ಇದು ಅವರ ಕನಸು ಕೂಡಾ ಆಗಿದೆ.

ಎಲ್ಲರಿಗೂ ಸಮಾನವಾಗಿ ಭೂಮಿ ದೊರಕಬೇಕು ಎಂಬುದು ಅವರ ಆಶಯವಾಗಿದೆ. "ಕರ್ನಾಟಕದಲ್ಲಿ ಮಾತ್ರವಲ್ಲ, ಈ ದೇಶದಲ್ಲಿ ಬಹುಪಾಲು ಸಣ್ಣ ರೈತರಿಗೆ ಗೇಣಿದಾರರಿಗೆ ಭೂಮಿ ಇನ್ನೂ ದಕ್ಕಿಲ್ಲ. ಭೂಮಿ

ದಕ್ಕಬೇಕಾದರೆ ಒಂದು ವೋಟಿಗೆ ಒಂದು ಎಕರೆ ಭೂಮಿ ಎಂಬುದು ಬಹಳವರ್ಷಗಳ ಕಾಲದ ಚಿಂತನೆ. ಈ ರೀತಿ æ]a"E ]U úO t Ô] ψúàN "; ]<]]N O 'úO t T; å"[೫೮] ಈ ಚಿಂತನೆ ಮತ್ತು ಅವರ ಕನಸು ಬಹುದೊಡ್ಡದು. ಆದರೆ ವಾಸ್ತವದಲ್ಲಿ ಅದು ಎಷ್ಟರ ಮಟ್ಟಿಗೆ ಜಾರಿಯಾಗಬಹುದೆಂಬ ವಿಚಾರವನ್ನು ಚಿಂತಿಸಬೇಕಿದೆ. ಜನಸಂಖ್ಯೆಯ ಆಧಾರದ ಮೇಲೆ ನೋಡಿದಾಗ ಅಥವಾ ಮತದ ಆಧಾರದ ಮೇಲೆ ಭೂ ಹಂಚಿಕೆ ಮಾಡಲು ಹೊರಟರೇ ಭಾರತದಲ್ಲಿ ಅಷ್ಟೊಂದು ಉಳುಮೆ ಭೂಮಿ ನಮ್ಮಲ್ಲಿ ಲಭ್ಯವಿದೆಯೇ ಎಂಬ ಪ್ರಶ್ನೆಗಳು ಉದ್ಭವವಾಗುತ್ತವೆ. ಇಂತಹ ಆಲೋಚನೆಯ ಮೂಲಕ ಗಣಪತಿಯಪ್ಪನವರು ಜಾಗತಿಕ ಸಂದರ್ಭದಲ್ಲಿ ಭೂ ಪ್ರಶ್ನೆ ಪರಿಹರಿಸಲು ನಡೆಸಿರುವ ಚಿಂತನೆ ಬಹು ದೊಡ್ಡ ಆಶಯವಾಗಿ ಕಂಡುಬರುತ್ತದೆ.

### ೪. ಪ್ರೊ.ಎಂ.ಡಿ.ನಂಜುಂಡಸ್ವಾಮಿ

ರೈತ ಸಮುದಾಯಕ್ಕೆ ಅರಿವಿನ ಪ್ರಜ್ಞೆ ಮೂಡಿಸಿ ಹೋರಾಟಕ್ಕೆ ಸಿದ್ಧಗೊಳಿಸಿದ ಸಮಾಜವಾದಿ ತಳಹದಿಯ ಮೇಲೆ ರೈತರನ್ನು ಚಿಂತನೆಗೆ ಹಚ್ಚಿದ ರೈತನಾಯಕ ಪ್ರೊ.ಎಂ.ಡಿ.ನಂಜುಂಡಸ್ವಾಮಿ ಕರ್ನಾಟಕ ಕಂಡ ಅಪರೂಪದ ನಾಯಕತ್ವವಾಗಿದೆ. ೧೯೩೬ರಲ್ಲಿ ಟಿ.ನರಸೀಪುರದ ಮಾಡ್ರಹಳ್ಳಿಯಲ್ಲಿ ಜನಿಸಿದ ಇವರು, ಬಾಲ್ಯದಿಂದಲೇ ಹೋರಾಟದ ಮನೋಭಾವವನ್ನು ಮೈಗೂಡಿಸಿಕೊಂಡು ಬೆಳೆದವರು. ೭೦ರ ದಶಕದಲ್ಲಿ ಸಮಾಜವಾದಿ ಪಕ್ಷದ ಸದಸ್ಯರಾಗಿ, ಉಪನ್ಯಾಸಕರಾಗಿ, ಪ್ರಾಚಾರ್ಯರಾಗಿ ಒಮ್ಮೆ ಶಾಸಕರಾಗಿದ್ದರು. ೧೯೮೦ರಲ್ಲಿ ದಿ.ಎಚ್.ಎಸ್.ರುದ್ರಪ್ಪ ಮತ್ತು ಎನ್.ಡಿ.ಸುಂದರೇಶ್ ನೇತೃತ್ವದಲ್ಲಿ ಇವರು ಶಿವಮೊಗ್ಗದಲ್ಲಿ ಕಬ್ಬುಬೆಳೆಗಾರರ ಸಂಘವನ್ನು ಸ್ಥಾಪಿಸಿದರು. ಅನಂತರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಅಸ್ತಿತ್ವಕ್ಕೆ ಬಂದಿತು. ಈ ಸಂಘದಿಂದ ಲೆವಿ ವಿರುದ್ಧದ ಹೋರಾಟದಿಂದ ಹಿಡಿದು, ಬೆಲೆ ವಿರುದ್ಧ, ಕಾರ್ಗಿಲ್ ಕಂಪನಿಯ ವಿರುದ್ಧ ದಾಳಿ, ಕೆಂಟುಕಿ ಫ್ರೈಡ್‌ಚಿಕನ್ ಸೆಂಟರ್ ಮೇಲೆ ದಾಳಿ, ಮತ್ತು ನೀರಾಚಳವಳಿಯವರೆಗೆ ಹೋರಾಟ ನಡೆಸಿದ್ದಾರೆ. ಅಲ್ಲದೆ ತೃತೀಯ ಜಗತ್ತಿನ ರೈತ ಒಕ್ಕೂಟವನ್ನು ಸ್ಥಾಪಿಸಿ ಅಂತರಾಷ್ಟ್ರೀಯ ಮಟ್ಟದಲ್ಲಿ ರೈತ ಹೋರಾಟ ನಡೆಸಿದರು.

ಇಲ್ಲಿ ಮುಖ್ಯವಾಗಿ ಪ್ರೊ.ಎಂ.ಡಿ.ಎನ್. ಅವರಿಗೆ ಭೂ ಸಮಸ್ಯೆ ಕುರಿತು ಪರಿಹಾರ ಕಂಡುಕೊಳ್ಳುವುದು ಮುಖ್ಯವೆನಿಸಲಿಲ್ಲ. ಈಗಾಗಲೇ ಭಾರತಕ್ಕೆ ಜಾಗತೀಕರಣ, ಉದಾರೀಕರಣದ ನೆಪದಲ್ಲಿ ಈ ದೇಶದಲ್ಲಿ ದಾಳಿಯಾಗುತ್ತಿದೆ. ಇಂಥವುಗಳ ವಿರುದ್ಧವಾಗಿ, ಡಂಕೆಲ್‌ಪ್ರಸ್ತಾವನೆ, ಡಬ್ಲ್ಯೂ.ಟಿ.ಓ ಗಳು ರೈತರ ಮೇಲೆ ಹೇರುತ್ತಿರುವ ಆರ್ಥಿಕ ನಿರ್ಬಂಧಗಳ ವಿರುದ್ಧ ಹೋರಾಟವನ್ನು ಕಟ್ಟಿದ್ದರು. ಅಲ್ಲದೆ ಬಿತ್ತನೆ ಬೀಜದ ಮೇಲೆ,ಬೆಳೆಗಳ ಬೆಲೆ ಮುಂತಾದ ಪ್ರಶ್ನೆಗಳು ಪ್ರೊ.ಎಂ.ಡಿ.ಎನ್.ರವರಿಗೆ ಮುಖ್ಯವಾಗಿದ್ದವು. ಇಂತಹ ಪ್ರಶ್ನೆಗಳು ಮುಖ್ಯವಾಗಿದ್ದರಿಂದಾಗಿ ಭೂ ಪ್ರಶ್ನೆಗಳು ಹಿಂದೆ ಸರಿದವು. ಭೂ ಸಮಸ್ಯೆ ಏನಿದ್ದರೂ ಅದು ಕಾನೂನುಗಳ ಮೂಲಕ ಪರಿಹರಿಸಿಕೊಳ್ಳಬೇಕೆಂಬುದು ಅವರ ಆಶಯವಾಗಿತ್ತು.

ಭೂಸುಧಾರಣಾ ಕಾನೂನು ಮತ್ತು ಸರ್ಕಾರಗಳು ಭೂಹಂಚಿಕೆ ಕುರಿತು ಸಮಾನ ನೆಲೆಯಲ್ಲಿ ನೋಡಬೇಕೆಂಬುದು ಅವರ ಉದ್ದೇಶವಾಗಿತ್ತು. ಆದರೆ ರೈತ ಸಂಘಟನೆ ಇಂತಹ ಪ್ರಶ್ನೆಯನ್ನು ಮುಂದುಮಾಡಿದರೆ ರೈತ ಸಂಘಟನೆಗೆ ಮತ್ತು ಹೋರಾಟಕ್ಕೆ ರೈತರು ಗೈರುಹಾಜರಿಯಾಗಬಹುದೆಂಬ ಆತಂಕವನ್ನು ವ್ಯಕ್ತಪಡಿಸುತ್ತಾರೆ. ಇದಕ್ಕೆ ಪೂರಕವೆಂಬಂತೆ ರಹಮತ್ ತರೀಕೆರೆಯವರ ಸಂದರ್ಶನದಲ್ಲಿ ಪ್ರೊ.ಎಂ.ಡಿ.ಎನ್.ರವರು ಪ್ರತಿಕ್ರಿಯಿಸಿರುವುದನ್ನು ಗಮನಿಸಬಹುದು. "ನಿಮಗೆ ಒಂದು ಉದಾಹರಣೆ ಹೇಳಬೇಕು. ಭೂಮಿ ಬಗ್ಗೆ ನಮ್ಮ ನಿಲುವು ಏನು ಅಂತ. ನಾವು ಚಿಕ್ಕಮಗಳೂರಿನಲ್ಲಿ ಬೆಂಬಲ ಕಳೆದುಕೊಂಡೆವು. ಕಾರಣ ಕಾಫಿ ತೋಟಗಳಿಗೂ ಭೂಸುಧಾರಣೆ ಆಗಬೇಕು. ಈಗ ಆಗಿರೋದು ಅಂಥ ಸಮರ್ಪಕವಾದ ಭೂ ಸುಧಾರಣೆ ಏನಲ್ಲ. ಲ್ಯಾಂಡ್ ಟು ಟಿಲ್ಲರ್ ಅಂತ ಏನಂತೀವಿ, ಆ ಸುಧಾರಣೆ ಇನ್ನೂ ಆಗಿಲ್ಲ. ಕಾಗೋಡು ಸತ್ಯಾಗ್ರಹ, ಅದು ಗೇಣಿದಾರರ ಚಳುವಳಿ. ಅಷ್ಟೇ ಹೊರತು, ಉಳುವವನ ಚಳವಳಿ ಅಲ್ಲ. ಅದಾದ ಮೇಲೆ ಟೆನೆನ್ಸಿ ಆಕ್ಟ್ ಬಂದಿದ್ದು. ದೇವರಾಜ ಅರಸು ಮಾಡಿದ್ದೂನೂ ಅಷ್ಟೇನೆ. ಟೆನೆನ್ಸಿಲಾ ಅಂತ ತಂದು ಅಬ್ಸೆಂಟಿವ್ ಲ್ಯಾಂಡ್ ಲಾರ್ಡಿಸಂ ತೆಗೆದುಹಾಕೋ ಪ್ರಯತ್ನ ಅಷ್ಟೆ ಹೊರತು, ಟು ದಿ ಟಿಲ್ಲರ್ ಆಗಲೇ ಇಲ್ಲ."[೫೯] ಎಂದಿದ್ದಾರೆ. ಇವರ ಮಾತಿನ ಗ್ರಹಿಕೆಯಲ್ಲಿ ಭೂಹಂಚಿಕೆಯಾಗಬೇಕೆಂಬ ಆಶಯವಿದ್ದರೂ ಅದನ್ನು ಮುಖ್ಯವಾಹಿನಿಗೆ ತೆಗೆದುಕೊಂಡರೆ ಚಳುವಳಿಗೆ ಬೆಂಬಲ ದೊರೆಯುವುದಿಲ್ಲ ಎಂಬ ಆಶಯವನ್ನು ಕಾಣುತ್ತೇವೆ. ಆದರೆ ಭೂಸುಧಾರಣೆಗೆ ಸಂಬಂಧಿದಂತೆ ಎತ್ತಿದ ಪ್ರಶ್ನೆ ಇಲ್ಲಿ ಮುಖ್ಯವಾಗಿದೆ. ಇಲ್ಲಿ ಅಬ್ಸೆಂಟೀವ್ ಲ್ಯಾಂಡ್ ಲಾರ್ಡಿಸಂ ಬಹುಮುಖ್ಯವಾಗಿ ದಲಿತರಿಗೆ ಭೂ ರಹಿತರಿಗೆ

ಕೃಷಿ ಕೂಲಿಕಾರ್ಮಿಕರಿಗೆ ದೊರೆತುದರಿಂದ ಅದಕ್ಕೆ ಪೂರಕವಾಗುವಂತೆ ರೈತರಿಗೆ ಪರಿಕರಗಳು ದೊರೆಯಲಿಲ್ಲ.

ಭೂಮಿತಿ ಕುರಿತು ಪ್ರೊ.ಎಂ.ಡಿ.ಎನ್.ಅವರು ಪರಿಹಾರ ಸೂಚಿಸುವ ಕ್ರಮವನ್ನು ಇಲ್ಲಿ ಗಮನಿಸಬಹುದಾಗಿದೆ. "ನಮ್ಮ ದೃಷ್ಟಿಕೋನದ ಪ್ರಕಾರ ಭೂಮಿತಿ ಎಷ್ಟಿರಬೇಕೆಂದರೆ ಒಂದು ಕುಟುಂಬಕ್ಕೆ ಹೊರಗಿನಿಂದ ಕೂಲಿ ಇಲ್ಲದೆ ಕೆಲಸ ಮಾಡುವಷ್ಟು ಹಿಡುವಳಿ ಇರಬೇಕು. ಇದು ಒಂದು ಕುಟುಂಬದ ಹಿಡುವಳಿಗೆ ನಾವು ಕೊಟ್ಟಿರೋಂಥ ವಿಶ್ಲೇಷಣೆ. ಯಾಜ್ ಮಚ್ ಲ್ಯಾಂಡ್ ಯಾಜ್ ಎ ಫ್ಯಾಮಿಲಿ ನೀಡ್ಸ್, ವಿತೌಟ್ ಹೈರಿಂಗ್ ಎಕ್ಸಟ್ರನಲ್ ಲೇಬರ್. ಇದು ಸಮಾಜವಾದದ ಕೊನೆ ಹಂತ."[೬೦] ಇಲ್ಲಿ ಸಮಾಜವಾದಿ ನೆಲೆಯಲ್ಲಿ ಭೂ ಮಿತಿಯನ್ನು ನೋಡಿದ ಬಗೆಯನ್ನು ಕಾಣುತ್ತೇವೆ. ಕುಟುಂಬಕ್ಕೆ ಸಮಾನ ಹಂಚಿಕೆಯ ನೆಲೆಯಲ್ಲಿ ಭೂಮಿತಿಯಾದಲ್ಲಿ ಭೂ ಸಮಸ್ಯೆಯನ್ನು ಪರಿಹರಿಸಬಹುದು ಎಂಬುದು ಇವರ ಆಶಯವಾಗಿದೆ.

ಹಳ್ಳಿ ಆಸ್ತಿಗೆ ಸಂಬಂಧಿದಂತೆ ದೇವನೂರು ಮಹಾದೇವ ಅವರ ಸಂದರ್ಶನದಲ್ಲಿ ಕೇಳಿದ ಪ್ರಶ್ನೆಗೆ ಅವರು ಹೀಗೆ ಪ್ರತಿಕ್ರಿಯಿಸಿದ್ದಾರೆ." ಭೂಮಿ ಅಥವಾ ಕೈಗಾರಿಕಾ ಘಟಕ ಅಥವಾ ವ್ಯಾಪಾರಿ ಘಟಕ ಯಾವುದೇ ಆಗಿರಲಿ, ಕೂಲಿ ಅವಶ್ಯಕತೆ ಇಲ್ಲದಷ್ಟು ಉತ್ಪಾದನಾ ಸಾಧನ ಉಳಿಸಿಕೊಳ್ಳುವಂಥ ಒಂದು ವ್ಯವಸ್ಥೆಗಾಗಿ ಹೋರಾಡುವುದು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗುವುದಾದರೆ, ಈಗ ಕರ್ನಾಟಕದ ಮೂರು ಕೋಟಿ ಜನರು ಎರಡು ಕೋಟಿ ಎಕರೇನ ವ್ಯವಸಾಯ ಮಾಡ್ತಾ ಇದ್ದೀವಿ. ತಲಾ ೨೦ಗುಂಟೆ ವ್ಯವಸಾಯ ಖಾಸಗಿ ಒಡೆತನದ ಆಧಾರದ ಮೇಲೆ ಬೇಸಾಯ ಮಾಡಿದರೆ ಲುಕ್ಸಾನು ಆಗುವುದರಿಂದ ಸಾಮಾಜಿಕ ಒಡೆತನದ ಬೇಸಾಯದತ್ತ ನಡೆಯುವುದು ನಮ್ಮದಾಗಬೇಕು."[೬೧] ಭೂ ಹಂಚಿಕೆಯ ಒಡೆತನಕ್ಕಿಂತ ಸಾಮಾಜಿಕ ಒಡೆತನವೇ ಪರಿಹಾರದ ಮಾರ್ಗ ಎಂಬುದಾಗಿ ಪ್ರೊಫೆಸರರ ಒಮ್ಮತಾಭಿಪ್ರಾಯವಾಗಿದೆ. ಆದರೆ ವಾಸ್ತವದಲ್ಲಿ ಸಾಮ್ರಾಜ್ಯಶಾಹಿ ಹಾಗೂ ಬಂಡವಾಳಶಾಹಿ ಹಿಡಿತದಲ್ಲಿರುವ ಭೂ ಒಡೆತನ ಸಾಮಾಜಿಕ ಒಡೆತನವಾಗುವ ಆಶಯದ ಬಗ್ಗೆ ಚಿಂತಿಸಬೇಕಿದೆ.

ಎಂಡಿಎನ್ ಅವರ ಕಣ್ಣಿರುವುದು ಈ ಸಾಮ್ರಾಜ್ಯಶಾಹಿ ಮತ್ತು ಬಂಡವಾಳಶಾಹಿ ಕುತಂತ್ರಗಳ ಮೇಲೆ. ಹೀಗಾಗಿ ಒಳಗಿನ ಶತ್ರುಗಳು (ಭೂಮಾಲೀಕರು) ಮತ್ತು ಹೊರಗಿನ ಶತ್ರುಗಳು (ಬಂಡವಾಳಶಾಹಿ ವರ್ಗ) ಒಂದೇ ಕಾಲಕ್ಕೆ ರೈತನ ಮೇಲೆ ಹರಿಹಾಯ್ದಿವೆ. ಈ ಸಮಸ್ಯೆಗಳಿಂದ ನಾವು ಹೊರಬರಬೇಕೆಂಬುದು ನಂಜುಂಡಸ್ವಾಮಿಯವರ ಆಶಯವಾಗಿದೆ. "ಅದು ಭೂಸುಧಾರಣೆ ಕಾಯ್ದೆಯ ಸಡಿಲಿಕೆ ಅಲ್ಲ. ಕಾರ್ಪೊರೇಟ್ ಕಂಪನಿಗಳು ದೊಡ್ಡ ಪ್ರಮಾಣದಲ್ಲಿದ್ದ ಸಣ್ಣ ಸಣ್ಣ ತುಂಡು ಜಮೀನನ್ನು ಒಟ್ಟಿಗೆ ಕೊಂಡುಕೊಳ್ಳುವುದಕ್ಕಾಗಿದೆ. ಇದು ನನ್ನ ಪ್ರಕಾರ ಬಂಡವಾಳಶಾಹಿ ಬಹುರಾಷ್ಟ್ರೀಯ ಕಂಪೆನಿಗಳ ಮತ್ತು ಅವರ ವಕ್ತಾರರಂತಿರುವ ವಿಶ್ವಬ್ಯಾಂಕ್ ಮತ್ತು ಅಂತರರಾಷ್ಟ್ರೀಯ ಹಣಕಾಸು ನಿಧಿ ಲಾಬಿಗೆ ಶರಣಾಗುವಿಕೆಯಾಗಿದೆ"[೬೨]

ಏಕಕಾಲದಲ್ಲಿ ಸ್ಥಳೀಯ ನೆಲೆಯ ಭೂಮಾಲಿಕರಿಂದ ಮತ್ತು ಅಂತರಾಷ್ಟ್ರೀಯ ಮಟ್ಟದ ಹುನ್ನಾರದ ಮೂಲಕವು ಭೂ ಆಕ್ರಮಣಗಳು ಹಾಗೂ ಭೂಹಂಚಿಕೆಯಿಂದ ವಂಚನೆಗೆ ಒಳಗಾಗುತ್ತಿರುವುದನ್ನು ಅವರು ಗುರುತಿಸಿದ್ದಾರೆ.

**೫.ಡಿ.ಆರ್.ನಾಗರಾಜ್**

ಡಿ.ಆರ್.ನಾಗರಾಜ್ ಕನ್ನಡ ಸಾಹಿತ್ಯದ ಬಹುದೊಡ್ಡ ಸಂಸ್ಕೃತಿ ಚಿಂತಕ ಮತ್ತು ವಿಮರ್ಶಕ. ಭೂಮಿ ಕುರಿತಾಗಿ ಮಾತ್ರ ಕಲ್ಪನೆಯ ನೆಲೆಯಲ್ಲಿ ಅವರ "ಶಕ್ತಿಶಾರದೆಯ ಮೇಳ" ಕೃತಿಯಲ್ಲಿ ಚರ್ಚಿಸಿದ್ದಾರೆ. ಅವರ "ಸಂಸ್ಕೃತಿಕ ಕಥನ"ದಲ್ಲಿ "ಆತಂಕಿತ ಹಿಂದೂ ಮತ್ತು ಕುಪಿತ ರೈತ", "ಬೆಂಗಳೂರಿನ ಹತ್ತಿರ ಜಪಾನೀ ಟೌನ್‌ಶಿಪ್" ಮೊದಲಾದ ಲೇಖನಗಳಲ್ಲಿ ರೈತರ ಕುರಿತು ಚಿಂತಿಸಿದ್ದಾರೆ. ಜಾಗತಿಕ ಸಂದರ್ಭದಲ್ಲಿ ರೈತರ ಭೂ ಕಬಳಿಕೆಯಿಂದ ತಮ್ಮನ್ನು ತಾವು ಸಂಕಷ್ಟಗಳಿಗೆ ಒಡ್ಡಿಕೊಳ್ಳಬಹುದಾದ ಆತಂಕ ಕುರಿತು ಚರ್ಚಿಸುತ್ತಾರೆ.

ಬೃಹತ್ ಬೆಂಗಳೂರು ಕಲ್ಪನೆಯ ಮುನ್ಸೂಚನೆಯನ್ನು ೧೯೯೨ರಲ್ಲೇ ಸೂಚಿಸಿರುವುದನ್ನು ಗಮನಿಸಬಹುದು. "ಬೆಂಗಳೂರು ಬೆಳೆಯುತ್ತಿರುವ ದೈತ್ಯಾಕಾರೀ ರೀತಿಯಿಂದಾಗಿ ಅದರ ಸುತ್ತಮುತ್ತಲ ಸುಮಾರು ೨೦-೩೦ ಕಿ.ಮೀ.ಗಳ ತನಕ ಉಪನಗರಗಳು ಇತ್ಯಾದಿಗಳು ಬೃಹದಾಕಾರವಾಗಿ ಬೆಳೆಯುತ್ತವೆ ಎಂಬ ಬಗ್ಗೆ ಯಾರಿಗೂ ಅನುಮಾನವೇ ಬೇಡ. ಮೆಟ್ರೋಪಾಲಿಟನ್ ಬೆಂಗಳೂರು ಎಂಬ ಕಲ್ಪನೆಯೇ ಎಷ್ಟು ಭಯಾನಕ ಎಂದು ನಮಗೆ ನಿಜವಾಗಿ ಹೊಳೆಯುವುದು ೨೦-೨೫ ವರ್ಷಗಳ ನಂತರವೇ. ಅಥವಾ ಅಷ್ಟು ದೂರವೂ ಕಾಯಬೇಕಾದ

ಅಗತ್ಯವಿಲ್ಲವೆಂದು ಕಾಣುತ್ತದೆ."[೬೩] ಇಂತಹ ಪರಿಣಾಮಗಳನ್ನು ಇಂದು ಕಾಣುತ್ತಿದ್ದೇವೆ.

ಬೆಂಗಳೂರಿನ ರೈತರು ಮುಂದೆ ವಂಚನೆಗೊಳಗಾಗುವ ಹಾಗೂ ರೈತ ತನ್ನ ಅಸ್ತಿತ್ವ ಕಳೆದುಕೊಳ್ಳಬಹುದೆಂಬ ಆತಂಕ ಮತ್ತು ಅಪಾಯವನ್ನು ಡಿ.ಆರ್.ಎನ್.ಸೂಚಿಸುತ್ತಾರೆ. " ಇಲ್ಲಿ ನಿಜವಾದ ಅಪಾಯವೇನೆಂದರೆ ಸರ್ಕಾರವೇ ಖುದ್ದಾಗಿ ನಿಂತು ಕಡಿಮೆ ಬೆಲೆಗೆ ಭೂಮಿಯನ್ನು ವಶಪಡಿಸಿಕೊಂಡು ನಂತರ ವಿಶೇಷ ವಸತಿಯೋಜನೆಗಳ ನೆಪದಲ್ಲಿ ಖಾಸಗಿ ಬೃಹತ್ ಬಂಡವಾಳಿಗರಿಗೆ ಮುಂದೆ ಕೊಟ್ಟುಬಿಡಬಹುದು ಎನ್ನುವುದು. ಸರ್ಕಾರದ ಪರಿಹಾರ ನೀಡಿಕೆ ಕ್ರಮದಲ್ಲಿ ರೈತವಿರೋಧಿಯಾದ ಅಂಶಗಳು ಸಾಕಷ್ಟಿವೆ."[೬೪] ಎಂದು ಅಂದೇ ಗುರುತಿಸಿದ್ದಾರೆ.

ರೈತ ಪ್ರಶ್ನೆ ಕುರಿತಂತೆ ಅವರು ಮಂಡಿಸುವ ವಿಚಾರವನ್ನು ಇಲ್ಲಿ ಗಮನಿಸಬಹುದಾಗಿದೆ. "ಸಂಘದ ನೇತಾರ ಪ್ರೊ.ಎಂ.ಡಿ.ನಂಜುಂಡಸ್ವಾಮಿಯವರು ನಮ್ಮ ಕಾಲದ ಬಹುಮುಖ್ಯ ಗಾಂಧಿವಾದಿ ಎಡಪಂಥೀಯರಲ್ಲೊಬ್ಬರಾಗಿದ್ದ ಡಾ.ರಾಮಮನೋಹರ ಲೋಹಿಯಾರ ನಿಷ್ಠ ಅನುಯಾಯಿಯೂ ಹೌದು. ಹೀಗಾಗಿ, ರೈತ ಸಂಘದ ಘೋಷಣೆಗೆ ಎಲ್ಲ ರೀತಿಯ ಅಧಿಕೃತತೆಯೂ ಪ್ರಾಪ್ತವಾಯಿತು. ರೈತರು ಆ ದಾಳಿಯನ್ನು ಯೋಜಿಸಿದ್ದ ಕ್ರಮವು ವಾಮಾಚಾರ ವಿರೋಧಿ ಕ್ರಿಯಾವಿಧಿಯಂತೆಯೇ ತೋರುತ್ತಿತ್ತು. ಊಟದ ಅಂಗಡಿಯೊಂದಕ್ಕೆ (ಕೆಂಟುಕಿ ಫ್ರೈಡ್ ಚಿಕನ್‌ಮಳಿಗೆ) ದಾಳಿ ಮಾಡಿ ಆ ಮೂಲಕ ಅದರ ಹಿಂದಿನ ಶಕ್ತಿಗಳಾದ ಜಾಗತಿಕ ಮಾರುಕಟ್ಟೆ ಹಾಗೂ ರಾಜಕೀಯ ವ್ಯವಸ್ಥೆಗಳೆರಡರ ಹೊಟ್ಟೆಗೂ ಏಟು ಹಾಕುವಂತಹ ಸಾಂಕೇತಿಕತೆ ಅದರಲ್ಲಡಗಿತ್ತು. ಅದನ್ನು ಡಿಫೀಟ್ ಮಾಡಿತ್ತು."[೬೫] ಎಂದು ತಮ್ಮ ತರ್ಕವನ್ನು ಮಂಡಿಸಿದ್ದರು.

ರೈತ ಹೋರಾಟಗಳನ್ನು ಗಾಂಧಿ ನೆಲೆಯಲ್ಲಿ ಹಾಗೂ ಲೋಹಿಯಾ ನೆಲೆಯಲ್ಲಿ ಈ ಲೇಖಕರು ನೋಡುತ್ತಾರೆ. ರೈತರ ಪ್ರಶ್ನೆಗಳನ್ನು ಮುಖ್ಯವಾಗಿ ಜಾಗತಿಕ ಸಂದರ್ಭದಲ್ಲಿ ಎದುರಾಗುತ್ತಿರುವ ರೈತ ವಿರೋಧಿ ಶಕ್ತಿಯನ್ನು ಸೋಲಿಸಲು ಈ ಮೂಲಕ ನೋಡುತ್ತಾರೆ. "ನಾಗರೀಕ ಸಮಾಜದ ಹಿಂಸೆಯಿಂದ ಪ್ರಭುತ್ವದ ಹಿಂಸೆಯ ಕಡೆಗೆ" ಎನ್ನುವ ಲೇಖನದಲ್ಲಿ ದಲಿತರ ಭೂಹೋರಾಟ ಕುರಿತು ಚರ್ಚಿಸಿದ್ದಾರೆ. ಇದರ ಹಿಂದೆ ನಾಗರಿಕ ಸಮುದಾಯದ ಹಿಂಸ್ರಕ ಕೃತ್ಯದ ಮುಖವನ್ನು ಬಯಲುಗೊಳಿಸುತ್ತಾರೆ. ಈ ಎಲ್ಲಾ ಹಿನ್ನೆಲೆಯಲ್ಲಿ ಭೂ ಪ್ರಶ್ನೆ ಕುರಿತು, ರೈತ ಪ್ರಶ್ನೆ ಕುರಿತು ತಮ್ಮ ಕೃತಿಗಳ ಮೂಲಕ ಚಳುವಳಿಗೆ ಪ್ರತಿಕ್ರಿಯಿಸಿರುವುದನ್ನು ಕಾಣುತ್ತೇವೆ.

**೬. ಕೆ.ಎಸ್.ಪುಟ್ಟಣ್ಣಯ್ಯ**

ಕರ್ನಾಟಕ ರಾಜ್ಯ ರೈತ ಸಂಘದ ಒಂದು ಬಣದ ಅಧ್ಯಕ್ಷ ಕೆ.ಎಸ್.ಪುಟ್ಟಣ್ಣಯ್ಯನವರು ಸಮಾಜವಾದಿ ಸೈದ್ಧಾಂತಿಕ ತಳಹದಿಯ ಮೂಲಕ ರೈತ ಚಳುವಳಿಯನ್ನು ಕಟ್ಟಿ ಬೆಳೆಸಿದವರಲ್ಲಿ ಪ್ರಮುಖರು . ರೈತ ಹೋರಾಟದಿಂದ ಅಧಿಕಾರದತ್ತ ಚಲಿಸಿ ಆ ಚಲನೆಯಿಂದ ರೈತರ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬೇಕೆಂಬ ಹಂಬಲದೊಂದಿಗೆ ಹೊರಟ ಪುಟ್ಟಣ್ಣಯ್ಯನವರು ಶಾಸನಸಭೆಯ ಒಳಗೆ ಶಾಸರಾಗಿ ಮತ್ತು ಹೊರಗೆ ರೈತಪರವಾದ ದನಿಯನ್ನು ಎತ್ತುತ್ತಾ ಬಂದಿದ್ದಾರೆ. ರೈತರ ಸಮಸ್ಯೆಗಳಿಗೆ ಸ್ಪಂದಿಸುತ್ತ ಆ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ಹೋರಾಟ ನಡೆಸಬಲ್ಲ, ಒಬ್ಬ ದಿಟ್ಟ ರೈತನಾಯಕರಾಗಿದ್ದಾರೆ.

ರೈತ ಸಂಘಟನೆಯಲ್ಲಿದ್ದುಕೊಂಡೇ ಭೂ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವಲ್ಲಿ ಸುದೀರ್ಘಕಾಲದಿಂದಲೂ ಆಲೋಚಿಸುತ್ತ, ಮಂಡಿಸುತ್ತ ಬಂದಿದ್ದಾರೆ. ಅವರ ಭೂಮಿಯ ಬಗೆಗಿನ ತರ್ಕ ಹಾಗೂ ಚಿಂತನೆಯನ್ನು ಇಲ್ಲಿ ಗಮನಿಸಬಹುದಾಗಿದೆ.

ನಗರ ಪ್ರದೇಶದ ಹಾಗೂ ಗ್ರಾಮೀಣ ಪ್ರದೇಶದ ಭೂಮಿಗೆ ಇರುವ ಮೌಲ್ಯದ ಅಂತರವನ್ನು ಗುರುತಿಸುತ್ತಾರೆ. ರಾಷ್ಟ್ರೀಯ ಬ್ಯಾಂಕುಗಳು ಮಾಡುವ ಹುನ್ನಾರ ಕುರಿತು ಪುಟ್ಟಣ್ಣಯ್ಯನವರು ವಾಸ್ತವದ ನೆಲೆಗಟ್ಟಿನಲ್ಲಿ ತರ್ಕಬದ್ಧವಾಗಿ ವಿವೇಚಿಸುತ್ತಾರೆ. "ನಗರದ ಭೂಮಿಯನ್ನು ಒತ್ತೆ ಇಟ್ಟುಕೊಂಡು ಕೊಡುವಷ್ಟು ಸಾಲಗಳನ್ನು ಹಳ್ಳಿಯ ಭೂಮಿಗೆ ಕೊಡಲು ನಮ್ಮ ಬ್ಯಾಂಕುಗಳು ಸಿದ್ಧವಿಲ್ಲ. ಭೂಮಿಯಲ್ಲಿನ ಬೆಳೆಗೆ ಸಾಲ ಕೊಡುತ್ತಿದ್ದಾರೆಯೇ ಹೊರತು, ಭೂಮಿಗೆ ಸಾಲ ಕೊಡಲು ಅವರು ತಯಾರಿಲ್ಲ. ಹೀಗಾಗಿ ನಮ್ಮ ಸಾಲ ನೀತಿಯಲ್ಲಿ ಮಹತ್ತರವಾದ ಬದಲಾವಣೆಯಾಗಬೇಕು. ತನ್ಮೂಲಕ ಗ್ರಾಮ ಹಾಗೂ ನಗರಗಳ ಅಂತರ ಕಡಿಮೆಯಾಗುತ್ತಾ ಬರಬೇಕು."[೬೬] ವಾಸ್ತವದಲ್ಲಿನ ತಾರತಮ್ಯ ನೀತಿಯನ್ನು ಇಂತಹವೇ ನಿಲುವುಗಳನ್ನು ಪ್ರೊ.ನಂಜುಂಡಸ್ವಾಮಿಯವರಲ್ಲಿ ಕಾಣುತ್ತೇವೆ. ಅದೇ ರೀತಿಯಲ್ಲಿ ಭೂಮಿ ಕುರಿತಾಗಿ ಇರುವ ತಾರತಮ್ಯತೆ

ಹಾಗೂ ಅಭದ್ರತೆಗಳನ್ನು ಇಲ್ಲಿ ಪುಟ್ಟಣ್ಣಯ್ಯನವರು ನಿಖರವಾಗಿ ಪತ್ತೆ ಹಚ್ಚುತ್ತಾರೆ.

ಈ ಹಿನ್ನೆಲೆಯಲ್ಲಿ ಭೂಮಿಯನ್ನು ಆರ್ಥಿಕ ದೃಷ್ಟಿಕೋನದಲ್ಲಿ ನೋಡುವ ಬಗೆಯನ್ನು ಅಲ್ಲಗಳೆಯುತ್ತಾ, "ಭೂಮಿ ಉದ್ಯೋಗವನ್ನು ಸೃಷ್ಟಿ ಮಾಡುವ ಮೂಲ ಅಷ್ಟೇ. ಬಹಳ ಆರ್ಥಿಕ ಭದ್ರತೆಯನ್ನು ಸೃಷ್ಟಿ ಮಾಡುವ ಮೂಲ ಅಲ್ಲ. ಇವತ್ತು ನೂರಾರು ಜನ ಭೂಮಿ ಮಾಡುವುದಕ್ಕೆ ತಯಾರು ಇದ್ದಾರೆ. ಕೊಂಡುಕೊಳ್ಳುವುದಕ್ಕೆ ತಯಾರಿಲ್ಲ."[೭೮] ಈ ಚರ್ಚೆಯ ವೇಳೆಯಲ್ಲಿ ಪುಟ್ಟಣ್ಣಯ್ಯನವರು ಭೂಮಿ ಹಂಚಿಕೆಯ ಬಗ್ಗೆ ರೈತ ಸಂಘದ ನಿಲುವನ್ನು ಸ್ಪಷ್ಟಪಡಿಸಲು ಯತ್ನಿಸಿದ್ದಾರೆ. "ನಮ್ಮಲ್ಲಿರುವುದು ರೈತವಾರಿ ಪದ್ಧತಿ. ಆಂಧ್ರದಲ್ಲಿರುವಂತಹ ಜಮೀನ್ದಾರ್ ಪದ್ಧತಿಯಲ್ಲ. ಭೂಸುಧಾರಣೆ ಬಂದ ಮೇಲೆ ಅದು ಸುಧಾರಣೆಗೆ ಬರದಿದ್ದರೂ, ಸಾಕಷ್ಟು ಸುಧಾರಣೆ ಆಗಿದೆ. ಈಗಿರುವ ಭೂಮಿಯನ್ನು ಗ್ರಾಮೀಣ ಪ್ರದೇಶದಲ್ಲಿ ಹಂಚಿದರೂ ಕೂಡ ತಲಾವಾರು ಹನ್ನೊಂದುವರೆ ಕುಂಟೆ ಜಮೀನು ಬರ್ತದೆ. ಆದರೆ ಎಲ್ಲರಿಗೂ ಭೂಮಿಗೆ ಡಿಪೆಂಡ್ ಆಗಬಾರ್ದು. ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಸ್ವಯಂ ಉದ್ಯೋಗ ಸೃಷ್ಟಿ ಬಗೆಗೆ ಚಿಂತಿಸಬೇಕಾಗಿದೆ. ನಾಲ್ಕು ಜನ ಇರುವ ರೈತರನ್ನು ಭೂಮಿಗೆ ಡಿಪೆಂಡ್ ಆಗದೆ ಬೇರೆ ಉದ್ಯೋಗಕ್ಕೆ ಹೋಗಬೇಕು. ಏಕೆಂದರೆ ನಾವು ಬೆಳೆಯುವ ಬೆಳೆ ನಮ್ಮ ಕೈಯಲ್ಲಿ ಇಲ್ಲ. ಅದು ಮಧ್ಯಸ್ಥಕಾರನ ಕೈಯಲ್ಲಿದೆ. ಅದು ನಮ್ಮ ಕೈಗೆ ಬಂದರೆ ಪ್ರತಿಯೊಂದು ಹಳ್ಳಿಯನ್ನು ಉದ್ಧಾರ ಮಾಡಬಹುದು. ಗ್ರಾಮ ಒಂದು ಘಟಕವಾಗಬೇಕು. ಎಲ್ಲ ಯೋಜನೆಗಳು ಗ್ರಾಮದ ಕಡೆ ಮುಖ ಮಾಡಬೇಕು ಎನ್ನುವುದೇ ರೈತ ಸಂಘದ ಮೂಲ ಮಂತ್ರ. ಸಂವಿಧಾನವೇ ಬದಲಾಗಬೇಕು. ಅಂದರೆ ಮೂಲಭೂತ ಹಕ್ಕುಗಳಲ್ಲಿ ಆಸ್ತಿಯ ಹಕ್ಕು ಒಂದು. ಅದರ ಬಗ್ಗೆ ಸಂವಿಧಾನದಲ್ಲಿ ತಿದ್ದುಪಡಿ ತರಬೇಕು."[೭೯]

ಭೂ ಹಂಚಿಕೆಗೆ ಪರಿಹಾರವೆಂದರೆ ಸ್ವ ಉದ್ಯೋಗ ಕಲ್ಪಿಸಿಕೊಂಡು ಹೊರ ನಡೆಯುವುದು, ಹೊಸ ಸವಾಲುಗಳನ್ನು ಎದುರಿಸುವುದು. ಆದರೆ ಇಲ್ಲಿ ಎಲ್ಲಾ ವರ್ಗದ ಎಲ್ಲಾ ಜನಾಂಗದ ಜನರು ಆಧುನಿಕ ಶಿಕ್ಷಣದ ಸೌಕರ್ಯ ಪಡೆಯಲು ಎಷ್ಟರಮಟ್ಟಿಗೆ ಅರ್ಹರು ಎಂಬುದು ಮುಖ್ಯ ಪ್ರಶ್ನೆಯಾಗಿ ಕಾಡುತ್ತದೆ. ರೈತರು ಬೆಳೆದ ಬೆಳೆಗಳಿಗೆ ವೈಜ್ಞಾನಿಕ ಬೆಲೆ ದೊರೆಯದೆ ಮಧ್ಯಸ್ಥಗಾರನ ಕೈಸೇರುವುದರಿಂದ ಪರ್ಯಾಯ ಮಾರ್ಗವಾಗಿ ಸ್ವಉದ್ಯೋಗ ಕೈಗೊಂಡು ಭೂಮಿಯನ್ನು ಅವಲಂಬಿಸದೆ ಇರುವಂತೆ ಸೂಚಿಸುವುದು ಎಷ್ಟರ ಮಟ್ಟಿಗೆ ಸರಿ. ನಮ್ಮಲ್ಲಿರುವ ಸಂಪನ್ಮೂಲವನ್ನು ಕ್ರೋಢೀಕರಿಸಿ ಇರುವ ಭೂಮಿಯನ್ನು ಉಳುಮೆ ಮಾಡಿ ಸ್ವಂತ ಮಾರುಕಟ್ಟೆಯನ್ನು ಕಂಡುಕೊಳ್ಳುವ ಪರಿಹಾರದಿಂದ ಹಿಂದೆ ಸರಿದಂತೆ ಪುಟ್ಟಣ್ಣಯ್ಯನವರ ವಿಚಾರ ಕಂಡುಬರುತ್ತದೆ. ಆದರೆ ಇವರ ಚಿಂತನೆ ಜಾಗತಿಕ ಸಂದರ್ಭಕ್ಕೆ ಸೂಕ್ತವಾಗಿ ಕಾಣುತ್ತದೆ. ಇವರ ಆಶಯದಲ್ಲಿ ರೈತರ ಬದುಕು ಹಸನಾಗಬೇಕೆಂಬ ಕನಸು ವ್ಯಕ್ತವಾಗುತ್ತದೆ.

### ೩.೩.೪ ಅಂಬೇಡ್ಕರ್ ಚಿಂತನೆ ಮತ್ತು ಭೂಮಿಯ ಪ್ರಶ್ನೆ

ಭಾರತದಲ್ಲಿ ಅಂಟುಜಾಡ್ಯವಾಗಿದ್ದ ಜಾತಿ ವ್ಯವಸ್ಥೆ ಹಾಗೂ ಅಸ್ಪೃಶ್ಯಸಮಸ್ಯೆ ವಿರುದ್ಧ ಬಿ.ಆರ್.ಅಂಬೇಡ್ಕರ್‌ರವರು ತೀವ್ರವಾಗಿ ಹೋರಾಟ ನಡೆಸಿದರು. ದಲಿತ ಸಮುದಾಯಕ್ಕೆ ಸ್ವಾಭಿಮಾನದ ದನಿಯಾಗಿದ್ದಾರೆ. ಭಾರತೀಯ ಹಿಂದೂಧರ್ಮದ ಅವೈದಿಕಾಚರಣೆಯನ್ನು ತರ್ಕಬದ್ಧವಾಗಿ ಖಂಡಿಸಿ ದಲಿತರನ್ನು ಸ್ವಾಭಿಮಾನಿಯನ್ನಾಗಿ ಮಾಡಲು ಯತ್ನಿಸಿದರು. ಇಲ್ಲಿ ಭೂ ಹಂಚಿಕೆ ಕುರಿತಂತೆ ತನ್ನದೇ ಆದ ತರ್ಕ ಮತ್ತು ಪರಿಹಾರವನ್ನು ಕಂಡುಕೊಳ್ಳಲು ಯತ್ನಿಸಿದರು.

ಅಂಬೇಡ್ಕರ್‌ರವರು ತುಳಿತಕ್ಕೊಳಗಾದ ಜನಾಂಗದ ಏಳಿಗೆಗಾಗಿ ಸಮಾನತೆ, ಶಿಕ್ಷಣ, ಸಂಘಟನೆ ಹೋರಾಟಗಳ ಮೂಲಕ ಸಾಂಸ್ಕೃತಿಕ ಎಚ್ಚರವಾಗಿ ಮೂಡಿಸಿದರು. ಅವರು ದಮನಿತ ಜನಾಂಗದ ಸಮಾನತೆ ಮತ್ತು ಶಿಕ್ಷಣ, ಧಾರ್ಮಿಕ ನೀತಿಯಲ್ಲಿ ಸಮಾನತೆ ಮೊದಲಾದ ಅಂಶಗಳಿಗೆ ಹೆಚ್ಚಿನ ಆದ್ಯತೆ ನೀಡಿದರು. ಗಾಂಧಿ ಮತ್ತು ಅಂಬೇಡ್ಕರ್ ಚಿಂತನೆಗಳಲ್ಲಿ ಕೆಲವು ವೈರುಧ್ಯಗಳನ್ನು ಕಾಣುತ್ತೇವೆ. ದೇಶಿಯ ಸಮಸ್ಯೆಗಳಾದ ಅಸಮಾನತೆ, ಅಸ್ಪೃಶ್ಯತೆ, ಜಾತಿ ಸಮಸ್ಯೆಗಳು ಮೊದಲಾದವು ಅಂಬೇಡ್ಕರ್ ಅವರಿಗೆ ಮುಖ್ಯವೆನಿಸಿದ್ದವು. ಆದರೆ ಗಾಂಧೀಜಿಯುವರು ಇಂತಹ ಸಮಸ್ಯೆಗಳನ್ನು ರಾಷ್ಟ್ರವೇ ಪರಿಹರಿಸಿಕೊಳ್ಳಬೇಕು. ಈಗೇನಿದ್ದರೂ ರಾಷ್ಟ್ರೀಯ ಹೋರಾಟದ ಮೂಲಕ ದೇಶ ಸ್ವಾತಂತ್ರ್ಯ ಪಡೆಯುವುದು ಮುಖ್ಯವೆಂದು ಭಾವಿಸಿದ್ದರು. ಇದಕ್ಕೆ ಭಿನ್ನವಾಗಿ ಬ್ರಿಟಿಷರು ತಂದುಕೊಟ್ಟ, ಸಮಾನತೆ, ಶಿಕ್ಷಣ, ಸಂಘಟನೆ, ಹೋರಾಟ ಮೊದಲಾದ ಪ್ರಗತಿಪರ ಕಾರ್ಯಕ್ರಮಗಳನ್ನು ಅಂಬೇಡ್ಕರ್ ಬೆಂಬಲಿಸುತ್ತಿದ್ದರು.ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ಈ ಇಬ್ಬರಲ್ಲಿ ಇಂಥ ದ್ವಂದ್ವ

ನಿಲುವುಗಳನ್ನು ಕಾಣುತ್ತೇವೆ. ಅಂಬೇಡ್ಕರ್ ಚಿಂತನೆಯು ದಲಿತರ, ಸಣ್ಣರೈತರ ಪರವಾದ ವಿಶಾಲ ತಹಳಹದಿಯನ್ನು ಒಳಗೊಂಡಿದೆ. ಈ ಅಧ್ಯಯನದ ದೃಷ್ಟಿಯಿಂದ ಭೂಮಿ ಬಗೆಗಿನ ಅಂಬೇಡ್ಕರ್ ಚಿಂತನೆಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

"ಬಡರೈತರ ದುಃಖದ ಬೇರು ಭೂಮಾಲೀಕರ ವೈಭೋಗದಲ್ಲಿದೆ ಎಂದು ಅಂಬೇಡ್ಕರ್ ಬಡರೈತರಿಗೆ ಒತ್ತಿ ಹೇಳುತ್ತಾರೆ. ಅವರ ಪ್ರಕಾರ ಸಾಗುವಳಿಗೆ ಒಳಗಾಗದ ಜಮೀನನ್ನು ಸರಕಾರ ಪಡೆದು ಭೂರಹಿತ ಕಾರ್ಮಿಕರ ಸಮಸ್ಯೆಯನ್ನು ಜರೂರಾಗಿ ಬಿಡಿಸಲೇಬೇಕು. ಹಾಗಾಗುವಾಗ ಭೂಮಿ ಬಯಕೆಯ ಗುಂಪು ಪ್ರಬಲವಾಗಿರುತ್ತದೆ. ಸದ್ಯದ ಕಾನೂನು ಆ ದಿಸೆಯಲ್ಲಿ ನಿರುಪಯೋಗಿ ಮಾತ್ರವಲ್ಲ ಅದಕ್ಕಿಂತ ಕೆಟ್ಟದ್ದಾಗಿದೆ. ಹಾಗೆ ಮಾಡುವುದರಿಂದ ಭೂ ವ್ಯವಸಾಯ ಸಂಪದ್ಭರಿತವಾಗುವುದಿಲ್ಲ. ಅಸ್ಪೃಶ್ಯ ಭೂರಹಿತ ಕಾರ್ಮಿಕರಿಗೆ ಅದು ಸಹಾಯಕವಾಗಲಾರದು. ಸಾಮೂಹಿಕ ಬೇಸಾಯ ಮಾತ್ರ ಅವರಿಗೆ ಸಹಾಯಕವಾಗಬಲ್ಲದು."[೮೦]

ಅಂಬೇಡ್ಕರ್‌ರವರು ಭೂ ಪ್ರಶ್ನೆಯನ್ನು ಪರಿಹರಿಸಲು ಮುಂದಾಗಿದ್ದು ಸಾಮುದಾಯಿಕ ಕೃಷಿ ಪದ್ಧತಿಯಂತಹ ಹೊಸ ವಿಧಾನದ ಮೂಲಕ. ಅಲ್ಲದೆ ಭೂ ರಾಷ್ಟ್ರೀಕರಣಗೊಳಿಸುವುದರ ಮೂಲಕ ಭೂ ಸಮಸ್ಯೆಯನ್ನು ಪರಿಹರಿಸಬಹುದು ಎಂದು ಪ್ರತಿಪಾದಿಸಿದರು. ಸಹಕಾರಿ ಕೃಷಿ ಪದ್ಧತಿಯಿಂದ ಸಾಮರಸ್ಯ ಸಾಧಿಸಬೇಕೆಂದು ಪ್ರತಿಪಾದಿಸಿದರು. ಖಾಸಗಿ ಆಸ್ತಿ ಪರಿಕಲ್ಪನೆಯಿಂದ ಹೊರಬರಲು ತಮ್ಮ ಚಿಂತನೆಯನ್ನು ಮಂಡಿಸಿದ್ದನ್ನು ಇಲ್ಲಿ ಮುಖ್ಯವಾಗಿ ಗಮನಿಸಬಹುದು. ಭಾರತೀಯ ಸಮಾಜದಲ್ಲಿ ಜಾತಿ ಮತ್ತು ವೃತ್ತಿಯಾಧಾರಿತ ನೆಲೆಯಲ್ಲಿ ಭೂಒಡೆತನಗಳು ಅಸ್ತಿತ್ವ ಪಡೆದಿವೆ. ಇಂದಿಗೂ ವಾಸ್ತವದಲ್ಲಿ ಜಾತಿಯಾಧಾರದ ಭೂ ಒಡೆತನ ಅಂಶಗಳು ಕಂಡುಬರುತ್ತದೆ.

ನಿರ್ಲಕ್ಷ್ಯಕ್ಕೊಳಗಾದ ಸಮುದಾಯವು ಭೂಒಡೆಯರಾಗುವ ಮೂಲಕ ರೈತರಾಗುವ ಹಾಗೂ ಸಾಮಾಜಿಕ ಅಸಮಾನತೆಯಿಂದ ಸಮಾನತೆಯತ್ತ ಹೆಜ್ಜೆಹಾಕುವಂತೆ ಅಂಬೇಡ್ಕರ್‌ವಾದ ಪ್ರೇರೇಪಿಸುತ್ತದೆ. ಅಲ್ಲದೆ ಈ ವಾದವು ಭೂಹೀನ ಕೃಷಿಕಾರ್ಮಿಕರಿಗೆ ಭೂಮಾಲೀಕತ್ವ ದೊರಕಿಸಿಕೊಡಬೇಕೆಂಬ ಮಹತ್ವಾಕಾಂಕ್ಷೆಯನ್ನು ಹೊಂದಿದೆ. ಆದ್ದರಿಂದ ಸಣ್ಣರೈತರಿಗೆ ಹಾಗೂ ಭೂಹೀನ ದಲಿತರಿಗೆ ಭೂಮಿಯನ್ನು ದಕ್ಕಿಸಿಕೊಡಲು ಸಮಗ್ರ ನೀತಿಯೊಂದನ್ನು ರೂಪಿಸಿ ಸರ್ಕಾರದ ಮುಂದೆ ಮಂಡಿಸುವ ಮೂಲಕ ಅಂಬೇಡ್ಕರ್‌ರವರು ಸಾಮುದಾಯಿಕ ಕೃಷಿ ನೀತಿಗೆ ಚಾಲನೆ ನೀಡಿದರು.

ಈ ಕುರಿತು ಕೃಷಿ ಭೂಮಿಯು ಖಾಸಗಿ ಒಡೆತನದಲ್ಲಿ ಇರುವವರೆಗೆ ಕೃಷಿ ಕಾರ್ಮಿಕರಿಗೆ ತಕ್ಕ ಪ್ರತಿಫಲ ದೊರಕದೆ ಹೋದರೆ, ಅವರಿಗೆ ಭಯ ಮತ್ತು ಅವಮಾನದ ಬದುಕು ತಪ್ಪಿದ್ದಲ್ಲ ಎಂದು ಅಂಬೇಡ್ಕರ್ ಅವರು ಭಾವಿಸಿದ್ದರು. ಅಲ್ಲದೆ ಇದರಲ್ಲಿಯ ಯಾವುದೇ ತಾತ್ಕಾಲಿಕ ನೀತಿ ನಿಯಂತ್ರಣಗಳು ಪ್ರಯೋಜನಕಾರಿಯಾಗಲಾರವು ಎಂಬುದಾಗಿ ಭಾವಿಸಿದ್ದರು. ಹೀಗಾಗಿ ಅವರು ಸಾಮುದಾಯಿಕ ಕೃಷಿ ಪದ್ಧತಿಯನ್ನು ಜಾರಿಗೆ ತರಬೇಕೆಂದು ಪ್ರತಿಪಾದಿಸಿದರು. ಈ ಸಮುದಾಯ ಕೃಷಿ ಪದ್ಧತಿಯಿಂದ ಭೂ ಸಮಸ್ಯೆಯನ್ನು ಬಗೆಹರಿಸಬಹುದು ಎಂಬುದನ್ನು ಅಂಬೇಡ್ಕರ್ ಗ್ರಹಿಸಿದ್ದರು. ಭೂಮಿ ಕುರಿತಾಗಿ ರಾಷ್ಟ್ರೀಯ ನೀತಿ ರೂಪಿಸುವ ಬಗ್ಗೆ, ಮೊದಲನೆಯದಾಗಿ ಸಂಪೂರ್ಣ ಕೃಷಿ ಭೂಮಿಯ ರಾಷ್ಟ್ರೀಕರಣಗೊಳಿಸುವುದು. ಎರಡನೆಯದಾಗಿ ಸಾಮುದಾಯಿಕ ಕೃಷಿ ವ್ಯವಸ್ಥೆಯನ್ನು ಜಾರಿಗೆ ತರುವುದು ಈ ಆಶಯಗಳು ಬಹುಮುಖ್ಯವಾಗಿ ಭೂಹೀನರಿಗೆ ಹಾಗೂ ಕೂಲಿಕಾರ್ಮಿಕರಿಗೆ ಭೂಮಿಯನ್ನು ದೊರಕಿಸಿಕೊಡುವ ಉದ್ದೇಶವನ್ನು ಹೊಂದಿವೆ. ಇಲ್ಲಿ ಭೂಮಿಯನ್ನು ರಾಷ್ಟ್ರೀಕರಣಗೊಳಿಸುವ ಮೂಲಕ ಯಾರೂ ಖಾಸಗಿ ಹಕ್ಕನ್ನು ಸ್ಥಾಪಿಸುವಂತಿಲ್ಲ ಎಂಬ ಆಶಯವಿದೆ. ಸಮಾನ ಅವಕಾಶ, ಸಮಾನ ದುಡಿಮೆಯಷ್ಟೇ ಮುಖ್ಯ ಎಂಬ ಅಂಶವನ್ನು ಇದು ವ್ಯಕ್ತಗೊಳಿಸುತ್ತದೆ.

ಭೂಮಾಲೀಕರ, ಪಾಳೆಯಗಾರರ, ದೊಡ್ಡ ಭೂಹಿಡುವಳಿದಾರರ, ಮೇಲ್‌ಸ್ತರದ ಜಾತಿಗಳ ಹಾಗೂ ಮೇಲ್ವರ್ಗದ ಜನರು ಸಹ ಸಮಾನನೆಲೆಯಲ್ಲಿ ಕೃಷಿವ್ಯವಸ್ಥೆಯಲ್ಲಿ ಹೊಂದಿಕೊಂಡು ಹೋಗುವುದರಿಂದ ಸಮಾನತೆಯನ್ನು ತರಬಹುದೆಂದು ತಿಳಿಸುತ್ತಾರೆ. ಎಲ್ಲವರ್ಗದವರು ಸಾಮುದಾಯಿಕ ಕೃಷಿ ವ್ಯವಸ್ಥೆಯಲ್ಲಿ ತೊಡಗುವುದು ಬಹುಮುಖ್ಯವಾಗಿದ್ದು, ಅದನ್ನು ಜಾರಿಗೊಳಿಸುವುದು ಸೂಕ್ತ ಎನ್ನುತ್ತಾರೆ. ಭೂ ಹಂಚಿಕೆಯ ವಿಚಾರದಲ್ಲಿ ಅಸಮಾನತೆಯನ್ನು ಹೋಗಲಾಡಿಸಲು ಸಹಕಾರಿ ಬೇಸಾಯ ಪದ್ಧತಿಯಿಂದ ಮಾತ್ರ ಸಾಧ್ಯ ಎಂಬುದಾಗಿ ತಿಳಿಸುತ್ತಾರೆ.

ಅಂಬೇಡ್ಕರ್‌ರವರ ಚಿಂತನೆಗಳು ದೀನ ದಲಿತರ ಅಂತಃಶಕ್ತಿಯಾಗಿ ರೂಪಗೊಳ್ಳತೊಡಗಿದವು. ಭೂಮಾಲೀಕರನ್ನು ಪ್ರಶ್ನಿಸುವ, ಅನ್ಯಾಯದ ವಿರುದ್ಧ ಪ್ರತಿಭಟಿಸುವ, ಹೋರಾಟ ನಡೆಸುವ ಶಕ್ತಿಯನ್ನು ಈ ಚಿಂತನೆಗಳು ತಂದುಕೊಟ್ಟವು. ಬಹುಪಾಲು ಗೇಣಿರೈತರಾಗಿ ಕೃಷಿ ಕೂಲಿಗಳಾಗಿ ದುಡಿಯುವ ದಲಿತ ವರ್ಗ ಸ್ವಾತಂತ್ರ್ಯಪೂರ್ವದಲ್ಲಿ ದನಿಯಿಲ್ಲದೆ ಜೀತದಾಳುಗಳಾಗಿ ದುಡಿಯುವುದನ್ನು ಕಾಣುತ್ತೇವೆ. ಆದರೆ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಅಂಬೇಡ್ಕರ್ ಚಿಂತನೆಗಳು ದಲಿತರಿಗೆ ಅಂತರ್‌ಚೈತನ್ಯವನ್ನು ತಂದಿತ್ತವು.

ಭೂಮಾಲೀಕರನ್ನು ಪ್ರಶ್ನಿಸುವ, ಅವರ ಅನ್ಯಾಯದ ವಿರುದ್ಧ ಪ್ರತಿಭಟಿಸುವ, ಭೂ ಹಕ್ಕುಗಳನ್ನು ಸ್ಥಾಪಿಸುವ ನೆಲೆಯಲ್ಲಿ ತಾತ್ವಿಕ ಶಕ್ತಿಯಾಗಿ ಅಂಬೇಡ್ಕರ್ ಚಿಂತನೆಗಳು ದಾರಿದೀಪಗಳಾದವು. ದಲಿತ ವಿಮೋಚನೆಗಾಗಿ ಬಂದ ರಾಷ್ಟ್ರೀಯ ಪ್ರಜ್ಞೆಯ ನಾಯಕತ್ವ ಅಂಬೇಡ್ಕರ್‌ರವರದಾಗಿತ್ತು. ಒಂದು ಸಮುದಾಯದ ಬೆಳಕಾಗಿ ಅವರ ಸಮಗ್ರ ಅಭಿವೃದ್ಧಿಯ ಕುರಿತಾದ ನೆಲೆಯಲ್ಲಿ ನೋಡುವಂತಹುದಾಗಿದೆ. ಅಂಬೇಡ್ಕರ್ ಅವರು ಸೂಚಿಸಿರುವ ಸಾಮುದಾಯಿಕ ಕೃಷಿ ವ್ಯವಸ್ಥೆಯ ಕಾರ್ಯಾಚರಣೆಯ ವರದಿಯ ಸ್ವರೂಪವನ್ನು ಇಲ್ಲಿ ನೋಡಬಹುದಾಗಿದೆ.

"೧. ಕೃಷಿ, ಸರ್ಕಾರಿ ಕೈಗಾರಿಕೆಯಾಗಿರಬೇಕು.

೨. ಮಾಲೀಕರಾಗಿ, ಗೇಣಿದಾರರಾಗಿ, ಅಥವಾ ಭೋಗ್ಯದಾರರಾಗಿ ಖಾಸಗಿ ವ್ಯಕ್ತಿಗಳು ಅನುಭವಿಸುತ್ತಿರುವ ಕೃಷಿ ಭೂಮಿಯ ಜೀವನಾಧಾರ ಹಕ್ಕುಗಳನ್ನು ಸರ್ಕಾರ ಪಡೆದುಕೊಳ್ಳಬೇಕು. ಭೂಮಿ ಹಕ್ಕು ಹೊಂದಿರುವವನ\ಳ ಮೌಲ್ಯಕ್ಕೆ ಸಮಾನವಾದ ಮೌಲ್ಯವನ್ನು ಅವರಿಗೆ ಪರಿಹಾರ ಧನವಾಗಿ ಡಿಬೆಂಚರುಗಳ ರೂಪದಲ್ಲಿ ನೀಡಬೇಕು. ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವಾಗ ಅದರ ಸುಪ್ತ ಅಥವಾ ಇತರೇ ಹೆಚ್ಚುವರಿ ಮೌಲ್ಯ ಸಾಧ್ಯತೆಯನ್ನು ಪರಿಗಣನೆಗೆ ತೆಗೆದುಕೊಳ್ಳಬಾರದು.

೩. ಡಿಬೆಂಚರ್‌ದಾರರು ಅದನ್ನು ನಗದು ಪಾವತಿಗೆ ಪರಿವರ್ತಿಸುವ ರೀತಿ ಮತ್ತು ಸಮಯವನ್ನು ಸರ್ಕಾರವೇ ನಿರ್ಧರಿಸಬೇಕು.

೪. ಡಿಬೆಂಚರುಗಳು ವರ್ಗಾವಣೆಗೊಳಪಡುವಂತಿದ್ದು ಆಸ್ತಿಯಾಗಿ ತಲೆಮಾರಿನಿಂದ ತಲೆಮಾರಿಗೆ ಹೊಂದುವಂತಿರಬೇಕು. ಆದರೆ ಡಿಬೆಂಚರುದಾರನು ಅಥವಾ ವರ್ಗಾವಣೆದಾರನು ಅಥವಾ ಅವರೀರ್ವರ ಹಕ್ಕುದಾರರು ಸರ್ಕಾರ ವಹಿಸಿಕೊಂಡ ಭೂಮಿಯನ್ನು ಮರಳಿ ಪಡೆಯುವಂತಿರಬಾರದು ಅಥವಾ ಆ ಭೂಮಿಯೊಂದಿಗೆ ಯಾವ ತರಹದ ವಹಿವಾಟು ನಡೆಸುವಂತಿರಬಾರದು.

೫. ಸರ್ಕಾರ ಸೂಕ್ತವೆಂದು ಪರಿಗಣಿಸುವ ರೀತಿ ನಗದು ಅಥವಾ ಸರಕು ರೂಪದಲ್ಲಿ ಸರ್ಕಾರವೇ ನಿರ್ಣಯಿಸಿದ ಬಡ್ಡಿ ದರವನ್ನು ಡಿಬೆಂಚರುಗಳ ಮೌಲ್ಯಕ್ಕನುಗುಣವಾಗಿ ನೀಡಬೇಕು. ಅಂದರೆ ಡಿಬೆಂಚರುಗಳ ಮೇಲೆ ಬಡ್ಡಿ ಪಡೆಯಲು ಡಿಬೆಂಚರುದಾರರು ಅರ್ಹರಾಗಿರಬೇಕು.

೬. ಕೃಷಿ ಕೈಗಾರಿಕೆಯನ್ನು (ಭೂ ರಾಷ್ಟ್ರೀಕರಣದ ನಂತರ ಅಸ್ತಿತ್ವಕ್ಕೆ ಬರುವ ಕೃಷಿ ವ್ಯವಸ್ಥೆಯನ್ನು)ಕೆಳಕಂಡ ಸೂತ್ರಗಳ ಆಧಾರದಲ್ಲಿ ಸಂಘಟಿಸಬೇಕು.

೧.ಸ್ಟ್ಯಾಂಡರ್ಡ್ ಪ್ರಮಾಣದ ಕೃಷಿ ಘಟಕಗಳಾಗಿ ಸರ್ಕಾರ ರಾಷ್ಟ್ರೀಕರಿಸಿದ ಭೂಮಿಯನ್ನು ವಿಭಜಿಸಬೇಕು. ಅಂತಹ ಕೃಷಿ ಘಟಕಗಳನ್ನು ಹಳ್ಳಿಯ ನಿವಾಸಿಗಳಿಗೆ ಗೇಣಿದಾರರಾಗಿ ಕೃಷಿ ಕೈಗೊಳ್ಳಲು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ನೀಡಬೇಕು.

ಅ. ಕೃಷಿಯನ್ನು ಸಮುದಾಯ ಕೃಷಿ ಘಟಕದ ನೆಲೆಯಲ್ಲಿ ಕೈಗೊಳ್ಳಬೇಕು.

ಆ. ಕೃಷಿಯನ್ನು ಸರ್ಕಾರ ನೀಡುವ ನಿರ್ದೇಶನಗಳು ಮತ್ತು ಕಾಯ್ದೆಗಳನ್ವಯ ಕೈಗೊಳ್ಳಬೇಕು.

ಇ.ಸರ್ಕಾರ ಕೃಷಿ ಘಟಕದ ಮೇಲೆ ವಿಧಿಸಿದ ಶುಲ್ಕ ಪಾವತಿಯ ನಂತರ ಉಳಿದ ಉತ್ಪನ್ನವನ್ನು ಸರ್ಕಾರ ನಿಗಧಿಪಡಿಸಿದ ರೀತಿಯಲ್ಲಿ ಗೇಣಿದಾರರು ತಮ್ಮೊಳಗೇ ಹಂಚಿಕೊಳ್ಳಬೇಕು.

II. ಹಳ್ಳಿಗೆ ಭೂಮಿಯನ್ನು ಜಾತಿ ಅಥವಾ ಜನಾಂಗವನ್ನು ಆಧಾರವಾಗಿ ಪರಿಗಣಿಸದೆ ನೀಡಬೇಕು. ಕೃಷಿ ಸಾಮುದಾಯಿಕ ಘಟಕಗಳಲ್ಲಿ ದುಡಿಯುವ ರೈತರು ಸಮಾನರು. ಅವರ ಪೈಕಿ ಯಾರೂ ಭೂಮಾಲೀಕರಲ್ಲ,

ಗೇಣಿದಾರರಲ್ಲ ಮತ್ತು ಭೂರಹಿತ ಕಾರ್ಮಿಕರಲ್ಲ.

III. ಬಿತ್ತನೆ ಬೀಜ, ಸಲಕರಣೆಗಳು, ನೀರು, ಮಿಶ್ರತಳಿ, ಪ್ರಾಣಿಗಳ ಪೂರೈಕೆ ಮೂಲಕ ಸಾಮುದಾಯಿಕ ಕೃಷಿ ಕೇಂದ್ರಕ್ಕೆ ಅಗತ್ಯವಾದ ಬಂಡವಾಳವನ್ನು ಪೂರೈಸುವುದು ಸರ್ಕಾರದ ಜವಾಬ್ದಾರಿಯಾಗಬೇಕು.

IV. ಸಾಮುದಾಯಿಕ ಕೃಷಿ ಕೇಂದ್ರದ ಸಂಘಟನೆ ಮತ್ತು ವ್ಯವಸ್ಥಾಪನಕ್ಕಾಗಿ ಸರ್ಕಾರಕ್ಕೆ.

ಅ. ಕೃಷಿ ಉತ್ಪನ್ನದ ಮೇಲೆ ಕೆಳಕಂಡ ಬಗೆಯ ಶುಲ್ಕ ವಿಧಿಸಲು ಹಕ್ಕು ಇರಬೇಕು.

೧. ಭೂಕಂದಾಯವಾಗಿ ಒಂದು ಭಾಗ.

೨. ಡಿಬೆಂಚರುದಾರರಿಗೆ ಪಾವತಿಸಲು ಉತ್ಪನ್ನದ ನಿರ್ದಿಷ್ಟಭಾಗ.

೩. ಪೂರೈಸಲಾದ ಬಂಡವಾಳ ಸರಕುಗಳ ಬೆಲೆ ಪಾವತಿಸಲು ನಿರ್ದಿಷ್ಟ ಭಾಗ.

ಆ. ಸರ್ಕಾರ ವಿಧಿಸುವ ನಿಯಮಗಳನ್ನು ಅನುಸರಿಸದ ರೈತಾಪಿ ಗೇಣಿದಾರರ ಮೇಲೆ ದಂಡ ಶುಲ್ಕ ವಿಧಿಸಬೇಕು ಹಾಗೂ ಸರ್ಕಾರ ಪೂರೈಸುವ ಕೃಷಿ ಸವಲತ್ತುಗಳನ್ನು ಸದುಪಯೋಗಪಡಿಸದ ಉದ್ದೇಶಪೂರ್ವಕ ತಪ್ಪೆಸಗುವ ರೈತರ ಮೇಲೆ ದಂಡ ಶುಲ್ಕ ಅಥವಾ ಸಾಮುದಾಯಿಕ ಕೃಷಿ ವ್ಯವಸ್ಥೆಯ ಕಾರ್ಯಾಚರಣೆಗೆ ಉದ್ದೇಶವಾಗಿ ಯಾವುದಾದರೂ ಇತರೇ ರೀತಿಯಲ್ಲಿ ವರ್ತಿಸುವವರ ಮೇಲೆ ದಂಡ ಶುಲ್ಕ ವಿಧಿಸುವಿಕೆ.

೭. ಈ ಯೋಜನೆಯನ್ನು ಸಾಧ್ಯವಿರುವಷ್ಟು ಬೇಗ ಕಾರ್ಯಾಚರಣೆಗೆ ತರಬೇಕು. ಆದರೆ ಈ ಯೋಜನೆಯನ್ನು, ಸಂವಿಧಾನವನ್ನು ಜಾರಿಗೆ ತಂದ ಹತ್ತು ವರ್ಷಗಳೊಳಗಾಗಿ ಜಾರಿಗೊಳಿಸಲೇಬೇಕು."[೮೧] ಇಂತಹ ಅಂಶಗಳ ಮೂಲಕ ಸಾಮುದಾಯಿಕ ಕೃಷಿ ಪದ್ಧತಿಯನ್ನು ಜಾರಿಗೊಳಿಸಬೇಕೆಂದು ಅಂಬೇಡ್ಕರ್‌ರವರು ಕೇಂದ್ರಶಾಸನ ಸಭೆಯ ಅಲ್ಪಸಂಖ್ಯಾತರ ಸಮಿತಿಯ ಅಧ್ಯಕ್ಷರಿಗೆ ಸಲ್ಲಿಸಿದ ಮನವಿಯಲ್ಲಿ ವಿವರಿಸಿದ್ದಾರೆ.

ಈ ಬಗ್ಗೆ "ಅಂಬೇಡ್ಕರ್ ಅವರ ಸಾಮೂಹಿಕ ಕೃಷಿ ವ್ಯವಸ್ಥೆಯ ಮಾತು ಬಂದಾಗ ನೌಕರಶಾಹಿ ವರ್ಗದ ಕಡೆಗೆ ಬೆರಳು ಮಾಡಿ ಭೂಮಿಯುಳ್ಳ ರೈತರಿಗಿಂತ ನೌಕರಶಾಹಿ ವರ್ಗದವರೇ ಹೆಚ್ಚು ಸುರಕ್ಷಿತ ಎಂದು ವಾದಿಸುವುದಿದೆ. ಇದು ಒಂದು ಹಂತದವರೆಗೆ ನಿಜವಾದರೂ ಇದೇ ನಿಜವೆಂದು ನಂಬಿ ಭೂ ಹಂಚಿಕೆ ವಿಷಯವನ್ನು ನಿರಾಕರಿಸುವುದು, ಜರಿದುಕೊಳ್ಳುವ ಧೋರಣೆಯೇ ಆಗುತ್ತದೆ. ಸಾಮೂಹಿಕ ಕೃಷಿ ವ್ಯವಸ್ಥೆಯನ್ನು ಜಾರಿಗೆ ತರಬೇಕಾದರೆ ಸಂವಿಧಾನದ ತಿದ್ದುಪಡಿ ಅಗತ್ಯವೆನ್ನುವುದು ನಿಜ. ಆದರೆ ಆ ತಿದ್ದುಪಡಿಗೆ ಒತ್ತಾಯ ಮುಖ್ಯ. ಅಂಥ ವಾತಾವರಣವನ್ನು ನಿರ್ಮಾಣ ಮಾಡಬೇಕಾದುದು ನಮ್ಮ ಕರ್ತವ್ಯ."[೮೨]

ಅವರ ಚಿಂತನೆ ಮುಂದಿನ ೫೦ ವರ್ಷದಲ್ಲಿ ಆಲೋಚಿಸಬಹುದಾದ ಆಲೋಚನೆಯನ್ನು ಅಂದೇ ವ್ಯಕ್ತಪಡಿಸಿದ್ದರು. ಜಾಗತಿಕ ಸಂದರ್ಭದ ನೌಕರಶಾಹಿ ನೆಲೆಯ ಚಿಂತನೆಯ ಚರ್ಚೆಯನ್ನು ಆಗಲೇ ಮಾಡಿರುವುದನ್ನು ಗುರುತಿಸಬಹುದು. ಭೂಮಿಯುಳ್ಳ ರೈತರಿಗಿಂತ ನೌಕರಶಾಹಿ ನೆಲೆ ಸುರಕ್ಷಿತ ಎಂದು ಕಾಣುವುದರಿಂದ ದಲಿತರು ಆಯ್ಕೆ ಮಾಡಿಕೊಂಡಿದ್ದು ನೌಕರಿಯತ್ತ ಸಾಗಿದುದು ಎಂಬ ವಾಸ್ತವವಿದೆ. ಆದರೆ ಜಾಗತಿಕ ಸಂದರ್ಭದಲ್ಲಿ ಯಾವ ವರ್ಗಕ್ಕೆ ಆಗಲಿ, ಯಾವುದೇ ಜಾತಿಗೆ ಆಗಲಿ ಭೂ ಪ್ರಶ್ನೆ ಮುಖ್ಯವಾಗುಳಿದಿಲ್ಲ. ಭೂಮಿ ಕೇವಲ ಮೌಲ್ಯದ, ಲಾಭದ ಪ್ರಶ್ನೆಯಾಗುಳಿದಿದೆ.

ಜಾಗತಿಕ ಸಂದರ್ಭದಲ್ಲಿ ದಲಿತರಿಗೆ ರೈತ ಪ್ರಶ್ನೆ ಹಾಗೂ ಭೂಮಿ ಪ್ರಶ್ನೆ ಮುಖ್ಯವಾಗದೇ ಇರುವುದನ್ನು ಕಾಣುತ್ತೇವೆ. ೭೦ ಮತ್ತು ೮೦ರ ದಶಕದಲ್ಲಿ ನಡೆದಂತ ದಲಿತ ಸಂಘರ್ಷ ಸಮಿತಿಯು ನಡೆಸಿದಂತಹ ಭೂಹೋರಾಟದ ತೀವ್ರತೆ ಇಂದು ಕಾಣಲಾಗುತ್ತಿಲ್ಲ. ಈಗ ಅದರ ಹೋರಾಟವೇನಿದ್ದರೂ, ರಾಜಕೀಯ ಅವಕಾಶಕ್ಕಾಗಿ. ಇದಕ್ಕೆ ಉದಾಹರಣೆಯಾಗಿ ಉತ್ತರ ಪ್ರದೇಶದ ಮಮತಾ ಬ್ಯಾನರ್ಜಿಯವರ ಆಡಳಿತವನ್ನು ಗಮನಿಸಬಹುದು. ರಾಜಕೀಯ ಅವಕಾಶದಿಂದ ಎಲ್ಲ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಬಹುದೆಂಬ ಆಶಯವನ್ನು ಹೊಂದಿರುವುದು ಅವರ ಆಡಳಿತದಲ್ಲಿ ಗಮನಿಸಬಹುದಾಗಿದೆ. ದಲಿತರಿಗಾಗಿ ಮಾರುಕಟ್ಟೆಯಾಗಲೀ, ಆರ್ಥಿಕ ಚಿಂತನೆಗಳಾಗಲಿ ಆರ್ಥಿಕ ಸ್ವಾವಲಂಬನೆಯ ವಿರುದ್ಧದ ಹೋರಾಟಗಳು ನಡೆಯದೇ ಇರುವುದು ಕಂಡುಬರುತ್ತದೆ.

ಈ ಸಾಮುದಾಯಿಕ ಕೃಷಿ ನೀತಿ ರಾಷ್ಟ್ರಮಟ್ಟದಲ್ಲಿ ಅಧಿಕೃತವಾಗಿ ಜಾರಿಗೊಳ್ಳಲಿಲ್ಲ. ಈ ಕಾಲಕ್ಕೆ ಸರ್ಕಾರದಲ್ಲಿ ಮತ್ತು ರಾಜಕೀಯ ಅವಕಾಶಗಳು ಬಹುಪಾಲು ಭೂಮಾಲೀಕರು ಮತ್ತು ಶ್ರೀಮಂತವರ್ಗ

ಪಡೆದುಕೊಂಡಿತು. ಈ ಕಾರಣಕ್ಕಾಗಿ ಸಾಮುದಾಯಿಕ ಕೃಷಿ ಪದ್ಧತಿ ವಿಫಲತೆಯ ದಾರಿಹಿಡಿಯಿತು. ಭಾರತ ಸರ್ಕಾರವು ಆಯಾ ರಾಜ್ಯಗಳಿಗೆ ಭೂಸುಧಾರಣೆಗೆ ಕಾಯ್ದೆ ರೂಪಿಸಲು ಅಧಿಕಾರವನ್ನು ನೀಡಿದ್ದು, ತಮಗೆ ಬೇಕಾದ ರೀತಿಯಲ್ಲಿ ಕಾಯ್ದೆ ರಚಿಸಲು ದಾರಿ ಮಾಡಿಕೊಟ್ಟಿತು. ಈ ಹಿನ್ನೆಲೆಯಲ್ಲಿ ಕಾಂಗ್ರೆಸ್ಸಿಗರಿಂದ ಸಮಗ್ರವಾದ ಭೂರಾಷ್ಟ್ರೀಕರಣವಾಗಲೀ, ಭೂ ವಿತರಣಾ ನೀತಿಯನ್ನಾಗಲೀ ಕೊನೆಗೂ ಜಾರಿಯಾಗಲಿಲ್ಲ. ಭೂ ರಾಷ್ಟ್ರೀಕರಣದ ಪ್ರಶ್ನೆ ಹಿಂದೆ ಸರಿದು, ಭೂ ಖಾಸಗಿತನದ ಒಡೆತನ ಹಕ್ಕು ಸ್ಥಾಪನೆಯಾಗಲು ಅನುಕೂಲಕರ ವಾತಾವರಣ ನಿರ್ಮಾಣವಾಯಿತು. ಸಹಕಾರಿ ಬೇಸಾಯ ಪದ್ಧತಿ ಹಿಂದೆ ಸರಿದು ಪುನಃ ಉಳ್ಳವರ ಪಾಲಿಗೆ ಭೂಮಾಲೀಕತ್ವ ಸೇರುವಂತಾಯಿತು. ಈ ಕಾರಣಕ್ಕಾಗಿ ಸಹಕಾರಿ ಬೇಸಾಯಪದ್ಧತಿ, ಸಾಮುದಾಯಿಕ ಕೃಷಿ ಮತ್ತು ಭೂ ರಾಷ್ಟ್ರೀಕರಣದ ಕೂಗುಗಳು ಒಂಟಿಕೂಗಾಗೇ ಉಳಿದು ಹೋಯಿತು.

ಅಂಬೇಡ್ಕರ್ ಸಿದ್ಧಾಂತದ ತಳಹದಿಯ ಮೇಲೆ ವಾಸ್ತವದಲ್ಲಿ ಕರ್ನಾಟಕದಲ್ಲಿ ದಲಿತ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು. ಈ ಕಾರಣಕ್ಕಾಗಿ ದಲಿತ ಸಂಘಟನೆಗಳ ನೇತೃತ್ವದಲ್ಲಿ ಕರ್ನಾಟಕದಲ್ಲಿ ನಡೆದ ಭೂಹೋರಾಟಗಳನ್ನು ಗಮನಿಸಬಹುದಾಗಿದೆ. ಕರ್ನಾಟಕದಲ್ಲಿ ದಲಿತ ಸಂಘರ್ಷ ಸಮಿತಿಯು ಸಿದ್ದಿಪುರ ಭೂಹೋರಾಟ, ಚಂದಗೋಡು ಭೂಹೋರಾಟ,ಮೆದಕಿನಾಳ ಭೂ ಹೋರಾಟ, ಮಹಮದ್‌ನಗರ ಭೂ ಹೋರಾಟ, ಹೊನ್ನಾಳಿ ಭೂ ಹೋರಾಟ, ಮರಸನಪಲ್ಲಿ ಭೂ ಹೋರಾಟ, ಗುಳ್ಳಹಟ್ಟಿ ಕಾವಲ್ ಭೂ ಹೋರಾಟ, ದೇವಲಾಪುರ, ಕಾದೇಹಳ್ಳಿ, ಗೆಜ್ಜಲುಗಟ್ಟಾ, ಕವಿತಾಳ ಮತ್ತು ಕಬ್ಬಿನಹಳ್ಳಿಗಳಲ್ಲೂ ಭೂ ಹೋರಾಟಗಳು ನಡೆದವು. ಕರ್ನಾಟಕದಲ್ಲಿ ಇಂತಹ ಪ್ರಭಾವದಿಂದ ಭೂಹೀನರಿಗೆ ಭೂಮಿ ದೊರೆಯುವಂತಾಯಿತು.

ಅಂಬೇಡ್ಕರ್ ಅವರ ಚಿಂತನೆಗಳ ಪ್ರಭಾವವು ಕನ್ನಡ ಸಾಹಿತ್ಯದ ಮೇಲೂ ಆಗಿರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಕನ್ನಡ ಕಥನದ ಮೂಲಕ ಭೂ ಪ್ರಶ್ನೆಯನ್ನು ನೋಡಿರುವುದನ್ನು ಕಾಣುತ್ತೇವೆ. ಅಂಬೇಡ್ಕರ್ ಅವರ ಸೈದ್ಧಾಂತಿಕ ನೆಲೆಯು ದಲಿತ ಬಂಡಾಯ ಸಾಹಿತ್ಯಕ್ಕೆ ಮುಖ್ಯ ಪ್ರೇರಣ ಶಕ್ತಿಯಾಯಿತು. ಈ ಸಂದರ್ಭದಲ್ಲಿ ತಳಮೂಲ ಸಂಸ್ಕೃತಿಯ ಅಭಿವ್ಯಕ್ತಿ ಮಾಧ್ಯಮವಾಗಿ ಸೃಜನಶೀಲ ಕೃತಿಗಳು ಮೈತಳೆದವು. ದೇವನೂರು ಮಹಾದೇವ, ಸಿದ್ದಲಿಂಗಯ್ಯ, ಕುಂ.ವೀರಭದ್ರಪ್ಪ, ಅರವಿಂದಮಾಲಗತ್ತಿ, ಮೊಗಳ್ಳಿ ಗಣೇಶ್, ಮೊದಲಾದವರು ದಲಿತ ಸಂವೇದನೆಯ ಮೂಲಕ ಅಭಿವ್ಯಕ್ತಗೊಳಿಸಿದರು.

ಕರ್ನಾಟಕದ ಸಂದರ್ಭದಲ್ಲಿ ಈಚಿನ ದಿನಗಳಲ್ಲಿ ಭೂಮಿ ಕುರಿತು ಗಂಭೀರವಾದ ಚಿಂತನೆ ನಡೆಯುತ್ತಿದೆ. ಹೊಸದಾಗಿ ಉದಯವಾಗಿರುವ ಸರ್ವೋದಯ ಪಕ್ಷವು ತನ್ನ ಕಾರ್ಯಕ್ರಮವೊಂದರಲ್ಲಿ ವಿಚಾರ ಸಂಕಿರಣವನ್ನು ಇತ್ತೀಚೆಗಷ್ಟೇ ಏರ್ಪಡಿಸಿತ್ತು. ಸರ್ವೋದಯ ಪಕ್ಷವು ದಲಿತರು ಮತ್ತು ರೈತರು ಒಂದಾಗಿ ಪರ್ಯಾಯ ರಾಜಕಾರಣ ಮಾಡುವ ಚಿಂತನೆ ನಡೆಸಿತು. ಈ ವಿಷಯ ಕುರಿತಾಗಿ ನಡೆದ ವಿಚಾರ ಸಂಕಿರಣದಲ್ಲಿ ಮುಖ್ಯವಾಗಿ ಭೂ ಪ್ರಶ್ನೆ ಕುರಿತು ಚರ್ಚೆ ನಡೆದುದು ಮಹತ್ವದ ಹೆಜ್ಜೆಯಾಗಿದೆ.

**೩.ಸಿ.ಎಂ.ಮುನಿಯಪ್ಪ**

ಸಿ.ಎಂ.ಮುನಿಯಪ್ಪ ದಲಿತ ಸಂಘರ್ಷ ಸಮಿತಿಯ ಮುಖಂಡ, ಹೋರಾಟಗಾರ. ಕರ್ನಾಟಕದ ದಲಿತ ಸಮುದಾಯಕ್ಕೆ ತಮ್ಮ ಮೇಲಾಗುತ್ತಿರುವ ಅನ್ಯಾಯಗಳ ವಿರುದ್ಧ ಸಿಡಿದೆದ್ದು, ಹೋರಾಟಕ್ಕಿಳಿಯುವಂಥ ಶಕ್ತಿ ತುಂಬಿದ ನಾಯಕರಲ್ಲಿ ಸಿ.ಎಂ.ಮುನಿಯಪ್ಪ ಒಬ್ಬರು. ಭೂಮಿ ಕುರಿತಾಗಿ ದಲಿತರಿಗೆ ಭೂ ಹಕ್ಕು ಹಾಗೂ ಭೂ ಒಡೆತನ ನೀಡುವಂತೆ ತಮ್ಮ ಸಂಘಟನೆಯ ಮೂಲಕ ಹೋರಾಟ ನಡೆಸಿರುವುದನ್ನು ಕಾಣುತ್ತೇವೆ.

ಸಂಘಟನೆಯ ನಾಯಕತ್ವ ವಹಿಸಿಕೊಂಡಿದ್ದ ಮುನಿಯಪ್ಪನವರ ನೇತೃತ್ವದಲ್ಲಿ ೧೯೭೩ರಿಂದಲೂ ಭೂ ಹೋರಾಟಗಳನ್ನು, ಹೆಂಡ ಬೇಡ ಭೂಮಿ ಬೇಕು ಎನ್ನುವ ನಾಗಸಂದ್ರ ಭೂ ಹೋರಾಟ, ನಂತರ ಬಿದರೆ ಕಾವಲಿನಲ್ಲಿ ದಲಿತರಿಗೆ ಭೂಮಿ ಕೊಡಿಸಿರುವುದು ಮರಸನಪಲ್ಲಿ ಯಲ್ಲಿ ಎರಡು ರೂಪಾಯಿ ಕಳ್ಳೇಪುರಿಗೆ ದಲಿತರು ಮಾರಿಕೊಂಡ ಜಮೀನನ್ನು ವಾಪಸ್ಸು ಕೊಡಿಸಿರುವುದು, ಮೊದಲಾದ ಭೂ ಹೋರಾಟಗಳನ್ನು ನಡೆದಿವೆ. ಇಂತಹ ಸಕ್ರಿಯ ಹೋರಾಟಗಳ ಜೊತೆಗೆ ದಲಿತರಿಗೆ ಭೂಮಿ ದೊರೆಯಬೇಕೆಂಬ ಆಶಯವನ್ನಿಟ್ಟುಕೊಂಡು ಭೂಮಿತಿ ಕುರಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದನ್ನು ಗಮನಿಸಬಹುದಾಗಿದೆ. "ಇದರಲ್ಲಿ ಕಡ್ಡಾಯ ಭೂಮಿತಿ ಶಾಸನ ಸಿ, ಮತ್ತು ಡಿ ಭೂಮಿಯನ್ನು ಭೂ ಹೀನರಿಗೆ ಮತ್ತು ದಲಿತರಿಗೆ ಹಂಚಿಕೆ, ಒತ್ತುವರಿ ಭೂಮಿ ಮತ್ತು ಇತರೆ

ಭೂಮಿಯನ್ನು ಸಕ್ರಮಗೊಳಿಸುವಾಗ ಕಡ್ಡಾಯವಾಗಿ ಭೂಮಿತಿ ಕಾನೂನನ್ನು ಜಾರಿಗೊಳಿಸುವುದು ನಮ್ಮ ಪ್ರಮುಖ ಆದ್ಯತೆಗಳಾಗಬೇಕು."[೫೬] ಭೂ ಹಂಚಿಕೆ ಮಾಡುವ ಮುನ್ನ ಭೂಮಿತಿಯ ಕಾನೂನನ್ನು ಸರ್ಕಾರವೇ ಮಾಡಲು ಮುಂದಾಗಬೇಕೆಂಬುದು ಇವರ ಆಶಯವಾಗಿದೆ. ಏಕೆಂದರೆ ಇತ್ತೀಚಿನ ದಿನಗಳಲ್ಲಿ ವಿಶೇಷ ಆರ್ಥಿಕ ವಲಯದಂಥ ಅಪಾಯಕಾರಿ ನೀತಿಗಳು ಬಂದು, ಮುಂದೆ ರೈತರನ್ನು ಭೂಹೀನರನ್ನಾಗಿ ಮಾಡಬಹುದೆಂಬ ಎಚ್ಚರಿಕೆಯನ್ನು ನೀಡುತ್ತಾರೆ.

### ೫. ಇತರೆ ಚಿಂತಕರು ಮತ್ತು ಹೋರಾಟಗಾರರು

ನಾಡಿನ ಪ್ರಸಿದ್ಧ ಚಿಂತಕ, ಜಿ.ರಾಜಶೇಖರ್ ಅವರು ಈ ನಾಡಿನ ಬಹುಸಂಖ್ಯಾತ ವರ್ಗವಾದ ರೈತರ ಕುರಿತು, ರೈತರ ಸಮಸ್ಯೆಗಳ ಕುರಿತು ತಮ್ಮದೇ ಆದ ಚಿಂತನೆಯನ್ನು ವ್ಯಕ್ತಪಡಿಸುತ್ತಿದ್ದಾರೆ.ಅವರ ಬರವಣಿಗೆಗಳಲ್ಲಿ ರೈತ ಕಾಳಜಿಗಳಾಗಿ ಶಿವಮೊಗ್ಗ ಜಿಲ್ಲೆಯ ರೈತ ಹೋರಾಟದ ತಾತ್ವಿಕತೆ ಹಾಗೂ ಕಾಗೋಡು ಸತ್ಯಾಗ್ರಹ ಮತ್ತು ತೆಲಂಗಾಣ ರೈತ ಹೋರಾಟ ಕುರಿತು ಬರೆದಿರುವ ಕೃತಿಗಳೇ ಅವರ ಧೋರಣೆ ಹಾಗೂ ಆಶಯಗಳನ್ನು ವ್ಯಕ್ತಪಡಿಸುತ್ತದೆ.

ತೆಲಂಗಾಣ ರೈತ ಹೋರಾಟದ ಕೃತಿಯು ಮುಖ್ಯವಾಗಿ ಭೂಮಿ ಪ್ರಶ್ನೆಯನ್ನು ಕೇಂದ್ರವಾಗಿಟ್ಟು ಕೊಂಡು ಮೂಡಿಬಂದಂತಹ ಹೋರಾಟವಾಗಿದೆ. ಇವರ ಕೃತಿಗಳಲ್ಲಿ ಮಾರ್ಕ್ಸ್‌ವಾದದ ಸೈದ್ಧಾಂತಿಕ ನೆಲೆಯ ಆಶಯಗಳನ್ನು ವ್ಯಕ್ತಪಡಿಸಿರುವುದನ್ನು ಈ ಕೃತಿಯಲ್ಲಿ ಕಾಣುತ್ತೇವೆ. ಅಲ್ಲದೆ ಕಾಗೋಡು ಸತ್ಯಾಗ್ರಹ ಕೃತಿಯಲ್ಲಿಯೂ ಸಹ ಆರಂಭದಲ್ಲಿದ್ದ ಕೊಳಗದ ಅಳತೆಯ ಪ್ರಶ್ನೆ ಮುಖ್ಯವಾಗಿದ್ದರೆ ಅದು ಕ್ರಮೇಣ ಭೂಮಿ ಪ್ರಶ್ನೆಯನ್ನು ಪ್ರಧಾನವಾಗಿಸಿಕೊಂಡ ಚಿತ್ರಣವನ್ನು ಕಾಣುತ್ತೇವೆ. ಜಿ.ರಾಜಶೇಖರ್ ಅವರ ಬರವಣಿಗೆಗಳು ನೊಂದವರ, ರೈತರ ಪರವಾಗಿವೆ. ಈ ಹಿನ್ನೆಲೆಯಲ್ಲಿ ಭೂಮಿ ಕುರಿತಾದ ಅಮೂಲಾಗ್ರವಾಗಿ ಚಿಂತನೆ ನಡೆಸಿದವರಲ್ಲಿ ಜಿ.ರಾಜಶೇಖರ್ ಅವರು ಮುಖ್ಯರು.

ಕರ್ನಾಟಕದ ಸಾಂಸ್ಕೃತಿಕ ಬದುಕಿನ ಸಮಾಜವಾದಿ ಚಿಂತಕರಲ್ಲಿ ಪ್ರೊ.ಕೆ.ರಾಮದಾಸ್ ಅವರು ಒಬ್ಬರು .ಈ ನಾಡಿನಲ್ಲಿ ರೈತರಿಗೆ, ದಲಿತರಿಗೆ ಹಿಂದುಳಿದ ವರ್ಗದವರಿಗೆ, ಬಡಜನರ ನೋವಿಗೆ ದನಿಯಾಗಿ ಹೋರಾಟದ ಶಕ್ತಿಯಾಗಿ ಹಿಂದೆ ನಿಂತು ಪರಿಹಾರ ಕಂಡುಕೊಳ್ಳುವಲ್ಲಿ ಸಕ್ರಿಯವಾಗಿರುವ ಕ್ರಿಯಾಶೀಲ ವಿಚಾರವಾದಿಯಾಗಿದ್ದರು. ರೈತನಾಯಕ ಪ್ರೊ.ನಂಜುಂಡಸ್ವಾಮಿ, ಕಡಿದಾಳ್‌ಶಾಮಣ್ಣ, ಪೂರ್ಣಚಂದ್ರ ತೇಜಸ್ವಿಯವರ ಸಮಕಾಲೀನ ಸಮಾಜವಾದಿ ಒಡನಾಡಿಯಾಗಿದ್ದರು. ಮೈಸೂರಿನಲ್ಲಿ ನಡೆದ ದಲಿತರು ಮತ್ತು ಪರ್ಯಾಯ ರಾಜಕಾರಣ ಎಂಬ ವಿಚಾರ ಸಂಕಿರಣದಲ್ಲಿ ಭೂಮಿ ಕುರಿತಾಗಿ ಗಂಭೀರ ಚಿಂತನೆ ನಡೆಸಿದ್ದರು.

ಅರವಿಂದ ಮಾಲಗತ್ತಿಯವರು ಭೂಪ್ರಶ್ನೆ ಕುರಿತು ಚಿಂತನೆ ನಡೆಸಿದವರಲ್ಲಿ ಮುಖ್ಯರು.ಭೂಮಿಯ ಸಮಸ್ಯೆಯ ಕುರಿತು ಅಂಬೇಡ್ಕರ್ ಚಿಂತನೆಯ ಸಾಮುದಾಯಿಕ ಕೃಷಿ ನೀತಿಯನ್ನು ವಿಶ್ಲೇಷಿಸಿದ್ದಾರೆ.ಇತ್ತೀಚೆಗೆ ಮೈಸೂರಿನಲ್ಲಿ ನಡೆದ ದಲಿತರು ಮತ್ತು ಪರ್ಯಾಯ ರಾಜಕಾರಣ ಎಂಬ ವಿಚಾರ ಸಂಕಿರಣದಲ್ಲಿ ಭಾಗವಹಿಸಿದ್ದರು.

ಹಿ.ಚಿ.ಬೋರಲಿಂಗಯ್ಯ ಮತ್ತು ಹುಚ್ಚಪ್ಪಮಾಸ್ತರ್ ಅವರ ಜೊತೆಗೂಡಿ ಕಾಗೋಡು ಚಳುವಳಿ ಸುವರ್ಣಸಂಪುಟವನ್ನು ಸಂಪಾದಿಸಿದ್ದಾರೆ.ಇದು ಬಹುಮುಖ್ಯವಾಗಿ ಭೂಮಿ ಪ್ರಶ್ನೆಯ ಕುರಿತು ಚರ್ಚಿಸಿದೆ.ಕಾಗೋಡು ಸತ್ಯಾಗ್ರಹ ಹೋರಾಟವನ್ನು ಸ್ವತಃ ಹೋರಾಟಗಾರರಿಂದಲೇ ಬರೆಸಿ,ತಮ್ಮ ಅನುಭವವನ್ನು ಈ ಕೃತಿಯಲ್ಲಿ ಪ್ರಕಟಿಸುವಂತೆ ಆಸ್ಥೆವಹಿಸಿರುವ ಇವರ ಭೂಮಿಯ ಬಗೆಗಿನ ಕಾಳಜಿಗಳು ವ್ಯಕ್ತವಾಗುತ್ತದೆ.

ರಹಮತ್ ತರೀಕೆರೆಯವರು ಭೂ ರೈತ ಪ್ರಶ್ನೆಕುರಿತು ಗಂಭೀರವಾಗಿ ಪ್ರತಿಕ್ರಿಯಿಸುವವರಲ್ಲಿ ಇವರು ಒಬ್ಬರು. ಸಮಾಜವಾದಿ ಮತ್ತು ರೈತನಾಯಕರಾದ ಪ್ರೊ.ಎಂ.ಡಿ.ಎನ್., ಕಡಿದಾಳು ಶಾಮಣ್ಣ, ಗಣಪತಿಯಪ್ಪ, ನೀಲಗಂಗಯ್ಯ ಪೂಜಾರ ಮುಂತಾದವರ ಸಂದರ್ಶನ ಬರಹಗಳ ಮೂಲಕ ರೈತಕಾಳಜಿಗಳನ್ನು ಕಾಣುತ್ತೇವೆ.ಕಾಗೋಡು ಸತ್ಯಾಗ್ರಹ ಕುರಿತಂತೆ ವಿಶ್ಲೇಷಣೆ ಮಾಡಿರುವುದನ್ನು ಗಮನಿಸಬಹುದಾಗಿದೆ. ಮಾತ್ರವಲ್ಲದೆ ಭೂಮಿ ಪ್ರಶ್ನೆ ಕುರಿತಾಗಿ ಕುವೆಂಪುರವರ ಮಲೆಗಳಲ್ಲಿ ಮದುಮಗಳು, ಕಾನೂರು ಹೆಗ್ಗಡತಿ ಕೃತಿಗಳಲ್ಲಿ ಭೂಮಾಲೀಕರನ್ನು ಹಾಗೂ ರೈತರನ್ನು ಕುರಿತು ವಿವೇಚಿಸಿದ್ದಾರೆ.

ಮೊಗಳ್ಳಿ ಗಣೇಶ್ ಅವರು ಅಂಬೇಡ್ಕರ್‌ವಾದದ ಹಿನ್ನೆಲೆಯಲ್ಲಿ ಭೂ ಪ್ರಶ್ನೆಗೆ ಪರಿಹಾರ ಕಂಡುಕೊಳ್ಳಲು ಯತ್ನಿಸಿರುವುದನ್ನು ಕಾಣಬಹುದು. ದಲಿತರು ಮತ್ತು ರೈತರು ಒಂದುಗೂಡಬೇಕೆಂಬ ಆಶಯವಿದ್ದು, ಅದು ಒಗ್ಗೂಡಬೇಕಾದರೆ ದಲಿತರಿಗೂ ಭೂಮಿಯ ಹಕ್ಕು ದಕ್ಕುವಂತಾಗಬೇಕೆಂಬುದು ಇವರ ಅಭಿಮತವಾಗಿದೆ. ಈ ಕುರಿತು ಮೊಗಳ್ಳಿ ಗಣೇಶ್‌ರವರು, ರೈತಸಂಘವೂ ದಲಿತಸಂಘವೂ ಕೆಲವಾದರೂ ಹಳ್ಳಿಗಳನ್ನು ಸಂಘಟಿಸಿ ಆ ಹಳ್ಳಿಗಳನ್ನು ಜಾತ್ಯಾತೀತವಾಗಿಸಿ, ಆ ಹಳ್ಳಿಗಳ ಸಂಪತ್ತಿನ ಒಡೆತನವನ್ನು ತಪ್ಪಿಸಿ ಇಡೀ ಗ್ರಾಮವೇ ಆ ಸಂಪತ್ತಿನ ವಾರಸುದಾರರಾಗುವಂತಹ ಉತ್ಪಾದನಾ ವ್ಯವಸ್ಥೆಯನ್ನು ಸಾಧ್ಯವಾಗಿಸಬೇಕು ಎಂಬುದು ಇವರ ಆಶಯವಾಗಿದೆ.

ಬಿ.ಎಂ.ಪುಟ್ಟಯ್ಯ ಅವರು ರೈತರ ಆಗು ಹೋಗುಗಳ ಕುರಿತು ಹಾಗೂ ದಲಿತರ ಹಿತ ಚಿಂತನೆ ಕುರಿತು ಆಲೋಚಿಸುವ ಒಬ್ಬ ಕ್ರಿಯಾಶೀಲ ಚಿಂತಕರಾಗಿದ್ದಾರೆ. ಭೂಮಿ ಮತ್ತು ಜಾತಿಗೂ ನೇರವಾದ ಸಂಬಂಧವಿದೆ ಎಂಬುದನ್ನು ಬಿ.ಎಂ. ಪುಟ್ಟಯ್ಯನವರು ಗುರುತಿಸುವಂತೆ, ಭೂಮಾಲೀಕ ವ್ಯವಸ್ಥೆಯ ಖಾಸಗೀ ಭೂಒಡೆತನಕ್ಕೂ ಮತ್ತು ಜಾತಿ ಅಸ್ಪಶ್ಯತೆಗಳಿಗೂ ನೇರವಾದ ಸಂಬಂಧವಿದೆ. ಹಾಗಾಗಿ ಜಾತಿ ಅಸ್ಪೃಶ್ಯತೆಗಳ ವಿರುದ್ಧದ ರಾಜಕೀಯ ಹೋರಾಟವು ಭೂ ಹೋರಾಟದ ಒಂದು ರೂಪವೇ ಆಗುತ್ತದೆ. ಅದೇ ರೀತಿ ಭೂಮಿಗಾಗಿ ದಲಿತರು ರಾಜಕೀಯ ಹೋರಾಟವನ್ನು ಕೈಗೆತ್ತಿಕೊಂಡರೆ, ಅದು ಜಾತಿ ಅಸ್ಪೃಶ್ಯತೆಗಳ ವಿರುದ್ಧದ ಹೋರಾಟದ ರೂಪವನ್ನೂ ತಾಳುತ್ತದೆ. ಆದರೆ ಇಡೀ ದಲಿತ ಸಂಘದ ಇತಿಹಾಸದಲ್ಲಿ ಈ ಬಗೆಯ ಹೋರಾಟಗಳನ್ನು ಕೈಗೆತ್ತಿಕೊಳ್ಳಲೇ ಇಲ್ಲ ಎಂದು ತಮ್ಮ ಖಚಿತ ನಿಲುವನ್ನು ವ್ಯಕ್ತಪಡಿಸುತ್ತಾರೆ.

ನಟರಾಜ್ ಹುಳಿಯಾರ್‌ರವರು ರೈತ ಸಮಸ್ಯೆಗಳನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ. ಇತ್ತೀಚೆಗೆ ಮೈಸೂರಿನಲ್ಲಿ ನಡೆದ ದಲಿತರು ಮತ್ತು ಪರ್ಯಾಯ ರಾಜಕಾರಣ ಎಂಬ ವಿಚಾರ ಸಂಕಿರಣದಲ್ಲಿ ಭೂಮಿ ಕುರಿತಾಗಿ ಗಂಭೀರವಾಗಿ ಪ್ರತಿಕ್ರಿಯಿಸಿದ್ದಾರೆ.

ಈವರೆಗೆ ಅಧ್ಯಯನದ ಸಮೀಕ್ಷೆಯಲ್ಲಿ ಹೆಸರಿಸಿರುವ ಲೇಖಕರು ಒಂದಲ್ಲ ಒಂದು ರೀತಿಯಲ್ಲಿ ಭೂರೈತ ಪ್ರಶ್ನೆಯನ್ನು ಕುರಿತು ಚಿಂತನೆ ನಡೆಸಿದವರೇ ಆಗಿದ್ದಾರೆ. ಆ ವಿಭಾಗದಲ್ಲಿ ಹೆಸರಿಸದೇ ಇರುವ ಎಷ್ಟೋ ಮಂದಿ ಲೇಖಕರು,ಚಿಂತಕರು,ಹೋರಾಟಗಾರರನ್ನು ಇಲ್ಲಿ ಹೆಸರಿಸಲಾಗಿದೆ. ಅವರುಗಳಲ್ಲಿ ದ್ಯಾವಪ್ಪ, ಭೈರಪ್ಪ, ರಾಮಾನಾಯ್ಕರು, ಹೊಸೂರು ರಾಮನಾಯ್ಕರು, ರಾಮನಾಯ್ಕ, ಡಿ.ಆರ್.ಹುಚ್ಚಪ್ಪನವರು, ಮಂಜಪ್ಪ, ಚೌಡಪ್ಪ, ಕಾರ್ಮಿಕ ನಾಯಕ ಬಾ.ಸು.ಕೃಷ್ಣಮೂರ್ತಿ, ಪತ್ರಕರ್ತ ಖಾದ್ರಿ ಶಾಮಣ್ಣ, ಸದಾಶಿವರಾಯರು, ಕಾಗೋಡು ದೊಡ್ಮನೆಯ ಸವಾಜಿ ಬೀರನಾಯ್ಕರು, ಸಿ.ಜಿ.ಕೆ.ರೆಡ್ಡಿ, ಕೋಣಂದೂರು ಲಿಂಗಪ್ಪ, ಬಾಪು ಹೆದ್ದೂರಶೆಟ್ಟಿ, ಪ್ರೊ.ರವಿವರ್ಮಕುಮಾರ್, ಗುರುರಾವ್ ಬಾಪಟ್, ಕಾಳೇಗೌಡ ನಾಗವಾರ, ಸಿದ್ದಲಿಂಗಯ್ಯ, ಪ್ರೊ.ಹನುಮಂತ, ಎನ್.ಶಿವಾನಂದ ಕುಗ್ವೆ, ಬಿ.ಕೃಷ್ಣಪ್ಪ, ಎಂ.ಎಸ್.ತಿಮ್ಮಪ್ಪ, ಎ.ವಿ.ಶ್ರೀನಿವಾಸ , ಎನ್.ಚಂದ್ರಶೇಖರ ಸಿರಿವಂತೆ, ನಾಗಭೂಷಣಪಾಟೀಲ್, ಇಂದೂಧರ ಹೊನ್ನಾಪುರ, ಬಯ್ಯಾರೆಡ್ಡಿ, ಕರೀಗೌಡಬೀಚನಹಳ್ಳಿ, ಸಿದ್ಧಗಂಗಮ್ಮ, ಕೋಡಿಹಳ್ಳಿಚಂದ್ರಶೇಖರ್, ಕೆರಗೋಡು ಗುರುಪ್ರಸಾದ್, ಎಂ.ಪಿ.ಪ್ರಕಾಶ್, ಕಾಗೋಡುತಿಮ್ಮಪ್ಪ, ಎಸ್.ಬಂಗಾರಪ್ಪ, ಲಕ್ಷ್ಮಿಪತಿ ಕೋಲಾರ, ಪ್ರೊ.ನಗರಿಬಾಬಯ್ಯ ಮತ್ತು ಜಿ.ವಿ.ಆನಂದಮೂರ್ತಿ ಮುಂತಾದವರು. ಇವರೆಲ್ಲರೂ ಭೂ ರೈತ ಸಮಸ್ಯೆಗಳನ್ನು ಚಿಂತಿಸಿ, ಒಂದಲ್ಲಾ ಒಂದು ರೀತಿಯಲ್ಲಿ ಪರಿಹಾರ ಸೂಚಿಸಲು ಯತ್ನಿಸುತ್ತಿರುವುದು ಮತ್ತು ಕೆಲವರು ಹೋರಾಟ ನಡೆಸಿದವರೇ ಆಗಿದ್ದಾರೆ.

### ೩.೪.೩ ಭೂ ಸಂಬಂಧಿ ಪೂರಕ ಹೋರಾಟಗಳು

ಕಥನ ಸಾಹಿತ್ಯದ ಅಭ್ಯಾಸದ ಸಂದರ್ಭದಲ್ಲಿಯೇ ಭೂ ಸಂಬಂಧಿ ನೆಲೆಯ ಪೂರಕ ಹೋರಾಟಗಳನ್ನು ಗಮನಿಸಲಾಗುವುದು. ನೇರವಾಗಿ ಭೂಮಿಯ ಹೋರಾಟವಲ್ಲದೆ ಅದಕ್ಕೆ ಆಧಾರವಾಗಿರುವಂತಹ ಹೋರಾಟಗಳನ್ನು, ಅವು ಉದ್ದೇಶಿತ ಭೂ ಹೋರಾಟವನ್ನು ಒಳಗೊಳ್ಳದಿದ್ದರೂ ಆಂತರಿಕವಾಗಿ ಭೂ ಪ್ರಶ್ನೆ ಆಶಯಗಳು ಒಳಗೊಂಡಿರುವುದನ್ನು ಈ ಅಧ್ಯಯನ ಗುರುತಿಸುತ್ತದೆ. ಇಲ್ಲಿ ಭೂಮಿ ಮತ್ತು ಪರಿಸರ, ಭೂಮಿ ಮತ್ತು ನೀರು, ಭೂಮಿ ಮತ್ತು ಯೋಜನೆಗಳು, ಭೂಮಿ ಮತ್ತು ವಿದ್ಯುತ್ ಇಂತಹ ಹಲವಾರು ಪ್ರಶ್ನೆಗಳು ಒಂದಕ್ಕೊಂದು ಪೂರಕವಾದ ಭೂ ಸಂಬಂಧಗಳು ಅಂತರ್ಗತವಾಗಿರುವುದರಿಂದ ಇಂತಹ ಹೋರಾಟಗಳನ್ನು ಸ್ಥೂಲವಾಗಿ ನೋಡಲಾಗುವುದು.

## ೩.೪.೧ ಜಲ ಮತ್ತು ಪರಿಸರ ಹೋರಾಟಗಳು

ಪರಿಸರ ಹೋರಾಟವೆಂದರೆ ಅದು ಭೂಮಿಯ ರಕ್ಷಣೆಗಾಗಿ ಹೋರಾಟವೆಂದೇ ಗ್ರಹಿಸಲಾಗಿದೆ. ಪರಿಸರ ರಕ್ಷಣೆ ಮಾಡುವುದೆಂದರೆ ಅದು ಭೂಮಿಯನ್ನು ರಕ್ಷಣೆ ಮಾಡುವುದೇ ಆಗಿದೆ ಎಂದು ಈ ಅಧ್ಯಯನ ಭಾವಿಸಿದೆ. ಆದ್ದರಿಂದ ಕರ್ನಾಟಕದಲ್ಲಾದಂತಹ ಪರಿಸರ ಚಳುವಳಿಗಳು ಭೂ ಸಂಬಂಧಿ ಹೋರಾಟಗಳ ವ್ಯಾಪ್ತಿಗೆ ಸೇರುತ್ತವೆ. ಪರಿಸರ ರಕ್ಷಣೆಗಾಗಿ ನಡೆದ ಗಣಿಗಾರಿಕೆ ವಿರುದ್ಧ ಚಳುವಳಿ, ತುಂಗಾಮೂಲ ಉಳಿಸಿ ಚಳುವಳಿ, ಪಶ್ಚಿಮಘಟ್ಟ ಉಳಿಸಿ ಚಳುವಳಿ, ಉತ್ತರ ಕನ್ನಡ ಜಿಲ್ಲೆಯ ಪರಿಸರ ಚಳುವಳಿಗಳು, ಕುದುರೆ ಮುಖ ಯೋಜನೆ ಮತ್ತು ರಾಷ್ಟ್ರೀಯ ಉದ್ಯಾನ ನಿರ್ಮಾಣದ ವಿರುದ್ಧ ನಡೆದ ಚಳವಳಿಗಳು ಭೂ ಸಂಬಂಧದ ಹೋರಾಟಗಳಾಗಿವೆ.

ಕರ್ನಾಟಕದಲ್ಲಿ ಯೋಜನೆಗಳ ನೆಪದಲ್ಲಿ ಭೂ ಆಕ್ರಮಣಗಳು ಹಾಗೂ ಪರಿಸರ ವಿನಾಶದಂತಹ ಯೋಜನೆಗಳನ್ನು ರೂಪಿಸಿರುವುದನ್ನು ಕಾಣುತ್ತೇವೆ. ಈ ಯೋಜನೆಗಳಿಂದ ಭೂಮಿ ನಾಶಗೊಳ್ಳುವುದನ್ನು ಪರಿಸರ ನಾಶವಾಗುವುದನ್ನು ತಡೆಯಲು ಮತ್ತು ರೈತನ ಅಸ್ತಿತ್ವ ಉಳಿಸಿಕೊಳ್ಳಲು ಹೋರಾಟ ನಡೆದಿವೆ.

ಇಂತಹ ಯೋಜನೆಗಳ ವಿರುದ್ಧ ನಡೆದ ಹೋರಾಟಗಳಾದ ಕಾಳಿ ವಿದ್ಯುತ್ ಯೋಜನೆ, ಬೇಡ್ತಿ ಚಳುವಳಿ, ಕೈಗಾ ಅಣುಸ್ಥಾವರ, ಶರಾವತಿ ಟೇಲ್ ರೇಸ್ ಯೋಜನೆ, ಸೀಬರ್ಡ್ ನೌಕಾನೆಲೆ, ಕಾಸ್ಟಿಕ್‌ಸೋಡಾ ಕಾರ್ಖಾನೆ, ಸಿಗಡಿ ಕೃಷಿ ವಿರುದ್ಧ ಚಳುವಳಿ ನಡೆದಿರುವುದನ್ನು ಕಾಣುತ್ತೇವೆ. ಕಲ್ಲಿದ್ದಲು ಶುದ್ಧ ಕಾರ್ಖಾನೆ ವಿರುದ್ಧ ಚಳುವಳಿ, ಎಂ.ಆರ್.ಪಿ.ಎಲ್.ನ ವಿರುದ್ಧದ ಚಳುವಳಿ, ಕೊಜೆಂಟ್ರಿಕ್ಸ್ ವಿದ್ಯುತ್‌ಸ್ಥಾವರ, ನಾಗಾರ್ಜುನ ವಿದ್ಯುತ್‌ಸ್ಥಾವರ, ಬಾರ್ಜ್‌ಮೌಂಟೆಂಟೆಡ್ ಸ್ಥಾವರ ಸ್ಥಾಪನೆಯ ವಿರುದ್ಧ ನಡೆದ ಹೋರಾಟಗಳನ್ನು ಗಮನಿಸಬಹುದು. ಸರಪಾಡಿ ಅಣೆಕಟ್ಟು ಯೋಜನೆ ಅಭಿವೃದ್ಧಿಯ ಹೆಸರಿನಲ್ಲಿ ಭೂ ಲೂಟಿ ಮಾಡುವಂತಹುದಾಗಿದೆ. ರೈತರ ಕೃಷಿ ಭೂಮಿಯನ್ನು ಆಕ್ರಮಿಸಿಕೊಂಡು ನಿರ್ವಸತಿಕರನ್ನಾಗಿ ಮಾಡುವುದನ್ನು ಕಾಣುತ್ತೇವೆ. ಇವುಗಳ ವಿರುದ್ಧದ ಹೋರಾಟಗಳು ತನ್ನ ಬದುಕಿನ ಅಸ್ತಿತ್ವದ ಪ್ರಶ್ನೆಯಾಗಿಸಿಕೊಂಡು ಭೂಮಿಯ ರಕ್ಷಣೆಗೆ ಮುಂದಾಗಿರುವುದನ್ನು ಕಾಣುತ್ತೇವೆ.

ಅಲ್ಲದೆ ಪರಿಸರ ರಕ್ಷಣೆಗಾಗಿ ರಾಷ್ಟ್ರಮಟ್ಟದಲ್ಲಿ ನಡೆದ ಅಪ್ಪಿಕೋ ಚಳವಳಿ ಪ್ರಮುಖವಾದುದಾಗಿದೆ. ಇದು ಭೂ ರಕ್ಷಣೆ ಜೊತೆಗೆ ಪರಿಸರದ ರಕ್ಷಣೆಯನ್ನು ಒಳಗೊಂಡಿರುವುದನ್ನು ಕಾಣುತ್ತೇವೆ. ಅಲ್ಲದೆ ಕರ್ನಾಟಕದಲ್ಲಿ ನಡೆದ ದಕ್ಷಿಣ ಕನ್ನಡ ಜಿಲ್ಲೆಯ ಪರಿಸರ ಚಳುವಳಿಗಳು ಗಮನಾರ್ಹವಾದವುಗಳಾಗಿವೆ.

ಪರಿಸರ ನಾಶದಿಂದ ಭೂಮಿಯ ಮೇಲೆ ಸ್ವಾಭಾವಿಕವಾಗಿ ದೊರೆಯುವಂತಹ ಗಿಡಮರ ಮುಂತಾದ ವಸ್ತುಗಳು ಮನುಷ್ಯನಿಗೆ ದೊರೆಯದೇ ಹೋಗಬಹುದೆಂಬ ಆತಂಕ ಪರಿಸರವಾದಿಗಳಿಗಿದೆ. ಇದು ಭೂಮಿಯ ರಕ್ಷಣೆಯ ಕುರಿತಾಗಿರುವುದನ್ನು ಮುಖ್ಯವಾಗಿ ಗಮನಿಸಲಾಗಿದೆ.

ನೀರಾವರಿ ಸೌಲಭ್ಯ ಒದಗಿಸುವ ಯೋಜನೆಯ ನೆಪದಲ್ಲಿ ಭೂ ಆಕ್ರಮಣಗಳು ನಡೆಯುವುದನ್ನು ಕಾಣುತ್ತೇವೆ. ಈ ಜಲಸಂಬಂಧಿ ಚಳುವಳಿಗಳು ಭೂ ಆಕ್ರಮಣ ತಡೆಯುವುದಕ್ಕಾಗಿ ಹುಟ್ಟಿಕೊಂಡ ಚಳವಳಿಯಾಗಿವೆ. ಅಭಿವೃದ್ಧಿಯ ಹೆಸರಿನಲ್ಲಿ ನೀರಾವರಿ ಯೋಜನೆ, ಅಣೆಕಟ್ಟು, ವಿದ್ಯುತ್ ಯೋಜನೆಗಳಿಗಾಗಿ, ನಿರ್ಮಿಸುವುದರಿಂದ ಭೂಮಿ ಮುಳುಗಡೆಯಿಂದ ರೈತನಿಗೆ ತನ್ನ ಅಸ್ತಿತ್ವದ ಪ್ರಶ್ನೆ ಮುಖ್ಯವಾಗುತ್ತದೆ. ಈ ಯೋಜನೆಗಳು ಆತನ ಕೃಷಿಭೂಮಿಯನ್ನು ಆಕ್ರಮಿಸಿಕೊಂಡಾಗ ಆತ ನಿರ್ವಸತಿಕನಾಗುತ್ತಾನೆ. ಉತ್ತಮ ಫಲವತ್ತಾದ ಭೂಮಿಯನ್ನು ಕಳೆದುಕೊಂಡ ರೈತ, ಭೂಮಿಯ ನಂಟನ್ನು ಕಳೆದುಕೊಳ್ಳುವುದನ್ನು ಗಮನಿಸಬಹುದಾಗಿದೆ. ನೀರಾವರಿ ಯೋಜನೆಯಿಂದ ಸಾವಿರಾರು ಎಕರೆಯಷ್ಟು ಭೂ ಪ್ರದೇಶ ಮುಳುಗಡೆಯಾಗಿವೆ.

ಗಡಿ ಸಮಸ್ಯೆ ಕುರಿತು ನಡೆಯುವ ಹೋರಾಟಗಳು ಕೂಡಾ ಭೂ ಸಂಬಂಧಿತ ನೆಲೆಯಲ್ಲಿ ನಡೆದಿರುವುದನ್ನು ಕಾಣುತ್ತೇವೆ. ಒಂದು ಪ್ರದೇಶ ವ್ಯಾಪ್ತಿಯನ್ನು ಗುರುತಿಸಿಕೊಳ್ಳುವ ನೆಪದಲ್ಲಿ ನಡೆಯುವ ಗಡಿ ಚಳವಳಿಗಳು ಭೂಮಿ ಕುರಿತಾಗಿಯೇ ಎಂಬುದಾಗಿ ಭಾವಿಸಲಾಗಿದೆ. ಅದು ಭಾಷಾವಾರು ಅಥವಾ ಗಡಿವಾರು, ಪ್ರಾಂತ್ಯವಾರು ಭೂ ಪ್ರದೇಶ ವಿಸ್ತರಣೆ ಮಾಡುವ ನೆಪವಾಗಿರುವುದನ್ನು ಕಾಣುತ್ತೇವೆ. ಒಂದು ರಾಜ್ಯ ಮತ್ತೊಂದು ರಾಜ್ಯದ ನಡುವೆ ನಡೆಯುವ ಅಂತರಾಜ್ಯ ಸಮಸ್ಯೆಗಳು ಕೂಡಾ ಭೂ ಸಮಸ್ಯೆಯನ್ನು ಪ್ರಧಾನವಾಗಿಟ್ಟುಕೊಂಡಿವೆ.

ಹೀಗಾಗಿ ಕರ್ನಾಟಕದ ಸಂದರ್ಭದಲ್ಲಿ ಕಾಸರಗೋಡಿನ ಚಳವಳಿ, ಕೋಲಾರ ಜಿಲ್ಲಾಗಡಿ ಸಮಸ್ಯೆ ಮತ್ತು

ಚಳುವಳಿಗಳು, ಬೆಳಗಾವಿ ಜಿಲ್ಲಾ ಗಡಿವಿವಾದಗಳನ್ನು ಗುರುತಿಸಬಹುದಾಗಿದೆ. ಇತ್ತೀಚೆಗೆ ಕರ್ನಾಟಕದಲ್ಲಿ ಹೊಸ ಜಿಲ್ಲೆಗಳು ರಚನೆಯಾಗಿವೆ. ಇವುಗಳು ಅಂತರ್‌ಜಿಲ್ಲಾ ಗಡಿಭಾಗಗಳ ಭೂ ವ್ಯಾಪ್ತಿಯನ್ನು ಗುರುತಿಸುವ ಸ್ಥಳೀಯ ಭೂ ಪ್ರಶ್ನೆಯಾಗಿ ಕಂಡುಬರುತ್ತವೆ. ಈ ರೀತಿ ಭೂ ವಿಂಗಡಣೆಯು ಕೂಡಾ ಮುಖ್ಯ ಪ್ರಶ್ನೆಯಾಗಿರುವುದನ್ನು ಕಾಣಬಹುದಾಗಿದೆ. ಹೀಗಾಗಿ ಯಾವುದೇ ಒಂದು ಯೋಜನೆ ಕುರಿತ, ಪರಿಸರ ರಕ್ಷಣೆ, ಜಲ ಸಂಬಂಧಿ, ಭಾಷಾ ಸಂಬಂಧಿ, ಗಡಿಸಂಬಂಧಿ, ಹೋರಾಟಗಳು ಕೂಡಾ ಭೂ ಸಂಬಂಧಿ ನೆಲೆಯ ಪೂರಕ ಹೋರಾಟವಾಗಿ ಈ ಅಧ್ಯಯನ ಗುರುತಿಸಿದೆ.

### ೩.೩.೩.೨ ದಲಿತ ಸಂಘಟನೆ ಮತ್ತು ಭೂ ಪ್ರಶ್ನೆ

ಕಥನ ಸಾಹಿತ್ಯ ಅಭ್ಯಾಸದ ಸಂದರ್ಭದಲ್ಲಿ ನಾಡಿನ ಪ್ರಗತಿಪರ ಸಂಘಟನೆಗಳ ಪ್ರಭಾವವನ್ನು ಸಹಜವಾಗಿ ಸಾಹಿತ್ಯಾಭಿವ್ಯಕ್ತಿಯಲ್ಲಿ ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಸಂಘಟನೆಗಳ ಕುರಿತು ಅಧ್ಯಯನ ಮಾಡುವುದರಿಂದ ಸಂಘಟನೆಯ ಹೋರಾಟದ ಸ್ವರೂಪವನ್ನು ಅರ್ಥೈಸಿಕೊಳ್ಳಬಹುದಾಗಿದೆ. ಸಂಘಟನೆಯ ಹೋರಾಟಗಳನ್ನು ಕುರಿತು ಇಲ್ಲಿ ಅಧ್ಯಯನ ದೃಷ್ಟಿಯಿಂದ ಸ್ಥೂಲವಾಗಿ ವಿಶ್ಲೇಷಿಸಲು ಯತ್ನಿಸಲಾಗಿದೆ.

೭೦ರ ದಶಕದಲ್ಲಿ ಅಸ್ತಿತ್ವಕ್ಕೆ ಬಂದ ದಲಿತ ಸಂಘಟನೆಗಳು ಭೂ ಪ್ರಶ್ನೆಯನ್ನು ನೋಡಿದ ಬಗೆಯನ್ನು ಚರ್ಚಿಸಲಾಗಿದೆ. ಭದ್ರಾವತಿಯಲ್ಲಿ ಪ್ರೊ.ಬಿ.ಕೃಷ್ಣಪ್ಪಅವರ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂದ ದಲಿತ ಸಂಘರ್ಷ ಸಮಿತಿಯು ಹೊಸತರಲ್ಲಿ ಭೂ ಪ್ರಶ್ನೆಯನ್ನು ಪ್ರಮುಖವಾಗಿಟ್ಟು ಹೋರಾಟ ನಡೆಸಿತು. ಈ ಸಂದರ್ಭದಲ್ಲಿ ಸಿದ್ಲಿಪುರ (ಭದ್ರಾವತಿ ತಾ.), ಚಂದಗೂಡು (ಮೂಡಿಗೆರೆ ತಾ.), ಮೆದಕಿನಹಾಳ (ಲಿಂಗಸೂಗೂರು ತಾ.), ಮಹಮದ್‌ನಗರ (ಕೊಪ್ಪಳ ತಾ.), ಹೊನ್ನಾಳಿ (ಹೊನ್ನಾಳಿ ತಾ.), ನಾಗಸಂದ್ರ (ಗೌರಿಬಿದನೂರು ತಾ.), ಮರಸನಪಲ್ಲಿ (ಶ್ರೀನಿವಾಸಪುರ ತಾ.), ಗುಳ್ಳಹಟ್ಟಿ ಕಾವಲ್ (ರಾಮನಗರ ತಾ.) ದೇವಲಾಪುರ (ಹೆಗ್ಗಡದೇವನಕೋಟೆ ತಾ.) ಬಿದಿರೆ ಕಾವಲು (ಅರಸೀಕೆರೆ ತಾ.) ಗಳಲ್ಲಿ ಜಮೀನುಗಳನ್ನು ವಶಪಡಿಸಿಕೊಂಡು ದಲಿತರಿಗೆ ಭೂ ಒಡೆತನ ನೀಡಿ, ರೈತರನ್ನಾಗಿಸಿದವು.

ಬ್ರಾಹ್ಮಣೀಕರಣದ ವಿರುದ್ಧ ದಲಿತಸಂಘಟನೆ ಪ್ರಧಾನ ನೆಲೆಯಲ್ಲಿ ಹೋರಾಟ ನಡೆಸಿತು. ಈ ಕಾಲಘಟ್ಟದಲ್ಲಿ ದಲಿತ ಸಂಘಟನೆಗಳು ಸಾಂಸ್ಕೃತಿಕ ಅವಕಾಶಕ್ಕಾಗಿ ಹೋರಾಟ ಮಾಡಿದವು. ಅಸ್ಪೃಶ್ಯತೆ ವಿರುದ್ಧ, ದೇವಸ್ಥಾನಗಳ ಪ್ರವೇಶ, ಸಾರ್ವಜನಿಕ ಕೆರೆ, ಕುಡಿಯುವ ನೀರಿನ ಪ್ರಶ್ನೆ, ಮೊದಲಾದ ಸಾಂಸ್ಕೃತಿಕ ಅವಕಾಶಗಳ ಮುಖ್ಯ ಕಾಳಜಿಗಳಾಗಿ ಹೋರಾಟವಾಗಿ ಕಂಡುಬಂದವು. ನೌಕರಶಾಹಿ ಮತ್ತು ರಾಜಕೀಯ ಅವಕಾಶಕ್ಕಾಗಿ ದಲಿತ ಸಂಘಟನೆಗಳು ಹೋರಾಟವನ್ನೇ ಮುಖ್ಯವಾಗಿಸಿಕೊಂಡಿವೆ. ಏಕೆಂದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಜಕೀಯ ಅವಕಾಶದಿಂದ ಅಧಿಕಾರ ದೊರೆತರೆ ಆನಂತರದಲ್ಲಿ ಇನ್ನುಳಿದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬಹುದೆಂಬ ನಿಲುವನ್ನು ಸಂಘಟನೆಗಳು ಹೊಂದಿರುವುದನ್ನು ಕಾಣುತ್ತೇವೆ.

ನೌಕರಶಾಹಿನೆಲೆ ಮತ್ತು ರಾಜಕೀಯ ಅವಕಾಶವೇ ಮುಖ್ಯವಾಗಿರುವುದು ಕಂಡುಬರುತ್ತದೆ. ಇದಕ್ಕೆ ಪೂರಕವೆಂಬಂತೆ ಬಿ.ಎಂ.ಪುಟ್ಟಯ್ಯ ಹೇಳುವಂತೆ "ಭೂಮಾಲೀಕ ವ್ಯವಸ್ಥೆಯ ಭೂ ಒಡೆತನಕ್ಕೂ ಮತ್ತು ಜಾತಿ ಅಸ್ಪೃಶ್ಯತೆಗಳಿಗೆ ನೇರವಾದ ಸಂಬಂಧವಿದೆ. ಹಾಗಾಗಿ ಜಾತಿ ಅಸ್ಪಶ್ಯತೆಗಳ ವಿರುದ್ಧದ ರಾಜಕೀಯ ಹೋರಾಟವು ಭೂಹೋರಾಟದ ಒಂದು ರೂಪವೇ ಆಗುತ್ತದೆ. ಅದೇ ರೀತಿ ಭೂಮಿಗಾಗಿ ದಲಿತರು ರಾಜಕೀಯ ಹೋರಾಟವನ್ನು ಕೈಗೆತ್ತಿಕೊಂಡರೆ, ಅದು ಜಾತಿ ಅಸ್ಪಶ್ಯತೆಗಳ ವಿರುದ್ಧದ ಹೋರಾಟದ ರೂಪವನ್ನೂ ತಾಳುತ್ತದೆ. ಆದರೆ ಇಡೀ ದಲಿತ ಸಂಘದ ಇತಿಹಾಸದಲ್ಲಿ ಈ ಬಗೆಯ ಹೋರಾಟಗಳನ್ನು ಕೈಗೆತ್ತಿಕೊಳ್ಳಲೇ ಇಲ್ಲ."[೬೪] ದಲಿತ ಸಂಘಟನೆಯ ಮಿತಿಯನ್ನು ಸೂಚಿಸಿದರೂ ಈ ಸಮಸ್ಯೆಯನ್ನು ರಾಜಕೀಯ ಅವಕಾಶದಿಂದ ಪಡೆಯಬಹುದೆಂಬ ನಿಲುವನ್ನು ಸಂಘಟನೆ ತಾಳಿರುವುದು ಗೋಚರವಾಗುತ್ತದೆ.

ದಲಿತ ಸಂಘಟನೆಯ ದಿಕ್ಕು ದಿಸೆಯನ್ನು ಬಿ.ಎಂ.ಪುಟ್ಟಯ್ಯನವರು ಗುರುತಿಸುವಂತೆ "೯೦ರ ದಶಕದ ನಂತರ ದಲಿತ ಸಮುದಾಯದಲ್ಲಿ ಅನ್ನ, ಬಟ್ಟೆ, ವಸತಿ ಮುಂತಾದ ಮೂಲಭೂತ ಸೌಕರ್ಯಗಳೇ ಇಲ್ಲದ ಪರಿಸ್ಥಿತಿ ಮುಂದುವರಿಯುತ್ತಿದೆ. ಇದರಿಂದ ಸಂಘಟನೆ ವಿಶಾಲವಾದ ತಳಹದಿಯ ಮೇಲೆ ಬೆಳೆಯಬೇಕಾಗಿತ್ತು. ಆದರೆ ದುರಂತವೆಂದರೆ ಈ ದಶಕದಲ್ಲೇ ದಲಿತ ಹೋರಾಟಗಳು ಛಿದ್ರಛಿದ್ರವಾಗಿ ಒಡೆದು ಹೋದವು."[೬೫]

ಜಾಗತೀಕರಣದ ಪರಿಣಾಮವಾಗಿ ಎನ್‌ಜಿಓ ಮತ್ತು ಬಹುರಾಷ್ಟ್ರೀಯ ಕಂಪೆನಿಗಳು ದಲಿತ ಸಂಘಟನೆಯ ಹೋರಾಟದ ದಿಕ್ಕನ್ನು ತಪ್ಪಿಸುತ್ತಿರುವುದನ್ನು ಕಾಣುತ್ತೇವೆ. ಇದರ ಪರಿಣಾಮ ಕುರಿತು "ಭೂಮಾಲೀಕರ ವಿರುದ್ಧ, ಜಾಗತೀಕರಣದ ವಿರುದ್ಧ ಹೋರಾಡಬೇಕಿದ್ದ ದಲಿತರ ಆಕ್ರೋಶದ ವಸ್ತುನಿಷ್ಠ ಪರಿಸ್ಥಿತಿಯನ್ನು ನಯವಾಗಿ ನೈಸ್‌ಮಾಡಿ, ಅದನ್ನು ದಿಕ್ಕುತಪ್ಪಿಸಿ, ಅವರ ಆಕ್ರೋಶವು ಅವರ ಒಳಪಂಗಡದ ಒಳಗೇ ಕ್ರಿಯಾಶೀಲವಾಗುವಂತೆ ನೋಡಿಕೊಳ್ಳಲಾಗಿದೆ. ಇದರ ಫಲಿತಾಂಶ ಈಗಾಗಲೇ ತುಂಬ ಯಶಸ್ವಿಯಾಗಿಯೇ ಕೆಲಸ ಮಾಡುತ್ತಿದೆ. ಇದು ಸಹಜವಾಗಿ ಭೂಮಾಲೀಕ ವರ್ಗಕ್ಕೆ, ಆಳುವ ವರ್ಗಕ್ಕೆ ಮತ್ತು ಎನ್.ಜಿ.ಓ.ಗಳಿಗೆ ಒಳಗೊಳಗೆ ಖುಷಿ ಪಡುವ ಸಂಗತಿಯಾಗಿದೆ. ಇದರರ್ಥ ಭೂಮಾಲೀಕ ವರ್ಗ ಮತ್ತು ಜಾಗತೀಕರಣಗಳು ನೇರವಾಗಿ ದಲಿತರ ಶತ್ರುಗಳೇ ಆಗಿರುವಾಗಲೂ ಅವನ್ನು ಮುಚ್ಚಿಡಲಾಗುತ್ತಿದೆ."[೮೬] ಈ ತಂತ್ರಗಳು ಯಾರಿಗೂ ಗೊತ್ತಾಗದೆ ನಡೆಯುವಂತಹ ಪ್ರಕ್ರಿಯೆಯಾಗಿವೆ ಎಂದು ಗುರುತಿಸುತ್ತಾರೆ. ಇದು ದಲಿತ ಮತ್ತು ರೈತನ ಬಹುಮುಖ್ಯ ಪ್ರಶ್ನೆಯಾಗಿರುವುದನ್ನು ಕಾಣುತ್ತೇವೆ.

ಆದರೆ ಇತ್ತೀಚಿನ ಬೆಳವಣಿಗೆಯಲ್ಲಿ ವಿಶಾಲವಾದ ತಳಹದಿಯ ಮೇಲೆ ದಲಿತ ಸಂಘಟನೆಗಳನ್ನು ಒಂದೇ ವೇದಿಕೆಯಡಿ ತರಲು ದೇವನೂರು ಮಹಾದೇವ, ಕೆ.ಎಸ್.ಪುಟ್ಟಣ್ಣಯ್ಯ, ಇಂದೂಧರ ಹೊನ್ನಾಪುರ ಮೊದಲಾದ ಮುಖಂಡರು ಯತ್ನಿಸುತ್ತಿದ್ದಾರೆ. ಸರ್ವೋದಯ ಪಕ್ಷದ ಉದಯದಿಂದ ರೈತರು ಮತ್ತು ದಲಿತರು ಒಂದೇ ವೇದಿಕೆಯಡಿ ಸೇರಬೇಕೆಂಬ ನಿಲುವನ್ನು ತಾಳಿದೆ. ಜಾಗತೀಕರಣ ಉದಾರೀಕರಣದ ಸಂದರ್ಭದಲ್ಲಿ ವಿಶಾಲ ತಳಹದಿಯಲ್ಲಿ ಹೋರಾಟವನ್ನೂ ರೂಪಿಸುವಲ್ಲಿ ಚಿಂತನೆಗಳು ನಡೆಯುತ್ತಿವೆ. ಈ ಹಿನ್ನೆಲೆಯಲ್ಲಿ ಭೂಪ್ರಶ್ನೆ ಮುಖ್ಯಚಿಂತನೆಯ ಕೇಂದ್ರಬಿಂದುವಾಗಿ ರೂಪುಗೊಳ್ಳುತ್ತಿದೆ. ದಲಿತರು ಮತ್ತು ಪರ್ಯಾಯ ರಾಜಕಾರಣ ಎಂಬ ಸೈದ್ಧಾಂತಿಕ ನೆಲೆಯಲ್ಲಿ ಸಂಘಟನಾತ್ಮಕ ಹೋರಾಟದ ಚೌಕಟ್ಟನ್ನು ರೂಪಿಸುತ್ತಿರುವುದು ಆಶಾದಾಯಕ ಬೆಳವಣಿಗೆಯಾಗಿದೆ.

### ೩.೩.೩ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಭೂ ಪ್ರಶ್ನೆ

ಕರ್ನಾಟಕ ರಾಜ್ಯ ರೈತ ಸಂಘಕ್ಕೆ ತನ್ನದೇ ಆದ ತಾತ್ವಿಕ ನೆಲೆಗಟ್ಟಿದೆ. ಆದ್ದರಿಂದ ಇಲ್ಲಿ ಭೂ ಪ್ರಶ್ನೆ ಮುಖ್ಯವಾಗಿ ನೋಡುವುದರ ಜೊತೆಗೆ ರೈತ ಸಂಘಟನೆಯ ಹೋರಾಟವನ್ನು ಸ್ಥೂಲವಾಗಿ ವಿಶ್ಲೇಷಿಸಲು ಯತ್ನಿಸಿದೆ.೮೦ರ ದಶಕದಲ್ಲಿ ಶಿವಮೊಗ್ಗದಲ್ಲಿ ಕಬ್ಬು ಬೆಳೆಗಾರರ ಸಂಘವನ್ನು ಹೆಚ್.ಎಸ್.ರುದ್ರಪ್ಪ, ಪ್ರೊ.ಎಂ.ಡಿ.ನಂಜುಂಡಸ್ವಾಮಿ, ಎನ್.ಡಿ.ಸುಂದರೇಶ್ ಅವರ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂದಿತು. ರಾಜ್ಯ ರಾಜಕಾರಣದಲ್ಲಿ ಹೊಸ ಬಿರುಗಾಳಿಯನ್ನೇ ಬೀಸಿತು. ಇದೇ ಕಾಲಕ್ಕೆ ನರಗುಂದ ನವಲಗುಂದ ರೈತ ಹೋರಾಟದ ಕಾವೇರಿದ್ದ ಸಂದರ್ಭದಲ್ಲಿ ಈ ಸಂಘಟನೆಗೆ ವಿಶಾಲ ತಳಹದಿಯ ಮೇಲೆ ರಾಜ್ಯದ ಎಲ್ಲಾ ಭಾಗದ ರೈತರನ್ನು ಕೇಂದ್ರವಾಗಿಟ್ಟುಕೊಂಡು ಕರ್ನಾಟಕ ರಾಜ್ಯ ರೈತ ಸಂಘ ಅಸ್ತಿತ್ವಕ್ಕೆ ಬಂದಿತು.

ಮೊದಲಿಗೆ ಶಿವಮೊಗ್ಗ ಜಿಲ್ಲೆಯಲ್ಲಿ ಆರಂಭವಾಗಿದ್ದ ರೈತ ಸಂಘಟನೆಯ ಹೋರಾಟವು ಕ್ರಮೇಣವಾಗಿ ರಾಜ್ಯವ್ಯಾಪಿ ಹಬ್ಬತೊಡಗಿತು. ಶಿವಮೊಗ್ಗದಲ್ಲಿ ಖಾಸಗಿ ಕಬ್ಬು ಕಾರ್ಖಾನೆಗಳು ರೈತರ ಬೆಳೆಗಳಿಗೆ ತೂಕದಲ್ಲಿ ಮೋಸ, ಬೆಲೆ ಕಡಿಮೆ, ಹಣ ಪಾವತಿ ವಿಳಂಬ ನೀತಿ, ರೈತರಿಂದ ಹಣ ಕೀಳುವುದು, ತಮಗೆ ಬೇಕಾದವರಿಗೆ ಕಬ್ಬು ಕಟಾವು ಮಾಡಿಸುವುದು, ಹಲವಾರು ಶೋಷಣೆಗಳ ವಿರುದ್ಧ ಹೆಚ್.ಎಸ್. ರುದ್ರಪ್ಪ, ಪ್ರೊ.ಎಂ.ಡಿ.ಎನ್.ಸುಂದರೇಶ್ ರವರು ಹೋರಾಟವನ್ನು ರೂಪಿಸಿದರು.

ಈ ಸಂಘಟನೆಯು ಆರಂಭದಲ್ಲಿ ರೈತ ಬೆಳೆಗೆ ನಿಗದಿತ ಬೆಲೆ, ನೀರು, ಸಾಲಮನ್ನಾ, ವಿದ್ಯುತ್ ಪೂರೈಕೆ ಯಂತಹ ಮುಖ್ಯ ಸಮಸ್ಯೆಯನ್ನಿಟ್ಟುಕೊಂಡು ಹೋರಾಟವನ್ನು ರೂಪಿಸಿತು. ಇದು ಸಮಗ್ರ ಕರ್ನಾಟಕದ ರೈತರ ಅಖಂಡ ಬೆಂಬಲವನ್ನು ತಂದುಕೊಟ್ಟಿತು. ಸಮಾಜವಾದಿ ಸೈದ್ಧಾಂತಿಕ ನೆಲೆಯ ನಾಯಕ ಪ್ರೊ.ಎಂ.ಡಿ.ನಂಜುಂಡಸ್ವಾಮಿಯವರು ತಮ್ಮ ಹೋರಾಟದಲ್ಲಿ ಭೂ ಪ್ರಶ್ನೆಯನ್ನಿಟ್ಟುಕೊಂಡರೂ ಅದನ್ನು ಪ್ರಧಾನ ನೆಲೆಯಲ್ಲಿ ತರದೇ ಅವರು ರೈತರ ಆಧುನಿಕ ಸಮಸ್ಯೆಗಳತ್ತ ಕೇಂದ್ರೀಕರಿಸಿದರು.

ಆಂತರಿಕವಾಗಿದ್ದ ಭೂ ಪ್ರಶ್ನೆಗಿಂತ ಬಾಹ್ಯವಾಗಿ ಎದುರಿಸುತ್ತಿರುವ ಜಾಗತಿಕ ಸಮಸ್ಯೆಯತ್ತ ಪ್ರೊ.ಎಂ.ಡಿ.ನಂಜುಂಡಸ್ವಾಮಿಯವರ ದೃಷ್ಟಿಕೋನವಿದ್ದುದು ಕಂಡುಬರುತ್ತದೆ. ಶ್ರೀಮಂತ ಅಥವಾ ಭೂಮಾಲೀಕ

ರೈತರ ಬಗೆಗೆ ತಾಳಿದ್ದ ನಿಲುವುಗಳನ್ನು ಸ್ಪಷ್ಟಪಡಿಸಲು ಪ್ರೊಫೆಸರ್ ಯತ್ನಿಸಿದ್ದಾರೆ. ಕರ್ನಾಟಕದ ಶೇಖಡಾ ೬೦ ಭಾಗದಷ್ಟು ರೈತರಿದ್ದು, ಉಳಿದ ೪೦ ಭಾಗ ರೈತರು ಭೂಮಾಲೀಕರಾಗಿರಬಹುದು. ಆದರೂ ಅವರು ಸಹ ಜಾಗತೀಕರಣ ಹೊಡೆತದಿಂದ ಸಣ್ಣ ರೈತರು ಅನುಭವಿಸುವ ಸಂಕಷ್ಟವನ್ನೇ ಈ ಭೂಮಾಲೀಕರು ಎದುರಿಸುತ್ತಿದ್ದಾರೆ. ಹೀಗಾಗಿ ರೈತ ಸರ್ಕಾರ ಸ್ಥಾಪಿಸಿ, ಆನಂತರದಲ್ಲಿ ರೈತರ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬಹುದೆನ್ನುವುದು ಅವರ ಗ್ರಹಿಕೆಯಾಗಿತ್ತು. ಆದರೆ ಭೂ ಪ್ರಶ್ನೆಯನ್ನು ಮುಂದುಮಾಡಿಕೊಂಡು ಹೋದರೆ ಚಳುವಳಿಗೆ ಕುಂದುಂಟಾಗಬಹುದೆಂಬ ಆತಂಕ ಅವರಲ್ಲಿತ್ತು. ಆದ್ದರಿಂದ ಜಾಗತಿಕಶಕ್ತಿ ಎದುರಿಸುವುದು ಅವರಿಗೆ ಮುಖ್ಯವಾಗಿದ್ದು, ಆನಂತರದಲ್ಲಿ ಸ್ಥಳೀಯ ಸಮಸ್ಯೆಗಳನ್ನು ಪರಿಹರಿಸಿಕೊಳ್ಳೋಣ ಎಂಬುದನ್ನು ಸಂಘದ ಆಶಯವಾಗಿ ವ್ಯಕ್ತಪಡಿಸಿದ್ದರು.

ಜಾಗತೀಕರಣದ ಪ್ರಕ್ರಿಯೆ ಆರಂಭಗೊಂಡ ನಂತರದಲ್ಲಿ ರೈತರು ಪ್ರಮುಖವಾಗಿ ಹಲವಾರು ಪ್ರಶ್ನೆಗಳನ್ನು ಎದುರಿಸತೊಡಗಿದರು. ಉದಾರೀಕರಣ ಖಾಸಗೀಕರಣ ನೀತಿಗಳು ರೈತರ ಅಸ್ತಿತ್ವಕ್ಕೆ ಧಕ್ಕೆ ತರುವಂತಹ ನಿಟ್ಟಿನಲ್ಲಿ ಕಾರ್ಯನಿರ್ವಹಿಸತೊಡಗಿದವು. ಈ ಕಾಲಕ್ಕೆ ರೈತ ಮತ್ತು ಭೂ ಪ್ರಶ್ನೆ, ಪ್ರಾದೇಶಿಕ ಭೂ ಸಮಸ್ಯೆ, ಬೀಜ ಮತ್ತು ರೈತರ ಆತ್ಮಹತ್ಯೆಯ ಪ್ರಶ್ನೆ, ಬಂಡವಾಳಶಾಹಿ ವಿರುದ್ಧದ ಪ್ರಶ್ನೆಗಳನ್ನು ಪ್ರಧಾನವಾಗಿ ರೈತ ಸಂಘಟನೆಗಳು ಕೈಗೆತ್ತಿಕೊಂಡವು. ಈ ಹಿನ್ನೆಲೆಯಲ್ಲಿ ಸಮಕಾಲೀನ ಸಂದರ್ಭದ ರೈತರ ಸಮಸ್ಯೆಗಳನ್ನು ಬಹುಮುಖ್ಯವಾಗಿ ಈ ಅಧ್ಯಯನ ಪರಿಗಣಿಸುತ್ತದೆ.

ಇದರ ಪರಿಣಾಮದಿಂದಲೇ ಭೂ ಸಮಸ್ಯೆ ಮತ್ತೊಂದು ರೀತಿಯಲ್ಲಿ ಪರಿಣಮಿಸಿದೆ. ಈ ಬಗ್ಗೆ ಬಿ.ಎಂ. ಪುಟ್ಟಯ್ಯನವರು ಹೇಳುವಂತೆ "ಜಾಗತೀಕರಣವು ತನ್ನ ಪರಿಣಾಮದಲ್ಲಿ ಏಕಕಾಲದಲ್ಲಿ ರೈತರಿಗೂ ಮತ್ತು ದಲಿತರಿಗೂ ಹೇಗೆ ಶತ್ರು ಎಂಬುದನ್ನು ಖಚಿತಮಾಡಿಕೊಳ್ಳಬೇಕು. ಬಂಡವಾಳಶಾಹಿ ಮಾರುಕಟ್ಟೆಯು ಕೃಷಿ ಮೇಲೆ ನೇರವಾಗಿ ದಾಳಿ ಮಾಡಿರುವುದರಿಂದ,ಆಳುವ ಸರಕಾರಗಳು ಕೃಷಿ ವಲಯವನ್ನು ನೇರವಾಗಿ ಬಂಡವಾಳಶಾಹಿ ಮಾರುಕಟ್ಟೆಗೆ ಮಾರಾಟ ಮಾಡಿರುವುದರಿಂದ ಭಾರೀ ಭೂಮಾಲೀಕ ವರ್ಗವನ್ನು ಬಿಟ್ಟು ಉಳಿದ ರೈತಾಪಿ ಸಮುದಾಯ ಆರ್ಥಿಕವಾಗಿ ಸಾಮಾಜಿಕವಾಗಿ ಭಾರೀ ಬಿಕ್ಕಟ್ಟಿನಲ್ಲಿದೆ."[೮೭] ಇಲ್ಲಿ ಭೂ ಪ್ರಶ್ನೆ ಬೇರೆಯದೇ ಆದ ಸ್ವರೂಪವನ್ನು ಪಡೆದುಕೊಳ್ಳುತ್ತಿದೆ ಎಂಬುದನ್ನು ಗಮನಿಸಬಹುದಾಗಿದೆ.

೧೯೯೩ ರಲ್ಲಿ ಪ್ರೊ.ಎಂ.ಡಿ.ನಂಜುಂಡಸ್ವಾಮಿಯವರ ನೇತೃತ್ವದಲ್ಲಿ ಕರ್ನಾಟಕ ರಾಜ್ಯ ರೈತ ಸಂಘವು ಬಹುರಾಷ್ಟ್ರೀಯ ಕಂಪೆನಿಗಳ ವಿರುದ್ಧ ಹೋರಾಟವನ್ನು ನಡೆಸಿತು. ಈ ವಿಚಾರ ಕುರಿತಂತೆ ನಾನಾ ಭಾಗಗಳಲ್ಲಿ ಚರ್ಚೆ, ಉಪನ್ಯಾಸಗಳನ್ನು ನಡೆಸಲಾಯಿತು. ಬಹುರಾಷ್ಟ್ರೀಯ ಕಂಪೆನಿಯ ನೀತಿಯಾದ ಡೆಂಕಲ್, ಗ್ಯಾಟ್ ಒಪ್ಪಂದಗಳನ್ನು ವಿರೋಧಿಸಿ ರೈತರನ್ನು ಸ್ವಾಭಿಮಾನಿಗಳನ್ನಾಗಿ ಮಾಡುವ ನಿಟ್ಟಿನಲ್ಲಿ ರೈತ ಸಂಘಟನೆಗಳನ್ನು ಜಾಗೃತಗೊಳಿಸಲಾಯಿತು. ೧೯೯೩ರ ಮಾರ್ಚ್‌ನಲ್ಲಿ ರಾಷ್ಟ್ರೀಯ ಸಮಾವೇಶದಲ್ಲಿ ಡಂಕಲ್ ಪ್ರಸ್ತಾವನೆಯನ್ನು ವಿರೋಧಿಸಿ ಚಾರ್ಟರ್ ಆಫ್ ಡಿಮಾಂಡ್‌ನ್ನು ಜನರ ಮುಂದಿರಿಸಿದರು. ಅಕ್ಟೋಬರ್ ತಿಂಗಳಿನಲ್ಲಿ ತೃತೀಯ ಜಗತ್ತಿನ ರೈತರು ಎಂಬ ವಿಷಯದ ಮೇಲೆ ಚರ್ಚಿಸಲಾಯಿತು. ಇಂತಹ ವಿಚಾರಗಳ ಜಾಗತಿಕ ಪ್ರಶ್ನೆ ರೈತ ಸಮುದಾಯಕ್ಕೆ ದೊಡ್ಡಸವಾಲಾಗಿ ಪರಿಣಮಿಸಿರುವುದನ್ನು ಕಾಣುತ್ತೇವೆ.

ರೈತ ಸಂಘಟನೆಯು ರೈತರು ಬೆಳೆದ ಬೆಳೆಗೆ ಮೌಲ್ಯವರ್ಧಿತ ಬೆಲೆ ನಿಗದಿಗೊಳಿಸುವುದು, ಜಾಗತೀಕರಣ ಉದಾರೀಕರಣ, ಪೇಟೆಂಟ್, ಬಿತ್ತನೆ ಬೀಜ, ಇವುಗಳ ವಿರುದ್ಧ ಹೋರಾಟವನ್ನು ನಡೆಸುತ್ತಿರುವುದನ್ನು ಕಾಣಬಹುದು. ಜಾಗತಿಕ ಶಕ್ತಿಗಳು ಭಾರತೀಯ ಕೃಷಿ ನೀತಿಗೆ ಕೈ ಹಾಕಿ ರೈತರನ್ನು ದುರ್ಬಲಗೊಳಿಸುತ್ತಿರುವುದರ ವಿರುದ್ಧ ರೈತ ಸಂಘಟನೆಗಳು ಹೋರಾಟ ನಡೆಸುತ್ತಿವೆ.

ಪ್ರಸಕ್ತ ಕರ್ನಾಟಕ ರಾಜ್ಯ ರೈತ ಸಂಘವು ಇಬ್ಭಾಗವಾಗಿ ಚುಕ್ಕಿನಂಜುಂಡಸ್ವಾಮಿಯವರ ನೇತೃತ್ವದಲ್ಲಿ ಒಂದು ಬಣ ರೈತ ಸಂಘ ಅಸ್ತಿತ್ವದಲ್ಲಿದ್ದು, ಇನ್ನೊಂದು ಬಣದ ಕರ್ನಾಟಕ ರಾಜ್ಯ ರೈತ ಸಂಘವು ಕೆ.ಎಸ್.ಪುಟ್ಟಣ್ಣಯ್ಯನವರ ನೇತೃತ್ವದಲ್ಲಿ ಅಸ್ತಿತ್ವದಲ್ಲಿದೆ. ಚುಕ್ಕಿ ನಂಜುಂಡಸ್ವಾಮಿಯವರ ರೈತರ ಬಣವು ಜಾಗತೀಕರಣ ನೆಲೆಯ ಆಶಯಗಳ ವಿರುದ್ಧ ಹೋರಾಟವನ್ನು ರೂಪಿಸುತ್ತಿದೆ. ಆದರೆ ರೈತ ಸಂಘಟನೆಗಳು ಕೇವಲ ಶ್ರೀಮಂತ ರೈತರನ್ನು ಒಳಗೊಂಡು ಹೋರಾಟ ನಡೆಸುತ್ತಿವೆ ಎಂಬ ಅಪವಾದಗಳು ಕೇಳಿ ಬರುತ್ತಿವೆ. ಈ ಬಗ್ಗೆ ಎಡಪಂಥೀಯ ಅರ್ಥಶಾಸ್ತ್ರಜ್ಞರು ರೈತಹೋರಾಟ ಕುರಿತಂತೆ "ಶ್ರೀಮಂತ ರೈತ ಚಳುವಳಿಗಳು" ಎಂದು

ಟೀಕಿಸಿದ್ದಾರೆ. ಇದಕ್ಕೆ ರಾಜ್ಯ ರೈತ ಸಂಘದ ಅಧ್ಯಕ್ಷರಾಗಿದ್ದ ಪ್ರೊ.ನಂಜುಂಡಸ್ವಾಮಿಯವರು ಹೇಳುವಂತೆ "ಈಗಿನ ಸರ್ಕಾರದ ಕೈಗಾರಿಕಾಪರ , ನಗರಪರ ವಾದದಿಂದ ಯಾವ ರೈತನು ಶ್ರೀಮಂತ ಅನ್ನಿಸಿಕೊಳ್ಳಲು ಸಾಧ್ಯವೇ ಇಲ್ಲ "[೨೫] ಎನ್ನುವುದರ ಮೂಲಕ ರೈತ ಸಂಘದ ಸಂಘಟನೆಗೆ ವಿಶಾಲ ತಳಹದಿಯನ್ನು ಕೊಡಲು ಪ್ರಯತ್ನಿಸುತ್ತಾರೆ. ಆದರೆ ಬಡ ರೈತ, ಕೃಷಿ ಕೂಲಿಕಾರ್ಮಿಕ ಹೋರಾಟಗಳಲ್ಲಿ ಸಂಪೂರ್ಣ ಪ್ರಮಾಣದಲ್ಲಿ ಭಾಗಿಯಾಗದೆ, ಇರುವುದು ಕಂಡುಬರುತ್ತದೆ. ಬಡ ರೈತ, ಕೃಷಿ ಕೂಲಿಕಾರ್ಮಿಕನ ಪರವಾದ ಹೋರಾಟಗಳು ರೈತ ಸಂಘಟನೆಯಿಂದ ಹೊರ ಬರುತ್ತಿಲ್ಲ ಎಂಬ ಮಾತು ಕೇಳಿ ಬರುತ್ತಿವೆ. ಮುಖ್ಯವಾಗಿ ಭೂ ಹಂಚಿಕೆಯ ಪ್ರಶ್ನೆಗಳು ಇಂದಿಗೂ ಜಾಗತಿಕ ಉದಾರೀಕರಣದ ನೆಲೆಯಲ್ಲಿ ದಲಿತರ ಗೇಣಿದಾರರ, ರೈತರ ಪರವಾಗಿ ಭೂ ಪ್ರಶ್ನೆಯನ್ನು ಎತ್ತಿದೆ. ರೈತ ಸಂಘಟನೆಗಳು ಹಿಂದೆ ಸರಿಯುತ್ತಿವೆ. ಇಲ್ಲಿ ಬಹುಮುಖ್ಯವಾಗಿ ಬೆಲೆಗಳ ವಿರುದ್ಧ, ಬೀಜಗಳ ವಿರುದ್ಧ, ಜಾಗತೀಕರಣ, ಉದಾರೀಕರಣದ ವಿರುದ್ಧದ ಹೋರಾಟಗಳಲ್ಲಿ ರೈತ ಸಂಘಟನೆಯು ತೊಡಗಿಸಿಕೊಂಡಿರುವುದರಿಂದ, ಬಡ ಕೂಲಿಕಾರ್ಮಿಕ ರೈತನ ಆಶಯಗಳು ಮರೆಯಾಗುತ್ತಿರುವುದನ್ನು ಕಾಣಬಹುದಾಗಿದೆ.

ಉದಾರೀಕರಣ, ಜಾಗತೀಕರಣ ಕೊಳ್ಳುಬಾಕ ಸಂಸ್ಕೃತಿಗೆ ರೈತರನ್ನು ಗುಲಾಮರನ್ನಾಗಿಸುವ ತಂತ್ರದ ವಿರುದ್ಧ ಹೋರಾಟವನ್ನು ರೂಪಿಸುತ್ತಿರುವುದರಲ್ಲಿ ಸಂಘಟನೆಯ ಮಹತ್ವ ಕಂಡುಬರುತ್ತದೆ. ಬೌದ್ಧಿಕ ಹಕ್ಕುಗಳ ನಿಯಮಗಳಡಿ, ಬೀಜ ಸ್ವಾತಂತ್ರ್ಯ ಹರಣ, ಕುಲಾಂತರಿ ಬೀಜ ಸಂಸ್ಕೃತಿಗೆ ರೈತರನ್ನು ಗ್ರಾಹಕರನ್ನಾಗಿ ರೂಪಿಸುವುದರ ವಿರುದ್ಧದ ಮುಖ್ಯ ಹೋರಾಟವಾಗಿ ಈ ಸಂಘಟನೆ ರೂಪಿಸುತ್ತಿದೆ.

**ಕೊನೆ ಟಿಪ್ಪಣಿ**

೧. ಎಸ್.ಚಂದ್ರಶೇಖರ್,ದಕ್ಷಿಣ ಭಾರತ:ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ, ಪು.೧೪
೨.ಭಾರತದಲ್ಲಿ ಭೂಸುಧಾರಣೆಯ ಎರಡು ಮಾರ್ಗಗಳು, ಮೂಲ ಸುಬೋಧ ಮಿತ್ರ ಕನ್ನಡಕ್ಕೆ ಶ್ರೀದರ ಪಿಸ್ಸೆ ಪುಟ ೩
೩. ಕ್ಷೀರಸಾಗರ,ದಿಕ್ಕುತಪ್ಪಿದ ಕರ್ನಾಟಕದ ಭೂಸುಧಾರಣೆ.ಪುಟ ೩೪
೪.ಕ್ಷೀರಸಾಗರ,ದಿಕ್ಕುತಪ್ಪಿದ ಕರ್ನಾಟಕದ ಭೂಸುಧಾರಣೆ.ಪುಟ ೩೭
೫.ಭಾರತದಲ್ಲಿ ಭೂಸುಧಾರಣೆಯ ಎರಡು ಮಾರ್ಗಗಳು, ಮೂಲ ಸುಬೋಧ ಮಿತ್ರ ಕನ್ನಡಕ್ಕೆ ಶ್ರೀದರ ಪಿಸ್ಸೆ ಪುಟ ೮
೬. ಎಸ್.ಚಂದ್ರಶೇಖರ್,ದಕ್ಷಿಣ ಭಾರತ:ವಸಾಹತುಶಾಹಿ,ರಾಷ್ಟ್ರೀಯತೆ ಮತ್ತು ಸಂಘರ್ಷ, ಪು.೧೪
೭. ಅದೇ ಪು.೧೪
೮. ಶಂಕರನಾರಾಯಣರಾವ್, ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ಪುಟ ೨೦೭
೯. ಎಸ್.ಚಂದ್ರಶೇಖರ್,ದಕ್ಷಿಣ ಭಾರತ:ವಸಾಹತುಶಾಹಿ,ರಾಷ್ಟ್ರೀಯತೆ ಮತ್ತು ಸಂಘರ್ಷ ಪು.೧೪
೧೦. ಎಚ್.ವಿ.ನಾಗೇಶ್ ಮತ್ತು ಎ.ಇ. ಪುನೀತ್, ಭಾರತದಲ್ಲಿ ಹೋರಾಟಗಳು,ಪುಟ ೪೫
೧೦.ಎ. ಕ್ಷೀರಸಾಗರ,ದಿಕ್ಕುತಪ್ಪಿದ ಕರ್ನಾಟಕದ ಭೂಸುಧಾರಣೆ,ಪುಟ ೨೪,೨೫
೧೧.ಎಚ್.ವಿ.ನಾಗೇಶ್ ಮತ್ತು ಎ.ಇ. ಪುನಿತ್, ಭಾರತದಲ್ಲಿ ರೈತ ಹೋರಾಟಗಳು,ಪುಟ ೨೮
೧೨.ಕ್ಷೀರಸಾಗರ, ದಿಕ್ಕುತಪ್ಪಿದ ಕರ್ನಾಟಕದ ಭೂಸುಧಾರಣೆ, ಪುಟ ೫
೧೩.ಕ್ಷೀರಸಾಗರ, ದಿಕ್ಕುತಪ್ಪಿದ ಕರ್ನಾಟಕದ ಭೂಸುಧಾರಣೆ, ಪುಟ ೫೨
೧೪. ಅದೇ ಪುಟ ೭೭
೧೫.ಅದೇ ಪುಟ ೮೭,೮೮
೧೬. ಅದೇ ಪುಟ ೮೯,೯೦
೧೭.ಮುಝಾಫರ್ ಅಸ್ಸಾದಿ, ರೈತರ ಆತ್ಮಹತ್ಯೆಗಳು ಯಾಕೆ ನಡೆದವು? ಕಾಗೋಡು ಚಳವಳಿ ಸುವರ್ಣಸಂಪುಟ, ಪುಟ ೫೨೫
೧೭ಎ. ಬತ್ತದ ಚಿಲುಮೆ, ಮೂಲ ವಂದನಾಶಿವ, ಕನ್ನಡಕ್ಕೆ, ಮಾಧವ ಐತಾಳ್,೨೦೦೫ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ.ಪು ೧೬
೧೭ಬಿ. ರಾಷ್ಟ್ರೀಯ ಅಪರಾಧ ದಾಖಲೆಗಳ ಸಮಿತಿಯ ವರದಿ, ೨೦೦೬ ಪುಟ ೧೬
೧೮.ಪ್ರೊ.ಬಿ.ಎಂ.ಕುಮಾರಸ್ವಾಮಿ. (ಅನು),ಮೂಲ ವಿನಾಯಕ ಗೋವಿಲ್‌ಕರ್, ವಿಶೇಷ ಆರ್ಥಿಕ ವಲಯಗಳು ವರವೋ ಅಥವಾ ಶಾಪವೋ,ಪುಟ. ೬
೧೯. ಅದೇ ಪುಟ.೩೫
೨೦. ಅದೇ ಪುಟ ೩೫
೨೧.ಸಿ.ಯತಿರಾಜು,ಆಧುನಿಕ ಭಾರತದ ಭೂ ಆಕ್ರಮಣ ಚಳುವಳಿ, ಪುಟ,೧೮೪ ಹೊಸತು ಹೊಸವರ್ಷದ ವಿಶೇಷ ಸಂಚಿಕೆ,೨೦೦೭
೨೨.ಅದೇ ಪುಟ,೧೮೪
೨೩.ಮಾಹಿತಿ ವಿಜಯಕರ್ನಾಟಕ ವರದಿ, ಏಪ್ರಿಲ್, ೨,೨೦೦೭
೨೪.ಮಾಹಿತಿ ಪ್ರಜಾವಾಣಿ,೧೯,ಜೂನ್೨೦೦೭
೨೫.ಪ್ರೊ.ಹೆಚ್.ವಿ.ನಾಗೇಶ್ ಮತ್ತು ಎ.ಇ. ಪುನೀತ್, ಭಾರತದಲ್ಲಿ ರೈತ ಹೋರಾಟಗಳು, ಪು.೮
೨೬.ಎಚ್.ಎಸ್.ಮೋಹನ್ ಚಂದ್ರಗುತ್ತಿ, ಒಂಟಿನಡಿಗೆ, ಪುಟ ೬೮.
೨೭.ಪ್ರೊ.ಹೆಚ್.ವಿ.ನಾಗೇಶ್ ಮತ್ತು ಎ.ಇ. ಪುನೀತ್, ಭಾರತದಲ್ಲಿ ರೈತ ಹೋರಾಟಗಳು ,ಪು.೮
೨೮.ಡಿ.ಆರ್.ನಾಗರಾಜ್, ಬುದ್ಧನೋ, ಕಾರ್ಲ್‌ಮಾರ್ಕ್ಸೋ ,ಸಂಸ್ಕೃತಿಕ ಕಥನ,ಪುಟ ೨೦೬
೨೯. ಅದೇ ಪುಟ ೯
೩೦.ರಾಮಚಂದ್ರ ಉಡುಪ ಮತ್ತು ಅನಂತಕೃಷ್ಣ ಹೆಬ್ಬಾರ್,(ಅನು) ರೈತ ಸಂಘಟನೆ ಮತ್ತು ಭಾರತದ

ಎಡಪಂಥೀಯ ರಾಜಕಾರಣ ೧೯೨೫೭, ಮೂಲ ಡಿ.ಎನ್.ಧನಾಗರೆ, ಅರಿವು ಬರಹ, ಪುಟ ೬೨.
೩೧.ವಿಷ್ಣುನಾಯ್ಕ ಉತ್ತರ ಕನ್ನಡ ಜಿಲ್ಲೆಯ ನಡೆದ ಸಮಾಜವಾದಿ ರೈತ ಆಂದೋಲನ, ಕಾಗೋಡು ಚಳವಳಿ ಸುವರ್ಣಸಂಪುಟ, ಪುಟ ೩೨೬.
೩೨.ಅದೇ ಪುಟ ೩೨೭
೩೩.ಲೋಹಿಯಾ ಹಲವು ಮುಖಗಳು ಜಾರ್ಜ್‌ಫರ್ನಾಂಡೀಸ್, ಕಾಗೋಡು ಚಳುವಳಿಸುವರ್ಣ ಸಂಪುಟ, ಪುಟ ೬೧೧
೩೪. ಸಂಕ್ರಮಣ ಲೋಹಿಯಾ ವ್ಯಕ್ತಿ ವಿಚಾರ, ವಿಶೇಷಾಂಕ, ೧೯೮೦. ಪುಟ ೬೪೨.
೩೫. ನಾಗಭೂಷಣ ಪಾಟೀಲ, ಸಮಾಜವಾದವೇ ಪರ್ಯಾಯ, ಪುಟ ೧೩
೩೬.ನಿಂಗಪ್ಪ ಮುದೇನೂರು, ಕಾಗೋಡು ಚಳವಳಿ ಸುವರ್ಣ ಸಂಪುಟ, ಪುಟ ೫೦೦
೩೭. ಅದೇ ಪುಟ ೫೦೩
೩೮. ಲೋಹಿಯಾ, ಭಾರತದ ರೈತ, ಪುಟ ೪
೩೯. ಅದೇ ಪುಟ ೬
೪೦. ಮಲ್ಲಿಕಾರ್ಜುನ ಕೂಡ್ಲಿಗೆರೆ, ಕಾಗೋಡುಚಳವಳಿ, ಪುಟ ೫೩
೪೧. ಅದೇ ಪುಟ ೫೩
೪೨. ಅದೇ ಪುಟ ೫೩
೪೩. ಅದೇ ಪುಟ ೫೪
೪೪.ಗಾಂಧಿ ಮೋ.ಕ.ಆದರ್ಶಗ್ರಾಮ, ಗಾಂಧಿಸ್ಮಾರಕನಿಧಿ, ಕರ್ನಾಟಕ ಶಾಖೆ, ಬೆಂಗಳೂರು.ಪುಟ.೩೫
೪೫.ಮುಜಾಫರ್ ಅಸ್ಸಾದಿಯವರೊಂದಿಗೆ ಚರ್ಚೆ ನಡೆಸಿದ ಸಂದರ್ಭದ ಮಾತು.
೪೬.ಮುಜಾಫರ್ ಎಚ್.ಅಸ್ಸಾದಿ , ಭಾರತದ ರಾಜಕಾರಣದಲ್ಲಿ ಪರ್ಯಾಯ ರಾಜಕಾರಣ, ದಲಿತರು ಮತ್ತು ಪರ್ಯಾಯ ರಾಜಕಾರಣ, ಪುಟ.೪೯, ಹಂಪಿ ಪ್ರಸಾರಾಂಗ, ಕನ್ನಡ ವಿ.ವಿ.೨೦೦೫.
೪೭. ದಲಿತಯುಗ, ಅರವಿಂದ ಮಾಲಗತ್ತಿ.
೪೮.ಅಲ್ಲಮಪ್ರಭು ಬೆಟ್ಟದೂರು,ಗಾಂಧಿ,ಲೇಖನ, ಗಾಂಧಿ ಎನ್ನುವ ಹೆಸರು, ಸಂ.ಚಂದ್ರಶೇಖರ ಪಾಟೀಲ,ಶಶಿಕಲಾ ವೀರಯ್ಯಸ್ವಾಮಿ, ಕನ್ನಡ ಪುಸ್ತಕಪ್ರಾಧಿಕಾರ,ಬೆಂಗಳೂರು.೧೯೯೮.ಪುಟ೧೭೯
೪೯. ಎಸ್.ಪ್ರಭಾಕರ್, ಕಾಗೋಡು ಚಳವಳಿ ಸು ಸಂ. ಕರ್ನಾಟಕದಲ್ಲಿ ಆದಿವಾಸಿ ರೈತ ಹೋರಾಟಗಳ ಸ್ವರೂಪ. ಪುಟ ೨೯೩,
೫೦.ಕ್ಷೀರ ಸಾಗರ, ದಿಕ್ಕುತಪ್ಪಿದ ಕರ್ನಾಟಕ ಭೂಸುಧಾರಣೆ,ಪು.೩೭
೫೧.ಚಾರುಭಂಡಾರನಾಥ ಕೀರ್ತಿ, ಭೂದಾನ ಯಜ್ಞ, ಪುಟ ೧೧೫
೫೨. ಅದೇ ಪುಟ ೧೩೦
೫೩.ಅದೇ ಪು೩೧
೫೪.ಕ್ಷೀರಸಾಗರ, ದಿಕ್ಕುತಪ್ಪಿದ ಭೂಸುಧಾರಣೆ, ಪು.೩೮
೫೫.ಪ.ರಾ.ಶ್ರೀನಿವಾಸ, ಭೂ ಸಮಸ್ಯೆ ಇದೊಂದು ಜ್ವಲಂತ ಜ್ವಾಲೆ, ಕಾಗೋಡು ಚಳವಳಿ ಸುವರ್ಣ ಸಂಪುಟ.ಪುಟ ೧೦೮, ೧೦೯
೫೬. ಚಾರು ಬಂಡಾರನಾಥ ಕೀರ್ತಿ, ಭೂದಾನ ಯಜ್ಞ, ಪು೩೦೧
೫೭.ಈ ಸಂಶೋಧನಾರ್ಥಿ ಮಾತುಕತೆ ನಡೆಸಿದ ಸಂದರ್ಭದಲ್ಲಿ ಹೇಳಿದ ಮಾತಿದು
೫೮. ಈ ಸಂಶೋಧನಾರ್ಥಿ ಗಣಪತಿಯಪ್ಪನವರೊಂದಿಗೆ ಸಂದರ್ಶಿಸಿದ ಸಂದರ್ಭದಲ್ಲಿ ತಿಳಿಸಿದ ವಿಷಯವಿದು.
೫೯.ಪ್ರೊಫೆಸರ್ ಎಂಡಿಎನ್, ಸಂ.ವೀರಭದ್ರಪ್ಪ ಬಿಸ್ಲಹಳ್ಳಿ ೨೦೦೬. ಪುಟ ೩೫೧
೬೦. ಅದೇ ಪುಟ ೩೫೧
೬೧. ಅದೇ ಪುಟ ೩೬೩
೬೨.ಅದೇ ಪುಟ ೩೭೪
೬೩.ಡಿ.ಆರ್.ನಾಗರಾಜ್, ಬೆಂಗಳೂರಿನ ಹತ್ತಿರ ಜಪಾನೀ ಟೌನ್‌ಶಿಪ್, ಸಂಸ್ಕೃತಿಕಥನ, ಪುಟ ೩೪೪

೬೪.ಅದೇ, ಪುಟ ೩೪೫

೬೫.ಡಿ.ಆರ್.ನಾಗರಾಜ್, ಆತಂಕಿತ ಹಿಂದೂ ಮತ್ತು ಕುಪಿತ ರೈತ, ಸಂಸ್ಕೃತಿಕಥನ, ಪುಟ ೨೪೯

೬೬. ದಲಿತರು ಮತ್ತು ಪರ್ಯಾಯ ರಾಜಕಾರಣ, ಪುಟ ೬೩

೬೭.ಅದೇ  ಪುಟ ೩೨೭

೭೯.ಅದೇ ಪುಟ ೩೩೦

೮೦. ಭೂಮಿಗೌಡ,ಕನ್ನಡ ಕಾದಂಬರಿಗಳಲ್ಲಿ ವರ್ಣ ಮತ್ತು ವರ್ಗ ಸಂಘರ್ಷ, ಪುಟ ೧೧೦

೮೧. ಅರವಿಂದ ಮಾಲಗತ್ತಿ, ದಲಿತರು  ಮತ್ತು ಪರ್ಯಾಯ ರಾಜಕಾರಣ, ಪುಟ ೧೬೦,೧೬೧

೮೨. ಅದೇ  ಪುಟ ೧೬೪

೮೩. ಸಿ.ಎಂ.ಮುನಿಯಪ್ಪ, ದಲಿತರು ಮತ್ತು ಪರ್ಯಾಯ ರಾಜಕಾರಣ, ಪುಟ ೭೫

೮೪.ಬಿ.ಎಂ.ಪುಟ್ಟಯ್ಯ, ದಲಿತರು ಮತ್ತು ಪರ್ಯಾಯ ರಾಜಕಾರಣ, ಪುಟ ೨೧೩

೮೫.ಅದೇ ಪುಟ ೨೧೩

೮೬.ಅದೇ ಪುಟ ೨೧೪

೮೭. ಅದೇ ಪುಟ ೨೧೫

೮೮.ಕಾಗೋಡು ಚಳವಳಿ ಸುವರ್ಣ ಸಂಪುಟ, ಪು,೪೫೧,೪೫೨

ಅಧ್ಯಾಯ : ನಾಲ್ಕು

# ಆಧುನಿಕ ಕನ್ನಡ ಕಥನಗಳಲ್ಲಿ ಭೂ ಹೋರಾಟದ ನೆಲೆಗಳು

**೪.೧.೦ ವಸಾಹತು ಸಂದರ್ಭ**

೪.೧.೧ ಮಾಸ್ತಿ : ಖಾಸಗಿ ಭೂ ಒಡೆತನದ ನಿರಾಕರಣೆ

೪.೧.೨ ಕುವೆಂಪು : ರೈತ ಬದುಕಿನ ವಾಸ್ತವ ಚಿತ್ರಣ

೪.೧.೩ ಕೊರಡ್ಕಲ್ ಶ್ರೀನಿವಾಸರಾವ್ : ಭೂಮಾಲೀಕರ ವಿರುದ್ಧದ ಆಕ್ರೋಶ

೪.೧.೪ ಶಿವರಾಮಕಾರಂತ : ಚೋಮನ ಭೂ ಒಡೆತನದ ಕನಸು

೪.೧.೫ ರಾವಬಹಾದ್ದೂರ್ : ಭೂ ಉತ್ಪಾದನೆ ಮತ್ತು ರೈತ ಬದುಕಿನ ಸಂಬಂಧ

೪.೧.೬ ಗೊರೂರು : ರೈತ ಸಮುದಾಯದ ಸುಧಾರಣೆಯ ಆಶಯಗಳು

೪.೧.೭ ಆನಂದಕಂದ : ಭೂ ಜಾಗೀರುದಾರಿಕೆಯ ಸಮಸ್ಯೆಗಳು

**೪.೨.೦ ಸ್ವಾತಂತ್ರ್ಯೋತ್ತರ ಸಂದರ್ಭ**

೪.೨.೧ ನಿರಂಜನ : ಮಾರ್ಕ್ಸ್‌ವಾದಿ ರೈತ ಹೋರಾಟ

೪.೨.೨ ಅ.ನ.ಕೃಷ್ಣರಾಯ : ಮಣ್ಣಿನ ಮಗನ ಭೂ ಪ್ರಶ್ನೆ

೪.೨.೩ ಚದುರಂಗ : ಭೂ ಒಡೆತನ ಆಶಯಗಳು

೪.೨.೩ ನಾ.ಡಿಸೋಜ : ನ್ಯಾಯಯುತ ಭೂ ಹಕ್ಕಿಗಾಗಿ ಹೋರಾಟ

೪.೨.೪ ಶೇಷನಾರಾಯಣ : ಆದರ್ಶವಾದಿ ಭೂ ಹೋರಾಟದ ನೆಲೆ

೪.೨.೫ ಅನಂತಮೂರ್ತಿ : ಭೂ ಹೋರಾಟದ ಪ್ರಭಾವಗಳು

೪.೨.೬ ಪಿ.ಲಂಕೇಶ್ : ಭೂಮಿಯ ಮಾರಾಟದ ಸಂಘರ್ಷ

೪.೨.೭ ಪೂರ್ಣಚಂದ್ರತೇಜಸ್ವಿ : ಭೂಮಿ ಮತ್ತು ರೈತಪ್ರಶ್ನೆಯ ಜಾಗತಿಕ ನೆಲೆ

೪.೨.೮ ಬರಗೂರು ರಾಮಚಂದ್ರಪ್ಪ : ಭೂ ಶೋಷಣೆ ವಿರುದ್ಧ ಸಂಘಟಿತ ಬಂಡಾಯ

೪.೨.೯ ದೇವನೂರು ಮಹಾದೇವ : ದಲಿತರ ಬದುಕಿನ ಭಾಗವಾಗಿ ಭೂಮಿ

೪.೨.೧೦ ಶಾಂತರಸ : ರೈತರ ಉರಿವ ಬದುಕು

೪.೨.೧೧ ಬೆಸಗರಹಳ್ಳಿರಾಮಣ್ಣ : ಭೂ ಅನ್ಯಾಯದ ವಿರುದ್ಧ ಆತ್ಯಂತಿಕ ಹೋರಾಟ

೪.೨.೧೨ ಚನ್ನಣ್ಣವಾಲೀಕಾರ : ಭೂ ಹಂಚಿಕೆಯ ಕಾನೂನಿನ ಸಂಘರ್ಷ

೪.೨.೧೩ ಕುಂ.ವೀರಭದ್ರಪ್ಪ : ಭೂ ಒಡೆತನದ ಸ್ವಾಭಿಮಾನ

೪.೨.೧೪ ಅರವಿಂದ ಮಾಲಗತ್ತಿ : ಜೀತಗಾರರ ಭೂ ಹಕ್ಕಿನ ಹೋರಾಟದ ನೆಲೆ

೪.೨.೧೫ ಮ.ನ.ಜವರಯ್ಯ : ಕುಲದ ಭೂ ಕಾನೂನು ಮತ್ತು ಸರ್ಕಾರಿ ಭೂ ಕಾನೂನಿನ ನಡುವೆ ಸಂಘರ್ಷ

೨.೨.೧೬ ವೈದೇಹಿ : ಹಕ್ಕಿಲ್ಲದ ಮಹಿಳಾ ಭೂ ಪ್ರಶ್ನೆ

೨.೨.೧೭ ಎಂ.ಎಸ್.ವೇದಾ : ಮಹಿಳಾ ಭೂ ಹಕ್ಕಿನ ನೆಲೆ

೪.೨.೧೮ ವಿಶುಕುಮಾರ್ : ಇಕ್ಕಟ್ಟುಗಳ ನಡುವೆ ಭೂ ಹಕ್ಕಿಗಾಗಿ ಹೋರಾಟ

೪.೨.೧೯ ಮೊಗಳ್ಳಿಗಣೇಶ್ : ದಲಿತರ ಭೂಮಿಯ ಕನಸು

೪.೨.೨೦ ಶಿವರುದ್ರಕಲ್ಲೋಳಿಕರ : ಹೊಲಗೇರಿಯ ರಾಜಕುಮಾರ

೪.೨.೨೧ ಅಮರೇಶ ನುಗಡೋಣಿ : ಜಾಗತಿಕ ವಿದ್ಯಮಾನಗಳಿಂದ ಭೂ ಸಮಸ್ಯೆ

೪.೨.೨೨ ಇತರೆ ಕಥನಕಾರರಲ್ಲಿ ಭೂ ಹೋರಾಟದ ಪ್ರತಿನಿಧೀಕರಣ

ಬಸವರಾಜ ಕಟ್ಟೀಮನಿ, ಆರ್.ವಿ.ಭಂಡಾರಿ, ಕಲಿಗಣನಾಥ ಗುಡದೂರು, ಪರುಶುರಾಮಮುಟ್ಟುಪ್ಪೆ.

## ೪.೧.೦ ವಸಾಹತು ಸಂದರ್ಭ

ವಸಾಹತು ಸನ್ನಿವೇಶವು ಮುಖ್ಯವಾಗಿ ಬ್ರಿಟಿಷ್ ಆಡಳಿತ ವ್ಯವಸ್ಥೆಯಲ್ಲಿನ ಸುಧಾರಣೆಯ ಆಶಯವನ್ನು ಹೊಂದಿ ಭಾರತದಲ್ಲಿ ಅಸ್ತಿತ್ವ ಪಡೆಯಿತು. ಇದಕ್ಕೆ ಪೂರಕವಾಗಿ ಪಾಶ್ಚಾತ್ಯ ಶಿಕ್ಷಣ, ಸಾಮಾಜಿಕ ಸುಧಾರಣೆ, ಜಾತ್ಯತೀತ ಮನೋಧರ್ಮ ಕೆಲವರ್ಗದ ಭಾರತೀಯರಿಗೆ ಹೆಚ್ಚು ಆಕರ್ಷಕವಾಗಿ ಕಂಡಿತು. ಆಂಗ್ಲಶಿಕ್ಷಣದ ಪರಿಣಾಮ ಭಾರತದಲ್ಲಿ ನವವಿದ್ಯಾವಂತವರ್ಗ ಸೃಷ್ಟಿಗೆ ಕಾರಣವಾಯಿತು. ಈ ಶಿಕ್ಷಣದಿಂದಾಗಿ ವಸಾಹತುಶಾಹಿ ವಿಚಾರಧಾರೆಗೆ ಪರ್ಯಾಯವಾಗಿ ತಮ್ಮ ಪರಂಪರೆಯ ಹುಡುಕಾಟಕ್ಕೆ ತೊಡಗಿ, ತಮ್ಮ ಸಾಂಸ್ಕೃತಿಕ ಉತ್ತಮಾಂಶಗಳನ್ನು ಎತ್ತಿ ಹಿಡಿಯುವ ಪ್ರಕ್ರಿಯೆಯಲ್ಲಿ ಈ ವರ್ಗವು ತೊಡಗಿತು. ಇಂತಹ ಪ್ರಕ್ರಿಯೆಯ ಕಾಲವನ್ನು ಭಾರತೀಯ ಪುನರುತ್ಥಾನ ಕಾಲವೆಂದು ಗುರುತಿಸಬಹುದಾಗಿದೆ. ಈ ಪ್ರಕ್ರಿಯೆಯಲ್ಲಿ ಅನೇಕ ಬಗೆಯ ವಿಚಾರಧಾರೆಗಳು ಸಂಗಮವಾಗಿ ವ್ಯಕ್ತಗೊಂಡಿವೆ.ಪಾಶ್ಚಾತ್ಯರ ತತ್ವ ಸಿದ್ಧಾಂತಗಳು,ಚಿಂತನೆಗಳು ಭಾರತೀಯ ಸಂದರ್ಭವನ್ನು ಪ್ರಭಾವಿಸಿದವು. ಇಂಥ ವಿಚಾಧಾರೆಯ ಪ್ರಭಾವವನ್ನು ಕನ್ನಡದ ನವೋದಯ ಸಂದರ್ಭದ ಲೇಖಕರಲ್ಲಿ ಕಾಣಬಹುದಾಗಿದೆ.

ವಸಾಹತು ಸನ್ನಿವೇಶದ ಭಾರತೀಯ ಸಮಾಜವನ್ನು ಸುಧಾರಿಸುವ ಆಶಯ ಮತ್ತು ತಮ್ಮ ಸಂಸ್ಕೃತಿಯ ಉದಾತ್ತ ಉದಾರವಾದಿ ಅಂಶಗಳನ್ನು ಎತ್ತಿ ಹಿಡಿಯುವ ಆಶಯ ಕನ್ನಡ ಸಾಹಿತ್ಯದಲ್ಲಿ ವ್ಯಕ್ತವಾಗಿದೆ. ಈ ರೀತಿಯ ಹೊಸ ಬದುಕನ್ನು ಕಟ್ಟುವ ಆಶಯ, ರಾಷ್ಟ್ರೀಯ ಹೋರಾಟದ ಆಶಯಗಳು ಕನ್ನಡದ ನವೋದಯ ಲೇಖಕರಲ್ಲಿ ಪ್ರಧಾನವಾಗಿ ಕಂಡುಬರುತ್ತವೆ. ಇವರೆಲ್ಲರೂ ಸಮಸ್ಯೆಗಳಿಗೆ ಸಂಕಷ್ಟಗಳಿಗೆ ಮಾನವೀಯವಾಗಿ ಸ್ಪಂದಿಸಿದ್ದರ ಫಲವಾಗಿ ನವೋದಯ ಸಾಹಿತ್ಯ ಕೃತಿಗಳು ಮೂಡಿನಿಂತಿವೆ. ಇಂತಹ ವಸ್ತು, ಆಶಯಗಳನ್ನು ಕಥನಗಳಲ್ಲಿ ಸಾಮಾನ್ಯವಾಗಿ ಗುರುತಿಸಬಹುದಾಗಿದೆ. ಆಧುನಿಕತೆ ಮತ್ತು ಅದಕ್ಕೆ ವಿದ್ಯಾವಂತ ವರ್ಗದ ಪ್ರತಿಕ್ರಿಯೆಯನ್ನುಈ ಸಂದರ್ಭದ ಸಾಹಿತ್ಯ ಕೃತಿಗಳಲ್ಲಿ ಕಾಣಬಹುದು. ಕನ್ನಡ ಕಥನರೂಪಗಳು ಪಾಶ್ಚಾತ್ಯಮಾದರಿಯನ್ನು ವಿಶೇಷವಾಗಿ ಅನುಸರಿಸಿದ್ದರೂ ಭಾರತೀಯ ಪಾರಂಪರಿಕ ಕಥನ ಪರಂಪರೆಯ ಉತ್ತಮಾಂಶಗಳನ್ನು ಒಳಗೊಂಡಿರುವುದನ್ನು ಗುರುತಿಸಬಹುದು.ಸಾಮಾನ್ಯವಾಗಿ ವಾಸ್ತವವಾದಿ ಪರಂಪರೆಯ ಕಥಾಸಾಹಿತ್ಯವನ್ನು ವಸಾಹತುಸನ್ನಿವೇಶದಲ್ಲಿ ಕಾಣಬಹುದು. ಈ ಮೂಲಕ ಭೂ ಪ್ರಶ್ನೆ ಕುರಿತ ಅಂಶಗಳನ್ನು ಕಥನಗಳಲ್ಲಿ ಹುಡುಕುವ ಯತ್ನಮಾಡಲಾಗುವುದು. ಬಹುಪಾಲು ಈ ಕಾಲಘಟ್ಟದ ಲೇಖಕರು ಮಾನವತಾ, ಉದಾರತಾವಾದಿ ನೆಲೆಯ ಮೂಲಕ ಮಾನವೀಯವಾಗಿ ಕಥನಗಳಲ್ಲಿ ಮಿಡಿಯತೊಡಗಿರುವುದು ಕಂಡುಬರುತ್ತದೆ.

ಭಾರತೀಯ ಸಂದರ್ಭದಲ್ಲಿ ಸಮಾಜವಾದದ ಹಿನ್ನೆಲೆಯಲ್ಲಿ ಗಾಂಧಿ,ಲೋಹಿಯಾ, ಅಂಬೇಡ್ಕರ್, ಜಯಪ್ರಕಾಶ್‌ನಾರಾಯಣ್ ಮೊದಲಾದವರು ರೈತ ಗೇಣಿದಾರರ ಮತ್ತು ದಲಿತರ ಸಮಸ್ಯೆಗಳ ಕುರಿತು ಚಿಂತಿಸಿ,ಪರಿಹಾರ ಸೂಚಿಸಿದರು. ಈ ಹಿನ್ನೆಲೆಯಲ್ಲಿ ಭಾರತೀಯ ಸಂದರ್ಭದ ಸಾಮಾಜಿಕ ರಾಜಕೀಯ,ಪ್ರೇರಣೆ ಹಾಗೂ ಒತ್ತಡಗಳು ಚರಿತ್ರೆಯನ್ನು ರೂಪಿಸಿವೆ. ಇವೇ ಅಂಶಗಳು ಕತೆ ಮತ್ತು ಕಾದಂಬರಿಗಳಲ್ಲಿ ವ್ಯಕ್ತವಾಗಿರುವುದನ್ನು ಗಮನಿಸಬಹುದಾಗಿದೆ.

ಇಂಥ ಸಾಮಾಜಿಕ ವಾತಾವರಣದಲ್ಲಿ ಭೂ ಪ್ರಶ್ನೆಯನ್ನು ಕನ್ನಡ ಸಂದರ್ಭದ ಲೇಖಕರು ತಮ್ಮ ಕೃತಿಗಳ ಮೂಲಕ ಅಭಿವ್ಯಕ್ತಿಸಿದ ಬಗೆಯನ್ನು ವಿಶ್ಲೇಷಿಸಲಾಗಿದೆ. ಆದ್ದರಿಂದ ವಸಾಹತು ಸನ್ನಿವೇಶದ ಮಾಸ್ತಿ, ಕುವೆಂಪು, ಕೊರಡ್ಕಲ್ ಶ್ರೀನಿವಾಸರಾವ್, ಆನಂದಕಂದ ಮೊದಲಾದವರು ಭೂಮಿ ಕುರಿತಾಗಿ ತಮ್ಮ ಕಾಲದ ಪರಿಸರದಲ್ಲಿ ಪ್ರತಿಕ್ರಿಯಿಸಿದ ಬಗೆಯನ್ನು ಚರ್ಚಿಸಲಾಗುವುದು. ಅಲ್ಲದೆ ಈ ಲೇಖಕರು ವಸಾಹತುಸನ್ನಿವೇಶದ ನಂತರವೂ ಬರವಣಿಗೆಯಲ್ಲಿ ತೊಡಗಿರುವುದನ್ನು ಗಮನದಲ್ಲಿರಿಸಿಕೊಳ್ಳಲಾಗಿದೆ. ಈ ಅಧ್ಯಯನವನ್ನು ಕಾಲಘಟ್ಟದ ನೆಲೆಯಲ್ಲಿ ವಿಭಾಗಿಸಿಕೊಳ್ಳಲಾಗಿದೆ. ಏಕೆಂದರೆ ಅಧ್ಯಯನದ ದೃಷ್ಟಿಯಿಂದ ಈ ವಿಭಾಗೀಕರಣವು ಅನುಕೂಲಕರವಾಗಿರುವುದರಿಂದ ಇದು ಅನಿವಾರ್ಯವಾಗಿದೆ.

ವಸಾಹತು ಭಾರತ ಸನ್ನಿವೇಶದಲ್ಲಿ ಭೂಪ್ರಶ್ನೆ ಸಂಬಂಧಿ ಅಂಶಗಳ ಕುರಿತು ನಡೆದಿರುವ ಕ್ರಿಯೆ ಪ್ರಕ್ರಿಯೆಗಳನ್ನು ಮತ್ತು ಹೋರಾಟಗಳನ್ನು ಕುರಿತು ಈಗಾಗಲೇ ಮೂರನೇ ಅಧ್ಯಾಯದಲ್ಲಿ ಚರ್ಚೆ ಮಾಡಲಾಗಿದೆ. ಆದ್ದರಿಂದ ಇಲ್ಲಿ ಪುನರಾವರ್ತನೆ ಮಾಡದೆ ನೇರವಾಗಿ ವಸಾಹತು ಸಂದರ್ಭದ ಸಾಹಿತ್ಯವನ್ನು ಅಧ್ಯಯನ ಮಾಡಲಾಗುವುದು.

## ೪.೧.೧ ಮಾಸ್ತಿ : ಖಾಸಗಿ ಭೂ ಒಡೆತನದ ನಿರಾಕರಣೆ

ಆಧುನಿಕ ಕನ್ನಡ ಕತೆಗಳ ಆರಂಭದಲ್ಲಿ ಮಾಸ್ತಿಯವರು ತಮ್ಮದೇ ಆದ ಛಾಪನ್ನು ಕನ್ನಡ ಕಥಾ ಪ್ರಪಂಚಕ್ಕೆ ನೀಡಿದ್ದಾರೆ. ಇವರ ಕತೆಗಳಲ್ಲಿ ಪರಂಪರೆ ಮತ್ತು ಆಧುನಿಕತೆಯ ಮುಖಾಮುಖಿ ಹಾಗೂ ಸಂಘರ್ಷಗಳನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಮಾಸ್ತಿಯವರನ್ನು ಆಧುನಿಕ ಕನ್ನಡ ಕಥನ ಪರಂಪರೆಯ ಲೇಖಕರಲ್ಲಿ ಮೊದಲಿಗರೆಂದು ಸಾಹಿತ್ಯವಲಯದಲ್ಲಿ ಗುರುತಿಸಿರುವುದು ಈಗಾಗಲೇ ತಿಳಿದ ವಿಚಾರವಾಗಿದೆ. ಹೀಗಾಗಿ ಅವರ ಕತೆಗಳನ್ನು ಅಭ್ಯಸಿಸುವುದು ಮುಖ್ಯವೆನಿಸುತ್ತದೆ.

ಮಾಸ್ತಿಯವರ ಒಟ್ಟಾರೆ ಕತೆಗಳಲ್ಲಿ ಪರಂಪರೆಯೊಂದಿಗೆ ಮಾನವೀಯತೆ ಹಾಗೂ ಧಾರ್ಮಿಕ ಶ್ರದ್ಧೆಯ ಮೂಲಕ ಕತೆಗಳು ರೂಪ ಪಡೆಯುವುದನ್ನು ಪ್ರಧಾನವಾಗಿ ಕಾಣಬಹುದಾಗಿದೆ. ಈ ಕುರಿತು ಮಾವಿನಕೆರೆ ರಂಗನಾಥ್ ಅವರು ಹೇಳುವಂತೆ "ಘಟನೆಗಳ ಬಗೆಗೆ ಅಷ್ಟಾಗಿ ಗಮನ ಕೊಡದ ಅವರು ನಿಜಕ್ಕೂ ಆಸಕ್ತಿ ತಾಳಿದ್ದು ಮನುಷ್ಯಸ್ವಭಾವದಲ್ಲಿ. ಅಂದರೆ ಒಂದು ಪಾತ್ರ ತೆರೆದಿಡುವ ಪ್ರಾಮಾಣಿಕ ಅನುಭವದಲ್ಲಿ ಅಥವಾ ಒಂದು ಪಾತ್ರ ಕ್ರಮೇಣ ಸಹಜವಾಗಿ ಹೊಂದುವ ಬೆಳವಣಿಗೆಯಲ್ಲಿ. ಸಾಂಪ್ರಾದಾಯಿಕ ಮೌಲ್ಯಗಳನ್ನೊಪ್ಪಿಕೊಂಡ ಅವರ ಮನಸ್ಸು ಎಲ್ಲರಿಗೂ ಒಳಿತನ್ನು ಬಯಸುವ ಪ್ರಜ್ಞಾಪೂರ್ವಕ ಧೋರಣೆಯನ್ನು ಅಪ್ಪಿಕೊಂಡಿತು."[೧] ಮಾಸ್ತಿಯವರಲ್ಲಿರುವ ಜೀವನ ಶ್ರದ್ಧೆ, ಹಾಗೂ ಸಾಮಾಜಿಕ ಎಚ್ಚರಿಕೆ ಅವರ ಕತೆಗಳಲ್ಲಿ ಸಹಜವಾಗಿ ಮೂಡಿ ಬಂದಿವೆ. ಅವರ ಒಟ್ಟಾರೆ ಕತೆಗಳು ಈ ನೆಲೆಯಿಂದಲೇ ವ್ಯಕ್ತವಾಗುತ್ತವೆ. ಆ ಕಾರಣಕ್ಕಾಗಿ ಆಧುನಿಕ ಕನ್ನಡದ ಕತೆಗಳ ಸಂದರ್ಭದಲ್ಲಿ ಮಾಸ್ತಿಯವರು ವಿಶಿಷ್ಟವಾಗಿ ಕಾಣುತ್ತಾರೆ. ಭೂ ಪ್ರಶ್ನೆಯು ಮುಖ್ಯವಾಗಿ ಗಾಂಧಿವಾದಿ ನೆಲೆಯಲ್ಲಿ ವ್ಯಕ್ತಗೊಂಡಿದೆ. ಆಸ್ತಿಪರಿಕಲ್ಪನೆಯ ಖಾಸಗಿ ಭೂ ಒಡೆತನದ ನಿರಾಕರಣೆಯನ್ನು ಇಲ್ಲಿ ಕಾಣಬಹುದಾಗಿದೆ.

"**ಟಾಲ್‌ಸ್ಟಾಯ್ ಮಹರ್ಷಿಯ ಭೂರ್ಜ ವೃಕ್ಷಗಳು**" ಕತೆಯಲ್ಲಿ ಭೂಪ್ರಶ್ನೆಯನ್ನು ಉದಾರವಾದಿ ನೆಲೆಯಲ್ಲಿ ಮಾಸ್ತಿಯವರು ನೋಡಿರುವುದು ಕಂಡುಬರುತ್ತದೆ. ಇಲ್ಲಿ ಆಸ್ತಿಪರಿಕಲ್ಪನೆ ಕುರಿತು ಮುಖ್ಯವಾಗಿ ಈ ಕತೆಯಲ್ಲಿ ಚರ್ಚಿಸುತ್ತಾರೆ. ಆಸ್ತಿಯನ್ನು ಸಾಮಾಜಿಕ ಸೊತ್ತು ಎಂಬ ನೆಲೆಯಲ್ಲಿ ಟಾಲ್‌ಸ್ಟಾಯ್ ನೋಡುವುದು ಮತ್ತು ತನ್ನದೇ ಆದ ಆಸ್ತಿಯಲ್ಲಿ ಬೆಳೆದ ಭೂರ್ಜವೃಕ್ಷಗಳನ್ನು ಕತ್ತರಿಸುವ ಕುರಿತು ಅವನ ಮನಸ್ಸಿನಲ್ಲಿ ಅಸಮ್ಮತಿ ಉಂಟಾಗಿ ಮಾನಸಿಕ ಸಂಘರ್ಷಕ್ಕೆ ಒಳಗಾಗುವುದು ಈ ಕತೆಯ ಮುಖ್ಯವಸ್ತು. ಆದರೆ ಅವನ ಹೆಂಡತಿ ಆಸ್ತಿಯ ಅಗತ್ಯದ ಕುರಿತು ಒತ್ತು ನೀಡುವುದನ್ನೂ ಅದಕ್ಕೆ ತನ್ನದೇ ಆದ ಸಮರ್ಥನೆಗಳನ್ನು ನೀಡುವುದನ್ನೂ ಈ ಕತೆಯಲ್ಲಿ ಕಾಣಬಹುದು. ಟಾಲ್‌ಸ್ಟಾಯ್, ಹೆಂಡತಿಯ ಈ ವಾದವನ್ನು ಒಪ್ಪುವುದಿಲ್ಲ, ಒಪ್ಪದಿರಲೂ ಆಗುವುದಿಲ್ಲ. ಇಂಥ ಸಂಕೀರ್ಣಸ್ಥಿತಿಯೊಂದು ಕತೆಯಲ್ಲಿ ನಿರ್ಮಾಣಗೊಳ್ಳುತ್ತದೆ.

ಟಾಲ್‌ಸ್ಟಾಯ್ ಒಬ್ಬ ಶ್ರೀಮಂತ ಕುಲೀನ ಮಗನಾಗಿ ಹುಟ್ಟಿ ಸಮಾಜದ ಆಗುಹೋಗುಗಳನ್ನು ನೋಡುವ ಮಾನವೀಯ ಅಂತಃಕರಣವುಳ್ಳ ವ್ಯಕ್ತಿಯಾಗಿದ್ದಾನೆ. ಈತ ತನ್ನ ಮಧ್ಯವಯಸ್ಸಿನಲ್ಲಿ ತನ್ನ ಜೀವನ ಕುರಿತು ವೈರಾಗ್ಯ ಮನೋಭಾವನೆ ತಳೆದು ಪ್ರಾಣ ಕಳೆದುಕೊಳ್ಳುವುದು ಇದಕ್ಕೆ ಸೂಕ್ತ ಮಾರ್ಗ ಎಂದು ಕಂಡುಕೊಳ್ಳುತ್ತಾನೆ. ಆದರೆ ಇಂತಹ ವೈಭೋಗದಲ್ಲಿ ಜೀವಿಸುವುದು ಅಸಾಧ್ಯವೆಂದು ಮನಗಂಡು ಜನಸಾಮಾನ್ಯರ ನೋವಿಗೆ ಸ್ಪಂದಿಸಲು ಮುಂದಾಗುತ್ತಾನೆ. ಇಂತಹ ವಿಘಟನೆಯ ನಡುವೆ ಆತನಿಗೆ ಸಮಾಜಮುಖಿ ಆಸ್ತಿಪರಿಕಲ್ಪನೆಯಲ್ಲಿ ಆಗುವ ಗೊಂದಲಗಳನ್ನು ಈತ ವ್ಯಕ್ತಗೊಳಿಸುತ್ತಾನೆ.

ಈ ಆಸ್ತಿಯನ್ನು ಕೆಲವೇ ಮಂದಿ ಹೊಂದಿ ಶ್ರೀಮಂತರಾಗುವುದು, ಅವರಿಗೆ ತಕ್ಕ ಕಾನೂನು ರಚಿಸಿಕೊಂಡು ರಕ್ಷಣೆ ಪಡೆದು ಅನ್ಯಾಯ, ಶೋಷಣೆ ಸ್ಥಿರವಾಗಿರಲೆಂದು ಮಾಡುವ ಭೂಮಾಲೀಕರ ತಂತ್ರಗಳನ್ನು ಲೇಖಕರು ಬಯಲಿಗೆಳೆಯುತ್ತಾರೆ. ಅಲ್ಪಸಂಖ್ಯಾತರಾಗಿರುವ ಶ್ರೀಮಂತ ಭೂಮಾಲೀಕ ವರ್ಗವು ತಮ್ಮದೇ ಆದ ಸರ್ಕಾರವನ್ನು ರಚಿಸಿಕೊಂಡು ರಾಷ್ಟ್ರದಲ್ಲಿ ಯುದ್ಧ ಆರಂಭಿಸುವುದು ನಾಗರಿಕತೆಯ ರೋಗವಾಗಿದೆ ಎಂದು ಮಾಸ್ತಿ ವಿಷಾದ ವ್ಯಕ್ತಪಡಿಸುತ್ತಾರೆ.

ಆಸ್ತಿ ಕುರಿತು "ಆಸ್ತಿ ಮನುಜಕುಲದ ಕ್ಷೇಮಕ್ಕೆ ಎಡರಾದ ಮೊಮ್ಮಲ ಕುತ್ತ. ಎಂದ ಮೇಲೆ ತಾನು ಇನ್ನು ಮುಂದೆ ತನ್ನ ಪಿತ್ರಾರ್ಜಿತವಾದ ಆಸ್ತಿಯನ್ನು ಬಳಸಬಾರದು. ತಾನು ಗಳಿಸಿದ್ದ ಆಸ್ತಿಯನ್ನಾದರೂ ತನ್ನದೆಂದು

ಇರಿಸಿಕೊಳ್ಳಲಾಗದು."[೨]

ಲೋಕದ ವಿಚಾರ ಕುರಿತ ಉದಾತ್ತಮನೋಭಾವನೆಯನ್ನು ಟಾಲ್‌ಸ್ಟಾಯ್‌ನಲ್ಲಿ ಮಾಸ್ತಿಯವರು ಸಮೀಕರಿಸುತ್ತಾರೆ. ಟಾಲ್‌ಸ್ಟಾಯ್ ಮಹರ್ಷಿಯಾಗಿ ಎಲ್ಲರಂತೆ ತುಳಿದ ಹಾದಿಯನ್ನು ಈತ ತುಳಿಯಲಿಲ್ಲ ತನ್ನದೇ ಹಾದಿಯಲ್ಲಿ ಅವರು ನಡೆದರು.

"ಪಿತ್ರಾರ್ಜಿತ ಆಸ್ತಿ ಕೂಡದು. ತಾನು ಗಳಿಸಿದ ಆಸ್ತಿ ಕೂಡದು. ತನ್ನ ಪುಸ್ತಕಗಳ ಮೇಲೆ ಸ್ವಾಮ್ಯದ ಕಾಣಿಕೆ ಕೂಡದು. ತನ್ನದು ಎಂದು ವರಮಾನ ಕೂಡದು."[೩] ಎಂದು ಆಸ್ತಿಯ ಕುರಿತು ವೈರಾಗ್ಯ ಭಾವನೆಯನ್ನು ಈ ಮಹರ್ಷಿಯು ವ್ಯಕ್ತಪಡಿಸುತ್ತಾನೆ. ಆದರೆ ಆತನನ್ನು ನಂಬಿಕೊಂಡ ಕುಟುಂಬ, ಸುಖವನ್ನೇ ಉಂಡ ಜನರು ಅವರ ಮನೆಯಲ್ಲಿದ್ದಾರೆ. ಈತ ಒಬ್ಬನಿದ್ದರೆ ಹಸಿದುಕೊಂಡು ಇರಬಹುದು, ಆದರೆ ಇನ್ನುಳಿದವರು ಹಸಿದಿರಬೇಕಲ್ಲವೇ ಎಂಬುದು ಆಸ್ತಿಯ ಅಗತ್ಯದ ಕುರಿತು ಈತನ ಪತ್ನಿಯ ಅಭಿಪ್ರಾಯ. ಈ ಪ್ರಭುವಿನ ಪತ್ನಿ ಸೋಫಿಯಾದೇವಿ ಕೂಡಾ ಆತನ ವಾದವನ್ನು ನಿರಾಕರಿಸುತ್ತಾಳೆ. ತನ್ನ ಗಂಡ ಹೇಳಿದ್ದು ಹೇಳಲಿ, ಈ ಆಸ್ತಿ ವರಮಾನ ಇಲ್ಲದಿದ್ದರೆ ಯಾರೂ ಉಳಿಯುವಂತಿಲ್ಲ ಎಂಬ ನಿಲುವನ್ನು ತಾಳುತ್ತಾಳೆ.

ಈ ಮಹರ್ಷಿಯ ಮಿತ್ರರಲ್ಲಿ ಆಸ್ತಿ ಪರಿಕಲ್ಪನೆಯ ಕುರಿತ ನಿಲುವುಗಳು ವ್ಯಕ್ತಗೊಂಡಿವೆ. "ಚೆರ್ಟ್‌ಕಾಫ್ ಅತ್ಯುಗ್ರ ಸಮತಾವಾದಿ. ಆಸ್ತಿ ಸಮಾಜವನ್ನು ಹಾಳುಮಾಡಿರುವ ವ್ಯವಸ್ಥೆ ಎನ್ನುವುದು ಇವನದೂ ದೃಢವಾದ ನಂಬಿಕೆ. ಟಾಲ್‌ಸ್ಟಾಯ್ ಪ್ರತಿಪಾದಿಸಿದ ಸ್ವಾಮ್ಯ ವಿರುದ್ಧವಾದವನ್ನು ಎತ್ತಿ ಹಿಡಿಯುವವರಲ್ಲಿ ಇವನು ಪ್ರಮುಖ. ಗಾರ್ಕಿ ಸಹ ಆಸ್ತಿಗೆ ವಿರೋಧಿಯೇ ಆದರೆ ಆಸ್ತಿ ಇರಲಿ ಎನ್ನುವವರು ಆಸ್ತಿಯ ವ್ಯವಸ್ಥೆಯನ್ನು ದುರುಪಯೋಗ ಮಾಡುವಂತೆ ಆಸ್ತಿ ಬೇಡ ಎನ್ನುವ ಈ ಹೊಸಬರೂ ತಮ್ಮ ನೀತಿಯನ್ನು ದುರುಪಯೋಗ ಮಾಡುತ್ತಾರೆ ಎನ್ನುವುದು ಇವನ ನಿಲುವು."[೪]

ಖಾಸಗಿ ಆಸ್ತಿ ಪರಿಕಲ್ಪನೆ ಒಟ್ಟಾರೆ ಇರಬಾರದು ಎಂಬುದು ಇಲ್ಲಿ ವ್ಯಕ್ತವಾಗುತ್ತದೆ. ಇಲ್ಲಿ ಖಾಸಗಿ ಒಡೆತನದ ಆಪಾಯಗಳನ್ನು ಸೂಚಿಸುವುದನ್ನು ಕಾಣುತ್ತೇವೆ. ಈ ಪ್ರಭುವಿನ ಮನೆಯ ಬಳಿ ಒಂದು ಭೂರ್ಜವನವಿದ್ದು,ಅದನ್ನು ಟಾಲ್‌ಸ್ಟಾಯ್ ತರುಣನಾಗಿದ್ದ ಸಂದರ್ಭದಲ್ಲಿ ನೆಟ್ಟಿರುತ್ತಾನೆ. ಈಗ ಅವು ಬೆಳೆದು ಹೆಮ್ಮರವಾಗಿ ವನವಾಗಿ ರೂಪುಗೊಂಡಿವೆ. ಈ ಮರಗಳನ್ನು ಕಡಿಸಿ ಬಂದ ಹಣದಲ್ಲಿ ಜೀವನ ನಿರ್ವಹಣೆ ಮಾಡಲು ಆತನ ಹೆಂಡತಿ ಸೂಚಿಸುತ್ತಾಳೆ. ಅದಕ್ಕೆ ಮಹರ್ಷಿ ನಿರಾಕರಿಸುತ್ತಾನೆ.

ಕೆಲವು ದಿನಗಳ ನಂತರದಲ್ಲಿ ಗ್ರಾಮದ ಜೀತದಾಳುಗಳು ಚೆರ್ಟ್‌ಕಾಫ್ ಮತ್ತು ಟಾಲ್‌ಸ್ಟಾಯ್ ಮಹರ್ಷಿಯನ್ನು ಕಂಡು ಮನೆಕಟ್ಟಲು ಮರಗಳನ್ನು ಕೇಳುತ್ತಾರೆ. ಈ ಮಹರ್ಷಿಯು ಏನೂ ಹೇಳದೆ, ಚೆರ್ಟ್‌ಕಾಫ್ ಕೂಡಾ "ಇದಕ್ಕೇನು ಅಪ್ಪಣೆ ಕೊಡುವುದು ಜೀತ ಉಂಟು ಮರ ಉಂಟು" ಎಂದು ಹೇಳುತ್ತಾನೆ. ಈ ಮರದ ವಿಚಾರದಲ್ಲಿ ಹೆಂಡತಿ ಸೋಫಿಯಾ ಮತ್ತು ಮಹರ್ಷಿಯ ನಡುವೆ ಜಗಳ ಆಗುತ್ತದೆ. ಕೊನೆಗೆ ಜೀತದ ಜನರು ಮರಗಳನ್ನು ಕಡಿಯತೊಡಗಿದ್ದು ಕಂಡು ಒಡತಿಯೂ ಕೂಡಾ ಬೇರೆಯವರನ್ನು ಕರೆಸಿ ಅದನ್ನು ತಡೆಯಲು ಯತ್ನಿಸಿದಳು. ಆದರೆ ಈಕೆಯ ಅಡ್ಡಿಯಿಂದ ಏನೂ ಮಾಡಲಾಗದೆ ಇಡೀ ವನವೇ ಆರು ತಿಂಗಳ ಒಳಗೆ ನೆಲಸಮವಾಗುತ್ತದೆ.

ಇಷ್ಟೆಲ್ಲಾ ಆದರೂ ಮಹರ್ಷಿ ಏನನ್ನು ಹೇಳದೆ ಮೌನವಹಿಸುತ್ತಾರೆ. ಆದರೆ ಈತನ ಪತ್ನಿ ತನ್ನ ಯತ್ನವೆಲ್ಲಾ ವ್ಯರ್ಥವಾಗಿ, ಕೊನೆಗೆ ಹುಚ್ಚಳಾಗುತ್ತಾಳೆ. ಆ ನಂತರದಲ್ಲಿ ಮಹರ್ಷಿಯು ಮನೆಯನ್ನು ಬಿಟ್ಟು ಹೊರಡುತ್ತಾರೆ.

ಈ ಕತೆಯಲ್ಲಿ ಕೊನೆಗೂ ಆಸ್ತಿಯು ಸಾಮಾಜಿಕ ಸ್ವತ್ತಾಗಬೇಕೋ ಅಥವಾ ವೈಯಕ್ತಿಕ ಒಡೆತನಕ್ಕೆ ಒಳಪಡಬೇಕೋ ಎಂಬ ಪ್ರಶ್ನೆ ಉಳಿದೇ ಉಳಿಯುತ್ತದೆ. ಆದರೆ ಕತೆಯ ವಿವರಗಳನ್ನು ಗಮನಿಸಿದಾಗ ಆಸ್ತಿಯ ಸಂಗ್ರಹಕ್ಕಿಂತ ಸಮಾನ ಹಂಚಿಕೆಯ ಆಶಯ ಅಥವಾ ಸಹಕಾರಿ ದುಡಿಮೆಯ ಆಶಯಗಳು ಇಲ್ಲಿ ಮುಖ್ಯವಾಗಿರುವಂತೆ ಕಾಣುತ್ತವೆ. ಕಾನೂನುಗಳನ್ನು ರೂಪಿಸುವ ಕೆಲವೇ ಮಂದಿ ಶ್ರೀಮಂತ ಭೂಮಾಲೀಕರು ಮತ್ತು ಅವರೇ ರಚಿಸಿಕೊಂಡ ಸರ್ಕಾರ ಅದು ಬಡ ರೈತ ಕೂಲಿಕಾರ್ಮಿಕರ ಮೇಲೆ ನಡೆಸುವ ದಬ್ಬಾಳಿಕೆ, ಶೋಷಣೆಗಳ ಕುರಿತು ಮಾಸ್ತಿಯವರಲ್ಲಿ ಟಾಲ್‌ಸ್ಟಾಯ್‌ಗೆ ಇರುವಂತಹ ಮರುಕವೇ ಇದೆ. ಆದರೆ ಟಾಲ್‌ಸ್ಟಾಯ್

ಯಾವುದು ಸರಿ ಯಾವುದು ತಪ್ಪು ಎಂಬ ಖಚಿತ ನಿರ್ಧಾರಕ್ಕೆ  ಬರಲಾಗದೆ ಮಾನಸಿಕ ತೊಳಲಾಟದಲ್ಲಿ ಕೊನೆಯುಸಿರೆಳೆಯುವುದು ಆ ಪ್ರಶ್ನೆಯನ್ನು ಮತ್ತಷ್ಟು ಸಂಕೀರ್ಣಗೊಳಿಸುತ್ತದೆ. ಕೊನೆಗೂ ಇಲ್ಲಿ ಆಸ್ತಿಯ ಪ್ರಶ್ನೆ ಪರಿಹಾರವಾಗದೇ ಉಳಿಯುತ್ತದೆ.

**ಕೊನೆ ಟಿಪ್ಪಣಿ**

೧. ಮಾವಿನಕೆರೆರಂಗನಾಥ್, ಮಾಸ್ತಿ ಅವರ ಸಮಗ್ರಕತೆಗಳು,೨, ಮುನ್ನುಡಿ ಪುಟ ೧೪.

೨. ಶ್ರೀನಿವಾಸ, ಟಾಲ್‌ಸ್ಟಾಯ್ ಮಹರ್ಷಿಯ ಭೂರ್ಜ ವೃಕ್ಷಗಳು,ಸಣ್ಣ ಕತೆಗಳು೧೩, ಪುಟ ೫೫,

೩. ಅದೇ ಪುಟ ೫೬

೪. ಅದೇ ಪುಟ ೫೭

### ೪.೧.೨ ಕುವೆಂಪು : ರೈತ ಬದುಕಿನ ವಾಸ್ತವ ಚಿತ್ರಣ

ಕುವೆಂಪುರವರು ಕನ್ನಡ ಸಾಹಿತ್ಯಲೋಕದಲ್ಲಿ ಸಮಗ್ರತೆ ಪಡೆದ ವ್ಯಕ್ತಿತ್ವವಾಗಿದೆ. ಕುವೆಂಪು ಅವರ ಎಲ್ಲಾ ಕೃತಿಗಳೆಲ್ಲವೂ ಸಂಕೀರ್ಣ ಸ್ವರೂಪವನ್ನು ಒಳಗೊಂಡು, ಸಾಮಾಜಿಕ ಬದುಕಿನ ಎಲ್ಲಾ ಮಗ್ಗುಲುಗಳಲ್ಲಿ ಚಾಚಿಕೊಂಡಿವೆ. ಆದ್ದರಿಂದ ಇವರ ಕಥನಗಳಲ್ಲಿ ರೈತ ಕಾಳಜಿಯುಳ್ಳ ಆಶಯಗಳನ್ನಷ್ಟೇ ಮುಖ್ಯವಾಗಿ ಈ ಅಧ್ಯಯನ ಗಮನಿಸುತ್ತದೆ. ಈ ಹಿನ್ನೆಲೆಯಲ್ಲಿ ಕುವೆಂಪು ಅವರಿಗೆ ರೈತ ಕಾಳಜಿ ಮುಖ್ಯವಾಗಿ ಕಂಡಿರುವುದನ್ನು ಗುರುತಿಸಲಾಗುತ್ತದೆ. ಭಾರತದ ಬಹುಸಂಖ್ಯಾತ ವರ್ಗವಾದ ರೈತ ಸಮುದಾಯದ ಮೇಲಿರುವ ಪ್ರೀತಿಯ ಅನನ್ಯತೆಯನ್ನು ಅವರ ಕೃತಿಗಳಲ್ಲಿ ಕಾಣಬಹುದಾಗಿದೆ. ಇದೇ ಕಾರಣಕ್ಕಾಗಿ ಅವರ ರೈತ ಕಾಳಜಿಯ ಬಗೆಗಿನ ನೇಗಿಲಯೋಗಿ, ಅನ್ನದಾತ ಕವಿತೆಗಳಲ್ಲದೆ, ಸಾಲದಮಗು, ಮಲೆಗಳಲ್ಲಿ ಮದುಮಗಳು, ಕಾನೂರು ಹೆಗ್ಗಡತಿಗಳಂಥ ಕಥನಗಳಲ್ಲಿ ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಅವರ ಕಥಾನಕಗಳಲ್ಲಿ ರೈತ ಕಾಳಜಿಗಳು, ಜೀತಗಾರರ ಜೀವನ ಚಿತ್ರಣಗಳು ಮುಖ್ಯವಾಗಿ ಕಂಡುಬರುತ್ತವೆ. ಮಲೆನಾಡಿನ ಬದುಕಿನ ಸಮಗ್ರತೆಯನ್ನು ಹಾಗೂ ಈ ಭಾಗದ ಭೂ ಸಮಸ್ಯೆಯನ್ನು ಹಾಗೂ ರೈತಕಾಳಜಿಯನ್ನು ಅವರು ಸಮರ್ಥವಾಗಿ ಕಟ್ಟಿಕೊಟ್ಟಿರುವುದನ್ನು ಕಾಣುತ್ತೇವೆ.

"**ಧನ್ವಂತರಿಯ ಚಿಕಿತ್ಸೆ**" ರೈತರ ಸಮಸ್ಯೆಯನ್ನು ಕುರಿತ ಅತ್ಯಂತ ಧ್ವನ್ಯಾತ್ಮಕವಾಗಿ ವ್ಯಕ್ತವಾಗಿಗೊಳಿಸುವ ಕತೆ. ವಿಶ್ವಾಮಿತ್ರ ಮತ್ತು ಪರುಶುರಾಮರ ಭೂ ಲೋಕದ ಭೇಟಿ ಅನೇಕ ವಿಸ್ಮಯಗಳನ್ನು ತೆರೆದಿಡುತ್ತದೆ. ಆಧುನಿಕತೆಯ ಪರಿಣಾಮದಿಂದಾಗಿ ನಾಗರಿಕತೆಯ ಲಕ್ಷಣಗಳನ್ನು ವಾಸ್ತವದ ನೆಲೆಯಲ್ಲಿ ತೆರೆದಿಡುತ್ತಾರೆ.

ವಿಶ್ವಾಮಿತ್ರ ಮತ್ತು ಪರುಶುರಾಮರಿಬ್ಬರೂ ಆಧುನಿಕ ಪ್ರಪಂಚದ ಭೂಮಿಯ ವಿಸ್ಮಯಗಳ ಕುರಿತು ಚರ್ಚಿಸುತ್ತಾರೆ. "ಹಿಂದೆ ಅವರಿದ್ದ ಕಾಲದ ಭೂಮಿಗೂ ಈಗಿನ ಕಾಲದ ಭೂಮಿಗೂ. ನಾಗರಿಕತೆ ಮತ್ತು ಸಂಸ್ಕೃತಿಗಳೊಡನೆ ಅವುಗಳನ್ನು ಕ್ಷಣ ಮಾತ್ರದಲ್ಲಿ ಬೇಕಾದರೂ ಹಾಳುಮಾಡಿಬಿಡುವ ಅನಾಗರಿಕತೆ ಮತ್ತು ಅಸಂಸ್ಕೃತಿಗಳೂ, ಜೀವವನ್ನು ಸಂರಕ್ಷಿಸುವ ವೈದ್ಯ ವಿದ್ಯೆಯೊಡನೆ ರೋಗಕಾರಿಗಳಾದ ದುಷ್ಟ ಪದ್ಧತಿಗಳೂ, ಸಿರಿಯೊಡನೆ ಬಡತನವೂ, ರೈಲು ಮೋಟಾರು ವಿಮಾನ ಅಲೆಯಂಚೆ, ವಿದ್ಯುಚ್ಛಕ್ತಿ, ಬಂದೂಕು, ಬಾಂಬು ಕಾಗದ ಮುದ್ರಾಯಂತ್ರ, ಇತ್ಯಾದಿ ಇತ್ಯಾದಿಗಳನ್ನು ಕಾಣುತ್ತಾ ಹೊಗಳುತ್ತಾ ವಿಮರ್ಶಿಸುತ್ತಾ ನವೀನ ಶರವೇಗದಿಂದ ದೊಡ್ಡ ನಗರವೊಂದಕ್ಕೆ ಬಂದಿಳಿದರು."[೧]

ಇಂತಹ ದೃಶ್ಯಗಳನ್ನು ವೀಕ್ಷಿಸಿದ ಈ ಇಬ್ಬರು ಎಲ್ಲಿಯೂ ದುಃಖದ ಛಾಯೆಯನ್ನು ನೋಡದೆ ಹಿಂತಿರುಗುತ್ತಿದ್ದ ಒಂದು ಸಣ್ಣ ಗದ್ದೆಯ ಕೋಗಿನ ತುದಿಯಲ್ಲಿ ಒಂದು ಹುಲ್ಲುಜೋಪಡಿಯಲ್ಲಿ ನರಳುವ ಸದ್ದೊಂದು ಅವರಿಗೆ ಕೇಳಿಸುತ್ತದೆ. ಈ ಸದ್ದಿನತ್ತ ಹೊರಟ ಅವರು ರೈತನೊಬ್ಬ ನರಳುತ್ತಿದ್ದುದನ್ನು ಕಾಣುತ್ತಾರೆ. ಅವನಿಗಾಗಿರುವ ನೋವು ನರಳಿಕೆಯನ್ನು ಎಲ್ಲಾ ವೈದ್ಯರಿಂದಲೂ ಪರೀಕ್ಷೆ ಮಾಡಿಸುತ್ತಾರೆ. ಚಿನ್ನದ ನಾಣ್ಯವನ್ನು ನೀಡಿ ವೈದ್ಯರನ್ನು ಕರೆಸುತ್ತಾರೆ ಯಾವುದಕ್ಕೂ ಜಗ್ಗದ ಅವನ ರೋಗಕ್ಕೆ ಅವರ ಚಿಕಿತ್ಸೆ ಫಲಕಾರಿಯಾಗುವುದಿಲ್ಲ. ಅಂತಿಮವಾಗಿ ಧನ್ವಂತರಿ ವೈದ್ಯರನ್ನು ಕರೆಸುತ್ತಾರೆ.

ಈ ಧನ್ವಂತರಿ ವೈದ್ಯ ಈ ರೋಗ ಕುರಿತು ಇದು ದೈಹಿಕ ರೋಗವಲ್ಲ ಎಂದು ತಿಳಿಸುತ್ತಾನೆ. ಋಷಿಗಳಿಬ್ಬರಿಗೂ ಧನ್ವಂತರಿಯು ಯಂತ್ರದಲ್ಲಿ ಕಣ್ಣಿಟ್ಟು ನೋಡುವಂತೆ ಸೂಚಿಸುತ್ತಾನೆ. ಆಗ "ರೈತನ ಎದೆಯ ಮೇಲೆ ಸಮಸ್ತ ಚಕ್ರಾಧಿಪತ್ಯವೂ ಮಹಾ ಪರ್ವತಾಕಾರವಾಗಿ ನಿಂತಿತ್ತು. ಋಷಿಗಳು ನೋಡಿಕೊಂಡು ಬಂದಿದ್ದ ಆ ಮುಖ್ಯ ಪಟ್ಟಣ ಅದರ ನೆತ್ತಿಯಲ್ಲಿ ರಾಜಿಸುತ್ತಿದೆ. ಅಲ್ಲಿಯ ದೇವಾಲಯಗಳೂ ವಿದ್ಯಾನಿಲಯಗಳೂ ಕ್ರೀಡಾಮಂದಿರಗಳೂ ಪ್ರಮೋದವನಗಳೂ ಕರ್ಮಸೌಧಗಳೂ ಕಾರ್ಖಾನೆಗಳು ರಾಜಪ್ರಾಸಾದಗಳೂ ತಮ್ಮ ಭಾರವನ್ನೆಲ್ಲಾ ರೈತನ ಎದೆಯ ಮೇಲೆ ಹಾಕಿ, ಸಂಸ್ಕೃತಿ ಮತ್ತು ನಾಗರಿಕತೆ ಎಂಬ ಕೀರ್ತಿಯಿಂದ ಮೆರೆಯುತ್ತಿವೆ."[೨]

ಈ ವಿಚಾರ ತಿಳಿದು ವಿಶ್ವಾಮಿತ್ರನು ಹೂಂಕರಿಸುತ್ತಾನೆ. "ಹೋಗಿ, ಆ ರೈತನ ಎದೆಯ ಮೇಲಿರುವ ಭಾರವನ್ನೆಲ್ಲಾ ನೆಲಕ್ಕುರುಳಿಸಿ ಎಂದು ಗರ್ಜಿಸಿ ಕೈಬೀಸಿದನು. ಒಡನೆಯೆ ರಾಜ್ಯದಲ್ಲಿ ಸಿಡಿಲು ಮಳೆ ಬಿರುಗಾಳಿ ಭೂಕಂಪಗಳು ತೋರಿ ಉತ್ಪಾತವಾಯಿತು. ನೋಡುತ್ತಿದ್ದಂತೆ, ರಾಜವೇಶ್ಮ ಉರುಳಿತು. ದೇವಾಲಯದ ಗೋಪುರಗಳೂ ಮಹಾರವದಿಂದ ಕೆಳಗೆ ಬಿದ್ದುವು...ರೈತನ ನರಳುವಿಕೆ ಕ್ರಮೇಣ ಕಡಮೆಯಾಗುವಂತೆ ತೋರಿತು.

ಶ್ವಾಸೋಚ್ಛ್ವಾಸ ಸಹಜವಾಗತೊಡಗಿತು. ಕಣ್ಣಿನಲ್ಲಿ ಸಂತೋಷದ ಬೆಳಕೂ ಮಿಂಚಿತು... ಮತ್ತೆ... ತುಸು ಹೊತ್ತಿನಲ್ಲಿಯೇ, ನೋಡುತ್ತಿದ್ದವರಿಗೆ ಆಶ್ಚರ್ಯವಾಗುವಂತೆ, ನಗುಮೊಗನಾಗಿ ಮೇಲೆದ್ದು ನಿಂತು, ಕೈಮುಗಿದನು ಋಷಿಗಳಿಗೆ"[೩]

ಈ ಕತೆಯಲ್ಲಿ ಆಧುನಿಕ ಜಗತ್ತಿನಲ್ಲಿ ರೈತ ಅನುಭವಿಸುತ್ತಿರುವ ನೋವನ್ನು ಕುರಿತು ಕುವೆಂಪುರವರು ಸಾಂಕೇತಿಕವಾಗಿ ಹೇಳಿದ್ದಾರೆ. ಭೂಮಿ ಪ್ರಶ್ನೆ ಬೇರೆಯಲ್ಲ ರೈತ ಪ್ರಶ್ನೆ ಬೇರೆಯಲ್ಲ. ಇಲ್ಲಿ ಇಡೀ ವಿಶ್ವದ ವ್ಯವಸ್ಥೆಯೇ ರೈತನ ಮೇಲೆ ನಿಂತಿದೆ. ರೈತನ ಸಮಸ್ಯೆಗಳು ಹೆಚ್ಚಿದಂತೆ ಲೋಕದ ಸಮಸ್ಯೆಗಳು ಹೆಚ್ಚುತ್ತವೆ. ಇಂದಿನ ಜಾಗತೀಕರಣದ ಪರಿಣಾಮಗಳು ಕೃಷಿ ಜಗತ್ತಿನ ಮೇಲೆ ಬೀರುತ್ತಿರುವ ಋಣಾತ್ಮಕ ಪರಿಣಾಮಗಳನ್ನು ಗಮನಿಸಿದರೆ, ಅವು ರೈತನ ಮೇಲೆ ಉಂಟುಮಾಡುತ್ತಿರುವ ಪರಿಣಾಮಗಳು ಎಂಥವು ಎನ್ನುವುದನ್ನು ಗುರುತಿಸಬಹುದು. ಇವೇ ಕಾರಣವಾಗಿ ರೈತನ ಆತ್ಮಹತ್ಯೆಯಂಥ ದುರಂತಗಳು ಸಂಭವಿಸುತ್ತಿವೆ ಎನ್ನುವುದು ಕುವೆಂಪು ದರ್ಶನದ ಒಂದು ಭಾಗವಾಗಿ ಈ ಕತೆಯಲ್ಲಿ ಮೂಡಿಬಂದಿದೆ. ರೈತನ ಸಮಸ್ಯೆಗಳು ಅಪರಿಹಾರ್ಯವಲ್ಲ. ಆದರೆ ಅವನ್ನು ಸರಿಯಾಗಿ ಅರ್ಥಮಾಡಿಕೊಂಡು ಪರಿಹರಿಸುವ ನಿಜವಾದ ಮಾನವೀಯತೆ ಮತ್ತು ಸಂಕಲ್ಪ ಶಕ್ತಿಯ ಅಗತ್ಯವನ್ನು ಕುವೆಂಪು ಒತ್ತಿ ಹೇಳುತ್ತಾರೆ.

**"ಸಾಲದ ಮಗು"** ಕತೆ ಊಳಿಗಮಾನ್ಯ ವ್ಯವಸ್ಥೆಯ ಕ್ರೌರ್ಯ ದಲಿತರ ಮೇಲೆ ಆಗುವ ದೌರ್ಜನ್ಯಗಳ ಚಿತ್ರಣವಾಗಿದೆ. ಕುವೆಂಪು ಅವರ ಕಾಲಘಟ್ಟದ ಊಳಿಗಮಾನ್ಯಶಾಹಿ, ವ್ಯವಸ್ಥೆಯ ದಲಿತ ವರ್ಗಗಳನ್ನು, ಶೋಷಿಸುತ್ತಿದ್ದ, ಅವರ ಮೇಲೆ ದೌರ್ಜನ್ಯ ನಡೆಸುತ್ತಿದ್ದ ಅಂಶಗಳು ಈ ಕತೆಯಲ್ಲಿ ಕಂಡು ಬರುತ್ತದೆ.

ಜೀತಗಾರರ ಬದುಕಿನ ದುರಂತಮಯ ಚಿತ್ರಣವು ಈ ಕತೆಯಲ್ಲಿ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಅನಾಥ ಬಾಲಕನಾದ ಸುಬ್ಬ, ತಂದೆ ತಾಯಿ ಇಲ್ಲದ ತಬ್ಬಲಿಯಾಗಿರುತ್ತಾನೆ. ಸುಬ್ಬನ ತಂದೆ ರಂಗ ಊರಗೌಡರ ಒಕ್ಕಲು ಮಗನಾಗಿ ತಾನು ಮದುವೆಯಾಗಬೇಕಾದ ಹೆಣ್ಣಿಗೆ ತೆರ ಕೊಡುವುದಕ್ಕಾಗಿ ಗೌಡರಿಂದ ಮುನ್ನೂರು ರೂಪಾಯಿಗಳ ಸಾಲವನ್ನು ಮಾಡಿರುತ್ತಾನೆ. ಈ ಸಾಲವನ್ನು ತೀರಿಸುವ ಮುನ್ನವೇ ರೇಷ್ಮೆಕಾಯಿಲೆ ಬಂದು ಸಾವನ್ನಪ್ಪುತ್ತಾನೆ. ಇಲ್ಲಿ ಜೀತಗಾರರ ಪ್ರಶ್ನೆಯ ಜೊತೆಗೆ ಆರ್ಥಿಕ ಪ್ರಶ್ನೆಯೂ ಮುಖ್ಯವಾಗಿರುವುದನ್ನು ಗಮನಿಸಬಹುದಾಗಿದೆ. ದಲಿತ ಕುಟುಂಬದ ರಂಗ ಹಾಗೂ ಸುಬ್ಬ ಈ ಇಬ್ಬರು ಭೂಮಾಲೀಕರ ಜೀತದಾಳುಗಳಾಗಿದ್ದಾರೆ. ಪಡೆದ ಸಾಲ ತೀರಿಸುವುದು, ಒಡೆಯರಿಗೆ ವಿಧೇಯರಾಗಿರುವುದು ದಲಿತರ ಪರಿಸ್ಥಿತಿಯಾಗಿದೆ.

ಆ ಕಾಲದ ಜೀತ ವ್ಯವಸ್ಥೆಯ ನೆಲೆಯನ್ನು ಕುವೆಂಪುರವರು ಸಾಲದಮಗು ಕತೆಯಲ್ಲಿ ಕರುಣಾರ್ದ್ರವಾಗಿ ಚಿತ್ರಿಸುತ್ತಾರೆ. ಅಪ್ಪ ಮಾಡಿದ ಸಾಲ ತೀರಿಸಲಿಕ್ಕಾಗಿ ಸುಬ್ಬ ಗೌಡರ ಮನೆಯ ಜೀತದಾಳಾಗಿ ಜೀವಿತಾವಧಿಗೆ ನೇಮಕಗೊಂಡಿರುತ್ತಾನೆ. ಭೂಮಾಲೀಕರ ದರ್ಪ, ದಬ್ಬಾಳಿಕೆ, ಅಮಾನವೀಯ ವರ್ತನೆ ಆಕಾಲದ ಚಿತ್ರಣ ಸಹಜವಾಗಿಯೇ ಮೂಡಿಬಂದಿರುವುದನ್ನು ಕಾಣಬಹುದಾಗಿದೆ.

ಈ ಕತೆಯಲ್ಲಿ ಮಲೆನಾಡಿನ ರೌದ್ರವತೆ, ಭೀಕರತೆ, ಮಳೆಯ ಚಿತ್ರಣವನ್ನು ಪ್ರಾದೇಶಿಕ ನೆಲೆಯಲ್ಲಿ ಚಿತ್ರಿಸಿರುವುದನ್ನು ಕಾಣುತ್ತೇವೆ. ಸುಬ್ಬ ಗದ್ದೆಯ ಅಂಚನ್ನು ದಾಟುತ್ತಿದ್ದಾಗ ಕಾಲುಜಾರಿಬಿದ್ದು ಬೆಳಕನ್ನು ಕಟ್ಟಿಕೊಂಡು ಬಂದಿದ್ದ ಲಾಟೀನು ಒಡೆದ ಪ್ರಸಂಗವನ್ನು, ಬೆಳಕನ್ನು ಕತ್ತಲೆ ಕಿತ್ತುಕೊಂಡಿದ್ದರ ಸಂಕೇತವಾಗಿ ಅಭಿವ್ಯಕ್ತಿಸುತ್ತಾರೆ. ಈ ಹಂತದಲ್ಲಿಯೇ ಸುಬ್ಬನ ಜೀವ ಹಾರಿ ಹೋಗುತ್ತದೆ. ಉಳಿದಿರುವುದು ಬರೀ ದೇಹ ಮಾತ್ರ.ಒಂದು ರೀತಿಯಲ್ಲಿ ಗೌಡರು ಸುಬ್ಬನಿಗೆ ಜೀವಾವಧಿ ಶಿಕ್ಷೆ ಕೊಟ್ಟಂತೆ ಕಂಡುಬರುತ್ತದೆ.

ಇಲ್ಲಿ ಕೂಣಿ ತುಂಬ ಮೀನುಗಳು ತುಂಬಿ ಸದ್ದು ಮಾಡುತ್ತಿವೆ. ಅದರೊಳಗೆ ಮೀನುಗಳನ್ನು ತಿನ್ನಲು ಸೇರಿಕೊಂಡಿದ್ದ ಕೃಷ್ಣಸರ್ಪ ಬುಸುಗುಡುತ್ತಿದೆ. ಅದರಿಂದ ತಪ್ಪಿಸಿಕೊಂಡು ತಮ್ಮ ಪ್ರಾಣರಕ್ಷಣೆಗಾಗಿ ಹಲವು ಮೀನುಗಳು ಹೋರಾಟ ನಡೆಸುತ್ತವೆ. ಮೀನುಗಳು ಹೊರಕ್ಕೆ ಒಳಕ್ಕೆ ಹಾರಿ ಹಾರಿ ಬೀಳುತ್ತವೆ. ಇತ್ತ ಅನಾಥ ಸುಬ್ಬನನ್ನು ಕಂಡ ಕೃಷ್ಣಸರ್ಪ ತನ್ನ ಬೇಟೆಯನ್ನು ಕದಿಯಲು ಬಂದವನೆಂಬಂತೆ ದ್ವೇಷದಿಂದ ಕಚ್ಚಿ, ಕೂಣಿಯಲ್ಲಿದ್ದ ಮೀನುಗಳಿಗೆ ವಿಮೋಚನೆ ನೀಡಿ ಸುಬ್ಬನಿಗೆ ಮರಣದಂಡನೆಯ ಶಿಕ್ಷೆ ವಿಧಿಸಿ ಕತ್ತಲಲ್ಲಿ ಮರೆಯಾಯಿತು. ಕೃಷ್ಣಸರ್ಪ ಕಚ್ಚಿದ ತಕ್ಷಣವೇ ಸುಬ್ಬಾ ಕಿಟ್ಟನೆ ಚೀರಿ,ವಿಷವೇರಿ ಭೂಮಿತಾಯಿಯ ತಬ್ಬಿಕೊಂಡು ಅಂಗಾತ ಬೀಳುತ್ತಾನೆ. ಇತ್ತ

ಗೌಡರು ಸುಬ್ಬ ಬೆಳಗಾದರೂ ಬರಲಿಲ್ಲವಲ್ಲಾ, ದೊಡ್ಡ ಬುಟ್ಟಿಯಲ್ಲಿ ಮೀನು ತರಲಿಲ್ಲವಲ್ಲಾ ಎಂಬ ಆತಂಕದಲ್ಲಿ ಮುಳುಗಿರುತ್ತಾರೆ. ಸುಬ್ಬನ ಹುಡುಕಾಟಕ್ಕಾಗಿ ಆಳುಗಳನ್ನು ಕಳುಹಿಸುತ್ತಾನೆ. ಸುಬ್ಬನು ಚಿರನಿದ್ರೆಯಲ್ಲಿ ಬಿದ್ದಿರುವುದನ್ನು ಕಂಡು ಆಳುಗಳು ಗೌಡರಿಗೆ ತಿಳಿಸುತ್ತಾರೆ.

ಭೂಮಾಲೀಕನ ದುಷ್ಟತನದಿಂದ ಸುಬ್ಬನ ಜೀವ ಕಮರುವುದನ್ನು ಕಾಣುತ್ತೇವೆ. ಆ ಕಾಲದ ಊಳಿಗಮಾನ್ಯಶಾಹಿ ವ್ಯವಸ್ಥೆಯು ಕ್ರೂರತನದಿಂದ ಕೂಡಿತ್ತು, ಎಂಬುದನ್ನು ಇಲ್ಲಿ ಗಮನಿಸಬಹುದಾಗಿದೆ. ಇಂತಹ ಒತ್ತಡಗಳಲ್ಲಿ ದಲಿತ ಕುಟುಂಬ ಭೂಮಿಯನ್ನು ತನ್ನ ಸ್ವಂತಕ್ಕಾಗಿ ಕೇಳುವುದಾಗಲಿ, ಉಳುಮೆ ಮಾಡುವ ಪ್ರಶ್ನೆಯಾಗಲಿ ಇಲ್ಲಿ ಕಾಣಲಾಗುವುದಿಲ್ಲ. ತನ್ನ ತಂದೆ ಮಾಡಿದ ಸಾಲ ಮುನ್ನೂರು ರೂಪಾಯಿಗಳನ್ನು ತೀರಿಸುವ ಸಲುವಾಗಿ ಜೀವನ ಪರ್ಯಂತ ಜೀತಗಾರನಾಗಿ ದುಡಿಯುವ ಸುಬ್ಬನ ಚಿತ್ರಣವನ್ನು ಕಾಣುತ್ತೇವೆ. ಭೂಮಾಲೀಕರ, ಊರ ಗೌಡರ ದಬ್ಬಾಳಿಕೆ, ದೌರ್ಜನ್ಯ, ಶೋಷಣೆ ಮುಖವನ್ನು ಕತೆಯು ಅನಾವರಣಗೊಳಿಸುತ್ತದೆ. ಗೇಣಿಗಿದ್ದ ರಂಗನಾಗಲೀ ಅಥವಾ ಆತನ ಮಗ ಸುಬ್ಬನಾಗಲೀ ಭೂ ಒಡೆತನದ ಕುರಿತು ಮಾತನಾಡುವುದಿಲ್ಲ. ಇದು ಆ ಕಾಲದ ಮಿತಿಯೂ ಕೂಡಾ ಎಂಬುದಾಗಿ ಗ್ರಹಿಸಬಹುದಾಗಿದೆ. ಹೀಗಾಗಿ ದಲಿತ ಕುಟುಂಬಕ್ಕೆ ಭೂ ಒಡೆತನದ ಪ್ರಶ್ನೆ ಇಲ್ಲಿ ಮುಖ್ಯವಾಗದೆ ಜೀತ ಸಮಸ್ಯೆ ಮುಖ್ಯವಾಗಿ ವ್ಯಕ್ತವಾಗಿರುವುದನ್ನು ಗುರುತಿಸಬಹುದಾಗಿದೆ.

ರಹಮತ್‌ತರೀಕೆರೆ ಹೇಳುವಂತೆ "ಕುವೆಂಪು ಕಾದಂಬರಿ ಜಗತ್ತಿನ ಪ್ರಧಾನ ಸಂಘರ್ಷವು ಧಾರ್ಮಿಕ ಆಧ್ಯಾತ್ಮಿಕವಾದುದು, ಹೀಗಾಗಿ ಅಲ್ಲಿ ಮೂಲ ಆರ್ಥಿಕ ವ್ಯವಸ್ಥೆಯೂ ಸಾಮಾಜಿಕ ಸ್ಥಿತಿಗಳೂ ಹೆಚ್ಚು ಬದಲಾವಣೆಯಿಲ್ಲದೆ ಹಾಗೇ ಉಳಿಯುವುದನ್ನು ಕಾಣುತ್ತೇವೆ. ಆಸ್ತಿಯನ್ನುಳ್ಳ ಭದ್ರತೆ ಮೊದಲ ಆದ್ಯತೆಯಾಗಿರುತ್ತದೆ."[೫]

ಪ್ರಸ್ತುತ ಕುವೆಂಪುರವರ ಎರಡು ಕಾದಂಬರಿಯ ಆಶಯಗಳಲ್ಲೂ ಈ ಮೇಲಿನ ಅಂಶವನ್ನು ಕಾಣಬಹುದು. ಇವರ ಕಾದಂಬರಿಯ ಸಂದರ್ಭದಲ್ಲಿ ಭೂಸಂಬಂಧಿ ಪ್ರಶ್ನೆ, ಭೂಮಾಲೀಕನ ದರ್ಪ, ಇತರೆ ಅಂಶಗಳ ಜೊತೆಗೆ ಕುವೆಂಪು ಅವರ ಎದುರಿಗಿದ್ದ ಸಾಂಸ್ಕೃತಿಕ ಒತ್ತಡಗಳು ಸಹಜವಾಗಿ ಮೂಡಿಬಂದಿವೆ. ಮಾತ್ರವಲ್ಲದೆ ಅವರ ಕಥನಗಳಲ್ಲಿ ಮಲೆನಾಡಿನ ಬದುಕಿನ ಸಮಕಾಲೀನ ಚರಿತ್ರೆಯೊಂದಿಗೆ ಭೂಸಮಸ್ಯೆ ವ್ಯಕ್ತಗೊಳ್ಳುತ್ತವೆ.

"**ಕಾನೂರು ಹೆಗ್ಗಡತಿ**" ಕಾದಂಬರಿಯಲ್ಲಿ ಜಾತಿಯ ಏಣಿಶ್ರೇಣಿಗಳ ಆಧಾರದ ಮೇಲೆ ಪಾತ್ರಗಳ ಸಾಮಾಜಿಕ ಸ್ಥಾನಮಾನ, ಭೂಒಡೆತನ ಮತ್ತು ಭೂಸಮಸ್ಯೆಗಳನ್ನು ಗುರುತಿಸಬಹುದಾಗಿದೆ. ಊಳಿಗಮಾನ್ಯವ್ಯವಸ್ಥೆಯ ಸಮಾಜದಲ್ಲಿ ಸಾಮಾನ್ಯವಾಗಿ ವರ್ಗೀಕರಣದ ಹಂತಗಳನ್ನು ಕಾಣಬಹುದಾಗಿದೆ. ಈಹಿನ್ನೆಲೆಯಲ್ಲಿ ವಸ್ತುದೃಷ್ಟಿಕೋನದಿಂದ ಸ್ಥೂಲವಾಗಿ ಹೀಗೆ ವಿಭಾಗಿಸಿಕೊಳ್ಳಬಹುದಾಗಿದೆ.

ಊಳಿಗಮಾನ್ಯಶಾಹಿವರ್ಗದ ಪ್ರತಿನಿಧಿಯಾಗಿ ಚಂದ್ರಯ್ಯಗೌಡ, ಸಿಂಗಪ್ಪಗೌಡ, ಹೂವಯ್ಯ ಇವರು ಭೂ ಒಡೆತನ ಹೊಂದಿರುವುದನ್ನು ಕಾಣುತ್ತೇವೆ. ಪುರೋಹಿತಶಾಹಿ ವರ್ಗದ ಪ್ರತಿನಿಧಿಯಾಗಿ ವೆಂಕಪ್ಪಜೋಯಿಸರು ಭೂಮಾಲೀಕ ವರ್ಗದ ಹಿಂದೆ ಬೆಂಬಲಕ್ಕಿದ್ದಾರೆ. ಒಕ್ಕಲು ವರ್ಗವಾಗಿ ಅಣ್ಣಯ್ಯಗೌಡ ಮತ್ತು ಆತನ ಮಗ ಭೂಮಾಲೀಕರ ಭೂಮಿಯನ್ನು ಗೇಣಿಗಾಗಿ ಉಳುಮೆ ಮಾಡುವವರಾಗಿದ್ದಾರೆ.ಭೂಮಾಲೀಕರಿಂದ ಶೋಷಣೆಗೊಳಗಾಗಿದ್ದಾರೆ.ಸೇರೆಗಾರ ರಂಗಪ್ಪಶೆಟ್ಟಿ ಭೂಮಾಲೀಕರ ಆಜ್ಞಾಪಾಲಕ. ಜೀತಗಾರರಾಗಿ ಬಾಡುಗಳ್ಳ ಸೋಮ, ಹಳೇಪೈಕದ ತಿಮ್ಮ, ಬೇಲರ ಭೈರ ಮೊದಲಾದವರು ಭೂಮಾಲೀಕರಲ್ಲಿ ಒಂದಲ್ಲ ಒಂದು ರೀತಿ ಜೀತದಾಳುಗಳಂತೆ ದುಡಿಯುವವರಾಗಿದ್ದಾರೆ.

ಈ ಕಾದಂಬರಿಯಲ್ಲಿ ಬರುವ ಹೂವಯ್ಯ ಊಳಿಗಮಾನ್ಯಶಾಹಿ ವ್ಯವಸ್ಥೆಯನ್ನು ಒಪ್ಪಿಕೊಳ್ಳುತ್ತಲೇ ಮಾನವೀಯ ನೆಲೆಯ ಮೂಲಕ, ಉದಾರವಾದೀ ನೆಲೆಯಲ್ಲಿ ಇನ್ನುಳಿದ ವರ್ಗಗಳನ್ನು ಕುವೆಂಪುರವರು ನೋಡಿರುವುದು ಗಮನಿಸಬಹುದು. ಇಲ್ಲಿ ಬರುವ ಕೃಷಿಕೂಲಿಕಾರ್ಮಿಕರಿಗೆ ಹೂವಯ್ಯನಿಂದ ಶಿಕ್ಷಣ ನೀಡುವ ಅರಿವು ನೀಡುವ ಒತ್ತಾಯವಿದೆ. ಈ ಕುರಿತು ಬಾಡುಗಳ್ಳ ಸೋಮ, ಪುಟ್ಟಣ್ಣ, ಹಳೇಪೈಕ ತಿಮ್ಮ ಮೊದಲಾದವರಿಗೆ ಶಿಕ್ಷಣ ನೀಡುವುದನ್ನು ಗಮನಿಸಬಹುದು. ಆದರೆ ತಮ್ಮ ಮೂಲ ವಾಸನೆಗಳನ್ನು ಬಿಡದೆ ಬಾಡುಗಳ್ಳ ಸೋಮನಂತಹವರು ಮೇಲುನೋಟಕ್ಕೆ ಬದಲಾಗುವ ಮತ್ತು ತನ್ನ ಸ್ವಭಾವದಲ್ಲಿ ಬದಲಾಗದೆ ಇರುವ ಸ್ಥಿತಿಯನ್ನು ಕಾಣುತ್ತೇವೆ.ಈ ಎಲ್ಲಾ ಹಿನ್ನೆಲೆಯಲ್ಲಿ ಹೂವಯ್ಯ ಕೆಳವರ್ಗಗಳ ಮೇಲು ಚಲನೆಗೆ ಒಳಗು ಮಾಡುತ್ತಾನೆ.

ಈ ಕಾದಂಬರಿಯಲ್ಲಿ ಊಳಿಗಮಾನ್ಯವ್ಯವಸ್ಥೆಯ ಸ್ಥಿತಿಗತಿ ಹೇಗಿತ್ತೊ ಹಾಗೆಯೇ ಚಿತ್ರಿಸಲಾಗಿದೆ. ಇದಕ್ಕೆ ಪೂರಕವಾಗಿ ಪುರೋಹಿತಶಾಹಿ ಬೆಂಬಲಕ್ಕೆ ನಿಂತಿರುವುದು ಕಂಡುಬರುತ್ತದೆ. ದಲಿತ ಜೀವನ ಹೇಗಿದೆಯೋ ಹಾಗೆಯೇ ವ್ಯಕ್ತಗೊಂಡಿದೆ. ಇಲ್ಲಿ ಬರುವ ಹೂವಯ್ಯ ಆಧುನಿಕ ಶಿಕ್ಷಣಪಡೆದು ಹೊಸಜಗತ್ತಿನೊಂದಿಗೆ ವ್ಯವಹರಿಸಿ ಬಂದ ಈತ ಗ್ರಾಮೀಣ ಸಮುದಾಯದೊಳಗೆ ಪ್ರವೇಶಿಸುತ್ತಾನೆ. ಆದರೆ ಈತ ಹೊಸ ಬದಲಾವಣೆಗೆ ಸಂಪೂರ್ಣವಾಗಿ ಒಗ್ಗದೆ,ಇಲ್ಲಿನ ವ್ಯವಸ್ಥೆಯ ಬಿಕ್ಕಟ್ಟಿಗೆ ಸಿಕ್ಕು ಅವರಲ್ಲಿ ಈತನು ಒಬ್ಬನಾಗಿದ್ದಾನೆ.

ಇಲ್ಲಿ ಜಮೀನ್ದಾರನಾಗಿ ಹೂವಯ್ಯನ ಪಾತ್ರವೇನು ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ.ಈ ವರ್ಗಗಳಿಗೆ ಭೂಮಿಯನ್ನು ಹಂಚಿ ಸ್ವತಂತ್ರ ಬದುಕುನ್ನು ಕಟ್ಟಿಕೊಡುವಲ್ಲಿ ಹೂವಯ್ಯ ವಿಫಲನಾಗುತ್ತಾನೆ. ಆದರ್ಶವಾದ ಹಾಗೂ ಉದಾರೀವಾದದ ನೆಲೆಯಲ್ಲಿ ಈ ಕಾದಂಬರಿ ವ್ಯಕ್ತಗೊಂಡಿದೆ. ಈ ಜಮೀನ್ದಾರಿ ವ್ಯವಸ್ಥೆಯ ಉಸಿರುಕಟ್ಟುವ ವಾತಾವರಣದಲ್ಲಿ ಹೂವಯ್ಯ ಈ ವರ್ಗಗಳಿಗೆ ಚಲನೆಗೆ ಅವಕಾಶ ಮಾಡಿಕೊಟ್ಟಿದ್ದನ್ನು ಕಾದಂಬರಿಯ ದೊಡ್ಡ ಆಶಯವಾಗಿದೆ.

ಕಾನೂರಿನ ಭೂಮಾಲೀಕ ಚಂದ್ರಯ್ಯಗೌಡ ಮತ್ತು ಹೂವಯ್ಯರ ನಡುವೆ ನಡೆಯುವ ಭೂಮಾಲೀಕ ಧೋರಣೆಯ ಸಂಘರ್ಷದ ಚಿತ್ರಣವಿದೆ. ಊಳಿಗ ವ್ಯವಸ್ಥೆಯ ಪ್ರತಿನಿಧಿಯಂತೆ ಕಂಡು ಬರುವ ಚಂದ್ರಯ್ಯಗೌಡರು ಒಕ್ಕಲು ಮೇಲೆ ಜೀತದಾಳುಗಳ ಮೇಲೆ ನಡೆಸುವ ದೌರ್ಜನ್ಯವನ್ನು ಇಲ್ಲಿ ಕಾಣುತ್ತೇವೆ. ಜಮೀನ್ದಾರಿಕೆ ಕ್ರೌರ್ಯಗಳ ಮೂಲಕ ದುಡಿಯುವ ವರ್ಗವನ್ನು ಶೋಷಿಸುತ್ತಾರೆ. ಭೂಮಾಲೀಕ ಚಂದ್ರಯ್ಯಗೌಡ ದಲಿತ ಜೀತದಾಳುಗಳನ್ನು ಏಕವಚನದಲ್ಲಿ ಮಾತನಾಡಿಸಿದರೆ, ಹೂವಯ್ಯ ಅದಕ್ಕೆ ಪ್ರತಿಯಾಗಿ ಗೌರವದಿಂದ ಸಂಭೋಧಿಸಿ ಕರೆಯುತ್ತಾನೆ.

ಚಂದ್ರಯ್ಯಗೌಡರು ತಮ್ಮಲ್ಲಿ ಕೆಲಸ ಮಾಡುವ ಬಾಡುಗಳ್ಳ ಸೋಮ, ಹಳೇಪೈಕದ ತಿಮ್ಮ, ಬೇಲರ ಭೈರ ಇವರುಗಳ ಮೇಲೆ ಮಾನವೀಯವಾಗಿ ನಡೆಸಿಕೊಳ್ಳುವುದಿಲ್ಲ. ಶ್ರಮಿಕ ವರ್ಗವು ತನಗಾದ ಅನ್ಯಾಯ ಕುರಿತು ಪ್ರತಿಭಟನೆಯನ್ನು ಬಹಿರಂಗವಾಗಿ ವ್ಯಕ್ತಗೊಳಿಸದೆ, ಆಂತರಿಕವಾಗಿ ಸ್ಫೋಟಿಸುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ರಂಗಪ್ಪಶೆಟ್ಟರ ಕೈಕೆಳಗೆ ದುಡಿಯುತ್ತಿದ್ದ ಹಲವಾರು ಕೂಲಿಕಾರ್ಮಿಕರು ಓಡಿಹೋಗಿರುವುದರ ಮೂಲಕ ಪ್ರತಿಭಟಿಸುವುದನ್ನು ಕಾಣುತ್ತೇವೆ.ಬಾಡುಗಳ್ಳ ಸೋಮ, ಹಳೇಪೈಕದ ತಿಮ್ಮ, ಬೇಲರ ಭೈರ ಇವರು ತಮ್ಮ ಹಿತಾಸಕ್ತಿಗನುಗುಣವಾಗಿ ಕದಿಯುತ್ತಾರೆ.ತಮ್ಮ ಸ್ಥಿತಿಗತಿಗನುಗುಣವಾಗಿ ತಮ್ಮ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಅಡ್ಡದಾರಿ ಹಿಡಿಯುತ್ತಾರೆ. ಇದಕ್ಕೆ ಅವರು ದುಡಿಮೆ ಪ್ರತಿಫಲವಿಲ್ಲದೆ ಇರುವುದು ಮುಖ್ಯಕಾರಣವಾಗುತ್ತದೆ. ಕೃಷಿಕೆಲಸ ಕಾರ್ಯಗಳಲ್ಲಿ ಸೇರೆಗಾರರ ಪಾತ್ರ ದೊಡ್ಡದು. ಕೆಲವೊಮ್ಮೆ ಸೇರೆಗಾರರ ಅವಿವೇಕವು ಪ್ರಧಾನವೆಂದು ಕಾಣಿಸಿದರೂ, ಕೂಲಿಕಾರ್ಮಿಕರಿಂದಲೇ ಒಡೆಯನ ಅಸ್ತಿತ್ವ ಕಂಡುಕೊಳ್ಳಲು ಸಾಧ್ಯ ಎಂಬುದು ಇಲ್ಲಿ ಕಂಡುಬರುತ್ತದೆ.

ಆದರೆ ಈ ಸೇರೆಗಾರ ಕೂಲಿಕಾರ್ಮಿಕರನ್ನು ತನ್ನ ಇಚ್ಛೆ ಬಂದ ಹಾಗೆ ಶೋಷಣೆ ಮಾಡುವುದು ಕಡಿಮೆ ಕೂಲಿ ಕೊಡುವುದು, ಉತ್ತಮ ರೂಪವಂತ ಹೆಣ್ಣನ್ನು ಭೂಮಾಲೀಕನಿಗೆ ಒಪ್ಪಿಸುವುದು ಈತನ ಕೆಲಸವಾಗಿದೆ. ಚಂದ್ರಯ್ಯಗೌಡರಿಗೆ ಹೆಣ್ಣಾಳು ಗಂಗೆಯ ಜೊತೆಗೂಡಿಸುತ್ತಾನೆ.

ಇಲ್ಲಿ ಜಮೀನ್ದಾರನ ದರ್ಪದಲ್ಲಿ ಚಂದ್ರಯ್ಯಗೌಡರು ತನ್ನ ಒಕ್ಕಲಾದ ಅಣ್ಣಯ್ಯನ ತಲೆಬಾಗಿ ಲೆಕ್ಕದ ಪುಸ್ತಕದ ಕಡೆಗೇ ನೋಡುತ್ತಿದ್ದ ಚಂದ್ರಯ್ಯಗೌಡರು ತಲೆಯೆತ್ತಿ ಅಣ್ಣಯ್ಯಗೌಡರನ್ನು ಕುರಿತು ತಾವು ಹಿಂದೆಯೇ ಹೇಳಿದ್ದುದನ್ನು ಮತ್ತೆ ಸಮರ್ಥಿಸುವ ಧ್ವನಿಯಲ್ಲಿ ನೀನು ಸಾಲಮಾಡಿರುವ ಬಡ್ಡಿ ಕೊಡಿ ಸಾವಿರದ ಇನ್ನೂರು ಮುಕ್ಕಾಲು ಮೂರು ವೀಸ ಬೇಳೆ ಆರು ರೂಪಾಯಿ ಆಗುತ್ತದೆ ಎಂದು ಹೇಳಿದರು. ಚಂದ್ರಯ್ಯಗೌಡರ ಒಕ್ಕಲಾದ ಅಣ್ಣಯ್ಯಗೌಡರು ತನ್ನ ಬೆಳೆದ ಮಗ ಮದುವೆಗೆ ಬಂದಿದ್ದಾನೆ. ಇಂತಹ ಪರಿಸ್ಥಿತಿಯಲ್ಲಿ ಮದುವೆಯ ಹಣಕ್ಕಾಗಿ ಚಂದ್ರಯ್ಯಗೌಡನ ಬಳಿ ಹೋಗಿ ಅಣ್ಣಯ್ಯಗೌಡರು ನಿವೇದಿಸಿಕೊಳ್ಳುತ್ತಾರೆ. ಇದಕ್ಕಾಗಿ ಭೂಮಾಲೀಕ ಮತ್ತು ಒಕ್ಕಲುಗಳ ಮಾತಿನ ಚಕಮಕಿ ನಡೆಯುತ್ತದೆ.

ಚಂದ್ರಯ್ಯಗೌಡರು ಇದೇ ಹೊತ್ತಿಗೆ ಬಂದ ಜೋಯಿಸರಿಗೆ ಅತ್ಯಂತ ವಿನಯದಿಂದ "ನೀವೇನು ಬಂದಿದ್ದು ಜೋಯಿಸರೆ? ಕೇಳುತ್ತಾರೆ. ಇಲ್ಲಿ ಅಣ್ಣಯ್ಯಗೌಡರಿಗೆ ಚಿಕ್ಕಾಸು ಕೊಡದೆ ಗದರಿ ಕಳುಹಿಸಿದ್ದನ್ನು ಕಾಣುತ್ತೇವೆ. ಆದರೆ ಜೋಯಿಸರು ನಯವಾಗಿ ಸತ್ಯನಾರಾಯಣ ವ್ರತದ ಖರ್ಚನ್ನು ಕೇಳಿ ಪಡೆದುಕೊಂಡು ಗೌರವಾದರಗಳಿಂದ

ಹೊರಟುಹೋದುದನ್ನು ಗಮನಿಸಬಹುದು. ಇಲ್ಲಿ ಶ್ರಮ ಮೌಲ್ಯ ಗಣನೆಗೆ ತೆಗೆದುಕೊಳ್ಳದೆ ಸತ್ಯನಾರಾಯಣ ವ್ರತದಂತಹ ಕಾರ್ಯಗಳಿಗೆ ಹಣವನ್ನು ಭೂಮಾಲೀಕ ಸಹಾಯ ಮಾಡುವುದನ್ನು ಕಾಣುತ್ತೇವೆ.

ಜೋಯಿಸರು ಹೊರಡುವ ವೇಳೆಯಲ್ಲಿ ಅಣ್ಣಯ್ಯಗೌಡರನ್ನು ಕಂಡು ಅವರು ಹೇಳಿದ ಮಾತೆಂದರೆ "ನಾನು ಹೇಳಿದ್ದೆ, ನಿನಗೆ ಮೊದಲೇ ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳು ಮಾಡಿಬಿಡುತ್ತದೆ ಎಂದು !ದೇವರು ದಿಂಡರು ಭಕ್ತಿ ಗಿಕ್ತಿ ಎಲ್ಲ ನಿರ್ನಾಮ !ಜೊತೆಗೆ ನೂರಾರು ಹವ್ಯಾಸಗಳನ್ನು ಬೇರೆ ಕಲಿತುಬಿಡುತ್ತಾರೆ. ನಿನ್ನ ಮನೆ ಜಮೀನು ಉಳಿಯಬೇಕಾದರೆ ಅವರ ಓದು ನಿಲ್ಲಿಸಿ, ಮದುವೆ ಗಿದುವೆ ಮಾಡಿ ಕೆಲಸಕ್ಕೆ ಹಚ್ಚು ಸಂಸಾರ ತಲೆಗೆ ತಾಗಿದರೆ ಆಗ ಬುದ್ಧಿ ಬರುತ್ತದೆ."[೬] ಜೋಯಿಸರ ದೃಷ್ಟಿಕೋನದಲ್ಲಿ ಒಕ್ಕಲುಗಳು ದುಡಿಯುವುದಕ್ಕಷ್ಟೇ ಮಾತ್ರ ಸೀಮಿತ ಎಂಬರ್ಥದಲ್ಲಿ ವ್ಯಕ್ತಪಡಿಸುತ್ತಾರೆ. ಆದರೆ ಈ ಭೂಮಾಲೀಕ ವ್ಯವಸ್ಥೆ ಅಜ್ಞಾನದ ಮೂಲಕ ತಳವರ್ಗದ ಒಕ್ಕಲುಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವುದು ಮತ್ತು ಅವರ ಶ್ರಮದ ಪ್ರತಿಫಲವನ್ನು ತಾನು ಅನುಭವಿಸುವ ನೆಲೆಯಲ್ಲಿ ಹೊರಡುತ್ತದೆ. ಇದು ಜೋಯಿಸರ ಮಾತಿನ ಮೂಲಕ ಮಕ್ಕಳನ್ನು ಶಿಕ್ಷಣದ ಬೆಳಕಿನಲ್ಲಿಡದೆ, ಅಜ್ಞಾನದ ಕತ್ತಲಲ್ಲೇ ಇಡುವುದರಿಂದ ಲಾಭವೇ ಎಂಬುದಿಲ್ಲಿ ಕಂಡುಬರುತ್ತದೆ. ಜಮೀನ್ದಾರಿ ವ್ಯವಸ್ಥೆಯಿಂದಲೇ ಬಂದ ಹೂವಯ್ಯ ಜೀತಕ್ಕಿರುವ ಒಕ್ಕಲುಗಳ ಬಗ್ಗೆ ಸಹಾನುಭೂತಿಯಿಂದ ಮತ್ತು ಗೌರವದಿಂದ ಕಾಣುತ್ತಾನೆ. ಆದರೆ ಈ ವರ್ಗದ ಪರವಾಗಿ ಎಲ್ಲಿಯೂ ನಿಲ್ಲದೇ, ದಲಿತರ ಬಗ್ಗೆ, ಕೂಲಿಕಾರ್ಮಿಕರ ಮೇಲೆ ಅನುಕಂಪ, ಪ್ರೀತಿ, ಗೌರವಗಳಿರುವುದನ್ನು ಕಾಣುತ್ತೇವೆ.

ಸ್ವತಃ ಕುವೆಂಪುರವರು ಮಲೆನಾಡಿನ ಜಮೀನ್ದಾರಿ ವ್ಯವಸ್ಥೆಯ ಕುಟುಂಬದಿಂದ ಬಂದವರಾದರೂ ಕೃಷಿಚಟುವಟಿಕೆಯಲ್ಲಿನ ಅನನ್ಯಪ್ರೀತಿಯಿರುವುದನ್ನು ಅವರಲ್ಲಿ ಕಾಣುತ್ತೇವೆ. ಅಂದಿನ ಕಾಲಕ್ಕೆ ಭೂಮಾಲೀಕರಿಗೆ ಜಮೀನ್ದಾರ ಮನೆತನಗಳು ಸಾಮಾಜಿಕ ಪ್ರತಿಷ್ಠೆಯ ಸಂಕೇತವಾಗಿದ್ದವು. ಕುವೆಂಪುರವರು ಜಮೀನ್ದಾರಿ ವ್ಯವಸ್ಥೆಯ ವಿರುದ್ಧವಾಗಿದ್ದರೂ, ಅದು ನೇರವಾಗಿ ಎದುರಿಸಲಾಗದೆ,ಉದಾರವಾದಿ ನೆಲೆಯಿಂದ ಹಾಗೂ ಆಂತರಿಕವಾಗಿ ಸ್ಫೋಟಿಸುವ ಗುಣವನ್ನು ಕಾಣುತ್ತೇವೆ. ಈ ಕುರಿತು ರಹಮತ್ ತರೀಕೆರೆ ಹೇಳುವಂತೆ "ಕುವೆಂಪು ಅವರ ಪ್ರತಿಭಟನೆಯು ಇಬ್ಬಾಯಿಯದಾಗಿದ್ದು, ಸಾಮಾಜಿಕ ಮೇಲು ಕೀಳು, ಮತೀಯ ಮೌಢ್ಯಗಳ ವಿರುದ್ಧವಿದೆ ಹಾಗೂ ಖಾಸಗೀ ಆಸ್ತಿಯ ಬಲದಿಂದ ನಡೆಯುವ ಪಾಳೇಗಾರಿ ದಬ್ಬಾಳಿಕೆ ವಿರುದ್ಧವಿದೆ."[೭] ಎಂದು ಗುರುತಿಸುತ್ತಾರೆ. ಈ ಮಾತಿಗೆ ಪೂರಕವಾಗಿ ಕುವೆಂಪುರವರ ಆಶಯಗಳಲ್ಲಿ ದೀನ ದಲಿತರ, ಬಡವರ ಪರವಾದ ನೆಲೆಯನ್ನು ಹೊಂದಿರುವುದನ್ನು ಗುರುತಿಸಬಹುದಾಗಿದೆ.

ಈ ಕಾದಂಬರಿಯಲ್ಲಿ ಭೂಮಿ ಅಥವಾ ಆಸ್ತಿ ಹಂಚಿಕೆ ಕುರಿತಂತೆ ಕುಟುಂಬದಲ್ಲಿ ಆಗುವ ಸಾಮಾಜಿಕ ನ್ಯಾಯದ ಬೇಡಿಕೆಯನ್ನು ಹೂವಯ್ಯ ಮುಂದಿಡುತ್ತಾರೆ. ಹಿರಿಯರ ಮುಂದೆ ಹೂವಯ್ಯ ಮಾನವೀಯ ನೆಲೆಯ ತೀರ್ಪನ್ನು ನೀಡುತ್ತಾರೆ. ಹೂವಯ್ಯ ಆಸ್ತಿಪಾಲಿನ ಸಂದರ್ಭದಲ್ಲಿ ಚಂದ್ರಯ್ಯಗೌಡರ ನಿಲುವನ್ನು ಪ್ರತಿಭಟಿಸುತ್ತಾ, "ಸ್ವಯಾರ್ಜಿತ ಪಿತ್ರಾರ್ಜಿತ ಎಂದು ಆಸ್ತಿಯನ್ನು ವಿಭಾಗ ಮಾಡುವುದು ನ್ಯಾಯವಲ್ಲ. ಒಂದು ಮನೆಗೆ ಯಜಮಾನನಾದವನು ಏನು ಸಂಪಾದನೆ ಮಾಡಿದರೂ ಅವು ಮನೆಯ ಸಂಪತ್ತಿಗೇ ಸೇರುತ್ತದೆ. ಯಜಮಾನನು ವ್ಯವಟ್ಟು ನಡೆಸುವಾಗ ಏನಾದರೂ ನಷ್ಟ ಸಂಭವಿಸಿದರೆ ಆ ನಷ್ಟವನ್ನು ತನ್ನೊಬ್ಬನ ಮೈಮೇಲೆಯೇ ಹಾಕಿಕೊಳ್ಳುತ್ತಾನೆಯೇ? ಮನೆಯ ಲೆಕ್ಕಕ್ಕೆ ಖರ್ಚು ಹಾಕುವುದಿಲ್ಲವೇನು? ನಷ್ಟದಂತೆಯೇ ಲಾಭವೂ ಮನೆಯ ಆಸ್ತಿಗೇ ಸೇರತಕ್ಕದ್ದು. ಪಿತ್ರಾರ್ಜಿತವಾದ ಆಸ್ತಿಯ ಆಧಾರ,ಬೆಂಬಲ,ಧನ,ಗೌರವ, ವಿಚಾರ ಇವುಗಳೆಲ್ಲ ಇಲ್ಲದಿದ್ದರೆ ಯಜಮಾನನು ಹೊಸ ಆಸ್ತಿಗಳನ್ನು ಸಂಪಾದಿಸಲು ಸಾಧ್ಯವಾಗುತ್ತಿತ್ತೆ? ಆದ್ದರಿಂದ ಸಂಪಾದಿಸಿದ ಹೊಸ ಆಸ್ತಿಗಳೆಲ್ಲವೂ ಪಿತ್ರಾರ್ಜಿತ ಆಸ್ತಿ ಎಂಬ ಮೂಲಧನದ ಮೇಲೆ ಬಂದ ಬಡ್ಡಿಯಂತೆಯೇ ಹೊರತು ಮತ್ತೆ ಬೇರೆಯಲ್ಲ. ಆದ್ದರಿಂದ ಚಿಕ್ಕಯ್ಯ ಹೇಳಿದಂತೆ ,ಪಿತ್ರಾರ್ಜಿತ ಸ್ವಯಾರ್ಜಿತ ಎಂದು ಆಸ್ತಿಯನ್ನು ವಿಭಾಗಿಸುವುದಕ್ಕೆ ನಾನೊಪ್ಪುವುದಿಲ್ಲ ಎಂದು ವಾದಿಸಿದನು."[೮] ಹೂವಯ್ಯನ ಸ್ಪಷ್ಟ ನಿಲುವು ಹಿರಿಯರಿಗೆ ಅಷ್ಟು ಇಷ್ಟವಾಗದೇ ಇರಬಹುದು. ಆದರೆ ಹೂವಯ್ಯ ನ್ಯಾಯದಪರವಾಗಿ ಪಕ್ಷಾತೀತವಾಗಿ ನಡೆದುಕೊಂಡಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಕೊನೆಗೆ ಜಮೀನ್ದಾರಿ ವ್ಯವಸ್ಥೆಯ ಪ್ರತಿನಿಧಿಯಂತಿರುವ ಚಂದ್ರಯ್ಯಗೌಡರ ಇಷ್ಟದಂತೆ ಆಸ್ತಿ ಪಾಲಾಗುತ್ತದೆ.

ಚಂದ್ರಯ್ಯಗೌಡರಂತೆ ಸಿಂಭಾವಿ ಭರಮೈ ಹೆಗ್ಗಡೆ, ಬೆಟ್ಟಳ್ಳಿ ಕಲ್ಲಯ್ಯ ಗೌಡರು, ಹಳೆಮನೆ ಸುಬ್ಬಣ್ಣ

ಹೆಗ್ಗಡೆ, ಕೋಣೂರು ರಂಗಪ್ಪಗೌಡರು ಮತ್ತು ಕಲ್ಲೂರು ಸಾಹುಕಾರ ಮಂಜಭಟ್ಟರು ಇವರುಗಳು ಮೇಲ್ವರ್ಗದ ಭೂಮಾಲೀಕರಾಗಿದ್ದಾರೆ. ಇಂತಹ ಪರಿಸರದಲ್ಲಿ ಭೂಮಾಲೀಕ ವ್ಯವಸ್ಥೆಯ ಒಕ್ಕಲುಗಳನ್ನು ಶೋಷಣೆ ಮಾಡಿದ ಬಗೆಯನ್ನು ಕಾಣಬಹುದಾಗಿದೆ.

ಈ ಕಾದಂಬರಿಯಲ್ಲಿ ಮುಖ್ಯವಾಗಿ ಭೂಮಿಯ ಪ್ರಶ್ನೆಯ ಜೊತೆಗೆ ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯ,ಇವುಗಳ ವಿರುದ್ಧದ ತಣ್ಣಗಿನ ಹೋರಾಟ ಕಾನೂರು ಹೆಗ್ಗಡತಿಯಲ್ಲಿ ಕಾಣಬಹುದಾಗಿದೆ. ಮಲೆನಾಡಿನ ಪರಿಸರದಲ್ಲಿನ ಆ ಕಾಲದ ಭೂಮಿಯ ಬಗೆಗಿನ ಒತ್ತಡಗಳು ಮುಖ್ಯವಾಗಿ ಗ್ರಹಿಸಿರುವುದನ್ನು ಗಮನಿಸಬಹುದಾಗಿದೆ.

**"ಮಲೆಗಳಲ್ಲಿ ಮದುಮಗಳು"** ಕಾದಂಬರಿಯ ಕತೆಯನ್ನು ಅಧ್ಯಯನದ ದೃಷ್ಟಿಯಿಂದ ಸ್ಥೂಲವಾಗಿ ವಿವೇಚಿಸಲಾಗಿದೆ. ಮಲೆಗಳಲ್ಲಿಮದುಮಗಳು ಕಾದಂಬರಿಯಲ್ಲಿ ಪ್ರಧಾನವಾಗಿ ಗುತ್ತಿ, ತಿಮ್ಮಿ, ಮುಕುಂದಯ್ಯ ಚೆನ್ನಮ್ಮರ ಕೇಂದ್ರಪಾತ್ರಗಳ ಸುತ್ತ ಹೆಣೆದ ಕತೆಯಾಗಿದೆ. ಗುತ್ತಿ ಚೆನ್ನಮ್ಮರ ಕುರಿತಾಗಿ ಅನ್ವರ್ಥವಾಗಿ ಮದುಮಗಳೆಂದು ಮೇಲ್ನೋಟಕ್ಕೆ ಕಂಡುಬರುತ್ತದೆ. ಆದರೆ ಈ ಕಾದಂಬರಿಯಲ್ಲಿ ಯಾವುದೇ ಕೇಂದ್ರಪಾತ್ರಳಂತೆ ಕಂಡು ಬರದೆ ಎಲ್ಲವೂ ಸಮಾನ ಪಾತ್ರಗಳಾಗಿ ಚಿತ್ರಣಗೊಂಡಿವೆ. ಇಲ್ಲಿ ಗುತ್ತಿ ತಿಮ್ಮಿಯನ್ನು ಹಾರಿಸಿಕೊಂಡು ಬರುವುದಕ್ಕಾಗಿ ಹೊರಡುವ ಪಯಣದಲ್ಲಿ ನಡೆಯುವ ಘಟನೆಗಳು ವಿಶೇಷವಾಗಿ ಕಂಡುಬರುತ್ತವೆ.

ಈ ಗುತ್ತಿ ಸಿಂಬಾವಿ ಭರಮೈ ಹೆಗ್ಗಡೆಯವರ ಜೀತದಾಳಾಗಿದ್ದು, ಈತನ ಪ್ರೇಯಸಿ ಬೆಟ್ಟಳ್ಳಿ ತಿಮ್ಮಿಯನ್ನು ಪಡೆಯುವುದಕ್ಕಾಗಿ ಗುತ್ತಿ ಹೋರಾಟ ನಡೆಸುತ್ತಾನೆ. ತಿಮ್ಮಿಯನ್ನು ಪಡೆಯುವ ಹೋರಾಟದ ಹಾದಿಯಲ್ಲಿ ಅನೇಕ ಘಟನೆಗಳು ಬಿಚ್ಚಿಕೊಳ್ಳುತ್ತವೆ. ಗುತ್ತಿ ಸಾಗುವ ಮಧ್ಯದ ಊರುಗಳಲ್ಲಿ ಭೂಮಾಲೀಕರ ಕುಟುಂಬಗಳ ಗುಟ್ಟಗಳನ್ನು ಬಲ್ಲವನಾಗಿದ್ದಾನೆ. ಭರಮೈ ಹೆಗ್ಗಡೆಯವರು ಕೊಡುವ ಪತ್ರವನ್ನು ಹಳಮನೆ ಸುಬ್ಬಣ್ಣ ಹೆಗ್ಗಡೆಯವರಿಗೆ ತಲುಪಿಸುವುದು, ಇದೇ ನೆಪದಲ್ಲಿ ಲಕ್ಕುಂದ, ಮೇಗರವಳ್ಳಿ, ಹುಲಿಕಲ್ಲು, ಕೋಣೂರುಗಳ ಮೂಲಕ ಬೆಟ್ಟಳ್ಳಿ ತಲುಪುವಾಗಿನ ನಡುವಿನಲ್ಲಿ ಕತೆಗಳು ಬಿಚ್ಚಿಕೊಳ್ಳುತ್ತವೆ. ಈತ ಸಾಬರೊಡನೆ ಹೊಡೆದಾಟದಿಂದ ಪೊಲೀಸರ ಕೈಗೆ ಸಿಕ್ಕಿ ಬಿದ್ದು ನಂತರ ತಪ್ಪಿಸಿಕೊಳ್ಳುತ್ತಾನೆ. ಚಿನ್ನಯ್ಯ, ಮುಕುಂದಯ್ಯರ ನೆರವಿನ ಮೂಲಕ ಹುಲಿಕಲ್ಲು ಸೇರುತ್ತಾನೆ. ಪುನಃ ಪೊಲೀಸರಿಂದ ತಪ್ಪಿಸಿಕೊಳ್ಳಲು ಕಾನೂರಿಗೆ ಹೋಗುತ್ತಾನೆ. ಇದೇ ಕಾಲಕ್ಕೆ ಭೂಮಾಲೀಕ ಸಿಂಭಾವಿಯ ಭರಮೈಹೆಗ್ಗಡೆ, ಬೆಟ್ಟಳ್ಳಿಯ ಕಲ್ಲಯ್ಯಗೌಡರ ನಡುವೆ ಹಗೆತನವನ್ನು ಕಾಣುತ್ತೇವೆ. ಭರಮೈಹೆಗ್ಗಡೆಯ ಮೊದಲ ಹೆಂಡತಿ ಜಟ್ಟಮ್ಮನಿಗೆ ಮಕ್ಕಳಾಗಲಿಲ್ಲ ಎಂಬ ಕಾರಣಕ್ಕೆ ಎರಡನೆ ಮದುವೆಗಾಗಿ ಹೂವಳ್ಳಿಯ ವೆಂಕಟಣ್ಣನ ಮಗಳು ಚಿನ್ನಮ್ಮನನ್ನು ಮದುವೆಯಾಗಲು ಮಾಡಿದ ಯತ್ನ ವಿಫಲವಾಗುತ್ತದೆ. ನಂತರದಲ್ಲಿ ಆತ ಸುಬ್ಬಣ್ಣ ಹೆಗ್ಗಡೆಯ ಮಗಳು ಹಾಗೂ ಜಟ್ಟಮ್ಮನ ತಂಗಿ ಮಂಜಮ್ಮನನ್ನು ಮದುವೆಯಾಗುತ್ತಾನೆ.

ಈ ಕಾದಂಬರಿಯಲ್ಲಿ ಲಕ್ಕುಂದದ ಹಳೇಪೈಕದ ಸೇಸಾನಾಯ್ಕ ಸಂಘರ್ಷದ ನೆಲೆಯಲ್ಲಿ ಬರುವುದು ವ್ಯಕ್ತವಾಗುತ್ತದೆ. ತಮ್ಮ ಜಮೀನುದಾರರ ಆಳುಗಳೂ ಒಕ್ಕಲುಗಳೂ ಆಗಿದ್ದ, ಹಳೈಪೈಕದವರಿಗೆ ಸ್ವಂತ ಜಮೀನು ಮಾಡುವ ಆಶಯವಿದೆ. ಲಕ್ಕುಂದದ ಜಮೀನಿನಲ್ಲಿ ಮುಕ್ಕಾಲುಪಾಲು ಸಿಂಬಾವಿ ಭರಮೈ ಹೆಗ್ಗಡೆಯವರಿಗೆ ಸೇರಿದ್ದು, ಇನ್ನುಳಿದ ಕಾಲುಪಾಲು ಹಳೆಪೈಕದ ಸೇಸನಾಯ್ಕನ ಸ್ವಂತದ್ದಾಗಿತ್ತು. ಸಾಧಾರಣವಾಗಿ ಒಕ್ಕಲಿಗ ಒಡೆಯರ ಒಕ್ಕಲುಗಳಾಗಿದ್ದರಿಂದ ಜಮೀನು ಸ್ವಂತದ್ದಾಗಿತ್ತು, ಎನ್ನುವ ವಿವರಗಳಿವೆ. ಹಳೆಪೈಕದವರು ಆಗಿನಕಾಲಕ್ಕೆ ಜಮೀನು ಮಾಡುವಂತಿರಲಿಲ್ಲ ಆದರೆ, ಸೇಸನಾಯ್ಕ ಅಲ್ಪಪ್ರಮಾಣದಭೂಮಿಯನ್ನು ಹೊಂದಿರುವ ಏಕೈಕ ವ್ಯಕ್ತಿಯಾಗಿದ್ದಾನೆ. ಆದ್ದರಿಂದ ಕೆಳಜಾತಿಯವರಿಗೂ ಭೂಒಡೆತನವಿರುವ ಚಿತ್ರಣ ವ್ಯಕ್ತವಾಗುತ್ತದೆ.

ಹಳೆಪೈಕದವರು ಜಮೀನಿನ ಒಡೆಯರಾಗಬಾರದೆಂಬ ನಿಯಮ ಕುರಿತಂತೆ, "ಸಾಧಾರಣವಾಗಿ ಒಕ್ಕಲಿಗ ಒಡೆಯರ ಒಕ್ಕಲುಗಳಾಗಿದ್ದುಕೊಂಡು, ಬಗನಿಯ ಮರದಿಂದ ಕಳ್ಳು ಇಳಿಸಿ ಕುಡಿದು, ಮಾರಿ, ಜೀವನ ಮಾಡುವ ಹಳೆಪೈಕದವರಿಗೆ ಹೇಗೆ ನಿಷಿದ್ಧವೋ ಹಾಗೆಯೇ ಸ್ವಂತ ಜಮೀನು ಮಾಡುವುದು ಹಳೆಪೈಕದವರಿಗೆ ನಿಷಿದ್ಧ ಎಂದು ಒಕ್ಕಲಿಗರಾಗಿದ್ದ ಹೆಗ್ಗಡೆಗೌಡ ನಾಯಕರುಗಳೆಲ್ಲ ಸೇರಿ ತೀರ್ಮಾನಮಾಡಿದ್ದರು."[೯] ಇಲ್ಲಿ ಜೀತದಾಳುಗಳಿಗೆ ಭೂಮಿ ಇಲ್ಲದಿರುವ ವಿವರ ವ್ಯಕ್ತವಾಗುತ್ತದೆ. ಇಲ್ಲಿ ಸೇರಿದ್ದ ಭೂಮಾಲೀಕರ ಚರ್ಚೆ ಒಕ್ಕಲುಗಳಿಗೆ ಭೂಮಿ ದೊರೆಯದಂತೆ ನೋಡಿಕೊಳ್ಳುವ ಹುನ್ನಾರವಿದೆ. ಹಳೆಪೈಕದವರಿಗೆ ಭೂಮಿಯನ್ನು ಮಾಡುವುದು ನಿಷಿದ್ಧ ಎಂದು ಅಲ್ಲಿನ ಭೂಮಾಲೀಕವರ್ಗ ನಿಯಮ ಹೇರಿರುವುದನ್ನು ಕಾಣುತ್ತೇವೆ. ಆ ಕಾಲದ ಮಿತಿಯೇ ಕೆಲ

ಒಕ್ಕಲುಗಳು, ದಲಿತರು ಹಾಗೂ ಜೀತದಾಳುಗಳು ಭೂಮಿಯ ಮಾಲೀಕರಾಗದೇ ಇರುವುದನ್ನು ಕಾಣಬಹುದಾಗಿದೆ.

ಇಲ್ಲಿ ಭೂಸುಧಾರಣಾ ಶಾಸನ ಜಾರಿಗೆ ಬಂದಿರುವ ವಿವರ ಇಲ್ಲಿ ವ್ಯಕ್ತವಾಗಿದೆ. "ಸರ್ಕಾರದಿಂದ ಕಾನೂನಾಗಿ ಬಂದ ಮಾತ್ರಕ್ಕೇ ಅನ್ಯಾಯ ನ್ಯಾಯವಾಗುತ್ತದೆಯೇ ಎಂದು ಕೆಲವು ಸ್ವತಂತ್ರ ದೃಷ್ಟಿಯ ಹಳೆಪೈಕದ ನಾಯಕರು ಅದಕ್ಕೆ ವ್ಯತಿರಿಕ್ತವಾಗಿ ನಡೆಯಲು ಪ್ರಯತ್ನಿಸುತ್ತಿದ್ದರು. ಅವರ ಆ ಪ್ರಯತ್ನಕ್ಕೆ ಸರ್ಕಾರವೆಂದಿಗೂ ಅಡ್ಡಿ ಬರುತ್ತಿರಲಿಲ್ಲವೆಂದು ದೇವರಾಣೆ ಹಾಕಿ ಬೇಕಾದರೂ ಹೇಳಬಹುದು. ಆದರೆ ಒಕ್ಕಲಿಗರು ತಮ್ಮ ಹಕ್ಕಿನ ರಕ್ಷಣೆಗಾಗಿ ಪಣತೊಟ್ಟಿದ್ದರು."[೧೦] ಇಲ್ಲಿ ಸರ್ಕಾರದಿಂದಲೇ ಕಾನೂನು ಜಾರಿಯಾದ ನಂತರದಲ್ಲಿ ಭೂ ಹೀನರ ಬದುಕಿನ ಆಶಾಕಿರಣದಂತೆ ಸರ್ಕಾರದ ಕಾನೂನು ಕಂಡು ಬಂದಿದೆ. ಅನ್ಯಾಯ ನ್ಯಾಯವಾಗುತ್ತದೆಯೇ ಎಂಬ ಪ್ರಶ್ನೆಯನ್ನು ಕೇಳುವ ಮೂಲಕ ಅವರಿಗೆ ಇಲ್ಲಿ ಕಾನೂನು ದನಿಯಾಗುತ್ತದೆ.

ಭೂಮಾಲೀಕತ್ವ ಅಥವಾ ಭೂಒಡೆತನದ ಜೊತೆಗೆ ಸ್ವಾಭಿಮಾನ ಮತ್ತು ಅಧಿಕಾರ ಅಂತಸ್ತು ಹಾಗೂ ಸ್ಥಾನಮಾನ ಬರುವುದನ್ನು ಇಲ್ಲಿ ಗಮನಿಸಬಹುದಾಗಿದೆ. "ಒಕ್ಕಲಿಗ ಜಮೀನುದಾರರ ಆಳುಗಳೂ ಒಕ್ಕಲುಗಳೂ ಆಗಿದ್ದ ಹಳೇಪೈಕದವರು ಬಹಿರಂಗವಾಗಿ ಯಾವ ತಂಟೆ ತಕರಾರುಗಳ ಗೋಜಿಗೂ ಹೋಗುತ್ತಿರಲಿಲ್ಲ. ಆದರೆ ಸೇಸನಾಯ್ಕನಂತಹ ಸ್ವಂತ ಜಮೀನುದಾರರಿಗೆ ಅವರಿಗಿಂತ ನಾವೇನು ಕಡಮೆ ನಮ್ಮ ಕುದುರೆ, ನಮ್ಮ ದಂಡಿಗೆ, ನಮ್ಮ ವಾದ್ಯ, ನಮ್ಮ ಬೋವಿಗಳು ನಮ್ಮ ದುಡ್ಡು ನಾವು ಖರ್ಚು ಮಾಡುವುದಕ್ಕೆ ಇವರದೇನು ಅಡ್ಡಿ ಎಂಬ ಹುಮ್ಮಸ್ಸು ಇರುತ್ತಿತ್ತು. ಮುಖಂಡರು ಸೇರಿ ಕಳ್ಳು ಕುಡಿದಾಗಲಂತೂ ಆ ಗರ್ವ ಗುಟುರು ಹಾಕುತ್ತಿತ್ತು."[೧೧] ಈ ಮಾತುಗಳ ವಿವರವನ್ನು ಗಮನಿಸಿದಂತೆ ಸೇಸಾನಾಯ್ಕ ಜಮೀನು ಹೊಂದಿದ್ದರಿಂದ ಸ್ವಾಭಿಮಾನಿಯಾಗಿ ನಡೆಯುತ್ತಿರುವುದು ಮತ್ತು ಇತರೆ ಒಕ್ಕಲಿಗರೂ ಕೂಡಾ ನಾವು ಆತನಿಗಿಂತ ಕಡಿಮೆಯಿಲ್ಲ ಎಂಬ ನೆಲೆಯಿಂದ ಹೊರಡುವುದನ್ನು ಕಾಣುತ್ತೇವೆ. ಈ ರೀತಿಯ ಹಕ್ಕು, ಸಮಾನತೆಯು ಭೂಮಾಲೀಕತ್ವದಿಂದ ಬಂದಿರುವುದನ್ನು ಕಾಣಬಹುದಾಗಿದೆ.

ಗುತ್ತಿ ತನ್ನ ಪ್ರೇಯಸಿಯನ್ನು ಪಡೆಯುವ ಸಲುವಾಗಿ ತನ್ನ ಪ್ರಾಣ ಇರುವತನಕ ಗುಲಾಮನಾಗಿರುತ್ತೇನೆ ಎನ್ನುವ ಮಾತನ್ನು ಗಮನಿಸಬಹುದು. ಆದರೆ ಗುತ್ತಿ ಪಂಡಿತನನ್ನು ನೋಡಿ "ತಿಮ್ಮೀನ ನಾ ಈಗ ಮದುವ್ಯಾಗಬೇಕು ಅಂತಾ ಸುಮಾರು ಕಾಲದಿಂದ ಕೇಳ್ತಿದ್ದೀನಿ. ಆ ಬಚ್ಚ ಮನ್ನೆ ಸುರು ಮಾಡ್ಯಾನೆ. ತಿಮ್ಮಿಯನ್ನು ನನ್ನ ಕಡೆ ಆಗಿ, ನಾ ಹೇಳ್ದ ಹಂಗೆ ಕೇಳಾಕೆ ಒಂದು ಅಂತ್ರ ಕೊಟ್ರೆ ನನ್ನ ಪರಾಣ ಇರೋ ತನಕ ನಿಮ್ಮ ಗುಲಾಮನಾಗಿರ್ತೀನಿ."[೧೨] ಇಲ್ಲಿ ಪ್ರೀತಿಯ ಅದಮ್ಯತೆ ಗುತ್ತಿಯನ್ನು ಜೀತಕ್ಕೆ ದೂಡುವುದನ್ನು ಕಾಣಬಹುದಾಗಿದೆ. ಈ ಕಾದಂಬರಿ ಜೀತವ್ಯವಸ್ಥೆ ಇರುವುದನ್ನು ಕಾಣುತ್ತೇವೆ. ಇಲ್ಲಿನ ಭೂಮಾಲೀಕ ವ್ಯವಸ್ಥೆಯ ಹಿಡಿತವನ್ನು ಗಮನಿಸಬಹುದು. ಏಕೆಂದರೆ ದೊಡ್ಡ ಜಮೀನು ಆಳುಕಾಳು ಎಲ್ಲದರಲ್ಲಿಯೂ ಪ್ರಬಲವಾಗಿದ್ದುದು ಕಾಲು ಹೆಂಚಿನ ಮನೆಯಲ್ಲ, ಮುಕ್ಕಾಲು ಪಾಲಿನ ಸೋಗೆಮನೆ ಹಿರಿಯರೂ, ಯಜಮಾನರೂ, ಸಂಪಾದನೆಯ ಮತ್ತು ಕೂಡಿಡುವ ವಿಚಾರದಲ್ಲಿ ಅದ್ಭುತ ಕರ್ತೃತ್ವಶಾಲಿಗಳೂ ಆಗಿದ್ದ ಸುಬ್ಬಣ್ಣ ಹೆಗ್ಗಡೆಯವರಿಗೆ ಆಸ್ತಿಯಲ್ಲಿ ಬಂದಿದ್ದಂತೆ ಮನೆಯಲ್ಲಿಯೂ ಮುಕ್ಕಾಲು ಪಾಲು ಬಂದಿತ್ತು. ಬಹುಕಾಲದ ಹಿಂದೆಯೆ ಗತಿಸಿಹೋಗಿದ್ದ ಅವರ ಅಣ್ಣನ ಮಗ ಶಂಕರ ಹೆಗ್ಗಡೆಯವರಿಗೆ ಆಸ್ತಿಯಲ್ಲಿ ಬಂದಿದ್ದಂತೆ ಮನೆಯಲ್ಲಿಯೂ ಮುಕ್ಕಾಲು ಪಾಲು ಬಂದಿತ್ತು, ಎಂಬ ವಿವರ ತಿಳಿಯುತ್ತದೆ ಭೂಮಾಲೀಕ ವ್ಯವಸ್ಥೆ ಆಸ್ತಿಯ ವರ್ಗಾವಣೆಯಾದ ಬಗೆ ಹಾಗೂ ತನ್ನ ಅಸ್ತಿತ್ವ ಹಾಗೂ ಈ ಭಾಗದ ಆಳುಕಾಳುಗಳ ಒಡಿತವನ್ನು ತಮ್ಮ ಮನೆತನದ ಆಸ್ತಿಪಾಸ್ತಿಗಳ ಲೆಕ್ಕಾಚಾರದಲ್ಲಿ ಇಟ್ಟುಕೊಳ್ಳಲಾಗಿತ್ತು ಎಂಬುದು ಇಲ್ಲಿ ತಿಳಿಯುತ್ತದೆ. ಆದರೆ ಇವರುಗಳು ತಮ್ಮ ಜೀತದಾಳುಗಳನ್ನು ತಮ್ಮ ಸ್ವಂತ ಆಸ್ತಿಯಂತೆ, ಮನುಷ್ಯ ಸಂಬಂಧವಿಲ್ಲದ ಪ್ರಾಣಿಗಳಂತೆ ನಡೆಸಿಕೊಳ್ಳುವ ಅಮಾನವೀಯತೆಯನ್ನು ಕಾಣುತ್ತೇವೆ. ಭೂಮಾಲೀಕರಲ್ಲಿ ಪರಸ್ಪರ ಮನುಷ್ಯ ಸಂಬಂಧಿಮಾರಾಟದ ವ್ಯವಸ್ಥೆ ಮಲೆನಾಡು ಪ್ರದೇಶದಲ್ಲಿ ಅಸ್ತಿತ್ವದಲ್ಲಿರುವುದನ್ನು ಗುರುತಿಸಬಹುದಾಗಿದೆ. ಈ ಕಾರಣಕ್ಕಾಗಿ ಜೀತದಾಳು ಹೆಣ್ಣುಗಳನ್ನು ಬೇರೆಯ ಕಡೆಗೆ ಮದುವೆ ಮಾಡಿಕೊಡದೆ ತಮ್ಮಲ್ಲಿಯ ಜೀತದಾಳಾಗಿರುವ ಗಂಡುಗಳಿಗೆ ಮದುವೆ ಮಾಡುವ ಚಿತ್ರಣವನ್ನು ಕಾಣುತ್ತೇವೆ.

ಈ ಕಾದಂಬರಿಯಲ್ಲಿ ಜಮೀನ್ದಾರಿ ವ್ಯವಸ್ಥೆಯು, ತನ್ನ ಒಕ್ಕಲುಗಳಾದ ಜೀತದಾಳುಗಳನ್ನು ಸ್ವಂತ ಆಸ್ತಿಯಂತೆ ಬಳಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಅದು ಎಷ್ಟರ ಮಟ್ಟಿಗೆ ಎಂದರೆ "ಒಡೆಯರಿಗೆ ಬೇಕಾಗಿದ್ದುದು ಜೀತ ಮಾಡಲು ಒಂದು ಆಳು. ತಮ್ಮ ಹೊಲಗೇರಿಯ ಒಂದು ಹೆಣ್ಣನ್ನು ಹೊರಗೆ ಕೊಟ್ಟರೆ

ತಮ್ಮ ಕೆಲಸಕ್ಕೆ ಒಂದಾಳು ಖೋತ ಬೀಳುತ್ತದೆ. ಆದ್ದರಿಂದ ಕೇರಿಯ ಹೆಣ್ಣನ್ನು ಕೇರಿಯ ಗಂಡೇ ಮದುವೆಯಾಗಬೇಕು ಎಂಬುದು ಅವರ ಕಟ್ಟಪ್ಪಣೆ. ಬೇರೆ ರೀತಿಯಿಂದ ವರ್ತಿಸಿದರೆ, ಆ ಹೆಣ್ಣು ಇನ್ನೊಬ್ಬ ಬೇರೆ ಹಳ್ಳಿಯ ಕೇರಿಯರನಿಂದ ತಾಳಿಕಟ್ಟಿಸಿಕೊಂಡಿದ್ದರೂ ಸರಿ, ಅವಳನ್ನು ಎಳೆದು ತರಿಸಿ, ತಾಳಿ ಕೀಳಿಸಿ, ತಮ್ಮ ಕೇರಿಯವನಿಗೇ ಮದುವೆ ಮಾಡಿಸುತ್ತಿದ್ದರೆಂಬುದರಲ್ಲಿ ಸಂದೇಹವಿರಲಿಲ್ಲ. ಅಪ್ಪಿ ತಪ್ಪಿ ಒಡೆಯರ ಇಚ್ಛೆಗೆ ವಿರೋಧವಾಗಿ ನಡೆದವರಿಗೆ ಹಿಂದೆ ಅಂತಹ ಗತಿಯೇ ಒದಗುತ್ತಿತ್ತು. ಕೀಳು ಜಾತಿಯವರಿಗೆ ಅವರ ಇಚ್ಛಾನುಸಾರ ಒಲವು ಅಕ್ಕರೆ ಇರುವುದೆಂದರೇನು? ಒಲವು ಅಕ್ಕರೆ ಏನಿದ್ದರೂ ಎಲ್ಲ ಒಡೆಯರ ಲಾಭದ ವಲಯದೊಳಗಿದ್ದು, ಅವರ ಇಚ್ಛಾಧೀನವಾಗಿರಬೇಕು."[೧೩] ಜೀತದಾಳಿನ ಬದುಕಿಗೆ ಇಲ್ಲಿ ಸ್ವಾತಂತ್ರ್ಯವಿರದೆ ಪ್ರಾಣಿಗಳಂತೆ ತಮ್ಮ ಇಷ್ಟಕ್ಕನುಗುಣವಾಗಿ ನಡೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಈ ದಲಿತರ ಬದುಕುಗಳು ಭಾವನಾತ್ಮಕ ಸಂಬಂಧಗಳನ್ನು ಬಿಟ್ಟು, ತನ್ನ ಜಮೀನ್ದಾರನ ಮೂಗಿನ ನೇರಕ್ಕೆ ನಡೆಸಿಕೊಳ್ಳುತ್ತಿದ್ದದನ್ನು ಕಾಣಬಹುದಾಗಿದೆ. ಜಮೀನ್ದಾರ ತನ್ನ ಜೀತದಾಳುಗಳಿಗೆ ಮುಂಗಡವಾಗಿ ಸಾಲ ನೀಡಿ ಅವರು ತಮ್ಮ ಅಧೀನದಲ್ಲಿರುವಂತೆ ನೋಡಿಕೊಳ್ಳುವ ವ್ಯವಸ್ಥೆ ಕಂಡುಬರುತ್ತದೆ.

ಜೀತದಾಳು ಗುತ್ತಿ ತನ್ನ ಬದುಕಿನ ನೆಲೆಯನ್ನು ಕಳೆದುಕೊಂಡು ತನ್ನ ಬದುಕಿಗಾಗಿ ಭೂಮಾಲೀಕರನ್ನು ಅರಸುತ್ತಾ ನಡೆಯುವ ಚಿತ್ರಣವಿದೆ. ತನ್ನ ಬದುಕಿನ ಪ್ರಶ್ನೆ ಗುತ್ತಿಗೆ ಮುಖ್ಯವಾಗಿದ್ದು, ಕೊನೆಗೆ ಈತ ದೇಶಾಂತರ ಓಡಿಹೋಗುವುದನ್ನು ಕಾಣುತ್ತೇವೆ. ದಲಿತ ವರ್ಗಕ್ಕೆ ಅಂದಿನ ಕಾಲಕ್ಕೆ ಆರ್ಥಿಕ ಸಂಕಷ್ಟಗಳಿಂದ, ಸಿಲುಕುವಂತೆ ಮಾಡುವ ಜಮೀನ್ದಾರಿ ವ್ಯವಸ್ಥೆಗಳ ಮೂಲಕ ಸಂಚುಗಳನ್ನು ಮಾಡಿ ಅವರ ಶ್ರಮದ ಶೋಷಣೆಯನ್ನು ಮಾಡುತ್ತಾರೆ. ಎಲ್ಲಿಯೇ ಹೋದರೋ ಪುನಃ ತನ್ನಲ್ಲೇ ಜೀತಕ್ಕಿರಬೇಕೆಂಬ ಆಂತರಿಕ ಒತ್ತಾಸೆಗಳು ಭೂಮಾಲೀಕರ ಕ್ರೂರತನವನ್ನು ತೋರುತ್ತದೆ.

ಒಟ್ಟಾರೆ ಈ ಕಾದಂಬರಿಯು ಬಹುಸಂಕೀರ್ಣ ನೆಲೆಯನ್ನು ಹೊಂದಿದ್ದು ಬದುಕಿನ ಎಲ್ಲಾ ವಿವರ ಹಾಗೂ ಎಲ್ಲಾ ಜನಾಂಗದ ಬದುಕಿನ ಘಟಕಗಳ ತಾರ್ಕಿಕ ಸಂಘರ್ಷಗಳನ್ನು ಎದುರಿಸುವ ಮತ್ತು ಸಂಸ್ಕೃತಿ,ಆಚಾರ ವಿಚಾರಗಳನ್ನು ವ್ಯಕ್ತಗೊಳಿಸುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಭೂ ಪ್ರಶ್ನೆ ಕುರಿತು ಚರ್ಚಿಸುವುದನ್ನು ಕಾಣುತ್ತೇವೆ. ಈ ಕಾದಂಬರಿಯು ಮಲೆನಾಡಿನ ಸಂದರ್ಭದ ಭೂ ಸಮಸ್ಯೆ ಕುರಿತು ವಿವೇಚಿಸುವುದರ ಜೊತೆಗೆ ಆಕಾಲದಲ್ಲಾದ ಭೂ ಕಾನೂನಿನ ಚರ್ಚೆ ಮಾಡುವುದನ್ನು ಮುಖ್ಯವಾಗಿ ಗಮನಿಸಬಹುದಾಗಿದೆ.

**ಕೊನೆ ಟಿಪ್ಪಣಿ**

೧.ಕುವೆಂಪು, ಧನ್ವಂತರಿಯ ಚಿಕಿತ್ಸೆ,ನನ್ನ ದೇವರು ಮತ್ತು ಇತರೆ ಕತೆಗಳು, ೧೯೯೦ ಮೈಸೂರು.ಪುಟ ೭೪

೨. ಅದೇ ಪುಟ ೮೧

೩. ಅದೇ ಪುಟ ೮೧

೪.ಕುವೆಂಪು,ಸಾಲದ ಮಗು,ನನ್ನ ದೇವರು ಮತ್ತು ಇತರೆ ಕತೆಗಳು, ೧೯೯೦ ಮೈಸೂರು.ಪುಟ ೭೪

೫.ರಹಮತ್ ತರೀಕೆರೆ, ಪ್ರತಿಸಂಸ್ಕೃತಿ, ಪು.೧೨೪

೬.ಕುವೆಂಪು, ಕಾನೂರು ಹೆಗ್ಗಡಿತಿ, ಪುಟ ೩೦೮,

೭. ಕುವೆಂಪು, ಮಲೆಗಳಲ್ಲಿ ಮದುಮಗಳು,ಪುಟ ೮,

೮.ರಹಮತ್ ತರೀಕೆರೆ, ಪ್ರತಿಸಂಸ್ಕೃತಿ, ಪು. ೧೩೪.

೯. ಕುವೆಂಪು, ಮಲೆಗಳಲ್ಲಿ ಮದುಮಗಳು, ಪುಟ ೯

೧೦.ಅದೇ ಪುಟ ೯

೧೧.ಅದೇ ಪುಟ. ೧೭೧ ಮತ್ತು ೧೭೨.

೧೨. ಅದೇ ೨೮

೧೩. ಅದೇ ಪುಟ ೧೭೩

### ೪.೧.೩ ಕೊರಡ್ಕಲ್ ಶ್ರೀನಿವಾಸರಾವ್: ಭೂಮಾಲೀಕರ ವಿರುದ್ಧದ ಆಕ್ರೋಶ

ವಸಾಹತು ಸನ್ನಿವೇಶದ ಪ್ರಗತಿಪರ ಚಿಂತನೆ, ವೈಚಾರಿಕತೆ ಶಿಕ್ಷಣ,ಕೈಗಾರಿಕೆಯ ಪರಿಣಾಮವಾಗಿ ವರ್ಗಪ್ರಜ್ಞೆ, ಸಾಮಾಜಿಕ ನ್ಯಾಯಗಳಂತಹ ಆಲೋಚನೆಗಳು ಚಿಗುರುತ್ತಿದ್ದ ಕಾಲದಲ್ಲಿ ಶ್ರೀನಿವಾಸರಾವ್ ಬರೆಯತೊಡಗಿದರು. ಇಲ್ಲಿ ಕಡೆಗಣಿಸಲ್ಪಟ್ಟ ರೈತ ಸಮುದಾಯದ ಬದುಕನ್ನು ಕುರಿತು ಕತೆಯ ಮೂಲಕ ಅಭಿವ್ಯಕ್ತಿಸುವಲ್ಲಿ ಶ್ರೀನಿವಾಸರಾವ್‌ರವರು ಆಸಕ್ತಿತಳೆದದು ಆಶಾದಾಯಕ ಬೆಳವಣಿಗೆ. ಈ ಕುರಿತು ಶ್ರೀಕಂಠ ಕೊಡಿಗೆಯವರು ಹೇಳುವಂತೆ " ಕೊರಡ್ಕಲ್ ,ಮಾಸ್ತಿಯವರ ಸಮಕಾಲೀನರಾದರೂ ದುರ್ಬಲವರ್ಗದ ಬದುಕನ್ನು ತಮ್ಮ ಕಥೆಗಳಿಗೆ ಹಿನ್ನೆಲೆಯಾಗಿ ಸ್ವೀಕರಿಸಿರುವುದು ಗಮನಾರ್ಹ. ಆದರ್ಶದ ಅನುಕಂಪಗಳ ಸ್ಪರ್ಶವಿಲ್ಲದೆ ವಾಸ್ತವ ಮಾರ್ಗದಲ್ಲಿ ರೂಪುಗೊಂಡ ಇವರ ಹಲವು ಕಥೆಗಳು ಪ್ರಗತಿಶೀಲದೃಷ್ಟಿ ಧೋರಣೆಯನ್ನು ಉಳ್ಳವಾಗಿವೆ."[೧] ನವೋದಯ ಕಾಲಘಟ್ಟದಲ್ಲಿ ಪ್ರಕೃತಿ, ಆದರ್ಶ, ಅನುಕಂಪಗಳ ಆಧಾರದ ಕತೆಗಳು ಬಂದ ಸಂದರ್ಭದಲ್ಲಿ ಕೊರಡ್ಕಲ್‌ರವರು ದುರ್ಬಲ ವರ್ಗದ ಬದುಕನ್ನು ಗ್ರಹಿಸಲು ಯತ್ನಿಸಿರುವುದನ್ನು ಕಾಣುತ್ತೇವೆ.

ಹೀಗಾಗಿ ಅವರ "ಧನಿಯರ ಸತ್ಯನಾರಾಯಣ" ಮತ್ತು "ದೇವಸ್ಥಾನ ಪ್ರವೇಶ" ದಂತಹ ಕತೆಗಳು ವಸಾಹತು ಸನ್ನಿವೇಶದಲ್ಲಿ ಬಹುಮುಖ್ಯಕತೆಗಳಾಗಿವೆ. ಆಗಿನ ಸಾಂಸ್ಕೃತಿಕ ವೈರುಧ್ಯಗಳನ್ನು ತಮ್ಮ ನಿಷ್ಠುರ ಬರಹಗಳ ಹಾಗೂ ತಮ್ಮ ಕಾಳಜಿಗಳ ಮೂಲಕ ವ್ಯಕ್ತಪಡಿಸಿರುವುದನ್ನು ಗುರುತಿಸಬಹುದಾಗಿದೆ.ಆ ಕಾಲಘಟ್ಟದಲ್ಲಿದ್ದ ಭೂ ಪ್ರಶ್ನೆ, ಜಮೀನ್ದಾರಿ ಪದ್ಧತಿ, ಗೇಣಿದಾರನ ಸಮಸ್ಯೆ, ರೈತರ ಶೋಷಣೆಯಂತಹ ಸಮಸ್ಯೆಗಳನ್ನು ತಮ್ಮ ಕತೆಗಳ ವಸ್ತುಗಳಾಗಿ ಸ್ವೀಕರಿಸಿದ್ದಾರೆ.

ಇವರು ಬರೆಯ ತೊಡುಗುವ ವೇಳೆಗೆ ಉತ್ತರ ೧೯೩೦ರಲ್ಲಿ ಕನ್ನಡ ಜಿಲ್ಲೆಯ ಗೇಣಿರೈತರ ಹೋರಾಟಗಳು ಕಾವೇರುತ್ತಿದ್ದ ಕಾಲವಾಗಿತ್ತು. ಇಂತಹ ಸಾಮಾಜಿಕ ಸನ್ನಿವೇಶವು ಸಹಜವಾಗಿ ಕತೆಗಾರನ ಮೇಲೆ ಪ್ರಭಾವಿಸಿರಬಹುದು. ಈ ಹಿನ್ನೆಲೆಯಲ್ಲಿ ಅವರ ಪ್ರಾತಿನಿಧಿಕ ಕತೆಯಾದ ಧನಿಯರ ಸತ್ಯನಾರಾಯಣ ಕತೆಯಲ್ಲಿ ಭೂಮಾಲೀಕರ ವಿರುದ್ಧದ ಆಕ್ರೋಶ ವ್ಯಕ್ತವಾಗಿರುವುದನ್ನು ಗುರುತಿಸಬಹುದಾಗಿದೆ.

**"ಧನಿಯರ ಸತ್ಯನಾರಾಯಣ"** ಕತೆಯು ಊಳಿಗಮಾನ್ಯ ವ್ಯವಸ್ಥೆಯ ಕ್ರೌರ್ಯ,ಜಮೀನ್ದಾರರ ಶೋಷಣೆಗೆ ಒಳಗಾಗುವ ಗೇಣಿದಾರ ರೈತರ ಸಮಸ್ಯೆಯನ್ನು ಕೇಂದ್ರ ವಸ್ತುವಾಗಿಟ್ಟುಕೊಂಡಿದೆ. ತನ್ನದಲ್ಲದ ಅಂಗೈ ಅಗಲ ಭೂಮಿಯಲ್ಲಿ ಬಾಳೆಯ ಬೆಳೆಯನ್ನು ಬೆಳೆದು, ಆ ಬೆಳೆಯ ಫಸಲನ್ನು ತನ್ನದಾಗಿಸಿಕೊಳ್ಳುವ ಹೋರಾಟ ಈ ಕತೆಯ ವಸ್ತುವಾಗಿದೆ. ಇಲ್ಲಿ ಏಕಕಾಲದಲ್ಲಿ ದಲಿತ ಜಗತ್ತಿನ ವ್ಯಕ್ತಿಯೊಬ್ಬ ಭೂಮಿಯನ್ನು ಉತ್ತುವ, ಬಿತ್ತುವ ಕಾರ್ಯಕ್ಕೆ ಕೈ ಹಾಕುತ್ತಾನೆ. ಅಂಗೈ ಅಗಲದ ಭೂಮಿಯಲ್ಲಿ ಬೆಳೆದ ಫಸಲನ್ನ ತನ್ನ ಸ್ವಂತಕ್ಕೆ ದಕ್ಕಿಸಿಕೊಳ್ಳಲೂ ಆಗದ ದುರಂತವನ್ನು ಕತೆಯಲ್ಲಿ ಕಾಣುತ್ತೇವೆ. ವಸಾಹತು ಸನ್ನಿವೇಶದ ಜಾತಿ ವ್ಯವಸ್ಥೆ, ದಲಿತ ಬದುಕಿನ ಸ್ಥಿತಿಗತಿಯನ್ನು ಈ ಕತೆ ಹಿಡಿದಿಡುತ್ತದೆ. ದಲಿತ ಕುಟುಂಬ ಭೂಮಿಪಡೆಯುವುದು ಇಲ್ಲಿ ಮುಖ್ಯವಲ್ಲದೆ ಇದ್ದರೂ, ಭೂಮಿಯಲ್ಲಿ ಬೆಳೆದ ಬೆಳೆಯನ್ನು ದಕ್ಕಿಸಿಕೊಳ್ಳುವುದಕ್ಕಾಗಿ ಹೋರಾಟ ನಡೆಸುತ್ತದೆ.

ದಲಿತ ಕುಟುಂಬವೊಂದು ಭೂಮಾಲೀಕ ನಾಗಪ್ಪನ ತೋಟದ ಗುಡಿಸಲಿನಲ್ಲಿ ವಾಸಿಸುತ್ತಿರುತ್ತದೆ.ತೌಡ ಈ ಕುಟುಂಬದ ಮುಖ್ಯಸ್ಥ, ಈತನ ಹೆಂಡತಿ ದೆಯ್ಯಿ ಮತ್ತು ಮಕ್ಕಳಾದ ಬೂದ ತುಕ್ರಿ, ದೂಮ. ಇವರು ಕೇವಲ ಆರು ರೂಪಾಯಿಗಳ ಗೇಣಿ ಒಪ್ಪಂದಕ್ಕೆ ಗುಡಿಸಲು ಚಾವಣಿ ಕಟ್ಟಿಕೊಂಡು ಭೂಮಾಲೀಕನ ತೋಟದಲ್ಲಿ ವಾಸವಾಗಿದ್ದಾರೆ. ತೌಡ, ದಿನಗೂಲಿ ಮಾಡಿಕೊಂಡು ಜೀವನ ಸಾಗುತ್ತಿರುವ ಕಡುಬಡವ. ಇದರೊಂದಿಗೆ ಧಣಿ ನಾಗಪ್ಪನಿಗೆ ಕೊಡಬೇಕಾದ ಇನ್ನೂ ಎರಡು ರೂಪಾಯಿ ಬಾಕಿ ಗೇಣಿ ಬೇರೆ ಇದೆ. ಇಂತಹ ಸಂಕಷ್ಟದಲ್ಲಿ ದಲಿತ ಕುಟುಂಬವೊಂದು ಭೂಮಾಲೀಕನ ನೆರಳಲ್ಲಿ ಬದುಕನ್ನು ನಡೆಸುತ್ತಿರುವುದನ್ನು ಕಾಣುತ್ತೇವೆ.

ಇಲ್ಲಿನ ದಲಿತರ ಬದುಕಿಗೆ ಹಸಿವೇ ಪ್ರಧಾನನೆಲೆಯಾಗಿರುವುದು ಈ ಕತೆಯಲ್ಲಿ ವ್ಯಕ್ತವಾಗುತ್ತದೆ.ದೆಯ್ಯಿ ತೌರಿಗೆ ಹೋದಾಗ ಈ ಮಕ್ಕಳಿಗೆ ಮಾವ ರಸಬಾಳೆಯ ಕಂದನ್ನು ಉಡುಗೊರೆ ನೀಡುತ್ತಾನೆ. ತನ್ನ ಮಾವ ಕೊಟ್ಟ ರಸಬಾಳೆ ಕಂದನ್ನು ಬೂದ ತನ್ನ ಹೆಗಲ ಮೇಲೆ ಹೊತ್ತು, ಕನಸು ಕಟ್ಟತೊಡಗುತ್ತಾನೆ. ಮಕ್ಕಳು ತನ್ನ ತೋಟದ ಮನೆಯ ಬಚ್ಚಲು ನೀರು ಹರಿಯುವ ಜಾಗದಲ್ಲಿ ಬಾಳೆಕಂದನ್ನು ನೆಟ್ಟು ಬೆಳೆಯುವ ಕನಸನ್ನು ಹೊತ್ತಿರುತ್ತಾರೆ. ಇದಕ್ಕೆ ಪೂರಕವೆಂಬಂತೆ ತಾಯಿ ತುಕ್ರಿಯೂ ರಸಬಾಳೆ ಕಂದನ್ನು ಹೊತ್ತು ತರಲು ಸಹಕರಿಸುತ್ತಾಳೆ.ಭೂಮಿಯೊಂದಿಗೆ

ಗುರುತಿಸಿಕೊಳ್ಳುವ ಆ ಮಕ್ಕಳಿಗೆ ಭೂಮಿ ಒಡೆತನ ಯಾರದಾದರೇನು, ತಾವು ಭೂಮಿಯಲ್ಲಿ ಬೆಳೆಯುವ ಬೆಳೆ ತಮ್ಮದೆಂಬ ಭಾವನೆ ವ್ಯಕ್ತವಾಗುತ್ತದೆ.

ತೌರಿಂದ ತಂದ ರಸಬಾಳೆ ಕಂದನ್ನು ಈ ಮಕ್ಕಳು ಕಷ್ಟಪಟ್ಟು ಸಾಕುತ್ತಾರೆ. ಇವರು ಬೇಸಿಗೆಯಲ್ಲಿ ದೂರದ ಕೆರೆಯಿಂದ ನೀರು ತಂದು ಆರೈಕೆ ಮಾಡುತ್ತಾರೆ. ಮಳೆಗಾಲದಲ್ಲಿ ಗಾಳಿಸುಳಿಗೆ ಎಲ್ಲಿ ಬಾಳೆಕಂದು ಮುರಿದು ಹೋಗುವುದೋ ಎಂದು ಜತನದಿಂದ ಕಾಪಾಡಿಕೊಂಡು ಬಂದಿದ್ದಾರೆ. ರಸಬಾಳೆಯ ಕಂದಿನ ಬೆಳವಣಿಗೆಯೊಂದಿಗೆ ತಮ್ಮ ಬದುಕಿನ ಬೆಳವಣಿಗೆಯನ್ನು ಸಹ ಮಕ್ಕಳು ಕಾಣುತ್ತಾರೆ. ಆ ಬಾಳೆಯ ಕಂದು ಹೂ ಬಿಟ್ಟುದನ್ನು ಕಂಡು ತುಕ್ರಿ ಬೂದರ ಆನಂದ ಇಮ್ಮಡಿಸುತ್ತದೆ. ರೈತಾಪಿಯ ಕನವರಿಕೆಯು ಯುವ ಪೀಳಿಗೆಯಲ್ಲಿ ಮೊಳೆಯುವುದನ್ನು ಕಾಣುತ್ತೇವೆ.

ರಸಬಾಳೆಗೊನೆ ಬೆಳೆಯುತ್ತಿರುವುದನ್ನು ಬೂದ ತನ್ನ ಚಿಕ್ಕ ತಮ್ಮ ದೂಮನನ್ನು ಕರೆದು ತೋರಿಸಿದ್ದಾನೆ. ಫಲ ಕೊಡುತ್ತಿರುವ ಬಾಳೆ ಗೊನೆಯನ್ನೇ ಪಾಲುಮಾಡಿಕೊಳ್ಳಲು ಈ ಮಕ್ಕಳು ಯೋಚಿಸುತ್ತಾರೆ. ತೌಡನಂತೂ ಆಸ್ತಿ ಮಾಡಿಲ್ಲ, ಮಕ್ಕಳು ಪಾಲು ತೆಗೆದುಕೊಳ್ಳಲು ಧಣಿಯ ಕಿದ್ದಂಡಿನಲ್ಲಿ ಗೇಣಿದಾರನಾಗಿ ಸೇರಿಕೊಂಡಿದ್ದವನಿಗೆ ಆಸ್ತಿ ಎಲ್ಲಿಂದ ಬರಬೇಕು. ತಂದೆ ತೌಡ ಮಾಡದಿದ್ದರೇನಂತೆ ಆತನ ಮಕ್ಕಳು ಆಸ್ತಿ ಮಾಡಿದ್ದಾರಲ್ಲ, ಅದೇ ರಸ ಬಾಳೆಹಣ್ಣಿನ ಗೊನೆಯಾಗಿದೆ. ಇಲ್ಲಿ ಆಸ್ತಿ ಪರಿಕಲ್ಪನೆಯನ್ನು ಬೆಳೆದ ಹಣ್ಣಿನ ಗೊನೆಯಲ್ಲಿ ಕಾಣಲಾಗಿದೆ.ಹೊಸ ತಲೆಮಾರಿನ ಮಕ್ಕಳು ಆಸ್ತಿ ಪರಿಕಲ್ಪನೆಯನ್ನು ತಾವೇ ಸ್ವತಃ ಶೋಧಿಸ ಹೊರಟಿರುವುದು ಉತ್ತಮ ಬೆಳಣಿಗೆಯ ಸಂಕೇತವಾಗಿ ಕಂಡುಬರುತ್ತದೆ. ಭೂಮಿಯಿಂದ ಬೆಳೆಯುವ ಉತ್ಪನ್ನವನ್ನು ತಾವು ಅಧಿಕಾರಯುತವಾಗಿ ಪಡೆಯಬೇಕೆಂಬ ಹಂಬಲ ಮಕ್ಕಳಲ್ಲಿ ಕಾಣುತ್ತೇವೆ. ಇಂತಹ ಸಂಘರ್ಷಗಳ ನಡುವೆ ಮಕ್ಕಳು ಪರ್ಯಾಯ ನೆಲೆಯಾಗಿ ಬಾಳೆಯನ್ನು ಬೆಳೆಯುವ ಮೂಲಕ ಆಸ್ತಿ ಪಡೆಯುವ ಪರೋಕ್ಷ ಪ್ರಯತ್ನ ಕಂಡುಬರುತ್ತದೆ.

ಆದರೆ ಭೂಮಾಲೀಕನ ದರ್ಪ ಹಾಗೂ ಆರ್ಥಿಕ ಶೋಷಣೆ ಏಕಕಾಲದಲ್ಲಿ ದಲಿತ ಕುಟುಂಬವೊಂದರ ಮೇಲೆ ನಡೆಯುತ್ತದೆ. ಇಲ್ಲಿದೂಮನ ಕುಟುಂಬದ ಮೇಲೆ ಬಿರುಗಾಳಿಯಂತೆ ಧಣಿ ನಾಗಪ್ಪಯ್ಯ ಪ್ರವೇಶ ಮಾಡುತ್ತಾನೆ. ತೌಡ ಬಾಕಿ ಗೇಣಿ ಕೊಡಬೇಕಾಗಿರುವುದನ್ನು ಆತನ ಧಣಿ ಪ್ರಶ್ನಿಸುವುದನ್ನು ಕಾಣುತ್ತೇವೆ. "ತೌಡ ಆ ಗೇಣಿ ಬಾಕಿ ಎರಡು ರೂಪಾಯಿ ಯಾವಾಗ? ಅದೇನು ನಿನ್ನ ವರ್ಗದ ತೋಟವೆಂದು ತಿಳಿದೆಯಾ"[೨] ಎಂದು ದರ್ಪದಿಂದ ಭೂಮಾಲೀಕ ಕೇಳುತ್ತಾನೆ. ತೌಡ ಹಳೆಯ ಬಾಕಿ ಗೇಣಿಯನ್ನು ಎಲ್ಲಿಂದ ತರುತ್ತಾನೆ. ಧಣಿಯಮುಂದೆ ಕತ್ತನ್ನು ತಗ್ಗಿಸಿಕೊಂಡೇ ದೈನ್ಯತೆಯಿಂದ ಬೇಡಿಕೊಳ್ಳುತ್ತಾನೆ. ಈ ಮಳೆಗಾಲದ ಬರಗಾಲ ಸಾಗಲಿ, ಕಬ್ಬು ಹೂಡುವ ಆಲಿಯ ಕಾಲದಲ್ಲಿ ಹೇಗಾದರೂ ದುಡಿದು ಉಳಿಸಿ ತೀರಿಸುತ್ತೇನೆ ಎನ್ನುತ್ತಾನೆ. ಧಣಿಯರಿಗೆ ಈ ಹಳೆ ಮಾತುಗಳನ್ನು ಕೇಳಿ ರೂಢಿಯಾಗಿದ್ದರಿಂದ `ಅಲ್ಲಿಯವರೆಗೆ ಕಾದು ನೋಡುತ್ತೇನೆಂದು' ಹೇಳುತ್ತಾರೆ.ಗೇಣಿ ಧಣಿಯು ರೈತರನ್ನು ನಡೆಸಿಕೊಂಡು ಬರುತ್ತಿದ್ದ ರೀತಿ, ಧಣಿ ಕೊಟ್ಟ ಸಾಲ ಹಾಗೆಯೇ ಉಳಿದು ಮುಂದೆಯೂ ಗೇಣಿದಾರ, ಜೀತದಾಳಾಗಿಯೇ ಉಳಿಯುವುದು, ಭೂಮಾಲೀಕರ ಹುನ್ನಾರವಾಗಿದೆ.

ಊಳಿಗಮಾನ್ಯ ವ್ಯವಸ್ಥೆಯ ಕ್ರೌರ್ಯ ಆಕಾಲದಲ್ಲಿ ಎಷ್ಟರಮಟ್ಟಿಗಿತ್ತೆಂಬುದನ್ನು ಇಲ್ಲಿ ಗಮನಿಸಬಬಹುದಾಗಿದೆ. ಗೌಡ ಕ್ರೌರ್ಯ, ತನ್ನ ಗತ್ತುಗಾರಿಕೆಯಿಂದ ತನ್ನ ಅಧಿಕಾರ ಸ್ಥಾಪನೆಗಾಗಿ ದಲಿತ ಕುಟುಂಬದ ಮಕ್ಕಳ ಕನಸನ್ನು ನುಚ್ಚುನೂರು ಮಾಡುತ್ತಾನೆ. ತನ್ನ ಭೂಮಿಯಲ್ಲಿ ಬೆಳೆದ ಬೆಳೆಯೆಲ್ಲಾ ತನ್ನದೆನ್ನುವ ಅಧಿಕಾರ ಸ್ಥಾಪಿಸುವ ನೆಲೆಯಲ್ಲಿ ಭೂಮಾಲೀಕ ಪ್ರತ್ಯಕ್ಷವಾಗುತ್ತಾನೆ. ಧಣಿ ನಾಗಪ್ಪಯ್ಯ ತಮ್ಮ ತೋಟವನ್ನೆಲ್ಲಾ ಸುತ್ತಿ ಬರುತ್ತಿರುವಾಗ ಆಕಸ್ಮಿಕವಾಗಿ ತೌಡನ ಗುಡಿಸಿಲಿನ ಮುಂದೆ ತೂಗುತ್ತಿದ್ದ ರಸಬಾಳೆಗೊನೆಯ ಮೇಲೆ ಕಣ್ಣು ಬೀಳುತ್ತದೆ. ತನ್ನ ಭೂಮಿಯಲ್ಲಿ ಬೆಳೆದ ಬಾಳೆಕಾಯಿ ಎಂಬ ಅಧಿಕಾರವಾಣಿಯಿಂದ, ತೌಡನಿಗೆ ಧಣಿಯ ಆಜ್ಞೆ ಹೊರಟಿತು. ನಾಡಿದ್ದು ಹುಣ್ಣಿಮೆ ನಮ್ಮನೆಯಲ್ಲಿ ಸತ್ಯನಾರಾಯಣ ಪೂಜೆ ನಾಳೆಯೇ ಅದನ್ನು ತಂದಿಟ್ಟರೆ ಆ ದಿನ ಹಣ್ಣಾದೀತು ಭೂಮಾಲೀಕ ಹೇಳುತ್ತಾನೆ. ಇದು ತೌಡನಿಗೆ ತಿಳಿದು ಆಘಾತವಾಯಿತು. ಬಾಳೆಕಾಯಿ ಅವನದಿರಬಹುದು,ಅದನ್ನು ಬೆಳೆದಿರುವ ಭೂಮಿ ಅವನದೇನು? ಆದರೂ ತನ್ನ ಮಕ್ಕಳು ಬಾಳೆ ಮರವನ್ನು ಬೆಳೆಸಿದ್ದ ಕಷ್ಟ, ಅದರ ಮೇಲೆ ಅವರಿಗಿದ್ದ ಅದಮ್ಯ ಆಸೆಯ ಗೋಪುರವನ್ನು ಅರಿತು ಮಕ್ಕಳಿಗೋಸ್ಕರ ಧಣಿಯನ್ನು ಮತ್ತೇ ಅಂಗಲಾಚಿ ಬೇಡಿಕೊಳ್ಳುತ್ತಾನೆ. ಮಕ್ಕಳು ಬಹಳ ಆಸೆಯಿಂದ ಬೆಳೆಸಿವೆ, ಕೆಳಗಿನ ಒಂದೆರಡು ಸಣ್ಣ ಅಣಿಗೆಯಾದರೂ ಆ ಮಕ್ಕಳಿಗೆ ಕೊಡಿ ಎಂದು ಕೇಳುತ್ತಾನೆ.

ಧಣಿ ಪ್ರತಿಯಾಗಿ "ಮಕ್ಕಳಿಗೆ ರಸಬಾಳೆ ಹಣ್ಣೋ, ಮಣ್ಣೋ, ದೇವರ ಬಾಯಿಗೆ ಬೀಳಲಿ, ಮಕ್ಕಳ ಮೈಕೈ ಸುಖ ಕೊಡುತ್ತಾನೆ ಸತ್ಯನಾರಾಯಣ. ಮಕ್ಕಳಿಗಿಟ್ಟು ದೇವರಿಗೆ ಕೊಡೋದೇ? ಹೀಗೆಲ್ಲಾ ಮಾಡೋದ್ರಿಂದ್ಲೆ ನಿತ್ಯ ದರಿದ್ರ ತಪ್ಪೊದಿಲ್ಲ ನಿಮಗೆಲ್ಲಾ"[೩] ಎಂದು ಗದರಿಸುತ್ತಾನೆ.

ಊಳಿಗಮಾನ್ಯ ವ್ಯವಸ್ಥೆಯ ಭೂಮಾಲೀಕನ ಧೋರಣೆ ಮತ್ತು ದಲಿತರ ಹಸಿವಿನ ಪ್ರಶ್ನೆ ಏಕಕಾಲಕ್ಕೆ ಕಥನದಲ್ಲಿ ಅಭಿವ್ಯಕ್ತವಾಗುತ್ತವೆ. ಇತ್ತ ಧನಿಯರ ಸತ್ಯನಾರಾಯಣನ ವಿಚಾರವನ್ನು ತನ್ನ ಹೆಂಡತಿ ದೆಯ್ಯಿಗೆ ಹೇಳುತ್ತಾನೆ. ತನ್ನ ಮಕ್ಕಳು ಬಾಳೆಕಂದನ್ನು ಹೊತ್ತು ತಂದು, ಅದನ್ನು ಒಂದು ವರ್ಷದಿಂದ ಕಷ್ಟಪಟ್ಟು ಮಕ್ಕಳಂತೆ ಸಾಕಿದ್ದು, ಸಲಹಿದ್ದನ್ನು ದಯ್ಯಿ ನೆನಪಿಸಿಕೊಳ್ಳುತ್ತಾಳೆ. ತೌಡ ತನ್ನ ಬದುಕಿನ ಅಸಹಾಯಕತೆಯಿಂದ ಬಾಳೆಗೊನೆಯನ್ನು ಕಡಿದು ಹುಣ್ಣಿಮೆಯ ದಿನ ಧಣಿಯರ ಮನೆಗೆ ಕೊಡಲು ಮನೆಯೊಳಗೆ ತೂಗು ಹಾಕಿ ತನ್ನ ಹರಕಲು ಬಟ್ಟೆಯಿಂದ ಬಾಳೆ ಗೊನೆಯನ್ನು ಸುತ್ತಿ ಮುಚ್ಚಿದ . ಈ ಕಡೆ ಮಕ್ಕಳು ತಮ್ಮ ಅಪ್ಪ ಕಡಿದ ಬಾಳೆ ಗೊನೆಯನ್ನು ಕಂಡು ತಮ್ಮ ಆಸೆಯ ಗೋಪುರವನ್ನು ಮತ್ತಷ್ಟು ಎತ್ತರವಾಗಿ ಕಟ್ಟಿ ರಸಬಾಳೆ ಹಣ್ಣನ್ನು ತಿನ್ನುವುದಕ್ಕಾಗಿ ಕುಣಿದಾಡುವುದನ್ನು ಕಾಣುತ್ತೇವೆ. ದಿನವೂ ಮಕ್ಕಳು ಅದನ್ನು ಹಣ್ಣಾಯಿತೇ ಇಲ್ಲವೇ ಎಂದು ಹಲವು ಸಲ ಮುಟ್ಟಿ, ಇಣುಕಿ ನೋಡುತ್ತಿದ್ದವು. ಪಾಪ ಮಕ್ಕಳಿಗೇನು ಗೊತ್ತು, ತಾವು ತಿನ್ನುವ ರಸಬಾಳೆ ಹಣ್ಣಿಗೆ ಅಡ್ಡಿಯಾಗಿರುವ ಧನಿಯರ ಸತ್ಯನಾರಾಯಣ ಇದ್ದಾನೆಂದು. ಇಲ್ಲಿ ದೇವರ ಹೆಸರಿನಲ್ಲಿ ಭೂಮಾಲೀಕ ರೈತನ ಫಲವನ್ನು ಅನ್ಯಾಯದಿಂದ ಪಡೆದುಕೊಳ್ಳುತ್ತಾನೆ.

ತೌಡ ಇನ್ನು ಬಾಳೆಯ ಗೊನೆ ಕತೆಯನ್ನು ಮರೆತು, ಅದು ತನ್ನ ಮಕ್ಕಳಿಗೆ ಸಿಗುವುದಿಲ್ಲವೆಂದು ತಿಳಿದು ಮನಸ್ಸಿನಲ್ಲಿಯೇ ಅದನ್ನು ತೊರೆದುಕೊಳ್ಳುತ್ತಾನೆ. ತನ್ನ ಮಕ್ಕಳಿಗೆ ಗೊತ್ತಾಗದ ಹಾಗೆ, ಹಣ್ಣು ಮಾಡಲು ಇಡುತ್ತಾನೆ. ಆದರೂ ಮಕ್ಕಳು ಪತ್ತೆಹಚ್ಚಿ, ಬಾಳೆ ಕಾಯಿ ಅರಿಸಿನ ಬಣ್ಣ ತಿರುಗಿದ್ದನ್ನು ಕಂಡು ಓಡಿಬಂದು, ತಂದೆ ತೌಡನಿಗೆ ಹೇಳುತ್ತಾರೆ. ಇದೆಲ್ಲವನ್ನು ಅರಿತುಕೊಂಡ ತೌಡ ಮಕ್ಕಳನ್ನು ಸಿಟ್ಟಿನಿಂದಲಾದರೂ ಗದರಿಸಿ ಸುಮ್ಮನಿರಿಸಲು ಯತ್ನಿಸುತ್ತಾನೆ.ಇಲ್ಲ ಅದಿನ್ನೂ ಚೆನ್ನಾಗಿ ಹಣ್ಣಾಗಿಲ್ಲ, ನೀವು ನಡುನಡುವೆ ಹೀಗೆಲ್ಲ ರಗಳೆ ಮಾಡಿದರೆ ನಾನು ಅದನ್ನು ತೆಗೆದು ತೋಡಿಗೆ ಬಿಸಾಡುತ್ತೇನೆ ಎಂದು ಮಕ್ಕಳಿಗೆ ಗದರಿಸುತ್ತಾನೆ. ಈ ಮಕ್ಕಳೆಲ್ಲ ಎಲ್ಲಿ ನಮ್ಮ ತಂದೆ ತೋಡಿಗೆ ಬಿಸಾಡುತ್ತಾನೋ ಎಂದು ಬೆದರಿ ಆತನ ಗದರಿಕೆಗೆ ಒಂದು ಮಾತನ್ನೂ ಆಡದೆ ಮೌನವಾಗಿ ಗಮನಿಸುತ್ತಿರುತ್ತಾರೆ.

ಹೊಸ ತಲೆಮಾರಿನ ಯುವ ಪೀಳಿಗೆ ನೇರವಾಗಿ ಪ್ರತಿಭಟನೆ ತೋರುವ ಪ್ರತಿಕ್ರಿಯೆಯನ್ನು ಈ ಕತೆಯಲ್ಲಿ ಕಾಣುತ್ತೇವೆ. ಇಲ್ಲಿ ರಸಬಾಳೆ ಹಣ್ಣನ್ನು ತಿನ್ನುವ ಮಹಾದಾಸೆಯಿಂದ ಬೂದ, ತುಕ್ರಿ, ದೂಮ ಮೂವರು ಅಪ್ಪ ಗದರಿದ ಮಾರನೆಯ ದಿನವೇ ಬೆಳಗೆದ್ದು ನೋಡುತ್ತಾರೆ. ರಸಬಾಳೆ ಹಣ್ಣಿನ ಗೊನೆಯೂ ಇಲ್ಲ, ಅವರಪ್ಪ ತೌಡನೂ ಇಲ್ಲದಿರುವುದು ತಿಳಿಯುತ್ತದೆ. ಈ ಮಕ್ಕಳು ಇಲ್ಲೇನೋ ಮೋಸವಾಗಿದೆ ಎಂದು, ಗೋಳೋ ಎಂದು ಅಳುತ್ತಾರೆ. ಈ ಮಕ್ಕಳ ದುಃಖ ನೋಡಲಾರದ ದೆಯ್ಯಿ ಸಮಾಧಾನಕ್ಕಾಗಿ ಏನೇನೋ ಕಾಳಬೆಕ್ಕಿನ ಕತೆ ಹೇಳುತ್ತಾಳೆ. ಮಕ್ಕಳ ದುಃಖ,ಈ ಅಳಲಿನ ಮುಂದೆ ಕಾಳಬೆಕ್ಕಿನ ಕತೆ ನಿಲ್ಲುವುದಿಲ್ಲ..ಇಲ್ಲಿ ಕಾಳಬೆಕ್ಕಿನ ಸಾವನ್ನೇ ಬಯಸಬೇಕಾದರೆ ದೂಮನಿಗೆ ಆದ ಅನ್ಯಾಯ ಎಷ್ಟು ಘೋರವಾದುದು ಎಂಬುದನ್ನು ಗಮನಿಸಬಹುದಾಗಿದೆ. ದೂಮನ ಅಣ್ಣ ಬೂದ, ಅಕ್ಕ ತುಕ್ರಿ ಹತ್ತಿರ ತಾಯಿಯ ಇಂತಹ ಉಪ್ಪಿನ ಕತೆಗಳು ಅಥವಾ ಉಪಕತೆಗಳು ರುಚಿಸುವುದಿಲ್ಲ ಎಂದು ತಿಳಿಯುತ್ತದೆ. ಕೊನೆಗೆ ದೆಯ್ಯಿ ದನಿಯರ ಸತ್ಯನಾರಾಯಣನ ಕತೆಯನ್ನು ಹೇಳುತ್ತಾಳೆ. ದೆಯ್ಯಿ ಹೇಳುವ ಮಾತುಗಳಲ್ಲಿ ಅದು ಸತ್ಯನಾರಾಯಣ ದೇವರಾಗಿರಲಿಲ್ಲ." ಸತ್ನಾರ್ಗಿ ದೇವ್ರಿಗೆ ಆಕೆಯ ಮಾತುಗಳಲ್ಲಿ ಸತ್ಯನಾರಾಯಣ ದೇವರನ್ನೇ ಪ್ರಶ್ನೆ ಮಾಡಿದಂತೆ"[೪] ಕಂಡುಬರುತ್ತದೆ.

ಈ ಮಕ್ಕಳು ಕೇಳುವ ಪ್ರಶ್ನೆಗೆ ಪರ್ಯಾಯ ನೆಲೆಯಾದ ಪ್ರತಿಭಟನೆಯೇ ಅನಿವಾರ್ಯ ಎಂಬುದನ್ನು ಇಲ್ಲಿ ಗಮನಿಸಬಹುದಾಗಿದೆ. ಈ ಪ್ರತಿಭಟನಾ ನೆಲೆಯಿಂದ ದಲಿತ ಜಗತ್ತು ತೆರೆದುಕೊಳ್ಳುವ ಬಗೆಯನ್ನು ಆಶಾದಾಯಕ ಬೆಳವಣಿಗೆಯಾಗಿ ಕಾಣುತ್ತೇವೆ. ಒಂದು ಕಡೆ ತನ್ನದೆನ್ನುವ ತುಂಡು ಭೂಮಿ ಇಲ್ಲದಿರುವುದು, ಧಣಿಯ ಭೂಮಿಯಲ್ಲಿ ಬೆಳೆದ ಬೆಳೆಯನ್ನು ತಾವು ದಕ್ಕಿಸಿಕೊಳ್ಳಲಾಗದ ಸ್ಥಿತಿಯನ್ನು ಕತೆಯು ಧ್ವನಿಸುತ್ತದೆ. ಭೂ ಹೋರಾಟದ ಪರ್ಯಾಯ ನೆಲೆಯಾಗಿ ರಸಬಾಳೆಗೊನೆಯನ್ನು ದಕ್ಕಿಸಿಕೊಳ್ಳಲಾಗದ ದುರಂತವನ್ನು ಕಾಣುತ್ತೇವೆ.

ತಾವು ಬೆಳೆದ ಬೆಳೆ ತನ್ನದೆನ್ನುವ ಅಸ್ತಿತ್ವದ ಪ್ರಶ್ನೆಯಾಗಿ ಶೋಷಿತ ಮಕ್ಕಳು ಪ್ರತಿಭಟಿಸುವುದನ್ನು ಕಾಣುತ್ತೇವೆ.ದೆಯ್ಯಿ ಮಕ್ಕಳಿಗೆ ಎಷ್ಟೇ ಸಮಾಧಾನದ ಮಾತುಗಳನ್ನಾಡಿದರೂ ಪ್ರಯೋಜನಕ್ಕೆ ಬರುವುದಿಲ್ಲ. "ಆ ಮಕ್ಕಳು ಮನೆಯಲ್ಲಿ ಏನೋ ಮಹಾ ವಿಪತ್ತು ಸಂಭವಿಸಿದಂತೆ ತಲೆಗೊಂದು ಕೈಗೊಟ್ಟು ಜೋಲು ಮೋರೆ ಹಾಕಿ ಕಣ್ಣೀರೊರಸಿಕೊಳ್ಳುತ್ತಾ ಜಗಲಿಯಲ್ಲಿ ಕುಳಿತಿದ್ದವು. ತುಸು ಹೊತ್ತಾದ ಮೇಲೆ ಅದೇನು ಯೋಚನೆ ಹೊಳೆಯಿತೋ ಆ ಬೂದನಿಗೆ, ಅವನು ಅಂಗಳಕ್ಕೆ ಹಾರಿದ "ತುಕ್ರಿ ಬಾ" ಎನ್ನುತ್ತಾ ಬಾಳೆಯ ಕಂದುಗಳಿರುವ ಕಡೆಗೆ ಧಾವಿಸುತ್ತಾನೆ. ಜೊತೆಗೆತುಕ್ರಿಯೂ ಸೇರಿದ್ದಾಳೆ. ಬೂದನು ಆ ಕಂದುಗಳನ್ನು ಒಂದೊಂದಾಗಿ ಹಿಡಿದು ಬಗ್ಗಿಸಿ, ತಿರುತಿರುವಿ ಮುರಿಯುತ್ತಾ "ಇಗ ಇವು ಗೊನೆ ಹಾಕೋದು ಬೇಡಾ... ಅಅ ಸತ್ ನಾರ್ಣ ತಿತಿತ್ತಿನ್ನೋದೋ ಬೇಡ!" ಮಕ್ಕಳು ತಮಗೆ ಅನ್ಯಾಯ ಮಾಡಿದ ಬಾಳೆಯ ಗೊನೆಯನ್ನು, ಅದನ್ನು ತಿನ್ನುವ ದನಿಯರ ಸತ್ಯನಾರ್ಣ ದೇವರನ್ನು ತಕತಕ ತುಳಿಯುವುದರ ಮೂಲಕ ಅರ್ಥಪೂರ್ಣವಾದ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಮಕ್ಕಳು ವ್ಯಕ್ತಪಡಿಸುವ ಪ್ರತಿಭಟನೆ ಭೂ ಹೋರಾಟದ ಧ್ವನಿಯಾಗಿ ವ್ಯಕ್ತವಾಗುತ್ತದೆ. ಅಲ್ಲದೆ ಇಲ್ಲಿ ಭೂಪ್ರಶ್ನೆ ಅಂತರ್ಗತವಾಗಿ ಪ್ರತಿಭಟನಾತ್ಮಕ ನೆಲೆಯಲ್ಲಿ ವ್ಯಕ್ತವಾಗುವುದನ್ನು ಕಾಣಬಹುದಾಗಿದೆ.

**ಕೊನೆ ಟಿಪ್ಪಣಿ**

೧.ಶ್ರೀಕಂಠಕೂಡಿಗೆ, ಧ್ಯಾನ ಪುಟ ೭೭

೨.ಶ್ರೀನಿವಾಸರಾವ್, ದನಿಯರ ಸತ್ಯನಾರಾಯಣ, ಪುಟ೬೯

೩..ಅದೇಪುಟ ೪೦

೪..ಅದೇಪುಟ ೪೦

೫.ಅದೇ ಪುಟ ೪೦

## ೪.೧.೪ ಶಿವರಾಮಕಾರಂತ : ಚೋಮನ ಭೂ ಒಡೆತನದ ಕನಸು

ವಸಾಹತುಶಾಹಿ ಸಂದರ್ಭದ ಭಾರತೀಯದಲ್ಲಿ ಸಾಮಾಜಿಕ ಬದಲಾವಣೆಯ, ಹೊಸಗಾಳಿ ಬೀಸುವ ಕಾಲಕ್ಕೆ ಕಾರಂತರು ತಮ್ಮ ವಾಸ್ತವವಾದಿ ನೆಲೆಯ ಮೂಲಕ ಕಾದಂಬರಿಗಳನ್ನು ಬರೆಯತೊಡಗಿದರು. ಆ ಕಾಲಘಟ್ಟದಲ್ಲಿದ್ದ ಮುಖ್ಯವಾದ ಭೂ ರೈತ ಸಮಸ್ಯೆಯನ್ನು ವಾಸ್ತವ ನೆಲೆಯಲ್ಲಿ ನೋಡತೊಡಗಿರುವುದು ಮುಖ್ಯವಾಗಿ ಕಂಡುಬರುತ್ತದೆ. ಅವರ ಕುಡಿಯರ ಕೂಸು, ಮರಳಿ ಮಣ್ಣಿಗೆ, ಚಿಗುರಿದ ಕನಸು, ಬೆಟ್ಟದ ಜೀವ, ಬತ್ತದ ತೊರೆ ಈ ಎಲ್ಲಾ ಕಾದಂಬರಿಗಳಲ್ಲಿ ಭೂ ರೈತ ಪ್ರಶ್ನೆಗಳು ಕಂಡುಬರುತ್ತವೆ.

ಆದರೆ ಈ ಅಧ್ಯಯನದ ಅನುಕೂಲಕ್ಕಾಗಿ ಪ್ರಾತಿನಿಧಿಕವಾಗಿ ಭೂ ರೈತ ಪ್ರಶ್ನೆಯನ್ನು ವಿಶ್ಲೇಷಿಸಲು "ಚೋಮನ ದುಡಿ" ಕಾದಂಬರಿಯೊಂದನ್ನೇ ಇಲ್ಲಿ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಕಾದಂಬರಿ ಹುಟ್ಟುವ ಮುನ್ನ ೧೯೩೦ರಲ್ಲೇ ಈ ಭಾಗದ ಸಿರ್ಸಿ,ಸಿದ್ದಾಪುರ ,ಅಂಕೋಲೆ ಭಾಗಗಳಲ್ಲಿ ಗೇಣಿರೈತರು ಮತ್ತು ಮುಲ್ಕಿಯಲ್ಲಿ ಗೇಣಿರೈತರು ಭೂಮಾಲೀಕರ ವಿರುದ್ಧ ತಿರುಗಿ ಬಿದ್ದಿರುವುದನ್ನು ಕಾಣಬಹುದು.ಇಂಥ ಪರಿಸ್ಥಿತಿಯೂ ಕಾರಂತರ ಕಾದಂಬರಿಗಳಿಗೆ ಭೂ ರೈತ ಪ್ರಶ್ನೆಯನ್ನು ಪ್ರತಿನಿಧಿಸಲು ಪ್ರೇರಣೆಯಾಗಿರಬಹುದು.

"ಚೋಮನ ದುಡಿ"ಯಲ್ಲಿ ಕಾರಂತರು ಚಿತ್ರಿಸುವ ಸಮಾಜದಲ್ಲಿ ದಲಿತರ ಸ್ಥಿತಿಗತಿಗಳು ದಯನೀಯವಾಗಿದ್ದವು. ಇಂಥ ಪರಿಸ್ಥಿತಿಯ ಮುಂದುವರೆದು ಉಸಿರುಗಟ್ಟಿಸುವಂಥ ಸ್ಥಿತಿ ತಲುಪಿದಾಗ ಈ ಭಾಗದಲ್ಲಿ ಮುಂದೆ ಭೂ ಹೋರಾಟಗಳು ಹುಟ್ಟಿಕೊಳ್ಳಲು ಕಾರಣವಾಗಿರಬಹುದು. ಇಂಥ ಸಾಮಾಜಿಕ ಪರಿಸ್ಥಿತಿಯಲ್ಲಿ ೧೯೩೦ ರಿಂದ ೫೦ ರವರೆಗೆ ನಡೆಸಿದ ಗಿರಿಪಿಕಳೆ,ದಿನಕರ ದೇಸಾಯಿಯವರು ನಡೆಸಿ ಹೋರಾಟಗಳನ್ನು ಈ ಹಿನ್ನೆಲೆಯಲ್ಲಿ ಪರಿಗಣಿಸಬಹುದು.

ಕಾರಂತರ ಚೋಮನ ಭೂ ಒಡೆತನದ ಕನಸು ನನಸಾಗದೆ ಆತನ ಹೋರಾಟ ದುರಂತದಲ್ಲಿ ಕೊನೆಗೊಳ್ಳುತ್ತದೆ. ಚೋಮನ ದುಡಿ ಕಾದಂಬರಿಯ ತಾತ್ವಿಕ ಆಶಯವನ್ನು ಸ್ಥೂಲವಾಗಿ ಹೀಗೆ ಗುರುತಿಸಬಹುದು.ಈ ಕಾದಂಬರಿಯಲ್ಲಿ ಚೋಮ ಭೂಮಿಯನ್ನು ಪಡೆಯುವುದೇ ದೊಡ್ಡ ಆಶಯವಾಗಿದೆ. ಈತ ಭೂಮಿಯನ್ನು ಪಡೆದು ರೈತನಾಗುವುದು ಚೋಮನಿಗೆ ಅದಮ್ಯ ಬಯಕೆಯಾಗಿದೆ. ಆದರೆ ಊಳಿಗಮಾನ್ಯಶಾಹಿ ವ್ಯವಸ್ಥೆ ಇದಕ್ಕೆ ಅವಕಾಶ ಕೊಡದೆ ಆತನ ಕನಸನ್ನು ಭಗ್ನಗೊಳಿಸುತ್ತದೆ. ಭೂಮಾಲೀಕ ಸಂಕಪ್ಪಯ್ಯ ಉದಾರವಾದೀ ನೆಲೆಯಲ್ಲಿ ಯೋಚಿಸಿದರೂ,ಆತ ಸನಾತನ ನಂಬಿಕೆಗಳಿಗನುಗುಣವಾಗಿ ವರ್ತಿಸುತ್ತಾನೆ. ಸನಾತನ ಸಂಪ್ರದಾಯಶೀಲತೆ ಮೈವೆತ್ತಂತಿರುವ ಸಂಕಪ್ಪಯ್ಯನ ತಾಯಿ ದಲಿತರಿಗೆ ಭೂಮಿ ಕೊಡುವುದನ್ನು ನಿರಾಕರಿಸುತ್ತಾಳೆ. ಈ ಭೂಮಿಯನ್ನು ಪಡೆಯುವ ಸಲುವಾಗಿ ಇಡೀ ಚೋಮನ ಕುಟುಂಬವು ಛಿದ್ರವಾಗುತ್ತದೆ. ಈತನ ಬದುಕಿನ ದುರಂತಕ್ಕೆ ಕಾರಣವಾಗುತ್ತದೆ. ಇದು ಚೋಮನ ವೈಯಕ್ತಿಕ ಹೋರಾಟವಾಗಿ ರೂಪುಗೊಂಡಿದೆ. ಕಳಸದ ಮಿಂಗೇಲ ದೊರೆಗಳ ಕಾಫಿತೋಟಗಳಲ್ಲಿ ಕೃಷಿಕೂಲಿಕಾರ್ಮಿಕರನ್ನು ಶೋಷಣೆ ಮಾಡುವುದು ಕಾಣುತ್ತೇವೆ. ಇಲ್ಲಿ ಬರುವ ಮನ್ವೇಲನೂ ಕೂಡಾ, ಕುವೆಂಪು ಅವರ ಕಾದಂಬರಿಯ ಸೇರೆಗಾರ ರಂಗಪ್ಪಶೆಟ್ಟಿಯಂತೇ ಈತನೂ ಶೋಷಣೆ ಮಾಡುತ್ತಾನೆ.

ಈ ಕಾದಂಬರಿಯಲ್ಲಿ ಚೋಮನ ಚಿತ್ರಣ ಆರಂಭವಾಗುವುದಕ್ಕೆ ಮುನ್ನವೇ, ಚೋಮನ ಹೆಂಡತಿಯ ಸಾವು ಸಂಭವಿಸಿರುತ್ತದೆ. ಚೋಮನ ಐವರು ಮಕ್ಕಳಾದ ಚನಿಯ, ಗುರುವ, ಬೆಳ್ಳಿ, ಕಾಳ, ನೀಲ, ಈತನ ಕುಟುಂಬದ ಸದಸ್ಯರಾಗಿದ್ದಾರೆ. ಭೋಗಸಹಳ್ಳಿಯ ಕೊಪ್ಪದಲ್ಲಿ ವಾಸಿಸುತ್ತಿರುವ ಚೋಮನ ಕುಟುಂಬಕ್ಕೆ ಕಿತ್ತು ತಿನ್ನುವ ಕಡುಬಡತನ ಆವರಿಸಿದೆ. ಈ ಸ್ಥಿತಿಯಿಂದಾಗಿ ಚೋಮ ಕಳೆದ ನಾಲ್ಕುವರ್ಷಗಳಲ್ಲಿ ಯಾವುದೇ ಶಿಕಾರಿಗೆ ಹೋಗದಂತೆ ಮಾಡಿರುವುದು ಅವನು ರೈತನಾಗುವ ಆಸೆ. ಇತ್ತ ತನ್ನ ಮಕ್ಕಳು ಸಾಲ ತೀರಿಸಲು ಕಳಸದ ಕಾಫಿತೋಟಕ್ಕೆ ಹೋದ ಮೇಲೆ ಗುರುವ ಮತಾಂತರಗೊಂಡು ಕ್ರೈಸ್ತ ಹುಡುಗಿಯನ್ನು ಮದುವೆಯಾಗಿ ಹಿಂದಕ್ಕೆ ಬರಲು ಆಗದೇ ಅಲ್ಲಿಯೇ ಉಳಿಯುತ್ತಾನೆ. ಆದರೆ ಇನ್ನೊಬ್ಬ ಮಗ ಚನಿಯ ಕಾಫಿತೋಟದಿಂದ ಹಿಂದಿರುಗಿ ಬಂದ ನಂತರದಲ್ಲಿ ಕಾಯಿಲೆಯಿಂದ ಸಾಯುತ್ತಾನೆ. ನೀರಿನಲ್ಲಿ ಮೀಯಲು ಹೋದ ನೀಲ ಆಕಸ್ಮಿಕ ಸಾವಿಗೆ ತುತ್ತಾಗುವ ಚಿತ್ರಣವನ್ನು ಕಾಣುತ್ತೇವೆ. ತನ್ನ ಅಣ್ಣಂದಿರು ತೀರಿಸದೆ ಉಳಿದಸಾಲ ತೀರಿಸಲು ತೆರಳಿದ ಬೆಳ್ಳಿ ಕಳಸದ ಕಾಫಿತೋಟದಲ್ಲಿ ಮನ್ವೇಲನಿಂದ ಲೈಂಗಿಕ ಶೋಷಣೆಗೆ ಒಳಗಾಗುತ್ತಾಳೆ. ಹೀಗೆ ಚೋಮನ ಕುಟುಂಬದಲ್ಲಿ ಒಂದರಮೇಲೊಂದು ಆಘಾತ ಎರಗಿ ಚೋಮನ ಬದುಕನ್ನು ಹಿಂಡಿ ಹಿಪ್ಪೆ ಮಾಡುತ್ತವೆ. ವಸಾಹತು ಕಾಲಘಟ್ಟದಲ್ಲಿ

ಜರುಗಿದ ಈ ದುರಂತದಲ್ಲಿ ಈ ಊರಿನ ಭೂಮಾಲೀಕ ಸಂಕಪ್ಪಯ್ಯನ ಚುತುರತೆಯಿಂದ,ಚೋಮನಿಂದ ದುಡಿಸಿಕೊಳ್ಳುವ ಬಗೆ, ಚೋಮನ ಕುಟುಂಬದ ದುಡಿಮೆಯಿಂದ ತನ್ನ ಸಂಪತ್ತನ್ನು ಹೆಚ್ಚಿಸಿಕೊಳ್ಳುವ ಹುನ್ನಾರಗಳನ್ನು ಇಲ್ಲಿ ಕಾಣುತ್ತೇವೆ. ಭೂಮಾಲೀಕ ಸಂಕಪ್ಪಯ್ಯನ ಶ್ರಮದ ಶೋಷಣೆ, ಜೊತೆಗೆ ಮೇಲ್ನೋಟದ ಅನುಕಂಪ ತೋರುವ ಗೋಸುಂಬೆತನಗಳನ್ನು ಕಾದಂಬರಿಕಾರ ಬಯಲಿಗೆಳೆದಿದ್ದಾರೆ. ಭೂಮಾಲೀಕ ಸಂಕಪ್ಪಯ್ಯನವರಂಥ ವ್ಯಕ್ತಿಗಳು ತನ್ನ ಸನಾತನ ಧರ್ಮವನ್ನು ಪಾಲಿಸುತ್ತಲೇ ಸಾಮಾಜಿಕ ಬದುಕಿನೊಂದಿಗೆ ಪ್ರತಿರೋಧ ಒಡ್ಡದೇ ಹಾಗೂ ಬದಲಾವಣೆಯನ್ನು ಸ್ವೀಕರಿಸದೇ ಯಥಾಸ್ಥಿತಿವಾದವನ್ನು ಪ್ರತಿಪಾದಿಸುತ್ತದೆ.

"ಬೇಸಾಯಗಾರನಾಗಬೇಕೆಂಬ ಬಯಕೆ ಕುತ್ತಿಗೆಯವರೆಗಿದೆ. ಆದರೆ ಅವನ ಊರಲ್ಲಿ ಹೊಲೆಯ ಬೇಸಾಯಗಾರನೆಂಬ ಜಾತಿಯೇ ಇಲ್ಲ. ಹಾಗಾಗುವ ಆಸೆ ಹಿಡಿದು ಯಾರನ್ನಾದರೂ, ಯಾರನ್ನೆಂದರೇನು - ಸಂಕಪ್ಪಯ್ಯನವರನ್ನು ನಾಲ್ಕು ಗೇಣುಜಾಗ ನನಗೆ ಗೇಣಿ ಕೊಡಿ ಎಂದು ಕೇಳುವ ಸಾಹಸವಿಲ್ಲ. ಆದರೆ ಒಂದಲ್ಲ ಒಂದು ದಿವಸ, ನೇಗಿಲನ್ನು ಹಿಡಿದು ಮೆರೆದೇನು ಎಂಬ ಆಸೆ ಇದೆ."[೧] ಈ ಕಾದಂಬರಿಯ ಕಾಲಕ್ಕೆ ಭಾರತೀಯ ಸಂದರ್ಭದಲ್ಲಿ, ಊಳಿಗಮಾನ್ಯವ್ಯವಸ್ಥೆ ಮತ್ತು ಜಮೀನ್ದಾರಿ ವ್ಯವಸ್ಥೆ ಶಕ್ತಿಯುತವಾಗಿ ಬೇರು ಬಿಟ್ಟಿದೆ. ಚೋಮ ಎಲ್ಲಿಯೂ ಭೂಮಿಯ ಬಗ್ಗೆ ಪ್ರತಿಭಟನಾತ್ಮಕ ನೆಲೆಯಲ್ಲಿ ತನ್ನ ಸೊಲ್ಲನ್ನು ಎತ್ತುವುದಿಲ್ಲ. ಈ ರೀತಿಯ ದನಿ ಎತ್ತಲು ಆ ಕಾಲದ ಬಿಕ್ಕಟ್ಟುಗಳು ಆತನನ್ನು ದಣಿಯ ಬಳಿ ಭೂಮಿ ಕೇಳಿ ಪಡೆಯುವುದಕ್ಕೂ ಹಿಂಜರಿಯುವಂತಹ ಪರಿಸ್ಥಿತಿ ಚೋಮನಲ್ಲಿ ನಿರ್ಮಾಣವಾಗಿದೆ.

ಈ ಕುರಿತು ಸರ್ಕಾರದ ಯೋಜನೆಯಂತೆ ಎಲ್ಲೋ ಯಾವುದೋ ಊರಿನಲ್ಲಿ, ಯಾವನೋ ಒಬ್ಬ ಹೊಲೆಯ ಸರಕಾರಿ ನೆಲವನ್ನು ದರಕಾಸ್ತಿಗೆ ಪಡೆದಿದ್ದಾನೆಂಬ ವಿಷಯ ತಿಳಿಯುತ್ತದೆ. ಆತ ಆ ಭೂಮಿಯಲ್ಲಿ ನಾಲ್ಕು ಗಿಡ ಬತ್ತವನ್ನು ಬೆಳೆಸುತ್ತಾನೆಂದು ಕೇಳಿ ಚೋಮನಿಗೆ ತಾನು ಬೇಸಾಯಗಾರನಾಬೇಕೆಂಬ ಆಸೆಯು ಗರಿಗೆದರುತ್ತದೆ. ಈ ವಿಚಾರವನ್ನು ತನ್ನ ಮುದ್ದಿನ ಮಗಳಾದ ಬೆಳ್ಳಿಗೆ ಹೇಳಿ, ಸರಕಾರಿ ನೆಲವನ್ನು ದರಕಾಸ್ತಿಗೆ ಪಡೆದು ಭೂಮಿ ಉತ್ತುವ ವಿಚಾರ ತಿಳಿಸುತ್ತಾನೆ. ಇದಕ್ಕೆ ಬೆಳ್ಳಿ ಇಂತಹ ಭೂಮಿ ಉಳುಮೆ ಮಾಡುವುದು ಬೇಡ ಎಂದು ಪ್ರತಿಕ್ರಿಯಿಸುತ್ತಾಳೆ. ಈ ಬೆಳ್ಳಿ ವಾಸ್ತವಕ್ಕೆ ತೀರಾ ಹತ್ತಿರವಾಗಿ ಪ್ರತಿಕ್ರಿಯಿಸುವುದನ್ನು ಕಾಣಬಹುದಾಗಿದೆ. ಆದರೆ ಚೋಮನ ಅದಮ್ಯ ಬಯಕೆ ಹೇಗಿತ್ತೆಂದರೆ, ತನ್ನ ಹೆಂಡತಿ ಹೊಲತಿ ಇರುವಾಗಲೇ ನೇಗಿಲು ಹಿಡಿಯಬೇಕೆಂಬ ಕನಸನ್ನು ಕಟ್ಟಿರುತ್ತಾನೆ. ನೇಗಿಲು ಹಿಡಿಯುವ ಹಂಬಲ ಅದಮ್ಯ ಬಯಕೆ ವ್ಯಕ್ತವಾಗುವುದನ್ನು ಈತನಲ್ಲಿ ಕಾಣಬಹುದಾಗಿದೆ.

ಕಾಡಿನಲ್ಲಿ ಸಿಕ್ಕಿ ಎರಡು ಕರುಗಳ ಮೂಲಕ ಮುಂದೆ ಬೇಸಾಗಾರನಾಗಬೇಕೆಂಬ ಕನಸು ಕಟ್ಟತೊಡಗುತ್ತಾನೆ. ಚೋಮ ತನ್ನ ಎತ್ತುಗಳ ಮೂಲಕ ಒಂದಷ್ಟು ಬೇಸಾಯ ಮಾಡುವುದರಿಂದ ತನಗೆ ಭೂಮಿ ಸಿಗುತ್ತದೆಂಬ ಕನಸು ಕಟ್ಟುತ್ತಾನೆ. ಆದರೆ ತಾನು ರೈತನಾಗುವ, ತಾನು ಸ್ವಂತ ಭೂಮಿಯನ್ನು ಉತ್ತುವ ಬಿತ್ತುವ ಕನಸು ನನಸಾಗದೇ ಹಾಗೆಯೇ ಉಳಿಯುವ ಚಿತ್ರಣವನ್ನು ಕಾಣುತ್ತೇವೆ. ಏಕೆಂದರೆ ಅದು ಸಂಕಪ್ಪಯ್ಯನ ತಾಯಿಯ ನೆಪದಲ್ಲಿ,ತನ್ನ ಕನಸು ಕಮರುವುದನ್ನು ಕಾಣಬಹುದಾಗಿದೆ. ಇಲ್ಲಿ ಸಂಕಪ್ಪಯ್ಯ ತಮ್ಮ ಎತ್ತುಗಳು ಮುದಿಯಾಗಿವೆ,ಅದ್ದರಿಂದ ನಿನ್ನ ಎತ್ತುಗಳನ್ನು ಬೇಸಾಯಕ್ಕೆ ಯಾಕೆ ಕಟ್ಟಬಾರದು ಎಂದು ಕೇಳುತ್ತಾನೆ. ಆ ಎತ್ತುಗಳು ನಿನ್ನ ಬಳಿ ಇರುವುದು ನಿರುಪಯುಕ್ತ ಎಂದು ಹೇಳುವ ಸಂಕಪ್ಪಯ್ಯ, ಎತ್ತುಗಳನ್ನು ಕ್ರಯಕ್ಕೆ ಕೊಟ್ಟರೂ ಚಿಂತೆಯಿಲ್ಲ ನಿನ್ನ ಮನೆಯಲ್ಲಿದ್ದರೂ ಚಿಂತೆಯಿಲ್ಲ ಎಂದು ಹೇಳುತ್ತಾನೆ. ಈ ಮಾತನ್ನು ಕೇಳಿದ ಮೇಲೆ ಚೋಮ ಅಪ್ರತಿಭನಾಗುತ್ತಾನೆ. ತಾನು ಉತ್ತುವ ಬಿತ್ತುವ ಕನಸಿಗೆ ಕಲ್ಲು ಬಿತ್ತೆಂದು ಭಾವಿಸುತ್ತಾನೆ. ಇಲ್ಲಿ ಚೋಮ ಬೇರೆ ದಾರಿ ಕಾಣದೆ "ನೇಗಿಲಿಗೆ ಕಟ್ಟದೆ ಇರಲಿಕ್ಕೆ ನಾನೇನು ಬಸವನಾಡಿಸುವವನೇ?[೨] ಎಂದು ಪ್ರತಿಕ್ರಿಯಿಸುತ್ತಾನೆ. ಈ ಪ್ರತಿಕ್ರಿಯೆಯಲ್ಲಿ ಕನಸಿನ ಭಗ್ನತೆಯಿದೆ, ಆತನ ಆರ್ದ್ರತೆಯಿದೆ.

ಭೂಮಿ ಚೋಮನ ಬದುಕಿನ ಕೇಂದ್ರಕಾಳಜಿಯಾಗಿದೆ. ಆತನ ಇಡೀ ಬದುಕನ್ನು ಆವರಿಸಿದೆ . ಚೋಮನಂಥವರಿಗೆ ಭೂಮಿಯನ್ನು ಪಡೆಯುವುದು ಇಲ್ಲಿ ದೊಡ್ಡ ಸಮಸ್ಯೆಯಾಗಿದೆ. ಭೋಗನಹಳ್ಳಿಯ ಕೊಪ್ಪದಲ್ಲಿ ಮೇಲ್ವರ್ಗದ, ಭೂಮಾಲೀಕ ಸಂಕಪ್ಪಯ್ಯನ ಹಿಡಿತದಿಂದ ಚೋಮ ಭೂಮಿ ಪಡೆಯಲಾಗದೆ ಆಂತರಿಕ ಸಂಘರ್ಷದ ತೊಳಲಾಟಕ್ಕೆ ಸಿಕ್ಕಿಕೊಳ್ಳುತ್ತಾನೆ. ಈ ಕಾದಂಬರಿಯಲ್ಲಿ ಭೂಮಿ ಮುಖ್ಯ ಕಾಳಜಿಯಾಗಿದ್ದು, ಅದು ದೊಡ್ಡ ಆಶಯವಾಗಿ ಕಂಡುಬರುತ್ತದೆ.

"ಅವನ ಚಿಂತೆ ಒಂದೇನೆ ತಾನು ಇನ್ನೆಂದಾದರೂ ಬೇಸಾಯಗಾರನಾಗುವುದುಂಟೇ ಎಂದು. ಎಷ್ಟೋ ವರ್ಷಗಳಿಂದ ಸಾಗಿ ಬಂದ ಕನಸದು ಅದಕ್ಕೆ ಇಂಬುಗೊಡುವಂತೆ ಕಾಡಿನಲ್ಲಿ ಎರಡು ಕರುಗಳು ಸಿಕ್ಕಿದ್ದು; ಅವು ಈ ಮೂರು ವರ್ಷದ ಅವಧಿಯಲ್ಲಿ ಕಾಡಿನ ಹುಲಿಯ ಬಾಯಿಗೆ ತುತ್ತಾಗದೆ ಚೆನ್ನಾಗಿ ಬೆಳೆದು, ಅವನ ಆಸೆಯನ್ನು ಕೆರಳಿಸಿ ಬಂದುದು ಇಂದೋ ನಾಳೆಯೋ ತಾನೊಬ್ಬ ಬೇಸಾಯಗಾರನಾದೇನೆಂಬ ಆನಂದದ ಸ್ವರ್ಗಕ್ಕೆ ಕಾಲೂರಿಸಿದುದು-ಇವೆಲ್ಲವುಗಳ ಭವಿಷ್ಯವೇನು?"[೩] ತಾನು ಬೇಸಾಯಗಾರನಾಬೇಕೆಂಬ ಹಂಬಲ, ಛಲ ಈ ಕಾದಂಬರಿಯಲ್ಲಿ ಆಶಯವಾಗಿ ಬಂದಿದೆ.

ಈ ಘಟ್ಟದಲ್ಲಿ ಸಂಕಪ್ಪಯ್ಯನವರ ಮನಸ್ಸಿನಲ್ಲಿಯೂ ವಿಚಾರ ಲಹರಿ ಹರಿಯುತ್ತದೆ. "ಹೊಲೆಯರು ಬೇಸಾಯಗಾರರಾಗುವುದುಂಟೆ? ಎನಿಸಿತು. ಆದರೆ, ಅವರಲ್ಲಿ ಬಂಜರು ಬಿದ್ದ ಎಷ್ಟೋ ಜಮೀನುಗಳಿದ್ದುವು, ಅದನ್ನೇಕೆ ಅವನು ಸಾಗುವಳಿ ಮಾಡಬಾರದೆಂದು ತೋಚಿದುದರಿಂದ, ಅದೇ ವಿಷಯವನ್ನು ಪ್ರಸ್ತಾಪಿಸಲು ಒಳಕ್ಕೆ ತಮ್ಮ ತಾಯಿಯ ಬಳಿಗೆ ಹೋದರು."[೪] ಇತ್ತ ಚೋಮ ವಿಚಾರ ಮಾಡುತ್ತಾ ಕನಸನ್ನು ಕಟ್ಟತೊಡಗುತ್ತಾನೆ.

ಸಂಕಪ್ಪಯ್ಯನವರಿಗೆ, ತಮ್ಮ ಚೋಮನಿಗೆ ಹಾಳುಬಿದ್ದ ಒಂದು ಹೊಲದ ಚೂರನ್ನು ಕೊಡುವುದಕ್ಕೆ ಆಕ್ಷೇಪವಿರಲಿಲ್ಲ. ಅವರು ಬೇಸಾಯಗಾರರಾಗಿ ಸ್ವತಂತ್ರರಾದರೆ, ನಾಳೆ ನಾವು ನೇಗಿಲು ಹಿಡಿದರೆ ಸರಿ ಎಂದು ತಿಳಿಯಬಹುದು ಜನರು. ಇಷ್ಟಿದ್ದರೂ "ಸಂಕಪ್ಪಯ್ಯನವರು ಬಡ ಚೋಮನಿಗಾಗಿ ತಾಯಿಯನ್ನು ಮೃದುವಾಗಿ ಮಾತಾಡಿಸಿ ಕೇಳಿದರು.ಇದುವರೆಗೆ ನಮ್ಮ ಹಿರಿಯರು ನಿಮ್ಮವರಿಗೆಗೇಣಿಗೆ ಗದ್ದೆ ಕೊಟ್ಟಿದ್ದಿಲ್ಲ. ಈಗ ಹಾಗೆ ಕೊಡಲಿಕ್ಕೆ ಬರುವ ಹಾಗೆ ಇಲ್ಲ. ತಾಯಿಯ ಉತ್ತರ ಒಂದೇ ಬೇರೆ ಯಾರಾದರೂ ಹಾಗೆ ಮಾಡಿದ್ದಾರೆಯೇ ಆ ಮೇಲೆ ಮಾಡು ಅಬ್ಬಾಈ ಹೊಲೆಯರಿಗೆ ಬಂದ ಸೊಕ್ಕೇ "[೫] ಎಂದು ಆಕೆ ಪ್ರತಿಕ್ರಿಯಿಸುತ್ತಾಳೆ. ಸನಾತನತೆಯೇ ಮೈವೆತ್ತಿದ್ದಂತಹ ತಾಯಿಯ ಬಳಿ ಇದಕ್ಕೆ ಬೆಂಬಲವಿಲ್ಲದೆ ಆತನಿಗೆ ಭೂಮಿಯನ್ನು ಕೊಡಲು ನಿರಾಕರಿಸುವ ಚಿತ್ರಣವನ್ನು ಕಾಣುತ್ತೇವೆ.ಈ ವಿಷಯ ತಿಳಿದು ಚೋಮ ಇನ್ನು ಬೇಸಾಯಗಾರನಾಗಬೇಕೆಂಬುದು ತನ್ನ ಹಣೆ ಬರಹದಲ್ಲಿ ಬರೆದಿಲ್ಲ ಎಂದು ಅತ್ತರೆ ಉಪಯೋಗವಿಲ್ಲ ಎನ್ನುವಂತೆ ಮರುಗುತ್ತಾನೆ.

"ಚೋಮನ ಮನಸ್ಸು ಉದ್ವೇಗದಿಂದ ಕುದಿಯುತ್ತಲಿತ್ತು. ತನ್ನ ಹಣೆಯಲ್ಲಿ ನೇಗಿಲಿನ ಯೋಗ ಬರೆಯಲಿಲ್ಲವೆಂದು ಅವನು ಚಿಂತಿಸುತ್ತಿದ್ದ, ಎಷ್ಟೋ ಸಾರಿ ಯಾರೋ ಒಬ್ಬ ಆಫೀಸರರು ಬಂದು, ಅವನನ್ನು ಕರೆಯಿಸಿ ಉದ್ಧಾರ ಮಾಡುವೆನಾಗಿ ಹೇಳಿದ್ದರು. ಭೋಗನಹಳ್ಳಿಯ ಹೊರ ಬಯಲಲ್ಲಿದ್ದ ಒಂದು ತುಂಡು ಜಾಗವನ್ನು ಅವನಿಗೆ ಸರಕಾರದಿಂದ ಕೊಡಿಸುತ್ತೇನೆ ಅಂದಿದ್ದರು. ಹಾಗೆ ಮಾಡಿದ್ದರೆ ಇಷ್ಟರೊಳಗೇನೆ, ಕ ಡಿದಾದರೂ ಕೊಚ್ಚಿಯಾದರೂ, ಅವನದೆಂಬುವ ಒಂದು ಗೇಣು ನೆಲ ಎಂಬ ಅಭಿಮಾನವನ್ನು ಕಾಯಲು ಉಳಿಯುತ್ತಿತ್ತು. ಆದರೆ ಅವನೇ ಆ ಮಾತಿಗೆ ಕಿವಿಗೊಡಲಿಲ್ಲ. ಕೊಟ್ಟಿದ್ದರೂ, ತನ್ನ ಜೀವನ ಸುಖಮಯವಾಗುತ್ತಿತ್ತೆಂಬ ಧೈರ್ಯ ಅವನಿಗಿದ್ದಿಲ್ಲ."[೬] ಇಲ್ಲಿ ಚೋಮನಿಗೆ ತನ್ನ ಹಣೆಬರಹವನ್ನು ಶಪಿಸುವ, ವಿಧಿಯನ್ನು ಶಪಿಸುವ ನೆಲೆಯನ್ನು ಕಾಣುತ್ತೇವೆ. ಆತನ ಆರ್ದ್ರತೆಗೆ ವಿಧಿಯೇ ಮುಖ್ಯವಾಗಿ ವ್ಯಕ್ತಗೊಳ್ಳುತ್ತದೆ.

ತನ್ನ ಧಣಿ ಸಂಕಪ್ಪಯ್ಯ ಹೇಳಿದ ಮಾತಿನಿಂದ ತಾನು ಪ್ರೀತಿಯಿಂದ ಸಾಕಿದ್ದ ಎತ್ತುಗಳ ಜೋಡಿಯನ್ನು ಒಡೆಯನ ಮನಗೆ ಕಟ್ಟುವ ವಿಚಾರ, ಚೋಮನ ಮನಸ್ಸಿನಾಳದಲ್ಲಿ ವಿಚಾರ ಲಹರಿಗಳು ಹರಿಯತೊಡಗುತ್ತವೆ. ಚೋಮ ತನ್ನ ಅಂತರಂಗದ ಮಹದಾಸೆಯನ್ನು ವ್ಯಕ್ತಪಡಿಸಲಿಕ್ಕೆ ಇದೇ ಸಕಾಲ ಎಂದು ಭಾವಿಸುತ್ತಾನೆ. ಅದಕ್ಕೆ ಚೋಮ ಗಟ್ಟಿ ಧೈರ್ಯಮಾಡಿ ಧಣಿ ಸಂಕಪ್ಪಯ್ಯನನ್ನು ಕೇಳಿಯೇ ಬಿಡುತ್ತಾನೆ. ಚೋಮ ಧಣಿಗಳಿಗೆ ಇಷ್ಟೆಲ್ಲ ಒಕ್ಕಲು ಮಕ್ಕಳಿದ್ದಾರೆ, ಈ ಚೋಮನಿಗೂ ಒಂದು ಹಾಳು ಕೊಂಪೆಯನ್ನು ಗೇಣಿಗೆ ಕೊಟ್ಟಿದ್ದರೆ, ನಿಮ್ಮ ಹೆಸರು ಹೇಳಿ ಬದುಕುತ್ತಿದ್ದ ಎಂದು ಹೇಳುತ್ತಾನೆ. ಈ ಮಾತುಗಳನ್ನು ಕೇಳಿ ಸಂಕಪ್ಪಯ್ಯನಿಗೆ ಆಶ್ಚರ್ಯವಾದರೂ, ಚೋಮನಿಗೆ ಭೂಮಿಯನ್ನು ಕೊಡಲು ಒಪ್ಪಿಕೊಂಡರೂ, ತನ್ನ ತಾಯಿಯತ್ತ ಬೊಟ್ಟು ಮಾಡಿ ತೋರಿಸುತ್ತಾನೆ.

ಚೋಮ ವ್ಯವಸ್ಥೆಯ ವಿರುದ್ಧ ಹೋರಾಟ ನಡೆಸಲು ಯತ್ನಿಸಿ, ವಿಫಲನಾಗುವ ಚಿತ್ರಣವನ್ನು ಕಾಣುತ್ತೇವೆ.ಇಂತಹ ಸನ್ನಿವೇಶ ಪ್ರತಿಕ್ರಿಯೆಗೆ ಚೋಮನಿಗೆ ನಿರಾಶೆಯ ಕಾರ್ಮೋಡ ಕವಿಯುತ್ತದೆ. "ಪ್ರತಿ ಕ್ಷಣವೂ ಅವನ ಮುಂದೆ ಮುರಿದು ನಿಂತಿರುವ ನೇಗಿಲಿನ ಚಿತ್ರ ಕಾಣಿಸುತ್ತದೆ. ಒಮ್ಮೊಮ್ಮೆ ನಾನು ನನಗಾಗಿ ನೇಗಿಲನ್ನು ಹಿಡಿಯಬಾರದಾದರೆ ಇನ್ನೊಬ್ಬರಿಗಾಗಿ ಏತಕ್ಕೆ ಹಿಡಿಯಬೇಕೆಂದು ಯೋಚಿಸುತ್ತಾನೆ. ಬೇಸಾಯಗಾರನಾಗುವ ಯೋಗ ತನಗಿಲ್ಲದಿದ್ದರೆ ಇನ್ನೊಬ್ಬರ ಗದ್ದೆಯ ಕೆಸರಿನಲ್ಲಿ ಈಜಿ,ಏತಕ್ಕೆ ಬಾಳಬೇಕೆಂದು

ಆತನಿಗೆ ತೋರುವುದಿಲ್ಲ. ವಿಚಾರಗಳ ಕೋಲಾಹಲ ಅವನ ಮಿದುಳಿನಲ್ಲಿ ನಡೆಯುತ್ತಿದೆ. ಈವರೆಗೆ ಧನಿಯರು ಎಂದೊಡನೆ ಬಾಗಿ ಬಗ್ಗಿದ ಅವನ ಮನಸ್ಸು, ವಿನಯ, ವಿನಯವೇನು ದಾಸ್ಯ ಬುದ್ಧಿ, ಈಗ ನೆಟ್ಟಗೆ ನಿಲ್ಲಲು ಹೋರಾಡುತ್ತಿದೆ. ನನಗೆಲ್ಲಿಯ ಧನಿ? ನನ್ನ ಆಸೆಯನ್ನು ಪೂರೈಸದ ಧನಿಗಳ ಹಂಗು ನನಗೇಕೆ?"[೭]

ಚೋಮನ ಆಂತರ್ಯದಲ್ಲಾಗುತ್ತಿರುವ ತಲ್ಲಣಗಳು ಸಿಟ್ಟು ಸೆಡವು ಹೋರಾಟದ ಕಿಚ್ಚನ್ನು ಹಚ್ಚುವುದನ್ನು ಕಾಣುತ್ತೇವೆ. ಆತ ಸ್ವತಂತ್ರ ಬದುಕನ್ನು ಕಾಣುವ ಹಂಬಲ ವ್ಯಕ್ತಪಡಿಸುತ್ತಾನೆ. ಇತ್ತ ಸ್ವತಂತ್ರ ಬದುಕಿನ ಕಲ್ಪನೆಯ ಸ್ವಾಭಿಮಾನಿಯಾಗಿ ಬದುಕುವ ಹಂಬಲವಿದೆ. ಈ ಕಾರಣಗಳಿಂದಾಗಿ ಹೋರಾಟದ ತೀವ್ರತೆಯನ್ನು ಚೋಮನ ಅಂತರಂಗದಲ್ಲಾಗುತ್ತಿರುವ ತಲ್ಲಣವನ್ನು ಕಾಣುತ್ತೇವೆ. ಇಲ್ಲಿ ಚೋಮ ಅಸಂಘಟಿತ ನೆಲೆಯಲ್ಲಿ ಭೂ ಹೋರಾಟ ಮಾಡುತ್ತಿರುವುದನ್ನು ಕಾಣಬಹುದಾಗಿದೆ.

ಇಂತಹ ನೆಲೆಯನ್ನು ವ್ಯಕ್ತಿಗತವಾಗಿ ಅಡಗಿರುವ ವ್ಯವಸ್ಥೆಯ ದೋಷಗಳನ್ನು ಕಾದಂಬರಿಯಲ್ಲಿ ಕಾರಂತರು ಶೋಧಿಸಲು ಪ್ರಯತ್ನಿಸುತ್ತಾರೆ. ಮಾನವ ವಿರೋಧಿ ಆಶಯಗಳಿಗೆ ಮೂಲಭೂತ ವ್ಯವಸ್ಥೆ ಅಡಿಪಾಯ ಹಾಕಿದೆ ಎಂಬುದನ್ನು ಗಮನಿಸುತ್ತಾರೆ. ಆದ್ದರಿಂದ ಚೋಮನಂತಹ ವ್ಯಕ್ತಿಯ ಪರಿಸರವನ್ನು ದ್ವೇಷಿಸದೇ ಪ್ರೀತಿಯಿಂದ ನೋಡಿರುವುದನ್ನು ಕಾಣುತ್ತೇವೆ. ಬೆಳ್ಳಿಯ ಮಾತುಗಳು ಕೂಡಾ ವ್ಯವಸ್ಥೆಯತ್ತಲೇ ಬೊಟ್ಟು ಮಾಡಿ ತೋರುತ್ತದೆ. ಈ ವ್ಯವಸ್ಥೆ ನಿರ್ಮಿಸಿದ ಕೂಸುಗಳಾಗಿ ಭೂಮಾಲಿಕ ಸಂಕಪ್ಪಯ್ಯ, ಅವನ ಮುದಿ ತಾಯಿ ಕಂಡುಬರುತ್ತಾರೆ.

ಇದೇ ಸಂಕಟದಲ್ಲಿ ಪಕ್ಕದ ಹಳ್ಳಿಯ ದಣಿಗಳ ಬಿಟ್ಟಿ ದುಡಿಮೆ ಮಾಡಲು ಹೋದ ಊರಿನಲ್ಲಿ ಚೋಮ ಕೇಳುವಂತೆ, "ಇವನು ಹೋದ ಮನೆ ಕ್ರಿಶ್ಚಿಯನ್ನರದ್ದು. ಅವನೂ ಒಬ್ಬ ಗೇಣಿಯ ಒಕ್ಕಲು. ಅವನಲ್ಲಿಗೆ ಹೋದಾಗ ಅವನೊಡನೆ ನಿಮ್ಮ ಊರಿನಲ್ಲಿ ಗೇಣಿಗೆ ಗದ್ದೆ ಸಿಕ್ಕೀತೇ ಎಂದು ವಿಚಾರಿಸಿದ. ಆತನು ತಮ್ಮದೇ ಇಗರ್ಜಿಯ ಆಸ್ತಿ ಉಂಟೆಂದೂ ಇನ್ನೂ ಗೇಣಿಗೆ ಕೊಡದೆ ಉಳಿದಿದೆ ಪಾದ್ರಿ ಸಾಹೇಬರನ್ನು ಕೇಳಿದರೆ ಖಂಡಿತವಾಗಿ ಕೊಡಬಹುದೆಂದೂ ಇವನಿಗೆ ಅಭಯವನ್ನು ಕೊಟ್ಟ."[೮] ಇಲ್ಲಿ ಹಿಂದೂ ಅಲ್ಪ ಸಂಖ್ಯಾತರನ್ನು ಆಸ್ತಿ ಮತ್ತು ಆಧುನಿಕತೆಯ ಆಸೆ ತೋರಿಸಿ ಸೆಳೆಯುವ ಹುನ್ನಾರ ಕ್ರೈಸ್ತ ಅನುಯಾಯಿಗಳಲ್ಲಿ ಆಗಲೇ ಶುರುವಾಗಿದುದನ್ನು ಕಾಣುತ್ತೇವೆ. ಚೋಮನ ಮಗ ಗುರುವ ಕ್ರೈಸ್ತ ಹುಡುಗಿ ಮೇರಿಯನ್ನು ಮದುವೆಯಾಗುವುದನ್ನು ಕಾಣುತ್ತೇವೆ. ಆದ್ದರಿಂದ ಇವನ ನಂತರದ ಮುಂದಿನ ತಲೆಮಾರು, ಹಿಂದು ಕ್ರೈಸ್ತ ಘರ್ಷಣೆಯಲ್ಲಿ ಬದುಕಿ ಉಳಿಯುವಷ್ಟಾದರೂ ನ್ಯಾಯ ಪಡೆಯಬಹುದು ಎಂಬ ಆಶಯ ವ್ಯಕ್ತವಾಗುವುದನ್ನು ಕಾಣುತ್ತೇವೆ.

ಬೆಳ್ಳಿ ತೀರಾ ವಾಸ್ತವದ ಬದುಕಿನತ್ತ ಸದಾ ಕ್ರಿಯಾಶಾಲಿಯಾಗಿದ್ದಾಳೆ. ಪಾದ್ರಿಯ ಹತ್ತಿರ ಹೋಗಿ ಬಂದ ಸಂಗತಿಯನ್ನು ಚೋಮ ತನ್ನ ಮುದ್ದಿನ ಮಗಳು ಬೆಳ್ಳಿಯ ಹತ್ತಿರ ತೋಡಿಕೊಂಡ. ಇದಕ್ಕೆ ಪ್ರತಿಕ್ರಿಯಾಗಿ ಕಾರಂತರು ಬೆಳ್ಳಿಯಿಂದ ವಾಸ್ತವದ ಹೇಳಿಸುವ ಮಾತುಗಳು, "ಅಪ್ಪಾ ನಾವು ನಮ್ಮ ಯೋಗ್ಯತೆಗೂ ಮೀರಿ ಆಸೆ ಮಾಡಿದರೆ ನಡೆದೀತೆ? ಬೇಸಾಯ ಮಾಡಬೇಕಾದರೆ, ಬ್ರಾಹ್ಮಣರಾಗಿಯೂ, ಬಂಟರಾಗಿಯೋ, ಗೌಡರಾಗಿಯೋ, ಹುಟ್ಟಬೇಡವೆ? ಹಾಳಾದ ಹೊಲೆಯರಾಗಿ ಹುಟ್ಟಿ ಬೇಸಾಯ ಮಾಡಬೇಕು ಅಂದರೆ ಆಗುತ್ತದೆಯೇ? ಧನಿಗಳಾದರೂ ಏನು ಮಾಡುತ್ತಾರೆ? ಊರಿನಲ್ಲಿ ಕಟ್ಟುಕಟ್ಟಳೆಯಿಲ್ಲವೆ? ಅದನ್ನವರು ಮುರಿದರೆ ಅವರಿಗೆ ಯಾರೇನೆಂದಾರು? ಅವರ ಸುದ್ದಿ ಬಿಡು ನಾಳೆ ನೀನೇ ಬೇಸಾಯಗಾರನೆಂದು ತಿಳಿ. ಆಗ ನಮ್ಮ ಜಾತಿಯವರೇ ಎಷ್ಟು ಸಿಟ್ಟಾಗಲಿಕ್ಕಿಲ್ಲ ಅಲ್ಲದೆ ನಮಗೀಗ ಏನು ಕಡಿಮೆಯಾಗಿದೆ? ಎರಡು ಎತ್ತುಗಳಿವೆ. ಇನ್ನಾರಿಗೆ ಎತ್ತಿನ ಜೋಡಿಯಿದೆ ಉಳುವುದು, ಕೊಯ್ಯುವುದು ನಮಗೆ ತಪ್ಪಿದ್ದಲ್ಲ."[೯] ಕಾದಂಬರಿಯ ಸಾಮಾಜಿಕ ಜಾತಿ ಏಣಿ ಶ್ರೇಣಿಗಳು ಎಷ್ಟೊಂದು ಬಿಗಿಯಾದ್ದವು. ದಲಿತರ ಸಾಮಾಜಿಕ ಸ್ಥಿತಿಗಳು ದಯನೀಯವಾಗಿದ್ದವು ಎಂಬುದು ಈ ಮಾತುಗಳು ವ್ಯಕ್ತಗೊಳಿಸುತ್ತವೆ. ಅಲ್ಲದೆ ವಿಧಿವಾದದ ನೆಲೆಯಲ್ಲಿ ತಾವು ಹೊಲೆಯರಾಗಿ ಹುಟ್ಟಿದ್ದೇ ತಪ್ಪು ಎಂಬ ಭಾವನೆ ಬೆಳ್ಳಿ ಮಾತಿನಲ್ಲಿ ವ್ಯಕ್ತವಾಗುತ್ತದೆ.

ಬೆಳ್ಳಿಯ ಬದುಕು ಕಾಫಿ ತೋಟದಲ್ಲಿ ಮನ್ವೇಲನಿಂದ ಲೈಂಗಿಕ ದೌರ್ಜನ್ಯಕ್ಕೆ ತುತ್ತಾಗುತ್ತದೆ. ಆಧುನಿಕತೆಯ ಸಂಕೇತವಾಗಿದ್ದ ಕ್ರೈಸ್ತರ ಆಗಮನವು ಈ ಕಾದಂಬರಿ ಬೆಳ್ಳಿಯ ಲೈಂಗಿಕ ದೌರ್ಜನ್ಯಕ್ಕೆ ಕಾರಣವಾಗಿ ವಿಪರ್ಯಾಸವಾಗಿ ಕಂಡುಬರುತ್ತದೆ. ಕಾಫಿ ತೋಟದಲ್ಲಿ ತನ್ನ ಮಕ್ಕಳ ದುರಂತ ಮತ್ತು ದುಡಿ ಚೋಮನ ಬದುಕಿನ ವೈಯಕ್ತಿಕ ಬಯಕೆಯಾದ ಭೂಮಿ,ಪಡೆಯಲಾಗದ ದುರಂತಗಳು ಇಡೀ ಕಾದಂಬರಿಯಲ್ಲಿ ಮುಖ್ಯವಾಗುತ್ತವೆ. ಹೊಳೆ ನೀರಿನಲ್ಲಿ ಈಜು ಬಾರದೇ ಮುಳುಗುತ್ತಿರುವಾಗ ಆತನ ಜೀವ ಉಳಿಸಲು ಬ್ರಾಹ್ಮಣರು ಮುಂದಾಗದೆ

ಸಾವಿನಲ್ಲಿ ಅಂತ್ಯಗೊಳ್ಳುತ್ತದೆ. ಹೊಲೆಯನನ್ನು ಬ್ರಾಹ್ಮಣ ಮುಟ್ಟಿದರೆ ಪ್ರಳಯವೇ ಆದೀತು ಎಂಬ ಕಾರಣದಿಂದ ದಲಿತ ಜೀವ ಕಮರುತ್ತದೆ. ಮೇಲ್ವರ್ಗದ,ಮೇಲ್ಜಾತಿಯ ದೇಶೀಯ ವಸಾಹತುಶಾಹಿ ನೆಲೆಯ ಸಂಕಪ್ಪಯ್ಯ ಗೇಣಿದಾರ ರೈತರನ್ನು ಶೋಷಿಸುವ ಹಾಗೂ ಭೂ ಒಡೆತನವನ್ನು ನಿರಾಕರಿಸುವ ಪ್ರತಿನಿಧಿಯಾಗಿ ಕಂಡುಬರುತ್ತಾನೆ. ಇಲ್ಲಿ ತಾಯಿಯ ವ್ಯಕ್ತಪಡಿಸುವ ಆಶಯದ ಪ್ರತಿನಿಧಿಯಾಗಿ ಬರುವ ಸಂಕಪ್ಪಯ್ಯನ ದ್ವಂದ್ವ ಧೋರಣೆಯನ್ನು ಕಥನಕಾರ ವ್ಯಕ್ತಗೊಳಿಸಿದ್ದಾರೆ.

ಇಲ್ಲಿಕಾದಂಬರಿಕಾರ ಅನುಕಂಪದ ನೆಲೆಯಲ್ಲಿ ಚೋಮನನ್ನು ನೋಡಿದ್ದಾರೆ. ಭೂಹಂಚಿಕೆ ಕುರಿತು, ಸರಕಾರವೇ ಮಧ್ಯಪ್ರವೇಶ ಮಾಡಿ ದಲಿತರಿಗೆ ಭೂಮಿ ಕೊಡಿಸುವ ಪ್ರಕ್ರಿಯೆಯ ವಿವರ ಬರುತ್ತದೆ. ಇಲ್ಲಿ ವಸಾಹತು ಕಾನೂನು ಜಾರಿಗೆಯಾಗಿರುವ ಆಶಯವನ್ನು ತೋರುತ್ತದೆ. ಆದರೆ ಈ ವಿಚಾರದಲ್ಲಿ ಚೋಮನಿಗೆ ನಂಬುಗೆ ಬರದೇ ಇರುವುದನ್ನು ಇಲ್ಲಿ ಕಾಣುತ್ತೇವೆ.

ಈ ಕಾದಂಬರಿಯಲ್ಲಿ ಚೋಮನಿಗೆ ತಾನೊಬ್ಬ ಗೇಣಿ ರೈತನಾಗಬೇಕೆಂಬ ಹಂಬಲ ಒಂದು ಕಡೆಯಾದರೆ, ಸಂಕಪ್ಪಯ್ಯ ತಾನೊಬ್ಬ ಜಮೀನುದಾರನೆನಿಸಿಕೊಳ್ಳುವ ಹಂಬಲವನ್ನು ಈ ಇಬ್ಬರಲ್ಲಿ ಕಾಣುತ್ತೇವೆ. ಚೋಮ ತನ್ನ ವೈಯಕ್ತಿಕ ದುರಂತ ಮತ್ತು ಕುಟುಂಬದ ದುರಂತವನ್ನು ಮರೆಯಲು ತನ್ನ ಪ್ರತಿಭಟನೆಯಾಗಿ ದುಡಿಯನ್ನು ಬಾರಿಸುತ್ತಾನೆ. ಆ ಮೂಲಕ ವ್ಯವಸ್ಥೆಯತ್ತ ಬೊಟ್ಟು ಮಾಡಿ ತೋರುತ್ತಾನೆ.

"ಒಮ್ಮೆಗೇ ದುಡಿಯನ್ನು ಹಿಡಿದು ಬಾರಿಸತೊಡಗಿದ. ಆ ಆನಂದ ಇತರರಿಗೆ ಸಿಗಬಾರದೆಂದೋ ಏನೋ, ಕದವನ್ನು ತುಸುವೇ ಮರೆಮಾಡಿ ಬಂದು ತನ್ನ ದುಡಿಯನ್ನು ಬಾರಿಸಲು ಕುಳಿತ. ಆ ದಿನದಂತೆ ದುಡಿಯನ್ನು ಅವನು ಈ ಜೀವಮಾನದಲ್ಲೇ ಬಾರಿಸಿರಲಿಲ್ಲ ಇನ್ನು ಬಾರಿಸುವಂತಿಲ್ಲ. ತೀರ ಸ್ವಲ್ಪ ಹೊತ್ತು ಬಾರಿಸಿದ. ಆದರೆ ನಿಜಕ್ಕೂ ಅದು ಪ್ರಳಯ ತಾಂಡವದ ಢಮರು ನಿನಾದ!ದುಡಿಯ ಢಮಢಮ್ಮ ನಿಂತಿತು. ಒಮ್ಮೆಗೇ ನಿಂತಿತು. ಚೋಮನ ಹೃದಯದ ಢಮರೂ ನಿಂತಿತು!ಅದೂ ಒಮ್ಮೆಗೇ ನಿಂತಿತು."[೮]

ದುಡಿಯ ಮೂಲಕ ಚೋಮನ ಬದುಕಿನ ಪ್ರತಿಭಟನೆಯ ದುರಂತ ರೂಪಕ ಕಾದಂಬರಿಯಲ್ಲಿ ವ್ಯಕ್ತವಾಗಿದೆ. ಚೋಮನಾದರೂ ಅಂದಿನ ವ್ಯವಸ್ಥೆಯ ವಿರುದ್ಧ ಹೋರಾಟ ಮಾಡಲು ಬೇರೆ ಮಾರ್ಗ ಅನುಸರಿಸದೇ ದುಡಿಯನ್ನೇ ತನ್ನ ಹೋರಾಟದ ಅಸ್ತ್ರವನ್ನಾಗಿ ಬಳಸುತ್ತಾನೆ. ಇಲ್ಲಿ ದುಡಿ ಆತನ ದನಿಯಾಗಿದೆ, ಹೋರಾಟವಾಗಿದೆ. ದುಡಿಯೇ ಆತನ ಬದುಕಾಗಿದೆ. ಚೋಮ ವ್ಯವಸ್ಥೆಯವಿರುದ್ಧ, ದೌರ್ಜನ್ಯದ ವಿರುದ್ಧ, ಪ್ರತಿಭಟನೆ ಮತ್ತು ಹೋರಾಟಕ್ಕೆ ದಿಕ್ಸೂಚಿಯಾಗಿರುವುದು ಕಂಡರಿಸುತ್ತದೆ. ಇಡೀ ಕಾದಂಬರಿಯಲ್ಲಿ ವೈಯಕ್ತಿಕ ಬದುಕಿನ ಹೋರಾಟದ ದುರಂತ ಮತ್ತು ಕೌಟುಂಬಿಕ ದುರಂತಗಳು ಚೋಮನ ಬದುಕಿನ ಮುಖ್ಯ ಆಶಯಗಳಾಗಿ ಬಂದಿವೆ.ಇದು ದುರಂತಗಳಿಂದ ದುರಂತ ಕತೆಯಾಗಿದೆ. ಚೋಮ ಭೂಮಿಯನ್ನು ಪಡೆಯಲು ಹೋರಾಟ ನಡೆಸುವುದಕ್ಕಿಂತ ಮುನ್ನ ಆತನ ಕುಟುಂಬಿಕ ದುರಂತಗಳೇ ಹಿಂದಕ್ಕೆ ಎಳೆಯುತ್ತವೆ. ಇದರ ದಲಿತರ ಸಾಮಾಜಿಕ ಸ್ಥಿತಿಗತಿಗಳು ಕಾರಣಗಳಾಗಿರುವುದನ್ನು ಕಾರಂತರ ವಾಸ್ತವದ ನೆಲೆಯಲ್ಲಿ ಚಿತ್ರಿಸುತ್ತಾರೆ.

**ಕೊನೆ ಟಿಪ್ಪಣಿ**

೧.ಶಿವರಾಮಕಾರಂತ, ಚೋಮದುಡಿ ಪು.೧೧,

೨. ಅದೇ ಪುಟ ೧೯

೩. ಅದೇ ಪುಟ ೨೦

೪. ಅದೇ ಪುಟ ೨೦

೫. ಅದೇ ಪುಟ ೨೦,೨೧

೬. ಅದೇ ಪುಟ ೨೨

೭. ಅದೇ ಪುಟ ೩೫

೮. ಅದೇ ಪುಟ ೩೯

೯. ಅದೇ ಪುಟ ೪೪

೧೦.ಅದೇ ಪುಟ ೧೦೩,೧೦೪

### ೪.೧.೫ ರಾವಬಹಾದ್ದೂರ್ : ಭೂ ಉತ್ಪಾದನೆ ಮತ್ತು ರೈತ ಬದುಕಿನ ಸಂಬಂಧ

ರಾವಬಹದ್ದೂರರ ಬಿತ್ತಿಬೆಳೆದವರು (೧೯೮೩) ಕಾದಂಬರಿಯ ಕಾಲಕ್ಕೆ ಉಳುವವನೇ ನೆಲದೊಡೆಯ ಎಂಬ ಘೋಷಣೆ ಜನಪ್ರಿಯವಾಗಿತ್ತು. ೧೯೩೦ರ ಕಾಂಗ್ರೆಸ್‌ನ ಬಹು ದೊಡ್ಡ ಘೋಷಣೆಯಾಗಿದ್ದ "ಉಳುವವನೇ ನೆಲದೊಡೆಯ" ಕರ್ನಾಟಕದಲ್ಲೂ ಮಹತ್ತರ ಪ್ರಭಾವವನ್ನು ಬೀರಿದ್ದನ್ನು ಇಲ್ಲಿ ಗಮನಿಸಬಹುದು. ದೇವರಾಜ ಅರಸು ಕ್ರಾಂತಿಕಾರಿ ಭೂಸುಧಾರಣಾ ಶಾಸನವನ್ನು ಜಾರಿ ಮಾಡಿದ್ದರು. ಈ ಹಿನ್ನೆಲೆಯಲ್ಲಿ ಕಾದಂಬರಿಯಲ್ಲಿ ಬರುವ ಭೂಮಾಲೀಕ ಶ್ರೀಪತಿರಾಯ ಭೂಹೀನರಿಗೆ ಭೂಮಿಯನ್ನು ಕೊಡುವ ಆಶಯವನ್ನು ವ್ಯಕ್ತಪಡಿಸುತ್ತಾನೆ. ಇಲ್ಲಿನ ಭೂಮಾಲೀಕ ಭೂ ಹಂಚಿಕೆಯ ಕುರಿತು ಸಮಾನನೆಲೆಯಲ್ಲಿ ನೋಡುತ್ತಾನೆ. ಆದರೆ ಇಲ್ಲಿ ಕೆಳವರ್ಗದ ಮುಖಂಡ ಬೇಡರ ವೆಂಕಟ ಭೂ ಹಕ್ಕನ್ನು ಭೂಹೀನರಿಗೆ ನೀಡುವುದನ್ನು ನಿರಾಕರಿಸುತ್ತಾನೆ.

ಈ ಹಿನ್ನೆಲೆಯಲ್ಲಿ ಭೂಮಿಯನ್ನು ಕುರಿತಾಗಿ ಚರ್ಚಿಸುವ ಭೂಮಾಲೀಕನ ಉದಾರಮನೋಧರ್ಮವು ಭೂರಹಿತರ ನಡುವೆ ನಡೆಯುವ ತಾಕಲಾಟಗಳು ಕಾದಂಬರಿಯಲ್ಲಿ ವ್ಯಕ್ತವಾಗುತ್ತವೆ.ಅಲ್ಲದೆ ವಸಾಹತುಶಾಹಿ ಸ್ಥಾಪಿಸಿದ ಕೈಗಾರಿಕೆಗಳಿಗೆ, ವಸಾಹತುಶಾಹಿ ವ್ಯಾಪಾರ ವಾಣಿಜ್ಯಗಳ ಲಾಭಗಳಿಕೆಯ ರಫ್ತಿಗಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಒತ್ತಡವನ್ನು ರೈತರ ಮೇಲೆ ಹೇರಿರುವುದು ಈ ಕಾದಂಬರಿಯಲ್ಲಿ ಕಂಡುಬರುತ್ತದೆ. ಇಂದು ನವವಸಾಹತುಶಾಹಿ ಇದೇ ಕೆಲಸವನ್ನು ಬೇರೊಂದು ರೂಪದಲ್ಲಿ ಮಾಡುತ್ತಿರುವುದನ್ನು ಕಾದಂಬರಿಯು ಧ್ವನಿಸುತ್ತದೆ. ಈ ಹಿನ್ನೆಲೆಯಲ್ಲಿ ಭೂ ಉತ್ಪಾದನೆ ಮತ್ತು ರೈತ ಬದುಕಿನ ಸಂಬಂಧ ಹಾಗೂ ಭೂ ಸಂಬಂಧಗಳು ಇವರ ಬಿತ್ತಿಬೆಳೆದವರು ಕಾಂದಂಬರಿಯಲ್ಲಿ ಧ್ವನಿತವಾಗಿದೆ.

"ಬಿತ್ತಿಬೆಳೆದವರು"ಕಾದಂಬರಿಯಲ್ಲಿ ಮೋದನೂರಿನ ಬ್ರಾಹ್ಮಣ ಕುಟುಂಬದ ಶ್ರೀಪತಿರಾಯರಿಗೆ ಪೂರ್ವಜರಿಂದ ಬಂದ ಸಾವಿರಾರು ಎಕರೆ ಇನಾಂಭೂಮಿಯಿದೆ. ತಮ್ಮ ಬಳಿ ಲಾವಣಿ ಪಡೆದುಕೊಂಡ ಜಮೀನುಗಳನ್ನು ರೈತರಿಗೆ ವಹಿಸಿಕೊಡುವ ಆಕಾಂಕ್ಷೆಯನ್ನು ಶ್ರೀಪತಿರಾಯರು ವ್ಯಕ್ತಪಡಿಸುತ್ತಾರೆ. ಈ ಶ್ರೀಪತಿರಾಯರು ಉದಾರಮನಸ್ಸಿನವರಾಗಿದ್ದು, ಎಲ್ಲರೂ ಸಮಾನವಾಗಿ ದುಡಿದು ತಿನ್ನಬೇಕೆಂದು ಬಯಸುತ್ತಾರೆ. ಎಲ್ಲರೂ ಭೂಮಿಯಲ್ಲಿ ಸಮಾನ ಹಕ್ಕನ್ನು ಹೊಂದಬೇಕು ಎಂಬ ಆಶಯವನ್ನು ವ್ಯಕ್ತಪಡಿಸುತ್ತಾರೆ. ಇದಕ್ಕೆ ಪ್ರತಿಯಾಗಿ ಬೇಡರ ಮುಖಂಡ ವೆಂಕಟಪ್ಪ ದಲಿತರಿಗೆ ಹಾಗೂ ಗೇಣಿದಾರರಿಗೆ ಭೂ ಹಕ್ಕುಕೊಡುವುದು ಬೇಡ ಎಂದು ನಿರಾಕರಣೆಯ ಮಾತುಗಳ ಮೂಲಕ ಸಲಹೆ ಕೊಡುತ್ತಾನೆ. ಅದರೆ ಶ್ರೀಪತಿರಾಯರು ಇಂತಹ ಸಲಹೆಗಳಿಗೆ ತನ್ನ ನಿರ್ಧಾರ ಬದಲಾವಣೆ ಮಾಡಿಕೊಳ್ಳದೇ, ಊಳಿಗಮಾನ್ಯ ಮನಸ್ಥಿತಿ ತೋರದೆ ಉದಾರಮನಸ್ಸಿನಿಂದ ಸಮಾನತೆಯ ಮೂಲಕ ರೈತರ ಭೂ ಹಕ್ಕನ್ನು ನೀಡಲು ಇಚ್ಛಿಸುತ್ತಾರೆ.

ಶ್ರೀಪತಿರಾಯರ ಜಮೀನಿನಲ್ಲಿ ಲಾವಣಿ ಮಾಡಿಕೊಂಡು ಬೆಳೆದ ಬೆಳೆಯನ್ನು ತಂದು ಹಾಕುವುದನ್ನು ಪ್ರತಿಪಾದಿಸುತ್ತಿದ್ದ ವೆಂಕಟನನ್ನು ಕುರಿತು ಶ್ರೀಪತಿರಾಯರು "ನಿಮ್ಮ ಹೊಟ್ಟೆಗೆ ಹಾಕುವವನು ನಾನೆ ಇದು ನಿನ್ನ ಹುಚ್ಚುತನ,ಭೂಮಿತಾಯಿ ಎಲ್ಲರ ಹೊಟ್ಟೆಗೆ ಬಟ್ಟೆಗೆ ಕೊಡುವವಳು. ಅವಳಿಗೆ ಎರಡು ಬಗೆಯುವ ಮೈಗಳ್ಳರು ನಮ್ಮ ಊರ ಜನರಲ್ಲಿ ಯಾರೂ ಇಲ್ಲ ಎಂದು ನನ್ನ ಎಣಿಕೆ. ಅಂಥವರು ಇದ್ದರೆ ಅವರನ್ನು ತಿದ್ದಿ ಕೆಲಸಕ್ಕೆ ಹಚ್ಚುವುದು ನಾಯಕನಾದ ನಿನ್ನ ಕೆಲಸ. ತಲೆತಲಾಂತರದಿಂದ ನಾವು ಅಣ್ಣತಮ್ಮಂದಿರಂತೆ ಕೂಡಿ ಬಾಳ್ವೆ ಮಾಡುತ್ತ ಬಂದಿರುವೆವು. ಭೂಮಿ ನನ್ನ ಹೆಸರಿನಿಂದ ಇದ್ದರೇನಾಯಿತು ಅದರಲ್ಲಿ ದುಡಿದು ಬದುಕು ತೆಗೆಯುವವನು ನಾನಲ್ಲ. ದುಡಿಯುವವರದೇ ಭೂಮಿ."[೨] ಎನ್ನುತ್ತಾರೆ. ಇಲ್ಲಿ ನಿಜ ದುಡಿಮೆಗಾರನಿಗೆ ಭೂ ಹಕ್ಕು ದಕ್ಕಬೇಕೆಂಬ ಆಶಯ ಶ್ರೀಪತಿರಾಯರ ಮೂಲಕ ಧ್ವನಿತಗೊಳ್ಳುತ್ತದೆ. ಇಲ್ಲಿ ಕಾದಂಬರಿಕಾರರಿಗೂ ಕೂಡಾ ಭೂಹೀನರಿಗೆ ಭೂ ಹಕ್ಕು ದೊರೆಯಬೇಕೆಂಬ ಆಶಯವಿದೆ. ಉಳುವವನೇ ಭೂ ಒಡೆಯ ಎಂಬ ಆಶಯವು ಪ್ರಧಾನವಾಹಿನಿಗೆ ಬಂದಿರುವುದನ್ನು ಕಾಣಬಹುದಾಗಿದೆ.

ಈ ಕಾದಂಬರಿಯಲ್ಲಿ ಗೇಣಿರೈತ ಅಥವಾ ಲಾವಣಿ ರೈತರ ಮೇಲಿರುವ ಅದಮ್ಯ ಪ್ರೀತಿಯನ್ನು ಭೂಮಾಲೀಕ ವ್ಯಕ್ತಪಡಿಸುವುದನ್ನು ಇಲ್ಲಿ ಗಮನಿಸಬಹುದಾಗಿದೆ. "ಅವರವರ ತಾಬೇಕ್ಕೆ ಅವರು ಸಾಗುವಳಿ ಮಾಡುವ ಭೂಮಿ ವಹಿಸಿಕೊಟ್ಟು ಅವರ ಕುಟುಂಬ ಪೋಷಣೆಯ ಹೊಣೆ ಅವರ ಮೇಲೆ ಈಗಿನಿಂದಲೇ ಹೊರಿಸುವುದು ನೆಟ್ಟಗೆ. ನಾನೂ ನೀನೂ ಇರುವಾಗ ಈ ವ್ಯವಸ್ಥಾ ಹ್ಯಾಂಗ ನಡೀತದೆ ಅದನ್ನು ನೋಡಿಕೊಂಡು

ಯೋಗ್ಯ ಬದಲಾವಣೆ ಮಾಡಲಿಕ್ಕೆ ಬಂದೀತು."[೨] ಶ್ರೀಪತಿರಾಯರು ಈ ರೀತಿಯ ಬದಲಾವಣೆಯನ್ನು ತುಂಬು ಮನಸ್ಸಿನಿಂದ ಸ್ವೀಕರಿಸುವವರಾಗಿದ್ದಾರೆ. ಸಮಾಜ ಬದಲಾದ ಸ್ಥಿತಿಗೆ ಹೊಂದಿಕೊಂಡು ಬದಲಾವಣೆಗೆ ಪ್ರೋತ್ಸಾಹಿಸುವ ಮನಸ್ಸು ಭೂಮಾಲೀಕನಲ್ಲಿರುವುದು ಕಂಡುಬರುತ್ತದೆ.

ಆದರೆ ಯಥಾಸ್ಥಿತಿಯನ್ನು ಒಪ್ಪಿಕೊಳ್ಳುವ, ಜೀತದಾಳುಗಳಂತೆ ದುಡಿಯುವ ಒಡೆಯರ ಕೃಪೆಗೆ ಒಳಗಾಗುವ ಬದುಕನ್ನು ಹಾಗೆಯೇ ಉಳಿಸಿಕೊಳ್ಳುವ ಉಮೇದು ವೆಂಕಟನಲ್ಲಿದೆ. ಇಲ್ಲಿ ಶ್ರೀಪತಿರಾಯರ ಮಾತನ್ನು ಒಪ್ಪದ ಬೇಡರ ವೆಂಕಟ ನೋಡಿ ಧಣಿಗಳೆ ಈ ಭೂಮಿಯೊಳಗೆ ದುಡಿಯೋದು ಉಣ್ಣೋದು ಎಲ್ಲರಿಗೂ ಸೇರಿದ ಹಕ್ಕು ಅಂತ ಹೇಳಿ ಬಿಟ್ಟರೆ ಎಲ್ಲರೂ ಇದು ನನ್ನ ಭೂಮಿ ಅಂತ ತಿಳಕೊಂಡು ಮುಂದೆ ನೋಡಿ ದುಡಿಯುತ್ತಾ ಹೋಗುತ್ತಾರೆ. ಇಂದು ನೀವು ಭೂಮಿಯೊಳಗೆ ಪಟ್ಟಿ ಮಾಡಿ ಒಂದೊಂದು ಕುಟುಂಬಕ್ಕೆ ಇಷ್ಟು ಭೂಮಿ ಅಂತ ಹಂಚಿಕೊಟ್ಟರೆ, ನೀವು ಭೂಮಿ ಹಂಚಿಕೊಡೋದಿಲ್ಲ, ಜಗಳಾ ಹಂಚಿಕೊಡುತ್ತೀರಿ ಎನ್ನುತ್ತಾನೆ. ವೆಂಕಟನ ಭಾವನೆಯಲ್ಲಿ ಭೂ ಹಂಚಿಕೆಯೆಂದರೆ ಜಗಳದ ಹಂಚಿಕೆಯೆಂದೇ ಪೂರ್ವಗ್ರಹಪೀಡಿತನಾಗಿ ಈತ ಸಲಹೆ ನೀಡುತ್ತಾನೆ.

ಭೂಹಕ್ಕು ನೀಡುವುದರಿಂದ ದಾಯಾದಿಗಳ ಜಗಳವಾಗುತ್ತದೆ ಎನ್ನುವ ವೆಂಕಟನಿಗೆ ಭೂಮಿಯನ್ನು ತಮ್ಮ ಜನಾಂಗಕ್ಕೆ ಕೊಡುವುದು ಇಷ್ಟವಾಗುವುದಿಲ್ಲ. ಇವರೇ ಹೊಡೆದಾಡಿ ಕೋರ್ಟು ಕಚೇರಿ ಕಟ್ಟೆ ಹತ್ತದಿದ್ದರೆ ಹಡೆದವರ ಹೊಟ್ಟೆ ಪುಣ್ಯಾ ನೆಟ್ಟಗೆ ಅನಬೇಕು ಎಂದು ಭಾವಿಸುತ್ತಾನೆ. ಇಲ್ಲಿ ಆಸ್ತಿ ಹಕ್ಕು ಜಗಳದ ಮೂಲ ಎಂಬುದಾಗಿ ಹೇಳುತ್ತಾನೆ. ನಾವಂತೂ ಅಣ್ಣತಮ್ಮಂದಿರಲ್ಲ, ಬರೇ ಒಂದು ಜಾತಿಯ ಜನ, ಜಗಳ ಸಿಕ್ಕರೆ ಊರ ಇನಾಂ ಸಿಕ್ಕಷ್ಟು ಹಿಗ್ಗುವವರಾಗಿದ್ದೇವೆ ಎಂದು ತನ್ನ ಒಡೆಯನಿಗೆ ತಿಳಿಸುತ್ತಾನೆ. ನಮ್ಮಲ್ಲೇ ಜಗಳದ ಬೀಜಾ ಬಿತ್ತಿದರೆ ಊರಾಗ ಜನಾ ಬಾಳ್ವೆ ಮಾಡೊದುಂಟೆ ವಿಚಾರ ಮಾಡ್ರಿ ಭೂಮಿ ಹಂಚಿ ಕೊಡುವ ಉಸಾಬರಿ ಬ್ಯಾಡ ಎಂದು ತಿಳಿಸುತ್ತಾನೆ. ಇಲ್ಲಿ ವೆಂಕಟನ ಮಾತುಗಳು, ಆಸ್ತಿ ಹಕ್ಕು ಜಗಳದ ಮೂಲ ಈ ಆಸ್ತಿಗಾಗಿ ಎಷ್ಟು ಕಾದಾಟಗಳು ಆಗಿವೆ , ಈ ಭೂಮಿಗಾಗಿ ಅನೇಕ ಜಗಳಗಳೇ ನಡೆದಿವೆ ಎನ್ನುತ್ತಾನೆ. ಈ ಮಾತು ಸತ್ಯವೆನಿಸಿದರೂ ಆಸ್ತಿ ಹಕ್ಕು ಇಲ್ಲದೆ ಇದ್ದರೆ ಅದು ಶೋಷಣೆಯ ಮೂಲ, ಅಧಿಕಾರ ವಂಚನೆ ಮೂಲ, ಆರ್ಥಿಕ ಬದುಕಿನ ಮೂಲ ಎಂಬುದು ವೆಂಕಟನ ಆಶಯದಲ್ಲಿ ಗೈರು ಹಾಜರಾಗಿರುವುದನ್ನು ಕಾಣುತ್ತೇವೆ. ಆ ಕಾಲಕ್ಕೆ ಆಸ್ತಿಯ ಹಕ್ಕುಗಳು ಜಗಳಕ್ಕೆ ಮೂಲ ಅನ್ನಿಸಿರಬಹುದು. ಆದರೆ ಎಲ್ಲಾ ಕಾಲಕ್ಕೆ ಭೂ ಒಡೆತನವು ಶೋಷಣೆಯ ಮೂಲ ಆಗಿಲ್ಲ. ಭೂಮಿ ಅಸ್ತಿತ್ವದ,ಅಧಿಕಾರದ, ಸ್ಥಾನಮಾನದ, ಪ್ರತಿಷ್ಠೆಯ ಮೂಲ ಎಂಬ ಸತ್ಯ ವೆಂಕಟನಿಗೆ ತಿಳಿದಂತಿಲ್ಲ.

ಈ ಕಾದಂಬರಿಯ ಕಾಲಕ್ಕೆ ಮೊದಲ ಮಹಾಯುದ್ಧ ನಡೆದಿರುವುದನ್ನು ಕಾಣುತ್ತೇವೆ. ಅಲ್ಲದೆ ಸ್ವಾತಂತ್ರ್ಯ ಹೋರಾಟ, ಸ್ವದೇಶಿ ವಸ್ತುಗಳ ಬಳಕೆ, ಲೋಕಮಾನ್ಯ ತಿಲಕರ ಪ್ರಭಾವದಿಂದ ದೇಶಪ್ರೇಮವನ್ನು ಮೈಗೂಡಿಸಿಕೊಂಡ ಉತ್ಸಾಹಿಯುವಕ ಶ್ರೀಪತಿರಾಯರ ಮೊದಲ ಮಗ ಅಣ್ಣಾರಾಯ ಆದರ್ಶಪ್ರಾಯ ವ್ಯಕ್ತಿಯಾಗಿದ್ದಾನೆ. ವಿದ್ಯಾಭ್ಯಾಸಕ್ಕಾಗಿ ಮುಂಬೈಗೆ ತೆರಳಿದ್ದ ಆತ ಬಿ.ಎ. ಅರ್ಧಕ್ಕೆ ಬಿಟ್ಟು ಸರ್ಕಾರಿ ನೌಕರಿಯ ಗುಲಾಮಗಿರಿಯ ಕೆಲಸ ಬೇಡವೆಂದು ನಿರಾಕರಿಸಿ ತನ್ನ ಊರಿಗೆ ಮರಳುತ್ತಾನೆ. ತನ್ನ ಊರಲ್ಲಿಯೇ ರಾಷ್ಟ್ರೀಯ ಹೋರಾಟ ಕಟ್ಟುವುದಾಗಿ ದೂರದ ಊರಿನಿಂದ ತನ್ನ ಗೆಳೆಯರು ಬರುತ್ತಾರೆಂದು ತನ್ನ ತಂದೆಗೆ ತಿಳಿಸುತ್ತಾನೆ. ಶ್ರೀಪತಿರಾಯರಿಗೆ ತನ್ನ ಮಗನ ನಿರ್ಧಾರ ಕಸಿವಿಸಿಗೊಳಿಸುತ್ತದೆ. ಆದರೆ ಬದಲಾವಣೆಯನ್ನು ಬಯಸುವ ಮನಸ್ಥಿತಿಯಿಂದಾಗಿ, ಯುವ ಪೀಳಿಗೆಯ ಚಿಂತನೆಯನ್ನು ಉದಾರ ಮನಸ್ಸಿನಿಂದ ಸ್ವೀಕರಿಸುವ ರಾಯರು ಈತನ ನಿರ್ಧಾರವನ್ನು ಒಪ್ಪುತ್ತಾರೆ.

ಇಲ್ಲಿ ಅಣ್ಣರಾಯನು ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸುವ ತನ್ನ ನಿರ್ಧಾರವನ್ನು ಹಿಂತೆಗೆದುಕೊಂಡು ತನ್ನ ಊರಿಗೆ ವಾಪಸ್ಸಾಗುತ್ತಾನೆ. ತನ್ನ ಊರಿನಲ್ಲಿ ಮದುವೆಯಾಗಿ ರೈತನಾಗಿ ಉಳಿಯುವ ಚಿಂತನೆ ನಡೆಸುತ್ತಾನೆ. ಇದೇ ಸಂದರ್ಭದಲ್ಲಿ ಶ್ರೀಪತಿರಾಯರ ಇಬ್ಬರು ಮಕ್ಕಳಲ್ಲಿ ಕಿರಿಯ ತಮ್ಮ, ತಮ್ಮಣ್ಣನಿಂದ ತಕರಾರು ಹುಟ್ಟಿಕೊಳ್ಳುತ್ತದೆ. ವಿದೇಶಿ ಸೈಕಲ್ ಕೊಂಡುದರ ಪರಿಣಾಮವಾಗಿ ಅಣ್ಣತಮ್ಮಂದಿರಲ್ಲಿ ಉಂಟಾದ ಮನಸ್ತಾಪದಿಂದ ಆಸ್ತಿ ಇಬ್ಭಾಗ ಮಾಡುವಂತೆ, ಶ್ರೀಪತಿರಾಯರನ್ನು ಒತ್ತಾಯಿಸುತ್ತಾರೆ. ಜಾಗತಿಕ ಯುದ್ಧದ ಸಂದರ್ಭದಲ್ಲಿ ಒಕ್ಕಲುತನದ ಬೆಳೆಗೆ ಭಾರೀ ಬೆಲೆ ಬಂದು ಎಲ್ಲರೂ ಹತ್ತಿಯನ್ನು ಬೆಳೆಯ ತೊಡಗುತ್ತಾರೆ. ಆಗ ಶ್ರೀಪತಿರಾಯರು ಸೂಚಿಸುವಂತೆ "ಅಣ್ಣಾ, ನಮ್ಮ ಭೂಮಿಯಲ್ಲಿ ಕೇವಲ ಆಹಾರ ಧಾನ್ಯಗಳನ್ನೇ ಬೆಳೆಸು. ಇದು ನನ್ನ ಇಚ್ಛೆ. ಹಣದ ಆಸೆಗೆ ಬೀಳಬೇಡ. ಹಣದ ಹುಚ್ಚು ಒಮ್ಮೆ ನೆತ್ತಿಗೇರಿದರೆ ಜನರು ಉಪವಾಸ

ಸತ್ತರೂ ಅದರ ಪರಿವೆ ರೈತನಿಗೆ ಇಲ್ಲದಾಗುವುದು."[೩]

ಮಹಾಯುದ್ಧದ ಸಂದರ್ಭದಲ್ಲಿ ಹತ್ತಿ ಬೆಳೆಯನ್ನು ಬೆಳೆಯುವಂತೆ ಭಾರತದ ರೈತರ ಒತ್ತಾಯ ಹೇರುತ್ತಾರೆ. ಈ ಹೇರಿಕೆಯಿಂದ ಇಲ್ಲಿನ ರೈತರು ಲಾಭಗಳಿಕೆಯ ಉದ್ದೇಶದಿಂದ ವಾಣಿಜ್ಯ ಬೆಳೆಯನ್ನು ಬೆಳೆಯತೊಡಗುತ್ತಾರೆ. ಅದಕ್ಕೆ ಶ್ರೀಪತಿರಾಯ ಹಣದಾಸೆ ಬೀಳಬೇಡವೆಂದು ತನ್ನ ಮಗನಿಗೆ ಎಚ್ಚರಿಕೆ ನೀಡುತ್ತಾನೆ. ಇಂಥ ಆಶಯಗಳು ಇಂದು ನವವಸಾಹತು ಶಾಹಿ ಇದೇ ಕೆಲಸವನ್ನು ಬೇರೊಂದು ರೂಪದಲ್ಲಿ ಮಾಡುತ್ತಿದೆ.

ಈ ಕಾದಂಬರಿಯಲ್ಲಿ ಅಣ್ಣತಮ್ಮಂದಿರ ಮನಸ್ತಾಪದಿಂದ ಆಸ್ತಿ ಇಬ್ಭಾಗವಾಗಬೇಕೆಂಬ ಒತ್ತಡ ಬರುತ್ತದೆ. ಇದಕ್ಕೆ ಪ್ರತಿಯಾಗಿ ಶ್ರೀಪತಿರಾಯರು, ಈ ಮನೆತನದ ಆಸ್ತಿಯು ನನ್ನ ದೇಹದಂತೆ ನನಗೆ ಅವಿಭಾಜ್ಯವಾಗಿರಬೇಕೆಂಬ ಆಸೆ ಇತ್ತು, ಎಂದು ತಮ್ಮ ಇಚ್ಛೆಯನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಅಣ್ಣತಮ್ಮರಿಬ್ಬರಿಗೂ ಶ್ರೀಪತಿರಾಯರು ಭೂಮಿಯನ್ನು ಪಾಲುಮಾಡುತ್ತಾರೆ. ಪಾಲು ಹಂಚುವ ವೇಳೆ "ರೈತರ ಮುಖಂಡನು ಎದ್ದು ಆಸ್ತಿಯಲ್ಲಿ ಪಾಲು ಮಾಡಿಕೊಂಡರೆ ರೈತರಲ್ಲಿಯೂ ಅದರಂತೆ ಪಾಲು ಮಾಡಿಕೊಂಡರೆ ಪಾಡ ಅಲ್ಲವೇ ಎಂದು ಕೇಳಿದ. ಈ ಮಾತು ಕೇಳಿ ತಮ್ಮಣ್ಣ ಎಚ್ಚೆತ್ತವನಂತೆ ಅವನು ಹೇಳುವುದು ಸರಿಯಾದ ಮಾತು. ಈಗ ನಾವು ಪಾಲು ಮಾಡಿಕೊಂಡದ್ದು ಸ್ವಂತ ಕಮತಕ್ಕೆ ಇಟ್ಟುಕೊಂಡ ಭೂಮಿ. ರೈತರಿಗೆ ಲಾವಣಿಯಿಂದ ಕೊಟ್ಟ ಭೂಮಿಯಲ್ಲಿಯೂ ಪಾಲು ಆಗಬೇಕಲ್ಲ. ಯಾವ ಭೂಮಿ ಯಾರ ಪಾಲಿಗೆ ಬರುವದೋ ಅದನ್ನು ಸಾಗುವಳಿ ಮಾಡುವ ರೈತ ಅವನ ಪಾಲಿಗೆ ಹೋದಂತೆ ಆಗುವುದು."[೪] ಎನ್ನುತ್ತಾನೆ.

ಇಲ್ಲಿ ತಮ್ಮಣ್ಣನ ಧೋರಣೆಯಲ್ಲಿ ಭೂಮಾಲೀಕನ ಊಳಿಗಮಾನ್ಯಶಾಹಿ ಆಲೋಚನೆ ಅಡಗಿರುವುದನ್ನು ಕಾಣುತ್ತೇವೆ. ಆದರೆ ತಮ್ಮಣ್ಣನ ಅಣ್ಣ ಅಣ್ಣಾರಾಯನಲ್ಲಿ ಈ ರೀತಿಯಧೋರಣೆಯನ್ನು ಕಾಣಲಾಗುವುದಿಲ್ಲ. ಅಲ್ಲದೆ ಶ್ರೀಪತಿರಾಯರಿಗೂ ಈ ಲಾವಣಿ ಭೂಮಿ ಮತ್ತು ರೈತರನ್ನು ಹಂಚಿಕೊಳ್ಳುವುದು ಇಷ್ಟವಿರುವುದಿಲ್ಲ. ಆದರೆ ತಮ್ಮಣ್ಣನ ಧೋರಣೆಯಿಂದಾಗಿ ಶ್ರೀಪತಿಯಾರು ಲಾವಣಿ ಭೂಮಿಯ ಹಕ್ಕನ್ನು ರೈತರಿಗೆ ನೀಡಬೇಕೆಂಬ ಆಶಯಕ್ಕೆ ಧಕ್ಕೆ ಉಂಟುಮಾಡುತ್ತದೆ.

ಪಾಲಾದ ನಂತರದಲ್ಲಿ ಅಣ್ಣತಮ್ಮಂದಿರದಲ್ಲಿ ಒಳಜಗಳಗಳು ಘರ್ಷಣೆಗಳು ಶುರುವಾಗಿ ಇದಕ್ಕೆ ತಕ್ಕ ಹಾಗೆ ಕುಣಿಯುವ ರೈತರು ಕಂಡುಬರುತ್ತಾರೆ. ಗ್ರಾಮೀಣ ಸಮುದಾಯದ ಮೇಲೆ ಬೀಳುವ ಎಲ್ಲ ರೀತಿಯ ಆರ್ಥಿಕ ಶೈಕ್ಷಣಿಕ,ಕೃಷಿಸಂಬಂಧಿ ಪೆಟ್ಟುಗಳೂ ಸಾಂಸ್ಕೃತಿಕವಾಗಿ ಪರಿಣಾಮ ಬೀರುವುದನ್ನು ಕಾಣಬಹುದು. ಸಂಸ್ಕೃತಿನಾಶದಿಂದ ಅನಾಥ ಪ್ರಜ್ಞೆ, ಆತ್ಮಹತ್ಯೆಯೂ ಉಂಟಾಗುತ್ತದೆ. ಬದಲಾದ ಧೋರಣೆಯಲ್ಲಿ ಭೂಮಿಗೂ ಹೆಚ್ಚಿನ ಬೆಲೆ ಬಂದುದು ಆರ್ಥಿಕ ನೆಲೆಯಿಂದ ಭೂಮಿಯನ್ನು ನೋಡತೊಡಗುವುದನ್ನು ಈ ಕಾದಂಬರಿಯಲ್ಲಿ ಕಾಣುತ್ತೇವೆ.

ಈ ಕಾದಂಬರಿಯಲ್ಲಿ ಉದಾರವಾದ ಮನೋಧರ್ಮದ ನೆಲೆಯಲ್ಲಿ ಭೂ ಹಕ್ಕು ಸಮಾನಹಂಚಿಕೆಯಾಗಬೇಕೆಂಬ ಆಶಯ ಶ್ರೀಪತಿರಾಯನಂತಹ ವ್ಯಕ್ತಿತ್ವದಲ್ಲಿ ಕಾಣುತ್ತೇವೆ. ಇದೇ ಕಾಲಕ್ಕೆ ಭೂಹೀನರ ನಾಯಕ ವೆಂಕಟನಲ್ಲಿ ಭೂ ಹೀನರಿಗೆ ಭೂ ಹಕ್ಕು ನಿರಾಕರಿಸುವ ದುರಂತವನ್ನು ಕಾಣುತ್ತೇವೆ. ಆದರೆ ಈ ಕಾದಂಬರಿಯ ಆಶಯದಲ್ಲಿ ಭೂ ಹೀನರಿಗೆ ಭೂ ಹಕ್ಕು ನೀಡಬೇಕೆಂಬ ಆಶಯ ವ್ಯಕ್ತವಾಗುವುದನ್ನು ಮುಖ್ಯವಾಗಿ ಗಮನಿಸಬಹುದಾಗಿದೆ. ಇಲ್ಲಿ ಭೂ ಹಕ್ಕು ಕೆಳವರ್ಗದವರಿಗೆ ಜಗಳವಾಗಿ ಪರಿಣಮಿಸಿದೆ. ಇದನ್ನು ಬೇಡರ ನಾಯಕ ವೆಂಕಟನಿಂದ ಹೇಳಿಸುತ್ತಾರೆ.

"**ಗ್ರಾಮಾಯಣ**" ದಲ್ಲಿ ಸಾಮಾಜಿಕ ಬದುಕಿನ ಸ್ಥಿತ್ಯಂತರವನ್ನು ಮುಖ್ಯವಸ್ತುವನ್ನಾಗಿಸಿಕೊಂಡು ಗ್ರಾಮೀಣ ಬದುಕಿನಲ್ಲಿ ಮಾನವೀಯತೆಯ ಹುಡುಕಾಟ ನಡೆಸಿರುವುದನ್ನು ಗಮನಿಸಬಹುದು. ಈ ಕಾದಂಬರಿಯ ಘಟನೆಗಳು ಬಹುಭಾಗ ಕೃಷ್ಣಾನದಿಯ ದಂಡೆಯ ಪಾದಳ್ಳಿ ಎಂಬ ಒಂದು ಗ್ರಾಮದಲ್ಲಿ ನಡೆಯುತ್ತವೆ. ಈ ಘಟನೆಗಳೆಲ್ಲವೂ ಹತ್ತೊಂಬತ್ತನೇ ಶತಮಾನದ ಅಂತ್ಯ ಭಾಗದಲ್ಲಿ ನಡೆಯುತ್ತವೆ. ಕಾದಂಬರಿ ಕುರಿತಂತೆ ಈ ಲೇಖಕರೇ ಹೇಳುವಂತೆ "ಈ ಕಾದಂಬರಿಗೆ ನಾಯಕನಿಲ್ಲ, ನಾಯಕಿಯೂ ಇಲ್ಲ, ಪ್ರಮುಖವಾಗಿ ಕಂಡು ಬರುವ ಪಾತ್ರಗಳು ಇರಬಹುದಾದರೂ, ಅವು ಜೀವನ ವಿನ್ಯಾಸದ ದೃಷ್ಟಿಯಿಂದ ಮಾತ್ರ ಪ್ರಮುಖವಾಗಿವೆ. ಪಾದಳ್ಳಿಯ ಜನಸಮೂಹವೇ ಈ ಕಾದಂಬರಿಯ ನಾಯಕನೆಂದು ನಾನು ತಿಳಿದಿದ್ದೇನೆ."[೫] ಎಂಬುದು ಕಾದಂಬರಿಯ ಉದ್ದೇಶ.

ಇಲ್ಲಿನ ಗ್ರಾಮಾಯಣವೇ ಗ್ರಾಮೀಣ ಬದುಕಿನ ಸ್ಥಿತ್ಯಂತರವನ್ನು ಸೂಚಿಸುತ್ತದೆ. ಇಲ್ಲಿ ಬರುವ ಪಾದಳ್ಳಿಯ ಜನರಲ್ಲಿ ಮುಖ್ಯವಾಗಿ ರಾಣೋಜಿರಾವ್ ಘೋರ್ಪಡೆಯ ಮನೆತನದ ನಿವಾಸಸ್ಥಾನವಾದ ವಾಡೆ ಕಂಡುಬರುತ್ತದೆ. ಇಲ್ಲಿನ ಗ್ರಾಮಾಧಿಕಾರಿಗಳಾದ ಶಂಕರಪ್ಪಗೌಡ ಹಾಗೂ ಶೇಷಪ್ಪ ಕುಲಕರ್ಣಿ ಪ್ರತಿನಿಧಿಸುವ ಬ್ರಿಟಿಶ್ ಸರಕಾರದ ಅಧಿಕಾರವಿದೆ. ಪಡದಯ್ಯ ಮಠಾಧಿಪತಿಯಾಗಿರುವ ಹಿರೇಮಠ ಹಾಗೂ ರಾಜಪುರೋಹಿತನಾದ ಬಾಳಾಚಾರ್ಯನೆಂಬ ಹೆಸರಿನ ಬ್ರಾಹ್ಮಣರಿದ್ದಾರೆ. ಈ ಗ್ರಾಮದ ಜೀವನವೆಲ್ಲ ಈ ನಾಲ್ಕು ಮುಖ್ಯಪಾತ್ರಗಳು ನಿರ್ದೇಶಿಸುತ್ತವೆ.

ಈ ಕಾದಂಬರಿಯಲ್ಲಿ ಪಾದಳ್ಳಿ ಊರನ್ನು ತಂದೆಯಂತೆ ನಡೆಸಿಕೊಂಡು ಹೋಗುತ್ತಿದ್ದ ರಾಣಾಜೀರಾಯನ ಮರಣದ ನಂತರ ಹೆಂಡತಿ ಲಕ್ಷ್ಮೀಬಾಯಿ ವಾಡೆಯನ್ನು ಬಿಟ್ಟು ಹೋಗಿ ಬಹಳ ದಿನಗಳು ಬರುವುದಿಲ್ಲ. ಹಬ್ಬದ ದಿನಗಳಲ್ಲೂ ವಾಡೆಯನ್ನು ಹಾಳುಗೆಡಹುವ ಜವಾಬ್ದಾರಿರಹಿತ ವರ್ತನೆಯಿಂದಾಗಿ ಈ ಊರಿನ ಅವನತಿ ಪ್ರಾರಂಭವಾಗುತ್ತದೆ. ಇಲ್ಲಿಂದ ವ್ಯಕ್ತಿಗಳ ಹೊಣೆಗೇಡಿತನ, ಸ್ವಾರ್ಥ, ಮೂರ್ಖತನ ಇವು ಹಳ್ಳಿಯ ಜೀವನದ ಸುತ್ತ ವಿನಾಶದ ಬಲೆಯನ್ನೇ ನೇಯುತ್ತವೆ. ಇಲ್ಲಿ ಯಾರು ದೊಡ್ಡವರಲ್ಲ ಎಂಬ ಆಶಯದೊಂದಿಗೆ ಸಾಗುವ ಕಾದಂಬರಿಯು, ಏನೂ ತಿಳಿಯದ ದೀನ ಮುಗ್ಧ ವ್ಯಕ್ತಿ, ಅಳುಬುರುಕ ಲಕ್ಷ್ಮಣನ ಬಾಯಿಯಿಂದ ನಿಜವಾದ ವಿವೇಕದ ಮಾತು ಕೇಳಿ ಬರುತ್ತದೆ. ತಪ್ಪು ಮಾಡಿದವರಿಗೆಲ್ಲ ಶಿಕ್ಷಾ ಆಗಬೇಕು ಎಪ್ಪಾ, ಅದು ದೇವರ ನ್ಯಾಯ ಎಂಬ ನಿಚ್ಚಳವಾದ ಮಾರ್ಗವನ್ನು ಮರೆತು ತಮ್ಮ ಮತ್ತು ಗ್ರಾಮದ ವಿನಾಶದ ಹಾದಿಗೆ ಸಾಗುವುದನ್ನು ಕಾಣುತ್ತೇವೆ. ಇಲ್ಲಿನ ಒಂದೊಂದು ಘಟನೆಗಳು, ಹೊಸ ಘಟನೆಗಳಾಗಿ ಕವಲೊಡೆದು, ಪಾತ್ರ ಸನ್ನಿವೇಶಗಳ ಪ್ರತಿಕ್ರಿಯೆಯಿಂದ ಅನಿವಾರ್ಯವಾಗಿ ಮುಂದೆ ಸಾಗುತ್ತದೆ.

ಈ ಕಾದಂಬರಿಯಲ್ಲಿ ಮುಖ್ಯವಾಗಿ ಬಾಳಾಚಾರ್ಯರು ಕಂಡುಬರುತ್ತಾರೆ. ಕಾದಂಬರಿಯ ಆರಂಭದಲ್ಲಿಯೇ ಆಗಿನ ಕಾಲಕ್ಕೆ ಜಮೀನ್ದಾರ, ಜಾಗೀರದಾರನಾದ ರಾಣೋಜಿರಾವ್ ತೀರಿಕೊಂಡಿದ್ದು, ಆತನ ಹೆಂಡತಿಯರಾದ ಲಕ್ಷ್ಮೀಬಾಯಿ, ಪುತಳಾಬಾಯಿ ಇವರ ತಮ್ಮ ಬಾಪೂಸಾಹೇಬನ ವಾಸವಾಗಿದ್ದಾರೆ. ಈ ಇಬ್ಬರ ಉಪಟಳ ತಾಳದೆ ಇಂದುಪುರಕ್ಕೆ ಹೋಗಿ ಲಕ್ಷ್ಮಿಬಾಯಿ ನೆಲೆಸುತ್ತಾಳೆ. ಇತ್ತ ಊರಿನ ಅಧಿಕಾರವು ಪ್ರತಿಷ್ಠೆಯ ಸಲುವಾಗಿ ಶಂಕರಪ್ಪ ಮತ್ತು ಶೇಷಪ್ಪ ಇಬ್ಬರ ಪೈಪೋಟಿಯಾಗುತ್ತದೆ. ಶಂಕರಪ್ಪ ಮಠಕ್ಕೆ ಪಡದಯ್ಯನನ್ನು ಮಠದ ಅಧಿಕಾರಕ್ಕೆ ಕೂರಿಸುತ್ತಾನೆ. ಈತನನ್ನು ಮಠದಲ್ಲಿ ಪ್ರತಿಷ್ಠಾಪಿಸಿದ ಹಿನ್ನೆಲೆಯಲ್ಲಿ ಶಂಕರಪ್ಪನ ಬಂಧುಗಳೇ ಮಠದ ಅಧಿಕಾರಕ್ಕೆ ತಂದುದನ್ನು ಪ್ರಶ್ನಿಸುತ್ತಾರೆ. ಶಂಕರಪ್ಪ ಮತ್ತು ರಾಜಪುರೋಹಿತ ಬಾಳಾಚಾರ್ಯರು ಊರಿನ ಒಗ್ಗಟ್ಟನ್ನು ಕಾಪಾಡಿಕೊಂಡು ಬರುವ ನಿಟ್ಟಿನಲ್ಲಿ ಜೊತೆಯಾಗುತ್ತಾರೆ. ಆದರೆ ಮಠದ ಸ್ವಾಮಿ ಪಡದಯ್ಯ ಮತ್ತು ಬಾಪೂಸಾಹೇಬರ ಸ್ವಾರ್ಥ ಹಿತಾಸಕ್ತಿಗಳು ಇಡೀ ಊರಿನ ದುರಂತಕ್ಕೆ ಕಾರಣವಾಗುತ್ತವೆ. ಇದೇ ಸಂದರ್ಭಕ್ಕೆ ನಾನಾಶಿಲೇದಾರನ ಮಗಳು ಚಿಮಣಾಳ ಮೇಲೆ ನಡೆಯುವ ಅತ್ಯಾಚಾರ ನಡೆಯುತ್ತದೆ. ಈ ಕೃತ್ಯ ಮಾಡಿದವರನ್ನು ಗುರುತಿಸಿದರೂ ಊರಿನ ಮಾನ ಕಾಯ್ದುಕೊಳ್ಳುವ ಸಲುವಾಗಿ ಈ ಮುಖ್ಯಸ್ಥರು ಮುಚ್ಚಿಹಾಕುತ್ತಾರೆ. ಈ ಘಟನೆಯ ನಂತರದಲ್ಲಿ ನಾನಾನ ಕೊಲೆ,ಪುತಳಾಬಾಯಿಯ ಆತ್ಮಹತ್ಯೆಯಾಗುತ್ತದೆ.ಇತ್ತ ಗ್ರಾಮಾಧಿಕಾರಿಗಳ ನಾಶ,ಮಠದ ಪಡದಯ್ಯನ ಸ್ವಾರ್ಥಪರವಾದ ಸೇಡಿನ ಕೃತ್ಯ ನಡೆಯುತ್ತದೆ. ಇತ್ತ ದಾದಾನ ಬಲಿ ಮೊದಲಾದ ಘಟನೆಗಳು ಜರುಗಿ ಪಾದಳ್ಳಿ ದುರಂತವಾಗಿ ಗ್ರಾಮೀಣ ಬದುಕಿನ ಸ್ಥಿತ್ಯಂತರಕ್ಕೆ ಕಾರಣವಾಗುತ್ತದೆ.

ಈ ಕಾದಂಬರಿಯ ಶೀರ್ಷಿಕೆಯನ್ನು ಗಮನಿಸಿದಾಗ ಮೇಲುನೋಟಕ್ಕೆ ಗ್ರಾಮ ಜೀವನದ ವ್ಯವಸಾಯದ ಬದುಕುಗಳನ್ನು ನಿರೀಕ್ಷಿಸುವುದು ಸಹಜವಾಗಿ ಕಂಡುಬರುತ್ತದೆ. ಆದರೆ ರೈತಾಪಿ ಬದುಕಿನ ಕಾಳಜಿಗಳು ಇಲ್ಲಿ ಮುಖ್ಯವೆಂದು ಕಂಡುಬಂದರೂ ಅವು ಮುಖ್ಯ ಭೂಮಿಕೆಯಾಗದೆ ಉಳಿಯುತ್ತವೆ. ಈ ಗ್ರಾಮೀಣ ಪ್ರದೇಶದಲ್ಲಿ ಜಹಗೀರು ಪದ್ಧತಿ ಅಸ್ತಿತ್ವದಲ್ಲಿರುವುದು ಕಂಡು ಬರುತ್ತದೆ. ೧೯೩೯ರ ಬಾಂಬೆ ಟೆನನ್ಸಿ ಕಾಯ್ದೆಯ ಪ್ರಕಾರ ಜಹಗೀರು ಪದ್ಧತಿಯನ್ನು ರದ್ದುತಿಗೊಳಿಸಲಾಗಿದೆ. ಈ ಕಾದಂಬರಿಯಲ್ಲಿ ಜಹಗೀರು ಜಮೀನಿನ ವಿವರವಿದ್ದರೂ ಇಲ್ಲಿ ಯಾರೂ ಆ ಭೂಮಿಯ ಬಗೆಗೆ ಆಸಕ್ತಿ ಹೊಂದಿದಂತೆ ಕಂಡುಬರುವುದಿಲ್ಲ. ಈ ಜಹಗೀರು ಭೂಮಿಯಲ್ಲಿ ಲಾವಣಿ ರೈತರು ಇದ್ದರೂ ದಲಿತರು ಮತ್ತು ಕೂಲಿಕಾರ್ಮಿಕರು ಕೃಷಿಕೂಲಿಕೆಲಸಕ್ಕಷ್ಟೇ ಸೀಮಿತಗೊಳ್ಳುತ್ತಾರೆ.

ಜಹಗೀರು ಜಮೀನಿನ ಭೂಮಿಯು ಅನಾಯಾಸವಾಗಿ ದೊರೆಯುವಂತಿದ್ದರೂ ಗೇಣಿರೈತರು, ಕೃಷಿಕೂಲಿಕಾರ್ಮಿಕರು ಮತ್ತು ದಲಿತರು ಭೂಮಿಯ ಬಗೆಗೆ ಆಸಕ್ತಿ ತೋರುವುದಿಲ್ಲ. ಸ್ವತಂತ್ರವಾಗಿ

ಬೇಸಾಯಗಾರರಾಗುವುದಕ್ಕಿಂತ ಜೀತಗಾರರಾಗಿಯೋ ಕೂಲಿಕಾರರಾಗಿಯೋ ಬದುಕುವುದನ್ನೇ ಇಷ್ಟಪಡುತ್ತಾರೆ.ಇದಕ್ಕೆಕಾರಣಗಳಿವೆ. "ಭೂಮಿಯನ್ನೇನೋ ಕೊಟ್ಟದ್ದಾಯಿತು. ಆದರೆ ಅದಕ್ಕೆ ಮುಂದೇನೂ ವೆಚ್ಚವಿಲ್ಲವೇ? ಬೀಜ ಗೊಬ್ಬರ ಹರಗಿ ಬಿತ್ತುವ ಕೂಲಿ ಇದಕ್ಕೆಲ್ಲ ಏನು ಮಾಡಬೇಕು.?"[೬] ಭೂಮಿಯನ್ನು ಉತ್ತಲು ಬಿತ್ತಲು ಆರ್ಥಿಕವಾಗಿ ಅಸಹಾಯಕರಾಗಿರುವುದು ಕಂಡುಬರುತ್ತದೆ. ಅವರು ಒಡೆಯರ ಬಳಿ ಕೃಷಿಕೂಲಿಕೆಲಸ ಮಾಡುವ ವ್ಯವಸ್ಥೆಗೆ ಅಪ್ಪಿಕೊಳ್ಳುವುದನ್ನು ಕಾಣುತ್ತೇವೆ. ಸರಿಯಾದ ಕಾಲಕ್ಕೆ ಮಳೆಬೆಳೆಯಾಗದೇ ಇರುವ ಸ್ಥಿತಿಯಿಂದಾಗಿ ಅವರಿಗೆ ಭೂಮಿಯ ಬಗೆಗಿನ ನಿರಾಸಕ್ತಿ ಹೊಂದಿರುವುದನ್ನು ಗುರುತಿಸಬಹುದು.ದಲಿತರು ಇಂಥ ಭೂಮಿಯಲ್ಲಿ ಕೃಷಿಚಟುವಟಿಕೆ ಮಾಡುವುದಕ್ಕಿಂತ ಕೂಲಿಕೆಲಸ ಮಾಡುವುದೇ ಉತ್ತಮ ಎಂದು ಭಾವಿಸಿದಂತಿದೆ.

ದಲಿತರು ಮತ್ತು ಕೃಷಿಕೂಲಿಕಾರ್ಮಿಕರು ಭೂಮಿಯನ್ನು ನಿರಾಕರಿಸಲು ಮುಖ್ಯಕಾರಣ ಆರ್ಥಿಕ ಸಮಸ್ಯೆ ಸರಿಯಾಗಿದೆ. ಸಾಮಾಜಿಕ ಬದುಕು ಮತ್ತು ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧ ದಲಿತರು ಹೋರಾಟ ನಡೆಸದೆ ಭೂಮಾಲೀಕತ್ವವನ್ನು ಒಪ್ಪಿಕೊಂಡು ನಡೆಯುವುದನ್ನು ಇಲ್ಲಿ ಕಾಣುತ್ತೇವೆ. ಊಳಿಗಮಾನ್ಯಶಾಹಿಯ ವ್ಯವಸ್ಥೆಯ ಉದಾರಮನೋಧರ್ಮವು ದಲಿತರನ್ನು ಆಕರ್ಷಿಸಿದೆ. ಆದರೆ ದಲಿತ ಸಮುದಾಯವು ಭೂಮಾಲೀಕರನ್ನು ಪೂಜ್ಯರೆಂದು ಭಾವಿಸುವ ಮೊದಲ ತಲೆಮಾರಿನ ದಲಿತ ವರ್ಗ,ಕೃಷಿಕೂಲಿಕಾರ್ಮಿಕ ವರ್ಗದ ಮನೋಧರ್ಮವು ಇಲ್ಲಿ ವ್ಯಕ್ತವಾಗಿದೆ. ಈ ಕಾದಂಬರಿಯಲ್ಲಿ ಭೂ ಹಕ್ಕು ನಿರಾಕರಣೆ ಮೂಲಕ ಭೂ ಹೋರಾಟ ರೂಪುಗೊಳ್ಳದೇ ಹೋಗುತ್ತದೆ.

**ಕೊನೆ ಟಿಪ್ಪಣಿ**

೧.ರಾವ್‌ಬಹಾದ್ದೂರ್,ಬಿತ್ತಿಬೆಳೆದವರು,ಪುಟ ೩

೨.ಅದೇ ಪುಟ ೩

೩.ಅದೇ ಪುಟ ೧೯

೪.ಅದೇ ಪುಟ ೩೫

೫.ರಾವ್‌ಬಹಾದ್ದೂರ್, ಗ್ರಾಮಾಯಣ,ಪುಟ ೧೫

೬. ಅದೇ ಪುಟ೪೩೬

## ೪.೧.೬ ಗೊರೂರು : ರೈತ ಸಮುದಾಯದ ಸುಧಾರಣೆಯ ಆಶಯಗಳು

ಗೊರೂರರ "ಹೇಮಾವತಿ" ಯಲ್ಲಿ ಭೂ ರೈತ ಪ್ರಶ್ನೆಯ ಮತ್ತು ಭೂಮಾಲೀಕತ್ವದ ಸಂಘರ್ಷದ ನೆಲೆಯನ್ನೊಳಗೊಂಡ ಆಶಯವಿದೆ. ಈ ಕಾದಂಬರಿಕಾರ ಭೂ ರೈತ ಸಮಸ್ಯೆಯ ಕುರಿತಾದ ಮುಖ್ಯ ವಸ್ತುವೊಂದನ್ನಿಟ್ಟುಕೊಂಡು ರಚಿಸಿರುವ ಕಾದಂಬರಿಯಲ್ಲಿ ಅವರ ರೈತ ಕಾಳಜಿಗಳನ್ನು ಮತ್ತು ಸುಧಾರಣಾ ಆಶಯಗಳನ್ನು ಕಾಣಬಹುದು. ಗಾಂಧಿವಾದದ ನೆಲೆಯ ರೈತ ಸಮುದಾಯದ ಸುಧಾರಣಾ ಆಶಯಗಳು ವ್ಯಕ್ತವಾಗಿದೆ. ಈ ಹಿನ್ನೆಲೆಯಲ್ಲಿ ಹೇಮಾವತಿ ಕಾದಂಬರಿಯನ್ನು ಮುಖ್ಯವಾಗಿ ಚರ್ಚಿಸಲಾಗಿದೆ. ಇಲ್ಲಿ ರೈತ ವ್ಯವಸ್ಥೆಯು ಹೇಗಿಯೋ ಹಾಗೆಯೇ ಇದ್ದು, ಈ ವ್ಯವಸ್ಥೆಯೊಳಗೆ ಬದಲಾವಣೆ ತರುವ,ಸಾಂಸ್ಕೃತಿಕ ಧಕ್ಕೆ ಬಾರದೇ ಸುಧಾರಿಸುವುದಾಗಿದೆ.

ಕಾದಂಬರಿಯ ಆರಂಭದಲ್ಲಿ ಭೂಮಾಲೀಕ ಸಾಹುಕಾರ ಶಠಾರಿ ತನ್ನ ಊರಿನ ಸುತ್ತಮುತ್ತಲಿರುವ ಭೂಮಿಯನ್ನು ಕಬಳಿಸುತ್ತಾನೆ. ದಲಿತ, ಬಡವ ಬಲ್ಲಿದ ಎಂಬ ಬೇಧಭಾವವಿಲ್ಲದೆ ಭೂಮಿಯನ್ನು ಕಬಳಿಸುವ ಈತ ಊಳಿಗಮಾನ್ಯಶಾಹಿ ವ್ಯವಸ್ಥೆಯ ಪ್ರತಿನಿಧಿಯಂತೆ ಕಾಣುತ್ತಾನೆ. ಈ ಭೂಮಾಲೀಕನ ಕುರಿತಂತೆ, "ಸಾಹುಕಾರ ಶಠಾರಿಯವರಿಗೆ ಕಾವೇರಿ ಅಗ್ರಹಾರದ ಸುತ್ತ ಎಲ್ಲಿ ಒಳ್ಳೆಯ ಜಮೀನನ್ನು ಕಂಡರೂ ಅದನ್ನು ಆಕ್ರಮಿಸುವ ಆಸೆಯಾಗುತ್ತಿದ್ದಿತು. ಅವರು ಪ್ರಬಲರೂ ಬುದ್ಧಿವಂತರೂ ಆಗಿದ್ದುದರಿಂದ ಅವರಿಗೆ ಬೇಕಾದ ಜಮೀನುಗಳು ಅವರಿಗೆ ಸುಲಭವಾಗಿ ದೊರಕುತ್ತಿದ್ದವು. ಶಠಾರಿಯವರು ತಮ್ಮನ್ನು ಎದುರಿಸಿದವರನ್ನು ಭೂಗತಮಾಡುತ್ತಿದ್ದರು. ಅವರ ಕಣ್ಣು ಇತರರ ಜಮೀನಿನ ಮೇಲೆ ಬಿದ್ದರೆ ತೀರಿತು. ಮುಂದಲ ಹೋರಾಟವನ್ನು ನೆನೆಸಿಕೊಂಡು ಜಮೀನಿನ ಯಜಮಾನರು ತಮ್ಮ ಜಮೀನನ್ನು ಶಠಾರಿಯವರಿಗೆ ಮಾರುತ್ತಿದ್ದರು."[೧] ಊಳಿಗಮಾನ್ಯ ವ್ಯವಸ್ಥೆ ಕ್ರೌರ್ಯವು ಈ ಮಾತಿನಿಂದ ವ್ಯಕ್ತವಾಗುತ್ತದೆ. ಊರಿನ ಫಲವತ್ತಾದ ತುಂಡು ಭೂಮಿಗಳನ್ನು ತಮ್ಮ ತೋಳ್ಬಲಗಳಿಂನ್ಯೀ ಭೂಮಾಲೀಕ ವಶಪಡಿಸಿಕೊಳ್ಳುತ್ತಿದ್ದುದು ದಬ್ಬಾಳಿಕೆಯ ಪರಮಾವಧಿಯಾಗಿ ಕಂಡುಬರುತ್ತದೆ.

ಇಲ್ಲಿ ಭೂಮಾಲೀಕನ ದುಷ್ಟ ಕಣ್ಣು ಊರಿನ ಸಂಗೀತಗಾರ ಶ್ರೀನಿವಾಸ ಪೆರುಮಾಳರ ತುಂಡು ಜಮೀನನ ಮೇಲೆ ಬೀಳುತ್ತದೆ. ಈ ಭೂಮಾಲೀಕನ ವಿರುದ್ಧ ಪೆರುಮಾಳರು ಸೆಡ್ಡು ಹೊಡೆದು ನಿಲ್ಲುತ್ತಾರೆ. ಆ ಮೂಲಕ ಭೂಮಾಲೀಕನ ಅಸ್ತಿತ್ವಕ್ಕೆ ಹಾಗೂ ಘನತೆಗೆ ಎದಿರೇಟು ನೀಡುತ್ತಾರೆ.

"ಸಣ್ಣ ಸಣ್ಣ ಜಮೀನುದಾರರಿಗೆ ಜಮೀನು ಇರುವುದೂ ಅಪ್ರಯೋಜಕ. ಆ ಚಿಕ್ಕ ಚೂರುಗಳನ್ನು ಸಾಗುವಳಿ ಮಾಡಿಸಲು ಸಹ ಅವರಿಗೆ ಸರಿಯಾದ ಶಕ್ತಿ ಇರುವುದಿಲ್ಲ. ಸಣ್ಣ ರಾಜ್ಯಗಳನ್ನು ದೊಡ್ಡ ರಾಜ್ಯಗಳಿಗೆ ಸೇರಿಸುವಂತೆ ಈ ಅರ್ಧ ಎಕರೆ ಒಂದು ಎಕರೆ ಜಮೀನುಗಳನ್ನೆಲ್ಲಾ ಹತ್ತಿರದಲ್ಲಿರುವ ದೊಡ್ಡ ದೊಡ್ಡ ಜಮೀನ್‌ದಾರರಿಗೆ ಸೇರಿಸಿಬಿಡಬೇಕು. ಅವರಲ್ಲಿ ಹಣವೂ ಇದೆ; ಒಳ್ಳೆಯ ಬೀಜ ವ್ಯವಸಾಯ ಮುಟ್ಟುಗಳಿವೆ. ಅವರು ಭೂಮಿಯಿಂದ ಒಳ್ಳೆಯ ಬೆಳೆ ತೆಗೆಯುತ್ತಾರೆ."[೨]

ಭೂಮಾಲೀಕನ ಈ ಧೋರಣೆಯಲ್ಲಿ ಬಡವನಾಗಲಿ ದಲಿತನಾಗಲೀ ತುಂಡು ಭೂಮಿಯ ಒಡೆತನದ ಹಕ್ಕನ್ನು ಪಡೆಯದಂತೆ ಊಳಿಗ ವ್ಯವಸ್ಥೆ ನೋಡಿಕೊಳ್ಳುತ್ತದೆ. ಇಂತಹ ದುಷ್ಟ ಮನೋಭಾವವು ಇಡೀ ಊರಿನ ವಾತಾವರಣವನ್ನು ತನ್ನ ಹಿಡಿದಲ್ಲಿಟ್ಟುಕೊಳ್ಳಲು ಯತ್ನಿಸುತ್ತದೆ. ಇದಕ್ಕೆ ಪ್ರತಿಯಾಗಿ ಶ್ರೀನಿವಾಸ ಪೆರುಮಾಳರು ತಮ್ಮ ತುಂಡು ಭೂಮಿಯನ್ನು ಮಾರದೇ ಭೂಮಾಲೀಕನಿಗೆ ಸವಾಲಾಗುತ್ತಾರೆ.

ಅದಕ್ಕೆ ಪ್ರತಿಯಾಗಿ ಸಾಹುಕಾರ ಶಠಾರಿಯವರು ನಿನ್ನ ಸಂಗೀತಕ್ಕೆಷ್ಟು ಜನ ಸೇರುತ್ತಾರೆ. ನನ್ನ ಮನೆಬಳಿ ಎಷ್ಟುಜನ ಸೇರುತ್ತಾರೆಂಬ ಪಂಥವನ್ನು ಕಟ್ಟುತ್ತಾರೆ. ಇದನ್ನು ತೋರಿಸಲು ಭೂಮಾಲೀಕ ತನ್ನ ಮನೆಯ ಬಳಿ ಸೇರುವವರಿಗೆ ಒಂದು ರೂಪಾಯಿ ಹಣ ನೀಡುವುದಾಗಿ ಡಂಗೂರ ಸಾರುತ್ತಾನೆ. ಈ ವಿಚಾರ ತಿಳಿದ ಸುತ್ತಮುತ್ತಲ ಹಳ್ಳಿಯ ಜನತೆ ಸಾವಿರಾರು ಸಂಖ್ಯೆಯಲ್ಲಿ ನೆರೆಯುತ್ತದೆ. ಈ ಜನರಿಗೆ ಭೂಮಾಲೀಕ ತನ್ನಲ್ಲಿದ್ದ ಹಣವೆಲ್ಲಾ ನೀಡಿದರೂ ಸಾಲದಾಗುತ್ತದೆ. ಕೊನೆಗೆ ಭೂಮಾಲೀಕ ಹಣ ಕೊಡಲಾಗದೆ ಬೇರೆ ಕಾರಣ ನೀಡಲು ಯತ್ನಿಸಿದಾಗ ಜನ ರೊಚ್ಚಿಗೇಳುತ್ತಾರೆ. ಭೂಮಾಲೀಕನ ಅಹಂಕಾರಕ್ಕೆ ಹಣದ ಮದಕ್ಕೆ ಕಲೆಯ ಮೂಲಕ ಪೆಟ್ಟುಕೊಡುವ ಪೆರುಮಾಳರ ತಂತ್ರ ಅವರ ಘನತೆಯನ್ನೇ ಹೆಚ್ಚಿಸುತ್ತದೆ. ಇಲ್ಲಿ ಸವಾಲಿನ ಮೂಲಕ ಭೂಮಾಲೀಕ ಶೋಷಣೆ ಮಾಡಲು ಯತ್ನಿಸಿ ಅದು ವಿಫಲಗೊಳ್ಳುವ ಚಿತ್ರಣವಿದೆ.

ಇಲ್ಲಿ ಬರುವ ದಲಿತರೆಲ್ಲರಿಗೂ ಭೂ ಒಡೆತನವಿಲ್ಲದೆ ಭೂಹೀನರಾಗಿ ಕೃಷಿಕೂಲಿಕಾರ್ಮಿಕರಾಗಿರುವ ಚಿತ್ರಣವಿದ್ದರೂ, ದಲಿತರಲ್ಲಿ ಕೆಲವರಿಗೆ ಭೂಮಿ ಇರುವುದು ಕಂಡುಬರುತ್ತದೆ. ಆದರೆ ಈ ಜಮೀನುಗಳು ಗುಡ್ಡದ ಬಳಿ ಇರುವ ಮತ್ತು ಅವು ಬಂಜರು ಭೂಮಿಗಳಾಗಿರುವ ವಿವರಗಳು ಬರುತ್ತವೆ. ಇಲ್ಲಿನ ದಲಿತರೆಲ್ಲರೂ ಸಾಮಾನ್ಯವಾಗಿ ಭೂಮಾಲೀಕರ ಮನೆಯಲ್ಲಿ ಜೀತಕ್ಕೆ ದುಡಿಯುವುದು ಮತ್ತು ಇಲ್ಲಿನ ಗೇಣಿರೈತರು ರೈತಾಪಿ ಕೆಲಸಕಾರ್ಯಗಳನ್ನು ಮಾಡಿಕೊಂಡಿರುವ ಚಿತ್ರಣವಿದೆ.

ಪೆರುಮಾಳರ ಮನೆತನದಲ್ಲಿ ತಲತಲಾಂತರದಿಂದಲೂ ಕಾಳನ ಕುಟುಂಬವು ಜೀತಕ್ಕಿರುವುದನ್ನು ಕಾಣುತ್ತೇವೆ. ಭೂಮಾಲೀಕರಾದ ಆನಂದಪೆರುಮಾಳರು ಮತ್ತು ಶ್ರೀನಿವಾಸಪೆರುಮಾಳರು ದಲಿತರ ಕುಟುಂಬಗಳನ್ನು ಅನುಕಂಪ ನೆಲೆಯಿಂದ ನೋಡುತ್ತಾರೆ. ಈ ಕುರಿತಂತೆ ಮ.ನ.ಜವರಯ್ಯ ಅವರ ಅಭಿಪ್ರಾಯವನ್ನು ಗಮನಿಸಬಹುದಾಗಿದೆ. "ಚೋಮನ ಪರವಾದ ಸಂಕಪ್ಪಯ್ಯನ ಸಹಾನುಭೂತಿಗೂ ಕಾಳನ ಪರವಾದ ಪೆರುಮಾಳರ ಸಹಾನುಭೂತಿಗೂ ಮೂಲಭೂತವಾಗಿಯೂ ಪರಿಕಲ್ಪನಾತ್ಮಕವಾಗಿಯೂ ವ್ಯತ್ಯಾಸವೇನೂ ಇಲ್ಲ."[೩] ಇಲ್ಲಿ ದಲಿತರ ಮೇಲೆ ಅನುಕಂಪಮಾತ್ರವಿದೆ. ಆದರೆ ಬದಲಾವಣೆಯನ್ನು ಭೂಮಾಲೀಕವರ್ಗ ಬಯಸದೇ ಇರುವುದು ಕಂಡುಬರುತ್ತದೆ.

ದಲಿತವರ್ಗದ ಈ ಸ್ಥಿತಿಗೆ ಕಾರಣವೇನೆಂದು ತಿಳಿಯುವ ಮತ್ತು ಅವರ ಅಭಿವೃದ್ಧಿಗಾಗಿ ಅದನ್ನು ಅನುಷ್ಠಾನಗೊಳಿಸುವ ಯತ್ನವನ್ನು ಆನಂದಪೆರುಮಾಳರು ಮಾಡುತ್ತಾರೆ. ದಲಿತ ಕಾಳನ ಮಗಳು ಚೆನ್ನಿಗೆ ಸಂಗೀತ ಕಲಿಸಿಕೊಡಲು ಆನಂದಪೆರುಮಾಳರು ಇಚ್ಛಿಸುತ್ತಾರೆ. ಆನಂದಪೆರುಮಾಳರ ನಿಲುವನ್ನು ಭೂಮಾಲೀಕ ವರ್ಗಗಳು ಹಾಗೂ ಮೇಲ್ಜಾತಿ ಜನರು ವಿರೋಧಿಸುತ್ತಾರೆ.ಈ ಊರಿನ ಜನರ ವಿರೋಧದ ನಡುವೆಯೂ ಚೆನ್ನಿಗೆ ಸಂಗೀತ ಅಭ್ಯಾಸ ಮಾಡಿಸುತ್ತಾರೆ. ಆನಂದಪೆರುಮಾಳರು ಚೆನ್ನಿಯನ್ನು ಸಂಗೀತದಲ್ಲಿ ದೊಡ್ಡ ವಿದುಷಿಯನ್ನಾಗಿ ಮಾಡಲು ದೂರದ ಮುಂಬೈಗೆ ಕರೆದೊಯ್ಯುತ್ತಾರೆ. ಇಂತಹ ಬೆಳವಣಿಗೆಯ ಮೂಲಕ ಇಡೀ ಊರಿನ ಬದಲಾವಣೆಗೆ ಯತ್ನಿಸುವುದನ್ನು ಕಾಣಬಹುದಾಗಿದೆ.

ಶ್ರೀನಿವಾಸ ಪೆರುಮಾಳರ ಆಸ್ತಿಯ ಮೇಲೆ ಕಣ್ಣಿಟ್ಟ ಸುಬ್ಬಾಭಟ್ಟರು, ಪೆರುಮಾಳರ ಎರಡನೆಯ ಹೆಂಡತಿಯ ಜೊತೆಗೂಡಿ ತಂತ್ರರೂಪಿಸುತ್ತಾರೆ. ನಂತರ ಸುಬ್ಬಾಭಟ್ಟರೇ, ಅವರ ಭೂಮಿಯನ್ನು ಲಪಟಾಯಿಸುತ್ತಾರೆ. ಈ ಕಾದಂಬರಿಯಲ್ಲಿ ಚೆನ್ನಿಯು ಸಂಗೀತದಲ್ಲಿ ಪರಿಣಿತಳಾಗಿ ಸಂಗೀತ ಕ್ಷೇತ್ರದಲ್ಲಿ ಲೋಕ ಖ್ಯಾತಿ ಪಡೆಯುತ್ತಾಳೆ. ತನ್ನ ಸಂಗೀತ ಕ್ಷೇತ್ರದ ಖ್ಯಾತಿಯಿಂದಾಗಿ ಆಕೆ ಗಾನಶಾರದೆಯಾಗಿ ಬಿರುದು ಪಡೆಯುತ್ತಾಳೆ. ಅಂದಿನಿಂದ ಚೆನ್ನಿಯ ಹೆಸರು ಬದಲಾಗಿ ಗಾನಶಾರದೆ ಎಂಬ ಹೆಸರು ಜನಪ್ರಿಯವಾಗುತ್ತದೆ. ಇತ್ತ ಆನಂದಪೆರುಮಾಳರ ಅಣ್ಣನಮಗಳು ಹೇಮಾವತಿ ಅನೇಕ ಸಂಕಷ್ಟಗಳನ್ನು ಎದುರಿಸಿ ಭೂಮಾಲೀಕ ಶೆಠಾರಿಯ ಮಗ ಸುಂದರನನ್ನು ವಿವಾಹವಾಗಿರುತ್ತಾಳೆ. ಆಕೆಯ ವಿವಾಹದ ನಂತರದ ಬದುಕು ಕಷ್ಟ ನೋವುಗಳಿಂದ ಕೂಡಿತ್ತು. ಇಂತಹ ದುರಂತದ ಸ್ಥಿತಿಯಲ್ಲಿದ್ದ ಹೇಮಾವತಿಯನ್ನು ಅನಿರೀಕ್ಷಿತವಾಗಿ ಆನಂದ ಪೆರುಮಾಳರನ್ನು ಭೇಟಿಯಾಗುತ್ತಾರೆ. ಆನಂತರದಲ್ಲಿ ತನ್ನ ಚಿಕ್ಕಪ್ಪ ಮತ್ತು ಗಾನಶಾರದೆಜೊತೆಗೂಡಿ ತನ್ನ ಊರಿಗೆ ಮರಳುತ್ತಾರೆ. ತನ್ನ ಊರಿನಲ್ಲಿ ಆಶ್ರಮಸ್ಥಾಪಿಸಿ, ಜನರ ಸೇವೆ ಮಾಡುವುದರ ಮೂಲಕ ಸಾರ್ಥಕ ಬದುಕನ್ನು ಈ ಮೂರುಮಂದಿ ಕಂಡುಕೊಳ್ಳುತ್ತಾಳೆ.

ಈ ಹಳ್ಳಿಗಳಲ್ಲಿ ಶಿಕ್ಷಣ, ಆರೋಗ್ಯಪಾಲನೆ ಮೊದಲಾದ ಜನಪರ ಕಾರ್ಯಕ್ರಮಗಳ ಮೂಲಕ ಹಳಿಗಳನ್ನು ಬೆಳಗುತ್ತಾರೆ. ಗಾನಶಾರದೆಯಾಗಿದ್ದ ಕಾಳನ ಮಗಳು ಚೆನ್ನಿ ಊರಿನ ಸುಬ್ಬಾಭಟ್ಟರ ಮಗ ವಾಸುವನ್ನು ಮದುವೆಯಾಗುತ್ತಾಳೆ. ಈ ಮದುವೆ ಸಂಪ್ರದಾಯ ವಿರುದ್ಧವಾಗಿದ್ದರೂ ಊರಿನಲ್ಲಿ ಅಂತರ್‌ಜಾತಿ ವಿವಾಹವಾಗುತ್ತದೆ. ಇದು ತನ್ನ ಮಗನಿಂದಲೇ ಆಗುವುದು ಭಟ್ಟರಿಗೆ ನುಂಗಲಾರದ ತುತ್ತಾಗುತ್ತದೆ.

ಇಲ್ಲಿ ಮುಖ್ಯವಾಗಿ ಭೂ ಸಂಬಂಧಗಳು ಪಿತ್ರಾರ್ಜಿತ ಆಸ್ತಿಗೆ ಸಂಬಂಧಿಸಿವೆ. ಇಲ್ಲಿ ದಲಿತರಿಗೆ ಭೂಮಿ ಇದ್ದರೂ ಅವುಗಳು ಬೆಟ್ಟಗುಡ್ಡಗಳ ನಡುವಿರುವ ಬಂಜರು ಭೂಮಿಗಳಾಗಿವೆ. ಅವುಗಳನ್ನು ಹಸನು ಮಾಡುವುದರ ಬದಲು ಭೂಮಾಲೀಕರ ಮನೆಯಲ್ಲಿ ಜೀತದಾರರಾಗಿರುವುದು ಕ್ಷೇಮಕರ ಎಂದು ದಲಿತರು ಭಾವಿಸಿದ್ದಾರೆ. ಇವರುಗಳು ಊರಿನ ಮೇಲ್ಜಾತಿಯ ಭೂಮಾಲೀಕರ ಬಳಿ ಗೇಣಿರೈತರಾಗಿರಲು ಒಪ್ಪಿರುವುದು ಕಂಡುಬರುತ್ತದೆ. ಈ ಊರಿನ ಭೂಮಾಲೀಕ ಶಠಾರಿಯ ಮಗ ಸುಂದರ ವ್ಯವಸಾಯದಲ್ಲಿ ನೂತನ ಪ್ರಯೋಗಗಳನ್ನು ನಡೆಸಿ

ಎಲ್ಲವೂ ಕೆಟ್ಟು ಪಟ್ಟಣ ಸೇರಿರುತ್ತಾನೆ. ಪಟ್ಟಣ ಸೇರಿದ ನಂತರದಲ್ಲಿ ಆತನ ಬದುಕಿನ ದುರಂತಗಳು ಜರುಗುವುದನ್ನು ಕಾಣುತ್ತೇವೆ. ಭೂಮಾಲೀಕ ಶಠಾರಿಯ ಮಗ ಸುಂದರ ತನ್ನ ಸುಂದರವಾದ ಹೆಂಡತಿ ಹೇಮಾವತಿಯ ಜೊತೆ ಬಾಳಲಾಗುವುದಿಲ್ಲ. ತನ್ನದೇ ಆದ ಗೊಂದಲಗಳಲ್ಲಿ ಸೈನ್ಯಕ್ಕೆ ಸೇರಿ ಕೊನೆಗೆ ತನ್ನ ಊರಿಗೆ ಹಿಂತಿರುಗಿರುತ್ತಾನೆ. ಈ ಊರಿನಲ್ಲಿ ಗಾನಶಾರದೆ, ಹೇಮಾವತಿ, ಆನಂದಪೆರುಮಾಳರ ಸ್ಥಾಪಿಸಿರುವ ಆಶ್ರಮಕ್ಕೆ ಬಂದು ಸಮಾಜ ಸೇವೆ ಸಲ್ಲಿಸಲು ಸುಂದರ ಮುಂದಾಗುತ್ತಾನೆ.

**ಕೊನೆ ಟಿಪ್ಪಣಿ**

೧.ಗೊರೂರು ,ಹೇಮಾವತಿ ಪುಟ ೨

೨.ಅದೇ ಪುಟ ೮

೩.ಮ.ನ.ಜವರಯ್ಯ, ಪರಂಪರೆ ಹಾಗೂ ದಲಿತಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ,ಪುಟ೧೦೨,

## ೪.೧.೭ ಆನಂದಕಂದ : ಭೂ ಜಾಗೀರುದಾರಿಕೆಯ ಸಮಸ್ಯೆಗಳು

ಪ್ರಕೃತಿ ವಿಸ್ಮಯ, ಮಾನವೀಯನೆಲೆ, ಇಂಗ್ಲೀಷ್ ಸಾಹಿತ್ಯದ ಪ್ರಭಾವಗಳಿದ್ದ ವಸಾಹತು ಸನ್ನಿವೇಶದಲ್ಲಿ ಆನಂದಕಂದರು ಕತೆಗಳನ್ನು ರಚಿಸತೊಡಗಿದರು. ವಸಾಹತುಶಾಹಿ ಸನ್ನಿವೇಶದ ಅನೇಕ ಬಿಕ್ಕಟ್ಟುಗಳ ನಡುವೆ ರೈತ ಪ್ರಶ್ನೆ ಮುಖ್ಯವೆಂದು ಭಾವಿಸಿ ತಮ್ಮ ಕತೆಯ ಮೂಲಕ ಅಭಿವ್ಯಕ್ತಿಸಿದ್ದಾರೆ.ಏಕಕಾಲಕ್ಕೆ ವಸಾಹತುಶಾಹಿ ಸೃಷ್ಟಿಸಿದ್ದ ಸಾಂಸ್ಕೃತಿಕ ಬಿಕ್ಕಟ್ಟಿನ ನಡುವೆ ರೈತ ಪ್ರಶ್ನೆ ಮುಖ್ಯವೆಂದು ಭಾವಿಸಿದ ಆನಂದಕಂದರು ಕತೆಯ ಮೂಲಕ ಅದನ್ನು ವ್ಯಕ್ತಪಡಿಸಿರುವುದನ್ನು ಕಾಣಬಹುದಾಗಿದೆ. ಆ ಕಾಲದಲ್ಲಿದ್ದ ಭೂಜಾಗೀರುದಾರಿಕೆಯ ಪದ್ಧತಿ, ಗೇಣಿಪದ್ಧತಿ ಮೊದಲಾದ ಸಮಸ್ಯೆಗಳನ್ನು ಕಾಣುತ್ತೇವೆ. ಈ ಕತೆಯು ರೈತ ಪ್ರಶ್ನೆಯನ್ನು ಮುಖ್ಯವಾಗಿಟ್ಟುಕೊಂಡಿದೆ. ಸ್ವಾತಂತ್ರ್ಯ ದ್ರೋಹಕ್ಕೆ ಮಾಡಿದ ಸಂದ ಫಲವಾಗಿ ನಿರೂಪಕನ ರಕ್ತಸಂಬಂಧಿಯಾಗಿದ್ದರಿಂದ ಈ ಭೂಜಾಗೀರುದಾರಿಕೆಯ ಮಾಲೀಕ ಹಕ್ಕು ಬಂದಿರುವ ಕಥಾವಸ್ತುವನ್ನೊಳಗೊಂಡಿದೆ. ಆದ್ದರಿಂದ ಭೂ ರೈತ ಸಮಸ್ಯೆ ಕುರಿತ ಮಾಲ್ಕೀಹಕ್ಕು ಕತೆಯು ಈ ಬಗ್ಗೆ ಅನಾವರಣಗೊಳಿಸುತ್ತದೆ.

ಉತ್ತರ ಕರ್ನಾಟಕದಲ್ಲಿ ಬಾಂಬೆಟೆನೆನ್ಸಿ ೧೯೫೯ ಬರುವ ಮುನ್ನ ಈ ಭಾಗದಲ್ಲಿ ಜಹಗೀರು ಪದ್ಧತಿ ಅನೂಚಾನವಾಗಿ ನಡೆದುಕೊಂಡು ಬರುತ್ತಿರುವುದನ್ನು ಕಾಣುತ್ತೇವೆ. ಈ ಕತೆಯ ಕಾಲಕ್ಕೆ ೧೯೩೨ರಲ್ಲಿ ಇಂಥ ಸಮಸ್ಯೆ ಇದ್ದುದರಿಂದ ಈ ಕತೆಗಾರನಿಗೆ ಮುಖ್ಯವಾಗಿ ಕಂಡಿರಬಹುದಾಗಿದೆ. ನಿರೂಪಕ ತನ್ನ ಗ್ರಹಿಕೆಯ ಮೂಲಕ ಇಲ್ಲಿನ ಭೂ ಸಮಸ್ಯೆಗೆ ಪರಿಹಾರ ಸೂಚಿಸಲು ಮತ್ತು ರೈತಕುಟುಂಬವನ್ನು ಅನುಕಂಪ ನೆಲೆಯಿಂದ ನೋಡಿರುವುದು ಕಂಡುಬರುತ್ತದೆ. ಈ ಕತೆಯಲ್ಲಿ ಮುಖ್ಯವಾಗಿ ಗೇಣಿರೈತನಿಗೆ ಮತ್ತು ಆತನ ಕುಟುಂಬಕ್ಕೆ ಆದ ಅನ್ಯಾಯವನ್ನು ಅನುಕಂಪ ಮತ್ತು ಮಾನವೀಯ ನೆಲೆಯಲ್ಲಿ ಆನಂದಕಂದರು ನೋಡುತ್ತಾರೆ. ಇಲ್ಲಿ ಭೂಮಾಲೀಕ ದುಡಿಮೆಗಾರರ ಶ್ರಮವನ್ನು ದೋಚುವ ಹುನ್ನಾರವನ್ನು ಕಥನಕಾರ ಅನಾವರಣಗೊಳಿಸುತ್ತಾನೆ. ಭೂಮಿಯು ಬಾದುಶಹ ನಿಂದ ವರ್ಗಾವಣೆಗೊಂಡು ಜಹಗೀರು ಭೂಮಾಲೀಕನಿಗೆ ದಕ್ಕಿದ ಬಗೆಯನ್ನು ಈ ಕತೆ ವಿವರಿಸುತ್ತದೆ. ಅಲ್ಲದೆ ಭೂಮಿ ವರ್ಗಾವಣೆಯಿಂದಾಗಿ ಭೂಮಾಲೀಕತ್ವ ಪಡೆದುಕೊಂಡ ಆಯಾಮಗಳನ್ನು (ಸ್ವಾತಂತ್ರ್ಯ ಯೋಧನೊಬ್ಬನನ್ನು ಹಿಡಿದುಕೊಟ್ಟ, ದೇಶದ್ರೋಹಿ ಕೆಲಸಕ್ಕೆ ಸಂದ ಪ್ರತಿಫಲ) ಸೂಕ್ಷ್ಮವಾಗಿ ಚಿತ್ರಿಸಿರುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಮಾಲ್ಕೀಹಕ್ಕು ಭೂ ರೈತ ಪ್ರಶ್ನೆಯನ್ನು ವ್ಯಕ್ತಪಡಿಸುತ್ತದೆ.

ಆಗಿನ ಸರ್ಕಾರಗಳು ಮಂಜೂರು ಮಾಡುತ್ತಿದ್ದ,ಜಹಗೀರು ಜಮೀನುಗಳನ್ನು ಎರಡು ಬಗೆಯನ್ನು ಗಮನಿಸಬಹುದು. ಮೊದಲನೆಯದಾಗಿ ಜಹಗೀರು ನೀಡುತ್ತಿದ್ದ ಜಮೀನುಗಳು ಅವರು ಸತ್ತನಂತರ ಸರ್ಕಾರದ ಸೊತ್ತಾಗುವುದು,ಇಲ್ಲದಿದ್ದಲ್ಲಿ ನಿಯಮದಂತೆ ಜಹಗೀರು ಜಮೀನುಗಳು ವಂಶಪರಂಪರೆಯಾಗಿ ರಕ್ತಸಂಬಂಧಿಗಳಿಗೆ ಆಸ್ತಿಯ ಒಡೆತನವು ಮುಂದುವರೆಯುತ್ತದೆ. ಈ ಕತೆಯಲ್ಲಿ ಎರಡನೇ ವರ್ಗಕ್ಕೆ ಸೇರಿದ ಈ ಜಹಗೀರು ಜಮೀನನ್ನು ಇಲ್ಲಿನ ಭೂಮಾಲೀಕರು ಅನುಭವಿಸುತ್ತಿರುವುದನ್ನು ಕಾಣುತ್ತೇವೆ. ಇಲ್ಲಿನ ಭೂಮಾಲೀಕನಿಗೆ ಭೂಮಿಯು ಅನಾಯಾಸವಾಗಿ ಅವರಿಗೆ ದಕ್ಕಿದೆ.

ಈ ಕತೆಯಲ್ಲಿ ಬ್ರಿಟಿಷರ ಪರವಾಗಿ ಬಾದುಶಹನ ಕೈಗೂಡಿಸಿ ಕೆಲಸ ಮಾಡಿದ ಪರಿಣಾಮವಾಗಿ ಈ ಹಿಂದೆ ತಮ್ಮ ರಕ್ತಸಂಬಂಧಿಗಳು ಮಾಡಿದ ಘನಕಾರ್ಯಕ್ಕೆ ಬಹುಮಾನವಾಗಿ ಬಂದ ಭೂಮಿಯ ಬಗೆಗೆ ನಿರೂಪಕ ಹೇಳುವ ಮಾತುಗಳಿವು, "ಹಿಂದೆ ಎಂದೋ ಒಂದು ಕಾಲದಲ್ಲಿ ನಮ್ಮ ಪೂರ್ವಜರು ಸ್ವಾತಂತ್ರ್ಯ ಪ್ರೀತಿಯ ದಾಯಾದಿಯೊಬ್ಬನನ್ನು ಸೆರೆಹಿಡಿದುಕೊಟ್ಟರು. ಅದಕ್ಕಾಗಿ ಜಗತ್ತು ಹುಟ್ಟಿದಾಗಲೆ ಹುಟ್ಟಿದ ನೆಲವನ್ನು ಇನ್ನಾವ ದೇಶದಿಂದಲೋ ಬಂದ ಬಾದಶಹ ಅವರಿಗೆ ಇನಾಮುಕೊಟ್ಟ. ಆ ಪೂರ್ವಜರ ರಕ್ತಸಂಬಂಧಿಕರೆಂದು ಆ ನೆಲದ ಪೂರ್ಣ ಮಾಲ್ಕೀಹಕ್ಕು ನಮಗೆ ಬಂದಿತು."[೧]

ಜಹಗೀರು ಭೂಮಿಯು ಭೂಮಾಲೀಕನಿಗೆ ಬಂದ ಬಗೆಯ ವಿವರವನ್ನು ಇಲ್ಲಿ ಗಮನಿಸಬಹುದಾಗಿದೆ. ಭೂಮಿಯಲ್ಲಿ ಬೆವರು ಹರಿಸುವ ಲಿಂಗಣ್ಣನಂಥ ರೈತನಿಗೆ ಇಲ್ಲದಿದ್ದ ಹಕ್ಕು ಯಾವುದೋ ದೇಶದಿಂದ ಬಂದ ಬಾದಷಹನು ಇನಾಂ ಕೊಟ್ಟ ಇಲ್ಲಿನ ಭೂಮಾಲೀಕನಿಗೆ ಹಕ್ಕು ಸ್ಥಾಪನೆಯಾಗುವುದು ಸಾಮಾಜಿಕ ಅನ್ಯಾಯಕ್ಕೆ ದೊಡ್ಡ ಉದಾಹರಣೆಯಾಗಿ ಕಾಣುತ್ತದೆ. ರಾಷ್ಟ್ರೀಯ ಹೋರಾಟ ಸಂದರ್ಭದಲ್ಲಿ ಬಾದುಶಹ ಮತ್ತು ಬ್ರಿಟೀಷರ ಪರವಾಗಿದ್ದುದರ ಫಲವೇ ಈ ಭೂ ಒಡೆತನ. ತಮ್ಮ ರಕ್ತಸಂಬಂಧಿಗಳು ಮಾಡಿದ ದೇಶದ್ರೋಹಕ್ಕೆ ಸಂದ

ಫಲವಾಗಿ ಇನಾಂ ಭೂಮಿ ಬಂದುದಾಗಿದೆ. ಇದು ರಾಷ್ಟ್ರೀಯ ಹೋರಾಟದ ವಿರುದ್ಧವಾಗಿ ಕೆಲಸ ಮಾಡಿದ ಪರಿಣಾಮದ ಕೊಡುಗೆಯಾಗಿದೆ. ವಸಾಹತು ಸನ್ನಿವೇಶದಲ್ಲಿ ಪಾಳೇಗಾರರು, ರಾಜರು, ಭೂಮಾಲೀಕವರ್ಗ ಬ್ರಿಟಿಷ್ ಆಡಳಿತಶಾಹಿಯ ಪರವಾಗಿದ್ದುದನ್ನು ಈ ಕತೆಯಿಂದ ಗುರುತಿಸಬಹುದಾಗಿದೆ.

ಜಹಗೀರು ಭೂಮಿಯ ಹಕ್ಕುಗಳು ಪರಂಪರಾನುಗತ ಕೊಡುಗೆಯಾಗಿ ಆ ಕುಟುಂಬದ ಸದಸ್ಯರ ಸ್ವಾಧೀನಕ್ಕೆ ಬಂದಿರುವುದನ್ನು ಕಾಣುತ್ತೇವೆ. ಈ ರೀತಿಯ ಭೂ ಒಡೆತನಗಳು ಬ್ರಿಟಿಷರ ಪರವಾಗಿ ಕೆಲಸ ಮಾಡುವುದರ ಮೂಲಕ ಜಹಗೀರುದಾರರು ಬಳುವಳಿಯಾಗಿ ಪಡೆದಿರುವುದನ್ನು ಕಾಣುತ್ತೇವೆ. ಈ ಕತೆಯಲ್ಲಿ ಜಹಗೀರು ಭೂಮಿಯ ಮೂಲಕ ಭೂಮಾಲೀಕರಾಗಿ ಅಸ್ತಿತ್ವವನ್ನು ಪಡೆದ ಬಗೆ ಇಲ್ಲಿ ವ್ಯಕ್ತವಾಗುತ್ತದೆ. ಈ ಕತೆಯಲ್ಲಿ ಮುಖ್ಯವಾಗಿ ಗೇಣಿ ರೈತನ ಪ್ರಶ್ನೆಯಿದೆ, ಭೂ ಹಕ್ಕಿನ ಪ್ರಶ್ನೆಯಿದೆ, ಶೋಷಣಾಕ್ರಮ ಹಾಗೂ ಭೂ ವರ್ಗಾವಣೆಯಾದ ಬಗೆಯನ್ನು ಧ್ವನಿಸುತ್ತದೆ.

"**ಮಾಲ್ಕೀ ಹಕ್ಕು**" ಹೆಸರೇ ಸೂಚಿಸುವಂತೆ ಮಾಲೀಕ ಹಕ್ಕಾಗಿದೆ. ಜಹಗೀರು ಭೂಮಿ ದೂರದ ರಕ್ತಸಂಬಂಧದಿಂದ ಬಂದಿರುವುದು ನಿರೂಪಕನಿಂದ ತಿಳಿಯುತ್ತದೆ. ಈ ಭೂಮಿಯಲ್ಲಿ ಗೇಣಿದಾರರಾಗಿ ಲಿಂಗಣ್ಣ ಮತ್ತು ಹೆಂಡತಿ ಸಾತಮ್ಮ ತನ್ನ ಮಕ್ಕಳು ಸೇರಿ ಈ ಭೂಮಿಯಲ್ಲಿ ಗುಡಿಸಲು ಕಟ್ಟಿಕೊಂಡು ಗೇಣಿರೈತರಾಗಿ ದುಡಿಮೆ ಮಾಡಿಕೊಂಡಿರುತ್ತಾರೆ. ತನ್ನ ಮಕ್ಕಳ ಹೊಸಬಟ್ಟೆಗಾಗಿ ಎರಡು ಬಾಳೆಯ ಕೊನೆಯನ್ನು ಕಳ್ಳತನ ಮಾಡಿದ ಘಟನೆಯೇ ಮಹತ್ವದ ತಿರುವನ್ನು ಪಡೆದುಕೊಳ್ಳುತ್ತದೆ. ಸಾತಮ್ಮ ಎತ್ತುವ ಪ್ರಶ್ನೆ ನಿಜಕ್ಕೂ ಅರ್ಥಪೂರ್ಣವಾದುದು. ತಮ್ಮ ಜಮೀನಿನ ಒಡೆಯರು ದೇಶದ್ರೋಹ ಮಾಡಿದ ಫಲವಾಗಿ ಈ ಜಮೀನಿನ ಒಡೆಯರಾಗಿದ್ದಾರೆ. ತಾನು ಹಗಲಿರುಳು ದುಡಿದು ತಮ್ಮ ಮಕ್ಕಳ ಹರಕಲು ಬಟ್ಟೆಯಿಂದ ಇರುವುದನ್ನು ನೋಡಿ ಹೊಸ ಬಟ್ಟೆ ತರಲು ಎರಡು ಬಾಳೆ ಗೊನೆ ಮಾರಿದ್ದು, ದೇಶದ್ರೋಹಕ್ಕಿಂತ ದೊಡ್ಡ ಅಪರಾಧವೇ ಎಂಬುದು ಸಾತಮ್ಮನ ಪ್ರಶ್ನೆಯಾಗಿದೆ. ಇದಕ್ಕಾಗಿ ಪಂಚಾಯ್ತಿಯನ್ನು ಸೇರಿಸಿ ಸಾತಮ್ಮನನ್ನು ಬಾಳೆಗೊನೆಯನ್ನೇ ಮಾರಿದ್ದೇ ದೊಡ್ಡ ದೇಶದ್ರೋಹವೆಂಬಂತೆ ಬಿಂಬಿಸುತ್ತಾರೆ. ಆದರೆ ತಾನು ಮಾಡಿದ ತಪ್ಪನ್ನು ನಿಷ್ಕಲ್ಮಶದಿಂದ ಒಪ್ಪಿಕೊಳ್ಳುತ್ತಾಳೆ.

ಈ ಕುಟುಂಬವು ಕಾಯಕವೇ ಕೈಲಾಸ ಎಂಬಂತೆ ದುಡಿಮೆಯನ್ನೇ ಆಧಾರವಾಗಿಸಿಕೊಂಡಿರುವ ಲಿಂಗಣ್ಣ ಕಡುಬಡವ. ಗೇಣಿ ನೀಡಿರುವುದರಿಂದ ಒಡೆಯರಿಗೂ ಈತನೇ ಅನ್ನದಾತ. ಲಿಂಗಣ್ಣ ತನ್ನ ಹೆಂಡತಿ ಮಕ್ಕಳೊಂದಿಗೆ ದಿನವಿಡೀ ದುಡಿದು ಮಳೆ ಬಿಸಿಲೆನ್ನದೆ ಇಡೀ ಕುಟುಂಬವನ್ನು ಸಾಕುತ್ತಿರುವ ಶ್ರಮ ಜೀವಿ. ಈತನ ಆಸ್ತಿ ಮುರುಕು ಗುಡಿಸಲು ಮತ್ತು ದುಡಿಯುವುದಕ್ಕೆ ಎರಡು ಎತ್ತುಗಳು. ಬೇಸಾಯಕ್ಕೆ ಬೇಕಾದ ಕೆಲವು ಸಾಧನ ಸಲಕರಣೆಗಳು ಇವಿಷ್ಟನ್ನು ಬಿಟ್ಟರೆ ಆತನ ಜೊತೆಯಲ್ಲಿ ಹೆಂಡತಿ ಸಾತಮ್ಮ ಮತ್ತು ಅವರ ಮಕ್ಕಳು ಇದ್ದಾರೆ. ಇವರೆಲ್ಲರ ಆಸ್ತಿ ನಿಯತ್ತಿನ ದುಡಿಮೆ ಮಾತ್ರವಾಗಿದೆ. ಅದನ್ನೇ ನಂಬಿಕೊಂಡು ಬದುಕುತ್ತಿದ್ದಾರೆ. ಇದು ಅವರ ಕುಟುಂಬಕ್ಕೆ ಹೊಟ್ಟೆಗೆ ಹಿಟ್ಟು, ಮೈಯಿಗೆ ಬಟ್ಟೆಗೂ ಸಾಕಾಗುತ್ತಿಲ್ಲ. ಗೇಣಿಗೆ ಕೊಟ್ಟ ಜಮೀನಿನ ಬಾಳೆಯ ತೋಟ ಲಿಂಗಣ್ಣನೇ ಮಾಡಿದ್ದಾನೆ. ಇವರ ನಿಯತ್ತಿನ ದುಡಿಮೆಯೇ ಆಸ್ತಿಯಾಗಿದೆ. ಇದನ್ನು ಭೂಮಾಲೀಕ ವರ್ಗ ಲಿಂಗಣ್ಣ ಮತ್ತು ಸಾತಮ್ಮನ ಕುಟುಂಬದ ಶ್ರಮವನ್ನು ವ್ಯವಸ್ಥಿತವಾಗಿ ಶೋಷಿಸುತ್ತಾ ಬಂದಿದೆ. ಕಾಲಕಾಲಕ್ಕೆ ಬೆಳೆ ಬಂದ ತಕ್ಷಣವೇ ಧಣಿಯ ಮನೆಗೆ ಹೊತ್ತೋಯ್ಯಬೇಕು. ಆನಂತರದಲ್ಲಿ ತನಗೆ ಉಳಿದ ಗೇಣಿಯ ಪಾಲನ್ನು ಪಡೆಯಬೇಕು. ಇಲ್ಲದಿದ್ದಲ್ಲಿ ಉಳಿದ ಸಾಲಕ್ಕೆ ಕೆಲವೊಮ್ಮೆ ಚುಕ್ತಾ ಆಗುವುದುಂಟು. ಇದರಿಂದಾಗಿ ಬಡತನದ ದುಸ್ಥಿತಿ ಉಂಟಾಗಿದೆ. ತಾನೇ ಗೇಣಿ ಭೂಮಿಯಲ್ಲಿ ಬೆಳೆಸಿದ, ಅದಕ್ಕೆ ಗೊಬ್ಬರ ಬೇಸಾಯ ಬಂಡವಾಳವನ್ನು ಹಾಕಿದರೂ ಅದರ ಪಾಲನ್ನು ಸ್ವತಂತ್ರವಾಗಿ ಅನುಭವಿಸುವಂತಿಲ್ಲ ಎಂಬುದು ಸಾತಮ್ಮನ ಪ್ರಶ್ನೆಯಾಗಿದೆ.

ಜಾಗೀರು ಭೂಮಿ ಬಂದ ಬಗೆಯನ್ನು ನಿರೂಪಕ ವ್ಯಕ್ತಪಡಿಸುತ್ತಾನೆ. ಈ ಹಿಂದೆ ಭೂಮಾಲೀಕನಿಗೆ ಹಿಂದೂ ದೇಶದ ಸ್ವಾತಂತ್ರ್ಯ ಯೋಧನೊಬ್ಬನನ್ನು ಬಾದುಶಹನಿಗೆ ಹಿಡಿದುಕೊಟ್ಟಿದ್ದರ ಫಲವಾಗಿ ಮಾಲ್ಕೀ ಬಂದಿದೆ ಎಂದು ಇತಿಹಾಸವನ್ನು ತೆರೆದಿಡುತ್ತಾರೆ. ಇದು ದೇಶದ್ರೋಹಕ್ಕೆ ಸಂದ ಇನಾಂ ಆಗಿದೆ. ಇಲ್ಲಿನ ದೂರದ ರಕ್ತಸಂಬಂಧಿಯಾಗಿದ್ದರಿಂದ ತನಗೆ ಬಂದ ಜಹಗೀರು ಜಮೀನಾಗಿದೆ ಎಂದು ತಿಳಿಸುತ್ತಾರೆ. ಇದಕ್ಕಿಂತ ಹೆಚ್ಚಾಗಿ ಈ ಭೂಮಿಯ ಜೊತೆಯಲ್ಲಿ ನಿರಂತರ ಸಂಬಂಧ ಇಟ್ಟುಕೊಂಡು ಕಾದಾಡುತ್ತಿರುವ ಲಿಂಗಣ್ಣನ ದುಡಿಮೆಯ ಬಗ್ಗೆ ನಿರೂಪಕ ಹೆಚ್ಚು ಅನುಕಂಪದ ನೆಲೆಯಲ್ಲಿ ನೋಡಿದ್ದಾರೆ.

ಆದ್ದರಿಂದ ಇಲ್ಲಿ ನಿಜವಾದ ದುಡಿಮೆಗಾರನಿಗೆ ಭೂಮಿ ದಕ್ಕದೇ ಇರುವುದು, ಉಳುವವನಿಗೆ ಭೂ ಒಡೆತನವು ಇಲ್ಲ, ಗೇಣಿ ಭೂಮಿಯಲ್ಲಿ ದುಡಿದ ಫಲವನ್ನೂ ಉಣ್ಣುವಂತಿಲ್ಲ. ಈತ ಉರಿಬಿಸಿಲಿನಲ್ಲಿ ಮೈಯೆಲ್ಲಾ ಕರಕಲಾಗುತ್ತಿರುವ ಲಿಂಗಣ್ಣನ ದುಡಿಮೆಯಲ್ಲಿ ಆತನ ಹೆಂಡತಿ ಸಾತಮ್ಮನಿಗೆ ತನ್ನ ಮಕ್ಕಳಿಗೋಸ್ಕರ ಎರಡು ಗೊನೆ ಬಾಳೆ ಹಣ್ಣುಗಳನ್ನು ಕೊಯ್ದು ಮಾರಿದರೆ, ಅದು ದೇಶದ್ರೋಹಕ್ಕಿಂತ, ನಂಬಿಕೆ ದ್ರೋಹವಾಗಿ ಕಾಣುತ್ತದೆ. ನಂಬಿಕೆಯನ್ನೇ ದುಡಿಮೆ ಎಂದು ಭಾವಿಸುವವರಿಗೆ ಅಷ್ಟು ಹಕ್ಕಿಲ್ಲವೇ? ಎಂಬ ಪ್ರಶ್ನೆಯನ್ನು ನಿರೂಪಕನೇ ಕೇಳುತ್ತಾನೆ. ತಾನು ಬೆವರು ಹರಿಸಿ ಬೆಳೆದ ಬೆಳೆ ಮೇಲೆ ತನಗೇ ಹಕ್ಕಿಲ್ಲವೆಂಬುದು ವಾಸ್ತವದಲ್ಲಿ ಭಾಸವಾಗುತ್ತದೆ. ಇದರ ಆಂತರ್ಯದಲ್ಲಿ ಭೂ ಹಕ್ಕಿನ ಪ್ರಶ್ನೆಯೂ ಸಹ ವ್ಯಕ್ತವಾಗುವುದನ್ನು ಕಾಣಬಹುದಾಗಿದೆ. ತನ್ನದೆನ್ನುವ ತುಂಡು ಭೂಮಿಯಿದ್ದಿದ್ದರೆ ಈ ಹಂಗು ನಮಗೆ ಎದುರಾಗುತ್ತಿತ್ತೇ ಎಂಬ ಪ್ರಶ್ನೆ ಲಿಂಗಣ್ಣ ಕುಟುಂಬಕ್ಕೆ ಎದುರಾಗುತ್ತದೆ. ಭೂಮಿ ತನ್ನದಾಗಿದ್ದರೆ, ಅದರಲ್ಲಿ ಬೆಳೆದ ಬೆಳೆಗೆ ತಾನು ಹಕ್ಕುದಾರನಾಗಬಹುದಿತ್ತು ಎಂಬ ಪ್ರಶ್ನೆ ಈ ಕತೆಯು ಹುಟ್ಟುಹಾಕುತ್ತದೆ.

ಗೇಣಿ ರೈತರು ವರ್ಷಪೂರ್ತಿ ದುಡಿದರೆ ಮಾತ್ರ ಅಲ್ಪಸ್ವಲ್ಪ ಲಾಭವನ್ನು ಕಾಣಲು ಸಾಧ್ಯವಾಗುತ್ತಿತ್ತು. ಇಲ್ಲಿ ಲಿಂಗಣ್ಣನ ಹೆಂಡತಿ ಸಾತಮ್ಮ ಗಂಡನ ದುಡಿಮೆಯಲ್ಲಿ ಪಾಲುದಾರಳು. ಇಡೀ ಕುಟುಂಬ ಗೇಣಿಯ ತೋಟದಲ್ಲಿ ಬೆಳೆ ತೆಗೆಯುತ್ತಿದ್ದರು. ಅಷ್ಟೆ ಅಲ್ಲದೆ ಲಿಂಗಣ್ಣನ ಕುಟುಂಬವು ಕಡುಬಡತನದಿಂದ ಬಳಲುತ್ತಿದ್ದರೂ ನಂಬಿದವರಿಗೆ ದ್ರೋಹ ಬಗೆಯದೆ ಕೆಲಸ ಮಾಡುತ್ತಿದ್ದರು. ಆರಂಭದಿಂದಲೂ ನಿರೂಪಕ ಲಿಂಗಣ್ಣನ ಗೇಣಿ ಸಂಸಾರವನ್ನು ತನ್ನ ಮಾನವೀಯ ಕಣ್ಣಿಂದಲೇ ನೋಡುತ್ತಾರೆ. ಆದರೆ ಅವರಿಗೆ ಸ್ವಂತದ್ದೆಂಬ ಭೂಮಿಯೇ ಇರದೇ ಇರುವ ಸ್ಥಿತಿ, ಆ ಕಾಲದ ಗೇಣಿದಾರರ ಚಿತ್ರಣವನ್ನು ಕಟ್ಟಿಕೊಡುವುದನ್ನು ಕಾಣಬಹುದು.

ಇಲ್ಲಿ ಭೂಮಾಲೀಕನಿಗೆ ಅನಾಯಾಸವಾಗಿ ಭೂಮಿ ದಕ್ಕಿರುವುದಲ್ಲದೆ, ಭೂ ಸಂಬಂಧವೇ ಇಲ್ಲದೆ ಅದರ ಫಸಲನ್ನು ಅನುಭವಿಸುತ್ತಾ, ಭೂಮಾಲೀಕವರ್ಗವಿದೆ.ಇನ್ನೊಂದೆಡೆ ಗೇಣಿದಾರ ಭೂಮಿಯ ಮೇಲೆ ಹಕ್ಕು ಸ್ಥಾಪಿಸಲು ಆಗದೆ ಇರುವ ಸ್ಥಿತಿಯಿದೆ. ಮೇಲ್‌ಸ್ತರದ ಭೂಮಾಲೀಕ ಸಂಬಂಧಗಳು ಭೂಮಿಯೊಂದಿಗೆ ಗುರುತಿಸಿಕೊಳ್ಳಲು ಆಗದೆ ಕೇವಲ ನಗರದಲ್ಲಿ ಬದುಕುತ್ತಾ ಭೂಮಿಯಿಂದ ಬರುವ ಲಾಭಕ್ಕಾಗಿ ವ್ಯವಸಾಯ ಸೀಮಿತವಾಗಿರುವುದನ್ನು ಕಾಣಬಹುದು.

**ಕೊನೆ ಟಿಪ್ಪಣಿ**

೧. ಆನಂದಕಂದ,ಮಾಲ್ಕೀಹಕ್ಕು, ಪುಟ೪೫

### ೪.೨.೦ ಸ್ವಾತಂತ್ರ್ಯೋತ್ತರ ಸಂದರ್ಭ

ಸ್ವಾತಂತ್ರ್ಯೋತ್ತರ ಸಂದರ್ಭವನ್ನು ಸಮಾಜವಾದ ಮತ್ತು ಮಾರ್ಕ್ಸ್‌ವಾದೀ ಹಾಗೂ ಗಾಂಧಿ ಚಿಂತನೆಗಳ ಪ್ರಭಾವದ, ಸಾಮಾಜಿಕ ಸಂಘರ್ಷದ ಕಾಲವಾಗಿ ಗುರುತಿಸಬಹುದು. ಇಂತಹ ಸೈದ್ಧಾಂತಿಕ ಪರಿಣಾಮದ ಜೊತೆಗೆ ರಾಷ್ಟ್ರೀಯ ಹೋರಾಟದ ಆಶಯಗಳು, ಕನಸುಗಳು, ಹೊಸದಾಗಿ ಅಸ್ತಿತ್ವಕ್ಕೆ ಬಂದವು. ಸ್ವಾತಂತ್ರ್ಯಾನಂತರ ಭಾರತದಲ್ಲಿ ಸಂವಿಧಾನಾತ್ಮಕ ಪ್ರಜಾಪ್ರಭುತ್ವವ್ಯವಸ್ಥೆ ಹಾಗೂ ಆಡಳಿತ ವ್ಯವಸ್ಥೆಯು ಅಸ್ತಿತ್ವಕ್ಕೆ ಬಂದಿತು. ಇಂತಹ ಸಾಮಾಜಿಕ ವಾತಾವರಣದಲ್ಲಿ ಆಧುನಿಕ ಕನ್ನಡಸಾಹಿತ್ಯವು ಹೊಸಮೈ ಪಡೆಯಿತು.

ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯವನ್ನು ಪ್ರಭಾವಿಸಿದ ಸೃಜನಶೀಲ ಕೃತಿಗಳು,ಸಾಮಾಜಿಕ ಬದುಕಿನ ಅಪೂರ್ವ ಕೊಡುಗೆಗಳಾಗಿವೆ. ಅಲ್ಲದೆ ಸ್ಥಳೀಯ ಸಮಸ್ಯೆಗಳ ಕಾರಣವಾಗಿ ಹುಟ್ಟಿಕೊಂಡ ಹೋರಾಟಗಳ ಪ್ರಭಾವವು ಕನ್ನಡ ಸಾಹಿತ್ಯದ ಬೆಳವಣಿಗೆಗೆ ಕಾರಣವಾಯಿತು. ಆರಂಭದಲ್ಲಿ ವಸಾಹತುಶಾಹಿ ಸನ್ನಿವೇಶದ ನಂತರದ ಚಿಂತನೆಗಳು ಭಾರತೀಯ ಸಮಾಜದ ಬೆಳವಣಿಗೆಗೆ ಪೂರಕವಾಗಿದ್ದರೂ ಕ್ರಮೇಣ ಸ್ಥಳೀಯ ನೆಲೆಯಲ್ಲಿ ಸೈದ್ಧಾಂತಿಕ ಸ್ವರೂಪ ಪಡೆಯತೊಡಗಿದ್ದನ್ನು ಗಮನಿಸಬಹುದು. ಗಾಂಧಿ ಚಿಂತನೆಗಳಿಂದ ಗಾಂಧೀವಾದ, ಸಮಾಜವಾದದ ತಳಹದಿಯ ಲೋಹಿಯಾವಾದದ ಆಶಯಗಳು ಸ್ವಾತಂತ್ರ್ಯೋತ್ತರ ಭಾರತದ ಸಂದರ್ಭದಲ್ಲಿ ಮುನ್ನೆಲೆಗೆ ಬಂದವು. ಇವುಗಳ ಪ್ರಭಾವವು ಭಾರತೀಯ ಸಮಾಜದ ಮೇಲಾದಂತೆಯೇ ಸಾಹಿತ್ಯದ ಮೇಲೂ ಆಯಿತು.

ನವೋದಯ ಸಂದರ್ಭವು ಉದಾರವಾದೀ ಗಾಂಧೀ ಚಿಂತನೆಯಿಂದ ಪ್ರಭಾವಿತವಾದಂತೆ, ಪ್ರಗತಿಶೀಲ, ನವ್ಯ, ದಲಿತಬಂಡಾಯ ಸಾಹಿತ್ಯವು ಲೋಹಿಯಾ, ಅಂಬೇಡ್ಕರ್, ಪೆರಿಯಾರ್ ಮೊದಲಾದ ಚಿಂತಕರಿಂದ ಪ್ರಭಾವಿತಗೊಂಡಿದೆ. ಈ ಹಿನ್ನೆಲೆಯಲ್ಲಿ ಪ್ರಗತಿಶೀಲ ಚಳುವಳಿ ನಡೆದು ಬಂದ ಬಗೆ ಮತ್ತು ದಲಿತ ಬಂಡಾಯ ಚಳುವಳಿಗಳ ನಡೆಯನ್ನು ಗುರುತಿಸಲಾಗಿದೆ. ಇದೇ ಸಂದರ್ಭದಲ್ಲಿ ಭಾರತೀಯ ಸಮಾಜದ ನಡೆಯನ್ನು ಈಗಾಗಲೇ ಮೂರನೇ ಅಧ್ಯಾಯದಲ್ಲಿ ಚರ್ಚಿಸಿರುವುದರಿಂದ ಸಾಹಿತ್ಯ ಚಳುವಳಿ ಕುರಿತಷ್ಟೇ ಇಲ್ಲಿ ಚರ್ಚಿಸಲಾಗಿದೆ.

ಮೊದಲ ಬಾರಿಗೆ ಮುಲ್ಕ್‌ರಾಜ್ ಆನಂದ್ ೧೯೩೫ರ ಸುಮಾರಿಗೆ ಪ್ರಗತಿಶೀಲ ಲೇಖಕರ ಸಂಘವನ್ನು ಲಂಡನ್‌ನಲ್ಲಿ ಹುಟ್ಟುಹಾಕಿದರು. "ಕಲಾವಿದರು ಬರಹಗಾರರು,ಕವಿಗಳ ನಡುವೆ ಪ್ರಚಾರಕಾರ್ಯ ಕೈಗೊಂಡು ಪ್ರಗತಿಶೀಲ ಸಾಹಿತ್ಯ ಹಾಗೂ ಜನತಾ ನಾಟಕ ಪೀಪಲ್ಸ್ ಥೀಯೇಟರ್ ಚಳುವಳಿಗಳನ್ನು ಹುಟ್ಟುಹಾಕಿದರು. ಇವುಗಳ ಪರಿಣಾಮವಾಗಿ ಉನ್ನತ ಶಿಕ್ಷಣ ಪಡೆದವರ ನಡುವೆ ಮಾರ್ಕ್ಸ್‌ವಾದ, ಅದರ ಸಿದ್ಧಾಂತಗಳು ಪ್ರಭಾವ ಬೀರತೊಡಗಿದವು. ಎಡಪಂಥದ ಒಲವುಳ್ಳ ಶಿಕ್ಷಿತ ಜನಸಮುದಾಯ ಈ ಕಾಲದಲ್ಲಿ ರೂಪುಗೊಂಡ ಭಾರತದ ರಾಜಕೀಯ ಸಾಮಾಜಿಕ, ಆರ್ಥಿಕ ಹಾಗೂ ಐತಿಹಾಸಿಕ ಸಮಸ್ಯೆಗಳನ್ನು ಮಾರ್ಕ್ಸ್‌ವಾದದ ದೃಷ್ಟಿಕೋನದಿಂದ ವಿಶ್ಲೇಷಿಸಿಸಲು ಆರಂಭಿಸಿದ್ದರು."[೧] ಇಂತಹ ಸಾಮಾಜಿಕ ವಾತಾವರಣವು ಸ್ವಾತಂತ್ರ್ಯಾನಂತರದ ಸಾಹಿತ್ಯದ ಸೃಷ್ಟಿಗೆ ಕಾರಣವಾಯಿತು.

ಈ ಪ್ರಕ್ರಿಯೆಯಿಂದ ಸ್ಫೂರ್ತಿಗೊಂಡು ಭಾರತದಲ್ಲಿ ಮೊದಲ ಬಾರಿಗೆ ೧೯೩೬ರಲ್ಲಿ ಅಖಿಲಭಾರತ ಪ್ರಗತಿಶೀಲ ಲೇಖಕರಸಂಘ ಸ್ಥಾಪನೆಯಾಗಿ ಮೊದಲ ಅಧಿವೇಶನ ನಡೆಯಿತು. ನಂತರ ೧೯೩೮ರಲ್ಲಿ ದೆಹಲಿ ಮತ್ತು ಕಲ್ಕತ್ತಾದಲ್ಲಿ ಅಧಿವೇಶನಗಳು ನಡೆದವು. ೧೯೪೩ರಲ್ಲಿ ಮುಂಬಯಿಯಲ್ಲಿ ಪ್ರಗತಿಶೀಲ ಲೇಖಕರ ನಾಲ್ಕನೇ ಅಧಿವೇಶನ ನಡೆಯಿತು. ೧೯೪೨ರ ಅಂತ್ಯದಲ್ಲಿ ಅಖಿಲಭಾರತ ಪ್ರಗತಿಶೀಲ ಲೇಖಕರ ಸಂಘದ ಕರ್ನಾಟಕ ಶಾಖೆ ಪ್ರಾರಂಭವಾಯಿತು. ಇವರಲ್ಲಿ ಅ.ನ.ಕೃ., ಬಸವರಾಜಕಟ್ಟೀಮನಿ, ತ.ರಾಸು., ನಿರಂಜನ, ಮೊದಲಾದವರು ಚಳುವಳಿಯಲ್ಲಿ ಭಾಗವಹಿಸಿದರು. ೧೯೪೩ರಲ್ಲಿ ಬೆಂಗಳೂರು ಪ್ರಗತಿಶೀಲ ಲೇಖಕರ ಸಂಘ ಸ್ಥಾಪಿಸಿ, ಅ.ನ.ಕೃ ಅವರನ್ನು ಅಧ್ಯಕ್ಷರನ್ನಾಗಿ ಮಾಡಲಾಯಿತು. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯದಲ್ಲಿ ಪ್ರಗತಿಶೀಲ ಸಾಹಿತ್ಯದ ಮೇಲೆ ಈ ಚಿಂತನೆಗಳು ಹಾಗೂ ಚಳುವಳಿಗಳು ಪ್ರಭಾವ ಬೀರಿವೆ.

ಆದರೆ ಕಾಲಕ್ರಮದಲ್ಲಿ ಎರಡು ಬಗೆಯಯಾಗಿ ಪ್ರಗತಿಶೀಲ ಚಳುವಳಿ ಎರಡು ಗುಂಪಗಳಾಗಿ ಒಡೆಯಿತು. ಈ ಕುರಿತು ಬೋಳುವಾರು ಹೇಳುವಂತೆ, "ಸಾಮ್ರಾಜ್ಯಶಾಹಿ ಹಾಗೂ ಊಳಿಗಮಾನ್ಯ ಮೌಲ್ಯಗಳಿಂದ ಪಾರುಮಾಡುವ ಸಲುವಾಗಿ ಹುಟ್ಟಿಕೊಂಡ ಈ ಚಳುವಳಿಯು ಕ್ರಮೇಣ ವಸ್ತು ವಿನ್ಯಾಸ ಹಾಗೂ ಬದ್ಧತೆ ಜವಾಬ್ದಾರಿಗಳ ವಿವರಣೆಯಲ್ಲಿ ತನ್ನೊಳಗೆ ಹುಟ್ಟಿಸಿಕೊಂಡ ವೈರುದ್ಯಗಳಿಂದಾಗಿ ಎರಡು ದಾರಿಗೆ ಹೊರಳಿತು. ಎಡಪಂಥೀಯ ಅದರಲ್ಲೂ ಮುಖ್ಯವಾಗಿ ಮಾರ್ಕ್ಸ್ ವಾದಕ್ಕೆ ಸಂಪೂರ್ಣ ಶರಣಾಗಲೊಲ್ಲದ ಕೆಲವರು ಆಳುವ

ವರ್ಗದತ್ತ ವಾಲುತ್ತಾ, ಭಾಷೆ,ಶೈಲಿ, ಅಭಿವ್ಯಕ್ತಿ ಇತ್ಯಾದಿ ಪದಗಳಿಂದ ತಮ್ಮ ನಡವಳಿಕೆಗಳನ್ನು ಸಮರ್ಥಿಸುತ್ತಾ ಕ್ಷೀಣಿಸಿದರೆ, ತಾತ್ವಿಕ ಪ್ರಣಾಳಿಕೆಗಳಿಗೆ ಬಲವಾಗಿ ಅಂಟಿಕೊಂಡ ಕೆಲವರು ದುಡಿಯುವ ಮಧ್ಯಮವರ್ಗದವರ ನಡುವೆ ಜನಪ್ರಿಯರಾದರು."[೨] ಪ್ರಗತಿಶೀಲರು ಬರೆದ ಕೃತಿಗಳಲ್ಲಿ ಈ ಎರಡು ಬಗೆಯ ಬರಹಗಳನ್ನು ಗುರುತಿಸಬಹುದು.

ಇದೇ ಕಾಲಕ್ಕೆ ಸ್ವಾತಂತ್ರ್ಯೋತ್ತರ ಭಾರತದ ಸಮಾಜವಾದಿ ನಾಯಕರುಗಳಾದ ಜಯಪ್ರಕಾಶ್ ನಾರಾಯಣ್, ಆಚಾರ್ಯ ನರೇಂದ್ರದೇವ, ಅರುಣ್‌ಆಸಫ್ ಆಲಿ, ಅಚ್ಯುತ ಪಟವರ್ಧನ್ ಮೊದಲಾದವರು ಸಮಾಜವಾದಿ ಪಕ್ಷವನ್ನು ಅಸ್ತಿತ್ವಕ್ಕೆ ತಂದರು. ಈ ಪಕ್ಷದ ಮುಖ್ಯಪ್ರಣಾಳಿಕೆಯಲ್ಲಿ ಜಮೀನ್ದಾರಿ ಪದ್ಧತಿ ನಿಷೇಧ, ರೈತರ ಸಮಸ್ಯೆಗಳಿಗೆ ಆದ್ಯತೆ, ಪ್ರಮುಖ ಉದ್ಯಮಗಳ ರಾಷ್ಟ್ರೀಕರಣ, ಮೊದಲಾದ ಅಂಶಗಳನ್ನು ಪ್ರಮುಖ ಕಾರ್ಯಕ್ರಮವಾಗಿ ರೂಪಿಸಿದರು. ಇದರ ಪ್ರಭಾವದಿಂದ ಕರ್ನಾಟಕದಲ್ಲಿ ಪ್ರಜಾ ಸೋಷಲಿಸ್ಟ್‌ಪಾರ್ಟಿ, ಸಮಾಜವಾದಿ ಪಕ್ಷ, ಯುವಜನಸಭಾ ಅಸ್ತಿತ್ವಕ್ಕೆ ಬಂದವು. ಇವುಗಳಲ್ಲಿ ಕ್ರಿಯಾಶೀಲರಾಗಿದ್ದವರೆಂದರೆ ಶಾಂತವೇರಿ ಗೋಪಾಲಗೌಡ, ಎಸ್.ಶಿವಪ್ಪ, ಮುಲ್ಕಾಗೋವಿಂದರೆಡ್ಡಿ, ಜೆ.ಎಚ್.ಪಟೇಲ್ ಮುಂತಾದವರು. ಈ ಸಾಮಾಜಿಕ ರಾಜಕೀಯ ಆರ್ಥಿಕ ಬದಲಾವಣೆಗಳ ಸಂದರ್ಭವು ಕನ್ನಡದ ಲೇಖಕರನ್ನು ಇವುಗಳಲ್ಲಿ ಕ್ರಿಯಾಶೀಲರಾಗುವಂತೆ ಮಾಡಿತು. ಪಿ.ಲಂಕೇಶ್, ಪೂರ್ಣಚಂದ್ರತೇಜಸ್ವಿ, ಅನಂತಮೂರ್ತಿ, ದೇವನೂರು ಮಹಾದೇವ, ಕಾಳೇಗೌಡ ನಾಗವಾರ, ಮುಂತಾದ ಅನೇಕ ಲೇಖಕರು ಈ ಹಿನ್ನೆಲೆಯಲ್ಲಿ ಮೂಡಿಬಂದರು.

೧೯೭೩ರಲ್ಲಿ ನಡೆದ ಬಿ.ಬಸವಲಿಂಗಪ್ಪನವರ ಬೂಸಾಪ್ರಕರಣವು ಬೆಳಕಿಗೆ ಬಂದಿತು. "ಬಸವಲಿಂಗಪ್ಪನವರು ದಲಿತರ ಆತ್ಮಾಭಿಮಾನವನ್ನು ಎತ್ತಿ ಹಿಡಿಯುವಲ್ಲಿ ತೋರಿದ ಪ್ರಬುದ್ಧತೆ ಮತ್ತು ಅವರ ಸುಧಾರಣೆಗಾಗಿ ಕೈಗೊಂಡ ಹಲವಾರು ಕ್ರಮಗಳು ಐತಿಹಾಸಿಕವಾಗಿ ಮಹತ್ವದ್ದಾಗಿವೆ. ಮಲಹೊರುವ ಅಮಾನುಷ ಪದ್ಧತಿ ನಿಷೇಧ ಜಾರಿಗೊಳಿಸಿದ ಕೀರ್ತಿ ಬಸವಲಿಂಗಪ್ಪನವರಿಗೆ ಸಲ್ಲಬೇಕು. ದೇವದಾಸಿ ಪದ್ಧತಿ ಕುರಿತಂತೆ ಸದನದಲ್ಲಿ ಮಾಡಿದ ಭಾಷಣ ದೇವದಾಸಿ ಪದ್ಧತಿಯ ಕುತಂತ್ರವನ್ನು ಅಲ್ಲಗಳೆದು ಅದಕ್ಕೆ ಸಂಬಂಧಿಸಿದಂತೆ ಬದಲಾವಣೆ ತರುವಲ್ಲಿ ಯಶಸ್ವಿಯಾದರು."[೩] ಈ ಸಂದರ್ಭದಲ್ಲಿ `ಕನ್ನಡಸಾಹಿತ್ಯ ಬೂಸಾ:ಸಚಿವ ಬಸವಲಿಂಗಪ್ಪ` ಎಂಬ ಶೀರ್ಷಿಕೆಯಲ್ಲಿ ದಿನಪತ್ರಿಕೆಗಳಲ್ಲಿ ಪ್ರಕಟವಾಗಿದ್ದುದನ್ನು ಗಮನಿಸಬಹುದು. ಈ ಹೇಳಿಕೆ ಬಹುತೇಕ ಸವರ್ಣೀಯರನ್ನು ಬಡಿದೇಳಿಸುವಂತೆ ಮಾಡಿತು.

ಈ ಪ್ರಕರಣವು ಕನ್ನಡಪರ ಸಂಘಟನೆಗಳು ಸ್ವಾಭಿಮಾನದಿಂದ ಚಳವಳಿ ನಡೆಸುವಂತೆ ಪ್ರೇರಣೆ ನೀಡಿತು. ಇದೇ ಸಂದರ್ಭದಲ್ಲಿ ನಾಡಿನ ಪ್ರಗತಿಪರ ಚಿಂತಕರು ಒಟ್ಟುಗೂಡಿ ೧೯೭೩ರಲ್ಲಿ ಮೈಸೂರಿನಲ್ಲಿ ಜಾತಿವಿನಾಶ ಸಮ್ಮೇಳನ ನಡೆಸಿದರು. ಈ ಸಮ್ಮೇಳನದಲ್ಲಿ ನಾಡಿನ ಚಿಂತಕರಾದ ತೇಜಸ್ವಿ, ರಾಮದಾಸ್, ಲಂಕೇಶ್,ಶ್ರೀ ಕೃಷ್ಣ ಆಲನಹಳ್ಳಿ, ದೇವನೂರು ಮಹಾದೇವ, ಸಿದ್ಧಲಿಂಗಯ್ಯ ಮುಂತಾದವರು ಭಾಗವಹಿಸಿದ್ದರು. ಇದೇ ಕಾಲಕ್ಕೆ ತೇಜಸ್ವಿಯವರು ೧೯೭೩ರಲ್ಲಿ "ಅಬಚೂರಿನ ಪೋಸ್ಟಾಫೀಸ್" ಕಥಾಸಂಕಲನವನ್ನು ಹೊರತರುವ ಮೂಲಕ ಕನ್ನಡ ಸಾಹಿತ್ಯದಲ್ಲಿ ಬದಲಾವಣೆಯ ಅಗತ್ಯವನ್ನು ಘೋಷಿಸಿದರು. ಕಥಾ ಸಂಕಲನದ `ಹೊಸದಿಗಂತದೆಡೆಗೆ`ಮುನ್ನುಡಿಯಲ್ಲಿ ದಲಿತ ಬಂಡಾಯ ಸಾಹಿತ್ಯದ ಸುಳಿವನ್ನು ನೀಡಿದರು. ಇದೇ ಕಾಲಕ್ಕೆ ದೇವನೂರು ಮಹಾದೇವ ಅವರ `ದ್ಯಾವನೂರು` ಕಥಾಸಂಕಲನ ಹೊರಬಂದಿತು.

೧೯೭೪ರಲ್ಲಿ ಬರಹಗಾರರು ಮತ್ತು ಕಲಾವಿದರ ಒಕ್ಕೂಟ ರಚಿಸಲಾಯಿತು. ಈ ಒಕ್ಕೂಟದ ನೇತೃತ್ವದಲ್ಲಿ ಶೂದ್ರಸಾಹಿತ್ಯ ಚಳವಳಿ ಹೆಸರಿನಲ್ಲಿ ೧೯೭೪ರಲ್ಲಿ ಸಮ್ಮೇಳನ ಜರುಗಿತು. ಈ ಸಮ್ಮೇಳನದಲ್ಲಿ ನಾಡಿನ ಖ್ಯಾತ ಸಾಹಿತಿಗಳು ಭಾಗವಹಿಸಿದ್ದರು. ೧೯೭೭ರಲ್ಲಿ ದಲಿತ ಕ್ರಿಯಾಸಮಿತಿ ಆರಂಭವಾಯಿತು. ೧೯೭೪ರಲ್ಲಿ ಭದ್ರಾವತಿಯಲ್ಲಿ ಬಿ.ಕೃಷ್ಣಪ್ಪನವರ ನೇತೃತ್ವದಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯ ಭಾಗವಾಗಿ ೧೯೭೮ರಲ್ಲಿ ದಲಿತ ಬರಹಗಾರರ ಮತ್ತು ಕಲಾವಿದರ ಯುವ ಸಂಘಟನೆಯನ್ನು ಹುಟ್ಟುಹಾಕಲಾಯಿತು .ಈ ಸಮಿತಿಯ ರೂವಾರಿಗಳಾದ ಬಿ.ಕೃಷ್ಣಪ್ಪ, ಮುಳ್ಳೂರುನಾಗರಾಜ, ಇಂಧೂದರ ಹೊನ್ನಾಪುರ, ಕೆ.ರಾಮಯ್ಯ, ಮೊದಲಾದವರು ಭದ್ರಾವತಿಯಲ್ಲಿ ಸಾಹಿತ್ಯಸಮ್ಮೇಳನವನ್ನು ನಡೆಸಿದರು.

ನವ್ಯ ಸಾಹಿತ್ಯವು ಪಾಶ್ಚಾತ್ಯ ಅಸ್ತಿತ್ವವಾದಿ ವಿಚಾರಧಾರೆಯಿಂದ ಪ್ರಭಾವಿತವಾಗಿತ್ತು. ನವ್ಯಚಳುವಳಿ ಕ್ರಮೇಣ ಲೋಹಿಯಾ ಸಮಾಜವಾದದತ್ತ ವಾಲಿತು. ಈ ಪ್ರಭಾವಗಳ ನಂತರವಷ್ಟೇ ನವ್ಯಲೇಖಕರು

ಸಮಾಜಮುಖಿಯಾಗಿ ಚಿಂತಿಸತೊಡಗಿದರು. ೭೦ರ ದಶಕದ ಹೊತ್ತಿಗೆ ಕರ್ನಾಟಕದಲ್ಲಿ ವಿಶೇಷವಾಗಿ ಸಮಾಜಮುಖಿ ಸಮೂಹ ಪರ ಚಿಂತನೆಗಳು ಕಂಡುಬಂದವು. ಇಂಥ ಸಂದರ್ಭದಲ್ಲಿ ದಲಿತ ಬಂಡಾಯ ಸಾಹಿತ್ಯಪಂಥ ಹುಟ್ಟಿಕೊಂಡಿತು.

ಆನಂತರದಲ್ಲಿ ನಾಡಿನ ಸಾಹಿತಿಗಳೆಲ್ಲಾ ಸೇರಿ ೧೯೭೯ರಲ್ಲಿ ಮಾರ್ಚ್ ೧೧ರಂದು ಬಂಡಾಯ ಸಾಹಿತ್ಯ ಸಮ್ಮೇಳನವನ್ನು ಬೆಂಗಳೂರಿನಲ್ಲಿ ನಡೆಸಿದರು. ಈ ಸಮ್ಮೇಳನದಲ್ಲಿ ತೆಲುಗಿನ ಪ್ರಸಿದ್ಧ ಕವಿ ಶ್ರೀಶ್ರೀ, ಮರಾಠಿ ಲೇಖಕಿ ಗೋದಾವರಿ ಪರುಳೇಕರ್ ಭಾಗವಹಿಸಿದ್ದರು. ಕನ್ನಡ ನಾಡಿನ ಲೇಖಕರುಗಳಾದ ಬರಗೂರು ರಾಮಚಂದ್ರಪ್ಪ, ದೇವನೂರು ಮಹಾದೇವ, ಸಿದ್ದಲಿಂಗಯ್ಯ, ಕಾಳೇಗೌಡನಾಗವಾರ, ಚಂದ್ರಶೇಖರಪಾಟೀಲ, ಡಿ.ಆರ್.ನಾಗರಾಜ್, ಚನ್ನಣ್ಣವಾಲಿಕಾರ ಮೊದಲಾದವರು ಭಾಗವಹಿಸಿದ್ದರು.

ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಭೂ ಪ್ರಶ್ನೆಗಳು ಮುಖ್ಯವಾಗಿ ರೈತರ ಬೇಡಿಕೆಗಳಲ್ಲಿ ಕೃಷಿಯ ಸಾಲಮನ್ನಾ, ಬಡ್ಡಿಮನ್ನಾ, ವಿದ್ಯುತ್, ನೀರಾವರಿ, ಬೆಂಬಲ ಬೆಲೆ ಹಾಗೂ ಇತರೆ ವಿಷಯಗಳಿದ್ದವು.ಇಲ್ಲಿ ಕೈಗಾರಿಕೆ ಮತ್ತು ರೈತರ ನಡುವಿನ ಅಂತರ ತಗ್ಗಿಸುವುದು, ಗ್ರಾಮೀಣ ಪ್ರದೇಶಕ್ಕೆ ಹೆಚ್ಚಿನ ಪ್ರಾಶಸ್ತ್ಯ, ನೀರಿನ ಕರದಲ್ಲಿ ಕಡಿತ, ವಿದ್ಯುತ್ ಬಳಕೆಯ ಬೆಲೆ ಕಡಿತ, ಭೂಕಂದಾಯದಲ್ಲಿ ಕಡಿತ, ಸಾಲಮನ್ನಾ, ಮುಖ್ಯವಾಗಿ ಭೂಸುಧಾರಣೆ ಕಾನೂನು ಜಾರಿಗೊಳಿಸುವುದು ಇತ್ಯಾದಿ ರೈತ ಬೇಡಿಕೆಗಳು ಮುಖ್ಯವಾಗಿದ್ದವು. ಇಂತಹ ಹೋರಾಟಗಳ ಕುರಿತು ಈಗಾಗಲೇ ಮೂರನೇ ಅಧ್ಯಾಯದಲ್ಲಿ ಸ್ಥೂಲವಾಗಿ ಚರ್ಚಿಸಲಾಗಿದೆ. ಆದ್ದರಿಂದ ಇಲ್ಲಿ ಪುನರಾವರ್ತನೆಗೆ ಅವಕಾಶ ನೀಡದೆ ನೇರವಾಗಿ ಈ ಸನ್ನಿವೇಶದಲ್ಲಿ ಸಾಹಿತ್ಯ ಚಳುವಳಿ ಬೆಳೆದು ಬಂದಬಗೆಯನ್ನು ಸ್ಥೂಲವಾಗಿ ವಿವೇಚಿಸಲಾಗಿದೆ.

ಈ ಎಲ್ಲ ಆಶಯವನ್ನು ಒಳಗೊಂಡಂತೆ ಕನ್ನಡ ಕಥನ ಸಾಹಿತ್ಯವೂ ಕೂಡ ಉಳಿದೆಲ್ಲಾ ಪ್ರಮುಖ ವಿಷಯ ವಸ್ತುಗಳಂತೆಯೇ ಭೂಮಿಯ ಮೂಲವಾದ ಸಮಸ್ಯೆಗಳಿಗೆ ಸ್ಪಂದಿಸಿತು. ಅಲ್ಲದೆ ಸ್ಥಳೀಯ ನೆಲೆಯ ಪ್ರಾದೇಶಿಕ ಭೂ ಸಮಸ್ಯೆ ಜೀತದ, ಭೂಒಡೆತನದ, ಗೇಣಿದಾರ, ಭೂ ಸುಧಾರಣೆ ಪ್ರಶ್ನೆ, ಮೊದಲಾದ ಪ್ರಶ್ನೆಗಳನ್ನು ಮುಖ್ಯವಾಗಿ ಪರಿಗಣಿಸಿತು. ಈ ಹಿನ್ನೆಲೆಯಲ್ಲಿ ಈ ನಾಡಿನಲ್ಲಿ ನಡೆದ ಚಳುವಳಿಗಳು, ಸಾಮಾಜಿಕ ಸಂಘರ್ಷ ಸಾಂಸ್ಕೃತಿಕ ಒತ್ತಡಗಳು ಕೂಡ ಕಥನಸಾಹಿತ್ಯದ ಭಾಗವಾಗಿ ಕಂಡುಬರುತ್ತವೆ.

**ಕೊನೆ ಟಿಪ್ಪಣಿ**

೧.ಎಸ್.ಪಿ.ಶಂಕರನಾರಾಯಣರಾವ್, ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ಪುಟ.೨೧೮,

೨.ಬೋಳುವಾರು ಮಹ್ಮದ್ ಕುಂಞ,ಶತಮಾನದ ಸಣ್ಣಕಥೆಗಳು(ಸಂ)ಪ್ರಸ್ತಾವನೆ,XVI ೧೩ಮತ್ತು೧೨೭

೩.ದಲಿತ ಸಂಘರ್ಷ ಸಮಿತಿ,ಬಿ.ಬಸವಲಿಂಗಪ್ಪ ಮತ್ತು ಬೂಸಾ ಚಳವಳಿ ಕಾಲುಶತಮಾನ,ಪು.೨೬

### ೪.೨.೧ ನಿರಂಜನ : ಮಾರ್ಕ್ಸ್‌ವಾದಿ ರೈತ ಹೋರಾಟ

ನಿರಂಜನರ ವರ್ಗಪ್ರಜ್ಞೆಯ ಪ್ರಭಾವ ಅವರ ಕಾದಂಬರಿಗಳಲ್ಲಿ ಸಮಾಜಮುಖಿಯಾಗಿ ಮೂಡಿಬಂದಿದೆ. ಈ ಕುರಿತು ಬಿದರಹಳ್ಳಿ ನರಸಿಂಹಮೂರ್ತಿ ಹೇಳುವಂತೆ. "ಹುಟ್ಟಿನಿಂದಲೇ ನೋವು ಅವಮಾನಗಳ ಸಹಿಸುತ್ತ ಬಂದವನ ಸಿಟ್ಟು ಮತ್ತು ಹಂಬಲಗಳು, ಬದುಕಿನಲ್ಲಿ, ಸೊಂಪಾಗಿ ಕುದುರಿದ ಮೇಲೆ ಸಾಮಾಜಿಕ ಕಳಕಳಿಯನ್ನು ಟೋಪಿಯಂತೆ ಚಾದರದಂತೆ, ಬಳಸುವವನ ಸಿಟ್ಟು ಮತ್ತು ಹಂಬಲಗಳಿಗಿಂತ ಹೆಚ್ಚು ನಂಬಬಲ್ಲಂಥವೂ ಕ್ರಿಯಾಶೀಲವೂ ಆಗಿರುತ್ತದೆ. ಯಾಕೆಂದರೆ ಅಂಥ ಅಪ್ಪಟ ಸಿಟ್ಟು ಮತ್ತು ಹಂಬಲಗಳ ಆಳದಲ್ಲಿ ಮಾನವೀಯ ಅಂತಃಕರಣದ ಹಾಲು ಹರಿಯುತ್ತಿರುತ್ತದೆ. ಆದ್ದರಿಂದಲೇ ಯಾವುದೇ ಸಿದ್ಧಾಂತ ಮಾನವೀಯ ಪ್ರೀತಿಯನ್ನು ತುಂಬಿಕೊಡುತ್ತದೆ. ಎಂದರೆ ಸಾಕು. ಅದರ ಮಾರ್ಗವಾಗಿ ಶ್ರಮಿಸುವುದು ಅಂಥವನಿಗೆ ಸಹಜವಾದದ್ದಾಗಿದೆ."[೧] ಈ ಮೇಲಿನ ಮಾತಿನಿಂದ ನಿರಂಜನರ ಬರಹದ ಶಕ್ತಿಯನ್ನು ಗುರುತಿಸಬಹುದಾಗಿದೆ.

ಚಿರಸ್ಮರಣೆ ಕುರಿತು ನಿರಂಜನರೇ ಹೇಳುವಂತೆ "ಕಿರಿಯನಾಗಿದ್ದ ನಾನು ಆಗಿನ ರೋಮಾಂಚಕಾರಿ ಸಂಭವಗಳಲ್ಲಿ ನಾನಾ ಪಾತ್ರ ಧರಿಸಿ ಭಾಗಿಯಾಗಿದ್ದವನು. ಮುಂದೆ ಒಂದು ದಶಕದ ಕಾಲ ಕಯ್ಯೂರು ವೀರರ ಕಮ್ಯೂನಿಸ್ಟ್ ಪಾರ್ಟಿಯಲ್ಲಿ ಸದಸ್ಯನಾಗಿದ್ದವನು, ಕಾರ್ಯಕರ್ತನಾಗಿದ್ದವನು. ಆ ಅಧ್ಯಾಯ ಮುಗಿದು ನಾನು ಪೂರ್ಣ ಸಮಯದ ಬರಹಗಾರನಾದ ಮೇಲೆ ಬರೆದ ಕಾದಂಬರಿ ಚಿರಸ್ಮರಣೆ ಹದಿನಾಲ್ಕು ವರ್ಷದ ಹಿಂದಿನ ಬೆಂಕಿಯ ಒಂದು ಕಿಡಿಯನ್ನು ನನ್ನೆದೆಯಲ್ಲಿ ಜೋಪಾನವಾಗಿ ಇಟ್ಟುಕೊಂಡಿದ್ದೆ. (ಈಗಲೂ ಜ್ವಲಂತವಾಗಿಯೇ ಇರುವ ಕಿಡಿ ಅದು.) ಚಿರಸ್ಮರಣೆ ರಚಿತವಾದದ್ದು ಅದರ ಬೆಳಕಿನಲ್ಲಿ. ಆ ಕಾದಂಬರಿ ಮೊದಲ ಸಲ ಪ್ರಕಟವಾದಾಗಲೇ(೧೯೫೫)ಹೇಳಿದ್ದೆ ಇದು ಕಾದಂಬರಿ, ಚರಿತ್ರೆಯಲ್ಲ ಎಂದು. ಒಂದುಕಾಲದ ಅಂತಸ್ಸತ್ವವನ್ನು ಚೇತನವನ್ನು ಕಲಾತ್ಮಕವಾಗಿ ಸೆರೆಹಿಡಿಯಲು ಒಬ್ಬ ಸೃಜನಶೀಲ ಬರಹಗಾರ ಮಾಡಿರುವ ಯತ್ನ ಅದು."[೨] ಕಾದಂಬರಿಯ ಅಂತಸ್ಸತ್ವದಲ್ಲಿ ಮಾರ್ಕ್ಸ್‌ವಾದೀ ನೆಲೆಯ ರೈತ ಹೋರಾಟವನ್ನು ಗುರುತಿಸಬಹುದಾಗಿದೆ.

ನಿರಂಜನರ ಮೃತ್ಯುಂಜಯ ಕಾದಂಬರಿಯೂ ಭೂ ರೈತಪ್ರಶ್ನೆಯನ್ನು ವ್ಯಕ್ತಗೊಳಿಸುತ್ತದೆ. ಆದರೆ ಇಲ್ಲಿನ ಅಧ್ಯಯನದ ದೃಷ್ಟಿಯಿಂದ ಚಿರಸ್ಮರಣೆ ಕಾದಂಬರಿಯೊಂದನ್ನೇ ಪ್ರಾತಿನಿಧಿಕವಾಗಿ ಆಯ್ಕೆಮಾಡಿಕೊಳ್ಳಲಾಗಿದೆ.ನಿರಂಜನರ ಚಿರಸ್ಮರಣೆ ಕಾದಂಬರಿಯು ರೈತ ಜೀವನದ ಸಂಘರ್ಷದ ನೆಲೆ ಮತ್ತು ರೈತ ಹೋರಾಟದ ಬದುಕನ್ನು ಕೇಂದ್ರವಾಗಿಸಿಕೊಂಡಿದೆ. ಈ ಕಾದಂಬರಿಯಲ್ಲಿ ಮುಖ್ಯವಾಗಿ ವರ್ಗಸಂಬಂಧಿ ಹೋರಾಟವಿದೆ. ಇಲ್ಲಿ ರೈತ ಪ್ರಶ್ನೆ, ಭೂ ಸಂಬಂಧಿ ಹೋರಾಟದ ಕೆಚ್ಚಿದೆ. ಸ್ಥೂಲವಾಗಿ ಈ ಕಾದಂಬರಿಯನ್ನು ತಾತ್ವಿಕವಾಗಿ ಹೀಗೆ ಗುರುತಿಸಿಕೊಳ್ಳಬಹುದು.

ಇದು ಏಕ ಕಾಲಕ್ಕೆ ಸ್ಥಳೀಯ ನೆಲೆಯಲ್ಲಿ ಭೂಮಾಲೀಕರ ಮತ್ತು ಬಾಹ್ಯನೆಲೆಯಲ್ಲಿ ಬ್ರಿಟಿಷ್ ಆಡಳಿತದ ವಿರುದ್ಧ ನಡೆಯುವ ಹೋರಾಟವಾಗಿದೆ. ಈ ಹೋರಾಟಕ್ಕೆ ಬ್ರಿಟಿಷ್ ಬೆಂಬಲಿತ ಪೊಲೀಸ್ ವ್ಯವಸ್ಥೆ ಹಾಗೂ ಸ್ಥಳೀಯ ಭೂಮಾಲೀಕರ ಬೆಂಬಲದಿಂದ ರೈತ ಹೋರಾಟವನ್ನು ಹತ್ತಿಕ್ಕುವ ಯತ್ನವಿದೆ. ಕಯ್ಯೂರು ರೈತ ಹೋರಾಟ ಸಂಪೂರ್ಣವಾಗಿ ಮಾರ್ಕ್ಸ್‌ವಾದಿ ನೆಲೆಯ ಹೋರಾಟ. ಇಲ್ಲಿನ ಭೂಮಾಲೀಕರು ಸ್ಥಳೀಯ ರೈತರನ್ನು ಶೋಷಿಸುವ ಚಿತ್ರಣವಿದೆ. ರೈತ ಹೋರಾಟ ಜೀತದಾಳು, ಬಿಟ್ಟಿಚಾಕರಿ, ಪಶುಗಳ ರೀತಿ ನಡೆಸಿಕೊಳ್ಳುವುದರ ವಿರುದ್ಧವಾಗಿದ್ದು, ಸಾಮಾಜಿಕ ಸ್ಥಾನಮಾನಗಳನ್ನು ಸಮಾನ ನೆಲೆಯಲ್ಲಿ ನೀಡಬೇಕೆಂದ ಆಶಯವನ್ನು ಧ್ವನಿಸುತ್ತದೆ.

ಚಿರಸ್ಮರಣೆಯ ಕುರಿತು ಮುನ್ನುಡಿಯಲ್ಲಿ ಕಾದಂಬರಿಕಾರರೇ ಹೇಳಿರುವಂತೆ "ಚಿರಸ್ಮರಣೆಯ ಅನೇಕ ಪಾತ್ರಗಳು ನಿಜ ಜೀವನದಿಂದಲೇ ಕಾದಂಬರಿಯ ಪುಟಗಳಿಗೆ ನಡೆದು ಬಂದಿವೆ. ಆದರೆ ಇಲ್ಲಿನ ಪಾತ್ರ ನಿರ್ವಹಣೆಗಾಗಿ ರಂಗ ಸಜ್ಜಿಕೆಯ ವೇಷಭೂಷಣಗಳನ್ನು ಅವು ನಿರಾಕರಿಸಿಲ್ಲ. ಇನ್ನು ಕೆಲ ಪಾತ್ರಗಳನ್ನು ನಾನು ಕಡೆದದ್ದು ನನ್ನ ಕಲ್ಪನೆಯ ಮೂಸೆಯಲ್ಲಿ."[೩] ಕಾದಂಬರಿ ಚರಿತ್ರೆಯಲ್ಲ ಎಂಬುದರಿಂದ ಅದು ಕಲಾತ್ಮಕತೆಯನ್ನು ಪಡೆದು ಸಾಹಿತ್ಯ ಕೃತಿಯಾಗಿ ಮೂಡಿಬಂದಿದೆ.

"**ಚಿರಸ್ಮರಣೆ**" ಕಾದಂಬರಿಯಲ್ಲಿ ಚಳುವಳಿಯೇ ಕೇಂದ್ರಬಿಂದುವಾಗಿದೆ. ಇಲ್ಲಿ ಬರುವ ಮಠದ ಅಪ್ಪು, ಕೋಯಿತಟ್ಟಿನ ಚಿರುಕಂಡ, ಪೊಡವರ ಕುಂಞಂಬು, ಅಬೂಬಕರ್ ಈ ನಾಲ್ವರು ಪ್ರಧಾನ ಪಾತ್ರಗಳಾಗಿ ಕಾದಂಬರಿಯಲ್ಲಿ ಬಂದಿದ್ದಾರೆ. ಈ ಪಾತ್ರಗಳೇ ರೈತ ಹೋರಾಟದ ನಾಯಕತ್ವವನ್ನು ವಹಿಸಿಕೊಂಡು, ರೈತ

ಹೋರಾಟವನ್ನು ರೂಪಿಸಿ, ಭೂಮಾಲೀಕರ ವಿರುದ್ಧ ಸಂಘಟಿತ ಹೋರಾಟ ನಡೆಸುತ್ತವೆ. ಇಲ್ಲಿ ಭೂಮಾಲೀಕನ ಶೋಷಣೆ, ಬಿಟ್ಟಿ ಕೂಲಿ, ಬಿಟ್ಟಿ ದುಡಿಮೆ, ಗೇಣಿ ಪದ್ಧತಿಗಳ ವಿರುದ್ಧ ರೈತನಾಯಕರು ಹೋರಾಟ ನಡೆಸುವುದು ಈ ಕಾದಂಬರಿಯ ಮುಖ್ಯನೆಲೆಯಾಗಿದೆ.

"ಈ ಲೋಕದಲ್ಲಿ ಮನುಷ್ಯ ಹುಟ್ಟಿದ ಕಥೆ.. ಮಾನವರು ಆರಂಭದಲ್ಲಿ ಬದುಕಿದ ರೀತಿ... ಆಗಿನ ಸಮಾಜ.... ಬಳಿಕ ಸಮಾಜದಲ್ಲಿ ಉಂಟಾದ ಗುಂಪುಗಳು.... ಆ ಗುಂಪುಗಳೊಳಗೆ ಕದನ... ಮನುಷ್ಯಮನುಷ್ಯನನ್ನು ಗುಲಾಮನಾಗಿ ಮಾಡಿಕೊಂಡುದು.. ಬಲ ಉಳ್ಳವರು ಮತ್ತು ಬಲವಿಲ್ಲದವರು... ಹಸಿದವರು ಮತ್ತು ಕಸಿದವರು.... ಮಣ್ಣಿಗಾಗಿ ಹೋರಾಟ...."[೪] ಹೀಗೆ ರೈತಾಪಿ ಬದುಕಿನ ವಿವರ, ಮನುಕಲ ಹುಟ್ಟಿ ಬೆಳೆದು ಬಂದ ಬಗೆಯನ್ನು ಮರೆತು ಮನುಷ್ಯ ಮನುಷ್ಯನನ್ನು ಗುಲಾಮನಾಗಿ ಕಾಣುವ ದುರಂತವನ್ನು ಹೋರಾಟದ ಕೇಂದ್ರದ ನೆಲೆಯಲ್ಲಿ ಗುರುತಿಸುತ್ತಾರೆ. ಬಂಡವಾಳಶಾಹಿ ಭೂಮಾಲೀಕರ ವಿರುದ್ಧ ತನ್ನ ಕಾರ್ಯಾಚರಣೆ ನಡೆಸಲು ಚಿರುಕಂಡ ಮತ್ತು ಸ್ನೇಹಿತರು ಒಟ್ಟುಗೂಡುತ್ತಾರೆ. ಪಕ್ಕದ ಹಳ್ಳಿಯ ಪಂಡಿತರೊಬ್ಬರು ರೈತ ಸಂಘಟನೆಯ ಬಗ್ಗೆ ಜಾಗೃತಿ ಮೂಡಿಸುತ್ತಾರೆ ಎಂಬುದು ಚಿರುಕಂಡನಿಗೆ ತಿಳಿಯುತ್ತದೆ. ಪಕ್ಕದ ಹಳ್ಳಿಯ ಪಂಡಿತರು ವೃತ್ತಪತ್ರಿಕೆಗಳನ್ನು ತರಿಸಿ ರೈತರಿಗೆ ಓದಿ ತಿಳಿಸುತ್ತಾರೆ. ಇದರಿಂದಾಗಿ ಭೂಮಾಲೀಕರ ವಿರುದ್ಧ ಹೋರಾಟ ರೂಪಿಸುವುದನ್ನು ಗಮನಿಸಬಹುದಾಗಿದೆ. ಈ ಊರಿನ ಎಲ್ಲಾ ರೈತರು ಭೂಮಾಲೀಕರ ದೌರ್ಜನ್ಯ ಪರಾಕಾಷ್ಠೆ ತಳೆದ ಸಂದರ್ಭದಲ್ಲಿ, ಹೋರಾಟಕ್ಕೆ ತಕ್ಕ ಸಿದ್ಧತೆ ಮಾಸ್ತರರ ಜೊತೆ ನಡೆಸುತ್ತಾರೆ.

ಭೂಮಾಲೀಕರ ವಿರುದ್ಧ ರೈತರು ಹುರಿಗಟ್ಟುವುದರ ಜೊತೆಗೆ ಸಂಘಟಿತರಾಗುವ ಕುರಿತು, "ದುಡಿಯುವ ಜನರೆಲ್ಲ ಒಂದಾದರೆ, ಸುಲಿಯುವ ಜನರೆಲ್ಲ ಸೋತು ಹೋಗ್ತಾರೆ. ನಮ್ಮನ್ನು ಬಿಗಿದಿರುವ ಬೇಡಿಗಳು ಪುಡಿಪುಡಿಯಾಗ್ತವೆ. ನಮ್ಮ ದೇಶದಲ್ಲಿ ಜನಕ್ರಾಂತಿ ಬೇರೆಯಲ್ಲ, ರೈತಕ್ರಾಂತಿ ಬೇರೆಯಲ್ಲ. ನಮ್ಮ ರೈತರೆಲ್ಲ ಎಚ್ಚರವಾಗ್ಬೇಕು, ಒಗ್ಗಟ್ಟಾಗ್ಬೇಕು.. ಹಳ್ಳಿ ಹಳ್ಳಿಯಲ್ಲಿ ರೈತ ಸಂಘ ಸ್ಥಾಪಿಸಿಸ್ಬೇಕು."[೫] ರೈತರು ಸಂಘಟನಾತ್ಮಕ ಹೋರಾಟದಿಂದ ಭೂವಮಾಲೀಕ ವ್ಯವಸ್ಥೆಯನ್ನು ಬಗ್ಗುಬಡಿಯುವ ಆಶಯವನ್ನು ವ್ಯಕ್ತಪಡಿಸುತ್ತಾರೆ. ಭೂಮಾಲೀಕರ ಭೂ ಕಬಳಿಕೆ ಕುರಿತು ಈ ಮೊದಲೇ ಮಾಸ್ತರರು ವಿವರಿಸಿದ್ದರು, ಹೋರಾಟಗಾರ ಚಿರುಕಂಡನ ಮನೆಯಲ್ಲಿ ಇದೇ ಗತಿ ಆಗಿರುವುದು ಕಂಡುಬರುತ್ತದೆ.

ಭೂಮಾಲೀಕನ ಶೋಷಣೆಯಿಂದ ಚಿರುಕಂಡನ ತಂದೆ ತನ್ನ ಮದುವೆಯ ಕಾಲಕ್ಕೆ ಜಮೀನ್ದಾರರಿಂದ ಸಾಲಪಡೆದಿರುವ ಚಿತ್ರಣವಿದೆ. ತನ್ನ ಭೂಮಿಯ ಆಧಾರದ ಮೇಲೆ ಬಂದ ದುಡಿಮೆಯನ್ನೆಲ್ಲ ಸಾಲದ ಬಡ್ಡಿಗೆ ನೀಡಬೇಕಾಗಿತ್ತು. "ಜಮೀನ್ದಾರರ ದೊಡ್ಡ ಮನೆಯ ಚಾವಡಿಯ ಮುಂದೆ, ನಡುವಿಗೆ ಅಂಗವಸ್ತ್ರ ಸುತ್ತಿ, ಕೈಕಟ್ಟಿ, ಒಂದು ಅಂಗೈಯಿಂದ ಬಾಯಿ ಮುಚ್ಚಿಕೊಂಡು ದೈನ್ಯದ ಮೂರ್ತಿಯಾಗಿ ನಿಲ್ಲಬೇಕಾಗಿತ್ತು."[೬] ಇಂಥ ಪರಿಸ್ಥಿತಿಯನ್ನು ಸ್ವತಃ ಕಂಡ ಚಿರುಕಂಡನ ನರನಾಡಿಗಳಲ್ಲಿ ರಕ್ತವೇಗವಾಗಿ ಸಂಚರಿಸಿತು. ಭೂಮಾಲೀಕರ ವಿರುದ್ಧ ಸೆಟೆದೆದ್ದು ನಿಲ್ಲುವ ನಿರ್ಧಾರ ಕೈಗೊಳ್ಳುತ್ತಾನೆ.

"ತನ್ನ ಪಾಲಿಗೆ ಶಾಲೆಯ ಓದು ಇನ್ನಿಲ್ಲವಾದರೂ ತಾನು ಓದಬೇಕು, ತುಂಬಾ ಓದ್ಬೇಕು ತಾನು ದುಡಿಯಬೇಕು, ತುಂಬಾ ದುಡಿಯಬೇಕು. ತನ್ನ ಮನಗೋಸ್ಕರ ಮಾತ್ರವಲ್ಲ, ಜನರಿಗೋಸ್ಕರ ರಾಷ್ಟ್ರಕ್ಕೋಸ್ಕರ ದುಡಿಯಬೇಕು. ಸಾಹಸದ ಕೆಲಸಗಳನ್ನು ಮಾಡಿ ತಾನು ಒಳ್ಳೆಯವನಾಗಿ ಪ್ರಸಿದ್ಧಿಗೆ ಬರಬೇಕು ಮಾಸ್ತರರ ಹಾಗೆ, ಪಂಡಿತರ ಹಾಗೆ, ಅವರು ಹೇಳಿದ ಎಷ್ಟೋ ವೀರರ ಹಾಗೆ. ಪೊಲೀ ಪೊಲೀಯಲ್ಲ.. ಕ್ರಾಂತಿಕಾರಿ ತಾನು."[೭] ಎಂದು ಹೇಳುವ ಎಳೆಯ ವಯಸ್ಸಿನ ಚಿರುಕಂಡನಲ್ಲಿ ಎಳೆಯ ವಯಸ್ಸಿನ ಆದರ್ಶಗಳು ಹುಟ್ಟಿಕೊಂಡಿರೆ.

ಚಿರುಕಂಡನ ತಂದೆ ಹೊಲದ ವಿಷಯದಲ್ಲಿ ಭೂಮಾಲೀಕರಲ್ಲಿ ಸಾಲ ಮಾಡಿಕೊಂಡಿದ್ದಾನೆ. ಚಿರುಕಂಡನ ತಂದೆಗೆ ಎರಡು ಎಕರೆ ಭೂಮಿ ಹಿರಿಯರಿಂದ ಬಂದುದು. ಆದರೆ ಚಿರುಕಂಡನ ತಂದೆ ತನ್ನ ಮದುವೆಯ ಕಾಲಕ್ಕೆ ಜಮೀನ್ದಾರರಿಂದ ಸಾಲಪಡೆದಿದ್ದ, ಆ ಭೂಮಿಯ ಆಧಾರದ ಮೇಲೆ ಸಂದಾಯಮಾಡುತ್ತ ಬಂದ ಹಣವೆಲ್ಲ ಜಮೀನ್ದಾರರ ಪ್ರಕಾರ ಬಡ್ಡಿಗೂ ತೀರಿಸಲಾಗಲಿಲ್ಲ. ಇವರ ಬಳಿಯಿದ್ದ ಒಂದು ಹೋರಿ ನೀರಿನ ಪಾಲಾಯಿತು. ಇದ್ದ ಇನ್ನೊಂದು ಹೋರಿಯು ಜಮೀನ್ದಾರರ ಪಾಲಾಯಿತು. ಆದರೂ ಚಿರುಕಂಡನ ತಂದೆ, ಹೋರಿಗಳನ್ನು ಎರವಲು ಪಡದೇ ಸಾಗುವಳಿ ಮಾಡಿದರೂ ಸಾಲ ಮಾತ್ರ ತೀರಲೇ ಇಲ್ಲ.

ಈ ಕುರಿತು ಭೂಮಾಲೀಕನ ಧೋರಣೆ ಮತ್ತು ಭೂಮಿಯನ್ನು ಲಪಟಾಯಿಸುವ ತಂತ್ರಗಳು ಹೋರಾಟಗಾರ ಚಿರುಕಂಡ ತನ್ನ ಮಾಸ್ತರರಿಗೆ ತಿಳಿಸುತ್ತಾನೆ. ಇತ್ತ ಚಿರುಕಂಡನ ತಂದೆ ಜಮೀನ್ದಾರ ಮನೆಗೆ ಹೋಗಿ ವಾಪಸ್ಸು ಹಿಂತಿರುಗಿ ಬಂದ ನಂತರದಲ್ಲಿ ಮನೆಗೆ ಬಂದಾಗ ತನ್ನ ಹೆಂಡತಿ ಕಲ್ಯಾಣಿ ಆತನನ್ನು ಸಮಾಧಾನಿಸುತ್ತಾಳೆ.

"ಹಿರಿಯರಿಂದ ಬಂದ ಆಸ್ತೀನ ಕಳಕೊಂಡೆನಲ್ಲ, ನಾನು ಎಂಥವನೊಂತ?...ನಿನ್ನೆ ನಾವು ಸ್ವಂತ ಆಸ್ತಿ ಇದ್ದ ರೈತರು. ಊರಲ್ಲಿ ನಮಗೆ ಮಾನ ಮರ್ಯಾದೆ ಸಿಗ್ತಿತ್ತು. ಇವತ್ತು ನಾವು ಧಣಿಗಳ ಒಕ್ಕಲು, ಗುಲಾಮರು..."[೮] ಎಂದು ಚಿರುಕಂಡನ ತಂದೆ ತನ್ನ ಹೆಂಡತಿಗೆ ಕಲ್ಯಾಣಿಗೆ ಹೇಳುವ ಮಾತಿನಲ್ಲಿ ಸಂಕಟ ವ್ಯಕ್ತವಾಗುತ್ತದೆ. ಇಲ್ಲಿ ಭೂಮಿ ಎನ್ನುವುದು ಗೌರವದ ಸಂಕೇತವಾಗಿ ಕಂಡುಬರುತ್ತದೆ. ಧಣಿಗಳ ಒಕ್ಕಲೆಂದರೆ ಊರಿನಲ್ಲಿ ಉಳಿದವರಿಗೆ ಕೀಳಾಗಿ ಕಾಣುವುದಾಗಿದೆ.

ಈ ಕಾರಣದಿಂದಾಗಿ ಭೂಒಡೆಯನ ಬಳಿ ಚಿರುಕಂಡನ ತಂದೆ ಹೋಗುವುದರಿಂದ ಭೂಮಾಲೀಕನ ಮನೆಯಲ್ಲಿ ವಾದವಿವಾದ ನಡೆಯುತ್ತದೆ. ಚಿರುಕಂಡನ ತಂದೆ ತಾನು ಮಾಡಿದ್ದ ಸಾವಿರ ರೂಪಾಯಿಸಾಲವನ್ನು ಹೊಲ ಮಾರಿ ತೀರಿಸುತ್ತೇನೆಂದರೂ ಭೂಮಾಲೀಕ ಕೇಳುವುದಿಲ್ಲ. ಭೂಮಾಲೀಕ ತಾನು ಕೊಟ್ಟಿರುವ ಸಾಲ ಹಿಂತಿರುಗಿಸದಿದ್ದರೆ ಕೋರ್ಟಿಗೆ ಎಳೆಯುತ್ತೇನೆ ಎನ್ನುತ್ತಾನೆ. "ನೀನು ಹೊಲ ಕಳಕೊಂಡು ಎಲ್ಲಿಗೆಹೋಗುತ್ತಿಯಾ ಒಡೆಯರ ಒಕ್ಕಲಾಗಿದ್ದುಬಿಡು."[೯] ಎಂದು ಭೂಮಾಲೀಕನ ಮನೆಯಲ್ಲಿ ನೆರೆದಿದ್ದ ರೈತ ಒಕ್ಕಲುಗಳು ಚಿರುಕಂಡನ ತಂದೆಗೆ ಒತ್ತಾಯಿಸುತ್ತಾರೆ. ಕೊನೆಗೆ ಬಲತ್ಕಾರವಾಗಿ ತಮ್ಮ ಭೂಮಿಯನ್ನು ಭೂಮಾಲೀಕನ ಹೆಸರಿಗೆ ಬರೆಸಿಕೊಂಡ ದುರಂತ ಚಿತ್ರಣವನ್ನು ಕಾಣುತ್ತೇವೆ. ಬಡ ರೈತನ ಭೂಮಿಯನ್ನು ಮೋಸದ ಮೂಲಕ ಭೂಮಾಲೀಕ ವಶಪಡಿಸಿಕೊಳ್ಳುತ್ತಾನೆ.

ಚಿರುಕಂಡನ ತಂದೆಯ ಜಮೀನನ್ನು ಜಮೀನ್ದಾರರು ಕಿತ್ತುಕೊಂಡ ಸುದ್ದಿ ಕೇಳಿ ಅಪ್ಪುವಿನ ನರನಾಡಿಗಳ ರಕ್ತ ಕುದಿಯ ತೊಡಗಿತು. ಚಿರುಕಂಡ ನಿಧಾನವಾಗಿ ಹೇಳಿದ "ಇನ್ನು ಮುಂದೆ ಯಾವಾಗ ಬೇಕಾದರೂ, ಗೇಣಿ ಸರಿಯಾಗಿ ಕೊಡಲಿಲ್ಲ ಅಂತ್ಲೋ ಇನ್ನೇನೋ ನೆಪ ಹೇಳಿ, ಜಮೀನ್ದಾರ ನಮ್ಮನ್ನು ಹೊರಗೆ ಹಾಕ್ಬಹುದು. ಆಮೇಲೆ ನಮ್ಮದು ಅನ್ನೋದು ಏನೂ ಉಳಿಯೋದಿಲ್ಲ. ಇರೋದಕ್ಕೆ ಜಾಗ ಇಲ್ದೆ ಊರು ಬಿಡ್ಬೇಕು"[೧೦] ಎಂದು ಹೇಳುತ್ತಾನೆ.

ಈ ಊರಿನ ಭೂಮಾಲೀಕರ ದಬ್ಬಾಳಿಕೆಯ ಹಿಂದೆ ಇಲ್ಲಿನ ರೈತರ ಬದುಕು ಅತಂತ್ರಸ್ಥಿತಿಯಲ್ಲಿರುವುದು ಕಂಡುಬರುತ್ತದೆ. ರೈತರ ಸ್ವಂತ ಭೂಮಿಯನ್ನು ಲಪಟಾಯಿಸಿ ಭೂಮಾಲೀಕ ಅವರ ಜಮೀನಿನಲ್ಲಿ ಅವರನ್ನೇ ಗೇಣಿರೈತರನ್ನಾಗಿ, ಗುಲಾಮರನ್ನಾಗಿ ಮಾಡುತ್ತಾನೆ. ಈ ಬಗ್ಗೆ ಚಿರುಕಂಡ ಆತಂಕ ವ್ಯಕ್ತಪಡಿಸುತ್ತಾನೆ. ಚಿರುಕಂಡನ ಆತಂಕ ಕಂಡು ಅಪ್ಪು ಧೈರ್ಯ ತುಂಬುತ್ತಾನೆ.

ಇದಕ್ಕೆ ಪ್ರತಿಯಾಗಿ ಅಪ್ಪುವನ್ನು ಕುರಿತು,ಚಿರುಕಂಡ ಹೇಳುವಂತೆ "ನಿನಗೆ ತಿಳೀದು ಮಾಸ್ತರು ಹೇಳ್ಲಿಲ್ವ ಹಾಗೆ ಅಲ್ವ ನಡೆಯೋದು ರೈತ ಹೊಲ ಕಳಕೊಂಡು ಬಡವನಾಗ್ತಾನೆ, ಭಿಕಾರಿಯಾಗ್ತಾನೆ. ಆಮೇಲೆ ದೇಹದ ಶ್ರಮದ ಹೊರತಾಗಿ ಅವನಲ್ಲಿ ಏನೂ ಉಳಿಯೋದಿಲ್ಲ. ಪಟ್ಟಣಕ್ಕೆ ಹೋಗಿ, ಕೂಲಿಯಾಗಿ, ಆ ಶ್ರಮವನ್ನೇ ಆತ ಮಾರ್ತಾನೆ..."[೧೧] ಎಂದು ಹೇಳಿದ್ದು ತಮ್ಮ ಮಾಸ್ತರರ ಚಿಂತನೆಯನ್ನು ಚಿರುಕಂಡ ಹೊರಗೆಡಹುತ್ತಾನೆ.

ಮಾಸ್ತರು ಹೇಳಿದ ಮಾತು, ಅನ್ಯಾಯದ ವಿರುದ್ಧ ಒಂದು ನ್ಯಾಯ ದೊರೆತೆ ದೊರೆಯುತ್ತದೆ ಎಂಬ ಆಶಯ ವ್ಯಕ್ತಪಡಿಸಿದ್ದನ್ನು ನೆನಪಿಗೆ ತಂದುಕೊಳ್ಳುತ್ತಾನೆ. ಈ ಇಬ್ಬರು ಯುವಕರು ಹೋರಾಟದ ಮಾತುಗಳನ್ನು ಆಡುತ್ತಾರೆ. "ಜನ ಒಂದಾದರೆ ಮಾತ್ರ ಅದು ಸಾಧ್ಯ. ಅದಕ್ಕಾಗಿ ಹೋರಾಟವಾಗಬೇಕು. ಆ ಹೋರಾಟದಲ್ಲಿ ರೈತರು ಕಷ್ಟ, ನಷ್ಟ, ಅನುಭವಿಸಬೇಕು. ರಾಷ್ಟ್ರವನ್ನು ತುಳಿದು ನಿಂತಿದ್ದ ಪರಕೀಯ ಶಕ್ತಿಯ ಬೆನ್ನೆಲುಬನ್ನು ಮುರಿಯಬೇಕು. ಆ ಬಳಿಕ ಆ ಶಕ್ತಿಯ ಆಧಾರದ ಸ್ತಂಭಗಳನ್ನು ಕಿತ್ತು ಹಾಕಬೇಕು."[೧೨] ಈ ಮಾತುಗಳಲ್ಲಿ ಈ ಕೃತಿಯ ಒಟ್ಟಾರೆ ತಾತ್ವಿಕ ನೆಲೆಯನ್ನು ಕಾಣುತ್ತೇವೆ. ವಸಾಹತುಶಾಹಿಯ ಪರಕೀಯ ಶಕ್ತಿಯನ್ನು ಮುರಿಯುತ್ತಲೇ ಸ್ಥಳೀಯ ಭೂಮಾಲೀಕ ಶಕ್ತಿಯನ್ನು ಮುರಿಯುವ ಸಂಚು ಈ ಇಬ್ಬರಲ್ಲಿ ಕಂಡುಬರುತ್ತದೆ. ಮುಂದೆ ಯುವಕರ ತಂಡ ಮತ್ತು ರೈತರು ಒಟ್ಟುಗೂಡಿ ಭೂಮಾಲೀಕ ಶಕ್ತಿಯ ವಿರುದ್ಧ ಹೋರಾಟ ರೂಪಿಸಲು ಮಾಸ್ತರರೊಂದಿಗೆ ಸೇರುತ್ತಾರೆ.

ಭೂಮಾಲೀಕರು (ನಂಬಿಯಾರರು) ಮಾಸ್ತರರೊಂದಿಗೆ ಸಂವಾದ ನೆಡಸುವಾಗ ಭೂಮಾಲೀಕರ ಧೋರಣೆ ವ್ಯಕ್ತವಾಗುತ್ತದೆ. "ನಾವು ಅವರನ್ನು ದೂರವಿಟ್ಟರೆ ಮಾತ್ರ ಅವರು ನಮ್ಮನ್ನು ಗೌರವಿಸುತ್ತಾರೆ. ಗೇಣಿರೈತರು ವಿದ್ಯೆ ಇಲ್ಲದಿರುವವರು ಅವರು ಬರೇ ಮೃಗಗಳು, ಅವರನ್ನು ಮೃಗಗಳಾಗಿಯೇ ನೋಡಬೇಕು ಅವಕ್ಕೆ ಅರ್ಥವಾಗೋದು ಒಂದೇ ಭಾಷೆ, ಬಾರುಕೋಲಿನ ಭಾಷೆ. ಏನು ಹೇಳ್ತೀರಾ."[೧೩] ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯವು, ರೈತರನ್ನು, ಗೇಣಿರೈತರನ್ನು ಮನುಷ್ಯರನ್ನಾಗಿ ನೋಡದೇ ಪ್ರಾಣಿಗಳಂತೆ ನೋಡುತ್ತದೆ.

ಈ ಊರಿನಲ್ಲಿ ಮಾಸ್ತರರು ಶಾಲೆಯನ್ನು ಆರಂಭಿಸುತ್ತಾರೆ. ಅಲ್ಲದೆ ರಾತ್ರಿ ಶಾಲೆಯನ್ನು ಆರಂಭಿಸಿದಾಗ ಊರಿನ ಹಿರಿಯ ರೈತರಿಗೆಲ್ಲಾ ಶಿಕ್ಷಣ ಕಲಿಕೆ ಮತ್ತು ಭಾಷಣದ ಮೂಲಕ ದೇಶದ ಸ್ಥಿತಿಗತಿ, ಆಗುಹೋಗುಗಳ ಕುರಿತು, ರೈತರಿಗಾಗುತ್ತಿರುವ ಅನ್ಯಾಯ ಕುರಿತು ಅರಿವನ್ನು ಮೂಡಿಸುತ್ತಾರೆ. ದೂರದ ಊರಿನಿಂದ ಪತ್ರಿಕೆಯನ್ನು ತರಿಸಿ ದೇಶದಲ್ಲಿ ನಡೆಯುತ್ತಿರುವ ವಿದ್ಯಮಾನವನ್ನು ಅವರು ತಿಳಿಸುತ್ತಾರೆ. ಅಲ್ಲದೆ ಇಡೀ ಊರಿನ ರೈತರು ಹೋರಾಟದಲ್ಲಿ ಭಾಗಿಯಾಗುವಂತೆ ಮಾನಸಿಕವಾಗಿ ಸಿದ್ಧಗೊಳಿಸುತ್ತಾರೆ. ಇಂತಹ ಹೋರಾಟವನ್ನು ಭೂಮಾಲೀಕರು ಮುರಿಯಲು ಬೇರೆ ಬೇರೆ ರೀತಿಯ ಉಪಾಯ ತಂತ್ರಗಳನ್ನು ಹೆಣೆಯುತ್ತಾರೆ. ಇದಕ್ಕಾಗಿ ಭೂಮಾಲೀಕರು ಪೋಲೀಸ್ ರಕ್ಷಣೆಪಡೆದು ರೈತ ಹೋರಾಟವನ್ನು ಹತ್ತಿಕ್ಕಲು ಯತ್ನಿಸುತ್ತಾರೆ.

ಇಲ್ಲಿ ಹೋರಾಟದ ಸ್ವರೂಪವು ಏಕಕಾಲಕ್ಕೆ ಸ್ಥಳೀಯ ನೆಲೆಯಲ್ಲಿ ರಾಷ್ಟ್ರೀಯ ನೆಲೆಯಲ್ಲಿ ವ್ಯಕ್ತವಾಗುವುದನ್ನು ಅಪ್ಪು ಮತ್ತು ಚಿರುಕಂಡರ ಚಿಂತನೆಯಲ್ಲಿ ಕಾಣುತ್ತೇವೆ. "ಒಂದು ವಿಷಯ ನಾವು ಚೆನ್ನಾಗಿ ತಿಳಿದಿರ್ಬೇಕು. ಬರೇ ಮಧ್ಯಮ ವರ್ಗದವರೇ ಯಾವತ್ತೂ ಸ್ವಾತಂತ್ರ್ಯ ತರಲಾರರು. ದೇಶದ ರೈತರೂ ಕೂಲಿಕಾರರೂ ಸಂಘಟಿತರಾಗಿ ಬಲಿಷ್ಠರಾಗದ ಹೊರತು ಸ್ವಾತಂತ್ರ್ಯ ಸಮರ ಯಶಸ್ವಿಯಾಗದು. ಬ್ರಿಟಿಷರೂ ಹೋಗಲಾರರು. ಇಲ್ಲಿ ಅವರಿಗೆ ಆಧಾರವಾಗಿರುವ ಶಕ್ತಿಗಳೂ ನಾಶವಾಗಲಾರವು."[೧೪]

ಈ ಮಾತಿನ ಹಿಂದೆ ಸ್ವಾತಂತ್ರ್ಯ ಹೋರಾಟದ ಕಲ್ಪನೆಯ ವ್ಯಾಪ್ತಿಯನ್ನು ಕಾಣುತ್ತೇವೆ. ಏಕಕಾಲಕ್ಕೆ ಬಾಹ್ಯ ನೆಲೆಯ ಹೋರಾಟದ ಮೂಲಕ ಆಂತರಿಕ ಶಕ್ತಿಯನ್ನು ಹುಟ್ಟಡಗಿಸಬಹುದೆಂಬ ಆಶಯ ಕಂಡುಬರುತ್ತದೆ. ಏಕೆಂದರೆ ಬ್ರಿಟಿಷರ ಕೃಪಾಪೋಷಿತ ಭೂಮಾಲೀಕರು ತಮ್ಮ ಗ್ರಾಮಗಳನ್ನು ತಮ್ಮ ಹಿಡಿದಲ್ಲಿಟ್ಟುಕೊಂಡಿರುವುದನ್ನು ಕಾಣುತ್ತೇವೆ. ಎಲ್ಲಿಯವರೆಗೂ ಅವರ ಬೆಂಬಲ ಇರುತ್ತದೆಯೋ ಅಲ್ಲಿಯವರೆಗೆ ಭೂಮಾಲೀಕರು ರೈತರನ್ನು ಶೋಷಿಸುತ್ತಾರೆಂಬ ಚಿಂತನೆ ವ್ಯಕ್ತವಾಗಿದೆ.

ಮಾಸ್ತರರು ರಾತ್ರಿ ಶಾಲೆಯನ್ನು ಆರಂಭಿಸಿ ರೈತರಿಗೆ ಅರಿವನ್ನು ಮೂಡಿಸುವುದು ಭೂಮಾಲೀಕ ನಂಬಿಯಾರರಿಗೆ ನುಂಗಲಾರದ ತುತ್ತಾಗುತ್ತದೆ. ಒಂದು ರಾತ್ರಿ ಲೆಕ್ಕದ ಪಾಠವನ್ನು ಗಮನಿಸಬಹುದು "ಮಾಸ್ತರು ಗಣಿತ ಪಾಠದಲ್ಲಿ ಒಂದು ಲೆಕ್ಕ ಕೊಟ್ಟರು. ಒಬ್ಬನ ಹತ್ತಿರ ೬೦೦ ಎಕರೆ ಭೂಮಿ ಇದೆ. ಅದನ್ನು ಇನ್ನೂರು ಜನರಲ್ಲಿ ಸಮವಾಗಿ ಹಂಚಿದರೆ ಪ್ರತಿಯೊಬ್ಬನಿಗೂ ಸಿಗುವ ಹೊಲದ ವಿಸ್ತಾರವೆಷ್ಟು?"[೧೫] ಇಂತಹ ಪ್ರಶ್ನೆಗಳ ಮೂಲಕ ಭೂಮಾಲೀಕರಿಂದ ರೈತರಿಗಾಗುತ್ತಿದ್ದ ಅನ್ಯಾಯ ಕುರಿತು ಎಚ್ಚರಿಕೆ ನೀಡುವುದನ್ನು ಕಾಣುತ್ತೇವೆ. ರೈತರನ್ನು ಮೃಗದಂತೆ ನಡೆಸಿಕೊಳ್ಳುತ್ತಿದ್ದ, ಅವರ ಬೆವರಹನಿಯಲ್ಲೇ ತಮ್ಮ ಲಾಭವನ್ನು ಕಂಡುಕೊಳ್ಳುತ್ತಿದ್ದ ಭೂಮಾಲೀಕರಿಗೆ ಇದು ನುಂಗಲಾರದ ತುತ್ತಾಯಿತು. ಇದನ್ನು ಹತ್ತಿಕ್ಕಲು ಏನೆಲ್ಲಾ ತಂತ್ರ ನಡೆಸಿದರೂ ಅವುಗಳೆಲ್ಲಾ ರೈತ ಶಕ್ತಿಯ ಮುಂದೆ ವಿಫಲವಾಗುತ್ತವೆ.

ಇಲ್ಲಿ ರೈತ ಹೋರಾಟವನ್ನು ಹತ್ತಿಕ್ಕಲು ಬಂದಿದ್ದ ಪೊಲೀಸರ ಕಣ್ತಪ್ಪಿಸಿ ಭೂಗತರಾಗಿಯೂ ಹೋರಾಟ ಮುಂದುವರೆಯುತ್ತದೆ. ಆ ಸಂದರ್ಭದಲ್ಲಿ ಭೂಮಾಲೀಕರ ಪರವಾಗಿ ಸರ್ಕಾರವು ನಿಲ್ಲುತ್ತದೆ. ಭೂಮಾಲೀಕರಿಗೆ ಪೊಲೀಸರಿಂದ ರಕ್ಷಣೆ ದೊರೆಯುತ್ತದೆ. ಆಗ ರೈತರೇ ಸರ್ಕಾರದ ಅಸ್ತಿತ್ವಕುರಿತಂತೆ ಪ್ರಶ್ನಿಸುತ್ತಾರೆ.

"ಸಾಯೋ ಮನುಷ್ಯನ ಹಾಗೆ, ಈ ಸರಕಾರ. ಯಮ ಬಂದು ನಿಂತಾಗ ಚಡಪಡಿಸೋದು ಜಾಸ್ತಿ.... ನಮ್ಮವರೇ ಆದವರು ನಮ್ಮ ಜನರ ಮೇಲೆಯೇ ಬೀಳೋದಂತೂ ಎಷ್ಟು ಅಸಹ್ಯ! ಅಷ್ಟರ ಮಟ್ಟಿಗೆ ನಮ್ಮವರನ್ನು ಗುಲಾಮರಾಗಿ ಪಶುಗಳಾಗಿ ಆಳುವವರು ಮಾಡಿದ್ದಾರೆ.... ಸರಕಾರ ಅನ್ನೋದು ಎಲ್ಲಿದೆ, ಅದು ಹ್ಯಾಗೆ ಕೆಲಸ ಮಾಡ್ತದೆ, ಅಂತ ಈವರೆಗೂ ನಾವು ನೋಡಿರ್ಲಿಲ್ಲ. ಬರೆ ಜಮೀನ್ದಾರರಿಬ್ಬರೇ ಕಣ್ಣಿಗೆ ಕಾಣ್ತಾ ಇದ್ರು. ಆ ಶಕ್ತೀನ ಮುರಿಯೋದಕ್ಕೆ ನಮ್ಮ ಶಕ್ತಿ ಹ್ಯಾಗಿರ್ಬೇಕು ಅನ್ನೋದು ತಿಳೀತು. ಅಂತೂ ನಮ್ಮ ಪಾಲಿಗೆ ಇದೊಂದು

ಅಗ್ನಿಪರೀಕ್ಷೆ... ಇದರಲ್ಲಿ ನಾವು ಜಯಿಸಿ ಒಗ್ಗಟ್ಟಾಗಿ ಉಳಿದರೇನೇ ನಾಳೆ ಭೂಮಿಯ ಮೇಲೆ ಸ್ವರ್ಗ ರಚಿಸೇವು."೨

ಹೋರಾಟ ಕುರಿತು ಭೂಮಾಲೀಕರ ದಮನ ನೀತಿಯನ್ನು ಧಿಕ್ಕರಿಸಿ ರೈತ ಹೋರಾಟಗಾರರು ನಿರ್ಧಾರದಿಂದ ಹೋರಾಟ ರೂಪಿಸುವುದನ್ನು ಗಮನಿಸಬಹುದಾಗಿದೆ. ಇಡೀ ರೈತರು ಒಗ್ಗಟ್ಟಾಗಿ ಹೋರಾಟ ನಡೆಸುತ್ತಿದ್ದು, ಇದರ ನೇತೃತ್ವ ವಹಿಸಿದ್ದ ನಾಯಕರ ಹೋರಾಟದ ಕೆಚ್ಚು, ಹುರುಪನ್ನು ಗಮನಿಸಬಹುದಾಗಿದೆ. ಈ ಹೊತ್ತಿನಲ್ಲಿ ಸರ್ಕಾರವು ಭೂಮಾಲಿಕರ ಪರವಾಗಿ ಕೆಲಸ ಮಾಡುತ್ತದೆ. ಆಡಳಿತವೂ ಕೂಡಾ ರೈತರ ಪರವಾಗಿಲ್ಲದೆ ಭೂಮಾಲಿಕರ ಪರವಾಗಿದ್ದು ಅವರ ಪರವಾಗಿಯೇ ಕೆಲಸ ಮಾಡುತ್ತದೆ. ಇದರಿಂದಾಗಿ ಸರ್ಕಾರವು ಜನಸಾಮಾನ್ಯರನ್ನು ಮತ್ತು ರೈತರನ್ನು ಸಹ ಪಶುಸದೃಶವಾಗಿ ನಡೆಸಿಕೊಳ್ಳುತ್ತದೆ. ಇಲ್ಲಿ ಸರ್ಕಾರ ತನ್ನ ಪೋಲಿಸ್ ಶಕ್ತಿ ಬಳಸಿ ರೈತ ಹೋರಾಟವನ್ನು ಹತ್ತಿಕ್ಕುವ ಯತ್ನ ಮಾಡುತ್ತದೆ.

ರೈತ ಹೋರಾಟದ ದಮನಿತ ಶಕ್ತಿಗಳಾದ ಜಮೀನ್ದಾರರು ನಡೆಸುವ ಸುಲಿಗೆಯ ರಕ್ಷಣೆಗಾಗಿ, ಪೊಲೀಸರು ಹೂಡಿರುವ ಒಳಸಂಚೇ ಈ ಪ್ರಕರಣದಲ್ಲಿ ಪೊಲೀಸನೊಬ್ಬನ ಆಕಸ್ಮಿಕ ಸಾವಿಗೆ ಕಾರಣವಾಗುತ್ತದೆ. ಈ ಸಾವನ್ನೇ ಆಧಾರವಾಗಿಟ್ಟುಕೊಂಡು, ಈ ಪ್ರಾಂತದ ರೈತ ಸಂಘಟನೆಯನ್ನು ನಿರ್ನಾಮಗೊಳಿಸಿ, ಸಿಕ್ಕಸಿಕ್ಕವರನ್ನೆಲ್ಲಾ ಹಿಡಿದು, ಮೊಕದ್ದಮೆ ಹೂಡಿ ಜೈಲಿಗೆ ತಳ್ಳಲಾಯಿತು.

ಪೊಲೀಸರ ದಮನಕಾರಿ ನೀತಿಯಿಂದಾಗಿ ಹೋರಾಟವನ್ನು ಹತ್ತಿಕ್ಕಲು ರೈತರನ್ನು ಮತ್ತು ಹೋರಾಟಗಾರರನ್ನು ಸೆರೆಮನೆಗೆ ಕೂಡಿಹಾಕುತ್ತಾರೆ. ಮತ್ತೆ ಮತ್ತೆ ರೈತರು ಹೋರಾಟಕ್ಕೆ ಸಿದ್ಧರಾಗುತ್ತಿದ್ದರು. ಈ ಚಳವಳಿಯ ಮುಖಂಡರಾದ ಅಪ್ಪು, ಚಿರುಕಂಡ, ಕುಞಂಬು, ಅಬೂಬಕರ್‌ರನ್ನು ನ್ಯಾಯಾಲಯದ ಕಟ್ಟೆಗೆ ಹತ್ತಿಸಲಾಗುತ್ತದೆ. ನ್ಯಾಯಾಲಯವು ಈ ನಾಲ್ಕು ಮಂದಿಗೆ ಗಲ್ಲು ಶಿಕ್ಷೆ ವಿಧಿಸುತ್ತದೆ. ರೈತ ನಾಯಕರುಗಲ್ಲುಗಂಬಕ್ಕೆ ಏರುವುದನ್ನು ಇಡೀ ರಾಷ್ಟ್ರವೇ ನಿಬ್ಬೆರಗಾಗಿ ನೋಡುತ್ತಿರುತ್ತದೆ.

ಗಲ್ಲಿಗೇರಿಸಿದ ರೈತನಾಯಕರ ದೇಹವನ್ನು "ದೇಶದಾದ್ಯಂತ ನಿಧಿ ಸಂಗ್ರಹಿಸಿ ಈ ಸ್ಮಾರಕ ನಿರ್ಮಾಣ ಮಾಡಿದ್ದೇವೆ. ಅಗೋ, ಸ್ವಯಂಸೇವಕರು ಕೆಂಪು ಗುಲಾಬಿ ಕೊಡುತ್ತಿದ್ದಾರೆ. ಬನ್ನಿ, ಶಿಲೆಯ ಮೇಲೆ ರಕ್ತಾಕ್ಷರಗಳಲ್ಲಿ ಕೊರೆದಿರುವುದನ್ನು ಓದಿದಿರಾ?"ಬದುಕನ್ನು ಪ್ರೀತಿಸಿದ ಈ ಬಾಂಧವರು ಒಳ್ಳೆಯ ಬದುಕಿಗೋಸ್ಕರ ದುಡಿದರು, ಮಡಿದರು."೨ ಈ ವಾಕ್ಯದ ಹಿಂದೆ ಹೋರಾಟದ ಚರಿತ್ರೆ ಅಡಗಿದೆ,ಹೋರಾಟದ ಬೆಳಕಿದೆ ಎಂಬ ಸತ್ಯವನ್ನು ಕಾದಂಬರಿಕಾರರು ವ್ಯಕ್ತಪಡಿಸಿದ್ದಾರೆ. ನಾಲ್ಕು ರೈತ ವೀರರ ಮರಣ ಕೇವಲ ಸಾಂಕೇತಿಕವಾಗಿದೆ. ಇಂಥ ಸಾವಿರಾರು ರೈತ ಹೋರಾಟಗಳ ನಡೆಯುವಂಥ ಕಿಡಿಯನ್ನು ಹೊತ್ತಿಸುವಂಥ ಧ್ವನಿಯನ್ನು ದನಿಯನ್ನು ಕೊಟ್ಟಿರುವ ಆಶಯವಿದೆ. ಇಂಥ ಸಾವಿರಾರು ರೈತ ಹೋರಾಟಗಳಿಗೆ ಈ ಕಾದಂಬರಿಯು ಶಕ್ತಿಯಾಗಿ ರೂಪುಗೊಂಡಿದೆ. ಇದರಿಂದಾಗಿ ಸೃಜನಶೀಲ ಕಾದಂಬರಿಕಾರನ ಯಶಸ್ಸು ಅಡಗಿದೆ ಎಂಬುದನ್ನು ಗುರುತಿಸಬಹುದು.

ಈ ಕಾದಂಬರಿಯಲ್ಲಿ ಭೂಮಿ ಪ್ರಶ್ನೆಯ ಜೊತೆಗೆ ಭೂಮಾಲೀಕರು ಮಾಡುತ್ತಿದ್ದ ಶೋಷಣೆ ವಿರುದ್ಧವು ಹೋರಾಟ ನಡೆಯುತ್ತದೆ. ಭೂಮಾಲೀಕನ ಪ್ರಶ್ನೆ, ರೈತರ ಪ್ರಶ್ನೆ, ಹಾಗೂ ಶೋಷಣೆ ಪ್ರಶ್ನೆ ಮುಖ್ಯವಾಗಿ ಈ ಕಾದಂಬರಿಯಲ್ಲಿ ವ್ಯಕ್ತವಾಗಿವೆ. ಇಲ್ಲಿ ಏಕಕಾಲಕ್ಕೆ ಬಾಹ್ಯಶಕ್ತಿಯ ವಿರುದ್ಧ ಹೋರಾಟ ಹಾಗೂ ಸ್ಥಳೀಯ ಭೂಮಾಲೀಕ ಶಕ್ತಿಯ ವಿರುದ್ಧ ಕಟ್ಟಿದಂತಹ ಭೂ ರೈತ ಹೋರಾಟವನ್ನು ಈ ಕಾದಂಬರಿಯಲ್ಲಿ ಧ್ವನಿತವಾಗಿದೆ. ಈ ಕಯ್ಯೂರು ರೈತಹೋರಾಟವು ನೂರಾರು ಹೋರಾಟಗಳ ಧ್ವನಿಯಾಯಿತು ಎಂಬುದನ್ನು ಗಮನಿಸಬಹುದು. ಈ ಹೋರಾಟ ನಂತರದಲ್ಲಿ ಆಂಕೋಲೆ ಸಿರ್ಸಿ ಸಿದ್ದಾಪುರದಲ್ಲಿ ನಡೆದ ಗೇಣಿರೈತ ಹೋರಾಟಕ್ಕೆ ಸ್ಫೂರ್ತಿಯಾಗಿರುವುದನ್ನು ಕಾಣುತ್ತೇವೆ. ಇದರ ಪ್ರಭಾವ ಶಿವಮೊಗ್ಗ ಜಿಲ್ಲೆಯ ಕಾಗೋಡಿನ ಗೇಣಿ ರೈತರ ಹೋರಾಟದ ಮೇಲಾಗಿರುವುದನ್ನು ಮುಖ್ಯವಾಗಿ ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಕಯ್ಯೂರಿನ ರೈತಹೋರಾಟವು ಕೇವಲ ಸಾವಿನೊಂದಿಗೆ ಅಂತ್ಯವಾಗಿಲ್ಲ. ಇಂಥ ನೂರಾರು ಹೋರಾಟಗಳನ್ನು ರೂಪಿಸುವಂಥ ಅಸ್ತಿತ್ವವನ್ನು ತನ್ನ ಚಳುವಳಿಯ ಗರ್ಭದಲ್ಲೇ, ಗರ್ಭೀಕರಿಸಿಕೊಂಡಿರುತ್ತದೆ ಎಂಬುದಕ್ಕೆ, ಇದಕ್ಕಿಂತ ಮಾದರಿ ಬೇಕೇ?.

**ಕೊನೆ ಟಿಪ್ಪಣಿ**

೧. ಬಿದರಹಳ್ಳಿ ನರಸಿಂಹಮೂರ್ತಿ, ಧ್ವನಿ, ಸಮಗ್ರ ಕಥಾಸಮುಚ್ಚಯ-1ಪ್ರವೇಶ, ಪುಟ.೧,

೨.ಚಿರಸ್ಮರಣೆ ಕಯ್ಯೂರು, ನಿರಂಜನ. ಹಿನ್ನುಡಿ;ಕೃತಜ್ಞತೆ ಪು.೩೧,

೩.ನಿರಂಜನ, ಚಿರಸ್ಮರಣೆ ಮುನ್ನುಡಿ

೪.ನಿರಂಜನ, ಚಿರಸ್ಮರಣೆ ಪುಟ ೩೫

೫. ಅದೇ ಪುಟ ೩೬

೬. ಅದೇ ಪುಟ ೫೧

೭. ಅದೇ ಪುಟ ೪೭,೪೮

೮.ಅದೇ ಪುಟ ೬೦

೯. ಅದೇ ಪುಟ೬೧

೧೦. ಅದೇ ಪುಟ ೭೨

೧೧. ಅದೇ ಪುಟ ೭೩

೧೨. ಅದೇ ಪುಟ ೭೩

೧೩. ಅದೇ ಪುಟ ೮೧

೧೪. ಅದೇ ಪುಟ ೮೧

೧೫. ಅದೇ ಪುಟ ೧೨೬

೧೬. ಅದೇ ಪುಟ ೨೩೧

೧೭. ಅದೇ ಪುಟ೨೪೮

## ೪.೨.೨ ಆ.ನ. ಕೃಷ್ಣರಾಯ:ಮಣ್ಣಿನ ಮಗನ ಭೂ ಪ್ರಶ್ನೆ

ಮಣ್ಣಿನ ಮಗನ ಕತೆಯಲ್ಲಿ ಭೈರಸಂದ್ರ ರಾಮಯ್ಯನ ಮಗ ಸಿದ್ಧಯ್ಯನಿಗೂ ಮತ್ತು ತಿಪ್ಪಳ್ಳಿಯ ಗಂಗನೂ ಗಳಸ್ಯ ಕಂಠಸ್ಯ ಗೆಳೆಯರು. ಯಾವುದೇ ಕೋಳಿ ಪಂದ್ಯ ನಡೆಯುತ್ತಿದೆ ಎಂದರೆ ಅದು ಸಿದ್ದಯ್ಯ ಮತ್ತು ಗಂಗರ ಗೆಲುವೇ ಆಗಿರುತ್ತಿತ್ತು. ಇವು ಬಾಲ್ಯ ಗೆಳೆಯರ ಒಡನಾಟಗಳಾಗಿದ್ದವು. ಬೆಳೆದಂತೆಲ್ಲಾ ಗಂಗನಿಗೆ ಕೂಡ್ಲಿ ಮಗಳು ತಿಮ್ಮಿಯನ್ನು ಮದುವೆಯಾಗಿದ್ದು, ತನ್ನ ತಾಯಿಯೊಂದಿಗೆ ತಿಪ್ಪಳ್ಳಿಯಲ್ಲಿ ಗೇಣಿ ರೈತನಾಗಿ ಜೀವನ ನಡೆಸುತ್ತಿರುತ್ತಾನೆ.

"ಗಂಗನಿಗೆ ಸ್ವಂತ ಹೊಲ ಭೂಮಿ ಇರಲಿಲ್ಲ. ಅವನು ಮಾಡುತ್ತಿದ್ದುದು ಅಯ್ಯನವರ ಹೊಲ. ವರ್ಷಾಕಾಲಕ್ಕಾಗುವಷ್ಟು ದವಸ ಬೆಳೆಯುತ್ತಿತ್ತು. ಅವನು ಬೆಳೆದ ಒಂದಂಶ ಧಣಿಗೆ ಹೋಗುತ್ತಿತ್ತು. ಆಗಾಗ್ಗೆ ಸೌದೆ. ಸಾಲು ಮರದ ಮಾವಿನಕಾಯಿ, ಸೀಗೇಮೆಳೆಯ ಸೀಗೇ ಕಾಯಿ ಧಣಿಯವರ ಮನೆಗೆ ಕಳುಹಿಸುತ್ತಿದ್ದ. ಗಂಗನ ಧಣಿ ಬೆಂಗಳೂರಿನಲ್ಲಿ ಸರ್ಕಾರಿ ನೌಕರಿಯಲ್ಲಿದ್ದರು. ಈ ಜಮೀನಿನ ಆದಾಯ ಅವರು ಗಣನೆಗೇ ತಂದುಕೊಂಡಿರಲಿಲ್ಲ. ಕಂದಾಯ ಕಳೆದು ಒಂದು ಎರಡೋ ಮೂಟೆ ದವಸ ಮನೆಗೆ ಬಂದುಬಿದ್ದರೆ ಅವರಿಗೆ ಅತ್ಯಾನಂದವಾಗುತ್ತಿತ್ತು. ಪಿತ್ರಾರ್ಜಿತ ಆಸ್ತಿ ಇರಲಿ ಎಂದು ಸುಮ್ಮನಿದ್ದರು. ಗಂಗ ಭೂಮಿ ಮಾಲಿಕನಾಗಿರದಿದ್ದರೂ , ಮಾಲಿಕತನದ ಎಲ್ಲ ಸೌಕರ್ಯಗಳೂ ಅವನಿಗಿದ್ದವು. "

ತನ್ನ ಜೀವದ ಗೆಳೆಯ ಭೈರಸಂದ್ರದ ಸಿದ್ದಯ್ಯ ಸೈನ್ಯಕ್ಕೆ ಸೇರುತ್ತಾನೆ. ಈ ವಿಷಯ ಗೌಡರೇ ಹೇಳಿದಾಗ ಸೋಜರ್‌ಅದ್ರೆ ಏನು ಎಂಬುದನ್ನು ಮುಗ್ದವಾಗಿ ಗಂಗ ಕೇಳುತ್ತಾನೆ. ಹಣದಾಸೆಗಾಗಿ ಸೈನ್ಯ ಸೇರಿದ್ದಾನೆಂದು ಈತನ ತಂದೆ ತಿಳಿಯುತ್ತಾನೆ. ಆರು ತಿಂಗಳ ನಂತರ ಸಿದ್ದಣ್ಣ ತನ್ನ ಊರಿಗೆ ಮರಳಿ ಬರುತ್ತಾನೆ. ತನ್ನ ಜೀವದ ಗೆಳೆಯ ಗಂಗನನ್ನು ನೋಡಲು ತಿಪ್ಪಳ್ಳಿಗೆ ಬರುತ್ತಾನೆ. ಸಿದ್ದಯ್ಯನ ಬದಲಾವಣೆಗಳನ್ನು ನೋಡಿ ಗಂಗನಿಗೆ ಆಶ್ಚರ್ಯವಾಗುತ್ತದೆ. ಸಿದ್ದಯ್ಯ ಫೌಜು ಸೇರಿದ್ದುಕವಾಯತು ಮಾಡುವುದು, ತುಪಾಕಿ ಹಿಡಿದು ಗುರಿಹೊಡೆಯುವುದು, ದಿನ ಸಿನಿಮಾ ನೋಡುವುದು ರಜಾ ಕಳೆದ ನಂತರ ಇಲಾಯಿತೀಗೆ ಕಳುಹಿಸುತ್ತಾರೆಂದು ಎಲ್ಲವನ್ನು ವಿವರವಾಗಿ ಗಂಗನಿಗೆ ಹೇಳಿದ.

ಇದು ಗಂಗನಿಗೆ ಆಕರ್ಷಕವಾಗಿ ಕಂಡುಬರುತ್ತದೆ. ಇಂಥದೇ ಆಶಯವನ್ನು ಚದುರಂಗರ ವೈಶಾಖದ ಪುಟ್ಟಾರಿಯಲ್ಲಿ ಸೈನ್ಯಕ್ಕೆ ಹಣ ಗಳಿಸಿಕೊಂಡು ಬರುವ ಸನ್ನಿವೇಶವಿದೆ. ಆದರೆ ಆತನಿಗೆ ಭೂಮಿಯನ್ನು ಪಡೆಯುವ ಸಲುವಾಗಿ ಹಣಗಳಿಸಲು ಹೋಗುತ್ತಾನೆ. ಆದರೆ ಗಂಗನಲ್ಲಿ ಅಂಥ ಉದ್ದೇಶವೇನು ಕಂಡುಬರುವುದಿಲ್ಲ. ಬರುತ್ತದೆಸಿದ್ದಯ್ಯನನ್ನು ಫೌಜುಗೆ ಸೇರಿಕೊಳ್ಳಲು ಹೇಳುತ್ತಾನೆ. ಆಗ ಗಂಗನು ಸೈನ್ಯದಲ್ಲಿ ನೀಡುವ ಸವಲತ್ತುಗಳಿಗೆ ಆಕರ್ಷಕನಾಗಿ ಸೈನ್ಯಕ್ಕೆ ಸೇರಲು ಸಿದ್ಧನಾಗುತ್ತಾನೆ. ತನ್ನ ಮನೆಯಲ್ಲಿ ತಾಯಿ ಹಾಗೂ ತಿಮ್ಮಿಗೆ ಈ ವಿಷಯ ಹೇಳುವುದು ಹೇಗೆ ಎಂದು ಗಂಗ ಯೋಚಿಸುತ್ತಾನೆ. ಸಿದ್ದಯ್ಯನ ಜೊತೆಗೆ ಹೊರಡಲು ಸಿದ್ಧವಾಗುತ್ತಾನೆ. ತನ್ನ ತಾಯಿಯ ಬಳಿ ಬೆಂಗಳೂರಲ್ಲಿ ನಾಲ್ಕೈದು ದಿನ ಇದ್ದು ವಾಪಸ್ಸು ಬರುತ್ತೇನೆಂದು ತಾಯಿಯನ್ನು ಒಪ್ಪಿಸುತ್ತಾನೆ. ಇತ್ತ ಗಂಗ ಸಿದ್ಧಣ್ಣನ ಜೊತೆ ಹೊರಡುತ್ತಾನೆ.ಸೈನ್ಯ ಸೇರುವ ದುರಂತದಲ್ಲಿ ತನ್ನ ರೈತಾಪಿ ಬದುಕನ್ನು ಕಳೆದುಕೊಳ್ಳುತ್ತಾನೆ.

ಸೈನ್ಯದ ಆಕರ್ಷಣೆ, ಸಿನಿಮಾ, ಸಿಗರೇಟ್, ಮಲಗಲು ಮಂಚ ಮುಂತಾದ ಆಕರ್ಷಣೆಗಳು ಗಂಗನಿಗೆ ಅತ್ಯಾನಂದ ಉಂಟು ಮಾಡುತ್ತವೆ. ಗಂಗ ಸೈನ್ಯದಿಂದ ದುಡಿದು ತನ್ನ ಮನೆಯ ಸಂಕಷ್ಟಗಳನ್ನು ಬಗೆಹರಿಸ ಬೇಕು ಮತ್ತು ಸೈನ್ಯದ ಸವಲತ್ತುಗಳನ್ನು ಅನುಭವಿಸಬೇಕೆಂದ ಒತ್ತಾಸೆಯಿಂದ ಹೋಗಿರುತ್ತಾನೆ. ಆದರೆ ಅಲ್ಲಿ ಆಗುವುದೇ ಬೇರೊಂದು. ಸಿದ್ಧಣ್ಣ ಹೇಳಿದ ಭರವಸೆಗಳು ಒಂದೂ ಈಡೇರುವುದಿಲ್ಲ. ಆಗಲೇ ಸಿದ್ದಣ್ಣ ಹೇಳಿದ ಭರವಸೆ ಈಡೇರದೆ ಆತನನ್ನು ಎಲ್ಲಿಗೋ ಹೊತ್ತು ಹಾಕಿದ್ದರು. ಇತ್ತ ಗಂಗಣ್ಣನನ್ನು ಪುಣೆಗೆ ಹೋಗಬೇಕಾಯಿತು. ಮೂರು ನಾಲ್ಕು ತಿಂಗಳು ಅಲ್ಲೇ ನೆಲೆಸುತ್ತಾನೆ.

ಇತ್ತ ತನ್ನ ಗಂಗ ಬರುತ್ತಾನೆ ಕಾಯುತ್ತಿದ್ದ ತಾಯಿಗೆ ಬರದೇ ಇರುವುದು ಸ್ಪಷ್ಟವಾಗುತ್ತದೆ. ಇತ್ತ ಬೆಂಗಳೂರಿನ ಒಡೆಯರು ಒಂದುವರ್ಷವಾದರೂ ಗಂಗನ ಸುಳಿವಿಲ್ಲದೆ ಇದ್ದುದರಿಂದ ತಮ್ಮ ಜಮೀನನ್ನು ಬೇರೆಯವರಿಗೆ ಹೊಲ ಮಾಡಲು ಒಪ್ಪಿಸಿದರು.

ಯುದ್ಧ ನಿಂತು ಹೋದ ನಂತರದಲ್ಲಿ ಸೈನ್ಯ ಸೇರಿದ್ದವರು ವಾಪಸ್ಸು ಹೋಗಲು ನೋಟೀಸ್ ಬರುತ್ತದೆ. ಆಗ ಗಂಗನಿಗೆ ಈ ವಿಷಯ ತಿಳಿದು ಆಕಾಶವೇ ಕಳಚಿದಂತಾಗುತ್ತದೆ. ಸಪ್ಪ ಮೋರೆ ಹಾಕಿಕೊಂಡು ತನ್ನ ಊರಿನತ್ತ ಹೊರಡುತ್ತಾನೆ. ತನ್ನ ತಾಯಿಯ ಸ್ಥಿತಿ, ಕರುಣಾಜನಕವಾಗಿ ಕಂಡು ಬರುತ್ತದೆ.

ಆಗ ಮುದುಕಿ ತಾಯಿ"ಅಡೆವ್ವಂಗೆ ಎಲ್ಲು ಬಗೆದೈಲ್ಲೋ?ಎಂದಳು. "

ಯಾರಿಗವ್ವಾ...

ಭೂಮಿತಾಯೀಗೆ . ಒಲ ಓಯ್ತು... ದನ ಓಯ್ತು... ನಿನ್ನ ಉಂಜಗೊಟಕ್ಕಂತು. ಇನ್ನೇನೈತೆ ನಿಮ್ಮವ್ವನ ಮಣ್ಣು ಮಾಡ್ಬುಡು ಎಲ್ಲಾ ಮುಗಿತೈತೆ. " ಎಂದು ಕರುಣಾರ್ದ್ರವಾಗಿ ತಾಯಿ ನುಡಿಯುತ್ತಾಳೆ.

ತಾನು ಮಾಡಿದ ತಪ್ಪಿನ ಅರಿವಾಗಿ ತನ್ನೂರಿಗೆ ಮರಳಿದ್ದ ಗಂಗ ತನ್ನ ಒಡೆಯರ ಜಮೀನಿಗೆ ಹೋಗಿ ನೋಡುತ್ತಾನೆ. " ಮಾರನೆಯ ದಿವಸದಿಂದ ಗಂಗಣ್ಣನಿಗೆ ಹೊತ್ತು ಕಳೆಯುವುದಾಗಲಿಲ್ಲ. ರಾಗಿ ತೆನೆಗೊಂಡು ಬಳಕುತ್ತ ನಿಂತಿತ್ತು. ತನ್ನ ಹೊಲ ತಾನು ದುಡಿದು ರಕ್ತ ಬಸಿದ ಹೊಲ. ಇಂದೂ ಸಮೃದ್ಧಿಯಾಗಿ ಫಸಲನ್ನು ಹೊತ್ತು ನಿಂತಿದೆ. ಆದರೆ ಆ ಫಲ ತನ್ನದಲ್ಲ. ಇಂದು ಅದರ ಮೇಲೆ ತನಗೆ ಯಾವ ಅಧಿಕಾರವೂ ಇಲ್ಲ. ಗಂಗಣ್ಣನ ರಕ್ತ ಕುದಿಯಿತು. ಗಂಟಲಿಗೆ ಬಂದ ಬಿಸಿರಕ್ತ ನುಂಗಿಕೊಂಡು ಸಾಂತನಾದ." ಇಲ್ಲಿಗಂಗ ತಾನು ಮಾಡಿದ ರಕ್ತ ಬಸಿದ ಭೂಮಿಯೊಂದಿಗೆ ಸಂಬಂದ ಆತನ್ನು ಬಿಡುಗಡೆಗೊಳಿಸುತ್ತಿಲ್ಲ. ಈತನಿಗೆ ಭೂ ಒಡೆತನವಿದ್ದಿದ್ದರೆ ಈ ರೀತಿಯ ದುಃಸ್ಥಿತಿ ಬರುತ್ತಿರಲಿಲ್ಲ. ಗೇಣಿ ರೈತನಾಗಿದ್ದ ತನ್ನದೇ ಜಮೀನು ಭಾವಿಸಿ ಹುಂಬನಂತೆ ದುಡಿಯುತ್ತಿದ್ದ ಆದರೆ ಇಂದು ವಾಸ್ತವವೇ ಬೇರೆಯಾಗಿದೆ.

ಹೊಲವನ್ನು ಕಳೆದುಕೊಂಡ ಗಂಗ ರಸ್ತೆಯಬದಿಯ ರಿಪೇರಿ ಕೆಲಸಕ್ಕೆ ಸೇರಿ ದುಡಿಯ ತೊಡಗಿದ. ರಸ್ತೆ ಕೆಲಸ ಮುಗಿಸಿಕೊಂಡು ಮನೆಯತ್ತ ಬರುವಾಗ ಹೊಲದ ಬದಿಯಲ್ಲಿ ಹಾದುಹೋಗುವಾಗ ಗೇಣಿ ಮಾಡುತ್ತಿದ್ದ ಈರಪ್ಪನನ್ನು ಗಂಗನನ್ನು ಕರೆದು ಮೆದೆ ತೋರಿಸುತ್ತಾನೆ. ಈ ದೃಶ್ಯಕಂಡ ಗಂಗನಿಗೆ ರಕ್ತವೇ ಕುದಿಯತೊಡಗುತ್ತದೆ. "ಚಿನ್ನದಂತ ಬೂಮಿ ಗಂಗಪ್ಪ... ಸೊಂಪು ಬೆಳೆಯಾಗೈತೆ." ಎಂಬ ಮಾತನ್ನು ಕೇಳಿದ ಕೂಡಲೇ ಆಕ್ರೋಶಗೊಂಡು ಪಿಕಾಸಿಯಲ್ಲಿ ಈರಪ್ಪನ ತಲೆಗೆ ಬೀಸುತ್ತಾನೆ. ಆತ ಸ್ಥಳದಲ್ಲಿ ಪ್ರಾಣ ಬಿಡುತ್ತಾನೆ. ಆನಂತರದಲ್ಲಿ ಪಟೇಲರು, ಗೌಡರು, ಪೊಲೀಸಿನವರು ಬಂದು ಗಂಗನನ್ನು ಹಿಡಿದೆಳೆಕೊಂಡು ಹೋದರು. ಇತ್ತ ಗಂಗನ ತಾಯಿ "ಭೂಮಿ ತಾಯ ಶಾಪ ಎಂದು ವಿಕಟವಾಗಿ ಚೀರಿ ಬಿದ್ದುಬಿಟ್ಟಳು ಅವಳ ದೇಹ ಒಂದು ಹಿಡಿ ಮಣ್ಣು ತಾಯಿ ಮಣ್ಣಿನಲ್ಲಿ ಬೆರೆತು ಹೋಯಿತು."ತನ್ನ ಪ್ರಾಣವನ್ನು ಬಿಡುತ್ತಾನೆ.

ಗಂಗ ಈ ಭೂಮಿಯೊಂದಿಗಿದ್ದ ಹಂಬಲ, ಅಂತರ್ ಸಂಬಂಧಗಳು ಆತನ್ನು ಆಕ್ರೋಶಕ್ಕೆ ಗುರಿಮಾಡುತ್ತವೆ. ಗೇಣಿ ರೈತನ ಸಮಸ್ಯೆಯಿಂದಾಗಿ ಭೂ ಒಡೆತನವು ಅಸ್ಥಿರವಾಗಿರುವುದನ್ನು ಈ ಕತೆಯಲ್ಲಿ ವ್ಯಕ್ತವಾಗುತ್ತದೆ. ತಾನು ಮಾಡಿಕೊಂಡ ಕೃತ್ಯಕ್ಕೆ ತಾನೇ ಬಲಿಯಾಗುವ ಚಿತ್ರಣವಿದೆ.

**ಕೊನೆ ಟಿಪ್ಪಣಿ**

೧.ಆ.ನ.ಕೃ. ಮಣ್ಣಿನ ಮಗ,ಆ.ನ.ಕೃ ಅವರ ಸಮಗ್ರ ಕಥಾಸಂಕಲನ. ಸಂ.೨.ಸಾಗರ ಪ್ರಕಾಶನ, ಪುಟ ೩೯೪

೨.ಅದೇ ಪುಟ ೪೦೪

೩.ಅದೇ ಪುಟ ೪೦೪

೪. ಅದೇ ಪುಟ ೪೦೪, ೪೦೫

### ೪.೨.೩ ಚದುರಂಗ : ಭೂ ಒಡೆತನ ಆಶಯುಗಳು

ಚದುರಂಗರ ವೈಶಾಖ ಕಾದಂಬರಿಯಲ್ಲಿ ಎರಡು ವರ್ಗಗಳು ಮುಖ್ಯವಾಗಿ ಕಂಡು ಬರುತ್ತವೆ. ಈ ವರ್ಗಗಳೆಂದರೆ ನಂಜೇಗೌಡ,ಕೆಂಗಣ್ಣಪ್ಪ, ಗಂಗಪ್ಪ ಜಮೀನ್ದಾರಿ ವರ್ಗವಾಗಿದೆ. ಇನ್ನೊಂದು ಜೀತದಾಳುಗಳಾದ ದಲಿತವರ್ಗವಿದೆ. ಶೋಷಿತ ವ್ಯಕ್ತಿಯಾಗಿರುವ ಲಕ್ಕ, ತನ್ನ ಊರ ದರುಮನಹಳ್ಳಿಯ ಸಮಸ್ತ ಇತಿಹಾಸ,ಊರಿನ ಒಳವ್ಯವಹಾರಗಳು ಈತನಿಗೆ ತಿಳಿದಿರುತ್ತವೆ. ಲಕ್ಕ ದರುಮನಹಳ್ಳಿಯ ಸಾಮಾಜಿಕ ವ್ಯವಸ್ಥೆಯ ಕೂಸಾಗುತ್ತಾನೆ.ತನ್ನ ಕಣ್ಣೆದುರೇ ನಡೆಯುತ್ತಿರುವ ಘಟನೆಗಳ ಕುರಿತು ಈತ ಮೂಕ ಸಾಕ್ಷಿಯಾಗಿ ಕೂತು ನೋಡುತ್ತಾನೆ. ರುಕ್ಮಿಣಿಯ ಮೇಲೆ ಕೃಷ್ಣಶಾಸ್ತ್ರಿಗಳು ನಡೆಸಿದ ಲೈಂಗಿಕ ಆಕ್ರಮಣವನ್ನು ಲಕ್ಕನ ಮೇಲೆ ಹೊರಿಸುತ್ತಾರೆ.

ಇಲ್ಲಿ ರುಕ್ಮಿಣಿ ತಾನು ಯಾರಿಂದ ಗರ್ಬಿಣಿಯಾಗಿದ್ದೇನೆಂದು ತಿಳಿಯದಾಗುತ್ತಾಳೆ. ತನ್ನ ಮಾವ ಕೃಷ್ಣಶಾಸ್ತ್ರಿಗಳಿಂದಾ ಆಪಾಗತ ಆನಂತರದಲ್ಲಿ ಲಕ್ಕ ರುಕ್ಮಿಣಿಯನ್ನು ಮಾತೃರೂಪಿಯಾಗಿ ನೋಡುವ ಕ್ರಮ.ತಾನು ಯಾರಿಂದ ಗರ್ಭಿಣಿಯಾಗಿದ್ದೇನೆಂಬ ವಿಚಾರಕ್ಕೆ ಮೌನವಹಿಸುವುದನ್ನು ಕಾಣುತ್ತೇವೆ. ಇತ್ತ ಪಂಚಾಯಿತಿಯ ಮುಖಂಡರು ರುಕ್ಮಿಣಿಯನ್ನು ಭೋಗಿಸಬೇಕೆಂದುಕೊಂಡಿದ್ದ ನಿರಾಶೆಯಾಗಿ ಆಕ್ರೋಶ ಲಕ್ಕನ ಕಡೆ ತಿರುಗತ್ತದೆ. ತನಗಾದ ಬಸುರಿನಿಂದಾಗಿ ಸತ್ತ ಗರ್ಭೀಣಿಯ ಮೇಲೆ ಎರಗುವ ರಣಹದ್ದುಗಳು ಎರಗುವಂತೆ ಕಾಣುವ ಚಿತ್ರಣ ವ್ಯಕ್ತವಾಗುತ್ತದೆ. ಈಕೆಯ ಗರ್ಭಿಣಿಗೆ ತಾನು ಕಾರಣನಲ್ಲ ಎಂದು ಲಕ್ಕ ಹೇಳಿದರೂ ಕೇಳುವ ಸ್ಥಿತಿಯಲ್ಲಿ ವ್ಯವಸ್ಥೆ ಇರುವುದಿಲ್ಲ.ಲಕ್ಕನ ತಂಗಿ ಶಿವುನಿಯ ಲೈಂಗಿಕ ಹಸಿವು, ಹಾಗೂ ಹೊಟ್ಟೆಯ ಹಸಿವಿನ ಮೂಲದಿಂದ ಪರಗಂಡನ ಸಂಬಂಧವನ್ನು ಹೊಂದಿದ್ದನ್ನು ಲಕ್ಕ ವಿರೋಧಿಸುತ್ತಾನೆ. ಆದರೆ ಲಕ್ಕನೊಡನೆ, ಶಿವಾಚಾರದ ಗಂಗಿ ಲೈಂಗಿಕ ಆಸಕ್ತಿ ತೋರಿ ಬರುತ್ತಾಳೆ. ಇಲ್ಲಿನ ಶಿವಾಚಾರದ ಮಠವು ಭ್ರಷ್ಟಗೊಳ್ಳುತ್ತ, ಇಲ್ಲಿನ ಪಂಚಾಯಿತಿ ವ್ಯವಸ್ಥೆಯು ಆಕ್ರಮಣ ಶೀಲವಾಗಿ ರೂಪಗೊಂಡಿರುವುದನ್ನು ಕಾಣುತ್ತೇವೆ.

ಲಕ್ಕನ ಮನೆಯವರು ಒಂದು ಕಾಲಕ್ಕೆ ಜಮೀನು ಉಳ್ಳವರೇ ಆಗಿದ್ದರು. ಲಕ್ಕನ ಅಪ್ಪನ ಮದುವೆಯಲ್ಲಿ ಮಾಡಿದ ಸಾಲಕ್ಕೆ ನಾಲ್ಕು ಎಕರೆ ಜಮೀನು ಮಾರಾಟವಾಯಿತು. ಲಗ್ನದಲ್ಲಿ ತೆಗೆದುಕೊಂಡ ಸಾಲ ಮಕ್ಕಳು ತಾರುಣ್ಯಕ್ಕೆ ಬಂದರೂ ತೀರಲಿಲ್ಲ. ಆಸ್ತೀಹೀನರಾದ ಮೇಲೆ ಅವರ ಯಾವ ಆಶೆಯೂ ನೆರವೇರುವುದಿಲ್ಲ. ದಲಿತರು ಶೋಷಣೆಗೆ ಬಲಿಯಾಗುತ್ತಲೇ ಹೋಗುತ್ತಾರೆ. ಇಂಥದೇ ಆಶಯವು ಚಿರಸ್ಮರಣೆ ಚಿರುಕಂಡನ ಅಪ್ಪನ ಸ್ಥಿತಿಯೂ ಇದೇ ಆಗಿದೆ.

ಜೀತದಿಂದ ತಪ್ಪಿಸಿ ಇತ್ತ ಲಕ್ಕನನ್ನು ಓದಿಸಿ ದೊಡ್ಡವಿದ್ಯಾವಂತನನ್ನು ಮಾಡಿಸಬೇಕೆಂಬ ಆಸೆ ಕುತ್ತಿಯವರೆಗಿದೆ. ಆದರೆ ಊರಿನ ಭೂಮಾಲೀಕ ವ್ಯವಸ್ಥೆ ತಪ್ಪಿಸುತ್ತದೆ. ಈ ಕುರಿತು ಕೆಂಗಪ್ಪನ ಹೆಂಡತಿ ಸಿದ್ದಮ್ಮ ಪ್ರತಿಕ್ರಿಯೆಯನ್ನು ಗಮನಿಸಬಹುದು. ಹಯ್ಯಾ ನಿಂಗೊಂದು ಉಚ್ಚು. "ಇವರಿಗೆ ಇದ್ಯಾ ಕಲುಸಿ, ಇವ್ನ ಅದ್ಯಾವ ರಾಜ್ಯ ಆಳಬೇಕಾಗಿದ್ದುದ .. ಬ್ರಾಂತು.. ಬ್ರಾಂತು ಇವ್ನನ್ನು ಯಾವುದಾದರೂ ಅಟ್ಟಿಗೆ ಸೇರುಸಿ, ಉಳಿಕೆ ಆಯಿವತ್ತು ತಂದುಕ್ಕಡು. ನಿನ್ನ ಸಾಲವ ಒಂದೇ ವರುಸಕೆ ತೀರೋಯ್ತದೆ"

ನಿಂಗ ತನ್ನ ಸಾಲ ತೀರಿಸುವ ಸಲುವಾಗಿ ಶಾಲೆಗೆ ಹೋಗುತ್ತಿದ್ದ ತನ್ನ ಮಗ ಲಕ್ಕನನ್ನು ಕಂಡು ಒಡೆಯ ಕೆಂಗಪ್ಪ ತನ್ನ ಮನೆಯಲ್ಲಿ ಜೀತಕ್ಕಿರಿಸುವಂತೆ ತಾಕೀತು ಮಾಡುತ್ತಾನೆ. ಇದಕ್ಕೆ ಪ್ರತಿಯಾಗಿ ಬುಂಡಮ್ಮ ೬೦ ರೂಪಾಯಿಗಳ ಜೊತೆಗೆ ಐವತ್ತು ರೂಪಾಯಿಗಳನ್ನು ಹೆಚ್ಚು ನೀಡಿ ತನ್ನ ಮನೆಯಲ್ಲಿ ಜೀತಕ್ಕಿರಿಸಿಕೊಳ್ಳುತ್ತಾಳೆ.

ಇದೇ ಕಾಲಕ್ಕೆ ಟಗರೂರ ಪಂಚಾಯಿತಿಗೆ ತಪ್ಪುದಂಡ ತೆರುವ ಸಲುವಾಗಿ ನಿಂಗ ತನ್ನ ಇನ್ನೊರ್ವ ಮಗಳನ್ನೇ ಜೀತಕ್ಕಿರಿಸುವ ಹೃದವಿದ್ರಾವಕವಾದ ಚಿತ್ರಣವನ್ನು ಕಾಣುತ್ತೇವೆ. ಇಲ್ಲಿ ಅನಿವಾರ್ಯವಾಗಿ ಭೂಮಾಲೀಕರ ಮನೆಯಲ್ಲಿ ಜೀತಕ್ಕಿರುವ ಪರಿಸ್ಥಿತಿಯನ್ನು ಕಾಣುತ್ತೇವೆ. ಅಲ್ಲದೆ ಆ ಕಾಲದ ಆರ್ಥಿಕ ಬಿಕ್ಕಟ್ಟುಗಳು ದಲಿತ ಸಮುದಾಯದ ಬದುಕನ್ನು ಜೀತದಾಳುಗಳಾಗಿ ದೂಡುವಂತಹ ಸಹಜವಾದ ಚಿತ್ರಣ ಈ ಕಾದಂಬರಿಯಲ್ಲಿ ವ್ಯಕ್ತವಾಗುತ್ತದೆ.

ಭೂಮಾಲೀಕ ಕೆಂಗಪ್ಪನ ಬಳಿ ಇರುವ ಜೀತಗಾರರ ನಡೆಸಿಕೊಳ್ಳುವ, ದುಡಿಸಿಕೊಳ್ಳುವ ದೃಷ್ಟಿಕೋನ ಮಾನವೀಯ ನೆಲೆಯಿಲ್ಲದಿರುವುದನ್ನು ಕಾಣುತ್ತೇವೆ. ಆದರೆ ಬುಂಡಮ್ಮನ ಬಳಿ ಇರುವ ಜೀತಗಾರ ಲಕ್ಕನನ್ನು ಈಕೆ ನೋಡಿಕೊಳ್ಳುವ ಬಗೆಗೆ ಒಂದು ಮಾನವೀಯ ನೆಲೆಯ ವಾತಾವರಣದಲ್ಲಿ ಲಕ್ಕನನ್ನು ಬೆಳೆಸುತ್ತಾಳೆ.

ಬುಂಡಮ್ಮನಿಗೆ ಲಕ್ಕನ ಆತ್ಮೀಯ ಒಡನಾಟದಿಂದ ತನ್ನ ಮನೆಯ ಕೆಲಸವನ್ನು ಮಾಡಿಸಿಕೊಳ್ಳುತ್ತಾಳೆ. ಇಂತಹ ವಾತಾವರಣದಲ್ಲಿದ್ದ ಲಕ್ಕನನ್ನು ಜೀತದಿಂದ ಬಿಟ್ಟುಕೊಡಲು ಬುಂಡಮ್ಮ ಇಚ್ಚಿಸುವುದಿಲ್ಲ. ಆದರೆ ತಂದೆ ನಿಂಗನ ಒತ್ತಾಯ ಮೇರೆಗೆ ಆತ ಶಾಲೆಗೆ ಸೇರಲು ಜೀತವನ್ನು ಬಿಡುತ್ತಾನೆ.

ಲಕ್ಕನ ದೊಡ್ಡಪ್ಪನ ಮಗ ಪುಟ್ಟಾರಿ ಈ ಊಳಿಗಮಾನ್ಯಶಾಹಿ ಪ್ರವಾಹದ ಎದುರಾಗಿ ಈಜ ಬಯಸರು ಯುವಕನಾಗಿದ್ದಾನೆ. ಈತ ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾಗುತ್ತಾನೆ. ಆದರೆ ಈ ಹುಡುಗಿಯ ಹಾದರ ಬಯಲಾದಾಗ ಬಿಟ್ಟು ಹೊರಬರುತ್ತಾನೆ. ಹೊರ ಬಂದ ನಂತರದಲ್ಲಿ ಪುಟ್ಟಾರಿ ಸೈನ್ಯಕ್ಕೆ ಹೋಗಲು ನಿರ್ಧರಿಸುತ್ತಾನೆ. ಈ ಸಮಯದಲ್ಲಿ ಸಂತೆಯಲ್ಲಿ ಲಕ್ಕನನ್ನು ಕಾಣುತ್ತಾನೆ. ಪುಟ್ಟಾರಿಗೆ ಲಕ್ಕನನ್ನು ಕಂಡರೆ ತುಂಬಾ ಪ್ರೀತಿ ಇದೆ. ಅದಕ್ಕೆ "ಅಳಬೇಡ ಕನ್ಲ. ತಮ್ಮ ಸುಮ್ಮಕಿರಿ. ನಸೀಬಿದ್ರೆ ಸೈನ್ಯದಿಂದ ಬದುಕಿ ಬತ್ತೀನಿ. ಇಂದ್ಕೆ ಬರುವಾಗ ಸುಮಾರಾಗಿ ಅಣ ಉಳುಸ್ಕಂಬತ್ತೀನಿ. ಆ ಅಣದಿಂದ ಸೊಂತಕ್ಕೆ ಜಮೀನು ತೆಕ್ಕೋತ್ತೀನಿ. ಆಗ ಈ ಊರಿನಾಗೆ ಒಬ್ಬ ಮನಸಾಂತ ಆಗಕ್ಕಿಲ? ಅಣ ಇರೋರ್ಗೆ ತಾನೇ ಈ ಊರನಾಗೆ ಮರ್ವಾದೆ?"

ದುಡಿದು ತರುವ ಹಣದಿಂದ ನಾವು ಭೂಮಿಯನ್ನು ಕೊಂಡು ಮನುಷ್ಯರಾಗೋಣ ಎಂಬ ಆಶಯವನ್ನು ವ್ಯಕ್ತಪಡಿಸುತ್ತಾನೆ.ಭೂಮಿಯಿಂದ ಊರಿನಲ್ಲಿ ಮರ್ಯಾದೆ ಮತ್ತು ಸ್ಥಾನಮಾನ ಹೆಚ್ಚಾಗುತ್ತದೆಂಬ ಭಾವನೆ ಪುಟ್ಟಾರಿಯಲ್ಲಿದೆ. ಪುಟ್ಟಾರಿಯ ಮನದಲ್ಲಿರುವ ಭೂ ಒಡೆತನ ಆಶೆ ವ್ಯಕ್ತಿಗತವಾಗಿದ್ದರೂ. ಆತ ಸಮಾಜದಲ್ಲಿ ಸ್ಥಾನಮಾನದ ಮೂಲಕ ಬದುಕುವ ಛಲವನ್ನು ವ್ಯಕ್ತಪಡಿಸುತ್ತಾನೆ. ಮೇಲ್ವರ್ಗದ ಜನತೆಯ ಸರಿಸಮಾನವಾಗಿ ಗೌರವ ಮರ್ಯಾದೆಗಳು ದಕ್ಕಬೇಕೆಂದರೆ ಭೂ ಒಡೆತನ ಮುಖ್ಯವೆಂದು ಪುಟ್ಟಾರಿಗೆ ಕಂಡು ಬರುತ್ತದೆ.

ಈ ಊರಿನ ಭೂಮಾಲೀಕರ ರಾಜಕೀಯ ಸೇಡಿಗೆ ಬುಳ್ಳಪ್ಪನ ಮಗ ಬಲಿಯಾಗಬೇಕಾದ ಸನ್ನಿವೇಶ ಬರುವುದನ್ನು ಕಾಣುತ್ತೇವೆ. ಗಂಗಪ್ಪನಲ್ಲಿ ಮೊದಲಿದ್ದ ಆಳು ಈಗ ತನ್ನ ಪ್ರತಿಸ್ಪರ್ಧಿ ಕ್ಯಾಟೆ ಬುಳ್ಳಪ್ಪನ ಮನೆಯಲ್ಲಿ ಇರುವುದನ್ನು ಸಹಿಸಲಾಗದೆ ಸಂಚು ಹೂಡಿ ಗಂಗಪ್ಪ ತನ್ನ ತೋಟಕ್ಕೆ ಕರೆಸಿಕೊಳ್ಳುತ್ತಾನೆ. ತೆಂಗಿನ ಕಾಯಿ ಕೀಳುವ ನೆಪದಲ್ಲಿ ಕಾಯಿ ಬಿದ್ದು ಆತನ ಕೈ ತೋಳುಗಳಿಗೆ ಬಲವಾದ ಪೆಟ್ಟು ಬಿದ್ದು ಕೈ ಹೋಗುತ್ತದೆ. ಈ ಭೂಮಾಲೀಕರ ಕ್ರೌರ್ಯದಿಂದಾಗಿ ಜೀತದಾಳುಗಳನ್ನು ನಡೆಸಿಕೊಳ್ಳುವ ಬಗೆ ಅವರ ಬದುಕಿನ ದುರಂತದತ್ತ ಸಾಗುತ್ತದೆ.

**ಕೊನೆಗೆ ಟಿಪ್ಪಣಿ**

೧. ಚದುರಂಗ,ವೈಶಾಖ ,ಪುಟ ೧೩೬

೨. ಅದೇ ಪುಟ ೧೯೧

## ೪.೨.೪ ನಾ.ಡಿಸೋಜ : ನ್ಯಾಯಯುತ ಭೂ ಹಕ್ಕಿಗಾಗಿ ಹೋರಾಟ

ಮಲೆನಾಡಿನ ಪ್ರದೇಶದಲ್ಲಿ ಕಾಗೋಡು ಚಳುವಳಿ ಹಿನ್ನೆಲೆಯಿಂದ ಇಲ್ಲಿನ ಸಮಸ್ಯೆಗಳನ್ನು ಹೋರಾಟದ ಬಗೆಹರಿಸಿಕೊಳ್ಳುವ ದೃಷ್ಟಿಕೋನವು ನಾ.ಡಿಸೋಜರ ಕತೆಕಾದಂಬರಿಗಳಲ್ಲಿ ವ್ಯಕ್ತವಾಗಿವೆ. ಲೇಖಕರು ಚಳುವಳಿ ಮತ್ತು ಚಳುವಳಿ ನಂತರ ಪರಿಣಾಮಗಳನ್ನು ಕತೆ ಕಾದಂಬರಿಗಳಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಈ ಲೇಖಕರ ಕೇಂದ್ರ ಪ್ರಜ್ಞೆ ಕಾಗೋಡುಚಳುವಳಿ,ಇದರಿಂದ ಸೃಜನಶೀಲ ಅಭಿವ್ಯಕ್ತಿಗಳಾಗಿ ಕತೆಕಾದಂಬರಿಗಳು ಹುಟ್ಟಿಕೊಂಡಿವೆ. ಕಾಗೋಡು ಚಳುವಳಿಯ ಹಿನ್ನೆಲೆ ಮುನ್ನೆಲೆಗಳನ್ನು ಸೃಜನಾತ್ಮಕವಾಗಿ ದಾಖಲು ಮಾಡುವುದು ಇವರ ಕತೆ ಕಾದಂಬರಿಗಳ ಪ್ರಮುಖವಾದ ಉದ್ದೇಶವಾಗಿದೆ. ಇವರ ಎಲ್ಲಾ ಕತೆಕಾದಂಬರಿಗಳ ಹೋರಾಟದಲ್ಲಿ ಪ್ರಗತಿಪರವಾದ ಆಶಯವನ್ನು ಗುರುತಿಸಬಹುದು. ಚಳುವಳಿ ಅನಿವಾರ್ಯ, ಚಳುವಳಿಯಿಂದ ಒಳ್ಳೆಯ ಆಯ್ಕೆಯಾಗಿದ್ದು, ಚಳುವಳಿಯನ್ನು ಮರೆಯಬಾರದು ಎಂಬ ಧೋರಣೆಯನ್ನು ಕತೆ ಕಾದಂಬರಿಗಳು ಒಳಗೊಂಡಿವೆ. ಅಂದರೆ ಇವು ಮುಂದಿನ ಜನಾಂಗಕ್ಕೆ ಮಾದರಿಯಾಗಿರಬೇಕು ಎಂಬುದು ಇವರ ಕತೆಕಾದಂಬರಿಗಳಲ್ಲಿ ಕಾಣುತ್ತೇವೆ. ಭೂ ರೈತ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿ ತಮ್ಮ ಕತೆ ಕಾದಂಬರಿಗಳಿಗೆ ವಸ್ತುವಾಗಿಸಿಕೊಂಡು ನಾ.ಡಿಸೋಜ ಬರೆಯತೊಡಗಿದ ಸನ್ನಿವೇಶದಲ್ಲಿ ಮಾರ್ಕ್ಸ್‌ವಾದ, ಸಮಾಜವಾದದ ಪ್ರಭಾವಗಳು ದಟ್ಟವಾಗಿದ್ದವು. ಇವರು ಯಾವುದೇ ಸಾಹಿತ್ಯ ಪಂಥಕ್ಕೆ ಅಂಟಿಕೊಳ್ಳದೆ ತಮ್ಮ ಬರವಣಿಗೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಈ ಕಥನಕಾರರ ಬಹುಪಾಲು ಕಥನಗಳಲ್ಲಿ ಭೂ ರೈತ ಸಂಬಂಧಿ ನೆಲೆಯಾದ ಗೇಣಿರೈತರ ಪ್ರಶ್ನೆ, ಭೂಮಾಲೀಕ ಪ್ರಶ್ನೆ, ಶೋಷಣೆಯ ಪ್ರಶ್ನೆ, ಸ್ವಾಭಿಮಾನದ ಪ್ರಶ್ನೆಗಳು ಪ್ರತಿಭಟನಾತ್ಮಕ ನೆಲೆಯಲ್ಲಿ ಭೂ ಸಮಸ್ಯೆಗೆ ಪರಿಹಾರ ಸೂಚಿಸಲು ಯತ್ನಿಸಿವೆ. ಇವರ ಕಥನಗಳಲ್ಲಿ ರೈತರು ಬಂಧಮುಕ್ತರಾಗಿ ಹೊರಬರುವ ಎದೆಗಾರಿಕೆ ಹಾಗೂ ದಿಟ್ಟತನವನ್ನು ಕಾಣುತ್ತೇವೆ. ಒಟ್ಟಾರೆ ಅವರ ಕಥನಗಳಲ್ಲಿ ನ್ಯಾಯಯುತವಾದ ಭೂ ಹಕ್ಕಿಗಾಗಿ ದಿಟ್ಟತನದಿಂದ ಹೋರಾಟ ನಡೆಸುವುದನ್ನು ಕಾಣಬಹುದಾಗಿದೆ.

ಲೇಖಕರು ಒಂದು ಘಟನೆಯನ್ನುಅಥವಾ ಒಂದು ಆಕರವನ್ನು ಕತೆಯ ವಸ್ತುವಾಗಿ, ಬಳಸಿಕೊಂಡು ಆ ಮೂಲಕ ಭೂ ಸಮಸ್ಯೆಗೆ ಪರಿಹಾರ ಸೂಚಿಸಲು ಯತ್ನಿಸುತ್ತಾರೆ. **ಕುರ್ಚಿ, ಹೆಡೆ, ಮಹಾದ್ವಾರ, ಅಭಿವೃದ್ಧಿಯ ಒಂದು ಪರಿ, ಮಂಜಿನಕಾನು, ಮುಳುಗಡೆ ಮತ್ತು ಕೊಳಗ** ಕಥನಗಳ ಮೂಲಕ ಇಂತಹ ಆಶಯಗಳನ್ನು ಗುರುತಿಸಬಹುದಾಗಿದೆ. ಭೂ ರೈತ ಪ್ರಶ್ನೆಕುರಿತಾಗಿ ನಾ.ಡಿಸೋಜ ಅವರ ಕಥನಗಳಲ್ಲಿ ತಾತ್ವಿಕವಾಗಿ ಹೀಗೆ ಗುರುತಿಸಬಹುದಾಗಿದೆ.

ನಾ.ಡಿಸೋಜ ಅವರ ಕಥನಗಳಲ್ಲಿ ಭೂ ಮತ್ತು ರೈತ ಪ್ರಶ್ನೆಗಳು ಸ್ವಾಭಿಮಾನಿ ನೆಲೆ, ಹಕ್ಕಿನ ನೆಲೆ, ಹೋರಾಟದ ನೆಲೆಗಳ ಮೂಲಕ ವ್ಯಕ್ತವಾಗುತ್ತವೆ. ಇವರ ಕಥನಗಳಲ್ಲಿ ಭೂಮಾಲೀಕ ರೈತರೊಂದಿಗೆ ಸಂಘರ್ಷಕ್ಕಿಳಿದು, ಭೂಮಾಲೀಕ ಸೋಲುವಂತಹ ಚಿತ್ರಣಗಳು ಕಂಡುಬರುತ್ತವೆ.ಗೇಣಿದಾರ ರೈತನ ಪಾತ್ರಗಳು ಭೂಮಾಲೀಕನ ಎದುರು ಸಮರ್ಥ ಎದುರಾಳಿಯಾಗಿ, ಮೂಡಿಬಂದಿವೆ. ಇಂತಹ ಅಂಶವನ್ನು ಅವರ ಹೆಡೆ, ಕುರ್ಚಿ, ಮಂಜಿನಕಾನು ಕಥನಗಳಲ್ಲಿ ಕಾಣಬಹುದು.ಇವರ ಕಥನಗಳಲ್ಲಿ ಭೂಮಾಲೀಕ ಟೊಳ್ಳಾಗಿ, ಅಹಂಕಾರ, ದರ್ಪಗಳಿಂದ ಭಂಗಕ್ಕೊಳಗಾಗುವ ಚಿತ್ರಣಗಳು ಕಂಡುಬರುತ್ತವೆ.ಭೂ ಹೋರಾಟದಲ್ಲಿ ನೇರವಾಗಿ ಭಾಗವಹಿಸುವ, ಪ್ರತಿಭಟಿಸುವ ಅಂಶಗಳು ಕಥನಗಳಲ್ಲಿ ವ್ಯಕ್ತವಾಗುತ್ತವೆ. ರೈತಪರವಾದ ಹೋರಾಟಗಳು ತುಳಿತಕ್ಕೊಳಗಾದ ಸಮುದಾಯದ ಹಿತವನ್ನು ಕಾಪಾಡುವ ಸಾಮುದಾಯಿಕ ಹೋರಾಟವಾಗಿ ಅವರ ಕಥನಗಳಲ್ಲಿ ವ್ಯಕ್ತಗೊಳ್ಳುತ್ತವೆ. ಇವರ ಒಟ್ಟಾರೆ ಕೃತಿಗಳು ಮಲೆನಾಡಿನ ಸತ್ವವನ್ನು ಹೀರಿ, ಅಲ್ಲಿನ ಸಮಸ್ಯೆಗಳನ್ನು ಸಾರ್ವತ್ರೀಕರಣಗೊಳಿಸುವ ಜೊತೆಗೆ ಈ ನೆಲದ ಸಮಸ್ಯೆಗಳನ್ನು ಸಮರ್ಥವಾಗಿ ಕಥನಗಳ ಮೂಲಕ ಧ್ವನಿಸುತ್ತವೆ.

ಚಳುವಳಿ ನಿಂತ ನೀರಲ್ಲ ನಿತ್ಯ ಸಾಗುವ ಚಲನಶೀಲ ಪ್ರಕ್ರಿಯೆ ಎಂಬುದನ್ನು ಕುರ್ಚಿ, ಹೆಡೆ, ಮಹಾದ್ವಾರ ಕತೆಗಳು ಸಾಬೀತು ಪಡಿಸುತ್ತವೆ. ಚಳುವಳಿ ಬೇರೆ ಬೇರೆ ಆಯಾಮ ಪಡೆದು, ಬೇರೆ ಬೇರೆ ಸ್ವರೂಪ ಪಡೆದು ಸಂಕೇತವಾಗಿ ಮೂಡಿವೆ. ಇವುಗಳು ಭೂಮಾಲೀಕ ವ್ಯವಸ್ಥೆಯ ವಿರುದ್ಧ ಸೆಡ್ಡು ಹೊಡೆಯುವುದನ್ನು ಕಾಣುತ್ತೇವೆ. ರೈತರು, ಕೂಲಿಕಾರ್ಮಿಕರು ಶೋಷಣೆಯ ಪರಮಾವಧಿ ಸಂದರ್ಭದಲ್ಲಿ ಭೂಮಾಲೀಕರ ವಿರುದ್ಧ ಸಿಡಿದೆದ್ದು

ನಿಲ್ಲುವ ಚಿತ್ರಣಗಳನ್ನು ಕಾಣುತ್ತೇವೆ. ಆದ್ದರಿಂದ ಚಳುವಳಿಯನ್ನು ಸಂಕೇತಗಳ ಮೂಲಕ ರೈತ ಸಮುದಾಯವನ್ನು ಎಚ್ಚರಿಕೆಯಾಗಿಡುವ ಆಶಯಗಳಾಗಿ ಕಾಣುತ್ತೇವೆ.

`**ಹೆಡೆ'** ಯು ಮಲೆನಾಡಿನ ಭಾಗದಲ್ಲಾದ ಕಾಗೋಡು ಸತ್ಯಾಗ್ರಹ ಕುರಿತ ಚಾರಿತ್ರಿಕ ಘಟನೆಯ ವಿವರವನ್ನು ವ್ಯಕ್ತಗೊಳಿಸುತ್ತದೆ. ಈ ಕತೆಯಲ್ಲಿ ನೇಗಿಲ ಬದಲು ತೆಂಗಿನ ಹೆಡೆ ಮಟ್ಟೆಯೇ ಪ್ರತಿಭಟನಾ ಸಂಕೇತವಾಗಿ ಬಂದಿದೆ. ಅಲ್ಲದೆ ಭೂಮಾಲೀಕರ ದೌರ್ಜನ್ಯದ ವಿರುದ್ಧ ಪ್ರತಿಭಟನಾ ಶಕ್ತಿಯಾಗಿ ಬಂದಿದೆ. ಹೀಗಾಗಿ ಹೆಡೆ ಕತೆಯು ಗೇಣಿ ರೈತರ ಮತ್ತು ಭೂಮಾಲೀಕರ ನಡುವಿನ ಆಕ್ರೋಶದ,ಪ್ರತಿಭಟನಾ ಸಂಕೇತವಾಗಿ ಮೂಡಿಬಂದಿದೆ. ನೇಗಿಲ ಬದಲಿಗೆ ಹೆಡೆಯನ್ನೇ ಹೊತ್ತು ಗೇಣಿ ರೈತರು ಪ್ರತಿಭಟಿಸುವುದು ಆ ಕಾಲದ ಶೋಷಣೆಯ ಸ್ವರೂಪ ಹಾಗೂ ಗೇಣಿ ರೈತರಲ್ಲಿದ್ದ ಆಕ್ರೋಶ,ರೊಚ್ಚನ್ನು ವ್ಯಕ್ತಪಡಿಸುತ್ತದೆ.

ಇಲ್ಲಿ ರೈತಸಮಸ್ಯೆಯ ಜೊತೆಗೆ ಭೂಮಾಲೀಕರಿಂದಾಗುತ್ತಿದ್ದ, ಬಿಟ್ಟಿದುಡಿಮೆ, ಹೆಚ್ಚು ಗೇಣಿ ನೀಡುವುದು, ಮೊದಲಾದ ಶೋಷಣೆ ಪ್ರಕಾರಗಳು ಕತೆಯಲ್ಲಿ ಕಂಡುಬರುತ್ತದೆ. ಈ ಕತೆ ಆರಂಭವಾಗುವುದು ಕಾಗೋಡು ರೈತ ಹೋರಾಟದ ದಿನಗಳಲ್ಲಿ. ವಾಸ್ತವವಾಗಿ ಹೋರಾಟ ಯಾವುದರಿಂದ ಆರಂಭವಾಯಿತು ಎಂಬ ಮೂಲ ಎಳೆಯನ್ನು ನಿರೂಪಕ ಇಲ್ಲಿ ಹೇಳುತ್ತಾನೆ. ಇದೆಲ್ಲ ಆರಂಭವಾಗಿದ್ದು ಗೇಣಿ ಅಳೆಯುವ ಕೊಳಗದಿಂದ. ಗೇಣಿ ಅಳೆದು ಕೊಡಲೆಂದು ಬತ್ತ ಹೇರಿಕೊಂಡು ಬಂದ ರೈತರು ತಾವು ಅರವತ್ತು ಸೇರಿನ ಸರಕಾರಿ ಕೊಳಗದಲ್ಲಿ ಗೇಣಿ ಅಳೆದುಕೊಡಲು ಮುಂದಾಗಿದ್ದಕ್ಕೆ ಗೌಡರು ನಿರಾಕರಿಸುತ್ತಾರೆ. ನಿಜವಾದ ರೈತ ಹೋರಾಟ ಆರಂಭವಾಗಿದ್ದು ಗೇಣಿ ಅಳೆಯುವ ಕೊಳಗದಿಂದಾಗಿ ಎಂಬುದು ತಿಳಿಯುತ್ತದೆ. ಈ ಅಳತೆಯ ಕೊಳಗದ ಮೋಸದಿಂದಾಗಿ ರೊಚ್ಚಿಗೆದ್ದು, ಗೇಣಿರೈತರು ಹೋರಾಟ ತೀವ್ರಗೊಳಿಸುತ್ತಾರೆ. ಮೋಸದ ಅಳತೆ ಕೊಳಗದಿಂದಾಗಿ, ಗೇಣಿರೈತರ ಕೆಂಗಣ್ಣಿಗೆ ಭೂಮಾಲೀಕ ಗುರಿಯಾಗಿ, ಭೂ ಪ್ರಶ್ನೆಯೇ ಮುಖ್ಯವಾಗುತ್ತದೆ. ಕತೆಯಲ್ಲಿ ಮತ್ತು ವಾಸ್ತವದಲ್ಲಿ ನಡೆದ ಘಟನೆಗಳು ಒಂದೇ ಆಗಿದ್ದರೂ ಕಾಲದ ಪರಿಧಿ ಬೇರೆಬೇರೆಯಾಗಿದೆ.

ಮಲೆನಾಡಿನ ಭಾಗದ ಭೂಮಾಲೀಕರಿಂದ ಕೊಳಗದ ಅಳತೆಯಿಂದಾಗುವ ಶೋಷಣೆಯ ಚಿತ್ರಣವಿದೆ. ಕಾಗೋಡಿನ ಒಬ್ಬ ಭೂಮಾಲೀಕ ಸಾವಿರಾರು ಎಕರೆ ಜಮೀನನ್ನು ಹೊಂದಿ, ನೂರಾರು ಗೇಣಿರೈತ ಕುಟುಂಬಗಳನ್ನು ನಿಯಂತ್ರಿಸುತ್ತದೆ. ಇದರ ವಿರುದ್ಧ ರೈತರು ಸಂಘಟಿತರಾಗುತ್ತಾರೆ.

ರೈತನಾಯಕನ ಮಾರ್ಗದರ್ಶನದಲ್ಲಿ ರೈತಸಂಘವನ್ನು ಕಟ್ಟಿಕೊಂಡು, ಗೇಣಿಕೊಡುವುದಿಲ್ಲವೆಂಬ ಸಂದೇಶವನ್ನು ಗೌಡರಿಗೆ ರವಾನಿಸುತ್ತಾರೆ. ಅಷ್ಟರಲ್ಲಿ ಭೂಮಾಲೀಕ ವಕೀಲರ ಸಲಹೆ ಪಡೆದು ಪೊಲೀಸ್ ಅಧಿಕಾರಿಗಳನ್ನು ತಮ್ಮ ಊರಿಗೆ ಕರೆಸಿಕೊಳ್ಳುತ್ತಾರೆ. ಗೌಡರು ತಮ್ಮ ಹೊಲದೊಳಗೆ ಯಾವ ಗೇಣಿದಾರನೂ ಪ್ರವೇಶಿಸಬಾರದೆಂದು ಆಜ್ಞೆ ಹೊರಡಿಸುತ್ತಾರೆ. ಈಗಾಗಲೇ ಭೂಮಾಲೀಕ ಗೌಡರ ಅನ್ಯಾಯದ ವಿರುದ್ಧ ಗೇಣಿದಾರರು ಸಂಘಟಿತರಾಗಿದ್ದಾರೆ. ಈ ಬಗ್ಗೆ, "ಪೊಲೀಸ್ರು . ಪೊಲೀಸ್ರು.. ಬರ್ಲಿ,... ಬರ್ಲಿ.... ಯಾರೂ ಹೆದರಬ್ಯಾಡಿ, ಎಂದ ರಾಮನಾಯಕ, ಅವನೇ ದನಿ ಎತ್ತರಿಸಿದ ಉಳುವವನೇ... ಹೊಲದೊಡೆಯ.. ಉಳುವವನೇ..... ಹೊಲದೊಡೆಯ.. ಗೇಣಿ ಪದ್ಧತಿ.... ನಾಶವಾಗಲಿ...... ಮಹಾತ್ಮಗಾಂಧೀಜಿ... ಜೈ.... ಏನೇ ಬರಲಿ.... ಒಗ್ಗಟ್ಟಿರಲಿ.."[೮] ಎಂಬ ಘೋಷಣೆಯ ಮೂಲಕ ಪೊಲೀಸ್ ಪಡೆಯನ್ನು ಎದುರಿಸಲು ಗೇಣಿದಾರ ರೈತರು ಸಿದ್ಧರಾದರು.

ಇಲ್ಲಿ ಏಕಕಾಲಕ್ಕೆ ಭೂಮಾಲೀಕ ವ್ಯವಸ್ಥೆಯ ಜೊತೆಗೆ ಅಧಿಕಾರಿಶಾಹಿ ಪೊಲೀಸ್ ವ್ಯವಸ್ಥೆ ಕೈಜೋಡಿಸಿ ಅವರ ಪರವಾಗಿ ನಿಲ್ಲುತ್ತದೆ. ಇದು ಗೇಣಿ ರೈತರನ್ನು ಕೆರಳಿಸಿ ಉಳುವವನೆ ಹೊಲದೊಡೆಯ ಎಂಬ ಆಶಯ ಮುಖ್ಯವಾಗುತ್ತದೆ. "ಗೌಡರೇ ಜಮೀನು ಉಳುಮೆ ಮಾಡುತ್ತಾರೇನು, ಗೌಡರೇ ಕಳೆಕಿತ್ತಾರೇನು" ಎಂಬ ಪ್ರಶ್ನೆಗಳನ್ನು ಗೇಣಿದಾರ ರೈತರು ಕೇಳುತ್ತಾರೆ. ಅಷ್ಟಕ್ಕೆ ಸಾಲದೆಂಬಂತೆ ಪುನಃ ಭೂಮಾಲೀಕ ಗೌಡ ಶಿವಮೊಗ್ಗೆಯ ವಕೀಲರ ಬಳಿ ಹೋಗಿ ಸಲಹೆ ಪಡೆಯುತ್ತಾರೆ. ಅವರ ಸಲಹೆಯಂತೆ ಮುಂದಿನ ಬಾರಿಯ ಫಸಲುಗಳನ್ನು ತಾವೇ ಕೊಯಿಸುವುದೆಂದು ನಿರ್ಧರಿಸುತ್ತಾರೆ. ಇತ್ತ ರೈತರೆಲ್ಲ ಉಳಲು ಗೌಡರ ಭೂಮಿಗೆ ಇಳಿದಾಗ ದೀವ್ರ ಚೊಟ್ಟನನ್ನು ಹೊಲದಿಂದ ಹೊರತಳ್ಳುವ ಯತ್ನ ಮಾಡುತ್ತಾರೆ. ಇಷ್ಟೇ ಸಾಲದೆಂದು ಅವನ ನೇಗಿಲನ್ನು ಕೊಚ್ಚಿ ಹಾಕುತ್ತಾರೆ. ಈಘಟನೆಯಿಂದಾಗಿ ರೈತರೆಲ್ಲಾ ಸಾಗರ ಪೇಟೆಯಲ್ಲಿ ಮೆರವಣಿಗೆ ತೆಗೆಯುತ್ತಾರೆ. ಸರ್ಕಾರಿ ಕೊಳಗದ ವಿವಾದ ದೂರಸರಿದು ಅದು ಉಳುವವನೇ ಹೊಲದೊಡೆಯ ಎಂಬ ಘೋಷಣೆಯತ್ತ ತಿರುಗುತ್ತದೆ. ಉಳುವವನ ಭೂ

ಒಡೆತನವೆಂಬುದು ನಿಜವಾದ ಹೋರಾಟವು ಹಕ್ಕಿನ ನೆಲೆಯಲ್ಲಿ ನಡೆಯುತ್ತದೆ.

ಸಾಗರ ಪೇಟೆಗೆ ತೆರಳಿದ್ದ ಗೇಣಿದಾರ ರೈತರ ತಂಡವು, ಕೊಳಗದ ಬಗ್ಗೆ ಮಾತನಾಡದೆ, ಗೇಣಿಯ ಕುರಿತು ಮಾತನಾಡದೇ ಗೇಣಿದಾರ ಪದ್ಧತಿ ನಾಶವಾಗಲಿ, ಉಳುವವನೇ ನೆಲದೊಡೆಯ ಎಂದು ಘೋಷಣೆ ಕೂಗುತ್ತಾರೆ. ಇಂತಹ ಹೋರಾಟದ ತೀವ್ರತೆಯನ್ನು ಗಮನಿಸಿ ಹೌಹಾರಿ, ನಿಂತನೆಲ ಸಡಿಲಗೊಂಡು ಕುಸಿಯುವಂತೆ ಗೌಡರಿಗೆ ಭಾಸವಾಗುತ್ತದೆ.

"ಓಹೋ ಹೋ.. ಕೈ ಮುಷ್ಟಿ ಕಟ್ಟಿ ಕೂಗಿಕೊಂಡ ಕೂಡಲೇ ಹೊಲ ಇವರದಾಗಿ ಬಿಡುತ್ತೆ. ಇವರಪ್ಪನ ಮನೆ ಗಂಟು... ತಟ್ಟೇಲಿಟ್ಟು ಕೊಡತೇವಿ.. ಬಾಗಿನ ಕೊಟ್ಟ ಹಾಗೆ. ಬೋಸುಡಿ ಮಕ್ಳು... ಕಾನೂನು ಇಲ್ವ... ಸರಕಾರ ಇಲ್ವ.. ಪೊಲೀಸ್ ಇಲ್ವ.... ಕೇಳಿದ ಕೂಡ್ಲೆ ಕೊಡಾಕೆ ಇದೇನು... ಸೊರ್ಲ ಮೀನಿನ ತುಂಡ.. "[೨] ಎಂದು ಭೂಮಾಲೀಕ ಹೂಂಕರಿಸುತ್ತಾನೆ.ಇಲ್ಲಿ ಭೂಮಾಲೀಕ ದರ್ಪವು ಈ ಮಾತಿನಿಂದ ವ್ಯಕ್ತವಾಗುತ್ತದೆ. ಈ ಮಾತು ಸಾಮಾನ್ಯ ಗೇಣಿದಾರನಲ್ಲಿ ಹೋರಾಟದ ಕೆಚ್ಚನ್ನು ಬಡಿದೆಬ್ಬಿಸುತ್ತದೆ.

ಈ ಅಂಶವನ್ನು ಗಮನಿಸಿದ ಗೌಡರು ಪುನಃ ಶಿವಮೊಗ್ಗದ ವಕೀಲರನ್ನು ಕಾಣಲು ಹೋಗುತ್ತಾರೆ. ಈ ವಕೀಲರ ಮಾರ್ಗದರ್ಶನದಂತೆ "ಈ ಚಳುವಳಿ ಸತ್ಯಾಗ್ರಹಾನ ಒಳಗಿನಿಂದ ಮುರೀಲಿಕ್ಕೆ ಆಗುತ್ತೋ ನೋಡಿ. ರೈತರಲ್ಲಿ ಹೆದರಿಕೆ ಹುಟ್ಟಿಸಿ... ಕಾನೂನು ಪೊಲೀಸರು ಅಂದ್ರೆ ಅವರು ಹಿಂಜರೀತಾರೆ. ನಾಳೆ ಗೇಣಿ ಜಮೀನಿನಿಂದ ತಮ್ಮನ್ನ ಹೊರಗೆ ಹಾಕ್ತಾರೆ ಅಂದ್ರೆ ಅವರು ಚಳವಳೀಲಿ ಭಾಗವಹಿಸದೇ ಹೋಗಬಹುದು... ಹೇಗೂ ಆ ಜಮೀನು ನಿಮ್ದು... ಅದರ ಮಾಲೀಕರು ನೀವು... ಯಾರನ್ನೇ ಆಗಲಿ ನಿಮ್ಮ ಜಮೀನಿನೊಳಗೆ ಬರದೇ ಇರೋ ಹಾಗೆ ತಡೆಯೋ ಹಕ್ಕು ನಿಮಗಿದೆ... ಇದನ್ನು ಕಾನೂನಿನ ಮೂಲಕ ಪ್ರಶ್ನಿಸೋ ಪ್ರಯತ್ನಾನ ಯಾವ ರೈತರೂ ಮಾಡಲಿಕ್ಕಿಲ್ಲ.... ನೀವು ನಾನು ಹೇಳಿದ ಹಾಗೆ ಮಾಡಿ.."[೩] ಎಂದು ಸಲಹೆಯನ್ನು ಕೊಡುತ್ತಾರೆ. ಇಲ್ಲಿ ಭೂ ಪ್ರಶ್ನೆಯೊಂದಿಗೆ ಕಾನೂನಿನ ಪ್ರಶ್ನೆಯನ್ನು ಎದುರಾಗುವುದನ್ನು ಕಾಣಬಹುದಾಗಿದೆ.

ವಕೀಲರ ಸಲಹೆ ಪಡೆದು ಭೂಮಾಲೀಕ ಹಿಂತಿರುಗಿ ಬರುತ್ತಾನೆ. ಭೂಮಾಲೀಕನ ಕ್ರೌರ್ಯ ಮತ್ತು ದುಡಿಯುವ ವರ್ಗದ ಸ್ವಾಭಿಮಾನದ ಕೆಚ್ಚು, ಬಡಿದೆಬ್ಬಿಸುವುದರ ಮೂಲಕ ಹೋರಾಟ ತೀವ್ರಗೊಳ್ಳುತ್ತದೆ. "ಅಣ್ಣಾವ್ರೆ..... ಗೌಡರು ತಿರುಗಿ ನೋಡಿದರು. ಕಿರಿಯ ತಮ್ಮ ಅಷ್ಟು ದೂರ ನಿಂತಿದ್ದ. ಏನು.... ಗೇಣಿದಾರ್ರು ನೇಗಿಲು ಬಿಟ್ಟು ಹೆಡೆ ಹಿಡಿದಿದಾರೆ.... ಹೆಡೆ?ಹೌದು ತೆಂಗಿನ ಹೆಡೆ ... ಎಷ್ಟೊಂತ ನೇಗಿಲು ತಂದಾರು... ಹೆಡೆಯಿಂದ ಹೊಲ ಉಳತಾರೆ.... ಆತ ನಕ್ಕ. ಹೆಡೆ ಹೆಡೆ ಎಂದು ಹಗುರವಾಗಿ ಮಾತನಾಡಿದ."[೪] ಗೇಣಿರೈತರು ಇಲ್ಲಿ ನೇಗಿಲು ಬದಲಿಗೆ ತೆಂಗಿನ ಹೆಡೆಯ ಮೂಲಕ ಭೂಮಾಲೀಕನಿಗೆ ಸವಾಲೆಸೆಯುತ್ತಾರೆ. ಭೂಮಾಲೀಕನ ವಿರುದ್ಧ ಪ್ರತಿಭಟನೆಯ ಅಸ್ತ್ರವಾಗಿ ನೇಗಿಲ ಬದಲು ತೆಂಗಿನ ಹೆಡೆಯೇ ಸವಾಲೊಡ್ಡುತ್ತದೆ .

ಚಳವಳಿ ತೀವ್ರತೆಯಿಂದಾಗಿ, ಚಳುವಳಿ ನಿಂತ ನೀರಲ್ಲ ಎಷ್ಟೇ ಹತ್ತಿಕ್ಕಲು ಯತ್ನಿಸಿದರೂ ನಿರಂತರವಾಗಿ ನಡೆಯುತ್ತದೆ ಎಂಬ ಸಂದೇಶವನ್ನು ನೀಡುತ್ತದೆ. ಈ ಸನ್ನಿವೇಶ ನೇಗಿಲ ಬದಲು ರೈತರು ತೆಂಗಿನ ಹೆಡೆ ಹಿಡಿದು ಬಂದಿರುವುದು ಗೌಡರಿಗೆ ವಿಚಿತ್ರವಾಗಿ ಕಂಡಿದ್ದು,ಮಾತ್ರವಲ್ಲ ಭಯಾನಕವಾಗಿ ಕೂಡ ಕಂಡಿತು. ತೆಂಗಿನ ಹೆಡೆಯ ಒಂದು ತುದಿ ಸಪೂರ, ಇನ್ನೊಂದು ತುದಿ ಬಿಚ್ಚಿದ ಹಾವಿನ ಹೆಡೆಯೇ, ನೆಲದಿಂದ ಮೇಲೆದ್ದು ಹಾವಿನ ಹೆಡೆಯ ಹಾಗೆ ತೂಗುವುದು ಗೇಣಿದಾರ ರೈತನ ಸ್ವಾಭಿಮಾನದ ಆಕ್ರೋಶ ವ್ಯಕ್ತವಾಗುವ ಬಗೆಯನ್ನು ಗುರುತಿಸಬಹುದಾಗಿದೆ.

ನೇಗಿಲ ಬದಲು ತೆಂಗಿನ ಹೆಡೆ ಹಾವಿನ ಹೆಡೆಯೆಂತೆ ಎದ್ದು ಕಾಣುವುದನ್ನು ಕಂಡು ಭೂಮಾಲೀಕ ವಿಚಾರ ಮಾಡುತ್ತಾನೆ. "ಗೌಡರು ವಿಚಾರ ಮಾಡುತ್ತ ನಿಂತರು. ರೈತರ ಹೆಗಲ ಮೇಲಿನ ಹೆಡೆ ಅವರ ತಲೆಗೂ ಮೇಲೆ ನಿಗುರಿ ನಿಂತು ಹಾವಿನ ಹೆಡೆಯ ಹಾಗೆಯೇ ಕಾಣುತ್ತಿದ್ದದನ್ನು ಮಾತ್ರ ಅವರಿಂದ ನೋಡಲಾಗಲಿಲ್ಲ."[೫] ಇಲ್ಲಿ ಅರಿವಿನ ಪ್ರಜ್ಞೆಯಿಂದ ಚಿಂತಿಸುತ್ತಲೇ ಚಳುವಳಿಯು ತೀವ್ರತೆ ಕಂಡು ಭೂಮಾಲೀಕ ಭಯಗೊಳ್ಳುತ್ತಾನೆ. ಗೇಣಿರೈತ ಸ್ವಾಭಿಮಾನದಿಂದ,ತಮಗಾಗುತ್ತಿದ್ದ, ಶೋಷಣೆಯಿಂದ ಅನ್ಯಾಯದಿಂದ ಎಚ್ಚೆತ್ತ ಸಂಕೇತವಾಗಿ ಹೆಡೆ ಕಂಡುಬರುತ್ತದೆ. ಗೇಣಿದಾರ ರೈತ ಶೋಷಣೆಯಿಂದ ಮುಕ್ತನಾಗಲು ಎಚ್ಚೆತ್ತು ಕೊಂಡರೆಂಬುದೇ, ಭೂಮಾಲೀಕನಿಗೆ ಒಂದು ರೀತಿಯ ಶಾಕ್ ಆಗುತ್ತದೆ.

ಭೂಮಿ ಎನ್ನುವುದು ಆತ್ಮವಿಶ್ವಾಸದ ಸ್ವಾಭಿಮಾನ,ಧೈರ್ಯ ತುಂಬುವಂಥ ಪರಿಕಲ್ಪನೆಯಾಗಿವೆ. ಇವು

ವ್ಯಕ್ತಿ ಸಹಜವಾಗಿ ಜಮೀನ್ದಾರಿ ವ್ಯವಸ್ಥೆಯ ವಿರುದ್ಧವಾಗಿ ರೈತರು ನಿಲ್ಲುತ್ತಾರೆ. ಇಲ್ಲದವರು ಆರ್ಥಿಕ ರಾದವರು ಅನಿವಾರ್ಯವಾಗಿ ಜಮೀನ್ದಾರಿ ವ್ಯವಸ್ಥೆಯ ಕಬಂಧ ಬಾಹುಗಳಲ್ಲಿ ಸಿಕ್ಕಿ ನರಳುತ್ತಾರೆ. ಇಂಥ ನರಳುವಿಕೆಯನ್ನೇ ಅತೀ ತಲುಪಿದಾಗ ಹೋರಾಟ ರೂಪುಗೊಳ್ಳುತ್ತದೆ. ಇಂಥ ಹೋರಾಟ ಪ್ರಕ್ರಿಯೆಯನ್ನು ಕೂಡಾ ಇವರ ಕತೆಗಳಲ್ಲಿ ಇವೆ.

ಕುರ್ಚಿ ಮತ್ತು ಮಹಾದ್ವಾರ ಕತೆಗಳೆರಡರಲ್ಲೂ ಇಂಥ ಆಶಯಗಳ ಸಾಮ್ಯತೆಯನ್ನು ಕಾಣುತ್ತೇವೆ. ಕುರ್ಚಿ ಕತೆಯಲ್ಲಿ ನೇರವಾಗಿ ಜಟ್ಯಾನಾಯ್ಕನ ಪಾತ್ರವೇ ಮುಖ್ಯ ಘಟನೆಯನ್ನು ವಿವರಿಸುತ್ತದೆ. ಮಹಾದ್ವಾರ ಕತೆಯಲ್ಲಿ ಪುಟಿಯಾನಾಯ್ಕನ ಹೆಂಡತಿ ಹನುಮಿ ತನ್ನ ಗಂಡನ ಪೌರುಷ ಮತ್ತು ಸ್ವಾಭಿಮಾನ ಕುರಿತು ತುಂಬು ಹತ್ತಿರದಿಂದ ವಿವರಿಸುತ್ತಾಳೆ. ಜೊತೆಗೆ ಆಕೆ ನೀಡುವ ವಿವರಗಳ ಕಾಲವು ಕುರ್ಚಿ ಕತೆಯ ಕಾಲವು ಬೇರೆಯಾದ ನೆಲೆಯಲ್ಲಿ ವ್ಯಕ್ತವಾಗುತ್ತದೆ. ಈ ಎರಡೂ ಕತೆಗಳ ಪಾತ್ರಗಳು ಒಂದೇ ಉದ್ದೇಶವನ್ನು ಹೇಳಲು ಹೊರಟಿದ್ದರೂ ಹೇಳುವ ಕಾಲದ ವ್ಯತ್ಯಾಸವನ್ನು ಕಾಣುತ್ತೇವೆ.ಮಹಾದ್ವಾರ ಕತೆಯು ನಿರೂಪಣಾ ಶೈಲಿಯಲ್ಲಿ ವಿವರಿಸಲು ಯತ್ನಿಸಿದರೆ, ಕುರ್ಚಿ ಕತೆಯಲ್ಲಿ ಪಾತ್ರವೇ ಮುಖ್ಯವಾಗಿದೆ.

"**ಕುರ್ಚಿ**" ಕತೆಯಲ್ಲಿ ಗೇಣಿದಾರ ಜಟ್ಯಾನಾಯ್ಕ,ದರ್ಪಿಷ್ಟ ಭೂಮಾಲೀಕನಿಗೆ ಸವಾಲೊಡ್ಡುತ್ತಲೇ ಸಾಯುವವರೆಗೂ ಸ್ವಾಭಿಮಾನಿಯಾಗಿ ಬಾಳಿದ ಚಿತ್ರಣ ಕಾಣುತ್ತೇವೆ. ಇಲ್ಲಿ ಕುರ್ಚಿ ಪ್ರತಿಮೆಯಾಗಿ ಪ್ರಧಾನ ಪಾತ್ರವಹಿಸುತ್ತದೆ. ಕುರ್ಚಿಯೇ ಭೂಮಾಲೀಕತ್ವ ವಿರುದ್ಧದ ಸವಾಲಾದ ಸಂಕೇತವಾಗಿ ಕಂಡುಬರುತ್ತದೆ. ಈ ಕುರ್ಚಿ ಆ ಕಾಲದ ಸಾಮಾಜಿಕ ಸ್ಥಾನಮಾನದ ಸಂಕೇತವಾಗಿದ್ದು, ಭೂಮಾಲೀಕನಿಗೆ ಎದುರಾಳಿಯಾಗಿ ಬಂದಿದೆ. ಮಾತ್ರವಲ್ಲದೆ, ಕುರ್ಚಿ ಬಗೆಗಿನ ಕಾಳಜಿಗಳು, ಸಮಾಜದಲ್ಲಿ ತೋರುತ್ತಿದ್ದ ಗೌರವಾದರಗಳಿಂದಾಗಿ ಕುರ್ಚಿಗೆ ಮಹತ್ವ ಬಂದಿದೆ. ಮಲೆನಾಡ ಗೇಣಿದಾರ ರೈತರ ಬದುಕಿನಲ್ಲಿ ಕಣಸೆ ಜಟ್ಯಾನಾಯ್ಕ ಸ್ವಾಭಿಮಾನದ ಕಿಡಿಯಾಗಿ, ರೈತನಾಯಕನಾಗಿ ಕಂಡುಬರುತ್ತಾನೆ.

ಈ ಕತೆಯಲ್ಲಿ ಗೇಣಿರೈತ ಸ್ವಾಭಿಮಾನಿಯಾಗಿ ಬದುಕುವ ಸ್ವಾಭಿಮಾನಿ ನೆಲೆಯಲ್ಲಿ ಕಣಸೆಜಟ್ಯ ಬದುಕುತ್ತಾನೆ. ಸಮಾನ ಅವಕಾಶ ಸಮಾನತೆಯನ್ನು ಕಾಣುವ ನಿಟ್ಟಿನಲ್ಲಿ ಕತೆಯಲ್ಲಿ ಬರುವ ಕಣಸೆಜಟ್ಯ ಭೂಮಾಲೀಕರಿಗೆ ದೊಡ್ಡ ಸವಾಲಾಗುತ್ತಾನೆ.,"ಇನ್ನೇನು ನಾಟಕ ಆರಂಭವಾಗಬೇಕು. ಜಟ್ಯಾನಾಯ್ಕ ಜನರ ನಡುವೆ ಕಾಣಿಸಿಕೊಂಡ. ಅರೆ, ಅವನ ಕೈಯಲ್ಲೂ ಒಂದು ಮರದ ಕುರ್ಚಿ. ಆತ ಮುಂದೆ ಮುಂದೆ ಬಂದ. ರಂಗದ ಹತ್ತಿರಕ್ಕೇನೆ ಬಂದ. ಬೆಳಕಿರುವ ಜಾಗವನ್ನೇ ಆರಿಸಿಕೊಂಡ. ಗೌಡರ ಎದುರೇ ಕುರ್ಚಿ ಇರಿಸಿದ. ಅಷ್ಟೇ ಜರ್ಬಿನಿಂದ ಕುಳಿತ. ಸಣ್ಣಗೆ ನಗೆಯ ಅಲೆ ಎದ್ದಿತು. ಯಾರು?ಜಟ್ಯಾನಾಯ್ಕನ?ಇದೀಗ ಗಮ್ಮತ್ತು ಅಲ್ವ?ಕುರ್ಚಿ ಅವಂದೆ ಅಲ್ವ... ಕೂರಲಿ ಬಿಡು... ನೀನೂ ಇದ್ರೆ ತೊಕೊಂಡು ಬಾ.... ಯಾರೋ ಸಿಳ್ಳನೆ ಸೀಟಿ ಹೊಡೆದರು. ಮರುಕ್ಷಣದಲ್ಲಿ ಇನ್ನೊಂದು . ಹೌದೋ ಅಲ್ಲವೋ ಅನ್ನುವ ಹಾಗೆ ಚಪ್ಪಾಳೆ. ಗೌಡರು ಮಿಸುಕಾಡಿದರು, ಅತ್ತಿತ್ತ ನೋಡಿದರು. ನಗು, ಕೇಕೆ. ಚಪ್ಪಾಳೆ, ಸಿಳ್ಳು ಕಡಿಮೆಯಾಗಲಿಲ್ಲ. ಅವರು ಜಟ್ಯಾ ನಾಯ್ಕನತ್ತ ತಿರುಗಿದರು. ಕಾಲ ಮೇಲೆ ಕಾಲು ಹೇರಿಕೊಂಡು ಕೂತಿದ್ದ ಆತ."[೬]

ಇದು ಮಲೆನಾಡ ಬದುಕಲ್ಲಿ ಗೇಣಿದಾರ ರೈತ ಭೂಮಾಲೀಕ ಅಥವಾ ಗೌಡರ ಎದುರು ಕೂರುವ ಹಾಗಿರಲಿಲ್ಲ. ಈ ರೀತಿ ಕೂರುವ ಗೇಣಿದಾರ ರೈತರಲ್ಲಿ ಕಣಸೆ ಜಟ್ಯಾ ಸ್ವಾಭಿಮಾನ ಮೂಡಿಸಿದ್ದರೆ, ಅದು ಗೌಡರಿಗೆ ಅವಮಾನದ ಸಂಕೇತವಾಗಿ ಕಂಡುಬರುತ್ತದೆ. ಆದರೆ ಜಟ್ಯಾ ಕುರ್ಚಿಯಲ್ಲಿ ಕಾಲಮೇಲೆ ಕಾಲು ಹೇರಿಕೊಂಡು ಕೂತಿದ್ದುದು ಗೌಡರಿಗೆ ದೊಡ್ಡ ಅವಮಾನವಾಗಿ ಕಂಡುಬರುತ್ತದೆ. ಕುರ್ಚಿಯು ಗೌಡರ ದರ್ಪ ಆಕ್ರೋಶ, ಶೋಷಣೆ ಮೂಲಕ, ಪ್ರತಿಭಟಿಸಲು ಅಸ್ತ್ರವಾಗಿ ಬಂದಿದೆ. ತನ್ನ ಕುರ್ಚಿಯ ಮೇಲೆ ಕೂರುವ ಕಣಸೆಜಟ್ಯಾನನ್ನು ನೋಡಿ ಇಡೀ ಗೇಣಿದಾರ ಸಮುದಾಯವು, ಆತನ ಸ್ವಾಭಿಮಾನಕ್ಕೆ ಮೆಚ್ಚುಗೆ ವ್ಯಕ್ತಪಡಿಸುತ್ತದೆ. ಕುರ್ಚಿಯಿಂದಾಗಿ ಸ್ವಾಭಿಮಾನದ ಕಿಡಿಯಾಗಿ ಇಡೀ ಸಮುದಾಯಕ್ಕೆ ಜಟ್ಯನಾಯ್ಕ ನಾಯಕತ್ವವಹಿಸಿಕೊಳ್ಳುತ್ತಾನೆ. ಕುರ್ಚಿಯು ಮೂಲಕ ಸ್ವಾಭಿಮಾನವನ್ನು ಗಳಿಸುವ ಮತ್ತು ಶೋಷಣೆಯನ್ನು ಪ್ರತಿರೋಧಿಸುವ ಸಂಕೇತವಾಗಿ ಜಟ್ಯನಾಯ್ಕ ಬರುತ್ತಾನೆ.

ಈತ ತನ್ನದೇ ಆದ ಸ್ವಂತ ಭೂಮಿಯನ್ನು ಹೊಂದಿದ್ದಾನೆ ಎಂಬ ವಿವರ ಈ ಕತೆಯಲ್ಲಿ ದೊರೆಯುತ್ತದೆ. ಜಟ್ಯಾನಿಗೆ ಒಂದೂವರೆ ಎಕರೆ ಹೊಲ ಇದೆ. ಇವನಿಗಿಷ್ಟು ಅಹಂಕಾರ ಬಂತೆ? ಈವರೆಗೆ ಯಾರೂ ಹೀಗೆ ಕುರ್ಚಿ

ಹಾಕಿಕೊಂಡು ಕೂತಿರಲಿಲ್ಲ ಗೌಡರು ಭಾವನೆ ತಳೆಯುತ್ತಾರೆ. ತಟ್ಟನೆ ಎದ್ದರು ಗೌಡರು. ತಮ್ಮ ಕುರ್ಚಿ ತೆಗೆದು ನೆಲಕ್ಕೆ ಬಡಿದರು. ಆ ರಭಸಕ್ಕೆ ಆ ಕುರ್ಚಿ ಮುರಿದು ಬಿತ್ತು. ಜನರ ನಡುವಿನಿಂದ ಧಡಧಡನೆ ನಡೆದು ಮನೆಗೆ ಹೋದರು. ಇಲ್ಲಿ ಗೌಡರ ಕುರ್ಚಿ ಮುರಿದು ಬಿದ್ದ ಸಂಕೇತ ಆತನ ದರ್ಪ ದೌರ್ಜನ್ಯ ಊಳಿಗಮಾನ್ಯಶಾಹಿಯ ಧೋರಣೆಯ ಅಂತ್ಯಕಾಲವನ್ನು ಸೂಚಿಸುತ್ತದೆ.

ಜಟ್ಯಾನಾಯ್ಕನಿಗೆ ಒಂದೂವರೆ ಎಕರೆ ಸ್ವಂತ ಭೂಮಿ ಇದೆ ಹಾಗಾಗಿ, ಯಾರ ಹಂಗೂ ಇಲ್ಲದೆ, ಸ್ವಾಭಿಮಾನಿ ರೈತನಾಗಿ ಕಂಡುಬರುತ್ತಾನೆ. ಇಲ್ಲಿ ಎದ್ದುಕಾಣುವ ಅಂಶವೆಂದರೆ ಯಾರ ಮುಲಾಜಿಗೂ,ಯಾವ ಶೋಷಣೆಗೂ ಜಗ್ಗದೆ ನಿಲ್ಲುವುದಾಗಿದೆ. ಇಲ್ಲಿ ಭೂ ಪ್ರಶ್ನೆಯಿಂದ, ಅಸ್ತಿತ್ವ ಪ್ರಶ್ನೆ, ಸ್ವಾಭಿಮಾನದ ಪ್ರಶ್ನೆ, ಶೋಷಣೆ ವಿರುದ್ಧ ಎದ್ದು ನಿಲ್ಲುವ ಕಣಸೆ ಜಟ್ಯನ ಪಾತ್ರದಲ್ಲಿ ಮಾತ್ರ ಕಾಣುತ್ತೇವೆ. ಇದೇ ಕಾಲಕ್ಕೆ ದುರಂಹಕಾರಿ ಭೂಮಾಲೀಕ ದರ್ಪ, ದೌರ್ಜನ್ಯಗಳಿಗೆ ಸ್ವಾಭಿಮಾನ ಪ್ರತೀಕವಾಗಿ ಕುರ್ಚಿ ಎದಿರೇಟು ನೀಡುತ್ತದೆ. ಭೂಮಾಲೀಕತ್ವದ ಊಳಿಗಮಾನ್ಯಶಾಹಿ ವ್ಯವಸ್ಥೆಯನ್ನು ಮುರಿಯುವ ಸ್ವಾಭಿಮಾನಿ ರೈತನಾಗಿ ಬದುಕುವ ಛಲವನ್ನು ಧ್ವನಿಸುತ್ತದೆ.

"ಮಹಾದ್ವಾರ" ಕತೆ ಆರಂಭವಾಗುವುದು ರಾಜಕಾರಣಿಗಳು ಮುಖ್ಯಮಂತ್ರಿಗಳು, ಮಂತ್ರಿಮಹೋದಯರು ರೈತ ಅಧಿವೇಶನಕ್ಕೆ ರೈತ ಹೋರಾಟ ಕುರಿತ ಸಮಾವೇಶದಲ್ಲಿ. ಈ ಸಭೆ ಸೇರಲು ಊರಿಂದ ಲಾರಿ ಬಸ್ಸುಗಳಲ್ಲಿ ಜನರನ್ನು ಹಣಕೊಟ್ಟು ಕರೆ ತರುತ್ತಾರೆ. ಈ ಪುಟಿಯಾನಾಯ್ಕನ ಹೋರಾಟ ಜೀವನವು ಇತಿಹಾಸ ಪುಟ ಸೇರಿದ್ದರಿಂದ ಈ ಸ್ವಾಭಿಮಾನಿ ರೈತ ಹೋರಾಟಗಾರನ ಕುರಿತು ಸಮಾವೇಶ ಏರ್ಪಡಿಸಲಾಗಿರುತ್ತದೆ. ಈ ಹೋರಾಟದ ಬಗ್ಗೆ ಆಧುನಿಕ ಪೀಳಿಗೆಯ ಜನರಿಗೆ ಈ ಬಗ್ಗೆ ಮಾಹಿತಿ ಇರುವುದಿಲ್ಲ. ಇದನ್ನು ಸ್ಮರಿಸುವ ರೂಪದಲ್ಲಿ ಸಮಾರಂಭವನ್ನು ಏರ್ಪಡಿಸಲಾಗಿರುತ್ತದೆ. ಈ ರಾಜಕೀಯ ನಾಯಕರ ಉದ್ದೇಶವೇ ಬೇರೆಯೆಂಬುದನ್ನು ಕತೆಯು ಧ್ವನಿಸುತ್ತದೆ.

ಶೋಷಣೆಯ ವಿರುದ್ಧ, ಸ್ವಾಭಿಮಾನದ ದನಿಯಾಗಿ, ಭೂ ಒಡೆಯನಾಗುವ ಆಶಯವಾಗಿ ಕತೆಯ ನಿರೂಪಣೆಯಲ್ಲಿ ವ್ಯಕ್ತವಾಗುತ್ತದೆ. ಪುಟಿಯಾನಾಯ್ಕನ ಹೆಂಡತಿ ಹನುಮಿ ತನ್ನ ಗಂಡನ ಹೆಸರನ್ನು ಮಹಾದ್ವಾರದ ಹಾಕಿರುವುದನ್ನು ನೋಡಲು ಸಮಾರಂಭ ನಡೆಯುವ ಸ್ಥಳಕ್ಕೆ ಬರುತ್ತಾಳೆ. ಹನುಮಿ ಮಹಾದ್ವಾರದಲ್ಲಿದ್ದ ತನ್ನ ಗಂಡನ ಹೆಸರನ್ನು ನೋಡುತ್ತಲೇ ತನ್ನ ಹಿಂದಿನ ಬದುಕಿ ನೆನಪಿನ ಸುರಳಿಗಳು ಬಿಚ್ಚತೊಡಗುತ್ತವೆ.

ಹನುಮಿ ಹೇಳುವಂತೆ, ಎಲ್ಲಿಯೇ ಪ್ರದರ್ಶನವಿರಲಿ ತನ್ನ ಗಂಡ ಪೌರುಷದಿಂದ, ಗೌಡರ ಎದುರು ಕುರ್ಚಿಹಾಕಿಕೊಂಡು ಕೂತು ನಾಟಕನೋಡುವುದನ್ನು ಅಭಿಮಾನದಿಂದ ನೆನಪಿಸಿಕೊಳ್ಳುತ್ತಾಳೆ. ಜೊತೆಗೆ ತನ್ನ ಗಂಡ ಸ್ವತಂತ್ರ ಬೇಸಾಯಗಾರನಾಗಬೇಕೆಂಬ, ಹಂಬಲದಿಂದ ತನ್ನ ಸ್ವಂತ ಭೂಮಿಯನ್ನು ಉತ್ತಿಬಿತ್ತಿ ಬೆಳೆಯಬೇಕೆಂಬ ಹಂಬಲವನ್ನು ಆಕೆ ವ್ಯಕ್ತಪಡಿಸುತ್ತಾಳೆ. "ಸೊಸಂತ್ರ ಬೇಸಾಯ ಮಾಡನ ಅಂದ್ರೆ ಈ ಗೌಡ್ರು ಸುತ್ತಮತ್ತ್ಲ ಗೇಣಗಲ ಜಾಗ ಬಿಟ್ಟಿಲ್ಲ... ಬೇರೆ ಏನಾದ್ರು ಮಾಡುವ ಅಂದ್ರೆ ಗಳೇವು ಕಟ್ಕೋದು ಆಲ ಹೊಡಿಯೋದು ಬಿಟ್ರೆ ನಮಗೆ ಬೇರೆ ಕೆಲಸ ಬರಾಕಿಲ್ಲ... ಅನ್ನುತ್ತಿದ್ದ"[೭]

ಪುಟಿಯಾನಾಯ್ಕ ಚಳುವಳಿಯಲ್ಲಿ ಭಾಗವಹಿಸಿ ಜೈಲಿಗೆ ಹೋಗಿಬಂದಿರುತ್ತಾನೆ. ಈ ಭೂ ಹೋರಾಟ ವಿಫಲವಾದಾಗ ಚಳುವಳಿಯಲ್ಲಿ ಭಾಗವಹಿಸಿದ್ದ ಗೇಣಿ ರೈತರು ಪುನಃ ಭೂಮಾಲೀಕರ ಗೇಣಿರೈತರಾಗಿ ಮರಳುತ್ತಾರೆ. ಆದರೆ ಪುಟಿಯಾನಾಯ್ಕ ಮಾತ್ರ ಸ್ವಾಭಿಮಾನಿಯಾಗಿ ಭೂಮಾಲೀಕರ ಬಳಿ ಹೋಗದೆ ಉಳಿಯುತ್ತಾನೆ. ಸ್ವಾಭಿಮಾನಿಯಾದ ಈತ ಭೂಮಾಲೀಕರ ಬಳಿ ಹೋಗದೆ ಸ್ವಾಭಿಮಾನಿಯಾಗಿ ಬದುಕುತ್ತಾನೆ. "ಹನುಮಿ... ಸಂಗ್ತ್ಯಾಕೋ ಇದು ಸರಿ ಬರಲ್ಲ ಯಾವ ಭೂಮಾಲೀಕರು ಬೂಟುಗಾಲಿಂದ ನಮ್ಮ ಒದೆಸಿದರೂ ಅವರ ಕಾಲಬುಡಕ್ಕೆ ಮತ್ತೆ ಹೋಗಾದ. ಹಳ್ಳಿಯಾಗೆ ಎಲ್ರು ನನ್ನ ದಡ್ಡ ಅಂತ ಕರೀತಿದಾರೆ.. ಅಂದ ಹಾಗೆ ನಾನು ಗುಲಾಮಗಿರಿ ಒಪ್ಪಿಕೊಂಡಿದ್ದಿದ್ರೆ ಈಗ ಭೂಮಾಲೀಕ ಆಗತಿದ್ದೆ ನೋಡು."[೮]

ತಲೆತಲಾಂತರದಿಂದ ಇದ್ದ ಗುಲಾಮಗಿರಿ ವಿರೋಧಿಸುತ್ತಿದ್ದ ಈತ ಕೊನೆಯವರೆಗೂ ಸ್ವಾಭಿಮಾನಿಯಾಗಿ ಬದುಕುತ್ತಾನೆ. ಆದರೆ ತಾನು ಸ್ವತಂತ್ರ ಭೂಮಾಲೀಕನಾಗಬೇಕೆಂಬ ಹಂಬಲ ಕುತ್ತಿಗೆಯವರೆಗೂ ಇದೆ. ಆದರೆ ಭೂಮಾಲೀಕರಿಂದ ದಾಕ್ಷಿಣ್ಯದಿಂದ ನೀಡುವ ಭೂಮಿಯಿಂದ ದೂರವಿರುತ್ತಾನೆ.

ಈ ಕುರಿತು "ಹಾಗಂತ ನಂಗೇನೂ ಬೇಜಾರಿಲ್ಲ ಬುಡು... ನಾನೊಂದು ಸೊಸಂತ್ರ ಜೀವನ ಮಾಡಿಕೊಂಡು ಬಂದ್ನಲ್ಲ...ಆದರೆ ಕೃಷಿ ಕೂಲಿಕಾರರಾಗಿಯೇ ಉಳಿದ ಇವರ ಮನಸ್ಸಿನಲ್ಲಿ ಒಂದು ಆಸೆ ಇತ್ತು. ಸ್ವಂತಕ್ಕಾಗಿ ಒಂದಿಷ್ಟು ಜಮೀನು ಮಾಡಬೇಕು ಎಂಬ ಆಸೆ."[6] ಇಲ್ಲಿ ನಿರೂಪಕ ಪುಟಿಯಾನಾಯ್ಕನ ಮನದೊಳಗಿನ ಇಂಗಿತವನ್ನು ಭೂಮಾಲೀಕನಾಗುವ ಹಂಬಲದ ಮೂಲಕ ವ್ಯಕ್ತವಾಗುತ್ತದೆ. ಗೌಡರ ಜಮೀನು ಬೇಡದಿದ್ದರೂ ಆತನಿಗೆ ತಾನು ಸ್ವತಂತ್ರ ಭೂಮಾಲೀಕನಾಗಬೇಕೆಂಬ ಆಕಾಂಕ್ಷೆ ಆತನ ಮನದಾಳದಲ್ಲಿ ಬೇರೂರಿರುವುದನ್ನು ನಿರೂಪಕರು ವ್ಯಕ್ತಪಡಿಸುತ್ತಾರೆ. ಈ ಕತೆಯಲ್ಲಿ ಕಾನೂನಿನ ಪ್ರಶ್ನೆಯು ಮುಖ್ಯವಾಗಿ ಕಂಡುಬರುತ್ತದೆ. ಚಳುವಳಿ ನಡೆದ ನಂತರದಲ್ಲಿ ಭೂ ಸುಧಾರಣಾ ಕಾನೂನು ಜಾರಿಗೆ ಬಂದಿರುವ ವಿಚಾರ ಕತೆಯಲ್ಲಿ ಪ್ರಸ್ತಾಪವಾಗುತ್ತದೆ. ಈ ಕಾನೂನಿನ ಮೂಲಕವಾದರೂ ಮೂಗರ್ಜಿಯನ್ನು ಹಾಕಿ, ಪುಟಿಯನಾಯ್ಕ ಭೂಮಿ ಪಡೆಯಲು ಆತ ಆಸಕ್ತಿ ತಳೆಯುತ್ತಾನೆ.

"ಹೀಗೆಂದೇ ಇವರು ಕಣಸೆಹಳ್ಳದ ಕೆಳಗೆ ಎರಡು ಎಕರೆ ದರಖಾಸ್ತು ನೋಡಿ ಅದಕ್ಕೆ ಅರ್ಜಿ ಹಾಕಿದರು. ತಮ್ಮ ಹೆಸರಿಗೆ ಜಮೀನು ಮಾಡಿಕೊಡುವಂತೆ ಕೇಳಿದರು. ಈಗ ನಾನು ಜಮೀನು ಮಾಡಲು ಆರಂಭಿಸುತ್ತೇನೆ. ದಂಡದ ಕಂದಾಯ ಕೊಡುತ್ತೇನೆ. ಮುಂದೆ ಅದನ್ನು ನನ್ನ ಹೆಸರಿಗೆ ಮಾಡಿಕೊಡಿ ಎಂದು ರೇವಣಿ ಇನ್ಸಪೆಕ್ಟರಿಗೆ ಮತ್ತೆ ಯಾರು ಯಾರಿಗೋ ಕೇಳಿಕೊಂಡರು."[೧೦] ಹನುಮಿಯ ಮಾತಿನಲ್ಲಿ ವ್ಯಕ್ತವಾಗುವಂತೆ ಆತ ಸರ್ಕಾರಿ ಭೂಮಿಯನ್ನು ಪಡೆಯಲು ಯತ್ನಿಸುತ್ತಾನೆ.ಸರ್ಕಾರದ ಕಾರ್ಯಕ್ರಮಗಳಲ್ಲಿ ಭೂ ಹಂಚಿಕೆ ಕಾರ್ಯಕ್ರಮ ಮುಖ್ಯವಾಗಿತ್ತೆಂಬುದು ಈ ಕತೆಯಿಂದ ವ್ಯಕ್ತವಾಗುತ್ತವೆ. ಆದರೆ ಕೊನೆಗೂ ಈತನ ಹೆಸರಿಗೆ ಜಮೀನು ಮಂಜೂರಾಗದೇ ಉಳಿಯುತ್ತದೆ.ಇದು ಆಗಿನ ಸರ್ಕಾರದ ವಂಚನೆಯು ಭೂಮಾಲೀಕರ ಸಂಚೂ ಕೂಡಾ ಇದರಲ್ಲಿ ಒಳಗೊಂಡಿರುವ ಹೊಳಹುವನ್ನು ನೀಡುತ್ತದೆ. ಜಮೀನಾದರೂ ಬೇಡ,ಹೋಗಲಿ ಒಂದು ಮನೆಯನ್ನು ಕಟ್ಟಲಿಕ್ಕೆ ನಿವೇಶನವಾದರೂ ಮಂಜೂರು ಮಾಡಿಸಿಕೊಳ್ಳಲು ಕೂಡ ಇವನಿಂದ ಸಾಧ್ಯವಾಗುವುದಿಲ್ಲ. ಕೊಗ್ಗಿ ಹುಚ್ಚನ ಮನೆಪಕ್ಕದಲ್ಲಿ ಅವನದ್ದೇ ಆದ ಜಾಗದಲ್ಲಿ ಇವರು ಮನೆ ಕಟ್ಟಿಕೊಂಡು ವಾಸವಾಗಿರುತ್ತಾರೆ.ಈ ಕುರಿತು ತನ್ನ ಹೆಂಡತಿ ಹನುಮಿ ಹೇಳುವಂತೆ ಈ ಗ್ರಾಮದಲ್ಲಿಯೇ ಸ್ವಂತ ಮನೆ ಮಾಡಿಕೊಳ್ಳಲು ಇವರಿಗೆ ಆಗಲಿಲ್ಲ ಎಂದು ಮರುಕದಿಂದ ಹೇಳುತ್ತಾಳೆ.

ಪುಟಿಯಾನಾಯ್ಕ ಸ್ವಗತವಾಗಿ ಮಾತನಾಡಿಕೊಳ್ಳುತ್ತಾ,ನಂದು ಅಂತ ಒಂದು ಗೇಣಗಲ ನೆಲ ಒಂದು ಮನೆ ಆಗನಿಲ್ಲ ನೋಡು. ಈ ನೆನಪಿನಾಳದಿಂದಲೇ ಅಜ್ಜಿಯು ಮಹಾದ್ವಾರವನ್ನೇ ದಿಟ್ಟಿಸಿ ನೋಡುತ್ತ ನಿಂತಿರುವುದನ್ನು ಕಾಣುತ್ತೇವೆ. ಅಜ್ಜಿಯ ಜೊತೆಗೆ ಬಂದಿದ್ದಕಡೆ ಗುರ್ಲಿ ಕೆನ್ನಪ್ಪ ಅಜ್ಜಿಯನ್ನು ಎಚ್ಚರಿಸುತ್ತಾನೆ. ಕೊನೆಗೆ ಆತನೊಂದಿಗೆ ಮನೆಗೆ ಹೋಗುತ್ತಾಳೆ.

ಈ ಕತೆಯಲ್ಲಿ ಮುಖ್ಯ ನೆಲೆಯಾಗಿ ಕಾನೂನಿನ ನೆಲೆ, ಸ್ವಾಭಿಮಾನದ ನೆಲೆ,ಹಕ್ಕಿನ ನೆಲೆಯಾಗಿ ಪ್ರಧಾನವಾಗಿ ವ್ಯಕ್ತವಾಗುತ್ತದೆ.ಸ್ವಾಭಿಮಾನಿ ಹೋರಾಟಗಾರನಿಗೆ ತನ್ನದೇ ಆದ ಸ್ವತಂತ್ರಭೂಮಿಯನ್ನು ಉಳುಮೆ ಮಾಡುವ ಹಂಬಲ ಕಮರಿಹೋಗುವುದು ವ್ಯವಸ್ಥೆಯ ವ್ಯಂಗ್ಯವಾಗಿ ಕಂಡುಬರುತ್ತದೆ. ಈ ಕತೆಯಲ್ಲಿ ಭೂಮಿಯನ್ನು ಪಡೆಯುವ ಹಂಬಲ, ಸ್ವತಂತ್ರವಾಗಿ ಅಸಂಘಟಿತ ನೆಲೆಯಲ್ಲಿ ಹೋರಾಟ ನಡೆಸಿದ ಪುಟಿಯಾನಾಯ್ಕನಿಗೆ ಭೂಮಿ ದಕ್ಕದೆ ಹೋಗುವ ದುರಂತವನ್ನು ಕಾಣುತ್ತೇವೆ. ಭೂಮಿಗಾಗಿ ಭೂಮಾಲೀಕರ ವಿರುದ್ಧ ಹೋರಾಟ ನಡೆಸುತ್ತ, ಸ್ವಾಭಿಮಾನಿಯಾಗಿ ಬದುಕುವ ನೆಲೆಯನ್ನು ಕತೆಯು ಧ್ವನಿಸುತ್ತದೆ.

ಇಲ್ಲಿ ಆಧುನಿಕತೆಯ ಹೆಸರಿನ ಮೂಲಕ ರೈತರನ್ನು ವಂಚಿಸುವ, ಸರ್ಕಾರವೇ ಭಾಗಿಯಾಗಿ ಗುಳೇ ಎಬ್ಬಿಸುವ,ನಿರ್ವಸತೀಕರಣಗೊಳಿಸುವ ಚಿತ್ರಣವಿದೆ. ಅಭಿವೃದ್ಧಿಯ ನೆಪದಲ್ಲಿ ರೈತರನ್ನು ವಂಚಿಸಲು ಸರ್ಕಾರವೇ ಹೇಗೆ ಭಾಗಿಯಾಗುತ್ತದೆ ಎಂಬುದಕ್ಕೆ "ಅಭಿವೃದ್ಧಿಯ ಒಂದು ಪರಿ" ಕತೆಯು ಮಾರ್ಮಿಕವಾಗಿ ಸೂಚಿಸುತ್ತದೆ.

ಅಭಿವೃದ್ಧಿಯ ಒಂದು ಪರಿ ಕತೆಯಲ್ಲಿ ಸರ್ಕಾರವೇ ಭೂಮಿಯನ್ನು ಕಸಿಯುವ ಯತ್ನದಲ್ಲಿ ಕೈಹಾಕಿದೆ. ಒಂದೆಡೆ ಸರ್ಕಾರವೇ ಭೂಮಿಯನ್ನು ಹಂಚಲು ಯತ್ನಿಸಿದ್ದು, ಇನ್ನೊಂದೆಡೆ ಸರ್ಕಾರ ರೈತನ ಭೂಮಿಯನ್ನು ವಶಪಡಿಸಿಕೊಳ್ಳುತ್ತಿದೆ. ಇಂತಹ ದುರಂತಕ್ಕೆ ರೈತ ಚನ್ನಿಗಯ್ಯ ಬಲಿಯಾಗುವುದು ವ್ಯವಸ್ಥೆಯ ವ್ಯಂಗ್ಯವಾಗಿ ಕಾಣುತ್ತದೆ.

ಇಲ್ಲಿ ಅಭಿವೃದ್ಧಿಯ ಯೋಜನೆಗಳು ಒಂದೆಡೆ ಪೂರಕವಾಗಿದ್ದರೆ ಮತ್ತೊಂದೆಡೆ ಮಾರಕವಾಗಿರುವುದನ್ನು ಕಾಣುತ್ತೇವೆ. ಇದು ವಾಸ್ತವದಲ್ಲಿ ಜಾಗತಿಕ ಶಕ್ತಿಗಳು, ಐ.ಟಿ.ಬಿ.ಟಿಗಳ ನೆಪದಲ್ಲಿ ಬೃಹತ್‌ಪ್ರಾಮಾಣದಲ್ಲಿ ಉದ್ಯೋಗ ಒದಗಿಸುವ ನೆಪದಲ್ಲಿ ಭೂ ಆಕ್ರಮಣ ಮಾಡುತ್ತಿವೆ. ಇದೇ ಕಾಲಕ್ಕೆ ಸರ್ಕಾರವೇ ಭಾಗಿಯಾಗಿ ಅಭಿವೃದ್ಧಿಯ ಹೆಸರಿನಲ್ಲಿ ನಗರ ನಿರ್ಮಾಣಕ್ಕೆ ಮತ್ತು ನಗರ ನಿರ್ಮಾಣದಿಂದಾಗಿ ಪ್ರಕೃತಿ ವಿಕೋಪಕ್ಕೂ ಕಾರಣವಾಗಿರುವುದನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ವಾಸ್ತವಕ್ಕೂ ಹಾಗೂ ಕತೆಯ ದೃಷ್ಟಿಕೋನಂದಿಂದಲೂ ತುಂಬ ಹತ್ತಿರವಾಗಿ ಕಂಡುಬರುತ್ತದೆ.

ರೈತ ತನ್ನ ಭೂ ಒಡೆತನವನ್ನು ಅಭಿವೃದ್ಧಿ ಯೋಜನೆಗಾಗಿ ತನ್ನ ಸ್ವಂತ ಕೃಷಿಭೂಮಿಯನ್ನು ಕಳೆದುಕೊಳ್ಳುವ ದುರಂತ ವ್ಯಕ್ತವಾಗುತ್ತದೆ. ನಗರ ಪ್ರದೇಶದ ಸುತ್ತಮುತ್ತ ಪ್ರದೇಶದಲ್ಲಿ ಅಭಿವೃದ್ಧಿಯಗೊಳಿಸಲು ರೈತರ ಫಲವತ್ತಾದ ಭೂಮಿಯನ್ನು ಪಡೆದು ಕಾರ್ಪೋರೇಟ್‌ನಂತಹ ಕಂಪೆನಿಗಳು, ಮೂಲಸೌಕರ್ಯಕ್ಕಾಗಿ ರಸ್ತೆಗಳು ಕಟ್ಟಡಗಳು ಕಟ್ಟುತ್ತಿರುವ ವಾಸ್ತವದ ಸಂಗತಿಗಳಂತೆ ಕತೆಯಲ್ಲಿ ಗೋಚರವಾಗುತ್ತದೆ.

ರೈತ ಚನ್ನಿಗಯ್ಯ ಭೂಮಿಯ ಬಗೆಗಿನ ಹೊಂಗನಸುಗಳ ಸುತ್ತ ಸುತ್ತುವುದನ್ನು ಈ ಕತೆಯಲ್ಲಿ ಕಾಣುತ್ತೇವೆ. ಮಲೆನಾಡು ಅಭಿವೃದ್ಧಿ ಪ್ರಾಧಿಕಾರ ಕಚೇರಿ ಸ್ಥಾಪಿಸಲು ಸರ್ಕಾರವು ಅಭಿವೃದ್ಧಿ ನೆಪದಲ್ಲಿ ಕೋಟ್ಯಾಂತರ ರೂಪಾಯಿಗಳನ್ನು ಮಂಜೂರು ಮಾಡಿರುತ್ತದೆ. ಪ್ರಾಧಿಕಾರದ ಕಚೇರಿಯ ಜಾಗದಲ್ಲಿ ರೈತಾಪಿಕುಟುಂಬ ವಾಸಿಸುತ್ತಿದ್ದ ಸ್ಥಳವನ್ನು ಸರ್ಕಾರದ ಅಧಿಕಾರಿಗಳು ಗುರುತಿಸಿ ಸ್ವಾಧೀನಪಡಿಸಿಕೊಳ್ಳುತ್ತಾರೆ. ಒಂದಷ್ಟು ಪರಿಹಾರ ನೀಡಿ ರೈತ ಚೆನ್ನಿಗಯ್ಯನನ್ನು ಒಕ್ಕಲೆಬ್ಬಿಸುತ್ತಾರೆ. ಸೂಕ್ಷ್ಮ ಮನಸ್ಸಿನ ಚನ್ನಿಗಯ್ಯ ಭೂ ವ್ಯವಸಾಯ ಸಂಬಂಧಗಳಿಗೆ ತನ್ನ ಬದುಕನ್ನು ಅರ್ಪಿಸಿಕೊಂಡ ರೈತ. ಆದರೆ ಆತ ತನ್ನ ಭೂಮಿಯನ್ನು ಬಿಟ್ಟು ಬದುಕಲಾರದ ಸ್ಥಿತಿಯನ್ನು ಕಾಣುತ್ತೇವೆ. ಆತನಿಗೆ ಅಭಿವೃದ್ಧಿಯ ಹೆಸರಿನಲ್ಲಿ ಅನೀರಿಕ್ಷಿತವಾಗಿ ಭೂಸ್ವಾಧೀನದ ಆದೇಶವು ಆತನ ಅಸ್ತಿತ್ವವನ್ನು ದೋಚುವಂತೆ ಕಂಡುಬರುತ್ತದೆ. ತನ್ನ ಭೂಮಿಯನ್ನು ಉಳಿಸಿಕೊಳ್ಳಲು ಯಾವ ಪ್ರಯತ್ನಗಳು ಫಲಿಸದೆ ಕೊನೆಗೆ ಸರ್ಕಾರಕ್ಕೆ ತನ್ನ ಜಮೀನನ್ನು ಬಿಟ್ಟುಕೊಟ್ಟಿರುತ್ತಾನೆ.

ಸರ್ಕಾರಕ್ಕೆ ತನ್ನ ಭೂಮಿಯನ್ನು ಬಿಟ್ಟುಕೊಟ್ಟರೂ, ತನ್ನ ಭೂಮಿಯ ಮೇಲಿದ್ದ ಪ್ರೀತಿಯ ಮಮಕಾರ ಉಳಿದಿರುತ್ತದೆ. ಸರ್ಕಾರ ವಶಪಡಿಸಿಕೊಂಡ ಜಮೀನಿನಲ್ಲಿ ಸರ್ಕಾರದ ಭವ್ಯ ಬಂಗಲೆ ಎದ್ದು ನಿಲ್ಲುತ್ತದೆ. ಚನ್ನಿಗಯ್ಯನ ತೋಟದ ಜಮೀನಿನಲ್ಲಿ ಎದ್ದ ಭವ್ಯ ಬಂಗಲೆ ಮತ್ತು ತೋಟವನ್ನು ನೋಡಿದಾಗ ತನ್ನ ಭೂಮಿಯನ್ನು ಬಿಟ್ಟುಕೊಟ್ಟಿರುವುದು,ತನ್ನ ಕರಳು ಕಿತ್ತು ಬಂದ ಹಾಗೆಯೇ ಎಂಬ ಭಾವನೆ ಮೂಡುತ್ತದೆ. ತನ್ನ ಭೂಮಿ ಬಗೆಗಿನ ಒಲವನ್ನು ಕಳೆದು ಕೊಳ್ಳಲು ಇಚ್ಛೆ ಪಡದೆ, ಈತ ಯಾವುದೇ ಸಂಬಳವಿಲ್ಲದೆ ಇಲ್ಲಿ ಕೂಲಿ ಕೆಲಸ ಮಾಡುತ್ತಾನೆ.

ಕತೆಯ ನಿರೂಪಕನೆ ಅಭಿವೃದ್ಧಿ ಪ್ರಾಧಿಕಾರಕ್ಕೆ ಅಧ್ಯಕ್ಷನಾಗಿ ಬರುತ್ತಾನೆ. ಆತನು ಈ ಬಂಗ್ಲೆಯಲ್ಲಿ ವಾಸಕ್ಕಾಗಿ ಉಳಿಯುತ್ತಾನೆ. ಇಂತಹ ವಿಚಿತ್ರ ನಡೆವಳಿಕೆಯ ಚನ್ನಿಗಯ್ಯ ಅಧ್ಯಕ್ಷನ ಕಣ್ಣಿಗೆ ಬೀಳುತ್ತಾನೆ. ಚನ್ನಿಗಯ್ಯನನ್ನು ನೋಡಿ ಕುತೂಹಲದಿಂದ ಪ್ರಶ್ನೆ ಕೇಳಿದಾಗ, ತನ್ನ ಹಿಂದಿನ ನೆನಪು ಹೊಮ್ಮುತ್ತದೆ. "ಏನೇ ಆಗಲಿ, ಒಂದು ತುಂಡು ನೆಲಾನ ಸ್ವತಂತ್ರವಾಗಿ ಮಾಡಬೇಕು ನೋಡು. ಮಾಡಿ ಮಾಡಿ ಅಂತ ಹೇಳಿದ್ಯಲ್ಲ ಅದೇನು ಅಷ್ಟು ಸುಲಭಾನ?ಏನಾಗಬೇಕು ಮತ್ತೆ ಹಣ ಬೇಕು ಅವಳು ಒಂದು ದಿನ ತಂದೆಯ ಮನೆಯಲ್ಲಿ ಹಾಕಿದ ಬಳೆ ತಂದು ಮುಂದಿಟ್ಟಳು. ಏನಿದು ಮಾರಿ ಇಲ್ಲ ಅಡವಿಡಿ ಎಂದಳವಳು."[೧೧] ಇಲ್ಲಿ ಭೂಮಿಯನ್ನು ಕಳೆದುಕೊಳ್ಳಲು ತಯಾರಿಲ್ಲದೆ ಚೆನ್ನಿಗಯ್ಯ ಹೇಗಾದರೂ ಮಾಡಿ ಉಳಿಸಿಕೊಳ್ಳುವ ಯತ್ನ ನಡೆಸುತ್ತಾನೆ.

ಚನ್ನಿಗಯ್ಯನ ಮಗ ಭೂಮಿಯನ್ನು ನಿರಾಕರಣೆ ಮಾಡುವುದನ್ನು ಈ ಕತೆ ವ್ಯಕ್ತಗೊಳಿಸುತ್ತದೆ. ಚನ್ನಿಗಯ್ಯನಿಗಿರುವ ಭೂಮಿಯ ಬಗೆಗಿನ ಪ್ರೀತಿ ಮಗನಲ್ಲಿ ಕಾಣಲಾಗುವುದಿಲ್ಲ. "ಅಪ್ಪಯ್ಯ ಜಮೀನು ಗಿಮೀನು ಬೇಡ, ಲಾಭ ಬರೋದು ನಿಧಾನ. ಕೆಲಸದೋರನ್ನ ಇಟ್‌ಕೊಂಡು ಈಗಿನ ಕಾಲದಲ್ಲಿ ಹೊರ ತೋಟ ಮಾಡಲಿಕ್ಕೆ ಆಗೋದಿಲ್ಲ."[೧೨] ಎಂದು ಮಗ ಹೇಳುತ್ತಾನೆ. ಭೂಮಿಯನ್ನು ಮಾರಿದ ಹಣದಲ್ಲಿ ಒಂದು ಅಂಗಡಿ ಇಡುವ ಟಿ.ಪಿ. ವಾಪಿಂಗ್ ಮಷಿನ್ ಕಂಪ್ಯೂಟರ್ ಮಾರೋ ಅಂಗಡಿ ಮಾಡುವ ಆಶಯವನ್ನು ವ್ಯಕ್ತಪಡಿಸುತ್ತಾನೆ. ಕೃಷಿ ಉತ್ಪನ್ನವನ್ನು ಬಿಟ್ಟು ಅನುತ್ಪಾದಕ ಉದ್ಯಮವನ್ನು ಲಾಭದ ಪ್ರಶ್ನೆಯಾಗಿ ಮಗ ನೋಡುತ್ತಾನೆ.

ಇಂಥ ಬದಲಾವಣೆಯಿಂದ ಇನ್ನು ತನ್ನ ಕಾಲ ಮುಗಿಯಿತು ಎಂದು ಚನ್ನಯ್ಯ ಭಾವಿಸುತ್ತಾನೆ.ಇನ್ನೂ ಮುಂದೆ ಬದುಕಬೇಕಾದವನು ಮಗ ತಾನೆ, ಹೊಲ ತೋಟದ ಬಗ್ಗೆ ಅವನಿಗೆ ಆಸಕ್ತಿ ಇಲ್ಲದಿರುವಾಗ ತಾನು ಜಮೀನು ಮಾಡುವುದು ಸರಿಯಲ್ಲವೇನೋ ಎಂದು ಆ ಕ್ಷಣ ಚೆನ್ನಿಗ ಯೋಚಿಸುತ್ತಾನೆ. ಆಧುನಿಕ ಯುವ ಪೀಳಿಗೆ ಭೂಮಿಯಿಂದ ವಿಮುಖವಾಗಿ ಅದು ಬರೀ ಲಾಭದ ಪ್ರಶ್ನೆಯಾಗಿ ಆಲೋಚಿಸುವ ವಿಧಾನವನ್ನು ಗುರುತಿಸಬಹುದಾಗಿದೆ. ಈ ಭೂಮಿಯನ್ನು ಕೇವಲ ವ್ಯವಹಾರವಾಗಿ, ಲಾಭದ ಪ್ರಶ್ನೆಯಾಗಿ ನೋಡುವ ಇತ್ತೀಚಿನ ಬಗೆಯನ್ನು ಕಾಣಬಹುದಾಗಿದೆ. ಇಲ್ಲಿ ರೈತರ ವಾಸ್ತವದ ಸಮಸ್ಯೆಕುರಿತಾಗಿ, ಬೆಲೆಯ ಬಗ್ಗೆ, ಲಾಭದ ಬಗ್ಗೆ ಈ ರೀತಿ ನೆಲೆಯಲ್ಲಿ ಯುವಪೀಳಿಗೆ ಯೋಚಿಸುವುದು ಸಹಜವಾಗಿ ಕಂಡುಬರುತ್ತದೆ. ಹೀಗಾಗಿ ಚನ್ನಿಗಯ್ಯನು ತನ್ನ ಮಗನನ್ನು ಆತನಇಚ್ಛೆಯಂತೆ ಇರಲು ಬಿಡುತ್ತಾನೆ.

"**ಮಂಜಿನ ಕಾನು**" ಕಾದಂಬರಿಯಲ್ಲಿ ಮಲೆನಾಡ ಗುಡ್ಡಗಾಡಿನಲ್ಲಿ ವಾಸಿಸುವ ಬುಡಕಟ್ಟು ಸಮುದಾಯದ ಹಸ್ಲರ ಜೀವನ ಚಿತ್ರಣವನ್ನು ವ್ಯಕ್ತಗೊಳಿಸುತ್ತದೆ. ಇಲ್ಲಿ ಮುಖ್ಯವಾಗಿ ಹಸ್ಲರನ್ನು ಭೂಮಾಲೀಕರು ಶೋಷಿಸುವ ಚಿತ್ರಣವಿದೆ. ಇಡೀ ಕಾದಂಬರಿಯಲ್ಲಿ ಒಟ್ಟಾರೆ ಹಸ್ಲರ ಬದುಕಿನ ಚಿತ್ರಣದಲ್ಲಿ ಸಮಾಜಿಕ ಸಂಘರ್ಷ ಮತ್ತು ಶೋಷಣೆ, ಭೂ ರೈತ ಪ್ರಶ್ನೆಗಳು ವ್ಯಕ್ತವಾಗಿವೆ. ಈ ಕಾದಂಬರಿಯ ಕಾಲಕ್ಕೆ ಕರ್ನಾಟಕದಲ್ಲಿ ಭೂಸುಧಾರಣೆ ನಡೆದಿದೆ. ಸರ್ಕಾರವು ಭೂಹೀನರಿಗೆ ಭೂಮಿಯನ್ನು ಹಂಚುವ ಕಾರ್ಯಯೋಜನೆಯನ್ನು ಜಾರಿಗೊಳಿಸಿರುವುದು ಕಂಡುಬರುತ್ತದೆ. ಆದರೂ ಗುಡ್ಡಗಾಡಿನಲ್ಲಿ ವಾಸಿಸುವ ಕೆಲ ಜನಾಂಗಗಳು ಇಂದಿಗೂ ಭೂಹೀನರಾಗಿ ಬದುಕುತ್ತಿರುವ ವಾಸ್ತವಗಳಿವೆ.

ಈ ಕಾದಂಬರಿಯ ಪ್ರಧಾನ ಪಾತ್ರಗಳಾದ ಕೊಲ್ಲ, ಬೆನವ, ಚೌಡ, ಒಡೆಯರ ಬಳಿ ಹುಟ್ಟಾಳುಗಳಾಗಿ ಕೆಲಸಮಾಡುತ್ತಿರುತ್ತಾರೆ. ಈ ಮೂರು ಮಂದಿಯು ಕ್ರಮವಾಗಿ ಕೃಷ್ಣಯ್ಯ ಹೆಗ್ಗಡೆ, ರಾಮಚಂದ್ರಯ್ಯ, ವಾಸುದೇವಯ್ಯ, ಈ ಹುಟ್ಟಾಳುಗಳ ಒಡೆಯರಾಗಿದ್ದಾರೆ. ಕೊಲ್ಲನ ಆತ್ಮೀಯ ಗೆಳೆಯ, ದೀವರ ಹನುಮ ಸ್ವತಂತ್ರ ಬೇಸಾಯಗಾರ. ಕೊಲ್ಲನಿಗೆ ಈತ ಕಷ್ಟಕಾಲದಲ್ಲಿ ನೆರವು ನೀಡಿ ಆತ್ಮವಿಶ್ವಾಸ ತುಂಬುತ್ತಿದ್ದವನು. ಈ ಕಾದಂಬರಿಯಲ್ಲಿ ಬರುವ ಕೊಲ್ಲನ ಹೆಂಡತಿ ಗಂಗಿ, ಬೆನವನ ಹೆಂಡತಿ ಈರಿ, ಚೌಡನ ಹೆಂಡತಿ ಸೂರಮ್ಮ ಪಾತ್ರಗಳು ರೈತಮಹಿಳೆರಾಗಿ ಕಂಡುಬರುತ್ತಾರೆ. ಈ ಕೊಲ್ಲನ ಮಗ ಹಾಲಪ್ಪ ಆಧುನಿಕ ಶಿಕ್ಷಣ ಪಡೆದ ವಿದ್ಯಾವಂತ ಯುವಕ ತಮ್ಮ ಜನಾಂಗದ ಏಳ್ಗೆಗಾಗಿ ಪರ್ಯಾಯ ನೆಲೆಯಾಗಿ ಬರುತ್ತಾನೆ.

ಇಲ್ಲಿರುವ ಜೀತಗಾರರಿಗೆ ತಿಂಗಳಿಗೆ ಒಂದು ಪಾವಲಿ, ದಿನವು ಅಚ್ಚೇರು ಅಕ್ಕಿ ಎರಡು ಮೆಣಸಿನಕಾಯಿ, ಉಪ್ಪು ವರ್ಷಕ್ಕೆ ಒಂದೋ ಎರಡೋ ಜೊತೆ ಬಟ್ಟೆ ಕೊಡಬೇಕೆಂಬುದು ಭೂಮಾಲೀಕರ ಧೋರಣೆಯಾಗಿದೆ. ಕೊಲ್ಲನ ಹೆಂಡತಿ ಗಂಗಿಯು ಕಾಯಿಲೆ ಬಿದ್ದಾಗ ದಣಿ ಕೃಷ್ಣಯ್ಯ ಹೆಗ್ಡೆ ಸಹಾಯ ಮಾಡುವುದಿಲ್ಲ.ಕೊಲ್ಲ ಹಲವಾರು ವರ್ಷಗಳಿಂದಲೂ ಈತನ ಮನೆಯಲ್ಲಿ ಜೀತ ಮಾಡುತ್ತಿದ್ದರೂ ಕಷ್ಟದ ಕಾಲಕ್ಕೆ ಸಹಾಯ ಮಾಡದೇ ನಿರಾಕರಿಸುತ್ತಾನೆ. ತನ್ನ ಜೀವದ ಗೆಳೆಯ ಬೆನವ ಈತನ ಸ್ಥಿತಿಯನ್ನು ಗಮನಿಸಿ, ಬೆನವ ತನ್ನ ಒಡೆಯರಿಂದ ನೆರವು ಪಡೆದು, ಕೊಲ್ಲನಿಗೆ ಸಹಾಯಮಾಡುತ್ತಾನೆ. ಈ ನೆರವು ಪಡೆದು ಮನೆಗೆ ಬರುವಷ್ಟರಲ್ಲಿ ಕೊಲ್ಲನ ಹೆಂಡತಿ ಗಂಗಿ ಕಾಯಿಲೆಯಿಂದ ಸಾವನ್ನಪ್ಪಿರುತ್ತಾಳೆ. ಇದಕ್ಕೆಲ್ಲ ತಾನು ಧಣಿಯ ಹುಟ್ಟಾಳಾಗಿದ್ದುದು ತನ್ನ ಸ್ಥಿತಿಗೆ ಕಾರಣ ಎಂದು ಕೊಲ್ಲನಿಗೆ ಮನವರಿಕೆಯಾಗುತ್ತದೆ.ಇದಕ್ಕಾಗಿ ಧಣಿಯ ವಿರುದ್ಧ ಎದುರಿಸಲು ಧೈರ್ಯ ತಾಳುತ್ತಾನೆ. "ಇವತ್ನಿಂದ ನಾನಿಮ್ಮ ಹುಟ್ಟಾಳಲ್ಲ... ನೀವು ನನ್ನ ಒಡೇರಲ್ಲ... ನೀವು ಏನಾರ ಮಾಡ್ಕೋಬೈದು... ನನ್ನ ರಟ್ಟೇಲಿ ಶಕ್ತಿ, ನನ್ನ ಒಡ್ಯಾಣಲ್ಲಿ ಕತ್ತಿ ಇರೋ ಗಂಟ ನಾನು ಬಂದಿದ್ದನ್ನೆಲ್ಲಾ ಎದರಿಸ್ತೀನಿ.. ಹಂಬಿನಿಂದ ಹಂದಿ ಕೊಲ್ಲೋ ಜಾತಿ ಇದು.. ಕೋರೆ ಹಂದಿನ ಎದರಸೋ ಜನ... ಮನುಸ್ರಿಗೆ ಹೆದರ್ತಾರ?... ನಾನಿನ್ನು ಬತ್ತೀನಿ, "[~] ಭೂಮಾಲೀಕನ ವಿರುದ್ಧ ಸೆಡ್ಡುಹೊಡೆದು ಕೊಲ್ಲ ಹೊರ ನಡೆಯುತ್ತಾನೆ. ಇಲ್ಲಿ ಕೊಲ್ಲ ತನ್ನ ತೋಳ್ಬಲದ ಮೇಲೆ ತನ್ನ ಸ್ವತಂತ್ರ ಬದುಕನ್ನು ಕಟ್ಟಿಕೊಳ್ಳಲು ಯತ್ನಿಸುತ್ತಾನೆ. ಈ ಜೀತ ವ್ಯವಸ್ಥೆಯಿಂದ ಹೊರಬರುವ ಚಿತ್ರಣ ಕಾದಂಬರಿಯಲ್ಲಿ ಆಶಾದಾಯಕವಾಗಿ ಕಂಡುಬರುತ್ತದೆ.

ಒಡೆಯರ ಮನೆಯ ಅನ್ನವನ್ನು ಬೇಡಿ ತಂದು ತಿನ್ನುವುದರಿಂದ ಮುಂದೆ ತನ್ನ ಮಗನಿಗೂ ಈ ಸ್ಥಿತಿ ಬರಬಾರದು ಎಂಬುದನ್ನು ಕೊಲ್ಲ "ಒಡೆಯರ ಮನೆಯ ಎಂಜಲು ತಿಂದೇ ಬೆಳೆಯುತ್ತಿದ್ದಾನೆ. ಮಗ ನಾಳೆಗೂ ಅವನಿಗೆ ಇದೇ ಗತಿ. ಈಗಿನಿಂದಲೇ ಅವನ ಮೈಗೆ ಎಂಜಲು ಕೂಳು ಒಗ್ಗಿ ಹೋದರೆ ನಾಳೆ ಅವನು ಸ್ವತಂತ್ರವಾಗಿ

ಬದುಕುವುದಾದರೂ ಹೇಗೆ? ಹಾಗೆ ಬದುಕಬೇಕೆಂಬ ಛಲವಾದರೂ ಅವನಲ್ಲಿ ಎಲ್ಲಿಂದ ಬಂದೀತು? ಮಗ ತನ್ನಂತೆ ಹುಟ್ಟಾಳಾಗಬಾರದು ಎಂದು ನೂರಾರು ಸಾರಿ ಅಂದುಕೊಂಡಿದ್ದ ಕೊಲ್ಲ. ಅಂದು ಕೊಂಡುದಷ್ಟೇ ಆಯಿತು, ಮಗನನ್ನು ಬೇರೊಂದು ದಾರಿಗೆ ಕರೆದೊಯ್ಯುವ ಉಪಾಯ ಹೊಳೆಯಲಿಲ್ಲ. ಕೈಲಿದ್ದುದನ್ನು ರಸ್ತೆ ಪಕ್ಕಕ್ಕೆ ಚೆಲ್ಲಿ ಹೋಗಲೆ ಎಂದು ಯೋಚಿಸಿದ ಕೈಲಿರುವುದು ಅನ್ನ ಸಾರು. ದೇವರು ಕೊಟ್ಟ ಪ್ರಸಾದ. ತಪ್ಪು ಅನ್ನದ್ದಲ್ಲ, ಬೇಡಿ ತಂದ ತನ್ನದು. ಕೊಲ್ಲ ಗುಡ್ಡ ಹತ್ತಿ ಇಳಿದು ಮನೆಗೆ ಬಂದ."[೧೪]

ಕೊಲ್ಲನ ಈ ಆಲೋಚನೆ ಸ್ವತಂತ್ರ ಬದುಕನ್ನು ಕಟ್ಟ ಬಯಸುವ ಈತ ತನ್ನ ಮಗನನ್ನು ಹುಟ್ಟಾಳಂತೆ ಒಡೆಯರ ಮನೆಗೆ ಕಳುಹಿಸದೇ ವಿದ್ಯಾವಂತನಾಗಿ ಮಾಡುವ ಹೆಬ್ಬಯಕೆ ಈತನಲ್ಲಿದೆ. ಇದೇ ರೀತಿಯ ಕುಂ.ವೀಯವರ "ಕೊಟ್ರ ಹೈಸ್ಕೂಲಿಗೆ ಸೇರಿದ್ದು" ಕಾದಂಬರಿಯಲ್ಲಿ ದಿಬ್ಬ ತನ್ನ ಮಗ ಕೊಟ್ರನನ್ನು ಒಬ್ಬ ಲಾಯರ್‌ನನ್ನಾಗಿ ಮಾಡಿ ಸ್ವತಂತ್ರ ಬದುಕು ಕಟ್ಟುವ ಛಲವನ್ನು ತೋರುವುದು ಗಮನಿಸಬಹುದು. ಈ ಎರಡು ಕಾದಂಬರಿಗಳ ಆಶಯಗಳು ಒಂದೇ ಸಾಮ್ಯತೆಯನ್ನು ಒಳಗೊಂಡಿವೆ.

ಕೊಲ್ಲನ ಚಿಂತನೆ ಆಲೋಚನೆಗಳಿಂದ ಒಡೆಯರ ಮೋಸ ವಂಚನೆ ಕುರಿತು ತನ್ನ ಗೆಳೆಯ ಬೆನವನಿಗೆ ಹೇಳುತ್ತಾನೆ. ಬೆನವನ ಸಂಪ್ರದಾಯ ಶರಣತೆಯನ್ನು ಗಮನಿಸಿದ್ದ ಕೊಲ್ಲ ಹೇಳುವುದು "...ನಮ್ಮ ನಂಬ್ಕೇನೆ ನಮ್ಮನ್ನು ಕೊಲ್ತಾ ಐತೆ ಬೆನವ... ದುಡ್ದು ಸಾಯೋರು ನಾವಾದ್ರೆ ಕೂತು ಉಣ್ಣೋರು ಒಡೇರು... ಚಪ್ರ ಕಟ್ಟಾಕೆ ನಾವು.. ನೆರಳಲ್ಲಿ ಕೂರಾಕೆ ಅವ್ರು... ಇದನ್ನೇ ನ್ಯಾಯ ಅಂತೀಯಾ ನೀನು."[೧೫] ಎಂದು ವಿವೇಚನಾತ್ಮಕವಾಗಿ ಕೊಲ್ಲ ನುಡಿಯುತ್ತಾನೆ. ಈ ಧಣಿಗಳು ಮಾಡುತ್ತಿರುವ ಶೋಷಣೆಯ ಹುನ್ನಾರವನ್ನು ತನ್ನ ಜೀವದ ಗೆಳೆಯ ಬೆನವನಿಗೆ ಮನವರಿಕೆ ಮಾಡಿಕೊಡುತ್ತಾನೆ.

ಹಸ್ಲರ ಜನಾಂಗದ ಹಿರಿಯರು ಒಡೆಯರ ಹುಟ್ಟಾಳುಗಳಾಗಿ ಅವರ ಆಶ್ರಯದಲ್ಲಿ ತಮ್ಮ ಬದುಕನ್ನು ಸಾಗಿಸುವುದು ನಮ್ಮ ಹಣೆ ಬರಹ ಎಂದು ಭಾವಿಸಿರುತ್ತಾರೆ. ಆದರೆ ಇದಕ್ಕೆ ಪ್ರತಿಯಾಗಿ ಕೊಲ್ಲ ಬ್ರಹ್ಮ ನಮ್ಮ ಹಣೆಬರಹ ಬರದೋನೆ ಎಂಬುದೆಲ್ಲಾ ಸುಳ್ಳು, ನಮ್ಮ ಬದುಕನ್ನು ನಾವು ರೂಪಿಸಿಕೊಳ್ಳುವುದು ನಮ್ಮ ಕೈಯಲ್ಲಿದೆ ಎಂದು ತಿಳಿಸುತ್ತಾನೆ. ಈ ಒಡೆಯರ ಬಳಿ ಎಷ್ಟು ದಿನಾಂತ ನಾವು ಜೀತಕ್ಕೆ ದುಡಿಯುವುದು ಎಂದು ಪ್ರಶ್ನಿಸುತ್ತಾನೆ. ಸ್ವತಂತ್ರ ಜೀವನ ಮಾಡಬೇಕೆಂಬ ಆಶಯವನ್ನು ಆತ ವ್ಯಕ್ತಪಡಿಸುತ್ತಾನೆ. ಕೊಲ್ಲನ ಆಲೋಚನೆಗಳು ಸ್ವತಂತ್ರ ಬದುಕನ್ನು ಹರಸುವುದಾಗಿದೆ.

ಇಂತಹ ಮಾತುಗಳಿಂದಾಗಿ ಹಸ್ಲರ ಜನಾಂಗದ ಹಿರಿಯರು ಕೊಲ್ಲನ ನಡವಳಿಕೆಯನ್ನೇ ಪ್ರಶ್ನಿಸುತ್ತಾರೆ. ಕೊಲ್ಲನಿಗೆಲ್ಲೋ ಹುಚ್ಚು ಹಿಡಿದಿದೆ ಎಂದು ಛೇಡಿಸುತ್ತಾರೆ. ಈ ಹಿರಿಯರು ಹೇಳುವಂತೆ ಹಸ್ಲರ ಸ್ವತಂತ್ರವಾಗಿ ಜೀವನ ಮಾಡುವುದುಂಟೇ, ದೇವರು ಇದನ್ನು ಒಪ್ಪಿಯಾನೇ ಎಂದು ಕೊಲ್ಲನನ್ನು ಬೊಟ್ಟುಮಾಡಿ ತೋರುತ್ತಾರೆ. ಇಂತಹ ಪ್ರಶ್ನೆಗಳ ಮೂಲಕ ಹಸ್ಲರ ಸಮುದಾಯದಲ್ಲಿ ಹೊಸ ಸಂಚಲನವನ್ನು ಕೊಲ್ಲ ಮೂಡಿಸುತ್ತಾನೆ. ಹಸ್ಲರ ಸಮುದಾಯದ ಹಿರಿಯರು ಕೊಲ್ಲ ಬೇಸಾಯ ಮಾಡುವುದನ್ನು ಕುರಿತು ಹೇಳುವಂತೆ"ಅದೇನ ಅಡಕೆ ಗೊನೆಗೆ ಕೊಟ್ಟೆ ಕಟ್ಟಾಗೆ ಅಂದಕಂಡ್ಯಾ? ಹೊಲಬೇಡ್ವ? ನೇಗಿಲು ಬೇಡ್ವ? ಎತ್ತು ಬೇಡ್ವ? ಬಿತ್ತಿಕ್ಕೆ ಬೀಜ ಬೇಡ್ವ ? ನಿಂಗೆಲ್ಲೊ ಹುಚ್ಚು ಹಿಡಿದೈತೆ ಕೊಲ್ಲ... ಬೇಸಾಯ ಮಾಡೋದು ದೀವ್ರ ಕಸಬು.. ಒಡೇರತ್ರ ಗೇಯೋದು ಹಸ್ಲರ ಕಸುಬು.. ನೀನು ಬೇಸಾಯ ಮಾಡ್ತೀನಿ ಅಂದ್ರೆ ಜನ ನಕ್ಕಾರು."[೧೬]

ಈ ಕಾಲಕ್ಕೆ ಹಸ್ಲರು ಸ್ವಂತ ಭೂಮಿ ಉಳುಮೆ ಮಾಡುವುದೇ ದೊಡ್ಡ ಅಪರಾಧವಾಗಿ ಕಂಡುಬರುತ್ತದೆ. ಬೇಸಾಯವನ್ನು ಇಂತಹ ಸಾಂಪ್ರಾದಾಯಿಕ ನಂಬಿಕೆಯನ್ನಿಟ್ಟುಕೊಂಡು, ಸ್ವತಂತ್ರ ಬೇಸಾಯ ಮಾಡದೆ ಜೀತದಾಳುಗಳಂತೆ ದುಡಿಯುವುದು ನಮ್ಮ ಹಣೆಬರಹ ಎಂಬ ವಿಧಿವಾದವನ್ನು ನಂಬಿ ತಮ್ಮ ಭಾವನೆಯನ್ನು ವ್ಯಕ್ತಪಡಿಸುತ್ತಾರೆ.

ಕೊಲ್ಲ ತನ್ನ ಗೆಳೆಯ ದೀವರ ಹನುಮ ಸ್ವತಂತ್ರ ಬೇಸಾಯಗಾರನಾಗಿ ಸುಖಜೀವಿಯಾಗಿರುವುದನ್ನು ಕಾಣುತ್ತಾನೆ. ತನ್ನ ಆತ್ಮೀಯ ಗೆಳೆಯ ಗಿಳೀಗಾರಿನ ದೀವರ ಹನುಮ ಸ್ವತಂತ್ರ ಬೇಸಾಯಮಾಡಿ ವರ್ಷಕ್ಕೆ ಸಾಕಾಗುವಷ್ಟು ಬೆಳೆಯನ್ನು ಬೆಳೆಯುತ್ತಿದ್ದಾನೆ. ಆತ ಒಂದು ಗಾಡಿ, ಒಂದು ಜೊತೆಗೆ ಎತ್ತು, ಒಂದು ನೇಗಿಲು, ದನಕರುಗಳನ್ನು ಸಾಕಿಕೊಂಡು ಸುಖಜೀವಿಯಾಗಿ ಬದುಕುತ್ತಿರುವುದು ಕೊಲ್ಲನಿಗೆ ತಿಳಿಯುತ್ತದೆ. ಈ ವ್ಯವಸಾಯ

ಬದುಕಿನಿಂದ ಸ್ವತಂತ್ರವಾಗಿ ಸುಖಮಯ ಜೀವನ ನಡೆಸುವ ಕನಸು ಕೊಲ್ಲನ ಮುಂದೆ ಹಾದು ಹೋಗುತ್ತದೆ.ಬೇಸಾಯ ಎಂಬುದು ಸುಖದ ಕಲ್ಪನೆಯಾಗಿ ಕೊಲ್ಲನಿಗೆ ಕಾಣುತ್ತದೆ.

ಕೊಲ್ಲನ ಹಿತವನ್ನು ಬಯಸುವ ಶಾನುಭೋಗರು ಮತ್ತು ದೀವರ ಹನುಮನ ಸಹಾಯದಿಂದ ಹೊಲದೊಡೆಯನಾಗಲು ಕೊಲ್ಲ ಯತ್ನಿಸುತ್ತಾನೆ. ಸರ್ಕಾರದ ಭೂ ಸುಧಾರಣೆಯಿಂದ ಭೂ ಹಂಚಿಕೆ ಯೋಜನೆ ಜಾರಿಯಾಗುತ್ತಿರುವ ವಿಚಾರ ಇಲ್ಲಿ ವ್ಯಕ್ತವಾಗುತ್ತದೆ. ಸರ್ಕಾರದಿಂದ ಕೊಡಲ್ಪಡುವ ಭೂಮಿಯನ್ನು ಪಡೆಯಲು ಶಾನುಬೋಗರ ಬಳಿ ಹೋಗಿ ಸೊಪ್ಪಿನ ಬೆಟ್ಟದ ಕೆಳಗೆ ಬಯಲು ಪ್ರದೇಶವನ್ನು ನೋಡಿ ಬಂದು, ತನ್ನ ಸ್ವಂತ ಭೂಮಿಯನ್ನಾಗಿ ಉತ್ತು ಬೆಳೆಯುವುದಕ್ಕಾಗಿ, ಶಾನುಭೋಗರ ಬಳಿ ಕೇಳುತ್ತಾನೆ.

"... ಅಲ್ಲ ನಿನ್ನತ್ರ ಏನೈತ... ಹಣ ಐತಾ, ನೇಗಿಲು ಐತಾ ಬೀಜ ಐತಾ ನಿನ ಒಡೇರು ಇದಕ್ಕೆ ಒಪ್ತಾರಾ .. ಜಮೀನು ಕೊಟ್ರೆ ಏನಾರ ಮಾಡಬೈದು ಒಡೆಯಾ, ... ಜಮೀನು ಸರಕಾರದ್ದು... ನಂದೇನೈತಿ.. ಅಲ್ಲ ಹಸ್ಲರ ನಾಯಕರು ಯಾರೂ ವ್ಯವಸಾಯ ಮಾಡಕೆ ಬರಲ್ಲ ಅದಕ್ಕೆ ಕೇಳ್ದೆ... ಎಲ್ಲಾದ್ರು ಜಮೀನು ನೋಡಿದ್ರೆ... ಹೇಳು ದರಖಾಸ್ತು ನಂಬ್ರ ಕೊಡ್ತೀನಿ... ಅರ್ಜಿ ಹಾಕು.. ಜಮೀನು ಅರಣ್ಯ ಇಲಾಖೆಗೆ ಸೇರ್ದೆ ಇದ್ರೆ.. ನಾ ಕೊಡಸ್ತಿನಿ.. ಆಯ್ತು.."[೧೬] ಎಂದು ಹೇಳುತ್ತಾನೆ.

ಕೊಲ್ಲ ಈಗಾಲೇ ಸೊಪ್ಪಿನ ಬೆಟ್ಟದ ಕೆಳಗೆ ಒಂದಿಷ್ಟು ಜಮೀನು ಇರುವುದನ್ನು ತಿಳಿಸಿ ಈ ಭೂಮಿಯಲ್ಲಿ ತಾನು ಬೇಸಾಯ ಮಾಡುವುದಾಗಿ ಶಾನುಬೋಗರಿಗೆ ತಿಳಿಸುತ್ತಾನೆ. ಶಾನುಭೋಗರ ಸೌಮ್ಯ ಸ್ವಭಾವ ಉದಾರಮನೋಧರ್ಮದವರಾಗಿದ್ದು,ಕೊಲ್ಲನಿಗೆ ನೆರವು ನೀಡುತ್ತಾರೆ."ಈ ಹಿರೇಮನೆ ಶಾನುಭೋಗರು ಒಳ್ಳೆಯ ಗುಣದವರು, ಯಾವ ರೈತರಿಗೂ ಕಿರುಕುಳವಾಗಬಾರದೆಂದು ಉದಾರ ಬುದ್ದಿಯುಳ್ಳವರಾಗಿದ್ದರು. ಇವರು ಕಂದಾಯದ ವಸೂಲಿಯೇ ಇರಲಿ, ಜಮೀನಿನ ವ್ಯಾಜ್ಯವೆ ಇರಲಿ, ಎಲ್ಲವನ್ನು ಶಾಂತಿಯುತವಾಗಿ ಬಗೆ ಹರಿಯಬೇಕೆಂಬ ಆಶಯವುಳ್ಳವರಾಗಿದ್ದಾರೆ. ಇಲ್ಲಿ ಬೇಸಾಯ ಮಾಡುವ ಜನ ಎತ್ತು ಹೂಡಿ, ಬೀಜ ಬಿತ್ತು, ಕೆಸರಲ್ಲಿ ದುಡಿದು ಬೆಳೆ ತೆಗೆಯುವ ಜನ ನಿಟ್ಟುಸಿರು ಬಿಡಬಾರದು ಎಂದು ಭಾವಿಸಿದ್ದಾರೆ. ಅವರ ಸತ್ಕಾರ್ಯಕ್ಕೆ ಎಂದೂ ನೋವಾಗಬಾರದು ಎಂಬುದು ಅವರ ನಂಬಿಕೆಯಾಗಿದೆ." ಎಷ್ಟೋ ಕಡೆಗಳಲ್ಲಿ ಶಾನುಭೋಗರಿಂದಲೇ ಭೂ ಒಡೆತನ ತಪ್ಪಿಹೋಗಿರುವ ಉದಾಹರಣೆಗಳಿವೆ. ಆದರೆ ಇಂತಹ ಉದಾರ ಗುಣಗಳಿರುವ ಶಾನಭೋಗರು ಭೂಮಿಯನ್ನು ಸರ್ಕಾರದಿಂದ ಕೊಲ್ಲನ ಹೆಸರಿಗೆ ಮಾಡಿಸಿಕೊಡುತ್ತಾರೆ.

"ಹಸ್ಲರ ಕೊಲ್ಲ ತಾನೂ ಜಮೀನು ಮಾಡುತ್ತೇನೆ. ಎಂದು ಬಂದಾಗ ಮೊದಲು ಅವರು ನಕ್ಕರು ಹುಟ್ಟಾಳುಗಳು ಏನೂ ಮಾಡಲಾರರು ಅವರು ಒಡೆಯರು ಸಾಕಿ ಕೊಂಡ ಗುಲಾಮರು ಎಂಬುದವರಿಗೆ ಗೊತ್ತಿತ್ತು. ಸಮಾಜದ ಈ ಹಳೆಯ ಸಂಪ್ರದಾಯವನ್ನು ಅವರು ಒಪ್ಪಿರಲಿಲ್ಲವಾದರೂ ಅದರ ವಿರುದ್ಧ ಧ್ವನಿ ಎತ್ತುವ ಒಂದು ಅವಕಾಶ ಅವರಿಗೆ ಒದಗಿ ಬಂದಿರಲಿಲ್ಲ. ಕಾನ ತೋಟದ ಕೊಲ್ಲ ತಾನಾಗಿಯೇ ಮುಂದೆ ಬಂದು ತಾನು ಜಮೀನು ಮಾಡುತ್ತೇನೆ ಎಂದಾಗ ಈ ಮನುಷ್ಯನಿಂದ ಈ ಕೆಲಸ ಆದೀತು ಎನಿಸಿತು. ಇವನಿಗೆ ಸಹಾಯ ಮಾಡೋಣ. ವ್ಯವಸಾಯ ಮಾಡುವುದು ಒಂದೇ ಜಾತಿಗೆ ಹೇಳಿದ ಕೆಲಸವೇನಲ್ಲ ಇವನೂ ಮಾಡಲಿ ಎಂದು ಕೊಂಡರು. ಕೊಲ್ಲನಿಗೆ ಜಮೀನು ಕೊಡಿಸಲು ಅದೇನು ವ್ಯವಸ್ಥೆ ಮಾಡಬೇಕೋ ಅದೆಲ್ಲವನ್ನೂ ಮಾಡಿದರು. ಕೊಲ್ಲನ ಅರ್ಜಿ ಅವನ ಹೆಬ್ಬೆರಳ ಗುರುತಿನೊಡನೆ ತಾಳಗುಪ್ಪೆಗೆ ಹೋಗಿ ಅಲ್ಲಿಂದ ಮುಂದೆ ಸಾಗರಕ್ಕೆ ಹೋಯಿತು. ಶಾನುಭೋಗರು ಕೊಲ್ಲನನ್ನು ಕರೆದು ಸಾಗುವಳಿ ಚೀಟಿಯನ್ನು ಕೊಟ್ಟರು."[೧೭]

ಕೊಲ್ಲನಿಗೆ ಸೊಪ್ಪಿನ ಬೆಟ್ಟದ ಜಮೀನು, ತನ್ನ ಸ್ವಂತ ಜಮೀನಾಗಿ ಭೂ ಒಡೆತನ ಬರುತ್ತದೆ. ಈ ಭೂಮಿಯಲ್ಲಿ ಬೆಳೆ ತೆಗೆದು ಸ್ವಾಭಿಮಾನಿ ರೈತನಾಗಲು ಛಲತೊಡುತ್ತಾನೆ. ಈ ಕೊಲ್ಲ ಸ್ವತಂತ್ರ ಬೇಸಾಯ ಮಾಡಲು ನಿರ್ಧರಿಸಿದ ದಿನದಿಂದ ತಮ್ಮ ಜನಾಂಗದ ಕೇರಿಯನ್ನು ಬಿಟ್ಟು ಹೊರಡುತ್ತಾನೆ. ಇಲ್ಲಿ ಜಾತಿ ಕಾರಣದಿಂದಾಗಿ ಹಸ್ಲರು ಭೂಮಿಯನ್ನು ಉಳುಮೆ ಮಾಡುವುದೇ ಅಪರಾಧ ಎಂಬ ಭಾವನೆ ವ್ಯಕ್ತಗೊಳ್ಳುತ್ತದೆ. ಇಲ್ಲಿ ಜಾತಿಯೇ ಭೂಒಡೆತನವನ್ನು ನಿಯಂತ್ರಿಸುತ್ತದೆ. ಇದಕ್ಕಾಗಿ ಕೊಲ್ಲ ಅನೇಕ ಸಂಕಷ್ಟಗಳನ್ನು ಎದುರಿಸಬೇಕಾಗುತ್ತದೆ. "ಹಸ್ಲರನೊಬ್ಬ ಹೊಲ ಮಾಡಲು ಹೊರಟಿದ್ದಾನೆಂಬ ಸುದ್ದಿ ಕೇಳಿ ಎಲ್ಲರೂ ನಕ್ಕಿದ್ದರು. ದೀವ್ರು, ಬ್ರಾಹ್ಮಣರು, ಲಿಂಗಾಯತರು, ಕೊನೆಗೆ ಹೊಲೆಯರು ಎಲ್ಲರೂ ನಕ್ಕರು. ಹಸ್ಲರ ಕೈಯಲ್ಲಿ ಏನೇನೂ ಆಗುವುದಿಲ್ಲ. ಅವರೆಲ್ಲ ಒಡೆಯರ ಗುಲಾಮರಾಗಿರಲು ಲಾಯಕ್ಕು ಎನ್ನುವ ವಾದ ಎಲ್ಲರದು. ಯಾರ ನಗೆಗೂ

ಕಿವಿಗೊಡದೆ ನಿಂತ ಕೊಲ್ಲ. ಈಗ ಅವನ ಹೊಲದ ತುಂಬ ಬೆಳೆ, ಹಸ್ಲರ ಕೊಲ್ಲನ ಹೊಲದಲ್ಲಿ ಭತ್ತದ ಸಸಿ."[೧೮]

ಇಂಥ ಅವಹೇಳನದ ಮಾತುಗಳನ್ನು ಕೇಳಿಯೂ ತಾನು ರೈತನಾಗುವ, ಭೂ ಒಡೆಯನಾಗುವ ಹಂಬಲ,ಛಲವಿದೆ. ಹಸ್ಲರ ಕೊಲ್ಲ ಸ್ವತಂತ್ರ ಬೇಸಾಯ ಮಾಡಿದ ನಂತರದಲ್ಲಿ ಆತನ ಗೆಳೆಯ ಚೌಡನು ಸಹ ತನ್ನ ಒಡೆಯನ ಬಳಿ ಕೆಲಸ ಮಾಡಲು ಬೇಸರಿಸಿಕೊಳ್ಳುತ್ತಾನೆ. ಆತನ ಸಿಟ್ಟು ಸೆಡವನ್ನು ತನ್ನ ಒಡೆಯನ ಮುಂದೆ ವ್ಯಕ್ತಗೊಳಿಸುತ್ತಾನೆ. "ಪ್ರತಿವರ್ಷ ಕೊನೆ ಕಟ್ಟಿ, ಕೊನೆ ಕಿತ್ತು, ಅಡಕೆ ಸುಲಿದು, ಅಡಕೆ ಬೇಯಿಸಿ ಒಡೆಯರನ್ನು ಶ್ರೀಮಂತರನ್ನಾಗಿ ಮಾಡಿದುದಷ್ಟೇ ಆಯಿತು ಎಂದು ಯೋಚಿಸುತ್ತಾನೆ. ಒಡೆಯನ ಮನೆ ತುಂಬ ಸಂಪತ್ತು ತನ್ನ ಮನೆ ತುಂಬ ಬಡತನ, ಕೆಲಸಕ್ಕೆ ಹುಟ್ಟಾಳು ಊಟಕ್ಕೆ ಒಡೆಯ" ಎಂಬ ಮಾತಿನ ಮೂಲಕ ತನ್ನ ಆಕ್ರೋಶ ವ್ಯಕ್ತಪಡಿಸುತ್ತಾನೆ. ಇಂಥ ಆಶಯಗಳ ಮೂಲಕ ಹಸ್ಲರ ಜನಾಂಗದ ಬದುಕಿನಲ್ಲಿ ಅರಿವು ಮೂಡಿಸುವ, ಸ್ವತಂತ್ರ ಬದುಕನ್ನು ಕಟ್ಟಿಕೊಳ್ಳುವ ಕೊಲ್ಲ ಮಾದರಿಯಾಗಿರುವುದು ಆಶಾದಾಯಕ ಬೆಳವಣಿಗೆಯಾಗಿದೆ.

ಕೊಲ್ಲ ಭೂ ಒಡೆಯನಾಗಿರುವುದು ಕೃಷ್ಣಯ್ಯ ಹೆಗ್ಗಡೆಯವರಿಗೆ ಸಹಿಸದ ವಿಚಾರವಾಗುತ್ತದೆ. ಸ್ವತಂತ್ರ ಬೇಸಾಯದ ಮೂಲಕ ಕೊಲ್ಲನಲ್ಲಿ ಆತ್ಮವಿಶ್ವಾಸ ಮೂಡಿದೆ. ಸ್ವತಂತ್ರ ಬದುಕಿನಲ್ಲಿ ಕಷ್ಟವೋ ಸುಖವೋ ಬದುಕಬೇಕೆಂಬ ಹಂಬಲ ಆತನಲ್ಲಿ ಕಾಣುತ್ತೇವೆ. ಆತನ ಗೆಳೆಯ ಹನುಮನ ನೆರವಿನಿಂದ ಬೇಸಾಯಗಾರನಾಗಿ ಉತ್ತಮ ಫಸಲನ್ನು ಬೆಳೆಯುತ್ತಿದ್ದಾನೆ. ಈ ಭೂಮಿಯಲ್ಲಿ ತಾನು ರೈತನಾಗುವ ಕನಸು ನನಸಾಗಿರುವುದು, ನೆನೆಪಿಸಿಕೊಂಡು ಸಂಭ್ರಮಿಸುತ್ತಾನೆ. ಕೊಲ್ಲನ ಶ್ರಮದಿಂದ ಹೊಲದಲ್ಲಿ ಬೆಳೆ ಮೈದುಂಬಿನಿಂತಿದೆ. ಇಂತಹ ಬೆಳೆಯನ್ನು ನೋಡಿ ಭೂಮಾಲೀಕನ ಹೊಟ್ಟೆಯಲ್ಲಿ ಕ್ರೌರ್ಯ ದಗಧಗಿಸುತ್ತದೆ. ಭೂಮಾಲೀಕ ಮತ್ತು ಆತನ ಸಹಚರರೊಂದಿಗೆ ರಾತ್ರೋ ರಾತ್ರಿ ಬೆಳೆನಾಶ ಮಾಡುವ ಸಂಚನ್ನು ರೂಪಿಸುತ್ತಾರೆ. ಇಂಥ ಸಂಚಿನಿಂದ ಭೂಮಾಲೀಕ ವ್ಯವಸ್ಥೆಯ ಕ್ರೌರ್ಯವು ಕೊಲ್ಲನನ್ನು ಧೃತಿಗೆಡಿಸುತ್ತದೆ. ಆದರೆ ಆತನೇ ಸ್ವಗತದಂತೆ ಮಾತನಾಡುತ್ತಾ ಜೀತಗಾರ ಸ್ವತಂತ್ರ ಬೇಸಾಯಗಾರನಾಗುವುದನ್ನು ಊಳಿಗಮಾನ್ಯವ್ಯವಸ್ಥೆ ಸಹಿಸದೆ ಇರುವುದನ್ನು ಕಂಡು ವ್ಯಥೆಪಡುತ್ತಾನೆ. ಅದರಲ್ಲೂ ಹಸ್ಲರು ಭೂಮಾಲೀಕರಾಗುವುದು ಆ ಕಾಲದ ಒತ್ತಡದಲ್ಲಿ ನಿಜಕ್ಕೂ ದೊಡ್ಡ ಹೋರಾಟವಾಗಿ ಕಂಡುಬರುತ್ತದೆ.

ಭೂಮಾಲೀಕರ ಕಿರುಕುಳದಿಂದ ಕೆಲವು ದಿನಗಳ ಮಟ್ಟಿಗೆ ಕೊಲ್ಲ ತನ್ನ ಬದುಕಿನ ಛಲದಿಂದಾಗಿ ತಾಳಗುಪ್ಪೆಗೆ ಹೋಗಿ ದುಡಿದು ಹಣಸಂಪಾದಿಸಲು ನಿರ್ಧರಿಸುತ್ತಾನೆ. ಅಲ್ಲಿ ದುಡಿದು ಸಂಪಾದಿಸಿ ಆರ್ಥಿಕವಾಗಿ ಸದೃಢನಾದ ನಂತರದಲ್ಲಿ ಪುನಃ ತನ್ನ ಹಳ್ಳಿಗೆ ಹಿಂತಿರುಗುತ್ತಾನೆ. ತನ್ನ ಏಳುವರ್ಷದ ಮಗ ಹಾಲಪ್ಪನನ್ನು ಶಾಲೆಗೆ ಸೇರಿಸಿ ವಿದ್ಯಾವಂತನನ್ನಾಗಿ ಮಾಡಿ ತನ್ನ ಮಗನೊಂದಿಗೆ ತನ್ನೂರಿಗೆ ಹಿಂತಿರುಗುತ್ತಾನೆ. ಎಂದಿನಂತೆ ತನ್ನ ಜಮೀನಿಗೆ ಬೇಸಾಯ ಮಾಡುವ ಮೂಲಕ ಭೂಮಾಲೀಕ ವರ್ಗಕ್ಕೆ ಸವಾಲೆಸೆಯುತ್ತಾನೆ.

ಕೊಲ್ಲನ ಗೆಳೆಯ ಹನುಮ ಹೇಳುವಂತೆ. " ಕೊಲ್ಲ.... ದುಡಿಯೋರಿಗೆ ಭೂಮಿ ತಾಯಿ ಯಾವತ್ತು ದ್ರೋಹ ಮಾಡೊದಿಲ್ಲ.... ನಿನ್ನ ಪ್ರಯತ್ನ ಕೊನೆಗೂ ಫಲ ಕೊಡ್ತು... ಎಂದು ನುಡಿದ. ... ಎಲ್ಲಾ ನಿನ್ನ ಸಹಾಯ ಹನುಮ... ನೀ ಕೈ ಹಿಡಿದೆ ಇದ್ದಿದ್ರೆ ನಾನು ಕೆಟ್ಟು ಪ್ಯಾಟೆ ಸೇರ್‍ತಿದ್ದೆ... "[೧೯] ಹನುಮ ಕೊಲ್ಲನಿಗೆ ಸದಾ ಬೆಂಬಲ ನಿಲ್ಲುತ್ತಾನೆ.

ಹಸ್ಲರ ಸಮುದಾಯಕ್ಕೆ ನಾಯಕತ್ವ ತಂದುಕೊಟ್ಟಂತೆ, ಹಸ್ಲರ ಜನಾಂಗಕ್ಕೆ ಅರಿವು ಮೂಡಿಸುವ ಆಶಯ ಹೊತ್ತು ಕೊಲ್ಲನ ಮಗ ಹಾಲಪ್ಪ ಬಂದಿದ್ದಾನೆ. ಈ ಹಾಲಪ್ಪ, ಹಸ್ಲರಿರುವ ಎಲ್ಲ ಹಳ್ಳಿಗಳಿಗೂ ಹೋಗಿ ಬರುತ್ತಾನೆ. "ಎಲ್ಲೆಲ್ಲೂ ಅದೇ ಕತೆ. ಅದೇ ಜೀವನ. ಎಲ್ಲರೂ ಹುಟ್ಟಾಳುಗಳೇ. ಎಲ್ಲರೂ ಒಡೆಯನ ಮನೆಯ ಹಳಸಿದನ್ನವನ್ನೇ ನಂಬಿ ಬದುಕಿರುವ ಜನ. ಎಲ್ಲರೂ ಅಜ್ಞಾನಿಗಳು, ಸೋಮಾರಿಗಳು, ತಮ್ಮ ಪೋಷಣೆ ನಡೆಯುತ್ತಿದೆ ಎಂಬುದನ್ನೇ ಅರಿಯದ ಮುಗ್ಧರು. ಇದು ಬದುಕಲ್ಲ. ಬದುಕು ಬೇರೆ ಒಂದಿದೆ ಎಂಬುದನ್ನು ಅರಿಯದೆ ಬದುಕುತ್ತಿರುವವರು. ಈ ಎಲ್ಲ ಜನರ ಬದುಕಿಗೆ ಒಂದು ರೂಪ ಕೊಡುವ ಕಾರ್ಯವನ್ನು ತಾನು ಕೈಗೊಳ್ಳಬೇಕು. ಈ ಜನರ ಅಜ್ಞಾನ, ದಾರಿದ್ರ್ಯವನ್ನು ಹೋಗಲಾಡಿಸುವ ಯತ್ನವನ್ನು ತಾನು ಮಾಡಬೇಕು. ಒಡೆಯರಿಂದ ಜನರಿಗಾಗುತ್ತಿರುವ ವಂಚನೆ ದ್ರೋಹವನ್ನು ಬುಡ ಸಹಿತ ಕಿತ್ತುಹಾಕಲು ತಾನು ಶ್ರಮಿಸಬೇಕು. ಹೌದು, ಇಲ್ಲದಿದ್ದರೆ ತನ್ನ ಹಳ್ಳಿಯಲ್ಲಿ ಉಳಿದು ಏನು ಪ್ರಯೋಜನವಾದಂತಾಗುತ್ತದೆ ?"[೨೦] ಇಂಥದೇ ಆಶಯವನ್ನು ಕುಂ.ವೀ.ಯವರ ಕೊಟ್ರ‍ಹೈಸ್ಕೂಲಿಗೆ ಸೇರಿದ್ದ ಕಾದಂಬರಿಯಲ್ಲಿ ಕಾಣಬಹುದು.

ಹಾಲಪ್ಪನ ಬರುವಿಕೆಯ ತಮ್ಮ ಸಮುದಾಯದ ಬದುಕಿನ ಬದಲಾವಣೆಯ ಆಶಾಕಿರಣವಾಗಿ ಕಂಡುಬರುತ್ತದೆ. ತಮ್ಮ ಸಮುದಾಯ ವಾಸ್ತವ ಸ್ಥಿತಿಯನ್ನು ಮೀರಿ ಹೊಸಬದುಕನ್ನು ಕಟ್ಟುವ ಮತ್ತು ಬೆಳಗಾಗುವ ಕಾದಂಬರಿ ಕಟ್ಟಿಕೊಟ್ಟಿದೆ. ಈ ಕಾದಂಬರಿಯಲ್ಲಿ ಮುಖ್ಯವಾಗಿ ಕೊಲ್ಲ ಸ್ವತಂತ್ರಬೇಸಾಯಗಾರನಾಗಿ ತಮ್ಮ ಸಮುದಾಯಕ್ಕೆ ಮಾದರಿಯಾಗುತ್ತಾನೆ. ತನ್ನ ಮಗನ ವಿದ್ಯಾಭ್ಯಾಸದಿಂದ ಸ್ವತಂತ್ರವಾಗಿ ಸಮುದಾಯಕ್ಕೆ ಬೆಳಕು ತರುವಂತೆ ಬೆಳೆಸುತ್ತಾನೆ. ಈತನ ಬರುವಿಕೆಯಿಂದ ಸಮುದಾಯಕ್ಕೆ ಬೆಳಕು ಮೂಡುವುದು ಉತ್ತಮ ಆಶಯವಾಗಿ ವ್ಯಕ್ತಗೊಂಡಿದೆ.

" **ಮುಳುಗಡೆ**" ಕಾದಂಬರಿಯಲ್ಲಿ ಭೂ ಸಂಬಂಧಿ ನೆಲೆಯ,ಅಭಿವೃದ್ಧಿ ಯೋಜನೆಯ ಹೆಸರಿನಲ್ಲಿ ಸರ್ಕಾರವೇ ಭೂಮಿಯನ್ನು ಆಕ್ರಮಿಸುವ ಚಿತ್ರಣವನ್ನು ಕಾಣುತ್ತೇವೆ. ಇಂಥದೇ ಆಶಯವನ್ನು ವಡ್ಡು, ದ್ವೀಪ ಕಾದಂಬರಿಗಳಲ್ಲಿಯೂ ಕಾಣಬಹುದಾಗಿದೆ. ಆದರೆ ಇಲ್ಲಿ ಪ್ರಾತಿನಿಧಿಕವಾಗಿ ಮುಳುಗಡೆ ಕಾದಂಬರಿಯೊಂದನ್ನೇ ಆಯ್ದುಕೊಳ್ಳಲಾಗಿದೆ. ಇಲ್ಲಿ ಭೂಮಿಯೊಂದಿಗಿನ ಅಂತರ್‌ಸಂಬಂಧವನ್ನು ಮೈಗೂಡಿಸಿಕೊಂಡ ಈ ಭಾಗದ ರೈತರು ಮುಳುಗಡೆ ಪ್ರದೇಶವನ್ನು ತೆರವುಗೊಳಿಸಿದರೂ, ಇನ್ನೂ ಕೆಲವರು ಅಲ್ಲಿಯೇ ನೆಲೆಸಿರುವ ಚಿತ್ರಣ ಕಂಡುಬರುತ್ತದೆ.ಇಲ್ಲಿನ ಭೂಸಂಬಂಧಗಳು ರೈತರಲ್ಲಿ ಅಂತರ್ಗತಗೊಂಡು ಬಿಟ್ಟಿರಲಾಗದ ಸ್ಥಿತಿಯನ್ನು ಕಂಡುಬರುತ್ತದೆ. ಮುಳುಗಡೆ ಪ್ರದೇಶಕ್ಕೆ ಸರ್ಕಾರದ ಯೋಜನೆಯಿಂದ ಪುನರ್ವಸತಿ ಕಲ್ಪಿಸುವ ಸೌಲಭ್ಯದಿಂದ ವಂಚನೆಯಾಗುವುದು ಕಂಡುಬರುತ್ತದೆ. ಭೂಮಿ ಹಂಚಿಕೆಯಲ್ಲಾದ ಮೋಸ ವಂಚನೆಗಳ ಕುರಿತು ಕಾದಂಬರಿಯಲ್ಲಿ ವ್ಯಕ್ತಗೊಳ್ಳುತ್ತದೆ.

ಈ ಕಾದಂಬರಿಯ ಸಂಶೋಧಕ ಶಿಲಾಶಾಸನ, ಮಾಸ್ತಿಕಲ್ಲುಗಳ ಶೋಧನೆ ನಡೆಸಲು ಮುಳುಗಡೆ ಪ್ರದೇಶಕ್ಕೆ ಬರುತ್ತಾನೆ. ಶಿವಮೊಗ್ಗ ಜಿಲ್ಲೆಯ ಶರಾವತಿ ಯೋಜನೆಯಿಂದ ಅಡ್ಡಲಾಗಿ ಕಟ್ಟಿರುವ ಸೇತುವೆಯಿಂದಾಗಿ ನೂರಾರು ಹಳ್ಳಿಗಳು ಮುಳುಗಡೆಯಾಗಿವೆ. ಈ ಭಾಗದ ಹೊಸನಗರ ಹಾಗೂ ಸೊರಬ ತಾಲ್ಲೂಕುಗಳಿಗೆ ಸೇರಿರುವ ಹಳ್ಳಿಗಳು ಮುಳುಗಡೆಯಾಗಿವೆ. ಏಕಕಾಲದಲ್ಲಿ ಮುಳುಗಡೆಯ ದುರಂತ ಮತ್ತು ತನ್ನ ಪ್ರೇಮದ ಪ್ರಸಂಗಗಳು ವ್ಯಕ್ತವಾಗುದು ಕಾದಂಬರಿಯ ವೈಶಿಷ್ಟ್ಯತೆಯನ್ನು ಕಾಣುತ್ತೇವೆ. ಈ ಸಂಶೋಧಕ ಅನಿರೀಕ್ಷಿತ ಭೇಟಿ ನೀಡಿ, ಸಾಗರದಲ್ಲಿರುವ ತನ್ನ ಹೆಂಡತಿ ಕಮಲಳ ಜೊತೆ ಚೆತೋಹಾರಿ ಮಾತುಕತೆ ನಡೆಸುತ್ತಾನೆ. ಆನಂತರ ಪ್ರೇಮಪ್ರಕರಣದಿಂದಾಗಿ ಅನುಮಾನದ ಹುತ್ತ ಬೆಳೆಯುತ್ತದೆ. ಕೊನೆಯಲ್ಲಿ ತನ್ನ ಹೆಂಡತಿ ಮಾಜಿ ಪ್ರೇಯಸಿ ತೇಜಸ್ವಿ ಎದುರುಬದರು ಭೇಟಿಯಾದ ಸಂದರ್ಭದಲ್ಲಿ ಕಮಲ ತನ್ನ ಹಿಂದಿನ ಕಹಿ ಘಟನೆಯಸತ್ಯ ತಿಳಿದು ಗಂಡ ಹೆಂಡಿರ ಪ್ರೀತಿ ತಿಳಿಯಾಗುತ್ತದೆ. ಏಕಕಾಲಕ್ಕೆ ತಮ್ಮ ಪ್ರೇಮಮಯ ಜೀವನ ಮತ್ತು ಮುಳುಗಡೆಯ ಹಿಂದಿನ ಸಂಕಟವನ್ನು ನಿರೂಪಿಸಿರುವುದನ್ನು ಕಾದಂಬರಿಯಲ್ಲಿ ಕಾಣಬಹುದಾಗಿದೆ.

ಈ ಸಂಶೋಧಕ ಹಿಡಿತೆರೆಗೆ ಭೇಟಿ ನೀಡಿದ ಸಂದರ್ಭದಲ್ಲಿ ಆ ಊರಿನ ಪಟೇಲ ಧನಪಾಲಯ್ಯ ನ ಭೇಟಿಯಾಗುತ್ತದೆ. ಮುಳುಗಡೆ ಕುರಿತು,"...ಸರಕಾರ ಪರಿಹಾರ ಕೊಡುತ್ತೆ. ಜಮೀನು ಕೊಡುತ್ತೆ... ಎಷ್ಟು ಕೊಟ್ಟರೆ ಏನು... ಹಿರಿಯರು ಬಾಳಿ ಬದುಕಿದ ಮನೇನ ಕೊಡೋ ತಾಕತ್ತು ಸರಕಾರಕ್ಕೆ ಉಂಟಾ?"[೨೦] ಎಂದು ಪ್ರಶ್ನಿಸುತ್ತಾನೆ. ಮುಳುಗಡೆಯಾದ ಭೂಮಿಯಿಂದ ಬಿಟ್ಟು ಬರಲಾದ ಸಂಕಟ ಆತನಲ್ಲಿ ಕಾಣುತ್ತೇವೆ. ಇಲ್ಲಿನ ಭೂಸಂಬಂಧಗಳು ಅಂತರ್ಗತಗೊಂಡಿರುವುದು ಇಂಥ ಮಾತುಗಳಿಂದ ವ್ಯಕ್ತವಾಗುತ್ತದೆ.

ನಾಗೂಲಿಯ ಪಾರ್ವತಮ್ಮನ ಆತಿಥ್ಯ ಮತ್ತು ತನಗಿದ್ದ ಭೂಮಿಯೊಂದಿಗಿನ ಅಂತರ್ಗತ ಸಂಬಂಧಗಳಿಂದಾಗಿ ಬಿಟ್ಟುಹೋಗಲು ಮನಸಾಗದೇ ಇಲ್ಲಿಯೇ ಉಳಿದಿದ್ದಾಳೆ. ಮಡೇನೂರಿನ ಹಿರೆಕಲ್‌ಮಠಕ್ಕೆ ಭೇಟಿನೀಡಿದ ಸಂಶೋಧಕ ಮಠದ ಸ್ವಾಮಿಗೆ ಲಕ್ಕವಳ್ಳಿಯ ಸಮೀಪ ಜಮೀನು ನೀಡಲಾಗಿದೆ. ಆದರೆ ಈ ಸ್ವಾಮಿ ಶಿವಮೊಗ್ಗದಲ್ಲಿ ಮಠ ಸ್ಥಾಪಿಸುತ್ತಾರೆ.ಆ ಊರಿನ ರೈತರೆಲ್ಲರಿಗೂ ಲಕ್ಕವಳ್ಳಿಯಲ್ಲಿಯೇ ಭೂಮಿ ದೊರೆಯುವ ವಿವರ ತಿಳಿಯುತ್ತದೆ. ಇದೇ ಕಾಲಕ್ಕೆ ಸಂಶೋಧಕ ನಾಗವಳ್ಳಿಯ ರುದ್ರೇಗೌಡನನ್ನು ಭೇಟಿ ಮಾಡಿದಾಗ ಆತನ ಊರಿನ ಚರಿತ್ರೆಯ ವಿವರ ಪಡೆಯುತ್ತಾನೆ. ಕೆಲವರು ಮುಳುಗಡೆ ಪ್ರದೇಶದ ಪರಿಹಾರವನ್ನು ಪಡೆದು ಶಿವಮೊಗ್ಗ ಪಟ್ಟಣದಲ್ಲಿ ವ್ಯವಹಾರಕ್ಕೆ ತೊಡಗಿಸಿಕೊಂಡಿದ್ದಾರೆ. ಮತ್ತೆಕೆಲವರು ರೈತರಾಗಿ ಬೇರೆ ಕಡೆ ನೀಡಿದ ಭೂಮಿಯಲ್ಲಿ ವ್ಯವಸಾಯ ಮಾಡುತ್ತಿರುವ ಚಿತ್ರಣವಿದೆ.

ಮುಳುಗಡೆ ಪ್ರದೇಶದಲ್ಲಿ ದಗಲ್ಬಾಜಿ ಕೆಲಸ ಮಾಡಿಕೊಂಡಿದ್ದ ಸಣ್ಣದೇವೇಗೌಡನು ಮುಳುಗಡೆ ಪ್ರದೇಶದ

ಪರಿಹಾರ ಹಣವನ್ನು ದೋಚಿ ಶಿವಮೊಗ್ಗ ನಗರದಲ್ಲಿ ಅಂಗಡಿ ,ಮನೆಕಟ್ಟಿಕೊಂಡಿರುವುದು ತಿಳಿಯುತ್ತದೆ. ಸರ್ಕಾರದ ಪರಿಹಾರ ಕುರಿತು ಗೌಡರು ಹೇಳುವಂತೆ "ಇವನೊಬ್ಬನೇ ಅಲ್ಲ... ರೆವಿನ್ಯೂ ಇನ್ಸ್‌ಪೆಕ್ಟರ್ ಡಯಾನ, ಇಮಾಮ ಮುಳುಗಡೆಯ ಅಧಿಕಾರಿಗಳು ಇಂಜಿನಿಯರುಗಳು ಎಲ್ಲ ಸುಲಿಗೆ ಮಾಡ್ತಿದಾರೆ... ಬೆಂಕಿ ಬಿದ್ದ ಮನೆಯಿಂದ ಹಿರಿದದ್ದೇ ಲಾಭ. ನೀವು ಒಂದು ದಾರಿ ಹುಡುಕಿಕೊಳ್ಳಿ.."[೨೨] ಸಂಶೋಧಕನನ್ನು ಕುರಿತು ಗೌಡ ಹೇಳುತ್ತಾನೆ. ಇಲ್ಲಿ ಪರಿಹಾರದ ಹೆಸರಿನಲ್ಲಿ ನಿಜವಾಗಿ ದೊರೆಯಬೇಕಿದ್ದ ಫಲಾನುಭವಿಗಳಿಗೆ ಸಿಗದೇ ಮಧ್ಯವರ್ತಿಗಳ ಪಾಲಾಗುತ್ತದೆ.

ನಾಗೂಲಿಯ ನಾಗೇಶ ದೇವಸ್ಥಾನದ ಭೂಮಿಯನ್ನು ತಮ್ಮ ಹೆಸರಿಗೆ ಮಾಡಿಕೊಂಡು ಕೆಲವರು ಪರಿಹಾರದ ಹಣವನ್ನು ನುಂಗಲು ಯತ್ನಿಸುವ ಚಿತ್ರಣವಿದೆ. ನಾಗೊಲಿಯ ಪಾರ್ವತಮ್ಮ ಒಂಟಿ ಹೆಂಗಸಾದರೂ ತಾನೇ ನಿಂತು ವ್ಯವಸಾಯ ಮಾಡುತ್ತಿದ್ದನ್ನು ಗಮನಿಸಬಹುದು. "ಮನೆ ಜಮೀನು ಮುಳುಗಡೆಯಾದವರಿಗೆಲ್ಲ ಜಮೀನು ಪರಿಹಾರ, ಕೊಟ್ಟಾಗಿತ್ತು. ಎಲ್ಲ ಹೊಸ ಮನೆ ಹೊಸ ಜಮೀನು ಮಾಡಿಕೊಂಡು ಅಲ್ಲಿಗೆ ಹೋಗಿದ್ದರು. ಆದರೆ ಕೆಲವರ ಜಮೀನು ಈ ವರ್ಷವೇ ಮುಳುಗಡೆಯಾದರೆ ಕೆಲವರದ್ದು ಮುಳುಗಲು ಇನ್ನೊಂದು ವರ್ಷ ಬೇಕಿತ್ತು. ನೀರು ಅಲ್ಲಿಗೆ ಏರಲು ಅಣೆಕಟ್ಟು ಮತ್ತೂ ಮೇಲೆ ಹೋಗಬೇಕಿತ್ತು. ಈ ವರ್ಷ ತಮ್ಮ ಜಮೀನು ಮುಳುಗುವುದಿಲ್ಲ ಎಂಬುದನ್ನು ಅರಿತ ಇಂತಹ ಕೆಲವರು ಹೊಸ ಜಮೀನಿನಲ್ಲೂ ಬೇಸಾಯ ಮಾಡಿದರು. ಹಳೆಯದರಲ್ಲೂ ಬೀಜ ಬಿತ್ತಿದರು. ಮಳೆಗಾಲ ಮುಗಿದು ಹಳೆ ಜಮೀನಿನಲ್ಲಿ ಭತ್ತ ಬಿಡಿಸಿಕೊಂಡ ನಂತರ ಹೊಸ ಊರಿಗೆ ಮನೆ ಸಾಮಾನು ಸಾಗಿಸಲು ಲಾರಿಗೆ ಅರ್ಜಿ ಕೊಟ್ಟರು."[೨೩] ಇಲ್ಲಿ ಭೂಮಿಯ ನಂಟನ್ನು ಗಮನಿಸಬಹುದಾಗಿದೆ.

ಇಲ್ಲಿ ತಮ್ಮ ಭೂಮಿ ಮುಳುಗಡೆಯಾಗುವವರೆಗೂ ಉಳಿದು ಆನಂತರದಲ್ಲಿ ಬೇರೆ ಊರಿಗೆ ರೈತರು ಹೋಗುವ ನಿರ್ಧಾರವನ್ನು ಮಾಡಿದ್ದಾರೆ. ಈ ಕಾದಂಬರಿಯಲ್ಲಿ ಮುಳುಗಡೆಗೊಂಡ ನಂತರದಲ್ಲಿ ರೈತರು ತಮ್ಮ ನೆಲೆಯನ್ನು ಕಳೆದುಕೊಂಡು ಜೀವನದ ಉಸಿರಾಗಿದ್ದ ಭೂಮಿಯನ್ನು ಬಿಟ್ಟುಕೊಡಲಾಗದೆ ಕೆಲವರು ಅಲ್ಲಿಯೇ ವಾಸಿಸುತ್ತಿದ್ದಾರೆ. ಇಲ್ಲಿನ ರೈತರು ಭೂಮಿಯೊಂದಿಗಿನ ಅಂತರ್‌ಸಂಬಂಧಗಳು ವ್ಯಕ್ತಗೊಂಡಿವೆ. ಇದೇ ಕಾಲಕ್ಕೆ ಕೆಲ ವಂಚಕರು ಪುನರ್ವಸತಿ ಯೋಜನೆಯ ಹಣವನ್ನು ದುರುಪಯೋಗ ಮಾಡಿಕೊಳ್ಳುವ ದುರಂತವನ್ನು ಕಾಣುತ್ತೇವೆ.

"**ಕೊಳಗ**" ಕಾದಂಬರಿಯ ಮುನ್ನುಡಿಯಲ್ಲಿ ಲೇಖಕರು ಹೇಳುವಂತೆ, "ಕಾಗೋಡು ಹೋರಾಟ, ಅದರ ಫಲಶ್ರುತಿಯನ್ನು ಕುರಿತು ಹಲವು ಲೇಖನಗಳು, ಗ್ರಂಥಗಳು ಈಗಾಗಲೇ ಬಂದಿರುವುದರಿಂದ, ಹೋರಾಟದ ಕತೆಯನ್ನು ನಾನಿಲ್ಲಿ ಹೇಳಲು ಹೋಗಿಲ್ಲ. ಕಾಗೋಡಿನ ಸುತ್ತಲಿನ ಹಳ್ಳಿಗಳ ಹೆಸರುಗಳನ್ನಷ್ಟೇ ನಾನಿಲ್ಲಿ ಉಳಿಸಿಕೊಂಡಿದ್ದೇನೆ. ಉಳಿದುದೆಲ್ಲ ಕಾಲ್ಪನಿಕ. ಈ ಹೋರಾಟವನ್ನು ಹತ್ತಿರದಿಂದ ನೋಡಿದ ನಾನು ವಸ್ತುಸ್ಥಿತಿಯ ಪುನರ್‌ನಿರ್ಮಾಣ ಮಾಡಿದ್ದೇನೆ."[೨೪] ಇಲ್ಲಿ ಕಾದಂಬರಿಯ ಉದ್ದೇಶವನ್ನು ವ್ಯಕ್ತವಾಗುತ್ತದೆ. ಇಲ್ಲಿ ಕೇಂದ್ರ ಪ್ರಜ್ಞೆ ಕಾಗೋಡುಚಳುವಳಿಯ ಘಟನೆಯ ವಿವರಗಳಿವೆ. ಈ ಚಳುವಳಿಯೇ ಸೃಜನಶೀಲ ಅಭಿವ್ಯಕ್ತಿಯಾಗಿ ಮೈದಳೆದಿದೆ. ಕಾಗೋಡು ಚಳುವಳಿಯ ಹಿನ್ನೆಲೆ ಮುನ್ನೆಲೆಗಳನ್ನು ಸೃಜನಾತ್ಮಕವಾಗಿ ದಾಖಲು ಮಾಡುವುದು ಈ ಕಾದಂಬರಿಯ ಪ್ರಮುಖವಾದ ಉದ್ದೇಶವಾಗಿದೆ.

ಈ ಕಾದಂಬರಿಯ ಕಾಲಕ್ಕೆ ಕಾಗೋಡು ಚಳುವಳಿಯ ಕತೆಯನ್ನು ತಿಳಿಯಲು ಉಪನ್ಯಾಸಕರ ನೇತೃತ್ವದಲ್ಲಿ ವಿದ್ಯಾರ್ಥಿ ತಂಡ ಬರುತ್ತದೆ. ಈ ವಿದ್ಯಾರ್ಥಿಗಳು ಕುತೂಹಲದಿಂದ ಕಾಗೋಡು ಹೋರಾಟದ ಪ್ರದರ್ಶನ ನೋಡಲು ಬರುತ್ತಾರೆ. ೧೯೫೧ರಲ್ಲಿ ಜರುಗಿದ ವಾಸ್ತವದಲ್ಲಿ ಘಟಿಸಿದ ಕಾಗೋಡು ಚಳುವಳಿಯನ್ನು ಇತಿಹಾಸದ ಕಣ್ಣಿನಿಂದ ನೋಡ ಹೊರಟ ವಿದ್ಯಾರ್ಥಿಗಳಿಗೆ ಈ ಘಟನೆಯ ಪರಿಚಯವಾಗುತ್ತದೆ. ಕಾಗೋಡಿಗೆ ಹುಚ್ಚಪ್ಪನನ್ನು ಭೇಟಿ ಮಾಡಿ,ಅವರ ಮೂರನೇ ಮಗ ಶಿವಾನಂದನ ಜೊತೆಗೆ ಚಳುವಳಿಯ ಕುರಿತು ವಿವರಣೆ ಪಡೆಯುತ್ತಾರೆ.

ಕಾಗೋಡು ಚಳುವಳಿಯಲ್ಲಿ ಬಳಸುತ್ತಿದ್ದ ಪರಿಕರಗಳನ್ನು ನೋಡಿ ಹುಚ್ಚಪ್ಪ ಭಾವುಕನಾಗಿ, "ಈ ನೇಗಿಲು ನೊಗಗಳನ್ನು ಕೆಳಗಿಳಿಸಿ ತೊಳೆದು ಒರೆಸಿ ಉಳಿದ ನೇಗಿಲು ಗಾಡಿ ಹಲಕು ಮತ್ತಿತರ ಸಲಕರಣೆಗಳ ಜೊತೆ ಇವುಗಳನ್ನು ಇರಿಸಿ ಪೂಜೆ ಮಾಡುತ್ತಿದ್ದ. ಕತ್ತಿಯಿಂದ ಕೊಡಲಿಯಿಂದ ಕತ್ತರಿಸಿ ತುಂಡು ಮಾಡಿದ ಇವುಗಳ ಬಗ್ಗೆ ತನಗಿರುವ ಗೌರವ. ಅಭಿಮಾನವನ್ನು ಸೂಚಿಸುವಂತೆ, ಚಳುವಳಿಯ ನೆನಪು ಮಾಡಿಕೊಳ್ಳುತ್ತಿದ್ದ. ಈ ಚಳುವಳಿ ನಡೆಯದೇ

ಇದ್ದಿದ್ದರೆ ಈ ಸೀಮೆಯ ಗೇಣಿದಾರರೆಲ್ಲ ಭೂಮಾಲೀಕರಾಗುತ್ತಿರಲಿಲ್ಲ. ನಮಗೆಲ್ಲ ಭೂಮಿಯನ್ನು ಕೊಡಿಸಲು ಕಾರಣ ಈ ನೊಗ, ಈ ನೇಗಿಲು ಈ ಕೊಳಗಗಳು ಅನ್ನುತ್ತಿದ್ದ."[೨೫] ಇಲ್ಲಿ ಕಾಗೋಡು ಚಳುವಳಿಯ ಸಂಕೇತವಾಗಿ, ಬಂಧನದ ಬಿಡುಗಡೆಯ ಸಂಕೇತವಾಗಿ, ಶೋಷಣೆಯ ವಿರುದ್ಧದ ಸಂಕೇತಗಳಾಗಿ ಈ ಪರಿಕರಗಳು ಬಂದಿವೆ.

ಕಾಗೋಡು ಸತ್ಯಾಗ್ರಹ ಕುರಿತು ರಹಮತ್‌ತರೀಕೆರೆ ಹೇಳುವಂತೆ "ಮಲೆನಾಡಿನ ಪ್ರಾಂತ್ಯ ಸಂಘರ್ಷವೆಂದರೆ, ಜೀತದಾಳುಗಳ ನಾಶವೇ ಆಗಿರುತ್ತಿತ್ತು. ಮಲೆನಾಡಿನ ಪ್ರಾಂತ್ಯದಲ್ಲಿ ವರ್ಗಸಂಘರ್ಷ ವೆನ್ನಬಹುದಾದ ಕಾಗೋಡು ಸತ್ಯಾಗ್ರಹವಾಗಲು ತುಂಬ ಸಮಯವೇ ಹಿಡಿಯಿತು. ಅದಾದರೂ ಜೀತಾದಾಳುಗಳನ್ನೊಳಗೊಂಡ ಹೋರಾಟವಲ್ಲ. ಸ್ಥಿತಿಯನ್ನು ಮಾಗಿಸದೆ ಮತ್ತು ರಾಜಕೀಯ ಪ್ರಜ್ಞೆಯಿಲ್ಲದೆ ನಡೆಯುವ ಹೋರಾಟವು ಅಂತಿಮವಾಗಿ ಹುಸಿ ಹೋರಾಟವಾಗಿ ವ್ಯವಸ್ಥೆಯ ಗರ್ಭದಲ್ಲಿ ಕರಗಿಬಿಡುತ್ತದೆ. ಆದರೂ ಇಂಥದೊಂದು ಸಣ್ಣ ಚಲನೆ ಸಾಧ್ಯವಾದುದು ಐತಿಹಾಸಿಕವಾದುದೇ ಆಗಿದೆ."[೨೬] ಎಂದು ಗುರುತಿಸುತ್ತಾರೆ.

ಕಾಗೋಡು ಚಳುವಳಿ ನಡೆದ ಘಟನೆಗಳ ವಿವರ ದೊರೆಯುತ್ತದೆ. ಗೇಣಿರೈತ ಸಂಘಟನೆಯನ್ನು ಕಟ್ಟಿ, ಗಣಪತಿಯಪ್ಪನ ನೇತೃತ್ವದಲ್ಲಿ ಹೋರಾಟ ರೂಪಿಸುವ ಚಿತ್ರಣವಿದೆ. ಗಣಪತಿಯಪ್ಪ ಕುಂದಾಪುರದಿಂದ ಹಿರೇನಲ್ಲೂರಿಗೆ ಬಂದು ನೆಲೆಸುತ್ತಾರೆ. ಇಲ್ಲಿನ ದೀವರುಗಳಿಗೆ ಗಣಪತಿಯಪ್ಪ ಅಪತ್‌ಬಾಂಧವನಾಗಿ, ಒಡೆಯರಿಂದ ಆಗುತ್ತಿದ್ದ ಅನ್ಯಾಯ ಕುರಿತು ವಿವರಿಸುತ್ತಾರೆ. ಹಿರೇನಲ್ಲೂರಿನ ಶಿವನ ದೇವಾಲಯವನ್ನು ಜೀರ್ಣೋದ್ಧಾರ ಮಾಡುವ ಸಲುವಾಗಿ ಚಂದಾ ಹಣವನ್ನು ಎತ್ತುತ್ತಾರೆ. ನಂತರದಲ್ಲಿ ಆಹ್ವಾನ ಪತ್ರಿಕೆಯಲ್ಲಿ ವೀರಶೈವಮಂಡಳಿ ಎಂದು ಹಾಕಿಸಿದ್ದು, ಇವರನ್ನು ಕೆರಳಿಸುತ್ತದೆ. ಈ ಕಾರ್ಯಕ್ಕೆ ದೀವರು ಕೂಡಾ ಹಣ ನೀಡಿದ್ದು, ಆದರೆ ಅವರ ಹೆಸರಿಲ್ಲದಿದ್ದುದು, ಮಾಸ್ತರರ ಸಿಟ್ಟನ್ನು ಕೆರಳುವಂತೆ ಮಾಡುತ್ತದೆ. ಸ್ವತಃ ದೀವರಮಂಡಳಿ ಎಂದು ಅಚ್ಚುಹಾಕಿಸಿ ಆಹ್ವಾನ ಪತ್ರಿಕೆಯನ್ನು ಮುದ್ರಿಸಿ ಹಂಚಲಾಗುತ್ತದೆ. ಆನಂತರದಲ್ಲಿ ಮಾಸ್ತರ್ ಗಣಪತಿಯಪ್ಪ ಭೂಮಾಲೀಕರ ಕೆಂಗಣ್ಣಿಗೆ ಗುರಿಯಾಗುತ್ತಾರೆ. ಭೂಗತರಾಗಿ ಸಂಘಟನೆಯ ಚಟುವಟಿಕೆಯಲ್ಲಿ ತೊಡಗಿ ಮಲೆನಾಡ ಗೇಣಿರೈತರ ಸಂಘವನ್ನು ಕಟ್ಟುತ್ತಾರೆ. ಗೇಣಿ ರೈತರಿಗಾಗುತ್ತಿದ್ದ ಅನ್ಯಾಯ ಕುರಿತು ಸಭೆ ಸಮಾರಂಭಗಳಲ್ಲಿ ಅರಿವು ಮೂಡಿಸುತ್ತಾರೆ.

ಭೂಮಾಲೀಕರಿಂದ ಆಗುತ್ತಿದ್ದ ಅನ್ಯಾಯದ ವಿರುದ್ಧ ಗೇಣಿರೈತರಿಗೆ ಅರಿವು ಮೂಡಿಸಿ ಹೋರಾಟಕ್ಕೆ ಸಿದ್ಧಗೊಳಿಸುತ್ತಾರೆ. ಅಲ್ಲದೆ ಸುತ್ತಮುತ್ತಲ ಊರಿನ ಗೇಣಿರೈತರು ಸೇರುವಂತೆ ಮಾಡುತ್ತಾರೆ. ಇದರೊಂದಿಗೆ ಹಲವಾರು ಮಂದಿ ದೀವರ ಸಮುದಾಯದ ಹಿರಿಯರು ಬಂದು ಸೇರುವುದರಿಂದ ಚಳುವಳಿಯ ತೀವ್ರತೆ ಹೆಚ್ಚಾಗುತ್ತದೆ. ಚಳುವಳಿಯು ಕಾವೇರಿದ ಸಂದರ್ಭದಲ್ಲಿ ಶಿವಮೊಗ್ಗ ಜಿಲ್ಲೆಯ ಸಮಾಜವಾದಿ ನಾಯಕರುಗಳು ಈ ಚಳುವಳಿಯಲ್ಲಿ ಭಾಗವಹಿಸಿದ್ದರಿಂದ, ಚಳುವಳಿ ಹೊಸ ಸ್ವರೂಪ ಪಡೆಯುತ್ತದೆ.

ಸಮಾಜವಾದಿ ಪಕ್ಷದ ಪ್ರವೇಶದಿಂದಾಗಿ ಶಾಂತವೇರಿ ಗೋಪಾಗೌಡರು ನಾಯಕತ್ವವನ್ನುವಹಿಸಿಕೊಂಡು ಹೋರಾಟ ನಡೆಸುವುದರ ಮೂಲಕ ಸರ್ಕಾರದ ಗಮನ ಸೆಳೆಯುತ್ತಾರೆ. ಇದೇಕಾಲಕ್ಕೆ ಭೂಮಾಲೀಕರ ದರ್ಪ, ದೌರ್ಜನ್ಯ ಶೋಷಣೆಗಳು ನಡೆಯುತ್ತವೆ. ರೈತ ಸಂಘಟನೆಯ ಹೋರಾಟವನ್ನು ಮುರಿಯಲು ಭೂಮಾಲೀಕರು ನಡೆಸಿದ ಯತ್ನ ವಿಫಲವಾಗುತ್ತದೆ. ಆದರೂ ಗೇಣಿ ರೈತರ ಹೋರಾಟವು ದಿನದಿನಕ್ಕೆ ತೀವ್ರತೆಯನ್ನು ಪಡೆದುಕೊಳ್ಳುತ್ತದೆ. ಈ ಸಂದರ್ಭಕ್ಕೆ ರಾಷ್ಟ್ರೀಯ ನಾಯಕರುಗಳಾದ ಜಯಪ್ರಕಾಶ್‌ನಾರಾಯಣ್, ರಾಮಮನೋಹರ ಲೋಹಿಯಾ ಅವರುಗಳು ಚಳುವಳಿಯಲ್ಲಿ ಭಾಗವಹಿಸುತ್ತಾರೆ. ಈ ಚಳುವಳಿ ವಿಚಾರ, ರಾಷ್ಟ್ರೀಯ ನಾಯಕರು ಭಾಗವಹಿಸಿದ ಹಿನ್ನೆಲೆಯಿಂದಾಗಿ ಇದರ ಕಾವು ರಾಷ್ಟ್ರಮಟ್ಟದವರೆಗೆ ತಟ್ಟುತ್ತದೆ. ಇದು ರಾಷ್ಟ್ರೀಯ ಮಟ್ಟದಲ್ಲಿ ಸುದ್ದಿಯಾಗಿ ಇಡೀ ರಾಷ್ಟ್ರವೇ ಇತ್ತ ತಿರುಗಿ ನೋಡುವಂತಾಗುತ್ತದೆ. ಈ ಚಳುವಳಿಯ ತೀವ್ರತೆಯಿಂದಾಗಿ ಗೇಣಿಯ ಪ್ರಶ್ನೆ ಹಿಂದೆ ಸರಿದು ಭೂಮಿಯ ಪ್ರಶ್ನೆ ಮುಂದಾಗುತ್ತದೆ. ಕಾಗೋಡಿನ ಚಳುವಳಿಯಲ್ಲಿ ಭಾಗವಹಿಸಿದ್ದ ಚಳುವಳಿಗಾರರು "ಉಳುವವನೇ ಹೊಲದೊಡೆಯ" ಎಂಬ ಘೋಷಣೆಯ ಮೂಲಕ ಭೂಮಿಯ ಬೇಡಿಕೆಯನ್ನು ಸರ್ಕಾರದ ಮುಂದೆ ಇಡುತ್ತಾರೆ. ಅಳತೆಯ ಪ್ರಶ್ನೆ ಹಿಂದೆ ಸರಿದು, ಭೂಮಿಯ ಬೇಡಿಕೆ ತೀವ್ರವಾಗುತ್ತದೆ. ಆನಂತರದಲ್ಲಿ ಈ ಚಳುವಳಿಗೆ ಕಾಂಗ್ರೆಸ್ ಸರ್ಕಾರ ಮಣಿದು, ಭೂ ಹಂಚಿಕೆ ಮಾಡಲು ಮುಂದಾಗುವುದನ್ನು ಕಾಣುತ್ತೇವೆ. ಮುಂದೆ ಈ ಚಳುವಳಿ ಕರ್ನಾಟಕದಲ್ಲಿ ಸಮಗ್ರ ಭೂಸುಧಾರಣೆಯ ತಿದ್ದುಪಡಿಗೆ ಒತ್ತಾಯ ತಂದಿತೆಂಬುದು ಗಮನಾರ್ಹಸಂಗತಿಯಾಗುತ್ತದೆ.

ಚಳುವಳಿಯ ಕುರಿತು ಗಮನಿಸುತ್ತಿದ್ದ ವಿದ್ಯಾರ್ಥಿಗಳಿಗೆ ವಿವರ ನೀಡುತ್ತಾರೆ. ಹುಚ್ಚಪ್ಪ ಕೊಳಗ,ನೊಗ, ನೇಗಿಲುಗಳನ್ನು ಸವರಿದ. ಆತ ತನ್ನ ಹಿಂದಿನ ಘಟನೆಯ ಆಳಕ್ಕೆ ಇಳಿದು ನೆನಪಿನ ಸುರಳಿ ಬಿಚ್ಚತೊಡಗಿದ. "ಹೀಗೆ ಚಳುವಳಿ, ಕಾಗೋಡು ಸತ್ಯಾಗ್ರಹ ಸುರು ಆತು. ಚಳುವಳಿ ತುಂಬಾ ದಿನ ನಡೀತು. ಭೂಮಾಲೀಕರು ಪೊಲೀಸರನ್ನ ಕರಕೊಂಡು ಬಂದು ಹಳ್ಳಿ ಹಳ್ಳಿಗಳಲ್ಲಿ ಇಟ್‌ಕೊಂಡ್ರು... ನಮ್ಮನ್ನೆಲ್ಲ ಹಿಡಿದು ಜೈಲಿಗೆ ಹಾಕಿದ್ರು. ಲೋಹಿಯಾ ಬಂದ್ರು... ಗೋಪಾಲಗೌಡ್ರು ಬಂದ್ರು.... ನಾವು ಹಳ್ಳಿ ಜನ ಕಷ್ಟ ಅನುಭವಿಸಿದ್ವಿ... ಕೊಳಗದಿಂದ ಸುರು ಆತು ಚಳುವಳಿ... ಆದರೆ ಇದೊಂದು ನೆಪ... ಭೂಮಾಲೀಕರನ್ನೆ ನಾವು ಅಳದದ್ದು ಕೊಳಗದಾಗೆ.. ನೊಗ ನೇಗಿಲು ಕತ್ತರಿಸಿ ಅವರು ತೆಪ್‌ಮಾಡಿದ್ರು... ಈಗ ನಮ್ಮ ಜನ ಸುಖವಾಗವ್ರೆ... ಭೂಸುಧಾರಣೆ ಕಾನೂನು ಬಂದಮೇಲೆ ನಾವೆಲ್ಲ ಭೂಮಾಲೀಕರೇ ಆಗಿದೀವಿ. ನಮ್ಮ ಜನಕ್ಕೆ ಗೌರವ ಮರ್ಯಾದೆ ಸಿಕ್ತಾ ಇದೆ. ನಮ್ಮೂರು ಇಂಜಿನಿಯರು, ವಕೀಲರು, ಡಾಕ್ಟರುಗಳು ಆಗಿ ಮುಂದೆ ಬಂದಿದಾರೆ. ಹತ್ ಜನರ ಮುಂದೆ ನಿಂತು ಮಾತಾಡೋ ಛಾತಿ ಬಂದಿದೆ... ನಮ್ಮ ಜನಕ್ಕೆ ಇದೆಲ್ಲ ಬರಾಕೆ ಈ ಹೋರಾಟ ಕಾರಣ ಆಯ್ತು. ಆದರೆ ಈ ವಿಷಯ ಈವತ್ತಿನ ನಮ್ಮ ಹುಡ್ರಿಗೆ ಗೊತ್ತಿಲ್ಲ. ನಾವು ಏನೆಲ್ಲ ಕಷ್ಟಪಟ್ವಿ.... ಏನೆಲ್ಲ ಪಾಡು ಪಟ್ವಿ... ಕೂಳಿಲ್ದೆ ಹಲಸಿನಹಣ್ಣು ತಿಂದು ಹೇಗೆ ಕಾಲ ನೂಕಿದ್ವಿ ಅನ್ನೋದು ಯಾವುದೂ ಇವರಿಗೆ ಗೊತ್ತಿಲ್ಲ."[೨೭] ಹುಚ್ಚಪ್ಪ ತನ್ನ ನೆನಪಿನ ಸುರಳಿ ಬಿಚ್ಚುತ್ತಾ ಭೂ ಹೋರಾಟ ನಡೆದು ಬಂದ ಬಗೆಯನ್ನು ಮತ್ತು ಈ ಹೋರಾಟದಿಂದ ಆದ ಪರಿವರ್ತನೆಯನ್ನು ಕುರಿತು ವಿವರಿಸುತ್ತಾನೆ. ಈ ಹೋರಾಟದ ಒತ್ತಾಯದ ಫಲವಾಗಿ ಭೂಸುಧಾರಣೆಯಾಗಿ ಸ್ವಾಭಿಮಾನ ಶಿಕ್ಷಣ,ಉದ್ಯೋಗ ದೊರೆತುದನ್ನು ನಿರೂಪಿಸುತ್ತಾರೆ.

ಕಾಗೋಡು ಚಳುವಳಿ ನಂತರದಲ್ಲಿ ಭೂಮಿ ಚಳುವಳಿಯಲ್ಲಿ ಭಾಗವಹಿಸಿದ ಹಿರಿಯರು ಇಲ್ಲದಿರುವುದು ಹುಚ್ಚಪ್ಪನ ಮಾತಿನಿಂದ ತಿಳಿಯುತ್ತದೆ. "ನಮ್ಮವ್ವ ಕರಿಯಮ್ಮ ಕಾಗೋಡು ಚಳುವಳೀಲೂ ಓಡಾಡಿದ್ಲು.. ಪೋಲೀಸ್ರ ಲಾಠಿ ಏಟು ತಿಂದ್ಲು.. ಏನ ಮಾಡಾದು... ಉದ್ದಕ್ಕೂ ಕಷ್ಟಾನೆ ನೋಡ್ತಾ ಬಂದಾಕೆ ಸುಕ ನೋಡಾಕೆ ಉಳೀನಿಲ್ಲ... ನಾವು ಉಳತಿದ್ದ ಭೂಮಿ ನಮ ಕೈಗೆ ಬರತಿದ್ದ ಹಾಗೇನೆ ಅವ್ವ ತೀರಿಕೊಂಡ್ಲು... ತಿರುಗಿ ಬರನಿಲ್ಲ.."[೨೮] ಎಂದು ಸಂಕಟದಿಂದ ಹೇಳುವಲ್ಲಿಗೆ ಕಾದಂಬರಿ ಮುಕ್ತಾಯಗೊಳ್ಳುತ್ತದೆ. ಕಾಗೋಡು ಹೋರಾಟದಿಂದ ಹೋರಾಟಗಾರರಿಗೆ ಭೂಮಿ ದಕ್ಕಿರುವ ಅಂಶ ಕಾದಂಬರಿಯಲ್ಲಿ ಕಂಡು ಬರುತ್ತದೆ. ಈ ಚಳವಳಿಯನ್ನು ಮುಂದಿನ ಪೀಳಿಗೆಗೆ ಇತಿಹಾಸವಾಗಿ, ವಸ್ತುಪ್ರದರ್ಶನವಾಗಿ ಇಡಲು ಹುಚ್ಚಪ್ಪ ಸೂಚಿಸುತ್ತಾನೆ. ಆದರೆ ಚಳುವಳಿ ನಿರತರಾದವರ ನೋವು ಸಂಕಟಗಳು, ಚಳುವಳಿಯ ತೀವ್ರತೆ ಕೇವಲ ವಸ್ತುಪ್ರದರ್ಶನದಿಂದ ಮಾತ್ರ ಅರ್ಥೈಸಲು ಸಾಧ್ಯವಾದೀತೆ ಎಂಬುದನ್ನು ವಿವೇಚಿಸುವ ಅಗತ್ಯವಿದೆ. ಆದರೂ ಇತಿಹಾಸ ನೆನಪಿಸಿಕೊಳ್ಳುವ ಮೂಲಕ ತಮ್ಮ ಅದಿಮ ಜನಾಂಗ ಇಂತಹ ದುಸ್ಥಿತಿಯಲ್ಲಿದ್ದುದನ್ನು ನೋಡಿಕೊಂಡು ತಮ್ಮ ಬದುಕನ್ನು ಅರ್ಥಪೂರ್ಣವಾಗಿ ಕಟ್ಟಿಕೊಳ್ಳುವ ಸೂಚನೆಯನ್ನು ಈ ಕಾದಂಬರಿ ವ್ಯಕ್ತಗೊಳಿತ್ತದೆ.

**ಕೊನೆ ಟಿಪ್ಪಣಿ**

೧. ನಾ.ಡಿಸೋಜ, ಹೆಡೆ,ಇಪ್ಪತ್ತೈದು ಕತೆಗಳು,ಪುಟ ೨೧೯

೨. ಅದೇ ಪುಟ ೨೧೬

೩. ಅದೇ ಪುಟ ೨೧೭

೪.ಅದೇ ಪುಟ ೨೨೪

೫.ಅದೇ ಪುಟ ೨೨೫

೬. ನಾ.ಡಿಸೋಜ ,ಕುರ್ಚಿ,ಇಪ್ಪತ್ತೈದು ಕತೆಗಳು, ಪುಟ ೨೮೮ ಮತ್ತು ೨೮೯

೭. ನಾ.ಡಿಸೋಜ,ಮಹಾದ್ವಾರ, ಪ್ರಜಾವಾಣಿ ಸಾಪ್ತಾಹಿಕ.ಸೆಪ್ಟೆಂಬರ್,೧,೨೦೦೨ .

೮. ಅದೇ

೯. ಅದೇ

೧೦. ಅದೇ

೧೧. ನಾ.ಡಿಸೋಜ,ಅಭಿವೃದ್ಧಿಯ ಒಂದು ಪರಿ, ಸಾಪ್ತಾಹಿಕ ಪುರವಣಿ,ವಿಜಯಕರ್ನಾಟಕ,ನವೆಂಬರ್,೪ ,೨೦೦೧.

೧೨. ಅದೇ ಪುಟ

೧೩. ನಾ.ಡಿಸೋಜ, ಮಂಜಿನ ಕಾನು,ಪುಟ ೧೫೭

೧೪. ಅದೇ ಪುಟ ೧೦೪

೧೫. ಅದೇ ಪುಟ೧೭೫.

೧೬. ಅದೇ ಪುಟ ೧೭೮,

೧೭. ಅದೇ ಪುಟ ೧೮೯,೧೯೦

೧೮. ಅದೇ ಪುಟ ೨೦೭

೧೯. ಅದೇ ಪುಟ ೨೨೫,

೨೦. ಅದೇ ಪುಟ ೨೨೬

೨೧. ನಾ.ಡಿಸೋಜ, ಮುಳುಗಡೆ,ಪುಟ ೨೫

೨೨. ಅದೇ ಪುಟ ೯೦

೨೩.ಅದೇ ಪುಟ ೧೪೪,೧೪೫

೨೪.ನಾ.ಡಿಸೋಜ, ಕೊಳಗ,ಮುನ್ನುಡಿ.

೨೫.ಅದೇ ಪುಟ ೧೪೪,೧೪೫

೨೬. ರಹಮತ್‌ತರೀಕೆರೆ,ಪ್ರತಿಸಂಸ್ಕೃತಿ, ಪುಟ ೧೩೧, ೧೩೨

೨೭. ನಾ.ಡಿಸೋಜ, ಕೊಳಗ,ಪುಟ ೨೩೫

೨೮.ಅದೇ ಪುಟ ೨೩೫

### ೪.೨.೫ ಶೇಷನಾರಾಯಣ : ಆದರ್ಶವಾದಿ ಭೂ ಹೋರಾಟದ ನೆಲೆ

ಶೇಷನಾರಾಯಣರ "ಬೀಸು" ಕಾದಂಬರಿಯಲ್ಲಿ ಮಲೆನಾಡಿನ ಬದುಕಿನ ವಿವರ, ಜೀತಗಾರಿಕೆ ಭೂಮಿಗಾಗಿ ಕಾದಾಟ ,ಭೂಮಿಗಾಗಿ ಅಳಿವು ಉಳಿವಿನ ಪ್ರಶ್ನೆ ಮುಖ್ಯವಾಗಿದೆ.ಇದೆಲ್ಲಕ್ಕಿಂತ ಮುಖ್ಯವಾಗಿ ಜಾತಿಯನ್ನು ಮೀರುವ ಕ್ರಿಯೆಯನ್ನು ಮುಖ್ಯ ಕಾಳಜಿಯಾಗಿಸಿಕೊಂಡಿರುವುದು ಈ ಕಾದಂಬರಿಯಲ್ಲಿ ವ್ಯಕ್ತವಾಗಿದೆ. ಇದರೊಂದಿಗೆ ಪಾರ್ಶ್ವಿಕವಾಗಿ ಭೂಸಮಸ್ಯೆಯು ಮುಖ್ಯವಾಗಿ ಕಂಡುಬರುತ್ತದೆ. ಇಂತಹ ಸಾಮಾಜಿಕ ಆಯಾಮದಿಂದಾಗಿ ಕೋಲೂರಿನಂಥ ಪುಟ್ಟ ಗ್ರಾಮದಲ್ಲಿ ತಳಮಳ ಮತ್ತು ಸಂಘರ್ಷಗಳು ನಡೆಯುತ್ತವೆ.ಇಲ್ಲಿ ಲೇಖಕರೇ ಹೇಳುವಂತೆ,"ಮುಖ್ಯವಾಗಿ ಸ್ವಾತಂತ್ರ್ಯಪೂರ್ವಕ್ಕೆ ಮೊದಲು, ಹರಿಜನರಿಗೆ ಕಾನೂನು ಕಟ್ಟಳೆಗಳು ಸಾಧಕವಾಗಿ ಇಲ್ಲದೆ ಇರುವಾಗ, ಪರಂಪರಾಗತವಾಗಿ ಶೋಷಣೆಯಲ್ಲಿಯೇ ಅವರ ಬಾಳು ಸಾಗುತ್ತ ಇದ್ದಾಗ, ಅವರ ಬವಣೆಯನ್ನೂ,ಬದುಕನ್ನೂ ಬಿಡಿಸುವುದೇ ಈ ಕೃತಿಯ ಉದ್ದೇಶ ನನ್ನ ಉದ್ದೇಶ"[೧] ಈ ಮಾತಿನ ಹಿಂದೆ ಕಾದಂಬರಿಯಲ್ಲಿರುವ ವ್ಯವಸ್ಥೆಯೊಂದಿಗೆ ಇದ್ದು, ಇದರೊಳಗೆ ಬದಲಾವಣೆ ತರುವ,ಸಮಾಜವನ್ನು ಸುಧಾರಣೆ ಮಾಡುವ ಆದರ್ಶವಾದಿ ಹೋರಾಟದ ನೆಲೆಯನ್ನು ಮುಖ್ಯವಾಗಿ ಗುರುತಿಸಬಹುದಾಗಿದೆ.

ಗಾಂಧಿ ವಾದದ ಸುಧಾರಣೆಯ ಆಶಯವಾಗಿ ಕಾದಂಬರಿಬಂದಿರುವುದು ಪ್ರಗತಿಪರ ಆಶಯವಾಗಿದೆ.ಏಕ ಕಾಲಕ್ಕೆ ಹರಿಜನೋದ್ಧಾರ,ಗ್ರಾಮ ಸಮಾಜದ ಸುಧಾರಣೆ,ಹರಿಜನರ ಬದುಕು ಸುಧಾರಿಸಬೇಕು ಅದಕ್ಕೆ ಪೂರಕವಾಗಿ ಇಡೀ ಕಾದಂಬರಿಯು ಬೆಳೆಯುತ್ತದೆ. ಹರಿಜನರಿಗೆ ಸಾಮಾಜಿಕ ನ್ಯಾಯ ದೊರಕಿಸಿಕೊಟ್ಟು ಅವರ ಸ್ಥಿತಿಗತಿಗಳನ್ನು ಉತ್ತಮ ಪಡಿಸಲು ಯಾವ್ಯಾವ ಮಾರ್ಗಗಳಿಂದ ಸಾಧ್ಯವೋ ಆ ಎಲ್ಲಾ ಮಾರ್ಗಗಳನ್ನು ಇಲ್ಲಿ ವೆಂಕಟನಿಗೆ ಮತ್ತು ಹನುಮರಿಗೆ ಅನ್ವಯಿಸಿದ್ದಾರೆ. ಇಲ್ಲಿ ಅಸ್ಪೃಶ್ಯತೆ ಸಮಸ್ಯೆ,ಅಂತರ್ಜಾತಿ ವಿವಾಹ ಸಮಸ್ಯೆ ಬಗೆಹರಿಸಿರುವುದು, ಭೂ ಒಡೆತನ ಸಮಸ್ಯೆಯು ಕೂಡಾ ಇಲ್ಲಿ ಜಮೀನ್ದಾರರ ಉದಾರವಾದಿ ಮನೋಭಾವದ ಮೂಲಕ ನಿವಾರಿಸಲು ಸಾಧ್ಯ ಎಂಬುದನ್ನು ಇಲ್ಲಿ ವಿಶೇಷವಾಗಿ ಚರ್ಚಿಸಿದ್ದಾರೆ.

ಇಲ್ಲಿ ಬರುವ ಲಕ್ಷ್ಮಮ್ಮ ಮತ್ತು ಗೋವಿಂದರಾಯರ ಅತೀ ಎನಿಸುವಂಥ ಆದರ್ಶೀಕೃತ ಪಾತ್ರಗಳು ಇಲ್ಲಿ ಕಂಡುಬರುತ್ತವೆ.ಭೂಮಿಯ ಸಮಸ್ಯೆ ಇಂಥ ಒಂದೆರಡು ಆದರ್ಶಪರ ವ್ಯಕ್ತಿಗಳಿಂದ ಪರಿಹಾರವಾಗುವಂಥದ್ದಲ್ಲ. ಭೂಮಿ ಸಮಸ್ಯೆ ಮತ್ತು ದಲಿತರ ಸಮಸ್ಯೆಯನ್ನು ಅದರಲ್ಲಿ ಸಂಕೀರ್ಣತೆಯ ಜೊತೆಗೆ ಗ್ರಹಿಸಿ ಅಭಿವ್ಯಕ್ತಿಸುವಂಥ ಮಹತ್ತರ ಪ್ರಯತ್ನವೇನು ಈ ಕಾದಂಬರಿಯಲ್ಲಿ ಕಂಡುಬರುವುದಿಲ್ಲ. ಏಕೆಂದರೆ ಭೂ ಸಮಸ್ಯೆಗೆ ವಿಭಿನ್ನಮನೋಧರ್ಮಗಳು ಸೃಜನಶೀಲವಾಗಿ ವಿಭಿನ್ನ ರೀತಿಯಲ್ಲಿ ಪ್ರತಿಕ್ರಿಯಿಸಿದ್ದಕ್ಕೆ ಒಂದು ಒಂದು ಉದಾಹರಮೆಗೆ ಈ ಕಾದಂಬರಿಯನ್ನು ನೋಡಬಹುದು.

ಇಲ್ಲಿ ಕೆಂಪಶೆಟ್ಟಿ ಹೆಂಡತಿ ಸಿದ್ಧಮ್ಮ ಬಡ್ಡಿ ವ್ಯವಹಾರದಲ್ಲಿ ಇಡೀ ಊರನ್ನೇ ತನ್ನ ನಿಯಂತ್ರಣದಲ್ಲಿಟ್ಟುಕೊಳ್ಳಲು ಯತ್ನಿಸುತ್ತಾಳೆ. ಕೆಂಪಶೆಟ್ಟಿಯ ವ್ಯಾಪಾರ ವ್ಯವಹಾರಗಳ ಮತ್ತು ಊರಿನ ಭೂಮಿ ಲಪಟಾಯಿಸುವಿಕೆ,ಇಂತಹ ಅಕ್ರಮಗಳಿಗೆ ತನ್ನ ಹೆಂಡತಿ ಸಿದ್ಧಮ್ಮ ಮತ್ತು ಊರಿನ ಚಿಕ್ಕವೀರಪ್ಪ ಬೆಂಬಲವಾಗಿ ನಿಲ್ಲುತ್ತಾರೆ. ಚಿಕ್ಕವೀರಪ್ಪ ಸಿದ್ಧಮ್ಮನ ಮನೆಯ ಖಾಯಂ ಅತಿಥಿ. ಕೆಂಪಶೆಟ್ಟಿ ಈ ಊರಿನಲ್ಲಿ ಸಣ್ಣದಾಗಿ ವ್ಯಾಪಾರ ಮಾಡಿಕೊಂಡಿರುತ್ತಾನೆ. ಜೊತೆಗೆ ಬಡ್ಡಿ ವ್ಯವಹಾರ ಮಾಡುವುದರ ಮೂಲಕ ಕೆಂಪಶೆಟ್ಟಿ ಕ್ರಮೇಣ ಭೂಮಾಲೀಕನಾಗುತ್ತಾನೆ.

ಕೋಲೂರಿನ ಭೂಮಾಲೀಕರ ಸ್ಥಿತಿಯನ್ನು ಗಮನಿಸುವಂತೆಯೇ ಈ ಊರಿನ ಕೆಲವರಿಗೆ ಸರಕಾರಿ ಕೆಲಸಗಳ ದಿನನಿತ್ಯದ ಜಂಜಾಟದ ನಡುವೆ ಅವರಿಗೆ ತಮ್ಮ ಭೂಮಿಯ ವ್ಯವಸಾಯವನ್ನು ಸ್ವಂತವಾಗಿ ನೋಡಿಕೊಳ್ಳಲು ಆಗದೆ ಗೇಣಿದಾರರಿಗೆ ಕೊಡುತ್ತಾರೆ. ಹೀಗಾಗಿ ಕೋಲೂರಿನಲ್ಲಿ ಅವರು ಗುತ್ತಿಗೆಗೊ ವಾರಕ್ಕೂ ಜಮೀನನ್ನು ಉಳುಮೆ ಮಾಡುತ್ತಾರೆ. ಈ ಊರಿನ ಲಕ್ಷ್ಮಮ್ಮನ ಮಗ ಗೋವಿಂದರಾಯ ಮೈಸೂರಿನಲ್ಲಿ ನೌಕರಿಯಲ್ಲಿದ್ದವ ದಲಿತ ವೆಂಕಟನಿಗೆ ಗೇಣಿ ನೀಡಿರುತ್ತಾರೆ. ದಲಿತ ವೆಂಕಟ ಊರ ಮಧ್ಯೆ ಫಲವತ್ತಾದ ಭೂಮಿ ಗೇಣಿಗೆ ಪಡೆದವ ಸುತ್ತಮುತ್ತಲು ಹಳ್ಳಿಗಳಲ್ಲಿ ದಲಿತರು ಯಾರೂ ಇಲ್ಲ.

ಗ್ರಾಮಾಡಳಿತ ವ್ಯವಸ್ಥೆಯ ಶಾನುಭೋಗರು ಅನಕ್ಷರಸ್ಥ ರೈತರ ಮೇಲೆ ದಬ್ಬಾಳಿಕೆ ಮಾಡುವುದನ್ನು ಕಾಣುತ್ತೇವೆ. ಶಾನುಭೋಗರು ಮಣಿಯಗಾರರು ಏನು ಕೇಳಿದರೂ ಗ್ರಾಮದಲ್ಲಿ ಯಾರೂ ಇಲ್ಲ ಎಂದು ಹೇಳುವ

ಹಾಗೆಯೇ ಇಲ್ಲ. ಹಾಗೆ ಯಾರಾದರೂ ಎದುರು ಬಿದ್ದರೆ ಮುಂದೆ ಅವರಿಗೆ ಏನಾದರೊಂದು ತೊಂದರೆ ಇದ್ದೇ ಇರುತ್ತದೆ. ಹೀಗಾಗಿ ಇಡೀ ಊರಿನ ಜನರು ಈ ಗ್ರಾಮಾಧಿಕಾರಗಳ ಹಿಡಿತಕ್ಕೆ ಒಳಗಾಗಿರುವ ಚಿತ್ರಣವಿದೆ.

ಊರು ಮುಂದಿನ ಫಲವತ್ತಾದ ಭೂಮಿಯನ್ನು ಕಂಡು, ಕೆಂಪಶೆಟ್ಟಿಗೆ ವೆಂಕಟನ ಗೇಣಿ ಜಮೀನಿನ ಮೇಲೆ ಕಣ್ಣು ಬೀಳುತ್ತದೆ. ಹೇಗಾದರೂ ಮಾಡಿ ಈ ಭೂಮಿಯನ್ನು ಲಪಟಾಯಿಸಬೇಕು ಎಂಬ ಆಸೆ ಹುಟ್ಟುತ್ತದೆ. ಒಂದಕ್ಕೆ ಎರಡು ಪಟ್ಟುಕೊಟ್ಟಾದರೂ ತನ್ನ ಜಮೀನಿನ ಪಕ್ಕದಲ್ಲಿರುವ ಈ ಭೂಮಿಯನ್ನು ತನ್ನದಾಗಿಸಿಕೊಳ್ಳಬೇಕೆಂದು ಯೋಚಿಸುತ್ತಾನೆ. "ಲಕ್ಷ್ಮಮ್ಮನ ಹೊಲ ಇರುವುದು ಕೆಂಪಶೆಟ್ಟಿಯ ಹೊಲದ ಬದಿಯಲ್ಲಿ. ಇದೂ ತಮಗೆ ಸಿಕ್ಕಿರೆ ತಮ್ಮ ಜಮೀನಿಗೆ ಸೇರಿದ ಹಾಗೆ ಒಟ್ಟು ಇಪ್ಪತ್ತೆರಡು ಎಕರೆ ಗಿಟ್ಟಿಸಿಕೊಂಡ ಹಾಗಾಯಿತು. ಅದೂ ಊರ ಮುಂದಿನ ಹೊಲ. ಕಾವಲುಕಟ್ಟಿನ ಪ್ರಶ್ನೆ ಇಲ್ಲ. ಆನೆಗಳ ಮತ್ತು ಕಾಡು ಪ್ರಾಣಿಗಳ ಕೋಟಲೆ ಇಲ್ಲ. ಈ ಪ್ರಾಂತ್ಯದಲ್ಲಿ ಯಾವಾಗಲೂ ಆನೆ ಹಾವಳಿಯೇ."[೨] ಎಂದು ಕೆಂಪಶೆಟ್ಟಿ ಆಲೋಚಿಸುತ್ತಾನೆ. ತನ್ನ ಪಕ್ಕದ ಜಮೀನಾಗಿದ್ದು ಯಾವ ಉಪದ್ರವ ಇಲ್ಲದಿರುವ ಫಲವತ್ತಾದ ಭೂಮಿಯ ಮೇಲೆ ಕಣ್ಣು ಬೀಳುತ್ತದೆ. ಹೇಗಾದರೂ ಮಾಡಿ ಭೂಮಿಯನ್ನು ಪಡೆಯಬೇಕೆಂಬ ಹಠತೊಟ್ಟಿದ್ದಾನೆ.

ಕೋಲೂರಿನ ದಲಿತಕುಟುಂಬದ ವೆಂಕಟ ಮಾತ್ರ ಏಕೈಕ ಗೇಣಿದಾರ ರೈತ. ವೆಂಕಟನ ನಿಷ್ಠೆ, ಕಷ್ಟಕಾಲದಲ್ಲಿ ನೆರವು, ಬ್ರಾಹ್ಮಣಕುಟುಂಬದ ಒಲವಿಗೆ, ನಂಬಿಕೆಗೆ ಅರ್ಹನಾಗುತ್ತಾನೆ. ವೆಂಕಟನ ಕಷ್ಟಕಾಲದ ನೆರವು, ಬ್ರಾಹ್ಮಣ ಕುಟುಂಬದ ಒಡತಿ ಲಕ್ಷ್ಮಮ್ಮ ಊರಿನ ಶಾನುಭೋಗರ ಕೆಂಪಶೆಟ್ಟಿಯ ಮಾತುಗಳನ್ನ ತಿರಸ್ಕರಿಸಿ ವೆಂಕಟನಿಗೆ ನೀಡುತ್ತಾಳೆ. ತನ್ನ ಜಮೀನಿನ ಗೇಣಿದಾರನಾದ ವೆಂಕಟನಿಗೆ ಬಿಟ್ಟು ಮೈಸೂರಿನ ತನ್ನ ಮಗ ಗೋವಿಂದರಾಯನ ಬಳಿ ವಾಸವಾಗಿರುತ್ತಾಳೆ. ಈ ಊರಮುಂದಿನ ಫಲವತ್ತಾದ ಜಮೀನಿಗೆ ವೆಂಕಟ ಗೇಣಿದಾರನಾಗುತ್ತಾನೆ. ದಲಿತ ವೆಂಕಟ ಗೇಣಿದಾರನಾಗುವುದು ಊರಿನ ಕೆಲವರಿಗೆ ಸಹಿಸದ ವಿಚಾರವಾಗುತ್ತದೆ.

ವೆಂಕಟ ಭೂಮಾಲೀಕನಾಗುವುದು ಊರಿನ ಗೌಡರಿಗೆ ಮತ್ತು ಕೆಂಪಶೆಟ್ಟಿ ಹಾಗೂ ಚಿಕ್ಕವೀರಪ್ಪನಿಗೆ ಸಹಿಸದ ವಿಚಾರವಾಗಿದೆ. ಇದಕ್ಕಾಗಿ ಅನೇಕ ತಂತ್ರ ಕುತಂತ್ರ ಮಾಡುತ್ತಾರೆ. ಊರಿನ ಮಣೆಯಗಾರ, ಶಾನುಭೋಗ ದೊರೆಸ್ವಾಮಿ ಸೇರಿ ವೆಂಕಟನಿಗೆ ಭೂಮಿ ಸಿಗದಂತೆ ಮಾಡಲು ಯತ್ನಿಸುತ್ತಾರೆ. ಇದರಿಂದ ವೆಂಕಟ ಮತ್ತು ಕೆಂಪಶೆಟ್ಟಿಯ ನಡುವೆ ಮುಖಾಮುಖಿಯಾಗುವುದನ್ನು ಕಾಣುತ್ತೇವೆ. "ಇನ್ನೂ ಕೆಲವರು ಮಡಿವಂತರ ದೃಷ್ಟಿಯಲ್ಲಿ, ಆ ಕಾಲದಲ್ಲಿ, ಹರಿಜನರು ಸ್ವಂತವಾಗಿ ಹೀಗೆ ಭೂಮಿ ಕಾಣಿ ಹಿಡಿದು ವ್ಯವಸಾಯ ಮಾಡುವುದೇ ತಪ್ಪು. ಸವರ್ಣೀಯರ ಸೇವೆಗೆಂದೇ ಈ ಕೀಳುಜಾತಿಯವರನ್ನು ದೇವರು ಸೃಷ್ಟಿಸಿ ಕಳಿಸಿರುವಾಗ. ಅವರು ಆ ಮಾರ್ಗವನ್ನು ಬಿಟ್ಟು ನಡೆಯುವುದು ಸರಿಯೇ? ಚೆನ್ನವೆ?"[೩] ವೆಂಕಟ ಊರಿನ ಮುಂದಿನ ಗೇಣಿ ಮಾಡಿರುವುದು ಊರಿನ ಕೆಲವರು ಸಹಿಸಲಾಗುವುದಿಲ್ಲ. ಈ ಕಾಲಕ್ಕಾಗಲೇ ದಲಿತರು ಭೂಮಿ ಒಡೆತನದಿಂದ ರೈತಾಪಿ ಕೆಲಸ ಮಾಡುವುದು, ಮಹಾಪಾಪದಂತೆ ಕಂಡುದರಿಂದಾಗಿ ಭೂಮಿ ಕುರಿತಾದ ಸಂಘರ್ಷವನ್ನು ಕಾಣುತ್ತೇವೆ.

ಗೇಣಿಗೆ ಭೂಮಿಯನ್ನು ಪಡೆಯುವುದರಿಂದ ದಲಿತ ವೆಂಕಟನು ರೈತನಾಗುವ ಕನಸು ನನಸಾಗುತ್ತದೆ. ಹೀಗಾಗಿ ಈ ವೆಂಕಟ ಊರ ಮುಂದಿನ ಒಂದು ಬಂಗಾರದಂಥ ಭೂಮಿಯನ್ನು ಗುತ್ತಿಗೆಗೆ ಪಡೆದ ಮೊದಲ ಹರಿಜನ ರೈತಕುಳವಾದ. ಈ ಊರಿನ ವಿರೋಧವನ್ನೆಲ್ಲಾ ಧಿಕ್ಕರಿಸಿ, ವೆಂಕಟ ಈ ಜಮೀನಿನಲ್ಲಿ ಹುಲುಸಾದ ಬೆಳೆ ಬೆಳೆಯುತ್ತಾನೆ. ಮುಂದೆ ಜಮೀನಿನನ್ನು ಕೊಳ್ಳುವ ಮೂಲಕ ಭೂಮಿಗೆ ಒಡೆಯನಾಗಲು ಹೊರಟಾಗ ಸಂಘರ್ಷ ಎದುರಿಸಿ ಭೂಮಾಲೀಕರ ವಿರುದ್ಧ ಹೋರಾಟ ನಡೆಸುತ್ತಾನೆ.

ಲಕ್ಷ್ಮಮ್ಮನ ಮಗ ಗೋವಿಂದರಾಯರು ತನ್ನ ಊರಿನ ಭೂಮಿಯನ್ನು ಮಾರಲು ಇಚ್ಚಿಸುತ್ತಾರೆ. ಇದಕ್ಕೆ ಕಾರಣ ಮೈಸೂರಿನಲ್ಲಿ ಸ್ವಂತ ಮನೆಯನ್ನು ಕಟ್ಟುವ ಸಲುವಾಗಿ ಹಣದ ಅವಶ್ಯಕತೆವಿದ್ದುದರಿಂದ ಮಾರುವುದಾಗಿ ತಿಳಿಸುತ್ತಾನೆ. ಈ ವಿಚಾರ ಹೇಗೂ ತಿಳಿದು ಕೆಂಪಶೆಟ್ಟಿಯ ಬಳಗ ಇದೇ ಭೂಮಿಯನ್ನು ಹತ್ತುಸಾವಿರ ರೂಪಾಯಿ ಆದರೂ ಸರಿ ಈ ಭೂಮಿಯನ್ನು ಕೊಂಡುಕೊಳ್ಳಬೇಕೆಂಬ ಹುನ್ನಾರ ನಡೆಸುತ್ತದೆ. ಈ ವಿಚಾರ ತಿಳಿದು ವೆಂಕಟ ಮತ್ತು ಆತನ ಮಗ ಹನುಮ ಮೈಸೂರಿಗೆ ತೆರಳುತ್ತಾರೆ. ಇವರಿಬ್ಬರೂ ಮೈಸೂರಿನ ಗೋವಿಂದರಾಯ ಮತ್ತು ಆತನ ಹೆಂಡತಿ ಪ್ರಸನ್ನರನ್ನು ಭೇಟಿ ಮಾಡುತ್ತಾರೆ. ಭೂಮಿ ಮಾರುವ ವಿಚಾರ ಪ್ರಸ್ತಾಪವಾಗಿರುವುದನ್ನು ತಿಳಿಸುತ್ತಾರೆ. ಭೂಮಿಯನ್ನು ಮಾರುವುದು ವೆಂಕಟನ ವಿಚಾರಕ್ಕೆ ಬಿಟ್ಟದ್ದು ಎಂದು ತಿಳಿಸಿದಾಗ ಗದ್ಗದಿತನಾಗುತ್ತಾನೆ. ಇದಕ್ಕೆ ಪ್ರತಿಕ್ರಿಯೆಯಾಗಿ "ಬುದ್ಧೀ, ನಾ ಯಾನ್ ಏಳ್ಳೇಕು ಅನ್ನಾದು ನಂಗೆ

ಗೊತ್ತಾಗಕಿಲ್ಲ, ಒಡೆಯಾ, ನಿಮ್ಮಟ್ಟಿ ಉಪ್ಪು ತಿಂದು ನಾ ಬೆಳೆದಿವ್ನಿ. ನೀವು ಈಗ ಆಲಾದ್ರೂ ಕೊಡಿ, ಇಸವಾದ್ರೂ ಕೊಡಿ. ಆದ್ರೆ ಒಂದು ಮಾತು ದಮ್ಮಯ್ಯಾ. ಆ ಬೂಮಿ ಯಾಣಾದ್ರೂ ಯಕ್ಕಾಚಕ್ಕಾ ಅದ್ರೆ ನನ್ನ ಪಿರಾಣ ಇರಾಕಿಲ್ಲ. ಅದೂ ಅದರೊಂದ್ಗೇ ಒಂಟೋಯ್ತದೆ, ಅಸ್ಟೇ."[೪] ಈ ಭೂಮಿಯ ಬಗೆಗಿದ್ದ ವೆಂಕಟನ ಅದಮ್ಯ ಪ್ರೀತಿ ಮತ್ತು ಆ ಭೂಮಿಯ ಮೇಲೆ ತನ್ನ ಪ್ರಾಣವನ್ನೇ ಇಟ್ಟುಕೊಂಡಿದ್ದಾನೆಂಬುದು ತಿಳಿಯುತ್ತದೆ.

ಭೂಮಿಯನ್ನು ಹೆಚ್ಚು ಬೆಲೆಗಾದರೂ ದಕ್ಕಿಸಿಕೊಳ್ಳಬೇಕೆಂಬ ಹುನ್ನಾರದಿಂದ ಮೈಸೂರಿಗೆ ಶಾನುಭೋಗರು, ಕೆಂಪಶೆಟ್ಟಿ ಮೊದಲಾದವರು ಹೋಗಿಬರುತ್ತಾರೆ. ಬ್ರಾಹ್ಮಣರ ಒಡತಿ ಲಕ್ಷ್ಮಮ್ಮನಿಗೆ ಕಷ್ಟಕಾಲದಲ್ಲಾದ ನೆರವಿನ ವಿಚಾರವನ್ನು ತನ್ನ ಮಗ ಗೋವಿಂದರಾಯನಿಗೆ ಹೇಳಿದ್ದು, ಅಲ್ಲದೆ ಚಿಕ್ಕ ಹುಡುಗನಾಗಿದ್ದಾಗ ತನ್ನ ವಿದ್ಯಾಭ್ಯಾಸಕ್ಕೆ ನೆರವಾದುದನ್ನು ಗೋವಿಂದರಾಯ ಸ್ಮರಿಸಿಕೊಳ್ಳುತ್ತಾನೆ. ಯಾವುದಕ್ಕೂ ನಾನು ವೆಂಕಟನನ್ನು ವಿಚಾರ ಮಾಡಿ ಜಮೀನು ಮಾರುವುದಾಗಿ ತಿಳಿಸಿರುತ್ತಾನೆ. ಇದು ಕೆಂಪಶೆಟ್ಟಿಗೆ ನಿರಾಶೆಯನ್ನು ತಂದಿರುತ್ತದೆ. ಗೋವಿಂದರಾಯರು ಇವರು ಬಂದ ವಿಚಾರ ಕೇಳಿ, ತಾನು ಜಮೀನು ಮಾರುವ ವಿಚಾರದಲ್ಲಿ ತಮ್ಮ ಅಭಿಪ್ರಾಯಕೇಳಿಯೇ ಮುಂದೆ ಯೋಚಿಸುವುದಾಗಿ ತಿಳಿಸಿರುತ್ತಾನೆ. ಈ ವಿಚಾರ ಅತೀ ಎನಿಸುವಷ್ಟು ಆದರ್ಶವಾಗಿದೆ. ವಾಸ್ತವದಲ್ಲಿ ಭೂಮಿಗೆ ಹೆಚ್ಚಿನ ಬೆಲೆ ನೀಡುವಂಥ ಪರಿಸ್ಥಿತಿ ಇರುವಾಗ ಇಂಥ ವಿಚಾರಗಳು ಬರುವುದು ಅಪರೂಪವೇ ಸರಿ.

ಗೋವಿಂದರಾಯ ತನ್ನ ಹಿಂದಿನ ದಿನಗಳ ಕಷ್ಟದಲ್ಲಿ ನೆರವಾದ ವೆಂಕಟನಿಗೆ ಎರಡು ಸಾವಿರ ರೂಪಾಯಿಗಳಿಗೆ ಕಡಿಮೆ ಬೆಲೆಗೆ ಭೂಮಿಯನ್ನು ಕೊಡುವುದಾಗಿ ತಿಳಿಸುತ್ತಾನೆ. ವೆಂಕಟ ಹೇಗೂ ಹಣವನ್ನು ಹೊಂದಿಸಿಕೊಂಡು ಒಡೆಯರಿಗೆ ಒಪ್ಪಿಸಿ, ಊರ ಜನರಿಗೆ ಗೊತ್ತಾಗದ ಹಾಗೆ ಜಮೀನನ್ನು ನೋಂದಣಿ ಮಾಡಿಸಿಕೊಳ್ಳುತ್ತಾನೆ. "ಇವೊತ್ತು ಅವರು ನಿಜವಾಗಿಯೂ ಭೂಮಿತಾಯಿಯ ಮಕ್ಕಳಾಗಿದ್ದರು. ಆ ಗ್ರಾಮದಲ್ಲಿ ಗೌಡರು ಮಣಿಯಗಾರರು ಶಾನುಭೋಗರು ಹೀಗೆ ತಿರುಳುಳ್ಳ ಕುಳಗಳ ಸಮಸಮ ಕಂದಾಯ ಸಲ್ಲಿಸುವ ಏಕೈಕ ಹರಿಜನ ಪ್ರತಿನಿಧಿಯಾಗಿದ್ದರು. ಇಂಥ ಒಳ್ಳೆಯ ಆಸ್ತಿ ಆ ಗ್ರಾಮದಲ್ಲಿ ಮಾತ್ರವಲ್ಲ, ಸುತ್ತಮುತ್ತಣ ಯಾವ ಗ್ರಾಮದಲ್ಲಿಯೂ ಆ ಕಾಲದಲ್ಲಿ ಹರಿಜನರಿಗಿದ್ದಿಲ್ಲ. ಹಾಗೆಂದಾಕ್ಷಣ ಆ ಪ್ರಾಂತ್ಯದಲ್ಲಿ ಊರಿಂದ ದೂರವಾಗಿ ಎಲ್ಲಿಯೂ ಕಾಡು ಕೊಂಪೆಯಲ್ಲಿ, ಅಷ್ಟೆ. ಅದೂ ಕಲ್ಲು ಗುಂಡು ನೊರಜು ಮರಳು ಇಂಥ ಹದಗೆಟ್ಟ ಭೂಮಿಗಳು. ಹಸನಾದ ಭೂಮಿಗಳೆಲ್ಲ ಊರ ಮುಂದಿರುವಂಥವು ಸವರ್ಣೀಯರಿಗೇ ಸೇರಿದ್ದು. ಆ ಹಳ್ಳಿಯಲ್ಲಿ ನಡೆದ ಈ ಘಟನೆ ಸುವರ್ಣಾಕ್ಷರದಲ್ಲಿ ಬರೆದಿಡಬೇಕಾದ ಸಂಗತಿ. ಹರಿಜನನೊಬ್ಬ, ಆ ಊರಿನಲ್ಲಿ, ಊರ ಮುಂದಿನ ಹೊಲದ ಒಡೆಯನಾಗುವುದು."[೫] ಈ ಮಾತಿನ ಹಿಂದೆ ದಲಿತರಿಗೆಲ್ಲ ಎಲ್ಲಿಯೂ ಉತ್ತಮವಾದ ಫಲವತ್ತಾದ ಭೂಮಿ ದೊರೆತ ಉದಾಹರಣೆಯಿಲ್ಲ ಎಂಬ ಸತ್ಯವ್ಯಕ್ತವಾಗುತ್ತದೆ. ಭೂಮಿ ನೋಂದಣಿಯಾಗುವ ವಿಚಾರ ತಿಳಿದರೆ ಅಡ್ಡಿಯಾಗುತ್ತದೆಂದು ತಿಳಿಯುತ್ತಾರೆ. ಆದ್ದರಿಂದ ಬೇರೆ ಊರಿನ ಶಾನುಭೋಗರನ್ನು ಕರೆದುಕೊಂಡು ಹೋಗಿ ನೋಂದಣಿ ಮಾಡಿಸುತ್ತಾರೆ. ಆನಂತರದಲ್ಲಿ ನೋಂದಣಿಯಾಗಿರುವುದು ತಿಳಿದು ಕೆಂಪಶೆಟ್ಟಿ ಊರಗೌಡ, ಶಾನುಬೋಗರ ಕೆಂಗಣ್ಣಿಗೆ ಇವರು ಗುರಿಯಾಗುತ್ತಾರೆ.

ಈ ಊರಿಗೆ ಪಾದ್ರಿ ಆಗಮನದಿಂದ ವಿದ್ಯಾಭ್ಯಾಸದಿಂದಾದ ಅರಿವು, ಜಾಗೃತಿಯಿಂದಾಗಿ ದಲಿತರ ಕೇರಿಯ ಜನರು ಎಚ್ಚೆತ್ತುಕೊಳ್ಳುತ್ತಾರೆ. ಹನುಮನ ಆತ್ಮೀಯ ಗೆಳೆಯ ರುದ್ರ ಎಲ್ಲಾ ಕಾಲದಲ್ಲೂ ಈತನ ನೆರವಿಗೆ ನಿಲ್ಲುತ್ತಾನೆ. ಸಿದ್ದಮ್ಮನ ಮಗಳು ಬಾಲ್ಯದ ಗೆಳತಿ ಪುಟ್ಟತಾಯಿಯನ್ನು ಹನುಮ ಪ್ರೀತಿಸುತ್ತಾನೆ. ಮೇಲ್ಜಾತಿಯ ಪುಟ್ಟತಾಯಿಯನ್ನು ಮದುವೆಯಾಗುವುದು ಆಕಾಲಕ್ಕೆ ಒಂದು ಸವಾಲೇ ಆಗಿದೆ. ಆದರೆ ಯಾರಿಗೂ ತಿಳಿಯದೇ ದೇವಸ್ಥಾನದಲ್ಲಿ ಮದುವೆಯಾಗುವುದರಿಂದ ಊರಿನಲ್ಲಿ ಸಂಘರ್ಷ ಏರ್ಪಡುತ್ತದೆ.ಇಂತಹ ಸನ್ನಿವೇಶವನ್ನು ಎದುರಿಸುವ, ಊರಿನ ಜಾತಿ ಸಂಘರ್ಷಕ್ಕೆ ಎಡೆಮಾಡಿಕೊಡುತ್ತಾರೆ.

ಹನುಮ ಮತ್ತು ರುದ್ರರಿಬ್ಬರು ಸಿದ್ದಪ್ಪ ಜೋಗಿನ ಪಾರೆಸ್ಟ್‌ನಲ್ಲಿ ಜಮೀನು ಮಾಡುವ ವಿಚಾರ ಮಾಡುತ್ತಾರೆ. ಅರಣ್ಯ ಭೂಮಿಯನ್ನು ದಲಿತ ಕೇರಿಯ ಚಿಂದಲಗಪ್ಪ, ಮರಿಯ, ರುದ್ರ, ರುದ್ರನ ಅಣ್ಣ ಮಾದ, ಪರಿವಾರದ ಕೇರಿಯ ರಾಮನಾಯಕ ಒಕ್ಕಲಿಗರ ಕೇರಿಯ ಜವರೇಗೌಡ ಭೂಮಿಯನ್ನು ಸಾಗುವಳಿ ಮಾಡಲು ಹೋಗುತ್ತಾರೆ. ಈ ವಿಚಾರ ಹನುಮನ ತಂದೆ ವೆಂಕಟನಿಗೆ ತಿಳಿದು "ವೆಂಕಟನಿಗೆ ಈ ಕೆಲಸ ಎಳ್ಳಿನಿತೂ ಇಷ್ಟವಿಲ್ಲ. ವೆಂಕಟನ ಹೆಂಡತಿ ಕೆಂಪಿಗೂ ಅಷ್ಟೆ, ತಮಗೆ ಈಗಿರುವ ಭೂಮಿಯೇ ಸಾಕು. ಯಾತಕ್ಕಾಗಿ ಮೇಲೂ ಭೂಮಿದಾಹ? ಹೆಣ್ಣಿನ ಮಣ್ಣಿನ ಹೊನ್ನಿನ ದಾಹ ಎಷ್ಟಿದ್ದರೂ ಇಂಗುವುದೇ ಇಲ್ಲ. ಇಂಥ ಹುಚ್ಚನ್ನು ತಲೆಗೆ

ತುಂಬಿಕೊಳ್ಳಬಾರದು."[೬] ವೆಂಕಟ ತನ್ನ ಮಗ ಹನುಮನಿಗೆ ಸಲಹೆ ಮಾಡುತ್ತಾನೆ. ಈಗಾಗಲೇ ಊರ ಮುಂದಿನ ಫಲವತ್ತಾದ ಭೂಮಿ ಹುಲುಸಾದ ಬೆಳೆಯಿದೆ ಯಾವುದೇ ಕಾಡುಪ್ರಾಣಿಗಳ ಉಪದ್ರವ ಇಲ್ಲ ಹೀಗಾಗಿ ಕಾಡಿನ ಭೂಮಿ ವೆಂಕಟನಿಗೆ ಬೇಕಾಗಿಲ್ಲ. ಆದರೂ ಹನುಮ ಗೆಳೆಯರ ಜೊತೆಗೂಡಿ ಭೂಮಿಯನ್ನು ಸ್ವಂತವಾಗಿ ಸಾಗು ಮಾಡುತ್ತಾನೆ. ಇಲ್ಲಿ ಹೆಣ್ಣಿನ ಮಣ್ಣಿನ, ಹೊನ್ನಿನ ದಾಹ ಎಷ್ಟಿದ್ದರೂ ಇಂಗುವುದೇ ಇಲ್ಲ ಎಂಬ ಮಾತು ಮನುಷ್ಯನ ಮೂಲಭೂತವಾದ ಆಕಾಂಕ್ಷೆ ಕುರಿತು ಕಾದಂಬರಿಯಲ್ಲಿ ಅಭಿವ್ಯಕ್ತಿಗೊಳಿಸಿದೆ.

"ಸರಕಾರದ ಭೂಮಿಗಳನ್ನು ಮಾಡಬೇಕಾದರೆ ಗ್ರಾಮದ ಶಾನುಭೋಗರ ಅನುಮತಿ ಬೇಕೇ ಬೇಕು. ಶಾನುಭೋಗ ಅನುಮತಿ ನೀಡಿದ ಮೇಲೆ, ಶಾನುಭೋಗರ ಲೆಕ್ಕದ ಪುಸ್ತಕಗಳಲ್ಲಿ ಈ ರೈತಮಕ್ಕಳ ಹೆಸರು ದಾಖಲಾದಮೇಲೆ, ನಾಲ್ಕು ಆರು ವರ್ಷಗಳು ವ್ಯವಸಾಯ ಮಾಡಿದ ನಂತರ, ಆ ಭೂಮಿಯನ್ನು ಪಟ್ಟಾ ಮಾಡಲು ಅಡ್ಡಿಯಿಲ್ಲ ಎನ್ನುವುದಾದರೆ ಆಮೇಲಷ್ಟೆ ಭೂಮಿ ಮಾಡಿರುವವನಿಗೆ ಅದು ಸ್ವಂತದ್ದಾಗುತ್ತದೆ."[೭] ಇದು ಶಾನುಭೋಗರ ಲೆಕ್ಕಚಾರದಂತೆ ಭೂ ಒಡೆತನವೆಂಬುದು ವರ್ಗಾವಣೆಗೊಳ್ಳಲು ನಾಲ್ಕಾರು ವರ್ಷಗಳ ಅವಧಿಯನ್ನು ತೆಗೆದುಕೊಳ್ಳುವ ವಿಚಾರ ವ್ಯಕ್ತವಾಗುತ್ತದೆ. ಇದರ ಹಿಂದೆ ಭೂಮಾಲೀಕ ಹಿತಾಸಕ್ತಿಯನ್ನು ಕಾಣುತ್ತೇವೆ. ಆದರೆ ಅಂತಿಮವಾಗಿ ಅದು ಭೂಹೀನ ಕೃಷಿಕರಿಗೆ ದಕ್ಕುವಂತಾಗುವುದು ಆಶಾದಾಯಕ ಬೆಳವಣಿಗೆಯಾಗಿದೆ.

ಹನುಮ ಮತ್ತು ರುದ್ರ ಸೇರಿ ಸಿದ್ದಪ್ಪಜೋಗಿನ ಭೂಮಿಯಲ್ಲಿ ಬೆಳೆಯನ್ನು ಬೆಳೆಯುತ್ತಾರೆ. ಸದಾ ಕುದಿಯುತ್ತಿದ್ದ ಕೆಂಪಶೆಟ್ಟಿ, ಹುಲಗಶೆಟ್ಟಿ ಹಾಗೂ ಇತರರು ಸೇರಿ ತಾವು ಬೆಳೆದಿದ್ದ ಬೆಳೆಯನ್ನು ನಾಶಮಾಡುತ್ತಾರೆ. ಆನಂತರದಲ್ಲಿ ಇಡೀ ಊರಿನ ಬದುಕು ದುರಂತದಲ್ಲಿ ಸಾಗುತ್ತದೆ. ಇದೇ ಸಂದರ್ಭದಲ್ಲಿ ರುದ್ರನ ಕೊಲೆಯನ್ನು ಮಾಡಲಾಗುತ್ತದೆ. ಈ ಕೊಲೆಯಿಂದಾಗಿ ಹುಲಗಶೆಟ್ಟಿಗೆ ಮರಣದಂಡನೆ ಶಿಕ್ಷೆ, ಕೆಂಪಶೆಟ್ಟಿಗೆ ಜೀವಾವಧಿ ಶಿಕ್ಷೆ ವಿಧಿಸಲಾಗುತ್ತದೆ. ಆರಂಭದಲ್ಲಿ ಭೂಮಾಲೀಕರ ದರ್ಪ, ಶಾನುಭೋಗರ ಹಮ್ಮು ಎಲ್ಲವೂ ಈ ಊರಿನಲ್ಲಿ ಸುಧಾರಣೆಗೊಳ್ಳುತ್ತವೆ.

ಅಂತರ್‌ಜಾತಿ ವಿವಾಹ ಆಗಿದ್ದ ಹನುಮನ ಹೆಂಡತಿ ಪುಟ್ಟತಾಯಿ ಗಂಡುಮಗುವಿಗೆ ತಾಯಿಯಾಗುತ್ತಾಳೆ. ತನ್ನ ತಂದೆ ಕಾಯಿಲೆಯಿಂದ ಆಸ್ಪತ್ರೆ ಸೇರಿದ್ದ ವೆಂಕಟನನ್ನು ನೋಡಲು ಮೈಸೂರಿಗೆ ತೆರಳುತ್ತಾನೆ. ಇತ್ತ ತನ್ನ ಮಗಳನ್ನು ನೋಡಲು ಸಿದ್ಧಮ್ಮ ಪುಟ್ಟತಾಯಿ ಮನೆಗೆ ಬರುತ್ತಾಳೆ. ಬಂದ ಕೆಲ ಕ್ಷಣದಲ್ಲಿ ತನ್ನ ಹೊಲದತ್ತ ಸಿದ್ದಮ್ಮ ಓಡಿ ಹೋಗುತ್ತಿರುತ್ತಾಳೆ. ತನ್ನ ತಾಯಿ ಓಡಿ ಹೋಗುತ್ತಿದ್ದನ್ನು ನೋಡಿ ಪುಟ್ಟತಾಯಿಯು ಓಡಿ ಬಾವಿಗೆ ಬೀಳುತ್ತಿದ್ದ ತನ್ನ ತಾಯಿಯನ್ನು ರಕ್ಷಿಸುತ್ತಾಳೆ. ಆದರೆ ಪುಟ್ಟತಾಯಿ ಸಿದ್ದಮ್ಮನ ರಕ್ಷಣೆಗೆಂದು ಹೋಗಿ ಪುಟ್ಟತಾಯಿ ತಾನೇ ಬಾವಿಗೆ ಕಾಲು ಜಾರಿ ಸಾವನ್ನಪ್ಪುವ ದುರಂತ ಚಿತ್ರಣವನ್ನ ಕಾಣುತ್ತೇವೆ.

ಇಲ್ಲಿ ಅಂತರ್ಜಾತಿ ವಿವಾಹದಿಂದ ಜಾತಿ ಸಂಘರ್ಷಕ್ಕೆ, ಜಾತಿ ವೈಷಮ್ಯಕ್ಕೆ ತುತ್ತಾಗುವುದನ್ನು ಕಾಣುತ್ತೇವೆ. ದಲಿತ ಭೂಒಡೆಯನಾಗುವುದು ನಿಷಿದ್ಧ ಎಂಬ ಕಾಲದಲ್ಲಿ ದಲಿತ ವೆಂಕಟ ಭೂಒಡೆಯನಾಗುವುದು ಆಶಾದಾಯಕ ಬೆಳವಣಿಗೆಯಾಗಿದೆ. ಇಲ್ಲಿ ಜಾತಿ ವ್ಯವಸ್ಥೆಯನ್ನು ಮೀರಿ ಪ್ರೇಮ ಗೆಲ್ಲುವುದು ಮತ್ತೊಂದು ಭಾಗವಾಗಿ ನೋಡಬಹುದಾಗಿದೆ. ಇಲ್ಲಿ ಅಸ್ಪೃಶ್ಯತೆ ಸಮಸ್ಯೆ,ಅಂತರ್ಜಾತಿ ವಿವಾಹ ಸಮಸ್ಯೆ ಬಗೆಹರಿಸಿರುವುದು, ಭೂ ಒಡೆತನ ಸಮಸ್ಯೆಯು ಕೂಡಾ ಇಲ್ಲಿ ಜಮೀನ್ದಾರರ ಉದಾರವಾದಿ ಮನೋಭಾವದ ಮೂಲಕ ನಿವಾರಿಸಲು ಸಾಧ್ಯ ಎಂಬುದನ್ನು ಇಲ್ಲಿ ವಿಶೇಷವಾಗಿ ಚರ್ಚಿಸಿದ್ದಾರೆ.

**ಕೊನೆ ಟಿಪ್ಪಣಿ**


೧. ಶೇಷನಾರಾಯಣ, ಬೀಸು, ಮುನ್ನುಡಿ

೨. ಶೇಷನಾರಾಯಣ, ಬೀಸು, ಪುಟ೨೩

೩. ಅದೇ ಪುಟ ೨೩

೪. ಅದೇ ಪುಟ ೮೮

೫. ಅದೇ ಪುಟ ೯೩

೬.ಅದೇ ಪುಟ,೧೧೩

೭. ಅದೇ ಪುಟ, ೧೧೫.

### ೪.೨.೬ ಅನಂತಮೂರ್ತಿ : ಭೂ ಹೋರಾಟದ ಪ್ರಭಾವಗಳು

ಅನಂತಮೂರ್ತಿಯವರ ಕಥಾ ಸಾಹಿತ್ಯವು ವ್ಯಕ್ತಿ ಮತ್ತು ಸಮಾಜದ ನೆಲೆಯ ನವ್ಯ ಲೇಖಕರಲ್ಲಿ ಮುಖ್ಯರು. ಅವರ ಸಮಾಜವಾದಿ ಸೈದ್ಧಾಂತಿಕ ನೆಲೆಯ ಅವರ ಕತೆಗಳು ನಗರದ ಬದುಕನ್ನು ಚಿತ್ರಿಸಿವೆ. ಸ್ವತಃ ರೈತ ಚಳವಳಿಯನ್ನು ತುಂಬು ಹತ್ತಿರದಿಂದ ಕಂಡವರು. ಹೀಗಾಗಿ ರೈತ ಚಳುವಳಿಗಳ ಮತ್ತು ಭೂಹೋರಾಟಗಳ ಪ್ರಭಾವವನ್ನು ಇವರ ಸೃಜನಶೀಲ ಕೃತಿಗಳಲ್ಲಿ ಕಾಣಬಹುದು. ರೈತ ಪ್ರಶ್ನೆ ಹಾಗೂ ಭೂ ಪ್ರಶ್ನೆ ಅವರ ಒಟ್ಟಾರೆ ಕಥನಗಳಲ್ಲಿ ಮುಖ್ಯವಾಗದಿದ್ದರೂ, ರೈತ ಕಾಳಜಿಗಳ ಪ್ರಭಾವಗಳು ಅವರ ಕಥಾನಕಗಳಲ್ಲಿ ವ್ಯಕ್ತಗೊಂಡಿವೆ. ಸಾಹಿತ್ಯದ ಸಂದರ್ಭದಲ್ಲಿ ದೊಡ್ಡ ಲೇಖಕ ನೇರವಾಗಿ ಭೂರೈತ ಪ್ರಶ್ನೆಯನ್ನು ಪ್ರತಿನಿಧಿಸದೇ ಇದ್ದರೂ ಅವರ ಕೃತಿಗಳಲ್ಲಿ ಅಂಥ ಆಶಯಗಳಿರುತ್ತವೆ ಎಂಬುದನ್ನು ಅಧ್ಯಯನಕಾರ ಈ ಅಂಶವನ್ನು ಗಮನದಲ್ಲಿರಿಸಿಕೊಂಡಿದ್ದಾನೆ.

ಕೆಲ ಲೇಖಕರು ಹೋರಾಟಗಳನ್ನು ನೇರವಾಗಿ ವಸ್ತುವಾಗಿಸಿಕೊಂಡ ಕತೆ ಕಾದಂಬರಿಗಳನ್ನು ಬರೆದವರು ಇದ್ದಾರೆ. ಅಂಥ ಲೇಖಕರಲ್ಲಿ ಅನಂತಮೂರ್ತಿಯವರು ಬಹಳ ಮುಖ್ಯರು. **ಭಾರತೀಪುರ, ಅವಸ್ಥೆ** ಕಾದಂಬರಿಗಳಲ್ಲಿ ಭೂ ರೈತ ಪ್ರಶ್ನೆಗಳನ್ನು ಚರ್ಚಿಸುತ್ತವೆ.

ಕಾಗೋಡು ಸತ್ಯಾಗ್ರಹ ಮತ್ತು ರೈತ ಹೋರಾಟಗಳ ಸಂದರ್ಭದ ಪ್ರಭಾವವನ್ನು"**ಅವಸ್ಥೆ**" ಕಾದಂಬರಿಯಲ್ಲಿ ಕಾಣುತ್ತೇವೆ. ಇಲ್ಲಿ ಭೂರೈತ ಸಮಸ್ಯೆಗಳನ್ನು ಕಾಗೋಡು ಹೋರಾಟದ ಹಿನ್ನೆಲೆಯಲ್ಲಿ ಪರಿಶೀಲಿಸುವುದು ಅಗತ್ಯ. ಏಕೆಂದರೆ ಹೋರಾಟದ ದಟ್ಟ ಪ್ರಭಾವವೇ ಈ ಕಾದಂಬರಿಯಲ್ಲಿ ಬರುವುದರಿಂದ ಇಲ್ಲಿನ ಭೂರೈತ ಸಮಸ್ಯೆಗಳನ್ನು ಪ್ರತಿನಿಧಿಸುತ್ತದೆ. ಇಲ್ಲಿ ಒಬ್ಬ ಆದರ್ಶ ರಾಜಕಾರಣಿಯ ಹೋರಾಟವನ್ನು ಈ ಹಿನ್ನೆಲೆಯಲ್ಲಿ ಕಾಣಬಹುದಾಗಿದೆ. ಈ ಕಾದಂಬರಿಯ ನಾಯಕ ಕೃಷ್ಣಪ್ಪ, ಈತನ ಸೇವಕ ವೀರಣ್ಣನ ಜೊತೆ ನರಸಿಂಹಭಟ್ಟ ಅವನ ಜೊತೆಗೆ ಮೊದಲನೇ ಚುನಾವಣೆಯಲ್ಲಿ ತನ್ನನ್ನು ಸೋಲಿಸಲು ಭೂಮಾಲೀಕರ ಪರವಾಗಿ ನಿಂತಿದ್ದ ರಾಮೇಗೌಡ ಬರುತ್ತಾನೆ.

"ಗೇಣಿಶಾಸನದ ಬಗ್ಗೆ ನನ್ನ ತಿಳುವಳಿಕೆ ಅಲ್ಪವಾಗಿತ್ತೆಂದೂ, ಬಲಾಚ ಪೃಥವೀ ಎನ್ನುವ ತತ್ವ ಈಗ ಸಲ್ಲದೆಂದೂ, ಕೃಷ್ಣಪ್ಪಗೌಡರ ಹೋರಾಟದಿಂದ ಈಗ ತಾನು ಕೂಡ ಮಠದ ಸ್ವಲ್ಪ ತೋಟದ ಮಾಲೀಕನಾಗುವುದು ಸಾಧ್ಯವಾಯಿತೆಂದೂ. ಸ್ವಾಮಿಗಳಿಗೂ ತನಗೂ ಈಗ ಅಷ್ಟಕಷ್ಟೇ ಎಂದೂ ನರಸಿಂಹಭಟ್ಟ ಹೇಳಿದ."[೧]

ಬಲವಿದ್ದವನು ಭೂ ಒಡೆತನ ಪಡೆಯುತ್ತಾನೆ ಎಂಬ ವಾಸ್ತವ ಸಂಗತಿಯನ್ನು ಕೃಷ್ಣಪ್ಪನಿಂದ ಹೇಳಿಸುತ್ತಾರೆ. ಅಸ್ತಿತ್ವಕ್ಕಾಗಿ ಹೋರಾಟ ಎಂಬ ಸಿದ್ಧಾಂತವನ್ನು ಪ್ರತಿಪಾದಿಸಿದಂತಿದೆ.

ಇಂಥ ಉಪಕಾರದ ಸ್ಮರಣೆಗಾಗಿ ರೈತರೆಲ್ಲರೂ ರಾಜಕಾರಣಿಗಳೆಲ್ಲರೂ ತಮ್ಮ ತಮ್ಮ ಸ್ವಾರ್ಥದ ಬಳಕೆಗೆ ಸಮಾವೇಶ ಏರ್ಪಡಿಸುತ್ತಾರೆ. ಕೃಷ್ಣಪ್ಪನ ಕ್ಷೇತ್ರದಲ್ಲಿ ರೈತರೆಲ್ಲ ಕೂಡಿ ದೊಡ್ಡದೊಂದು ಸನ್ಮಾನ ಸಮಾರಂಭ ಏರ್ಪಡಿಸಿದ್ದಾರೆ. "ಈ ಸಭೆಯಲ್ಲಿ ಹಗಲು ಭಾಷಣಗಳು ರೈತ ಸಮಸ್ಯೆ ಬಗ್ಗೆ. ಮೊದಲನೇ ದಿನ ಕೃಷ್ಣಪ್ಪಗೌಡರಿಗೆ ಒಂದು ಲಕ್ಷ ರೂಪಾಯಿಯನ್ನು ಅರ್ಪಿಸಲಾಗುತ್ತಿದೆ. ಕೃಷ್ಣಪ್ಪ ಗೌಡರ ಜನಪ್ರಿಯತೆ ಎಂಥದೆಂದರೆ ಈ ಮುಖ್ಯಮಂತ್ರಿ ವೈರಿ ಚಂದ್ರಯ್ಯನೂ ಈ ಸಭೆಗೆ ಬರುವ ಆಶಯ ತೋರಿದ್ದಾರಂತೆ ಒಟ್ಟಿನಲ್ಲಿ ಇದು ದೇಶದ ಬಡ ರೈತರಿಗೆ ಒಂದು ದೊಡ್ಡ ಜಾತ್ರೆಯಾಗಲಿದೆ."[೨] ಈಸಭೆಯನ್ನು ಅವರ ಅಭಿಮಾನಿಗಳು ತೆರೆಮರೆಯಲ್ಲಿ ಸಿದ್ಧಪಡಿಸಿರುವುದು ಕಂಡುಬರುತ್ತದೆ. ಇದು ದೇಶದ ವ್ಯಂಗ್ಯವಾಗಿ ರೈತರ ಸ್ಥಿತಿಗತಿಯನ್ನು ಬಿಂಬಿಸುತ್ತದೆ.

ಇತ್ತ ಸನ್ಮಾನದ ಸಿದ್ಧತೆ ನಡೆಯುತ್ತಿದ್ದು, ಕೃಷ್ಣಪ್ಪಗೌಡನ ಮನದಲ್ಲಿ ಆಲೋಚನೆಗಳು ಪ್ರವಾಹವಾಗಿ ಹರಿಯುತ್ತವೆ. ಗೆಳೆಯ ನಾಗರಾಜ ಹೀಗೆ ಯೋಚಿಸಬಹುದೆಂಬ ತವ್ಮೊಳಗೆ ಕೃಷ್ಣಪ್ಪಗೌಡರು ಸಂವಾದಿಸಿಕೊಳ್ಳುತ್ತಾನೆ. "ಈಗೇಣಿ ಶಾಸನದಲ್ಲಿ ಭಟ್ಟ ಗೌಡ ಲಾಭ ಪಡೆದಿದ್ದಾರೆ. ಭೂಮಿಹೀನ ಕೂಲಿಗಾರರ ಪರವಾದ ವ್ಯವಸ್ಥೆ ತರುವುದು ಪಾರ್ಲಿಮೆಂಟರಿ ದಾರಿಯಲ್ಲಿ ಸಾಧ್ಯವಿಲ್ಲ. ಅದಕ್ಕೆ ನೀನು ಬದ್ಧನಾದಾಗ ಈ ಭಟ್ಟ ಗೌಡರುಗಳೇ ವಿರೋಧಿಗಳಾಗುತ್ತಾರೆ. ಮೊದಲು ಗೇಣಿದಾರರ ಪರ ನಿಂತಾಗ ಅವರು ವಿರೋಧಿಗಳಾಗಿದ್ದಂತೆ. ದೊಡ್ಡ ಫ್ಯೂಡಲ್ ಭೂಮಾಲೀಕರನ್ನು ನಾಶಮಾಡಿದ ಮೇಲೆ, ಈ ಕ್ಯಾಪಿಟಲಿಸ್ಟ್ ಭೂಮಾಲೀಕರು ನಿನ್ನ ರಾಜಕೀಯದ ಫಲವಾಗಿಯೇ ತಲೆಎತ್ತಿ ನಿನ್ನ ಬೆಂಬಲಕ್ಕೆ ನಿಂತಿದ್ದಾರೆ. ಚಕ್ರ ಇನ್ನೂ ಸುತ್ತಬೇಕಾದರೆ ನಿಜವಾಗಿ ಭೂಮಿಯಲ್ಲಿ ನಿಯೋಕಲೋನಿಯಲ್ ಶಕ್ತಿಗಳು ದೇಶದಲ್ಲಿ ಸೃಷ್ಟಿಸುತ್ತಿರುವ ಫ್ಯಾಸಿಸಮ್ಮನ್ನು ವಿರೋಧಿಸುವುದು ಈ ಕ್ಯಾಪಿಟಲಿಸ್ಟ್ ಒಡುವಳಿದಾರರ ವರ್ಗಹಿತಕ್ಕೆ ಅಗತ್ಯವಿರಬಹುದು. ಹಾಗಿದ್ದಲ್ಲಿ ಅವರನ್ನೂ ಬಳಸಬೇಕು..

ನಾಗರಾಜ್ ಹೀಗೆಲ್ಲ ಯೋಚನೆ ಮಾಡಬಹುದಾದ ಸಂಭವವೂ ಇದೆ... ಕೃಷ್ಣಪ್ಪನಿಗೆ ತಲೆ ಚಿಟ್ಟೆನ್ನಿಸುತ್ತದೆ."[೩]

ಇಲ್ಲಿ ಕೃಷ್ಣಪ್ಪಗೌಡನಲ್ಲಿ ಗೇಣಿದಾರರ, ರೈತರ ಬಗೆಗಿನ ಈ ಮೊದಲಿದ್ದ ನಿಲುವುದ ಆನಂತರದ ನಿಲುವುಗಳ ಭಿನ್ನತೆಗೆ ತನ್ನೊಳಗೆ ಆಗುತ್ತಿರುವ ತಲ್ಲಣಗಳು ವ್ಯಕ್ತವಾಗುತ್ತವೆ.

"**ಭಾರತೀಪುರ**"ದಲ್ಲಿ ಜಾತಿ ಆಧಾರಿತ ಸಾಂಪ್ರಾದಾಯಿಕ ಬದಲಾಗದ ಸ್ಥಿತಿಗಳನ್ನು ಸುಧಾರಿಸುವ ಆಶಯವಿದೆ. ಇಲ್ಲಿ ಬರುವ ಜಗನ್ನಾಥನ ಹೋರಾಟವು ಸಮಸ್ಯೆಯನ್ನು ಸರಿಯಾಗಿ ಗ್ರಹಿಸದೆ ಇದ್ದುದರಿಂದ ಆತನ ಹೋರಾಟಗಳೆಲ್ಲವೂ ವಿಫಲವಾಗುತ್ತವೆ. ಅವನು ತರುವ ಸುಧಾರಣೆಗೆ ಸಮಾಜವೇ ಸಿದ್ಧವಾಗಿರುವುದಿಲ್ಲ. ಅಂಥ ಸಂದರ್ಭದಲ್ಲಿ ವಿಫಲತೆಯನ್ನು ಎತ್ತಿ ಹೇಳುತ್ತದೆ. ಭಾರತೀಪುರ ಎನ್ನುವುದು ಭಾರತದ ಜಡ ಸಂಪ್ರದಾಯವಾದಿಗಳ ಮೌಲ್ಯಗಳ ಬಿಗಿ ಹಿಡಿತದಲ್ಲಿ ಸಿಕ್ಕಿ ನರಳುತ್ತಿರುವ ಸ್ಥಿತಿಗೆ ಸಂಕೇತವಾಗಿದೆ.

"**ಪ್ರಕೃತಿ**" ರೈತ ಪ್ರಶ್ನೆ ಹೇಳುವಂತಹ ಕತೆಯಾಗಿದೆ.ಇಲ್ಲಿ ಲಕ್ಷ್ಮೀಯ ಬದುಕಿನ ದುರುಂತವನ್ನು ಹೇಳಲು ಹೊರಟಿರುವುದು ಕಂಡುಬರುತ್ತದೆ. ಕೌಟುಂಬಿಕ ನೆಲೆಯ ವ್ಯವಸಾಯಬದುಕು ಮತ್ತು ಲಕ್ಷ್ಮೀಬದುಕಿನ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಚಿತ್ರಿಸಲಾಗಿದೆ. ಆದರೆ ಇದೇ ಅಂಶವೇ ಪ್ರಧಾನವಾಗಿಲ್ಲ. ಪಾರ್ಶ್ವಿಕವಾಗಿ ರೈತ ಪ್ರಶ್ನೆಯನ್ನು ಕೂಡಾ ಇಲ್ಲಿ ಚರ್ಚಿಸಲಾಗಿದೆ. ಉತ್ತಮ ಬೆಳೆಯನ್ನು ಬೆಳೆದು ಲಾಭ ಗಳಿಸಬೇಕೆಂಬ ಹಂಬಲದಿಂದ ಇಲ್ಲಿನ ರೈತ ಸಂಕಪ್ಪಯ್ಯ ಯತ್ನಿಸುತ್ತಾನೆ. ಈತನ ಹಂಬಲಕ್ಕೆ ಪ್ರಕೃತಿ ವೈರುದ್ಯಗಳು ತನ್ನ ಕನಸುಗಳನ್ನು ನುಚ್ಚುನೂರು ಮಾಡುತ್ತವೆ. ಸಂಕಪ್ಪಯ್ಯನ ಮಗಳು ತನ್ನ ಗಂಡನನ್ನು ಕಳೆದುಕೊಂಡು ಮನೆಯನ್ನು ಸೇರಿದ್ದಾಳೆ. ಇಲ್ಲಿ ತನ್ನ ಜಮೀನಿನಲ್ಲಿ ಬೆಳೆದ ಕಿತ್ತಳೆ, ಬಾಳೆಗೊನೆಗಳು ಬೆಳೆದ ಫಲ ಕೈಗೆ ಸಿಗುವಷ್ಟರಲ್ಲಿ ಪ್ರಕೃತಿಯ ಇಚ್ಛಾಶಕ್ತಿಯ ಮುಂದೆ ಮನುಷ್ಯ ಪ್ರಯತ್ನಗಳು ವಿಫಲಗೊಳ್ಳುತ್ತವೆ.

ತನ್ನ ಮಗಳು ಲಕ್ಷ್ಮಿ ವಿಧವೆ. ಈಕೆ ಕಿತ್ತಳೆ ತೋಟದಂತೆ ಬರಡಾಗಿ ನಿಂತಿರುವ ಹರೆಯದ ಹೆಣ್ಣು.ಆಧುನಿಕ ಮನಸ್ಸಿನ ಸಂಕಪ್ಪಯ್ಯನ ಮಗನಿಗೆ ಭೂಮಿಯ ಬಗೆಗಿನ ಆಸೆಯಿಲ್ಲ. ಆತನು ಈ ಪಾಳುಭೂಮಿಯನ್ನು ಒಂದು ಹದಕ್ಕೆ ತಂದು ಬೇಸಾಯ ಮಾಡಿ ಬದುಕು ಸಾಗಿಸಬೇಕೆಂಬ ಹಂಬಲವಿಲ್ಲದೆ, ಪೇಟೆಯಲ್ಲಿ ಹೋಟೆಲ್ಲು ಇಡುವ ಆಸೆಯನ್ನು ವ್ಯಕ್ತಪಡಿಸುತ್ತಾನೆ. ಅಲ್ಲದೆ ಸಂಕಪ್ಪಯ್ಯನ ಹೆಂಡತಿಯೂ ವ್ಯವಸಾಯವನ್ನು ವಿರೋಧಿಸುತ್ತಾಳೆ. ವ್ಯವಸಾಯಕ್ಕಾಗಿ ಅಪಾರ ಹಣವನ್ನು ಹಾಕಿ ಸಂಕಪ್ಪಯ್ಯ ಸಾಲಗಾರನಾಗಿರುವುದರಿಂದ ಬೇಸಾಯ ಇವರಾರಿಗೂ ಬೇಡವಾಗಿದೆ. ಇಂತಹ ಸ್ಥಿತಿಯಲ್ಲಿರುವ ಸಂಕಪ್ಪಯ್ಯನ ಕುಟುಂಬ ಬೇಸಾಯ ಬದುಕಿನಿಂದ ಬೇಸತ್ತು, ೨೦ಸಾವಿರ ರೂಪಾಯಿ ಸಾಲ ಮಾಡಿಕೊಂಡು ನಷ್ಟ ಅನುಭವಿಸುತ್ತದೆ.ಬೇಸಾಯದ ಬದುಕಿನ ಈತನ ಇಚ್ಛಾ ಶಕ್ತಿಯ ಮೇಲೆ ಪ್ರಕೃತಿ ಸವಾರಿ ಮಾಡುವುದನ್ನು ಕಾಣುತ್ತೇವೆ. ಈತನ ಬರಡು ಭೂಮಿಯಲ್ಲಿ ಬೆಳೆದ ಬಾಳೆ ತೋಟಕ್ಕೆ ಆನೆಗಳ ಹಿಂಡು ಬಂದು ಹಾಳುಮಾಡಿ ಹೋಗಿರುತ್ತದೆ. ಶ್ರಮ ಪಟ್ಟು ಬೆಳೆಸಿದ ಕಿತ್ತಳೆ ಬೆಳೆಯು ಈತನಿಗೆ ಕೈಸುಟ್ಟುಕೊಳ್ಳುವಂತಾಗಿದೆ. ತನ್ನ ಮಗಳು ಲಕ್ಷ್ಮಿಯ ಮೇಲಿನ ನಂಬಿಕೆಗೆ ಭಂಗ ಬರುವಂತೆ, ಆಕೆ ಯಾರನ್ನೋ ತಬ್ಬಿಕೊಂಡು ಮಲಗಿ ಅಸಹಜವಾಗಿ ಫಲ ಧರಿಸುವ ಚಿತ್ರಣವಿದೆ.

ಪ್ರತಿ ಘಟ್ಟದಲ್ಲೂ ಪ್ರಕೃತಿಯೊಂದಿಗೆ ಹೋರಾಟ ಮಾಡುತ್ತ ತಾನು ಭೂಮಿಯನ್ನು ಉತ್ತು ಉತ್ತಮ ಫಸಲನ್ನು ತಗೆಯುವ ಸಂಕಪ್ಪಯ್ಯನ ಕನಸನ್ನು ಭಗ್ನಗೊಳಿಸುತ್ತದೆ.ತೋಟಕ್ಕೆ ಹೋಗುವ ದಾರಿಯಲ್ಲಿ ಆತನ ಇಚ್ಛಾಶಕ್ತಿಯ ಹಾಗೆ ಸಾಂಕೇತಿಕವಾಗಿ, ಯಾರೊ ಗುಂಡಿಟ್ಟು ಹುಲಿಯನ್ನು ಕೊಲ್ಲುವ ಸುದ್ದಿಯನ್ನು ತಿಳಿಯುತ್ತಾನೆ. ಇಲ್ಲಿ ಹುಲಿಯನ್ನು ಕೊಲ್ಲುವ ಸಂಕೇತ ತನ್ನ ಇಚ್ಛಾಶಕ್ತಿಯ ಕೊಂದ ಸಂಕೇತವಾಗಿ ಕಾಣುತ್ತದೆ. ಈ ಕತೆಯಲ್ಲಿ ಪ್ರಕೃತಿಯ ಮುಂದೆ ಮನುಷ್ಯನ ಇಚ್ಛಾಶಕ್ತಿ ನಡೆಯದು, ಅಂತಿಮವಾಗಿ ಪ್ರಕೃತಿ ಇಲ್ಲಿ ಗೆಲ್ಲುತ್ತದೆ ಎಂದು ಸೂಚಿಸುತ್ತದೆ.

**ಕೊನೆ ಟಿಪ್ಪಣಿ**

೧. ಅನಂತಮೂರ್ತಿ,ಅವಸ್ಥೆ,ಪುಟ ೧೨೬

೨. ಅದೇ ಪುಟ ೧೨೬

೩. ಅದೇ ಪುಟ ೧೩೩

### ೪.೨.೭ ಪಿ.ಲಂಕೇಶ್ : ಭೂಮಿಯ ಮಾರಾಟದ ಸಂಘರ್ಷ

ಲಂಕೇಶರ ಸಾಹಿತ್ಯ ಕೃತಿಗಳಲ್ಲಿ ಗ್ರಾಮೀಣ ಬದುಕಿನ ತಳಮಳ, ಸಂಘರ್ಷ ಸಣ್ಣತನ, ದ್ವೇಷ,ಅಸೂಯೆ, ಗೊಡ್ಡುಸಂಪ್ರದಾಯ ಮೊದಲಾದವುಗಳನ್ನು ಸಾಹಿತ್ಯದ ಮೂಲಕ ಅನಾವರಣಗೊಳಿಸಿರುವುದನ್ನು ಕಾಣಬಹುದಾಗಿದೆ. ಮಾತ್ರವಲ್ಲದೆ ಗ್ರಾಮೀಣ ಬದುಕಿನ ವಿವಿಧ ಸ್ಥರಗಳ ಜೀವನಾನುಭವದ ಸೂಕ್ಷ್ಮತೆ ಅವರ ಕತೆಗಳಲ್ಲಿ ವ್ಯಕ್ತವಾಗಿವೆ. ಅಲ್ಲದೆ ನಗರ ಬದುಕಿನ ಸಿನಿಕತೆ, ಲಂಚಗುಳಿತನ, ಭ್ರಷ್ಟತೆ, ಆಸೆಬುರುಕುತನ, ಸ್ವಾರ್ಥ, ಪ್ರತಿಷ್ಠೆ ಅವರ ಕತೆಗಳಲ್ಲಿ ಕಂಡುಬರುತ್ತದೆ. ಸಮಾಜವಾದ ಹಾಗೂ ಲೋಹಿಯಾ, ಪ್ರಭಾವ ಮತ್ತು ಪ್ರೇರಣೆಗಳನ್ನು ಅವರ ಸಾಹಿತ್ಯ ಕೃತಿಗಳಲ್ಲಿ ಕಂಡುಬರುತ್ತದೆ. ಇವರ ಕತೆಗಳು ಏಕಕಾಲದಲ್ಲಿ ಎರಡು ನೆಲೆಯಲ್ಲಿ ಅಭಿವ್ಯಕ್ತಗೊಳ್ಳುವುದನ್ನು ಕಾಣುತ್ತೇವೆ. ಲಂಕೇಶರ ಕತೆಗಳಲ್ಲಿ ನಗರ ಪ್ರಧಾನವಾದ ಬದುಕು ಹಾಗೂ ಗ್ರಾಮೀಣ ನೆಲೆಯ ಬದಕಿನ ಚಿತ್ರಣವನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಮುಖ್ಯವಾಗಿ ಗ್ರಾಮೀಣ ನೆಲೆಯ ಊಳಿಗಮಾನ್ಯ ವ್ಯವಸ್ಥೆಯ, ಜಮೀನ್ದಾರಿ ಪಾಳೇಗಾರಿಕೆಯನ್ನು ಕುರಿತ ಸಂಬಂಧಗಳನ್ನು ಕಾಣುತ್ತೇವೆ. ಅವರ ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ, ಕಲ್ಲುಕರಗುವ ಸಮಯ, ಉಲ್ಲಂಘನೆ ಮತ್ತು ಇತರೆ ಕಥಾಸಂಕಲನಗಳಲ್ಲಿ ಇಂತಹ ಆಶಯಗಳನ್ನು ಗುರುತಿಸಬಹುದಾಗಿದೆ.

"**ಮಾರಲಾಗದ ನೆಲ**" ಕತೆಯನ್ನು ಇಲ್ಲಿ ಮುಖ್ಯವಾಗಿ ಊಳಿಗಮಾನ್ಯಶಾಹಿಯ ಸಂಬಂಧದ ನೆಲೆಯಲ್ಲಿ ವ್ಯಕ್ತವಾಗುತ್ತದೆ. ಈ ಕತೆಯಲ್ಲಿ ಭೂಮಾಲೀಕ ಊಳಿಗಮಾನ್ಯಶಾಹಿ ವ್ಯವಸ್ಥೆಯ ಪ್ರತಿನಿಧಿಯಾಗಿ ಕಂಡು ಬರುತ್ತಾನೆ. ಇಲ್ಲಿ ಭೂಮಾಲೀಕನ ಭೂ ಸಂಬಂಧ ಕೇವಲ ಮೇಲ್ನೋಟಕ್ಕೆ ಇದ್ದರೂ, ಗೇಣಿರೈತನಲ್ಲಿರುವ ಭೂಮಿಯೊಂದಿಗಿನ ಅಂತರ್‌ಸಂಬಂಧವನ್ನು ಭೂಮಾಲೀಕನಲ್ಲಿ ಕಾಣಲಾಗುವುದಿಲ್ಲ. ಈ ಕಥಾನಾಯಕ ವಿಶ್ವನಾಥ ಬೆಂಗಳೂರು ನಗರದಲ್ಲಿ ವಾಸಿಸುತ್ತಿದ್ದಾನೆ. ಆದ್ದರಿಂದ ತನ್ನ ಹಳ್ಳಿಯ ಪಿತ್ರಾರ್ಜಿತ ಆಸ್ತಿಯನ್ನು ಮಾರಲು ಇಚ್ಚಿಸುತ್ತಾನೆ. ಏಕೆಂದರೆ ಗೇಣಿಗೆ ಕೊಟ್ಟಿದ್ದ ಜಮೀನಿನಲ್ಲಿ ಏನೇ ಬೆಳೆದರು ಅದರ ಫಲವನ್ನು ಗೇಣಿದಾರನೇ ನುಂಗುತ್ತಿರುವುದು ಮಾರಲು ಮತ್ತೊಂದು ಕಾರಣವಾಗಿದೆ. ಮೂಢ ನಂಬಿಕೆ,ಕಪಟ,ಮೋಸ ವಂಚನೆ, ದ್ವೇಷ,ಅಸೂಯೆ ಇವೆಲ್ಲವನ್ನು ಗರ್ಭೀಕರಿಸಿಕೊಂಡು ಈ ಹಳ್ಳಿಯಾಗಿದೆ. ಈ ಜಮೀನ ಮೇಲಿನ ಮೂಢನಂಬಿಕೆಯಿಂದಲೇ ತನ್ನ ಜಮೀನನ್ನು ಮಾರಲಾಗದೆ ನಗರಕ್ಕೆ ಹಿಂತಿರುಗುವುದು ಕಥಾವಸ್ತುವಾಗಿದೆ. ಈ ಕತೆಯ ಹೆಸರೇ ಸೂಚಿಸುವಂತೆ ಮಾರಲಾಗದ ನೆಲವನ್ನು ಕುರಿತ ತಾಕಲಾಟಗಳು ಮತ್ತು ಆ ಊರಿನ ಸಂಘರ್ಷಗಳು ವ್ಯಕ್ತಗೊಳ್ಳುತ್ತವೆ.

ವಿಶ್ವನಾಥ ನಗರದಲ್ಲಿ ವಾಸಿಸುತ್ತಿದ್ದು, ತನ್ನ ಭೂಮಿಯನ್ನು ಹಳ್ಳಿಯಲ್ಲಿರುವ ಗೇಣಿ ರೈತ ದುರುಗನಿಗೆ ನೀಡಿರುತ್ತಾನೆ. ಕತೆಯ ನಿರೂಪಕನೇ ನಾಯಕನಾಗಿರುವುದರಿಂದ ಈತನಲ್ಲಿರುವ ಭೂಮಾಲೀಕ ಧೋರಣೆಯನ್ನು ಕಾಣಬಹುದು. ಇಲ್ಲಿ ಭೂಮಿಯ ಬಗೆಗಿನ ಸಂಬಂಧ ಕೇವಲ ಉತ್ಪನ್ನದ, ಆದಾಯದ, ಲಾಭದ ಪ್ರಶ್ನೆಯಾಗಿ ಕತೆಯಲ್ಲಿ ನೋಡುತ್ತಾನೆ.

ನಗರದಲ್ಲಿದ್ದ ಕಥಾನಾಯಕ ತನ್ನ ಹಳ್ಳಿಗೆ ಬಂದಿರುತ್ತಾನೆ. ಅಲ್ಲಿ ತನ್ನ ಪಾಲಿಗೆ ಬಂದಿದ್ದ ಭೂಮಿಯನ್ನು ಗೇಣಿದಾರರಾಗಿದ್ದ ದುರಗನ ಕುಟುಂಬಕ್ಕೆ ಭೂಮಿಯನ್ನು ವಹಿಸಿಕೊಟ್ಟಿರುತ್ತಾನೆ. ಈತ ಸರಿಯಾಗಿ ಗೇಣಿ ನೀಡದೇ ಇರುವುದು ಜಮೀನು ಮಾರಲು ಕಾರಣವಾಗಿರುತ್ತದೆ. ಕಥಾನಾಯಕ ತನ್ನ ಊರನ್ನು ಸುತ್ತುವ ನೆಪದಲ್ಲಿ ಊರಿನ ಕಥೆ ಬಿಚ್ಚಿಕೊಳ್ಳುತ್ತದೆ. ನಗರದಲ್ಲಿ ವಾಸಿಸುತ್ತಿರುವುದರಿಂದ ಭೂಮಿಯನ್ನು ಮಾರುವುದರ ಬಗ್ಗೆ ಪ್ರಸ್ತಾಪವಾಗುತ್ತದೆ. "ಭೂಮಿ ಮಾರೋದು ಕಷ್ಟ ಕುಸುಮ, ಅವರು ಕೇಳಿದಷ್ಟಕ್ಕೆ ಕೊಟ್ಟು ಬರೋಕಾಗುತ್ತೇನೋ?"[೧] ಆಧುನಿಕ ಶಿಕ್ಷಣ ಪಡೆದ ಕತೆಗಾರ ನಗರ ಬದುಕಿನ ಆಕರ್ಷಣೆಗಳಿಗೆ ಒಳಗಾಗಿದ್ದರೂ ತನ್ನ ಹಳ್ಳಿಯಲ್ಲಿದ್ದ ಭೂಮಿಯನ್ನು ಕಳೆದು ಕೊಳ್ಳಲು ಇಚ್ಚಿಸುವುದಿಲ್ಲ. ಆದರೂ ಆತನ ಹೆಂಡತಿ ಕುಸುಮ ಒತ್ತಾಯ ಮಾಡಿ ಭೂಮಿಯನ್ನು ಲಾಭಕ್ಕೆ ಮಾರುವಂತೆ ಸೂಚಿಸುತ್ತಾಳೆ. ಅಲ್ಲದೆ ಭೂಮಿಯನ್ನು ಮಾರಲು ಊರಿನ ಮಹಾದೇವಪ್ಪನಿಗೆ ವಹಿಸಲು ಆತನ ಹೆಂಡತಿ ಹೇಳುತ್ತಾಳೆ. ಇದರೊಂದಿಗೆ ಊರಿನ ಉಸಾಬರಿಗೆ ಹೋಗದೆ ಇರುವಂತೆ ಆತನ ಹೆಂಡತಿ ತಾಕೀತು ಮಾಡುತ್ತಾಳೆ.

ಭೂಮಾಲೀಕ ತನ್ನ ಭೂಮಾಲೀಕತ್ವವನ್ನು ಸುಲಭವಾಗಿ ಬಿಟ್ಟುಕೊಡದೇ ಇರುವುದು ಇಲ್ಲಿ ವ್ಯಕ್ತವಾಗುತ್ತದೆ. ಆದರೆ ಈ ಕಥಾನಾಯಕ ಭೂಮಿಯ ಬಗೆಗಿನ ಆಸಕ್ತಿ ಕಳೆದುಕೊಂಡು, ಭೂಮಿಯಿಂದ

ವಿಮುಖತೆಯ ಹಾದಿಯನ್ನು ಹಿಡಿದಿರುವುದನ್ನು ಕಾಣುತ್ತೇವೆ. ಅದಕ್ಕೆ ಆತ "ಹೌದು, ದುರುಗನ್ನ ನೆಚ್ಚಿ ನಾನು ಬೆಂಗಳೂರಲ್ಲಿ ಹಾಯಾಗಿ ಇರೋಕೆ ಆಗೋಲ್ಲ. ಇವತ್ತಿನವರೆಗೆ ಆತ ನೆಟ್ಟಗೆ ಭತ್ತ, ದುಡ್ಡು ಒಂದನ್ನೂ ಕಳಿಸಿಲ್ಲ. ಹೀಗೇ ಆದರೆ ನನಗೆ ಜಮೀನು ಇದ್ದೇನು ಉಪಯೋಗ?"[೨] ಇಲ್ಲಿ ಕಥಾ ನಾಯಕನಿಗೆ ಭೂಮಿ ನಿಷ್ಪ್ರಯೋಜಕ ಎನಿಸಿದೆ. ಭೂಮಿ ಉತ್ತು ಬಿತ್ತು ಬೆಳೆಯಲು ಸಾಧ್ಯವಾಗದ ಸ್ಥಿತಿಯನ್ನು ಕಾಣುತ್ತೇವೆ. ಈ ಕತೆಯಲ್ಲಿ ಭೂಮಿ ಪ್ರಶ್ನೆ ಮುಖ್ಯವಾಗದೆ ನಿರೂಪಕ ಭೂಮಿಯನ್ನು ಮಾರುವ ಹಂತಕ್ಕೆ ತಲುಪುತ್ತಾನೆ. ಇಲ್ಲಿ ಭೂ ಪ್ರಶ್ನೆಗಿಂತ ಮುಖ್ಯವಾಗಿ ಲಾಭದ ಪ್ರಶ್ನೆ ಮುಖ್ಯವಾಗುವುದನ್ನು ಗಮನಿಸಬಹುದಾಗಿದೆ. ಈಕತೆಯಲ್ಲಿ ಭೂ ಗೇಣಿ ರೈತಪ್ರಶ್ನೆಯಿದೆ,ಭೂಮಾಲೀಕನ ಪ್ರಶ್ನೆ ವ್ಯಕ್ತವಾಗುವುದನ್ನು ಕಾಣುತ್ತೇವೆ.

**ಕೊನೆ ಟಿಪ್ಪಣಿ**

೧.ಲಂಕೇಶ್, ಮಾರಲಾಗದ ನೆಲ, ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ, ಪುಟ ೨೨೦

೨.ಅದೇ, ಪುಟ ೨೨೪

## ೪.೨.೮ ಪೂರ್ಣಚಂದ್ರತೇಜಸ್ವಿ : ಭೂಮಿ ಮತ್ತು ರೈತಪ್ರಶ್ನೆಯ ಜಾಗತಿಕ ನೆಲೆ

ತೇಜಸ್ವಿಯವರ ಕಥನಗಳಲ್ಲಿ ಮುಖ್ಯವಾಗಿ ರೈತಾಪಿ ಬದುಕಿನ ಚಿತ್ರಣ, ಜಾಗತಿಕ ಸಂದರ್ಭದಲ್ಲಿ ಎದುರಾಗುತ್ತಿರುವ ರೈತರ ಸಮಸ್ಯೆಗಳನ್ನು ಮುಖ್ಯವಾಗಿ ಚರ್ಚಿಸುತ್ತದೆ. ಮಾಯಾಲೋಕ ಕಾದಂಬರಿಯ ಮುನ್ನುಡಿಯಲ್ಲಿ ಲೇಖಕರೇ ಹೇಳುವಂತೆ "ಈಗ, ಇಪ್ಪತ್ತೊಂದನೇ ಶತಮಾನ ಪ್ರಾರಂಭವಾಗುತ್ತಿದೆ. ಅಂಥದೇ ಪರಿಸ್ಥಿತಿಯಲ್ಲಿ ಮತ್ತೊಮ್ಮೆ ನಿಂತಿದ್ದೇವೆಂದು ಅನ್ನಿಸುತ್ತಿದೆ. ನಮ್ಮೆದುರು ಬದಲಾವಣೆಗಳ ಮಹಾಪೂರವೇ ಹರಿಯುತ್ತಿದೆ. ಹೊಸ ನುಡಿಗಟ್ಟುಗಳು, ಹೊಸ ಉಕ್ತಿ ಭಂಗಿ, ಹೊಸ ಅಭಿವ್ಯಕ್ತಿ ವಿಧಾನಗಳ ಬಗ್ಗೆ ನಾವೀಗ ಗಮನಹರಿಸಿ ಹೊಸದಿಗಂತಗಳತ್ತ ಅನ್ವೇಷಣೆ ಹೊರಡಬೇಕಾಗಿದೆ."[೧] ಇಂತಹ ಬದಲಾವಣೆ ಜಾಗತಿಕ ಸಂದರ್ಭದ ಹೊಸಗಾಳಿ ತೀವ್ರತರವಾದ ಆತಂಕಗಳನ್ನು ಲೇಖಕರಲ್ಲಿ ಉಂಟು ಮಾಡಿರುವುದನ್ನು ಅವರ ಕಥನಗಳಲ್ಲಿ ಗುರುತಿಸಬಹುದು. ತೇಜಸ್ವಿಯವರು ಆಧುನಿಕ ಸಂದರ್ಭದ ರೈತ ಸಮಸ್ಯೆಗಳನ್ನು ಬಹು ಸಂಕೀರ್ಣ ನೆಲೆಯಲ್ಲಿ ಶೋಧಿಸುತ್ತಾರೆ. ಅವರ ಎಲ್ಲಾ ಕಥನಗಳ ಆಶಯಗಳಲ್ಲೂ ಭೂರೈತ ಸಮಸ್ಯೆಗಳನ್ನು ಹುಡುಕಿ ಹೆಕ್ಕಿ ತೆಗೆಯಬಹುದಾಗಿದೆ. ದೊಡ್ಡ ಬರಹಗಾರನಲ್ಲಿ ಈ ಎಲ್ಲಾ ಸಾಧ್ಯತೆಗಳಿರುವುದನ್ನು ತೇಜಸ್ವಿಯವರಂಥರಲ್ಲಿ ಕಾಣಬಹುದಾಗಿದೆ.

ಜಾಗತಿಕ ಸಂದರ್ಭದ ಭೂ ರೈತ ಪ್ರಶ್ನೆಗಳನ್ನು ಅತ್ಯಂತ ಗಂಭೀರವಾಗಿ ಪರಿಗಣಿಸಿ ವಿಶಿಷ್ಟವಾಗಿ ಭೂ ರೈತ ಪ್ರಶ್ನೆಗಳಿಗೆ ಗಂಭೀರವಾಗಿ ಪ್ರತಿಕ್ರಿಯಿಸಿರುವುದನ್ನು ಗಮನಿಸಬಹುದು. ಅವರ **ಸ್ವರೂಪ, ನಿಗೂಢಮನುಷ್ಯರು, ಕರ್ವಾಲೋ, ಚಿದಂಬರ ರಹಸ್ಯ, ಜುಗಾರಿಕ್ರಾಸ್, ಮಾಯಾಲೋಕ** ಈ ಎಲ್ಲ ಕಾದಂಬರಿಗಳಲ್ಲಿ ರೈತ ಬದುಕಿನ ಬವಣೆ ಚಿತ್ರಣವಿದೆ. ರೈತ ಮತ್ತು ಭೂಮಾಲೀಕರ ನಡುವೆ ವ್ಯತ್ಯಾಸವೇ ಇರದಂಥ ಸಮಸ್ಯೆ, ಕಷ್ಟಗಳ ಚಿತ್ರಣವಿದೆ. ತೇಜಸ್ವಿಯವರು ಭೂ ರೈತ ಪ್ರಶ್ನೆಗಳ ಕುರಿತು ತಾತ್ವಿಕ ಆಶಯವನ್ನು ಸ್ಥೂಲವಾಗಿ ಹೀಗೆ ಗುರುತಿಸಬಹುದಾಗಿದೆ.

ತೇಜಸ್ವಿಯವರ ಕಥನಗಳಲ್ಲಿ ಭೂ ರೈತ ಪ್ರಶ್ನೆಗಳನ್ನು ಒಂದೇ ಸಮನಾಗಿ ಭೂಮಾಲೀಕನ ದೃಷ್ಟಿಕೋನದಲ್ಲೂ, ಅಂದರೆ ಭೂಮಾಲೀಕ ಮತ್ತು ರೈತ ಬೇರೆ ಬೇರೆ ಎಂಬ ವ್ಯತ್ಯಾಸವೇ ಕಂಡುಬರುವುದಿಲ್ಲ. ಜಾಗತಿಕ ಸಂದರ್ಭದಲ್ಲಿ ಭೂಮಾಲೀಕ ಮತ್ತು ರೈತ ಎಂದು ಪ್ರತ್ಯೇಕಗೊಳಿಸುವುದು ಅತ್ಯಂತ ಕಷ್ಟ ಎಂಬುದು ಇವರ ಕಥನಗಳಲ್ಲಿ ವ್ಯಕ್ತವಾಗುತ್ತದೆ. ಜಾಗತಿಕ ಸಮಸ್ಯೆಗಳ ಕಬಂದ ಬಾಹುಗಳು ರೈತರನ್ನು ಭೂಮಾಲೀಕರನ್ನು ಏಕಕಾಲಕ್ಕೆ ಮಾರುಕಟ್ಟೆಗಳು ನಿಯಂತ್ರಿಸುತ್ತಿರುವುದರಿಂದ ಯಾವ ರೈತನೂ ಸಮಸ್ಯೆಯಿಂದ ಹೊರತಾಗಿಲ್ಲ ಎಂಬುದು, ಅವರ ಕಥನಗಳ ಆಶಯದಲ್ಲಿ ವ್ಯಕ್ತವಾಗುತ್ತವೆ. ಭೂ ರೈತ ಸಮಸ್ಯೆಗಳು ಮಲೆನಾಡಿನ ಪ್ರಾಕೃತಿಕ ವಿಕೋಪಕ್ಕೊಳಗಾದ ಇಲ್ಲಿನ ಬದುಕು ಜರ್ಝರಿತಗೊಂಡ ಚಿತ್ರಣಗಳು ವ್ಯಕ್ತವಾಗುತ್ತವೆ.

"**ಕರ್ವಾಲೋ**" ಕಾದಂಬರಿಯಲ್ಲಿ ವಿಜ್ಞಾನದ ಕುತೂಹಲ, ಮನುಷ್ಯನ ಪ್ರೀತಿ, ಶೋಧನೆಯ ಬಗೆಗಿನ ಆಸಕ್ತಿಯನ್ನು ಜೀವ ಜಗತ್ತಿನೊಂದಿಗೆ ಸಮೀಕರಿಸಿ ನೋಡುತ್ತಾರೆ. ಇಂತಹ ವ್ಯಕ್ತಿತ್ವದ ಅಭಿವ್ಯಕ್ತಿ ಪ್ರಾಪ್ತವಾಗಿರುವುದು ಕನ್ನಡ ಸಾಹಿತ್ಯದ ಸಾರಸ್ವತ ಲೋಕದಲ್ಲಿ ಅಪರೂಪವೆಂದೇ ಹೇಳಬೇಕು. ಈ ಕಾದಂಬರಿಯಲ್ಲಿ ಹಾರುವ ಓತಿ ಮುಖ್ಯಕೇಂದ್ರಬಿಂದುವಾಗಿದ್ದು, ಇದರ ಸುತ್ತ ಜೀವ ವೈವಿದ್ಯಗಳು ಅನಾವರಣಗೊಳ್ಳುತ್ತ ಮನುಷ್ಯಸಮಾಜದ, ಪ್ರಕೃತಿ ವಿಸ್ಮಯಗಳು ತೆರೆದುಕೊಳ್ಳುತ್ತವೆ.

ಕರ್ವಾಲೊ ಕಾದಂಬರಿಯು ಸಹ್ಯಾದ್ರಿ ಪರ್ವತದ ದಟ್ಟ ಅರಣ್ಯದ ಮಧ್ಯೆ ನಿರೂಪಕನ ಬದುಕು ಅರಳುವ ಚಿತ್ರಣವಿದೆ. ಪ್ರಾದೇಶಿಕವಾಗಿ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆಯ ಸುತ್ತಮುತ್ತಲ ಪ್ರದೇಶವೊಂದರಲ್ಲಿ ಗದ್ದೆ ತೋಟದ ವ್ಯವಸಾಯ ಮಾಡಿಕೊಂಡಿರುವ ವ್ಯಕ್ತಿಯಾಗಿ ನಿರೂಪಕರಿದ್ದಾರೆ. ಈ ನಿರೂಪಕರ ದನಿಯಲ್ಲೇ ರೈತ ಪ್ರಶ್ನೆ ಭೂಪ್ರಶ್ನೆ ವ್ಯಕ್ತವಾಗುತ್ತದೆ. ಕೀಟಶಾಸ್ತ್ರಜ್ಞ ಕರ್ವಾಲೊರಿಗೆ ಮಂದಣ್ಣ ಅಪೂರ್ವ ಕೀಟಶೋಧಕನಾಗಿ ಕಾಣುತ್ತಾನೆ. ಇತರೆ ಹಳ್ಳಿಗರಿಗೆ ಮಂದಣ್ಣ ಸಾಮಾನ್ಯವ್ಯಕ್ತಿಯಂತೆ ಕಾಣುತ್ತಾನೆ. ಫೋಟೋಗ್ರಾಫರ್ ಪ್ರಭಾಕರ್, ಬಿರಿಯಾನಿ ಕರಿಯಪ್ಪ, ಹಾವುಗೊಲ್ಲರ ಯಂಗ್ಟ, ಜೇನು ಸೊಸೈಟಿಯ ಲಕ್ಷ್ಮಣ, ನಾರ್ವೆರಾಮಯ್ಯ, ಇವರು ಕಾದಂಬರಿಯಲ್ಲಿ ಪೂರಕವಾಗಿ ಬರುತ್ತಾರೆ. ಮಂದಣ್ಣನ ಮದುವೆ ಪ್ರಸಂಗ, ಹಾರುವ ಓತಿ ಶೋಧದ ಪ್ರಸಂಗಗಳನ್ನು ಕುತೂಹಲ ಮೂಡಿಸುತ್ತವೆ.

ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ರೈತ ಪ್ರಶ್ನೆ ಭೂ ಪ್ರಶ್ನೆಗಳ ಕುರಿತು ನಿರೂಪಕನಲ್ಲಿ ವಿಷಾದದ

ಛಾಯೆ ಇದೆ. ಜೊತೆಗೆ ವ್ಯವಸಾಯದ ಬದುಕು ಲಾಭದಾಯಕವಲ್ಲ ಎಂಬ ಆಶಯವು ವ್ಯಕ್ತವಾಗುತ್ತದೆ. "ಮಳೆಗಾಲ ಮುಗಿಯುತ್ತಾ ಬಂದಿತ್ತು. ಬೆಳಿಗ್ಗೆ ಎಲ್ಲಾ ಝುಳಝುಳ ಬಿಸಿಲು. ರಾತ್ರೆ ಮಾತ್ರ ಆಗೀಗ ಮಳೆ ಬರುತ್ತಿತ್ತು, ನಾನು ನನ್ನ ತೋಟವನ್ನು ಮಾರಿ ಬೇರೇನಾದರೂ ಮಾಡಬೇಕೆಂದು ನಿರ್ಧರಿಸಿದ್ದೆ. ಮೊದಲನೆಯದಾಗಿ ವ್ಯವಸಾಯದಿಂದ ಲಾಭ ಬರುವುದೆಂಬ ನಂಬಿಕೆ ನನ್ನೊಳಗೆ ನಶಿಸತೊಡಗಿತ್ತು. ಲಾಭ ಮಾಡುವುದಿರಲಿ ಬ್ಯಾಂಕಿನಲ್ಲಿ ಮಾಡಿಕೊಂಡ ಸಾಲದ ಬಡ್ಡಿ ಕಟ್ಟುತ್ತಾ ಹೆಚ್ಚೂ ಕಡಿಮೆ ಅಧಿಕಾರಶಾಹಿಯ ಜೀತದಾಳಾಗಿ ನಾನು ನನ್ನಂಥ ಅನೇಕ ರೈತರೂ ಪರಿವರ್ತಿತರಾಗಿದ್ದರು. ಹಾಕಿದ ಲೆಕ್ಕಚಾರ ಒಂದೂ ಗುರಿ ತಲುಪುತ್ತಲೇ ಇರಲಿಲ್ಲ. ಅಕಸ್ಮಾತ್ ಕೊಂಚ ಕರಾರುವಕ್ಕಾಗಿ ಬೆಳೆ ಬಂದರೂ ಆ ವೇಳೆಗಾಗಲೇ ಹಣದುಬ್ಬರ, ಏರಿದ ಸಾಮಾನಿನ ಬೆಲೆಗಳು, ವಿಷದಂತೆ ಏರುತ್ತಿದ್ದ ಬ್ಯಾಂಕ್ ಬಡ್ಡಿದರ, ಅದನ್ನು ಕಬಳಿಸಿ ಬಿಡುತ್ತಿದ್ದವು. ಹೀಗಾಗಿ ಸದಾ ಮುಂದೆ ಸಿಕ್ಕುವ ಲಾಭದ [illegible]" ಒಂದು ರೀತಿಯಲ್ಲಿ ರೈತನ ಆತ್ಮಹತ್ಯೆಗೂ ಇಂಥವೆ ಕಾರಣಗಳಿರುವುದನ್ನು ಗುರುತಿಸಬಹುದು. ಮಾಡಿದ ಸಾಲಕ್ಕೆ ಬೆಲೆಕಟ್ಟಲಾಗದ ಪರಿಸ್ಥಿತಿ. ವಿಷದಂತೆ ಏರುತ್ತಿರುವ ಬೆಲೆಗಳು ಬೆಳೆಗೆ ತಕ್ಕ ಬೆಲೆ ಸಿಗದ ಸನ್ನಿವೇಶ ಇವೆಲ್ಲಾ ಇಂದು ರೈತನನ್ನು ಪರೋಕ್ಷವಾಗಿ ಜಾಗತೀಕರಣದ ಜೀತದಾಳನ್ನಾಗಿ ಮಾಡಿವೆ.

ಪ್ರಕೃತಿ ವಿಕೋಪಗಳ ಕುರಿತು,ನಿರೂಪಕ "ರಾಮಯ್ಯಾ, ಹುಳಹುಪ್ಪಟೆ ವಿಚಾರ ತಿಳೀಬೇಕಂತಾನೆ ಕರ್ವಾಲೋರಿಗೆ ಸರ್ಕಾರ ಸಾವಿರದೈನೂರು ರೂಪಾಯಿ ಸಂಬ್ಳ ಕೊಡ್ತಿದೆ. ಅದನ್ನು ನೀನು ಅಷ್ಟೊಂದು ಉದಾಸೀನ ಮಾಡಿ ನೋಡಬೇಡ. ಅದಿರಲಿ, ನಿನ್ನ ಏಲಕ್ಕಿ ತೋಟಕ್ಕೆ ಹುಳು ಬಿದ್ದು ದರಿದ್ರ ಹಿಡಿದು ಪಾಪರಾಗಿ ತಾನೇ ನಾರ್ವೆ ಬಿಟ್ಟು ಇಲ್ಲಿಗೆ ಬಂದದ್ದು. ಅದನ್ನ ಮರತೇ ಬಿಟ್ಟೆಯಾ"[೩] ಎನ್ನುತ್ತಾನೆ.

ಈ ಮಾತಿನಲ್ಲಿ ಕೂಡ ನಾವೆ ರಾಮಯ್ಯನ ಇಂದಿನ ಸ್ಥಿತಿಗೆ ಅವನಿಗೆ ಕೈಗೊಂಡ ಕೃಷಿಯೇ ಕಾರಣವಾಗಿದೆ ಎಂಬುದು ವ್ಯಕ್ತವಾಗಿದೆ. ಅಂದರೆ ರೈತನಿಗೆ ಬಾಹ್ಯ ಶತ್ರುಗಳು ಜಾಗತೀಕರಣ, ಬ್ಯಾಂಕರ್ ಲೇವಾದೇವಿದಾರರು ಈ ಮುಂತಾದವುಗಳಿದ್ದರೆ, ಪ್ರಕೃತಿಯೇ ಮತ್ತೊಂದು ಅವನ ಶತ್ರುವಾಗಿ ಪರಿಣಮಿಸಿದೆ. ಸಕಾಲಕ್ಕೆ ಆಗದ ಮಳೆ ಆದರೂ ಅತಿವೃಷ್ಟಿ ಇಂಥ ಸಮಸ್ಯೆಗಳು ನೈಸರ್ಗಿಕವಾಗಿ ಉಂಟಾಗುವ ಸಮಸ್ಯಗಳಾಗಿವೆ. ಇವು ಕೂಡ ರೈತನ ಬದುಕನ್ನು ನಿರ್ಧರಿಸಲು ಮತ್ತು ನಿಯಂತ್ರಿಸುತ್ತವೆ.

ಮಂದಣ್ಣನನ್ನು ಶರಾಬಿನ ಕೇಸಿನಲ್ಲಿ ಪೊಲೀಸರು ನಾರ್ವೆಯ ರಾಮಯ್ಯನ ಮನೆಯಲ್ಲಿ ಮನೆಯಲ್ಲಿದ್ದ ಮಂದಣ್ಣನನ್ನು ಬಂಧಿಸುತ್ತಾರೆ. ಆದರೆ ಕರ್ವಾಲೊರಿಗೆ ಮಂದಣ್ಣನ ಅಗತ್ಯವಿರುತ್ತದ[೪]. ಹೀಗಾಗಿ ಲಕ್ಷ್ಮಣ ಮತ್ತು ನಿರೂಪಕರು ಆತನನ್ನು ಜಾಮೀನು ನೀಡಿ ಬಿಡಿಸಿಕೊಳ್ಳಬೇಕಾದ ಪ್ರಸಂಗ ಬರುತ್ತದೆ. ಆಗಲೂ ಆಸ್ತಿ ಮುಖ್ಯನೆಲೆಯಾಗಿ ಬರುತ್ತದೆ. ಭೂ ಒಡೆತನವಿದ್ದವರು ಮಾತ್ರ ಆತನಿಗೆ ಜಾಮೀನು ಕೊಟ್ಟು ಬಿಡಿಸಬಹುದೆಂಬ ಆಶಯವ್ಯಕ್ತವಾಗುತ್ತದೆ. ಅಂದರೆ ಇಲ್ಲಿ ಭೂಮಿ ಎಂಬುದು ನಂಬುಗೆಯ ಪ್ರಶ್ನೆಯಾಗಿ ಕಂಡು ಬರುತ್ತದೆ. ಲಕ್ಷ್ಮಣ ಹೇಳುವ ಮಾತು "ಹಂಗಲ್ಲಾ ಸಾರ್. ಜಾಮೀನು ಕೊಡೋದಕ್ಕೆ ಇಲ್ಲಾ ಗೆಜೆಟೆಡ್ ಸರ್ಕಾರಿ ನೌಕರರಾಗಬೇಕಂತೆ ಅಥವಾ ರಸೀತಿ ಪಟ್ಟ ಇರೋ ಆಸ್ತಿವಂತರಾಗಬೇಕೆಂತೆ."[೫] ಎಂದು ಹೇಳುತ್ತಾನೆ. ನಿರೂಪಕ ಇಲ್ಲಿ ಆಸ್ತಿ ಒಡೆಯನಾಗಿದ್ದರಿಂದ ಆತನಿಗೆ ಜಾಮೀನು ನೀಡಿ ಮಂದಣ್ಣನನ್ನು ಬಿಡಿಸಿಕೊಂಡು ಬರಲಾಗುತ್ತದೆ.

ಇಲ್ಲಿ ತೋಟ ಗದ್ದೆಗಳಿಂದ ಬಿಡುಗಡೆಯಾಗಬೇಕೆಂಬ ಹಂಬಲ ವ್ಯಕ್ತವಾಗುತ್ತದೆ. ರೈತಾಪಿ ಬದುಕಿನ ಸಂಕಷ್ಟಗಳಿಂದ ಪಾರಾಗಬೇಕೆಂಬುದು ನಿರೂಪಕನ ಧ್ವನಿಯಲ್ಲಿ ವ್ಯಕ್ತವಾಗುತ್ತದೆ. "ನನ್ನ ತೋಟ ಕೊಳ್ಳಲಿಕ್ಕೆ ಯಾರೋ ಮದರಾಸಿನ ಕಡೆ ಚೆಟ್ಟಿಯಾರರು ಉತ್ಸಾಹ ವ್ಯಕ್ತಪಡಿಸಿದರು. ಅದಕ್ಕಾಗಿ ಮಾತುಕತೆಗೆ ದಯಮಾಡಿ ಬೆಂಗಳೂರಿಗೆ ಬರಬೇಕೆಂದು ತಿಳಿಸಿದ್ದರು. ಇಲ್ಲಿಂದ ಬಿಡುಗಡೆಯ ಘಳಿಗೆ ಸನ್ನಿಹಿತವಾಗುತ್ತಿರುವುದನ್ನು ನೋಡಿ ಆನಂದ ತುಂದಿಲನಾಗಿದ್ದೆ."[೬] ಇಷ್ಟಪಟ್ಟು ರೈತನಾಗುವ ಕನವರಿಕೆಯಿಂದ ಹಿಮ್ಮುಖವಾಗಿ ಚಲಿಸುವುದನ್ನು ಕಾಣುತ್ತೇವೆ.

ಇಲ್ಲಿ ಬರುವ ಹಾವಾಡಿಗ ಯಂಗ್ಟ, ನಿರ್ವಸತಿಕನಾಗಿ ಅಲೆಮಾರಿ ಜೀವನ ನಡೆಸುತ್ತಿರುತ್ತಾರೆ. ಮಲೆನಾಡಿನ ಗುಡ್ಡಗಾಡು ಜನಾಂಗದ ರೈತ ಬದುಕಿನ ದುರಂತಮಯ ಚಿತ್ರಣ ಇಲ್ಲಿ ಕಂಡುಬರುತ್ತದೆ. ಈ ಯಂಗ್ಟ ಎಲ್ಲಿಯೂ ನೆಲೆಯೂರದೇ ಅಲೆದಾಟದ ಜೀವನಕ್ಕೆ ಸರ್ಕಾರದ ಹಸ್ತಕ್ಷೇಪವು ಮುಖ್ಯಕಾರಣವಾಗುತ್ತದೆ. ಅರಣ್ಯ ಇಲಾಖೆಯ ಕಾಪ್ಲಿ ಮಾಡಿ ಈ ಗುಡ್ಡಗಾಡು ಜನಾಂಗವನ್ನು ನಿರ್ವಸತಿಕರನ್ನಾಗಿಸುವ ತಂತ್ರ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲೇ

ಕಂಡು ಬರುತ್ತದೆ. ಯಂಗ್ಟ ಹೇಳುವ ಮಾತು, "ಈ ಪಾರೆಸ್ಟುಗೀರೆಷ್ಟಿಗೆಲ್ಲಾ ಕೇರೇ ಮಡಗಾಕಿಲ್ಲ ಸೋಮಿ ನಾನು. ಅವನೇ ನಿಮ್ಮಂಥಾ ದೊಡ್ಡೋರಿಗೆ ಮಾರಾಕಂತ ಕಳ್ಳನಾಟಾ ಕುಯ್ಯಿಸ್ತಾ ಅವನೆ. ನಂಗೇನು ಮಾಡ್ತಾನೆ ಆದ್ರೂ ಈ ಗಾರ್ಡುಪಾರ್ಡು ಇವ್ರಿಗೆಲ್ಲಾ ಜೇನುತುಪ್ಪ, ಉಡನ ಮಾವ್ಸ ಚುಚೂರು ಕೊಟ್ಟು ಕುಸೀಲಿಡಬೇಕಲ್ಲ ಅದೂ ಅಲ್ದೆ ಹೆಂಡ್ರೂ ಮಕ್ಳೂ ಬಿಟ್ಟು ಕಾಡಾಗೆ ಕಾಲಾ ಮಾಡ್ತಿರ್ತಾರೆ. ಹೆಂಗ್ಸರ ಸೋಕಿ ಬ್ಯಾರೆ ಇರ್‍ತದೆ. ಒಬ್ಬೊಬ್ಬರನ್ನ ಒಂದೊಂದು ತರದಲ್ಲಿ ಸುದರಾಯಿಸಬೇಕಲ್ಲಾ ಸೋಮೀ. ಹಿಹ್ಹಿ ಹ್ಹಿ ಹ್ಹೀ ಇವೆಲ್ಲಾ ತಮ್ಮಂತೋರಿಗೆ ಗೊತ್ತಿಲ್ದಿರೋದಾ ಸೋಮೀ. ನಾ ಬಾಯಿ ಬಿಟ್ಟು ಹೇಳಬೇಕಾ. ಹ್ಹಿ ಹ್ಹಿ ಹ್ಹಿ ಹ್ಹೀ"[೬]

ತೇಜಸ್ವಿಯವರ ಸ್ವರೂಪ ಕಾದಂಬರಿಯಲ್ಲಿ ಭೂ ಪ್ರಶ್ನೆ ಕುರಿತ ಆಶಯಗಳು ಕಂಡು ಬರುತ್ತವೆ. ಇದರ ನಾಯಕ ಎಂ.ಡಿ.ಶ್ರೀನಿವಾಸ ತನ್ನ ಗೆಳೆಯನಾದ ಹೇಮಂತನಿಗೆ ತನ್ನ ಬದುಕಿನ ಕತೆಯನ್ನು ಹೇಳುತ್ತಾನೆ. ಶ್ರೀನಿವಾಸ ತನ್ನ ಚಿಕ್ಕಪ್ಪನ ಆಸ್ತಿಗೆ ವಾರಸುದಾರನಾಗಿ ಮಲೆನಾಡಿನ ಅಂಗಡಿ ಎಂಬ ಗ್ರಾಮಕ್ಕೆ ಬಂದು, ಸ್ವಂತ ಕೃಷಿ ಮಾಡಿಕೊಂಡಿರುತ್ತಾನೆ. ಆತನ ಗೆಳೆಯ ಹೇಮಂತ ತನ್ನ ಸ್ನೇಹಿತ ಶ್ರೀನಿವಾಸನನ್ನು ನೋಡಲು ಹಳ್ಳಿಗೆ ಬರುತ್ತಾನೆ. ತನ್ನ ಅನುಭವದ ವಿಭಿನ್ನ ನೆಲೆಗಳನ್ನು ಒಟ್ಟುಗೂಡಿಸಿ ಒಂದು ವಿಕಾರ ಸ್ವರೂಪವನ್ನು ಕಟ್ಟುತ್ತೇನೆ ಎಂದು ಶ್ರೀನಿವಾಸ ವ್ಯಕ್ತಪಡಿಸುತ್ತಾನೆ.

ತೇಜಸ್ವಿಯವರ **"ನಿಗೂಢ ಮನುಷ್ಯರು"** ಕಾದಂಬರಿಯಲ್ಲಿ ಜಗನ್ನಾಥ ಹಾಗೂ ಎಕ್ಸೈಜ್ ಖಾತೆಯಲ್ಲಿ ಕೆಲಸ ಮಾಡುತ್ತಿರುವ ಅವನ ಗೆಳೆಯ ರಂಗಪ್ಪ ಇಬ್ಬರೂ ಅವಿವಾಹಿತ ಯುವಕರಾಗಿದ್ದಾರೆ. ಇವರಿಬ್ಬರು ನುಗುಬೀಡಿನಿಂದ ನವಿಲುಗುಂದದತ್ತ ಕಾರಿನಲ್ಲಿ ಪ್ರಯಾಣ ಬೆಳೆಸುತ್ತಾರೆ. ಇಲ್ಲಿ ಅದರ ದಾರಿ ಮಧ್ಯೆಯಲ್ಲಿ ಕಾರು ಸಿಕ್ಕಿ ಹಾಕಿಕೊಳ್ಳುತ್ತದೆ. ಆನಂತರದಲ್ಲಿ ಕೆಲವು ವಿಚಾರಗಳು ಇವರಿಬ್ಬರಲ್ಲಿ ಚರ್ಚೆಗೆ ಬರುತ್ತವೆ. ಜಗನ್ನಾಥ ಕಾಲೇಜಿನಲ್ಲಿ ಉಪನ್ಯಾಸಕನಾಗಿ ಕೆಲಸ ಮಾಡುತ್ತ, ಸಾಹಿತ್ಯಿಕ ಬರವಣಿಗೆಯಲ್ಲಿ ತೊಡಗಿಕೊಂಡಿರುತ್ತಾನೆ. ಈ ಉಪನ್ಯಾಸಕನಿಗೆ ಮಲೆನಾಡಿನಲ್ಲಿ ಜಮೀನನ್ನು ಕೊಂಡು ವ್ಯವಸಾಯ ಮಾಡಬೇಕೆಂಬ ಹಂಬಲವನ್ನು ಕಾಣುತ್ತೇವೆ. ಇದಕ್ಕಾಗಿ ರಂಗಪ್ಪ ಅವನನ್ನು ಉಗ್ರಗಿರಿಯ ಸಮೀಪ ಕರೆದುಕೊಂಡು ಬರುತ್ತಾನೆ. ಕಾಡಿನ ಭಯಾನಕ ಜೀವನವನ್ನು ನೋಡಿ ಜಗನ್ನಾಥನಲ್ಲಿ ಭಯ ಮತ್ತು ಆತಂಕಗಳು ಹುಟ್ಟುತ್ತವೆ. ಗೋಪಾಲಯ್ಯ ಗದ್ದೆ ತೋಟದಲ್ಲಿ ಕೆಲಸ ಮಾಡುತ್ತಿರುವ ಕಾಂಪ್ರ ಲೋರಿ, ಕುಳುಪ, ಮರಸರ ಮುಂತಾದ ಆಳು ಮಕ್ಕಳ ವಿಚಿತ್ರ ಜೀವನ ಶೈಲಿ ಹಾಗೂ ಮೌನದಿಂದಿರುವ ಒಂದೇ ಹೆಣ್ಣು ಜೀವ ಜಗನ್ನಾಥನಲ್ಲಿ ವಿಸ್ಮಯ ಮೂಡಿಸುತ್ತವೆ.

ಪ್ರಕೃತಿ ವಿಸ್ಮಯಗಳು ಇಲ್ಲಿ ಬರುವ ಮಳೆ ಗುಡುಗು, ಮಿಂಚಿನ ಆರ್ಭಟ ಒತ್ತಡದಲ್ಲಿ ಈ ಗೆಳೆಯರಿಬ್ಬರು ತೆರೆದುಕೊಳ್ಳುತ್ತಾರೆ. ನಿಷ್ಕರುಣೆಯಾಗಿ ಒಂದೇ ಸಮನೆ ಪ್ರಕೃತಿ ವಿಸ್ಮಯಗಳ ಆರ್ಭಟಗಳನ್ನು ಕುರಿತು ಹೇಳುವಾಗ ಬರಹಗಾರ ಚಕಿತಗೊಳ್ಳುತ್ತಾನೆ. ಈ ಕಾಡಿನಲ್ಲಿ ಶಾರಿಯ ಬದುಕು ನಿಗೂಢತೆಯನ್ನು ತನ್ನೊಳಗೆ ಅಡಗಿಸಿಟ್ಟುಕೊಂಡಂತೆ ಕಂಡುಬರುತ್ತಾಳೆ. ಈ ಕಾದಂಬರಿಯಲ್ಲಿ ಎಲ್ಲ ಪಾತ್ರಗಳೂ ರಹಸ್ಯಮಯವಾಗಿ ಕಾಣುವುದರಿಂದಲೇ ನಿಗೂಢತೆ ಹೆಚ್ಚುಹೆಚ್ಚಾಗಿ ವಿಸ್ತರಿಸಿಕೊಳ್ಳುತ್ತ ಸಾಗುತ್ತದೆ.

ನಿಗೂಢ ಮನುಷ್ಯ ಕಾದಂಬರಿಯ ಉದ್ದೇಶ ಆಶಯ ಬೇರೆಯೇ ಆಗಿದ್ದರೂ ಮಲೆನಾಡಿನಲ್ಲಿ ಜಮೀನು ಕೊಂಡು ವ್ಯವಸಾಯದಲ್ಲಿ ತೊಡಗುವ ಕನಸು ಹೊತ್ತು ಬಂದ ಜಗನ್ನಾಥನಿಗೆ ಗೋಪಾಲಯ್ಯನ ಅನುಭವಗಳನ್ನು ಕೇಳಿ ತನ್ನ ಕಲ್ಪನೆಯೇ ಬದಲಾಗುತ್ತದೆ. ಈ ಸಂದರ್ಭದಲ್ಲಿ ಕತೆಗೆ ಪೂರಕವಾಗಿ ಬರುವ ಇತರ ವಿಷಯಗಳಂತೆಯೇ ಕೃಷಿಯನ್ನೇ ನಂಬಿದ ಬದುಕಿನ ಸಮಸ್ಯೆಗಳು ಕಾದಂಬರಿಯಲ್ಲಿ ಕಂಡುಬರುತ್ತವೆ.

**"ಜುಗಾರಿ ಕ್ರಾಸ್"** ನಲ್ಲಿ ಅರಣ್ಯವನ್ನು ಚಿನ್ನದ ಗಣಿ ಮಾಡಿಕೊಂಡು ಎಲ್ಲ ರೀತಿಯಿಂದಲೂ ಕೊಳ್ಳೆ ಹೊಡೆಯುವ ಈ ಜನರ ವರ್ತನೆ ಕಾಣದ ಕೈಗಳ ವರ್ತನೆಯಲ್ಲಿ ಕಾಣುತ್ತೇವೆ. ಇದರ ಹಿಂದಿರುವ ರಾಜಕೀಯ ಹುನ್ನಾರಗಳು, ಪಾರೆಸ್ಟರ್ ಇಕ್ಬಾಲ್‌ಸಾಬ್, ಗಾರ್ಡ್‌ಗುರುಪ್ಪರ ಭ್ರಷ್ಟತೆಯನ್ನು ಕಾದಂಬರಿ ವ್ಯಕ್ತಗೊಳಿಸುತ್ತದೆ. ಈ ಕಾದಂಬರಿಯ ಹೆಸರೇ ಸೂಚಿಸುವಂತೆ ಸಹ್ಯಾದ್ರಿ ತಪ್ಪಲಿನ ನಡುವೆ ಇರುವ ಕೂಡು ರಸ್ತೆಗೆ ಜುಗಾರಿ ಕ್ರಾಸ್ ಎಂದು ಹೆಸರಿಸಲಾಗಿದೆ. ಸುರೇಶನ ಹುಚ್ಚಾಟಗಳಿಗೆ ಜುಗಾರಿ ಕ್ರಾಸ್ ಸಮೀಪದಲ್ಲಿ ಗೌರಿಯ ಮನೆಗೆ ಬಂದು ನೆಲೆಸುತ್ತಾನೆ. ಆನಂತರದಲ್ಲಿ ಸುರೇಶನ ವಿಸ್ಮಯ ಲೋಕಕ್ಕೆ ತೆರೆದುಕೊಳ್ಳುತ್ತಾನೆ. ಅರಣ್ಯದೊಳಗೆ ಪ್ರವೇಶಿ ಅಂಬುಸ್ಕಾಂತ ಪರ್ವತ ಮೇಲೆ ಹಾರುತ್ತಿರುವ ವಿಮಾನಗಳನ್ನು ಸೆಳೆದು ಬೀಳಿಸುವ ವಿಸ್ಮಯಕ್ಕೆ ಬೆರಗಾಗಿ ಹುಡಕಾಟ ನಡೆಸುತ್ತಾನೆ. ಆನಂತರದಲ್ಲಿ ಕಾಡಿನಲ್ಲಿ ಕೆಂಪುಹರಳಿನ ವಿಸ್ಮಯಕ್ಕೆ ಬೆರಗಾಗುತ್ತಾನೆ.

ದೇವಪುರದ ಮಾರುಕಟ್ಟೆಯಲ್ಲಿ ಕೈಲಾಸ್ ಮ್ಯಾನೇಜರ್ ಕುನ್ನಿ,ಮನ್ಮಥಬೀಡಾಸ್ಟಾಲ್‌ನ ಶೇಷಪ್ಪ,ಜೀವನ್‌ಲಾಲ್‌ರ ತಂತ್ರಗಳು ಗೌರಿಸುರೇಶರಿಗೆ ಅರ್ಥವಾಗುವುದಿಲ್ಲ.ಇಲ್ಲಿ ಬರುವ ಸುರೇಶ ಮತ್ತು ಗೌರಿಯರು ಏಲಕ್ಕಿ ಮಾರಲು ಹೋಗಿ ಹಲವು ಇಕ್ಕಟ್ಟುಗಳಿಗೆ ಸಿಕ್ಕಿಕೊಳ್ಳುತ್ತಾನೆ. ತಮ್ಮ ಏಲಕ್ಕಿ ಮೂಟೆಯೊಳಗೆ ದೋಣಿ ಹೊಳೆಯ ಕೆಂಪು ಹರಳುಗಳಿರುವುದು ಇವರಿಗೆ ಗೊತ್ತೇ ಇರುವುದಿಲ್ಲ. ದೇವಪುರ ಏಲಕ್ಕಿ ಮಾರುಕಟ್ಟೆಯಲ್ಲಿ ಮಾರುವಾಗ ಏಲಕ್ಕಿಯ ಬೆಲೆ ೬೦ ಸಾವಿರ ಇದ್ದರೂ ಅದಕ್ಕೆ ೧ ಲಕ್ಷದ ೬೦ ಸಾವಿರ ರೂಪಾಯಿ ದೊರೆಯುವುದು ಅವರಿಗೆ ಆಶ್ಚರ್ಯಕ್ಕೆ ಅನುಮಾನಕ್ಕೆ ಈಡುಮಾಡುತ್ತದೆ. ಆನಂತರದಲ್ಲಿ ಗೌರಿ,ಸುರೇಶ ರೈಲಿನಲ್ಲಿ ಪ್ರಯಾಣಿಸುವಾಗ ಅವರನ್ನು ಯಾರೂ ಹಿಂಬಾಲಿಸಿದಂತೆ ಭಾಸವಾಗುತ್ತದೆ. ತನ್ನ ಗೆಳೆಯರಾಜಪ್ಪ ಕೂಡಾ ರೈಲಿನಲ್ಲಿ ಪ್ರಯಾಣಿಸುವುದು ಗೊಂದಲಕ್ಕೀಡುಮಾಡುತ್ತದೆ. ಆನಂತರದಲ್ಲಿ ಅವರ ಬಳಿ ಇದ್ದ ಹಣವನ್ನೆಲ್ಲ ತನ್ನ ಗೆಳೆಯನಿಗೆ ಹಳೆ ಗನ್ನಡ ಪದ್ಯದ ಕಡತವನ್ನು ಪಡೆಯುತ್ತಾರೆ. ರೈಲಿನ ಸುರಂಗ ಮಾರ್ಗಮಧ್ಯದಲ್ಲಿ ಇಬ್ಬರು ಧುಮುಕಿ ಬರುವಾಗ ಹಿಂಬಾಲಿಸಿ ಬರುವ ಕುಂಟರಾಮ ಇವರ ಕಥೆಯನ್ನೆಲ್ಲಾ ಕೇಳುತ್ತಾನೆ. ಓ.ಕೆ. ಬಾಸ್‌ನಿಂದ ರಕ್ಷಣೆ ಪಡೆಯಲು ತಾನು ಸುರಂಗದಲ್ಲಿರುವುದಾಗಿ ಕುಂಟರಾಮ ಈಗಾಗಲೇ ಅವರೆನ್ನೆಲ್ಲಾ ಮುಗಿಸುತ್ತಾ ಬಂದಿದ್ದೇನೆಂದು ಹೇಳುತ್ತಾನೆ. ಸುರಂಗವನ್ನು ದಾಟಿದ ಕೂಡಲೇ ಅಪರಿಚಿತ ಮುಖಗಳು ಎದುರಾಗಿ ಸುರೇಶ್‌ಗೌರಿಯರ ಬಳಿ ಹಣ ದೋಚಲು ಯತ್ನಿಸುತ್ತದೆ. ಆದರೆ ಅವರ ಬಳಿ ಏನೂ ಇಲ್ಲದೆ ನಿರಾಶರಾಗಿ ಮರಳುತ್ತಾರೆ. ಆನಂತರದಲ್ಲಿ ಸುರೇಶನ ರಾಜಪ್ಪ ಬಂದು ಅವರನ್ನು ಕರೆದೊಯ್ಯುತ್ತಾನೆ.

ಈ ಕಾದಂಬರಿಯಲ್ಲಿ ಜಾಗತೀಕರಣ ಪರಿಣಾಮಗಳನ್ನು ಚಿತ್ರಿಸುತ್ತಾರೆ. ಈ ಜಾಗತೀಕರಣದ ಪರಿಣಾಮಗಳು ಕಣ್ಣಿಗೆ ಕಾಣುಸುತ್ತಿಲ್ಲ. ಇಂದು ಆಗೋಚರ ಶತ್ರುವಿನಂತೆ ಕಾಡುತ್ತಿದೆ. ಇದರ ರೈತರು ನಡುವೆ ಸಿಕ್ಕಿ ನಲುಗುತ್ತಾರೆ.ಜುಗಾರಿಕ್ರಾಸ್‌ನಲ್ಲಿ ನಡೆಯುತ್ತಿರುವ ವ್ಯವಹಾರ ಏನೊಂದು ಗೊತ್ತಾಗುವುದಿಲ್ಲ.ರೈತರ ಮಾರುಕಟ್ಟೆ ಮುಂತಾದವುಗಳು ಈಕಾಣದ ಕೈ ನಿಯಂತ್ರಿಸುತ್ತಿದೆ. ಈ ಕಾರಣಗಳಿಂದಾಗಿ ಯಾರ ವಿರುದ್ಧ ಹೋರಾಡುವುದು ಎನ್ನುವುದೇ ದೊಡ್ಡ ಸಮಸ್ಯೆಯಾಗಿ ಕಂಡುಬರುತ್ತದೆ. ಇಂಥ ಕಾಣದ ಕೈಗಳು ರೈತ ಬದುಕಿನ ಮೇಲೆ ಬೀರುವ ಪ್ರಭಾವವನ್ನು ಅತ್ಯಂತ ವಿಸ್ತಾರ ನೆಲೆಯಲ್ಲಿ ತೇಜಸ್ವಿ ಪರಿಶೀಲಿಸಿದ್ದಾರೆ.

**"ಕಿರಗೂರಿನ ಗಯ್ಯಾಳಿಗಳು"** ಇದರಲ್ಲಿ ಸರ್ಕಾರದ ಯೋಜನೆಯನ್ನು ಕಿರುಗೂರಿನಲ್ಲಿ ನಡೆಸಲು ಯತ್ನಿಸುತ್ತದೆ. ಇಲ್ಲಿ ಬರುವ ಶಂಕ್ರಪ್ಪ ಊರಿನಲ್ಲಿ ಸರಾಯಿ ಅಂಗಡಿ ಮತ್ತು ಊರಿನ ಗ್ರಾಮಪಂಚಾಯ್ತಿಯ ಗ್ರಾಮ ಸೇವಕನಾಗಿ ಕೆಲಸ ಮಾಡುತ್ತಿರುತ್ತಾನೆ. ಊರಿನ ರೈತರ ಮುಗ್ಧಮನೋಧರ್ಮವನ್ನೇ ಬಂಡವಾಳವಾಗಿ ಮಾಡಿಕೊಂಡು ಶಂಕ್ರಪ್ಪ ರೈತರಿಗೆ ಬರುತ್ತಿದ್ದ ಯೋಜನೆಯ ಹಣವನ್ನೆಲ್ಲಾ ಇಲ್ಲಿನ ರೈತರಿಂದ ಸಹಿಹಾಕಿಕೊಂಡು ದೋಚುತ್ತಿರುತ್ತಾನೆ. ಆದರೆ ಈ ಬಾರೀ ಸರ್ಕಾರವೇ ಯೋಜನೆಯೊಂದನ್ನು ರೂಪಿಸಿ ಕಿರಿಗೂರಿನಲ್ಲಿ ಒಂದು ಕಾರ್ಯಕ್ರಮ ಏರ್ಪಡಿಸಲು ಯತ್ನಿಸುತ್ತದೆ.

ಇದು ಶಂಕ್ರಪ್ಪನಿಗೆ ನುಂಗಲಾರದ ತುತ್ತಾಗುತ್ತದೆ.ಆಧುನಿಕ ಬೇಸಾಯ ಪದ್ಧತಿಯಿಂದ ಹೆಚ್ಚು ಆಹಾರ ಬೆಳೆಯಿರಿ ಎಂಬ ಯೋಜನೆಯನ್ನು ಸ್ವತಃ ತಹಶೀಲ್ದಾರರು ಊರಿಗೆ ಭೇಟಿ ನೀಡುವ ವಿಷಯ ತಿಳಿಸಿರುತ್ತಾರೆ. ಈ "ವ್ಯವಸಾಯ ಇಲಾಖೆಯವರು ಶಂಕ್ರಪ್ಪನಿಗೆ ಆಧುನಿಕ ಬೇಸಾಯಕ್ಕೆ ಕಿರಿಗೂರಿನಲ್ಲಿ ಒಬ್ಬರನ್ನಾದರೂ ಒಪ್ಪಿಸಿ ಒಂದು ಎಕರೆಯನ್ನಾದರೂ ಮಾಡಿಸಲೇಬೇಕೆಂದು ಟಾರ್ಗೆಟ್ ಕೊಟ್ಟಿದ್ದರು. ಇಲ್ಲಿಯವರೆಗೂ ಅವರು ಹೇಳಿದ್ದಕ್ಕೆಲ್ಲಾ ಆಗಲಿ ಎಂದು ಯಾರ್‍ಯಾರೋ ರೈತರಿಂದ ಸುಳ್ಳು ತಗೊಂಡು ಸರ್ಕಾರಕ್ಕೆ ಕೊಡುತ್ತಿದ್ದ. ಸಬ್ಸಿಡಿ ಔಷಧಿ ಗೊಬ್ಬರಗಳನ್ನೆಲ್ಲ ಮಾರಿಕೊಂಡು ಶಂಕರ ಹಣಪಡೆಯುತ್ತಿದ್ದ. ಆದರೆ ಈ ಸಾರಿ ಹಾಗೆ ಮಾಡುವ ಹಾಗಿರಲಿಲ್ಲ. ಏಕೆಂದರೆ ಕಿರುಗೂರಿನಲ್ಲಿ ಫೀಲ್ಡ್‌ಡೇ ಇಟ್ಟುಕೊಳ್ಳುವುದೆಂದು ಮೇಲಧಿಕಾರಿಗಳು ತಿಳಿಸಿಬಿಟ್ಟಿದ್ದರು."[೬]

ಈ ಯೋಜನೆಯಂತೆ ಊರಿನಲ್ಲಿ ಯಾರೂ ಒಪ್ಪುವುದಿಲ್ಲ.ಕೊನೆಗೆ ಕರಿಯನ ಜಮೀನಿಗೆ ಬೆಳೆಯನ್ನು ಬೆಳೆಯಲು ಶಂಕ್ರಪ್ಪ ಒಪ್ಪಿಸುತ್ತಾನೆ. ಆದರೆ ಬತ್ತದ ಬೆಳೆ ಸರಿಯಾಗಿ ಬರದೇ ಕೈಕೊಡುತ್ತದೆ. ಇದನ್ನು ಗಮನಿಸಿದ ಶಂಕ್ರಪ್ಪ ಕರಿಯನ ಜಮೀನಿನಲ್ಲಿದ್ದ ಬೋರ್ಡ್‌ನ್ನು ಪಕ್ಕದ ಜಮೀನಿನ ಮಾರನ ಜಮೀನಿಗೆ ಹಾಕುತ್ತಾನೆ. ಅಲ್ಲಿಂದ ಕಿರುಗೂರಿನ ಸಂಘರ್ಷಕ್ಕೆ ಕಾರಣವಾಗುತ್ತದೆ. ಬೋರ್ಡ್‌ನ್ನು ಕಿತ್ತು ಹಾಕುತ್ತಾನೆ. ಇದರಿಂದ ಊರ ಜನರ ಪ್ರತಿಭಟನೆ ಒಳಗಾಗುತ್ತಾನೆ. ಆನಂತರ ಫೀಲ್ಡ್ ಡೇ ಕಾರ್ಯಕ್ರಮಕ್ಕೆ ಬಂದ ಅಧಿಕಾರಿಗಳಿಗೆ ಶಂಕ್ರಪ್ಪ ಎದುರು ಸಿಕ್ಕು ಮೈಕೈ ಬ್ಯಾಂಡೇಜ್ ತನ್ನ ಸ್ಥಿತಿಯ ಕಾರಣದಿಂದಾಗಿ ಕಾರ್ಯಕ್ರಮ ರದ್ದು ಮಾಡುವುದರಿಂದ ಶಂಕ್ರಪ್ಪ ಬಚಾವಾಗುತ್ತಾನೆ.

ಆನಂತರದಲ್ಲಿ ಕರಿಯನಿಂದ ದೂರನ್ನು ಕೊಡಿಸಿ ಊರಿನ ಕೆಲ ರೈತಮುಖಂಡರನ್ನು ಒಂದು ದಿನದ ಮಟ್ಟಿಗೆ ಜೈಲಿನಲ್ಲಿ ಕೊಳೆಯುವಂತೆ ಮಾಡುತ್ತಾನೆ.

"**ಸ್ವರೂಪ**"ವು ನವ್ಯದ ನೆಲೆಯಿಂದ ಹೊರಡುವ ಕಾದಂಬರಿಯಾಗಿದೆ. ಇಲ್ಲಿ ನಿರೂಪಕ ಮತ್ತು ಆತನ ಗೆಳೆಯ ಹೇಮಂತನೊಂದಿಗೆ ತನ್ನ ಬದುಕಿನ ಸ್ವಗತ ಲಹರಿಯನ್ನು ಹೇಳಿಕೊಳ್ಳುವ ತಂತ್ರವನ್ನು ಇಲ್ಲಿ ಬಳಸಲಾಗದೆ. ಈ ಸಂದರ್ಭದಲ್ಲಿ ಭೂಸಂಬಂಧಿಯಾಗಿ ನಿರೂಪಕ ಪ್ರತಿಕ್ರಿಯಿಸುವುದನ್ನು ಗಮನಿಸಬಹುದು. "ಅಕ್ಕಪಕ್ಕದವರ ಭೂಮಿಯನ್ನೆಲ್ಲಾ ನುಂಗಿಕೊಂಡು ಅಥವಾ ಸಾಲಕೊಟ್ಟು ಜಮೀನು ಬರೆಸಿಕೊಂಡು ಹಣವಂತನಾಗುವುದು ನನ್ನಿಂದಾಗದ ಕೆಲಸ ನೋಡು. ಹಾಗಂತಲೇ ನನ್ನದಾದ ಹದಿನಾರು ಎಕರೆಗಳ ಹಳೆಯ ಬಾಂದುಗಳನ್ನು ಸರ್ವೆ ಆಫೀಸಿನ ನಕ್ಷೆಯ ಆಧಾರದ ಮೇಲೆ ಹುಡುಕಿ ತೆಗೆಸಿದೆ."[೮]

ಮುಂದುವರೆದು ನಿರೂಪಕ ಹೇಳುವಂತೆ "ನಾನು ಹಳ್ಳಿಗರ ಕೈಲಿ ದುಡಿಸಿ ಶೋಷಿಸಿ ದೊಡ್ಡವನಾದನೆನ್ನುವುದು ಕಾಣುವ ವಿಷಯ. ಆದರೆ ದಿನಾ ಕೆಲಸ ಮಾಡಿದ್ದರ ಮೇಲೆ ನಾಲ್ಕಾಣೆ ಹೆಚ್ಚಿಗೆ ಕ್ತಿತು, ಸಾಲಾ ಮಾಡಿ ಸಂತೆಗೆ ಹೋಗಿ ಕಚ್ಚಿ ತುರಿಸುತ್ತಾ ಕಾಲ ಕಳೆದು ಗದ್ದೆಯನ್ನೆಲ್ಲಾ ಹಾಳು ಮಾಡಿ ನಮ್ಮ ಚಿಕ್ಕಪ್ಪನನ್ನು ಶೋಷಿತರೇ ಶೋಷಿಸಿದ್ದು. ಬೇರೆ ತರದ ಶೋಷಣೆ. ಸೋಷಲಿಸಂಮ್ಮಿಗೆ ಸಿಕ್ಕುವುದು ದುಡಿಸಿ ಉತ್ಪಾದನೆ ಮಾಡಿದವನ ಶೋಷಣೆ. ಇನ್ನೊಂದು ಅನ್ಯತರದ್ದು. ಅದರ ಹಿಡಿತಕ್ಕೆ ಸಿಗುವುದಿಲ್ಲ. ಶೋಷಣೆಗೆ ಒಂದಲ್ಲ ಒಂದು ರೀತಿಯಲ್ಲಿ ಅನಿವಾರ್ಯ.ಇಲ್ಲಿ ಉತ್ಪಾದಿಸಲು ಶೋಷಿಸಬೇಕು. ಇಲ್ಲ ಹಾಳು ಮಾಡಲು ಶೋಷಿಸಬೇಕು."[೯] ಇಲ್ಲಿ ರೈತರ ಶೋಷಣೆ ಅನಿವಾರ್ಯ ಎಂಬ ವಾಸ್ತವವನ್ನು ನಿರೂಪಕ ಹೇಳುತ್ತಾನೆ. ಭೂಮಾಲೀಕ ರೈತ ಒಂದಲ್ಲ ಒಂದು ರೀತಿಯಲ್ಲಿ ಶೋಷಣೆ ಮಾಡುತ್ತಲೇ ಇರುತ್ತಾನೆ. ಕೂಲಿಕಾರ್ಮಿಕರ ಭೂಮಾಲೀಕನಿಗೂ ಶೋಷಣೆ ಮಾಡುವುದರಲ್ಲಿ ಹಿಂಜರಿಯುವುದಿಲ್ಲ ಎಂಬುದನ್ನು ತನ್ನ ಚಿಕ್ಕಪ್ಪನಿಗಾದ ಅನುಭವನ್ನು ತೆರೆದಿಡುತ್ತಾರೆ.

ಇಂತಹ ಆಶಯಗಳನ್ನು ತೇಜಸ್ವಿಯವರ "**ಮಾಯಾಲೋಕ**" ಕಾದಂಬರಿಯಲ್ಲಿಯೂ ಕಾಣುತ್ತೇವೆ. ಈ ಕಾದಂಬರಿಯಲ್ಲಿ ರೈತಾಪಿ ಬದುಕಿನ ತಲ್ಲಣಗಳು, ಹತಾಶೆಗಳು, ಪ್ರಾಕೃತಿಕ ವಿಕೋಪಗಳು, ತಮ್ಮ ಬೆಳೆಗೆ ನ್ಯಾಯಯುತವಾದ ಬೆಲೆ ದೊರೆಯದೇ ಇರುವುದು, ವಿದ್ಯುತ್ ಕೊರತೆ, ಮೊದಲಾದ ಸಮಸ್ಯೆಗಳು ರೈತ ಪ್ರಪಂಚದಲ್ಲಿ ಎದುರಾಗುತ್ತವೆ. ಇಲ್ಲಿ ಹಲವಾರು ಪಾತ್ರಗಳ ಜೊತೆಗೆ ಪ್ರಕೃತಿ ಜೀವಿಗಳಾದ ಹುಂಡುಕೋಳಿ, ನಾಯಿ, ಮಂಗ, ಚಿಟ್ಟುಕೋಳಿ, ಮೀನು, ಏಡಿ, ಹಾವು, ಅಳಿಲು, ಅಲ್ಲದೆ ಸಸ್ಯ ಜಗತ್ತಿನ ಪರಿಚಯವೂ ಆಗುತ್ತದೆ. ಇದು ಕಾದಂಬರಿಕಾರನ ಜೀವಪರ ನಿಲುವು,ಪ್ರಕೃತಿ ವಿಸ್ಮಯಗಳ ಬಯಲುಗೊಳಿಸುವುದನ್ನು ಕಾಣುತ್ತೇವೆ.

ಜಾಗತಿಕ ಸಂದರ್ಭದ ರೈತರ ಮುಖ್ಯ ಸಮಸ್ಯೆಗಳಾದ ಮಾರುಕಟ್ಟೆಯಲ್ಲಿ ಶೋಷಣೆ,ವಿದ್ಯುತ್ ಸಮಸ್ಯೆ,ಗೊಬ್ಬರದ ಸಬ್ಸಿಡಿ ನೀರಿನ ಸಮಸ್ಯೆಗಳು ಈ ಎಲ್ಲಾ ಕಾರಣಗಳಿಂದ ರೈತ ಚಳುವಳಿ ಹುಟ್ಟಿಕೊಳ್ಳುತ್ತದೆ. ಇಂಥ ಬಹುದೊಡ್ಡ ಜ್ವಲಂತ ಸಮಸ್ಯೆಗಳನ್ನು ಕುರಿತು ಈ ಕಾದಂಬರಿಯಲ್ಲಿ ಚರ್ಚಿಸುತ್ತಾರೆ.

ರೈತ ಪ್ರಪಂಚದ ತಲ್ಲಣ ವಿಸ್ಮಯಗಳನ್ನು ಅನಾವರಣಗೊಳಿಸುವ ಯತ್ನ ಈ ಕಾದಂಬರಿಯಲ್ಲಿ ಕಂಡುಬರುತ್ತದೆ. ಗ್ರಾಮ ಜೀವನದ ರಾಜಕೀಯ ಹುನ್ನಾರಗಳು, ಪ್ರಚಲಿತ ಸಮಸ್ಯೆಗಳಿಗೆ ಹಿಡಿದ ಕನ್ನಡಿಯಾಗಿದೆ. ನಿರೂಪಕನ ಕಾದಂಬರಿಯ ಚಲನೆ ಚಲನಶೀಲವಾಸ್ತವದತ್ತ ಸಾಗುತ್ತದೆ. ಆರಂಭದಲ್ಲಿ ರೈತ ಅಣ್ಣಪ್ಪಣ್ಣನ ಸೋಮಾರಿತನ, ಇಲ್ಲಿ ಬರುವ ಹಕ್ಕಿಪಿಕ್ಕೆ ಜನಾಂಗದ ಚಿತ್ರಣವಿದೆ. ಇಲ್ಲಿ ಜಲೀಲ್‌ಸಾಬು,ಭಂಡಾರಿ ಬಾಬು, ನೀರಿನ ವ್ಯಾಜ್ಯ, ಹುಂಡುಕೋಳಿಗಳ ಕಾಟ, ತರಕಾರಿ ಬೆಳೆ, ಮೀನುಗಳ ಬೇಟೆ, ಟೆಲಿಫೋನ್ ತಂತಿ ಅಗೆತ ಮೊದಲಾದ ಸನ್ನಿವೇಶಗಳು ಇಲ್ಲಿ ಬಂದು ಹಾದು ಹೋಗುತ್ತವೆ. ರೈತ ಪ್ರಶ್ನೆ, ಜಾಗತಿಕ ಸಂದರ್ಭದ ಸಮಸ್ಯೆಗಳು ಮೊದಲಾದ ಆಶಯಗಳನ್ನು ಈ ಕಾದಂಬರಿಯಲ್ಲಿ ವ್ಯಕ್ತವಾಗುತ್ತದೆ.

ಆಧುನಿಕ ಸಮಸ್ಯೆಗಳ ಕುರಿತು ಚರ್ಚಿಸುವ, ಪತ್ರಕರ್ತ ಪ್ರಕಾಶ್ ಮತ್ತು ಡೆಲ್ಪಿಯವರ ಚಿಂತನೆಗಳನ್ನು ಗಮನಿಸಬಹುದು. "ರೈತ ಸಂಘದವರು ದಲಿತ ಸಂಘದವರು ಬಂದ್ರೇನಯ್ಯಾ, ನಾವು ಮಾತ್ರ ರೈತರ ಕಷ್ಟಸುಖಾ ವಿಚಾರಿಸಬೇಕಾ ಬೇರೆಯವರಿಗೆ ಕಷ್ಟ ಬಂದಾಗಲೆಲ್ಲ ಅದು ಅವರ ಕರ್ಮ ಅಂತೀರಿ ನಿಮಗೆ ಕಷ್ಟ ಬಂದಾಗಲೆಲ್ಲಾ ಇಡೀ ಪ್ರಪಂಚ ನಿಮ್ಮ ಸಹಾಯಕ್ಕೆ ಬರಬೇಕು. ರೈತರೂ ದಲಿತರೂ ನಾನು ನೋಡಿದ್ದೀನಲ್ಲ ಇವರ ತೊಂದರೆಗಳಿಗೆ ಇಡೀ ಸರ್ಕಾರ, ಸಮಾಜ ಎಲ್ಲಾ ಗಮನ ಕೊಡಬೇಕು. ಸಾಲಾ ಮನ್ನಾ ಮಾಡಬೇಕು, ಬಡ್ಡಿ ಮನ್ನಾ ಮಾಡಬೇಕು,

ಉಚಿತ ಕರೆಂಟ್ ಕೊಡಬೇಕು, ಗೊಬ್ಬರಕ್ಕೆ ಸಬ್ಸಿಡಿ ಕೊಡಬೇಕು, ಫಸಲಿಗೆ ಒಳ್ಳೇ ರೇಟು ಕೊಡಬೇಕು, ಮೀಸಲಾತಿಯಲ್ಲಿ ಕೆಲಸ ಕೊಡಬೇಕು, ಉಚಿತ ವಿದ್ಯಾಭ್ಯಾಸ ನೀಡಬೇಕು. ಹಾಸ್ಟೆಲ್ ಸಹಿತ ಸರ್ಕಾರಿ ಕರ್ಚಲ್ಲಿ ನಡೆಸಬೇಕು. ಎಲ್ಲಾ ಸರಿ. ನಾನು ಯಾವುದಕ್ಕೂ ಬ್ಯಾಡ ಅನ್ನಲ್ಲ. ಆದರೆ ನೀವು ಯಾರ ಕಷ್ಟಗಳಿಗೆ ಆಗಿದ್ದೀರಿ ಬೆರಳು ಮಡಿಚಿ ಅಂದರೆ ಯಾವುದೂ ಇಲ್ಲ."[೧೧]

ಈ ಮಾತಿನಲ್ಲಿ ಆಧುನಿಕ ಸಮಸ್ಯೆಗಳು ಮುಖ್ಯ ಚರ್ಚೆಗೆ ಒಳಗಾಗುತ್ತವೆ. ರೈತ ಸಾಲ ಮನ್ನಾ,ಬಡ್ಡಿಮನ್ನಾದಂತಹ ವಿಚಾರಗಳು ಸರ್ಕಾರಗಳೇ ಮಾಡಬೇಕೆಂಬ ತೀರ್ಮಾನ ಜನರದ್ದಾಗಿರುತ್ತದೆ. ವಾಸ್ತವದಲ್ಲಿ ಎದುರಾಗಿರುವ ಸಮಸ್ಯೆಗಳು ಕಾದಂಬರಿಯಲ್ಲಿ ವ್ಯಕ್ತವಾಗಿವೆ. ಇಂತಹ ಸಮಸ್ಯೆ ಮೂಲದ ಹುಡುಕಾಟದಲ್ಲಿ ಕಾದಂಬರಿ ತೊಡಗಿದೆ.

ಇಲ್ಲಿನ ವಿದ್ಯುತ್ ಸಮಸ್ಯೆ ಮೊದಲಾದವು ಚರ್ಚೆಯಾಗುತ್ತವೆ. ರೈತನಾಯಕರಿಂದ ಕೆ.ಇ.ಬಿ. ಅಧಿಕಾರಿಗಳಿಗೆ ಕಪಾಳ ಮೋಕ್ಷವಾಗುತ್ತದೆ. ಅಲ್ಲದೆ ಸ್ಥಳೀಯ ಎಂಎಲ್‌ಎ ಎದುರು ಸೈರಣೆ ಕಳೆದುಕೊಂಡ ರೈತನಾಯಕರಿಂದ ನೇರ ಪ್ರತಿಭಟನೆ ಎಂದು ದೊಡ್ಡ ತಲೆಬರಹದೊಂದಿಗೆ ರೈತಸಂಘದ ಮಿತ್ರ ವರದಿಯನ್ನು ಯಥಾವತ್ತಾಗಿ ಮುಖಪುಟದಲ್ಲೇ ಪ್ರಕಾಶ ಅಚ್ಚು ಹಾಕಿದ್ದು ರೈತ ಕಾಳಜಿಯನ್ನು ವ್ಯಕ್ತಪಡಿಸುತ್ತದೆ.ಆಧುನಿಕ ಸಂದರ್ಭದ ರಾಜಕೀಯಗಳು ಅವು ನಡೆಸುವ ತಂತ್ರ ಕುತಂತ್ರಗಳು ಇಲ್ಲಿ ವ್ಯಕ್ತವಾಗುತ್ತವೆ. ವಿದ್ಯುತ್ ಸಮಸ್ಯೆ ಕುರಿತಾಗಿ ರೈತನಾಯಕರು ಪ್ರತಿಕ್ರಿಯಿಸಿದ ಬಗೆಯನ್ನು ಗಮನಿಸಬಹುದು.

ಪತ್ರಕರ್ತ ಮಿತ್ರ ಡೆಲ್ಫಿ ಮತ್ತು ಪ್ರಕಾಶನ ವಾದ ವಿವಾದಗಳಲ್ಲಿ ಹೊಸ ಹೊಸ ವಿಚಾರ ಹುಟ್ಟಿಕೊಳ್ಳುತ್ತದೆ. ಇದರಿಂದಾಗಿ ವಾಸ್ತವದ ಸಮಸ್ಯೆಗೆ ಪರಿಹಾರ ಕಂಡು ಹಿಡಿಯಲು ಹೊರಡುತ್ತಾರೆ. ಜೀವನದ ಘಟನಾವಳಿಗಳು ಆಗು ಹೋಗುಗಳು ಎಷ್ಟು ಜಟಿಲವಾಗಿರುತ್ತವೆ. "ಅಂದರೆ ನೀನು ಎಷ್ಟು ಪ್ರಾಮಾಣಿಕವಾಗಿ ಸಮಸ್ಯೆಗೆ ಪರಿಹಾರ ಸೂಚಿಸಿದರೂ ಅವರು ಬೇರೆ ಬೇರೆ ಸಮಸ್ಯೆಗಳಿಗೆ ಎಡೆ ಮಾಡಿಕೊಡುತ್ತಲೇ ಹೋಗುತ್ತವೆ. ಅದು ನಮ್ಮೆಲ್ಲರ ಕೈ ಮೀರಿದ ಚರಿತ್ರೆಗೆ, ಚಾರಿತ್ರಿಕ ಒತ್ತಡಗಳಿಗೆ ಸಂಬಂಧಪಟ್ಟಿದ್ದು. ಪರಿಸ್ಥಿತಿ ನಿಯಂತ್ರಿಸುವ ಲಗಾಮು ನಿನ್ನ ಕೈಗೆ ಸಿಕ್ಕಾಗ ಹುಷಾರಾಗಿ ನಮಗೆ ಪ್ರತಿಕೂಲವಾಗದ ಹಾಗೆ ನಡೆಸಬೇಕು. ನಮ್ಮ ಕೈಯ್ಯಲ್ಲಿರುವುದು ಅದನ್ನು ನಮ್ಮ ಅನುಕೂಲಕ್ಕೆ ಬಳಸುವ ಚಾಣಾಕ್ಷ ಬುದ್ದಿ ಅಷ್ಟೆ."[೧೨]

ಜಾಗತಿಕ ಒತ್ತಡಗಳಿಗೆ ಹಾಗೂ ಸಮಸ್ಯೆಗಳಿಗೆ ಕಾದಂಬರಿಯಲ್ಲಿ ಹೊಸ ಅರ್ಥ ಹುಡುಕ ಹೊರಡುವುದನ್ನು ಕಾಣುತ್ತೇವೆ.ಜಾಗತಿಕ ಒತ್ತಡಗಳಿಗೆ ಚಾರಿತ್ರಿಕ ಒತ್ತಡಗಳು ಸೇರಿಕೊಂಡಿವೆ. ಈ ಹಿನ್ನೆಲೆಯಲ್ಲಿ ರೈತ ಸಮಸ್ಯೆಗಳು ಅಷ್ಟು ಗಂಭೀರವಾಗಿ ಕಂಡುಬರುತ್ತದೆ.

ದಲ್ಲಾಳಿ ಜಲೀಲಸಾಬ ಹಾಗೂ ರೈತ ಅಣ್ಣಪ್ಪಣ್ಣಾ ನಡುವೆ ಮಾತುಕತೆ ಮತ್ತು ತಾನು ಬೆಳೆದ ಮೆಣಸಿನ ಕಾಯಿ ಬೆಳೆಗೆ ತಕ್ಕುನಾದ ಬೆಲೆ ದೊರೆಯದಿದ್ದುದಕ್ಕೆ ಆತನ ಆಲೋಚಿಸುವ ಕ್ರಮ ಕುರಿತು, "ಹೂಞನೋ, ರೇಟಿರಬೇಕಾದರೆ ಕೇಳಿದವರಿಗೆ ಕೊಟ್ಟು ಕೈತೊಳಕೊಳ್ಳೋದು ಬಿಟ್ಟು ಎಲ್ಲ ಗುಟ್ಟಾಗಿಟ್ಕೊಂಡು, ಜುಟ್ಟು ನಿನ್ನ ಕೈಲಿ ಕೊಟ್ಕೊಂಡು ಕೂತಿರ್ತೀನಿ. ನಾಳೆ ರೇಟು ಬಿದ್ದೋಯ್ತು ಅಂತ ನೀನು ಕೈ ಎತ್ತಿದರೆ ನನ್ನ ಹೆಂಡರು ಮಕ್ಳ ಬಾಯಿಗೆ ಮಣ್ಣೇ.."[೧೩] ಇಲ್ಲಿ ಬಂಡವಾಳಶಾಹಿ ರೈತನನ್ನು ವಂಚಿಸುವ ಹುನ್ನಾರವನ್ನು ಕಾದಂಬರಿಕಾರ ಗುರುತಿಸುತ್ತಾನೆ. ಮುಂದುವರೆದು ರೈತನಿಗೆ ತನ್ನ ಬೆಳೆಯ ಬಗ್ಗೆ ನಿಖರವಾದ ಮಾರುಕಟ್ಟೆಯ ಜ್ಞಾನವಿರುವುದು ಕಾದಂಬರಿಯಲ್ಲಿ ಕಂಡುಬರುತ್ತದೆ. ಬಂಡವಾಳಶಾಹಿ ಜೊತೆಯಲ್ಲಿ ದಲ್ಲಾಳಿ ವರ್ಗವು ರೈತರನ್ನು ವಂಚಿಸಲು ಕೈಜೋಡಿಸಿರುವುದನ್ನು ಕಾಣಬಹುದಾಗಿದೆ.

ಕಾದಂಬರಿಯಲ್ಲಿ ಮಲೆನಾಡಿನ ಈ ಭಾಗದ ಊರಳ್ಳಿಯಲ್ಲಿ ನೀರಿಗಾಗಿ ಪರದಾಟವಾಗಿದೆ. ಇದರ ಪರವಾಗಿ ಪಕ್ಕದ ಹಳ್ಳಿಯವರೊಡನೆ, ಹೋರಾಟ ಮಾಡುತ್ತಾರೆ. ಈ ಕಾದಾಟವನ್ನು ಬಗೆಹರಿಸಲು, ತಹಶೀಲ್ದಾರರು ಭಾಗಿಯಾಗಿ ಅವರ ಆಶ್ವಾಸನೆಯಿಂದ ಏನೇನೂ ಸಮಾಧಾನ ಆಗಲಿಲ್ಲ. ಕಂಪ್ಲೆಂಟು ಕೊಟ್ಟರೆ ತಹಶೀಲ್ದಾರರೆ ಖುದ್ದು ಬಂದು ನಮ್ಮ ಸಮಸ್ಯೆಗಳನ್ನೆಲ್ಲಾ ಪರಿಹರಿಸಿಬಿಡುತ್ತಾರೆ ಎಂಬುದು ಹುಸಿಯಾಗುತ್ತದೆ. ಊರಳ್ಳಿಯವರ ಗೊಡವೆಯೇ ನಮಗೆ ಬೇಡ ಎಂದು ಗೊಂದಲಗೇರಿಗೆ ಬಸ್ ಹತ್ತಿರದವರು ಇನ್ನಷ್ಟು ಸಮಸ್ಯೆಗಳೊಂದಿಗೆ ಊರಿಗೆ ಮರಳಬೇಕಾಗುತ್ತದೆ. ಈ ಅಧಿಕಾರಿಗಳಿಂದಲೂ ಯಾವುದೇ ರೀತಿ ಪರಿಹಾರ ದೊರೆಯುವುದಿಲ್ಲ. ರೈತ ಮೂಲ ಜೀವ ಸೆಲೆಯಾದ ನೀರಿಗಾಗಿ ಒಂದು ಊರು ಮತ್ತೊಂದು ಊರಿನ ನಡುವೆ ನಡೆಯುವ ಕಾದಾಟದಲ್ಲಿ ರೈತರು

ಬಸವಳಿಯುತ್ತಾರೆ.

ಅಲ್ಲದೆ ಬುಡಕಟ್ಟುಸಮುದಾಯಗಳನ್ನು ಒಕ್ಕಲೆಬ್ಬಿಸುವುದರ ಮೂಲಕ ಈ ಸಮುದಾಯವನ್ನು ಸರ್ಕಾರವೇ ನಿರ್ವಸತೀಕರಣಗೊಳಿಸುತ್ತದೆ. ಇಂತಹ ಹಕ್ಕುಗಳನ್ನು ಪಡೆಯಲು ತಾಲ್ಲೂಕಿನಲ್ಲಿ ಬಂದ್ ಆಚರಿಸುವುದು, ಸರ್ಕಾರದ ಗಮನ ಸೆಳೆಯುವುದು, ಮುಂತಾದ ಆಧುನಿಕ ಸಮಸ್ಯೆಗಳತ್ತ ರೈತ ಸಮುದಾಯವನ್ನು ಲೇಖಕರು ಗಮನ ಸೆಳೆಯುತ್ತಾರೆ. ಜಾಗತಿಕ ಸಂದರ್ಭದ ಬಹುಮುಖ್ಯ ಸಮಸ್ಯೆಯಾಗಿ ರೈತರನ್ನು ಹಲವು ದೃಷ್ಟಿಕೋನದಲ್ಲಿ ನೋಡಿ ಅರಿವು ಮೂಡಿಸುತ್ತಾರೆ.ರೈತರ ಬದುಕನ್ನು ಕಮರಿಸುವಂತಹ ನೆಲೆಯಾದ ಬೆಲೆ, ಸಬ್ಸಿಡಿ, ನೀರು ವಿದ್ಯುತ್ ಸಮಸ್ಯೆಗಳತ್ತ ಬೆಳಕು ಚೆಲ್ಲುತ್ತಾರೆ.

"**ಚಿದಂಬರ ರಹಸ್ಯ**"ದಲ್ಲೂ ಕೆಸರೂರಿನ ನಾಲ್ವರು ಯುವಕರು ಕ್ರಾಂತಿಯಾಗಬೇಕೆಂಬ ಆಶಯ ಹೊತ್ತು ಈ ಊರಿನಲ್ಲಿ ನಡೆಯುವ ಸಂಘರ್ಷಗಳನ್ನು ಕಾದಂಬರಿಕಾರ ತೆರೆದಿಡುತ್ತಾರೆ. ಈ ನಾಲ್ವರು ಶಿಷ್ಯರಿಗೆ ಅರ್ಥಶಾಸ್ತ್ರ ಉಪನ್ಯಾಸ ರಾಮಚಂದ್ರರ ಮಾರ್ಗದರ್ಶನವಿದೆ.ಏಲಕ್ಕಿ ಬೆಳೆಯ ಸಂಶೋಧಕ ಡಾಕ್ಟರ್ ಜೋಗಿಹಾಳ್‌ನ ಕೊಲೆಯ ನಂತರ ಈ ಕ್ರಾಂತಿಕಾರಿಗಳಾದ ಇಂಗ್ಲಿಷ್‌ಗೌಡ,ರಮೇಶ, ಚಂದ್ರ ಅಂಗಾರ ರಫೀಕ್ ಇವರುಗಳು ಕೃಷ್ಣೇಗೌಡರ ಮನೆಯ ಮೇಲೆ ಕಲ್ಲೆಸೆದಿದ್ದಾರೆಂದು ಗುರು ರಾಮಚಂದ್ರಬಳಿ ದೂರು ನೀಡುತ್ತಾರೆ.

ಕೃಷ್ಣೇಗೌಡ, ಚಂದ್ರೇಗೌಡ, ಹಾಲಪ್ಪ, ಅತ್ತಾಉಲ್ಲ, ಶ್ಯಾಮಭಟ್ಟ, ರೇಂಜರು,ಸೀನಪ್ಪ ಕೆಸರೂರಿನ ಕ್ಲಬ್ಬಿನಲ್ಲಿ ಕೂತು ಲಂಚದ ವಿನಿಮಯ ಮಾಡಿಕೊಂಡು ಕಾಡಿನ ನಾಶಕ್ಕೆ ಅಧಿಕಾರ ವರ್ಗದವರು ದಾರಿಮಾಡಿಕೊಡುತ್ತಾರೆ. ಶಾಮನಂದ ಅಂಗಾಡಿ ಡಿಟೆಕ್ಟೀವ್ ಅಧಿಕಾರಿಯಾಗಿ ಕೆಸರೂರಿಗೆ ಬಂದಿರುತ್ತಾನೆ. ಇದು ಕೆಸರೂರಿನ ಸುಲೇಮಾನ್ ಯೂಸಫ್ ಬೇರಿಗೆ ಅನುಮಾನಗಳು ಶುರುವಾಗುತ್ತವೆ.ಡಾಕ್ಟರ್ ಜೋಗಿಹಾಳ್ ಮರಣದ ನಂತರ ಡಾಕ್ಟರ್ ಪಾಟೀಲ್ ಕೆಸರೂರಿನ ಏಲಕ್ಕಿ ಸಂಶೋಧನಾ ಕೇಂದ್ರಕ್ಕೆ ಬಂದು ಕೆಲಸ ನಿರ್ವಹಿಸುತ್ತಾರೆ. ಆನಂತರದಲ್ಲಿ ಅಂಗಾಡಿಯ ಡಿಟೆಕ್ಟಿವ್ ಕೆಲಸಗಳು ಶುರುವಾಗುತ್ತವೆ. ಜಯರಾಂ ಒಬ್ಬ ಬರಹಗಾರ ಮತ್ತುಕತೆಗಾರರ ಈತನ ಜೋಗಿಹಾಳರ ಕೊಲೆ ವಿಷಯ ಕತೆಯ ಮೂಲಕ ಸತ್ಯವಾಗುತ್ತ ಹೋಗುತ್ತದೆ. ಈ ಕತೆಗಾರನ ಕತೆಗಳ ವಾಸ್ತವದಲ್ಲಿ ನಡೆಯುತ್ತಾ ಹೋಗುತ್ತವೆ. ಇವರ ಸುತ್ತಮುತ್ತಲಿನ ಜನರು ಕತೆಯ ಸ್ವಾರಸ್ಯವನ್ನು ಕೇಳುವ ಕುತೂಹಲಿಗಳಾಗಿದ್ದಾರೆ.ಜಯರಾಮು,ರಾಮಚಂದ್ರ,ಹೆಗ್ಡೆ ಇವರೆಲ್ಲಾ ದಿನವೂ ಕಾಫಿನಲ್ಲಿ ಸೇರುತ್ತಾರೆ. ಸಂಶೋಧನ ಕೇಂದ್ರದ ಕೀಟಶಾಸ್ತ್ರಜ್ಞ ಸಿದ್ಧಪ್ಪ,ಪ್ಲಾಂಟ್ ಪೆಥಾಲಾಜಿಸ್ಟ್ ಸಿದ್ಧಪ್ಪ ಪಾಟೀಲರೊಡಗೂಡಿ ಕೇಂದ್ರದಲ್ಲಿರುತ್ತಾರೆ.

ಡಾ.ಪಾಟೀಲರು ಹೇಳುವಂತೆ, "ಏನಿಲ್ಲಾ ಭಾರತದ ಏಲಕ್ಕಿ ಉತ್ಪಾದನೆ ಕ್ರಮೇಣ ಕಡಿಮೆಯಾಗುತ್ತಾ ಕೊನೆಗೆ ಈ ದೇಶದಲ್ಲಿ ಏಲಕ್ಕಿ ನಾಮಾವಶೇಷವಾಗಿ ಹೋಗುತ್ತೆ.

ಏನ್ ಸಾರ್ ನೀವು ಹೇಳೋದು. ಲಕ್ಷಾಂತರ ಎಕರೆ ಏಲಕ್ಕಿ ತೋಟಗಳಿರೋ,ಸಾವಿರಾರು ಜನಕ್ಕೆ ಜೀವನೋಪಾಯವಾಗಿರೋ ಭಾರತದಲ್ಲಿ ನಾಮಾವಶೇಷವಾದರೆ ಏನು ಗತಿ

ಅಂಗಾಡಿ ನಾನು ವಿಜ್ಞಾನಿಯಾಗಿ ಇರೋ ಸಂಗತಿಯನ್ನು ಎಷ್ಟೇ ಕ್ರೂರವಾದುದಾದರೂ ತಿಳಿಸಬೇಡವೇ. ಒಂದು ಕಾಲದಲ್ಲಿ ಸಿಲೋನಿನಲ್ಲಿ ಟೀ ಗಿಡಗಳೇ ಇರಲಿಲ್ಲ. ಎಲ್ಲಾ ಕಾಫಿ ತೋಟಗಳೇ. ಆದರೆ ಎಲೆ ತುಕ್ಕು ರೋಗ ಅಂತ ಒಂದು ಫಂಗಸ್ ಬಂತು. ಇಡೀ ಸಿಲೋನಿನ ಎಲ್ಲಾ ಕಾಫಿ ತೋಟಗಳನ್ನೂ ಆಕ್ರಮಿಸಿ ಕೊನೆಗೆ ಕಾಫಿ ಸಿಲೋನದಲ್ಲಿ ನಾಮಾವಶೇಷವಾಯ್ತು ಇದು ಇತಿಹಾಸದ ಸತ್ಯ."[೧೨]

ಎಂಬ ಎಚ್ಚರಿಕೆಯ ಮಾತುಗಳನ್ನು ಪತ್ತೆದಾರಿ ಅಂಗಾಡಿಯವರಿಗೆ ವಾಸ್ತವದ ಸತ್ಯವನ್ನು ತಿಳಿಸುತ್ತಾರೆ. ಈ ಕಾದಂಬರಿಕಾರ ತಳಿಗಳ ಬಗ್ಗೆ ರೈತರು ಅನುಭವಿಸುವ ಕಷ್ಟನಷ್ಟಗಳ ಬಗ್ಗೆ ಎಚ್ಚರಿಕೆಯ ಸೂಚನೆಯನ್ನು ನೀಡುತ್ತಾರೆ.ಡಾ.ಜೋಗಿಹಾಳರ ಕಾಫಿ ತಳಿ ಒಂದು ಎಕರೆಗೆ ಒಂದು ಟನ್ ಕಾಫಿ ಬೆಳೆ ತೆಗೆಯಬಹುದೆಂಬ ಸೂಚನೆಯನ್ನು ದಾಖಲೆಗಳ ಮೂಲಕ ಶೋಧಿಸುತ್ತಾರೆ. ಇದನ್ನು ಸುಲೇಮಾನ್ ಯೂಸೂಫ್ ಗೌಪ್ಯವಾಗಿ ಕಾಡಿನೊಳಗೆ ಬೆಳೆ ತೆಗೆಯುತ್ತಿರುತ್ತಾನೆ. ಇದರ ರಹಸ್ಯ ಬಯಲು ಮಾಡಲು ಹೋಗಿ ಊರಿನಲ್ಲಿ ಧರ್ಮ ಸಂಘರ್ಷ ಏರ್ಪಟ್ಟು ಇಡೀ ಊರೇ ಹೊತ್ತಿ ಉರಿಯುವ ಚಿತ್ರಣವಿದೆ. ಇಂಥ ತಂತ್ರಗಳು ಆಧುನಿಕ ಸಂದರ್ಭದಲ್ಲಿ ಮರೆಮಾಚಲು ನಡೆಯುತ್ತಿರುವ ಚಿತ್ರಣದಂತೆ ಕಂಡುಬರುತ್ತದೆ.

"ಎಂಗ್ಟನ ಪುಂಗಿ" ಕತೆಯಲ್ಲಿ ಬುಡಕಟ್ಟು ಸಮುದಾಯದ ಹಾವುಗೊಲ್ಲರ ಬದುಕನ್ನು ಅನಾವರಣಗೊಳಿಸುವ ಚಿತ್ರಣವಿದೆ. ದಟ್ಟ ಅರಣ್ಯದಲ್ಲಿವಾಸಿಸುವ ಈ ಬಡುಕಟ್ಟು ಸಮುದಾಯವನ್ನು ಸರ್ಕಾರದ ಅಧಿಕಾರಿಗಳೇ ಒಕ್ಕಲೆಬ್ಬಿಸುತ್ತಾರೆ. ಇದರಿಂದಾ ಈ ಸಮುದಾಯವು ಅರಣ್ಯ ನಿವಾಸದಿಂದ ನಿರ್ವಸತೀಕರಣಕ್ಕೊಳಕ್ಕಾಗುತ್ತವೆ.

ಎಂಗ್ಟನನ್ನು ದೂರದಿಂದ ನೋಡಿದಾಗ ಪಾಪ ಎನ್ನಿಸಿತು. "ನಾಗರಿಕತೆ ಮುಂದುವರಿಯುತ್ತಾ ಎಂಗ್ಟನ ಕುಲಕಸುಬುಗಳು, ಕೈಚಳಕಗಳು ನಿಧಾನವಾಗಿ ನಿರುಪಯುಕ್ತವಾಗುತ್ತಿದ್ದವು. ಸರ್ಕಾರ ಹಾವಿನ ಚರ್ಮವನ್ನು ರಫ್ತುಮಾಡುವುದು ನಿಷೇಧಿಸಿದ ಮೇಲೆ ಅವನ ಚರ್ಮಗಳಿಗೆ ದುಡ್ಡು ಸಿಗುತ್ತಿರಲಿಲ್ಲ. ಅವನ ಚಕ್ರಾಣಿ ಬೇರು, ಚಿತ್ರ ಮೂಲದ ಬೇರು, ಸರ್ಪಗಂಧಿ, ಅಳಲೇಕಾಯಿಗಳೂ ವಿಲಾಯಿತಿ ಔಷಧದ ಎದುರು ಗಿರಾಕಿ ಕಳೆದುಕೊಂಡಿದ್ದವು. ಮೊದಲಿನಂತೆ ಮೊಲ ಕವುಜುಗನ ಹಕ್ಕಿ ನೀರುನಾಯಿಗಳನ್ನು ಬೇಟೆಯಾಡುವುದಕ್ಕೂ ಅರಣ್ಯ ಇಲಾಖೆಯವರು ಅವಕಾಶ ಕೊಡುತ್ತಿರಲಿಲ್ಲ. ಎಂಗ್ಟನಿಗೆ ಮನಸ್ಸಿನಾಳದಲ್ಲಿ ತಾನು ಪರಕೀಯನಾಗುತ್ತ, ಏಕಾಂಗಿಯಾಗುತ್ತ ಇರುವುದರ ಅರಿವಿದ್ದರಬಹುದು."[೧೩]

ಈ ಸಮುದಾಯವನ್ನು ಒಕ್ಕಲೆಬ್ಬಿಸುವುದರ ಜೊತೆಗೆ ಅವರೊಂದಿಗೆ ಸಾಂಸ್ಕೃತಿಕ ಆಶಯಗಳು ದೂರವಾಗುತ್ತವೆ. ಪಾರಂಪರಿಕ ಕುಲಕಸುಬುಗಳು ಕೌಶಲಗಳು ಪಾರಂಪರಿಕ ವೈದ್ಯಕೀಯ ಪದ್ಧತಿಗಳು ನಾಶವಾಗುವುದನ್ನು ಕಾಣುತ್ತೇವೆ. ಇಂಥದೆ ಕೃತ್ಯಕ್ಕೆ ಕೈಹಾಕಿದ್ದ ವಸಾಹತುಶಾಹಿಯ ಆಡಳಿತ ನೀಡಿದ್ದ ಪೆಟ್ಟು ಮತ್ತು ಅದು ತಂದ ಆಧುನಿಕ ಸಂಸ್ಥೆಗಳು ನೀಡಿರುವ ಪೆಟ್ಟು ಮತ್ತೆ ಮತ್ತೆ ಚೇತರಿಸಿಕೊಳ್ಳಲಾರದಂಥದು.ಆದ್ದರಿಂದ ಅರಣ್ಯ ರಕ್ಷಣೆಯ ನೆಪದಲ್ಲಿ ಆಧುನಿಕ ಸರ್ಕಾರಗಳು ಈ ಬುಡಕಟ್ಟು ಸಮುದಾಯದಲ್ಲಿದ್ದ ಅಮೂಲ್ಯ ವಿದ್ಯೆ, ಔಷಧಿ ಸತ್ಯಗಳು ಇಂದು ಮಾಯವಾಗುತ್ತಿವೆ. ಇಂಥ ಜೀವಪರ ಮೌಲ್ಯದ ಆಶಯಗಳನ್ನು ತೇಜಸ್ವಿಯವರು ವಿಷಾಧದಿಂದ ದಾಖಲಿಸುತ್ತಾರೆ.

**ಕೊನೆ ಟಿಪ್ಪಣಿ**


೧. ತೇಜಸ್ವಿ,ಮಾಯಾಲೋಕ ಮುನ್ನುಡಿ

೨.ತೇಜಸ್ವಿ,ಕರ್ವಾಲೊ, ೨೨ನೇ ಮುದ್ರಣ,ಪುಟ ೨೪,೨೫

೩. ಅದೇ ಪುಟ ೪೩

೪. ಅದೇ ಪುಟ ಪುಟ ೪೩

೫. ಅದೇ ಪುಟ ೬೪

೬. ಅದೇ ಪುಟ ೧೩೦

೭.ತೇಜಸ್ವಿ,ಕಿರುಗೂರಿನ ಗಯ್ಯಾಳಿಗಳು ೧೯೯೧ ಪ್ರ.ಮು.ಪುಸ್ತಕ ಪ್ರಕಾಶನ, ಪುಟ ೧೧

೮. ತೇಜಸ್ವಿ, ಸ್ವರೂಪ, ಪುಸ್ತಕ ಪ್ರಕಾಶನ, ಮೈಸೂರು.೨೦೦೦ಪುಟ ೬೧

೯. ಅದೇ ಪುಟ ೬೨

೧೦. ತೇಜಸ್ವಿ,ಮಾಯಾಲೋಕ ಪುಟ ೧೪೪.

೧೧. ಅದೇ ಪುಟ ೧೮೨

೧೨.ಅದೇ ಪುಟ ೧೯೩

೧೩.ತೇಜಸ್ವಿ, ಚಿದಂಬರ ರಹಸ್ಯ,ಪುಟ ೫೬

೧೪.ತೇಜಸ್ವಿ,ಪರಿಸರದ ಕತೆಗಳು,ಪುಟ ೬೫

## ೪.೨.೯ ಬರಗೂರು ರಾಮಚಂದ್ರಪ್ಪ : ಭೂ ಶೋಷಣೆ ವಿರುದ್ಧ ಸಂಘಟಿತ ಬಂಡಾಯ

ಬರಗೂರರ ಕತೆಗಳಲ್ಲಿ ಭೂಮಾಲೀಕರ ಕ್ರೌರ್ಯ,ಅವರ ವಿರುದ್ಧದ ಹೋರಾಟ, ಶೋಷಿತರ ಪರ, ಬಂಡಾಯ ಮನೋಧರ್ಮ ಹಾಗೂ ಜಾತಿ ಪ್ರಶ್ನೆ ಮೊದಲಾದ ಅಂಶಗಳು ಅವರ ಒಟ್ಟಾರೆ ಕಥನಗಳಲ್ಲಿ ಕಾಣುತ್ತೇವೆ. ಅವರ ಬಹುಪಾಲು ಕತೆಗಳು ಗ್ರಾಮೀಣಮೂಲದಿಂದಲೇ ಅಭಿವ್ಯಕ್ತಗೊಳ್ಳುತ್ತವೆ. ಬರಗೂರರ ಒಟ್ಟಾರೆ ಕಥನ ಶಕ್ತಿ ಅವರ ಭೂಮಿತತ್ವ ಮೂಲ ಆಶಯಗಳನ್ನು ಗುರುತಿಸಬಹುದು. ಅಲ್ಲದೆ ಇವರ ಕೃತಿಗಳಲ್ಲಿ ಭೂ ಶೋಷಣೆಯ ವಿರುದ್ಧ ಸಂಘಟಿತ ಬಂಡಾಯದ ಆಶಯಗಳನ್ನು ಕಾಣಬಹುದಾಗಿದೆ.

"ಬೆವರು ಮನುಷ್ಯ ಸಮಾಜದ ಮೂಲ ಕತ್ತಲಿಂದ ಬೆಳಕಿಗೆ, ಬೆಳಕಿನಿಂದ ಕತ್ತಲಿಗೆ ಸೇತುವೆ ಕಟ್ಟುತ್ತಾ ಬಂದ ಬೆವರು ನಮ್ಮ ನಡುವಿನ ಒಂದು ಚಾರಿತ್ರಿಕ ಪ್ರಕ್ರಿಯೆ ಹಗಲಿರುಳೆನ್ನದೆ ನಿರಂತರ ಕ್ರಿಯಾಶೀಲತೆಯಲ್ಲಿ ಮಗ್ನನಾದ ಈ ಬೆವರು ಬೆಟ್ಟಗುಡ್ಡಗಳಲ್ಲಿ ಬದುಕನ್ನು ಹುಡುಕಿದೆ. ನದಿಗಳನ್ನು ನೆಲಮುಖಿಯಾಗಿಸಿ ಹಸಿರು ಬೆಳೆಸುವ ಉಸಿರಾಗಿದೆ. ತನ್ನ ತೊಡಗುವಿಕೆಯ ಮೂಲಕ ಬುದ್ಧಿಭಾವಗಳನ್ನು ಒಳಗೊಳ್ಳುತ್ತ ಸೃಜನಶೀಲ ನೆಲೆಗಳನ್ನು ನಿರ್ಮಾಣ ಮಾಡುತ್ತ ಬಂದಿದೆ. ಒಟ್ಟಾರೆ ಇದೊಂದು ಮನುಷ್ಯ ಚರಿತ್ರೆ ಎಂದೂ ಬತ್ತದ ಅಕ್ಷಯ ಪಾತ್ರೆ. ಇದೇ ನನ್ನ ಭೂಮಿ ತತ್ವ."[೧]

ಬರಗೂರರ ಕೃತಿಗಳಲ್ಲಿ ಸಾಮಾಜಿಕ ಅಸಮಾನತೆಯ ವಿರುದ್ಧ, ಊಳಿಗಮಾನ್ಯಶಾಹಿ ವಿರುದ್ಧ ಸಮಾನತೆಯನ್ನು ಆಗ್ರಹಿಸಿ ಪ್ರತಿಭಟನಾತ್ಮಕ ನೆಲೆಯ ಮೂಲಕ ಹೋರಾಡುವುದನ್ನು ಕಾಣಬಹುದು. ಆ ಮೂಲಕ ಶೋಷಣೆಗೊಳಗಾದ ಸಮುದಾಯದ ನಾಯಕನಾಗಿ ಭೂಮಾಲೀಕನ ವಿರುದ್ಧದ ಎದುರಾಳಿಯಾಗಿ, ನೊಂದವರ ಪರವಾಗಿ ಮಾನವೀಯತೆಯನ್ನು ಮೆರೆಯುವುದನ್ನು ಇವರ ಕೃತಿಗಳ ನಾಯಕನಲ್ಲಿ ಕಾಣುತ್ತೇವೆ. ಅವರ **ಶಬರಿ, ಸೂರ್ಯ, ಒಂದು ಊರಿನ ಕತೆ, ಎದುರಾಳಿ, ಜನಪದ, ಮಳೆ, ಕ್ಷಾಮ** ಮೊದಲಾದ ಕಥನಗಳಲ್ಲಿ ಭೂಶೋಷಣೆಯ ವಿರುದ್ಧ ಸಂಘಟಿತ ಬಂಡಾಯದ ಅಂಶಗಳನ್ನು ಗುರುತಿಸಬಹುದಾಗಿದೆ.

ಬರಗೂರರ ಕೃತಿಗಳಲ್ಲಿ ಭೂಮಾಲೀಕತ್ವವನ್ನು ನಾಶಗೊಳಿಸಿ ಸಮಾನತೆಯನ್ನು ಸ್ಥಾಪಿಸುವ ನೆಲೆಯನ್ನು ಕಾಣಬಹುದಾಗಿದೆ. ಭೂ ಪ್ರಶ್ನೆಯನ್ನು ನೋಡುವ ಬಗೆಯು ಭೂಮಿತತ್ವದ ಆಶಯವನ್ನು ವ್ಯಕ್ತಗೊಳಿಸುತ್ತಾರೆ. ಇವರ ಕೃತಿಗಳಲ್ಲಿ ಹೋರಾಟದ ನೆಲೆ, ದಬ್ಬಾಳಿಕೆ ವಿರುದ್ಧದ ನೆಲೆ, ಹಕ್ಕಿನ ನೆಲೆಯಲ್ಲಿ ವ್ಯಕ್ತಗೊಳ್ಳುತ್ತವೆ. ಏಕಕಾಲಕ್ಕೆ ಸ್ಥಳೀಯ ಸಮಸ್ಯೆ ಹಾಗೂ ಜಾಗತಿಕ ಸಮಸ್ಯೆಗಳನ್ನು ಎದುರಿಸುವ ಆಶಯವನ್ನು ಕಾಣುತ್ತೇವೆ. ಅಲ್ಲದೆ ಆಧುನಿಕ ಸಂದರ್ಭದ ಭೂಸಮಸ್ಯೆಗಳನ್ನು ಎದುರಿಸುವ ಆಶವು ಶಬರಿ ಕಾದಂಬರಿ ಧ್ವನಿತವಾಗಿದೆ. ಅವರ ಒಟ್ಟಾರೆ ಕಥನಗಳಲ್ಲಿ ಭೂಶೋಷಣೆಯ ವಿರುದ್ಧದ ಸಂಘಟಿತ ಬಂಡಾಯದ ಅಂಶಗಳು ವ್ಯಕ್ತವಾಗುತ್ತವೆ.

"ಶಬರಿ" ಯಲ್ಲಿ ಚಳುವಳಿಯನ್ನು ಕಟ್ಟುವ, ಕಾಯುವ, ತಾಳ್ಮೆವಹಿಸುವ ಹಾಗೂ ಸಾಮೂಹಿಕ ಹೋರಾಟದ ಆಶಯವನ್ನು ಧ್ವನಿಸುತ್ತದೆ. ಇಲ್ಲಿ ಭೂಮಿ ಬಗೆಗಿದ್ದ ಉಳುವವನೇ ಒಡೆಯ ಎಂಬ ಸ್ಥಾಪಿತ ಆಶಯವನ್ನು ಬಿಟ್ಟು ಭಿನ್ನನೆಲೆಯಲ್ಲಿ ಯೋಚಿಸಿದ್ದು, ಇದು ಕಾದಂಬರಿಯ ಕೇಂದ್ರಕಾಳಜಿ ವಿಶೇಷತೆಯನ್ನು ಗುರುತಿಸಬಹುದು.

ಈ ಕಾದಂಬರಿ ಶಬರಿಯ ಅಂತಃಶಕ್ತಿ ಕುರಿತು ಕಾದಂಬರಿಕಾರರೇ ಹೇಳುವಂತೆ, "ನನ್ನ ದೃಷ್ಟಿಯಲ್ಲಿ ಶಬರಿ ಒಂದು ಪಾತ್ರವಲ್ಲ. ಶಬರಿ ಒಂದು ರೂಪಕ. ಈ ರೂಪಕಕ್ಕೆ ಹಿನ್ನೆಲೆಯಾಗಿ ಬರುವುದು ಬುಡಕಟ್ಟಿನ ಬದುಕಿನ ಬವಣೆಯ ಬದುಕು. ಆದರೆ ನನ್ನ ಕಾದಂಬರಿ ಬುಡಕಟ್ಟಿನ ಬದುಕಿನ ವಿವರಗಳ ಸಂಗ್ರಹಿಸಿಡುವ ಸಾಂಸ್ಕೃತಿಕ ಮ್ಯೂಜಿಯಂ ಅಲ್ಲ. ಬುಡಕಟ್ಟಿನ ವಿವರಗಳ ಮೂಲಕ ಚಲನಶೀಲ ಸಂಸ್ಕೃತಿಯ ಅಂತಃಶಕ್ತಿಯನ್ನು ಅನಾವರಣಗೊಳಿಸುವ, ರಾಜಕೀಯ ಅಂತಃಕರಣವನ್ನು ಶೋಧಿಸುವ, ಒಂದು ಪ್ರಾಮಾಣಿಕ ಪ್ರಯತ್ನವಾಗಿ ನನ್ನ ಶಬರಿ ರೂಪುಗೊಂಡಿದೆ."[೨]

ಈ ಮಾತಿನ ಹಿಂದೆ ಬುಡಕಟ್ಟಿನ ಬದುಕಿನ ತಹತಹ ಇರುವುದನ್ನು ಕಾಣುತ್ತೇವೆ. ಇಲ್ಲಿನ ಶಬರಿ ಬುಡಕಟ್ಟಿನ ಹಟ್ಟಿಯಲ್ಲಿ ಹುಟ್ಟಿ, ಅರಿವಾಗಿ ಬೆಳಕಾಗಿ ಹೋರಾಟಗಾರ್ತಿಯಾಗಿ, ಶಕ್ತಿಯಾಗಿ,ದನಿಯಾಗಿ ಕಾದಂಬರಿಯಲ್ಲಿ ವ್ಯಕ್ತವಾಗುತ್ತಾಳೆ. ಈ ಶಬರಿಯು ಸೂರ್ಯನ ಬರುವಿಗಾಗಿ ಕಾಯುತ್ತಾಳೆ. ಕೊನೆಗೆ ತನ್ನ ಸೂರ್ಯ ಎಂದೂ ಬಾರದ ದಾರಿಗೆ ಹೋದ ಸುದ್ದಿ ತಿಳಿದರೂ ಈಕೆ ದಿಟ್ಟೆಯಾಗಿ ನಿಲ್ಲುತ್ತಾಳೆ. ಈಕೆ ಇಡೀ ಸಮುದಾಯಕ್ಕೆ ಕಿಚ್ಚನ್ನು ಹಚ್ಚಿ ಹೋರಾಟ ನಡೆಸುತ್ತಾಳೆ.

ಇಲ್ಲಿ "ದುಡಿಯುವವನೇ ಒಡೆಯ" ಎಂಬ ವಿಶಾಲ ತಳಹದಿಯ ಮೂಲಕ ಭೂಒಡೆತನ ಪ್ರತಿಪಾದಿಸಿರುವುದು ಕಂಡುಬರುತ್ತದೆ. ಉಳುವವನಿಗೆ ಒಡೆತನ ಎನ್ನುವುದು ಪುರುಷಪ್ರಧಾನ ಸಮಾಜದ ಆಶಯವಾಗಿತ್ತು. ಆದರೆ "ದುಡಿಯುವವನೇ ಒಡೆಯ"ಎಂಬ ಹೊಸ ಆಲೋಚನಾ ಕ್ರಮವು ಮಹಿಳೆಯರು ಮತ್ತು ಕಾರ್ಮಿಕರು ಕೂಡಾ ಭೂ ಒಡೆಯರು ಎಂಬ ಆಶಯವನ್ನು ಕಾದಂಬರಿ ಧ್ವನಿಸುತ್ತದೆ. ದುಡಿಯುವವರು ಮಹಿಳೆಯರು ಆಗಿರಬಹುದು ಪುರುಷರೂ ಆಗಿರಬಹುದು ಇಲ್ಲಿ ದುಡಿಯುವವರೇ ಒಡೆಯರಾಗುವ ಆಶಯವನ್ನು ಕಾದಂಬರಿ ವ್ಯಕ್ತಪಡಿಸುತ್ತದೆ.

"ಯಾಕ್ ಅನ್ನೋಲ್ಲ? ನನ್ ಪ್ರಶ್ನೇನೂ ಅದೇ ಆಸ್ತಿ. ಅಧಿಕಾರ ಎಲ್ಲದ್ರಲ್ಲೂ ಹೆಂಗಸರು - ಗಂಡಸರು ಸಮಾನ ಅಂತ ಆಗ್ಬೇಕು ಎಂದು ಸೂರ್ಯ ನಿರ್ಧಾರಕವಾಗಿ ಹೇಳಿದ. ಆಗ ಶಬರಿ ದೃಢವಾಗಿ ಹೇಳಿದಳು. ಅದಕ್ಕೇ ನಾನ್ ಏನ್ ಯೇಳ್ತೀನಿ ಗೊತ್ತ? ಇನ್‌ಮ್ಯಾಕೆ 'ಉಳೋನೇ ವೊಲದೊಡ್ಯ ಅನ್ನಾ ಬದ್ಲು ದುಡ್ಯೋರೇ ಒಡೇರು' ಅಂಬ್ತ ಯೇಳ್ಬೇಕು."[೩]

ಗಂಡು ಹೆಣ್ಣು ಸಮಾನವೆಂಬ ಆಶಯವನ್ನು ಹೋರಾಟಗಾರ ಸೂರ್ಯನಿಂದ ಅರಿವು ಮೂಡಿಸುವುದನ್ನು ಗಮನಿಸಬಹುದಾಗಿದೆ. ಇದಕ್ಕೆ ಪೂರಕವಾಗಿ ಕಾದಂಬರಿಯ ಕಥಾನಾಯಕಿ ಶಬರಿ "ದುಡ್ಯೋರೇ ಹೊಲದ ಒಡೆಯರು" ಎಂಬ ವಿಶಾಲತಳಹದಿಯ ಆಶಯವನ್ನು ಹೋರಾಟಕ್ಕೆ ನೆಲೆಯನ್ನು ನೀಡುತ್ತಾಳೆ. ಇದು ಆದಿಮ ಸಮುದಾಯದ ಒಡಳೊಳಗಿನ ಸಂಕಟದ ಆಶಯವಾಗಿ ಹೊರಹೊಮ್ಮಿದೆ.

ಶಬರಿಯೊಂದಿಗೆ ಹೋರಾಟಗಾರ ಸೂರ್ಯ ಚಳುವಳಿಯನ್ನು ಕಟ್ಟುವ, ಬುಡಕಟ್ಟು ಸಮುದಾಯಕ್ಕೆ ಅರಿವು ಮೂಡಿಸುವ ಸಾಂಸ್ಕೃತಿಕ ಎಚ್ಚರವಾಗಿ ಶಬರಿಯ ಹಟ್ಟಿಯ ಬದುಕಿಗೆ ಬಂದು ಸೇರುತ್ತಾನೆ. ಸೂರ್ಯ ಈ ಊರಿನ ಭೂಮಾಲೀಕರ ವಿರುದ್ಧ ರೈತರನ್ನು ಹೋರಾಟಕ್ಕೆ ಸಜ್ಜುಗೊಳಿಸುತ್ತಾನೆ. ಇಡೀ ಊರಿನ ಹಟ್ಟಿಜನಾಂಗವು, ಅಕ್ಷರ ಲೋಕದ ಮೂಲಕ ತನಗಾಗುತ್ತಿರುವ ಅನ್ಯಾಯದ ವಿರುದ್ಧ ಜಾಗೃತಿಗೊಂಡು ಹೋರಾಟಕ್ಕಿಳಿಯುವಂತೆ ಸಜ್ಜುಗೊಳಿಸಲಾಗುತ್ತದೆ.

ಇದಕ್ಕೂ ಮುನ್ನ ಶಬರಿಯ ತಂದೆ ತಿಮ್ಮರಾಯಿ, ತನ್ನೂರಿನ ಯುವಕ ಚಂದ್ರನಿಗೆ ಶಬರಿಯನ್ನು ಮದುವೆ ಮಾಡಿಕೊಡುತ್ತಾನೆ. ಬುಡಕಟ್ಟು ಸಮುದಾಯದ ಆಚರಣೆಯ ಪದ್ಧತಿಯಂತೆ ಮದುವೆಯಾದ ಹೆಣ್ಣು ಮೊದಲನೇ ರಾತ್ರಿ ದೇವಸ್ಥಾನದ ದೇವರ ಕೂಟ ಸೇರುವ ಆಚರಣೆಯಿದೆ. ಇದು ಯುವಕ ಚಂದ್ರನಿಗೆ ಒಗ್ಗದ ವಿಚಾರ, ಇದನ್ನು ವಿರೋಧಿಸಲು ದೂರದ ಊರಿಂದ ಸಂಘಟನಾ ತಂಡವು ಬರುತ್ತದೆಂಬ ನಿರೀಕ್ಷೆಯಲ್ಲಿ ಕಾಯುತ್ತಾನೆ. ಈ ತಂಡ ಬರದೆ ಮದುವೆಯಾಗಿ ದೇವರ ಕೂಟಕ್ಕೆ ಶಬರಿಯನ್ನು ಕಳಿಸಲಾಗುತ್ತದೆ. ಇದನ್ನು ವಿರೋಧಿಸುವ ಸಲುವಾಗಿ ಚಂದ್ರ ರಾತ್ರಿದೇವಸ್ಥಾನದ ಬಳಿ ಅಡಗಿ ಕುಳಿತುಕೊಳ್ಳುತ್ತಾನೆ. ತನ್ನ ಹೆಂಡತಿ ಶಬರಿಯನ್ನು ದೇವರ ಕೂಟದಿಂದ ತಪ್ಪಿಸಲು ಹೋಗಿ ಚಂದ್ರನ ಕೊಲೆಯಾಗುತ್ತಾನೆ. ಮಾರನೇ ದಿನ ಕೇರಿಗೆ ಬಂದು ಗೌಡ ಮತ್ತು ಜೋಯಿಸರ ತಂತ್ರದಿಂದಾಗಿ ಊರಲ್ಲಿ ಚಂದ್ರ ರಕ್ತಕಾರ್ಕೊಂಡು ಸತ್ತ ಎಂಬ ಸುದ್ದಿ ಹಬ್ಬಿಸುತ್ತಾರೆ. ವಾಸ್ತವದಲ್ಲಿ ಚಂದ್ರನನ್ನು ಈ ಗೌಡ ಕೊಲ್ಲಿಸಿರುತ್ತಾನೆ ಅಲ್ಲದೆ ಈ ಗದ್ದಲದಲ್ಲಿ ಶಬರಿ ಗಾಬರಿಗೊಂಡು ಓಡಿ ಬಂದಿರುತ್ತಾಳೆ.

ಈ ಊರಿನ ಭೂಮಾಲೀಕ ನರಸಿಂಹರಾಯಪ್ಪ, ಊರಿನ ರಾಮಾಜೋಯಿಸ, ಬುಡಕಟ್ಟಿನ ಮುಖಂಡ ಪೂಜಾರಪ್ಪ ಇವರತಂತ್ರಗಳಿಗೆ ಈಹಟ್ಟಿಯ ಹೆಣ್ಣುಗಳು ಮೊದಲರಾತ್ರಿಗೆ ಬಲಿಯಾಗುವ ಚಿತ್ರಣವಿದೆ. ಇಲ್ಲಿ ಚಂದ್ರ ಸತ್ತ ನಂತರ ಸೂರ್ಯ ಬಂದು, ಊರಿನ ಜನರಿಗೆಲ್ಲ ಆಪ್ತನಾಗುತ್ತಾನೆ. ಇವನ ಜೊತೆಗೆ ತನ್ನ ಸಂಗಾತಿ ನವಾಬನು ಬಂದು ಈ ಊರಿನ ಕೇರಿಯ ಜನರಿಗೆ ಅಕ್ಷರ ಕಲಿಸುವ ಮೂಲಕ ಪ್ರೀತಿಯನ್ನು ಗಳಿಸಿ ಹೋರಾಟದ ಅರಿವು ಮೂಡಿಸುತ್ತಾನೆ. ಸೂರ್ಯ ಶಬರಿ ಮನೆಯಲ್ಲಿ ಉಳಿಯುವುದರಿಂದ ಶಬರಿಯೊಂದಿಗೆ ಆತ್ಮೀಯತೆಯಿಂದ ಪ್ರೀತಿ ಬೆಳೆಯುತ್ತದೆ. ಪ್ರೀತಿ ವಿಶ್ವಾದ ಮೂಲಕ ಶಬರಿಯಲ್ಲಿ ಹೋರಾಟದ ಮನೋಭಾವನ್ನು ಜಾಗೃತಿಗೊಳಿಸಿ ಆಕೆಯನ್ನು ಹೋರಾಟದ ನಾಯಕತ್ವಹೊರುವಂತೆ ಸಿದ್ಧಗೊಳಿಸುತ್ತಾನೆ. ಈತನ ಸಂಗಾತಿ ನವಾಬ ಹಟ್ಟಿಯ ಜನರ ಪ್ರೀತಿಗೆ ಪಾತ್ರನಾಗಿ ಹಟ್ಟಿಯ ಪೂಜಾರಪ್ಪನ ಮಗಳು ಗೌರಿಯ ಪ್ರೀತಿಸಿ ಮದುವೆಯಾಗಿ ಬುಡಕಟ್ಟಿನ ಸಂಪ್ರದಾದಿಂದ ವಿರುದ್ಧವಾಗಿದ್ದರೂ ಕೊನೆಗೆ ಅವರ ಪ್ರೀತಿ ಒಪ್ಪಿತ ನೆಲೆಯಲ್ಲಿ ಗಟ್ಟಿಗೊಳ್ಳುತ್ತದೆ.

ಸೂರ್ಯ ಅಕ್ಷರಲೋಕ ಅರಿವು ಮೂಡಿಸುವುದರ ಜೊತೆಗೆ ಭೂಮಿಯ ಬಗೆಗಿನ ವಂಚಿತರಾಗಿರುವುದರ ಬಗ್ಗೆ ಅರಿವನ್ನು ಮೂಡಿಸುವುದನ್ನು ಗಮನಿಸಬಹುದು."ಅದೆಲ್ಲ ಸರಿ ಶಬರಿ. ಭೂಮಿ ಎಲ್ಲದಕ್ಕೂ ದೊಡ್ಡದು

ಅಂತ್ಲೇ ಇಟ್ಕೋಳ್ಳೋಣ. ನಾವು ಹುಟ್ಟೋದು ಭೂಮಿ ಮೇಲೆ, ಬದುಕೋದು ಭೂಮಿ ಮೇಲೆ, ಸಾಯೋದು ಭೂಮಿ ಮೇಲೆ. ಈ ಭೂಮೀಲಿ ನಮ್ ಬೆವರು ಸೇರಿದೆ. ಈ ಬೆವರು ಮನೆ ಕಟ್ಟಿದೆ. ಹೊಲ ಉತ್ತಿದೆ, ಕೆರೆ, ಕುಂಟೆ ಎಲ್ಲಾ ಮಾಡಿದೆ. ಆದ್ರೆ ನಿಮ್ ಒಡೆಯರಿಗೆ ಮನೆ, ಭೂಮಿ ನಿಮಗ್ಯಾಕ್ ಇಲ್ಲ?"[೪]

ಸೂರ್ಯ ಅವರೊಳಗೆ ಪ್ರಶ್ನಿಸುವ ಜೊತೆಗೆ ಭೂಮಿ ಕುರಿತಾಗಿ ಮೂಲಭೂತ ಸಮಸ್ಯೆಯನ್ನು ವ್ಯಕ್ತಗೊಳಿಸುತ್ತಾನೆ. ಇಂತಹ ಪ್ರಶ್ನೆಗಳು ಸಹಜವಾಗಿ ಇಡೀ ಸಮುದಾಯವನ್ನು ಕೆರಳುವಂತೆ ಮಾಡುತ್ತದೆ. ಈ ಸಮುದಾಯಕ್ಕೆ ಭೂಮಿ ಕುರಿತಾಗಿ ಜಾಗೃತಿ ಮೂಡಿಸುವ ನೆಲೆಯಲ್ಲಿ ವ್ಯಕ್ತವಾಗುತ್ತದೆ.

"ಪಾಪ ಪುಣ್ಯ ಅಂತ ಆಕಾಶ ತೋರ್ಸ್ಸಿ ನಿಮ್ಮಿಂದ ಭೂಮಿ ಕಸ್ಕಂಡಿದಾರೆ ಈ ಭೂಮಾಲೀಕ್ರು. ನೀವು ನಿಜವಾದ ಭೂಮಿತಾಯಿ ಮಕ್ಕಳು. ಅವರು ಮಾಲೀಕ್ರು ಮಕ್ಕಳಲ್ಲ. ಮಾಲೀಕರಿಂದ ಮಕ್ಕಳು ಭೂಮಿತಾಯೀನ ಬಿಡುಗಡೆ ಮಾಡುಸ್ಬೇಕು."[೫] ಭೂ ಒಡೆತನವನ್ನು ಅಜ್ಞಾನದ ಕತ್ತಲೆಯ ಕೋಣೆಯಲ್ಲಿಟ್ಟು ಮೂಢನಂಬಿಕೆಯ ಕತ್ತಲೆಗೂಡಲ್ಲಿ ಬುಡಕಟ್ಟು ಸಮುದಾಯವನ್ನು ಇಡಲಾಗಿದೆ. ಭೂಮಿಯೊಂದಿಗೆ ನಿರಂತರ ಬೆವರಿನ ಮೂಲಕ ಅಂತರ್‌ಸಂವಾದವನ್ನು ಮಾಡುತ್ತಿರುವವರು ದುಡಿಯುವವರು ಆದರೆ ಈ ಭೂಮಾಲೀಕರು ಭೂಒಡೆತನದ ಫಲವನ್ನು ಅನುಭವಿಸುತ್ತಿರುವವರು ಭೂಮಾಲೀಕರು ಎಂಬ ಆತಂಕವನ್ನು ಸೂರ್ಯ ವ್ಯಕ್ತಪಡಿಸುತ್ತಾನೆ. ಇದರೊಂದಿಗೆ ಭೂಮಾಲೀಕರು ಈ ರೈತ ಮಕ್ಕಳನ್ನು ತನ್ನ ಹಿಡಿತದಿಂದ ಬಿಡಿಸಿಕೊಳ್ಳಬೇಕೆಂಬ ಅದಮ್ಯ ಒತ್ತಾಸೆಯನ್ನು ಸೂರ್ಯನಲ್ಲಿದೆ. ಈ ಭೂಮಾಲೀಕ ಈ ಮಣ್ಣಮಕ್ಕಳ, ಬೆವರಿನ ಮಕ್ಕಳನ್ನು ಬಂಧಿಸಿದ್ದಾನೆ, ಆತನಿಂದ ಭೂಮಿತಾಯಿ ಮತ್ತು ರೈತ ಮಕ್ಕಳನ್ನು ಸೂರ್ಯನ ಮುಖಾಂತರ ಬಿಡುಗಡೆಗೊಳಿಸುವ ಆಶಯವಿದೆ.

"ನಿಜ;ಇವರ ಒಂಟಿತನ, ಪರಕೀಯತೆ, ಮುಗ್ಧತೆ ಎಲ್ಲವೂ ಅಳೆಯಲಾಗದ ಆಳ. ಭೂಮಿ ಹಸನಾಗಲೆಂದು ಬೆವರು ಹರಿಸುತ್ತಾರೆ. ಆದರೆ ಈ ಭೂಮಿ ಅವರದಲ್ಲ. ಭೂಮಿಯ ಮೇಲೆ ಸ್ವತಃ ಬೆಳೆದ ಬೆಳೆ ಅವರದಲ್ಲ. ದುಡಿಮೆಯ ಫಲ ಪಡೆದವನು ಒಡೆಯ ದುಡಿದವನು ಆಳು. ತಾನು ಉತ್ಪನ್ನ ಮಾಡಿದ ಫಸಲು ತನ್ನದಲ್ಲ. ತನ್ನ ಫಸಲಿಗೆ ತಾನೇ ಪರಕೀಯ ಹೀಗೆ ಅನ್ನಿಸಿ, ಅನುಭವಿಸುವ ಕ್ಷಣದ ಅನಾಥಭಾವವನ್ನು ಅಳೆಯಲಾದೀತೆ"[೬] ಇಲ್ಲಿ ರೈತಾಪಿ ಪರಿಕಲ್ಪನೆಯನ್ನು ಉತ್ಪಾದಕ ಅನುಭೋಗಿ ನೆಲೆಯಲ್ಲಿ, ಬಂಡವಾಳಶಾಹಿಯನ್ನು ಪ್ರತಿರೋಧಿಸುವ ಮಾರ್ಕ್ಸ್‌ವಾದೀ ನೆಲೆಯಲ್ಲಿ ಕಾದಂಬರಿ ಚಿಂತಿಸಿರುವುದು ಇಲ್ಲಿ ಗಮನಿಸಬಹುದು. ಇಲ್ಲಿ ಆಳು ಒಡೆಯ, ಬಂಡವಾಳಿಗ ಕಾರ್ಮಿಕ ಎಂಬ ಸಾಂಗತ್ಯದ ಮೂಲಕ ವ್ಯಕ್ತಪಡಿಸಿದೆ. ಇಲ್ಲಿ ದುಡಿಮೆಯ ಫಲವನ್ನು ಶ್ರಮವ್ಯಯಿಸಿದ ಕಾರ್ಮಿಕನೇ ಮಾಲೀಕನಾಗಬೇಕೆಂಬ ಆಶಯವಿದೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ಇದರ ವಿರುದ್ಧ ಮಾಲೀಕ ಕಾರ್ಮಿಕನ ಶ್ರಮವನ್ನು ದೋಚುವುದನ್ನು ಹೋರಾಟಗಾರ ಪ್ರಬಲವಾಗಿ ವಿರೋಧಿಸುತ್ತಾನೆ.

"ಒಂದ್ ಕಾಲ್ದಲ್ಲಿ ಈ ಭೂಮಿ ಯಾರ್ಗೂ ಸೇರಿರ್ಲಿಲ್ಲ ಅಥವಾ ಎಲ್ರಿಗೂ ಸೇರಿತ್ತು. ಕಾಡುಗಳಲ್ಲಿ, ಬೆಟ್ಟಗುಡ್ಡಗಳಲ್ಲಿ ಬಾಳ್ವೆ ಮಾಡ್ತಿದ್ದ ಮನುಷ್ಯರು ಎಲ್ರೂ ತಮತಮಗೆ ಬೇಕಾದಂತೆ ಭೂಮೀನ ಬಳಸ್ಕೋತಿದ್ರು. ಭೂಮೀನ ಹದಮಾಡ್ತಾ ಇದ್ರು. ಆದ್ರೆ ಬರ್ತಾ ಬಲ ಇರೋರು ಬುದ್ಧಿ ಇರೋರು ಮಾಲೀಕರಾದ್ರು ಬೆವರು ಬಸಿಯೋ ಜನರನ್ನ ಗುಲಾಮರ ಥರಾ ಮಾಡ್ಕೊಂಡ್ರು. ಬಲ ಇದ್ದೋರ್ಗೆ, ಬುದ್ದಿ ಇದ್ದೋರ್ಗೆ ಬೆಂಬಲ ಸಿಗ್ತಾ ಹೋಯ್ತು. ಅವ್ರು ರಾಜರಾದ್ರು ಮಂತ್ರಿಗಳಾದ್ರು, ಅವರೇ ಒಡೆಯರು. ಉಳಿದೋರು ಹೇಳಿದಂತೆ ಕೇಳೋರು. ಇವರ ಬೆಂಬಲಿಗರಿಗೆ ಸಣ್ಣಪುಟ್ಟ ಬಲಶಾಲಿಗಳಿಗೆ, ಬುದ್ಧಿಶಾಲಿಗೆಳಿಗೆ ಇದೇ ಒಡೆಯರಿಂದ ಅಷ್ಟು ಇಷ್ಟು ಭೂಮಿ ಸಿಗ್ತು."[೭] ಈ ಭೂಮಿ ಬಗೆಗಿನ ಕಲ್ಪನೆ, ಅದು ಬೆಳೆದು ಬಂದ ಬಗೆ ಹಾಗೂ ಭೂ ಒಡೆತನದ ಕಲ್ಪನೆಯನ್ನು ಕಾದಂಬರಿಕಾರ ಕಟ್ಟಿಕೊಡುವ ಬಗೆಯನ್ನು ಗಮನಿಸಬಹುದಾಗಿದೆ. ಈ ಮಾತಿನ ಹಿಂದೆ ಭೂ ಒಡೆತನದ ವಿಕಾಸ ಕುರಿತಂತೆ ವಿವರಗಳಿವೆ. ಇಲ್ಲಿ ಬುದ್ಧಿ ಮತ್ತು ಬಲದ ಆಧಾರದ ಮೇಲೆ ಭೂಮಾಲೀಕತ್ವ ಲಭಿಸಿರುವ ಚಿತ್ರಣವಿದೆ. ಭೂಮಿಯ ಒಡೆತನವು ಕೇವಲ ಬುದ್ಧಿ ಮತ್ತು ಬಲದಿಂದ ಆಳುವ,ಅನುಭವಿಸುವ ಸರಕಾಗಿರುವ ಧೋರಣೆ ಇಲ್ಲಿದೆ. ಈ ಸಿಟ್ಟಿನಲ್ಲಿ ಭೂ ಪ್ರಶ್ನೆ ಹಾಗೂ ಭೂಮಾಲೀಕತ್ವವನ್ನೇ ಪ್ರಶ್ನೆ ಮಾಡುವ ಧೋರಣೆಯಿಂದಾಗಿ ಆಳದಲ್ಲಿ ಭೂಹೀನರ ಪರವಾದ ನಿಲುವನ್ನು ಒಳಗೊಂಡಿದೆ.

ಸೂರ್ಯನ ಮಾತಿನಿಂದ ಪ್ರೇರಣೆ ಪಡೆದ ಶಬರಿ ಒಡೆಯರ ಹೊಲದಲ್ಲಿ ಕೆಲಸ ಮಾಡುವಾಗ, "ಯಾಕ್ರಪ್ಪ ಸುಮ್ಕೆ ನಿಂತ್ಕಂಡ್ರಿ ನಾವೂ ಉಟ್ಟಾಗಿಂದ ನಿಮ್ ವೊಲ್ದಾಗ್ ಕೆಲ್ಸ ಮಾಡ್ತಿದ್ದೀವಿ. ಕೂಲಿ ಕೆಲ್ಸಾನೆ ಬೂಮ್‌ತಾಯಿ ಪೂಜೆ ಅಂದ್ಕಂಡ್ ಬಂದಿದ್ದೀವಿ. ನಮ್ಗೆ ಅಂಬ್ತ ಅಂಗೈಯಗಲ ಬೂಮಿ ಕಾಣಿ ಪಸು ಇಲ್ಲ.

ಯಾಕ್ರವ್ವ ಇಂಗೆ ಶಬರಿ ಕೇಳಿದಳು. ಯಾಕೆ ಅಂದ್ರೆ ಏನೇಳಾನೇ ಸ್ಯಬರಿ. ಈ ಬೂಮಿಗೆ ಮದ್ಲಿಂದ ನಾವೇ ಒಡೇರು. ಹೀಗೆ ಸಾವಿತ್ರಮ್ಮ ಹೇಳಿದ ಮಾತು ಕೇಳಿ ಶಬರಿ ತಣ್ಣಗಾಗಲಿಲ್ಲ. ಈಗದೇನೊ ಬಂದ್ಯೆತಂತ್ರಲ್ಲವ್ವ ಉಳೋರ್ಗೆ ಒಡೆತನ ಕೊಡಾ ಕಾನೂನು..."[೮] ಒಡೆಯರ ಹೊಲದಲ್ಲಿ ದುಡಿಯುತ್ತಿದ್ದ ಶಬರಿ ಮೊದಲಬಾರಿ ಒಡೆಯರ ಹೆಂಡತಿಸಾವಿತ್ರಮ್ಮ ನ ಎದುರುಕೇಳುತ್ತಾಳೆ.ನಂತರ ಒಡೆಯ ನರಸಿಂಹರಾಯಪ್ಪನಬಳಿಯು ಕೇಳುವ ದಿಟ್ಟತನವನ್ನು ತೋರುತ್ತಾಳೆ. ಇಲ್ಲಿ ಭೂಸುಧಾರಣಾ ಕಾನೂನು ಜಾರಿಯಾಗಿರುವ ಆಶಯವಿದೆ. ಆದ್ದರಿಂದ ದುಡಿಯುವವರು ಭೂಒಡೆತನವನ್ನು ಕೇಳುತ್ತಾರೆ.

ಇಂತಹ ಪ್ರಶ್ನೆ ಇಡೀ ಹಟ್ಟಿ ಜನಾಂಗದಲ್ಲಿ ಮಿಂಚಿನ ಸಂಚಾರ ಮೂಡಿಸುತ್ತದೆ. ಹೋರಾಟ ಗಾರ ಸೂರ್ಯ ಈ ವಿಷಯ ತಿಳಿದು ಎಲ್ಲರೂ ಕೇಳಬೇಕೆಂದು ಸೂಚಿಸುತ್ತಾನೆ. ಈ ಮೂಲಕ ಸಮುದಾಯವನ್ನು ಭೂಹೋರಾಟಕ್ಕೆ ಸಿದ್ಧಗೊಳಿಸುವ ನೆಲೆಯನ್ನು ಇಲ್ಲಿ ಗಮನಿಸಬಹುದಾಗಿದೆ. "ಭೂಮಿಗೆ ಬೆವರು ಹರ್ಸ್ತೋ ಜನರು ನೀವು. ಆ ಭೂಮಿ ನಿಮಗೇ ಸೇರ್ಬೇಕು. ನಿಮ್ ಪಾಲನ್ನ ನೀವ್ ಕೇಳ್ಲೇಬೇಕು. ಶಬರಿ ಒಬ್ಬಳು ಕೇಳಿದ್ರೆ ಸಾಲ್ದು ಎಲ್ರೂ ಕೇಳ್ಬೇಕು."[೯] ಇಡೀ ಬಡುಕಟ್ಟು ಸಮುದಾಯದ ಹಟ್ಟಿಯ ಜನರನ್ನು ಹೋರಾಟಕ್ಕೆ ಸಿದ್ಧಗೊಳಿಸುತ್ತಾನೆ. ಜಾಗೃತಗೊಂಡ ಜನರ ಕುರಿತು ಭೂಮಾಲೀಕರಲ್ಲಿ ಆತಂಕ ಮೂಡುತ್ತದೆ. ಈ ಚಳುವಳಿಯನ್ನು ಮುರಿಯಲು ಊರಿನ ಜೋಯಿಸನೊಂದಿಗೆ ಸಂಚು ರೂಪಿಸಲಾಗುತ್ತದೆ. ಭಾರತೀಯ ಸಂದರ್ಭದಲ್ಲಿ ಭೂಮಾಲೀಕನೊಂದಿಗೆ ಹಲವು ವರ್ಷಗಳಿಂದಲೂ ಪುರೋಹಿತಶಾಹಿಯು ಭೂಮಾಲೀಕನ ನೆರಳಾಗಿ, ಬೆಂಬಲವಾಗಿ ನಿಂತಿರುವುದನ್ನು ಗುರುತಿಸಬಹುದಾಗಿದೆ. ಈ ಪಡೆ ಧರ್ಮದ ನೆಪದಲ್ಲಿ ಚಳುವಳಿಯನ್ನು ಹತ್ತಿಕ್ಕಲು ಯತ್ನಿಸುತ್ತದೆ. ಊಳಿಮಾನ್ಯಶಾಹಿಯ ಬೇರುಗಳು ಈ ಊರಿನಲ್ಲಿರುವ ಹೋರಾಟಗಾರರ ಕುರಿತು ಗೌಡರಿಗೆ ಹೇಳುವ ಜೋಯಿಸನ ಮಾತಿನಿಂದ ವ್ಯಕ್ತವಾಗುತ್ತದೆ.

"ನಿನ್ ವಿಷ್ಯ ಬೇರೆ ಅಲ್ಲ ಈ ವಿಷ್ಯ ಬೇರೆ ಅಲ್ಲ ಭೂಮಿ ಕೊಡುಸ್ತೀವಿ, ಮನೆ ಕೊಡುಸ್ತೀವಿ ಅಂತ ಹೇಳ್ಕೊಂಡೇ ಮತಾಂತರ ಮಾಡ್ಸೋಕೆ ಶುರು ಮಾಡ್ತಾರೆ ನರಸಿಂಹರಾಯಪ್ಪ. ಭೂಮಿಗೂ ಧರ್ಮಕ್ಕೂ ಸಂಬಂಧ ಇದೆ. ಈಗ ನೋಡು, ಹಿಂದಿನ ಜನ್ಮದ ಕರ್ಮಫಲದ ಮೇಲೆ ಇವತ್ತಿನ ಸ್ಥಿತಿಗತಿ ಇದೆ ಅಂತ ನಮ್ ಧರ್ಮ ಹೇಳುತ್ತೆ. ನಿನಗೆ ಇಷ್ಟೊಂದು ಭೂಮಿ ಯಾಕಿದೆ ಹಿಂದಿನ ಜನ್ಮದ ಪುಣ್ಯಫಲ. ಈ ಹಟ್ಟಿ ಜನಕ್ಕೆ ಪುಣ್ಯ ಇಲ್ಲ, ಭೂಮಿ ಇಲ್ಲ. ಅಂದ್‌ಮೇಲೆ ಭೂಮಿಗೂ ಧರ್ಮಕ್ಕೂ ಸಂಬಂಧ ಇದೆ ಅಲ್ವಾ"[೧೦]

ಭಾರತೀಯ ಸಮಾಜದಲ್ಲಿ ಭೂಮಿಗೂ ಮತ್ತು ಧರ್ಮಕ್ಕೂ ಕಲ್ಪಿಸಿ ಕೆಳವರ್ಗದ ಸಮುದಾಯವನ್ನು ಭೂಒಡೆತನದಿಂದ ದೂರವಿಟ್ಟಿರುವ ಒಳಹನ್ನು ಈ ಕಾದಂಬರಿ ಧ್ವನಿಸುತ್ತದೆ. ಧರ್ಮದ ನೆಲೆಯಲ್ಲಿ ಭೂಮಿಯನ್ನು ಕೆಲವೇ ವರ್ಗಗಳು ದೋಚುವ ಮತ್ತು ಒಡೆತನವನ್ನು ಅನುಭವಿಸುತ್ತ ಇದುವರೆಗೂ ಬಂದಿರುವುದನ್ನು ಕಾದಂಬರಿ ಧ್ವನಿಸುತ್ತದೆ. ಭೂಪ್ರಶ್ನೆಗೆ ಧಾರ್ಮಿಕ ಕಾರಣವನ್ನು ಒಡ್ಡಿ ಕೆಲವೇ ವರ್ಗದ ಜನರು ಅನುಭವಿಸುತ್ತಿರುವ ದುರಂತವನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಭಾರತೀಯ ಸಮಾಜದಲ್ಲಿ ಇಂದಿಗೂ ಕೆಲವೇ ಮಂದಿಯ ಕೈಯಲ್ಲಿ ಭೂ ಒಡೆತನ ಇರುವುದನ್ನು ಕಾಣತ್ತೇವೆ.

**ಕಾರ್ಪೊರೇಟ್ ಭೂ ಸಮಸ್ಯೆ**

ಜಾಗತಿಕ ಸಂದರ್ಭದ ಭೂಸಮಸ್ಯೆಯಾದ ಕಾರ್ಪೊರೇಟ್ ಭೂ ಸಮಸ್ಯೆಯಂತಹ ಸಮಸ್ಯೆಗಳು ಕಾದಂಬರಿಯಲ್ಲಿಯೂ ವ್ಯಕ್ತವಾಗಿವೆ. ಫಲವತ್ತಾದ ಭೂಮಿಯನ್ನು ರೈತರಿಂದ ವಶಪಡಿಸಿಕೊಂಡು ಕಂಪೆನಿಯನ್ನು ಸ್ಥಾಪಿಸುತ್ತಿರುವುದು ಕಂಡುಬರುತ್ತದೆ. ಈ ಕಂಪನಿಗಳು ಕೊಟ್ಯಾಂತರ ರೂಪಾಯಿಗಳ ಆಮಿಷ ಒಡ್ಡಿ ರೈತರ ಫಲವತ್ತಾದ ಭೂಮಿಯನ್ನು ಕಿತ್ತುಕೊಳ್ಳುವ ಹುನ್ನಾರದ ಚಿತ್ರಣವಿದೆ. ವಾಸ್ತವದಲ್ಲಿ ಭೂಸಮಸ್ಯೆ ಎದುರಿಸುವ ನಗರದ ಸುತ್ತಮುತ್ತಲ ರೈತರ ಬದುಕಿನ ಕರಾಳ ಛಾಯೆ ಇದೆ. ಇದನ್ನು ಪ್ರತಿಭಟಿಸುವ ರೈತರನ್ನು ದಮನ ಮಾಡುವ ಶಕ್ತಿ ಬಂಡವಾಳಶಾಹಿ ವರ್ಗಕ್ಕೆ ಇದೆ. ಈ ಬಂಡವಾಳಶಾಹಿಗಳನ್ನು ರಾಜಕೀಯ ಹಿತಾಸಕ್ತಿಗಳು ರಕ್ಷಣೆಗೆ ನಿಂತಿವೆ. ಇಂತಹ ಆಶಯಗಳನ್ನು ಕಾದಂಬರಿಯಲ್ಲಿ ಕಂಡಂತೆ ಇಂದು ವಾಸ್ತವದಲ್ಲಿ ಕಾಣುತ್ತಿದ್ದೇವೆ.

ಕಾದಂಬರಿಯಲ್ಲಿ ತಮ್ಮ ಹಟ್ಟಿಯ ಹುಣಸೆತೋಪು, ಹೊಂಗೆ ತೋಪು ಮರಗಳಿದ್ದ ಭೂಮಿಯಮೇಲೆ ವಿದೇಶಿಗರ ಕಣ್ಣು ಬೀಳುತ್ತದೆ. ಈ ಜಾಗದಲ್ಲಿ ಕಂಪೆನಿ ಸ್ಥಾಪಿಸಲು ಊರಿನ ಗೌಡರ ಮತ್ತು ಸ್ಥಳೀಯ ಶಾಸಕರ

ನೆರವಿನೊಂದಿಗೆ ಆ ಜಾಗವನ್ನು ಕೊಳ್ಳಲು ವಿದೇಶಿಗರು ಯತ್ನಿಸುತ್ತಾರೆ. ಗುಡ್ಡದ ಪಕ್ಕದಲ್ಲಿರುವ ಭೂಮಿಯಲ್ಲಿ ಯಾವುದೇ ತೊಂದರೆಯಿಲ್ಲದೆ ಇರುವುದನ್ನು ಗಮನಿಸಿದ ವಿದೇಶಿ ಅಧ್ಯಯನ ತಂಡವು ಒಪ್ಪಿಗೆ ಸೂಚಿಸುತ್ತದೆ. ಅದರಂತೆ ಅಮೇರಿಕದ ಕಂಪನಿಯ ತಂಡವು ಜಮೀನ್ದಾರ ನರಸಿಂಹರಾಯ, ರಾಮಾಜೋಯಿಸ, ಎಂ.ಎಲ್.ಎ. ಧರ್ಮಯ್ಯ ಹಾಗೂ ಪೊಲೀಸರು ಬರುತ್ತಾರೆ.

"ದೇಶ ಮುಂದುವರೀ ಬೇಕಲ್ವ. ದುಡ್ಡಿದ್ದೋನೆ ದೊಡ್ಡಪ್ಪ. ಜೈಜೈ ಅಂದು ನಮ್ಗೂ ಅನುಕೂಲ ಮಾಡ್ಕೊಳ್ಳೋಣ. ದೇಶಕ್ಕೂ ಮಾಡೋಣ. ಏನಂತೀರ. ಎಂದು ಉತ್ಸಾಹದಲ್ಲಿ ಎಂ.ಎಲ್‌ಎ. ಹೇಳಿದಾಗ ಜೋಯಿಸರು ಬೇರೆ ಅನ್ನೋದೇನಿದೆ ಇದು ನಮ್ಮ ಪ್ರದೇಶದ ಪುಣ್ಯ ಎಂದು ಭಾಷ್ಯ ಬರೆದರು ಬಾಯಲ್ಲೇ.ಆಗ ಎಂ.ಎಲ್.ಎ. ಪುಣ್ಯ ಅಲ್ದೆ ಇನ್ನೇನು ಈ ಮೂಲೇಗೆ ಅಮೆರಿಕದೋರು ಬರ್‍ತಾರೆ ಅಂದ್ರೆ ಅದೇನ್ ಸಾಮಾನ್ಯಾನ ಎಂದು ಉಬ್ಬಿಹೋದ. ಬಿಳಿಯರೂ ಅದೇ ಅಮೆರಿಕದವರು ಬ್ಯೂಟಿಫುಲ್ ಏರಿಯಾ ಎಂದು ಉದ್ಗರಿಸುತ್ತಿದ್ದರು. ಇದರಿಂದ ಎಂ.ಎಲ್.ಎ. ಮತ್ತಷ್ಟು ಉಬ್ಬಿಹೋದ."[೧೧] ಈ ಮಾತಿನ ಹಿಂದೆ ಜಾಗತಿಕ ರಾಜಕೀಯ ಶಕ್ತಿಯ ಹುನ್ನಾರವಿದೆ. ದೇಶದ ಅಭಿವೃದ್ಧಿಯ ನೆಪದಲ್ಲಿ ದೇಶದ ಫಲವತ್ತಾದ ಭೂಮಿಯನ್ನು ಮಾರಿಕೊಳ್ಳುವ, ಹಣದ ದುರಾಸೆಗಾಗಿ ದೇಶದ ಹಿತವನ್ನು ಸ್ಥಳೀಯ ನಾಯಕರು ಬಲಿಕೊಡುತ್ತಾರೆ. ಈ ಫಲವತ್ತಾದ ಭೂಮಿಯ ಮೂಲಕ ರೈತ ಬದುಕನ್ನ, ಕನಸನ್ನ ಬಲಿಕೊಡುವ ಹುನ್ನಾರದ ಚಿತ್ರಣ ಸಮಕಾಲೀನ ಸಂದರ್ಭದಲ್ಲಿ ಕಂಡುಬರುವಂತೆ ಇಲ್ಲಿ ಕಾಣುತ್ತೇವೆ.

ಆದರೆ ಕೇರಿಯ ಜನಾಂಗವು ತಮ್ಮ ಭೂಮಿಯನ್ನು ವಿದೇಶಿಗರಿಗೆ ಮಾರುವ ವಿಷಯ ಸುಳಿವು ಸಿಕ್ಕ ತಕ್ಷಣ ಹೋರಾಟವನ್ನು ತೀವ್ರ ಗೊಳಿಸುತ್ತಾರೆ. "ಈ ಭೂಮಿ ನಮ್ಮದು, ಆಕಾಶ ನಮ್ಮದು, ಈ ಬಯಲು ನಮ್ಮದು, ತೋಪು ನಮ್ಮದು, ಎಂದು ಉತ್ಕಟತೆಯಿಂದ ಹಾಡಿದರು. ಇದರ ಫಲವಾಗಿ ಉತ್ಕಟ ವಾತಾವರಣವೇ ನಿರ್ಮಾಣವಾಯಿತು. ಆನಂತರ ಸೂರ್ಯ ತೋಪು ಮತ್ತು ಬಯಲಿಗೆ ಎದುರಾಗಿರುವ ಕಂಟಕವನ್ನು ವಿವರಿಸಿದ. ಅದನ್ನು ಪಡೆದು ನೀವೇ ಒಡೆಯರಾಗಬೇಕು ಎಂದ. ಬಡವರೇ ಭೂಮಿಯ ಒಡೆಯರು ಎಂದು ಒತ್ತಿ ಹೇಳಿದ. ಆಗ ಶಬರಿ ದುಡಿಯೋರೆ ಒಡೇರು ಎಂದು ಉತ್ಸಾಹದಿಂದ ಘೋಷಿಸಿದಳು."[೧೨]

ಇಲ್ಲಿ ಭೂ ಹೋರಾಟ ಕುರಿತು ಎರಡು ಬಹುಮುಖ್ಯ ಘೋಷಿತ ವಾಕ್ಯವನ್ನು ಗಮನಿಸಬಹುದು. ಬಡವರೇ ಭೂಮಿಯ ಒಡೆಯರು ಮತ್ತು ದುಡಿಯೋರೇ ಒಡೇರು ಈ ಎರಡು ಘೋಷಿತ ವಾಕ್ಯಗಳು ಭೂ ಸಮಸ್ಯೆಗೆ ಅರ್ಥಪೂರ್ಣವಾದ ಪರಿಹಾರವನ್ನು ಹೋರಾಟದ ಮೂಲಕ ಸೂಚಿಸಲು ಯತ್ನಿಸಿವೆ. ಈ ಹೊಸ ಪರಿಕಲ್ಪನೆಯನ್ನು ಜಾಗತಿಕ ಸಂದರ್ಭದಲ್ಲಿ ನೀಡುವುದರ ಹಿಂದೆ, ಈ ಹೋರಾಟದ ಅರ್ಥಪೂರ್ಣತೆ ಅಡಗಿದೆ. ಇದು ಸಮಕಾಲೀನ ಸಂದರ್ಭಕ್ಕೆ ಹೊಸ ಸಮಸ್ಯೆಗೆ ಆರ್ಥಿಕ ಪರಿಹಾರ ಸೂಚನೆಯಾಗಿದೆ. ಜಾಗತಿಕ ಸಂದರ್ಭ ಭೂಸಮಸ್ಯೆ ಹೊಸ ಘೋಷಣೆಯ ಮೂಲಕ ಹೋರಾಟ ವ್ಯಕ್ತವಾಗುತ್ತಿದೆ.

ತನ್ನ ಊರಿನಲ್ಲಿ ಹೋರಾಟದ ಭೂಮಿಕೆ ಸಿದ್ಧವಾಗುತ್ತಿದ್ದುದನ್ನು ಕಂಡು ಊರ ಗೌಡ ನರಸಿಂಹರಾಯಪ್ಪ ಪಟ್ಟಣಕ್ಕೆ ಹೋಗಿ ಎಂ.ಎಲ್.ಎ. ಧರ್ಮಯ್ಯನವರನ್ನು ಕಾಣಲು ಹೋಗುತ್ತಾರೆ. ಧರ್ಮಯ್ಯ ಇವರನ್ನು ಕಂಡು ಧರ್ಮ ಕರ್ಮ ಇಲ್ದೆ ಇರೊ ಜನ ಗಲಾಟೆ ಮಾಡಿದ್ರೆ ಏನೂ ಆಗೋದಿಲ್ಲ ಎಂದು ಸಮಾಧಾನಿಸುತ್ತಾನೆ. ಅಲ್ಲದೆ ಒಂದೆರಡು ದಿನದಲ್ಲೇ ಎಲ್ಲಾ ತೀರ್ಮಾನ ಆಗುತ್ತೆ ಎಂದು ಹೇಳುತ್ತಾನೆ. ಈ ವಿದೇಶಿ ಬಂಡವಾಳ ಬರುತ್ತೆ ಅಂದ್ರೆ ಸರ್ಕಾರ ಏನು ಮಾಡುವುದಕ್ಕೂ ಸಿದ್ಧವಿದೆ ಎನ್ನುತ್ತಾನೆ. ಈ ಸಮಯದಲ್ಲಿ ನಾವು ಅಷ್ಟಿಷ್ಟು ಮಾಡ್ಕೊಂಡ್ರಾಯ್ತು ಎಂದು ಇವರಿಬ್ಬರು ಧೈರ್ಯ ತುಂಬಿ ಕಳುಹಿಸುತ್ತಾನೆ. ರೈತರ ಹಿತ ಬಲಿಗೊಡುವುದು, ಅವರ ಕನಸನ್ನು ಹೊಸಕಿ ಹಾಕುವುದು, ಹೋರಾಟವನ್ನು ತಣ್ಣಗೆ ಮಾಡುವ ತಂತ್ರ ಇವರದಾಗಿದೆ. ಇಲ್ಲಿ ಪ್ರಜಾಪ್ರಭುತ್ವದ ಕ್ರೌರ್ಯವು ವ್ಯಕ್ತವಾಗುವುದು ವಿದೇಶಿಬಂಡವಾಳದ ನೆಲೆಯಲ್ಲಿ ಎಂಬುದನ್ನು ಈ ಕಾದಂಬರಿ ಧ್ವನಿಸುತ್ತದೆ.

ವಿದೇಶಿ ಕಂಪೆನಿಯ ಜನರು ತೋಪಿನ ಮರಗಳನ್ನು ಕಡಿಯಲು ಮುಂದಾಗುತ್ತಾರೆ. ಇದನ್ನು ಈ ಹಟ್ಟಿಯ ಹೋರಾಟಗಾರರು ತಡೆಯಲು ಯತ್ನಿಸುತ್ತಾರೆ. ಇಂತಹ ಪ್ರಬಲ ವಿರೋಧದ ನಡುವೆಯೂ, "ಅದೆಂಗ್ರಿ ಬಿಡೋಕಾಗುತ್ತೆ. ಇವು ಕೋಟ್ಯಾಂತರ ರೂಪಾಯಿ ಹಾಕಿ ಇಲ್ಲಿ ಮೈನ್ಸ್ ಕಂಪೆನಿ ತೆಗೀತಾ ಅವ್ರೆ. ಈ ಏರಿಯಾ ಅನುಕೂಲವಾಗಿದೆ ಅಂತ ಪರೀಕ್ಷೆ ಮಾಡಿ ತಿಳ್ಕೊಂಡಿದಾರೆ. ಈ ತೋಪಿನ ಜಾಗ್ದಲ್ಲಿ ಆಫೀಸು ವಗೈರೆ ಎಲ್ಲಾ

ಮಾಡ್ತಾರೆ. ಈ ಬೆಟ್ಟದಲ್ಲೂ ಒಳ್ಳೆ ಗ್ರಾನೈಟ್ ಇದ್ಯಂತೆ. ಎಲ್ಲಕ್ಕೂ ಸರ್ಕಾರದ ಒಪ್ಪಿಗೆ ಇದೆ. ಯೂ ಕ್ಯಾನಾಟ್ ಗೋ ಆಗೈನೆಸ್ಟ್ ಲಾ ಆಫ್ ದಿ ಲ್ಯಾಂಡ್ ಎಂದು ಜೋರಾಗಿ ಒಂದೇ ಸಮನೆ ಹೇಳಿದ ಧರ್ಮಯ್ಯ ಸರಿಯಾಗಿ ಹೇಳಿದ್ದೇನೆ ಎಂಬಂತೆ ಬಿಳಿಸಾಹೇಬರ ಕಡೆ ನೋಡಿದ. ಅವರು ತಲೆಯಾಡಿಸಿದಾಗ ಸಂತೋಷಿಸಿದ."[೧೩]

ಇಲ್ಲಿನ ಭೂ ಸಂಪತ್ತನ್ನು ಕೊಳ್ಳೆ ಹೊಡೆಯಲು ವಿದೇಶಿ ಕಂಪೆನಿಗಳಿಗೆ ದೇಶದ ಹಿತ ಮತ್ತು ರೈತರ ಹಿತವನ್ನು ಬಲಿಕೊಟ್ಟು ತಮ್ಮ ಸ್ವಾರ್ಥ ಹಿತವನ್ನಷ್ಟೇ ಕಾಪಾಡಿಕೊಳ್ಳುವ ಹುನ್ನಾರ ಇಲ್ಲಿ ಕಾಣುತ್ತೇವೆ. ಪ್ರಜಾಪ್ರಭುತ್ವ ವ್ಯವಸ್ಥೆಯ ಸ್ಥಳೀಯ ನಾಯಕನ ಆಡಳಿತಶಾಹಿಧೋರಣೆ ಮತ್ತು ಪುರೋಹಿತಶಾಹಿ ಹಾಗೂ ಭೂಮಾಲೀಕ ವ್ಯವಸ್ಥೆ ಇವುಗಳನ್ನು ವಿದೇಶಿ ಬಂಡವಾಳಶಾಹಿ ವ್ಯವಸ್ಥೆಯ ನಿಯಂತ್ರಿಸುತ್ತಿರುವುದನ್ನು ಕಾಣಬಹುದು. ಇವಿಷ್ಟು ಸೇರಿ ಬಡರೈತನ ಭೂಮಿಯನ್ನು ಕಸಿಯುವ ತಂತ್ರವಿದೆ.

ಇದಕ್ಕೆ ಪ್ರತಿಯಾಗಿ ಚಳುವಳಿಗಾರರು ಹಾಗೂ ಚಳುವಳಿ ನಾಯಕ ಸೂರ್ಯ ಆಸ್ಫೋಟಿಸುತ್ತಾನೆ. "ಯಾವ್ದು ಲಾ ಆಫ್ ದಿ ಲ್ಯಾಂಡ್ ದುಡಿಯೋರ್ಗೆ ಭೂಮಿ ವಂಚನೆ ಮಾಡೋದು ಲಾ ಆಫ್ ದಿ ಲ್ಯಾಂಡ್ ಈ ತೋಪನ್ನೆಲ್ಲಾ ಬೆಳ್ಸಿರೋ ಜನರಿಂದ ಅದನ್ ಕಿತ್ಕೋಳ್ಳೋದು ಈ ನೆಲದ ಕಾನೂನ ಪೋಲಿಸ್ನೋರ್ ಹತ್ರ ಬಡಿಸೋದು ಈ ನೆಲದ ಪುಣ್ಯಾನ ದಲಿತ್ರನ್ನ, ಬಡವರನ್ನ ಹೆಣಮಾಡಿ ಅಧಿಕಾರ ನಡ್ಸೋದು ನಿಮ್ಮ ಮೋಕ್ಷ ಸಾಧನೇನ ಹೇಳಿ ಸ್ವಾಮಿ ಹೇಳಿ. ಈ ಜನ ಏನ್ ತಪ್ ಮಾಡಿದಾರೆ ಹೇಳಿ, ಬಸುರಿ ಥರಾ ಬೆಳೆದು ನಿಂತಿರೊ ಈ ಮರಗಳ್ನ ಕಡೀ ಬೇಡಿ ಅನ್ನೋದು ತಪ್ಪಾ."[೧೪]

ಹೋರಾಟಗಾರ ಸೂರ್ಯ ಈ ಮೂರು ಮಂದಿಗೆ ಕಾನೂನಿನ ಮೂಲಕ ಪ್ರಶ್ನಿಸುತ್ತಾನೆ.ಸೂರ್ಯ ಇಂತಹ ತಾತ್ವಿಕ ಪ್ರಶ್ನೆಗಳನ್ನು ಕೇಳುವ ಮೂಲಕ ಪುರೋಹಿತಶಾಹಿ, ಬಂಡವಾಳಶಾಹಿ, ಪ್ರಜಾಪ್ರಭುತ್ವವ್ಯವಸ್ಥೆಯನ್ನೇ ಪ್ರಶ್ನಿಸುತ್ತಾನೆ. ಇಂತಹ ಪ್ರತಿಭಟನೆಗಳನ್ನು ಸಹಜವಾಗಿ ನಿರೀಕ್ಷಿಸಿದ್ದ ಈ ಪಡೆಗಳು ಹೋರಾಟವನ್ನು ಹತ್ತಿಕ್ಕುವ ಸರಳವಿಧಾನ ಕಂಡುಕೊಂಡಿತ್ತು. ಈ ಹಿನ್ನೆಲೆಯಲ್ಲಿ ಪೊಲೀಸ್ ಪಡೆಯಿಂದಲೇ ಹೋರಾಟಗಾರರನ್ನು ಹತ್ತಿಕ್ಕುವ ಯತ್ನ ನಡೆಯುತ್ತದೆ.ಈ ಮಾತಿನ ಚಕಮಕಿ ನಡೆಸುವ ಸಂದರ್ಭಕ್ಕೆ ಸೂರ್ಯ ಭಾಗವಹಿಸಿದ್ದ ಸೂರ್ಯನನ್ನು ಯಾವುದೋ ಕೊಲೆ ಕೇಸಿನಲ್ಲಿ ಪೊಲೀಸರು ಬಂಧಿಸಿ ನಗರಕ್ಕೆ ಕರದೊಯ್ಯುತ್ತಾರೆ.

"ನಾನ್ ಮತ್ತೆ ಬಂದೇ ಬರ್‍ತೀನಿ.ಹೋರಾಟ ಮಾಡೋರ್ಗೆ ಸುಳ್ಳು ಆರೋಪ ಹೊರ್‍ಸೋದು ನಮ್ ದೇಶದ ಒಂದು ಸಂಪ್ರದಾಯ ಸರ್ಕಾರದ ಸಂಪ್ರದಾಯ. ಈಗ ತೋಪು, ಬಯಲು ಎಲ್ಲಾ ಬೇಕು ಅಂತ ನೀವ್ ಕೇಳಿದ್ದಕ್ಕೆ ನನ್ ಕೈಯ್ಯಿಗ್ ಕೋಳ ಹಾಕಿದಾರೆ. ಆದ್ರೆ ನೀವು ಯಾವತ್ತೂ ನಮ್ ತೋಪನ್ನ ಬಿಟ್‌ಕೊಡ್‌ಬೇಡಿ. ಭೂಮಿ ಬಿಟ್ ಕೊಡ್‌ಬೇಡಿ. ಚನ್ನಾಗ್ ನೆನಪಿರ್‍ಲಿ. ನಾನ್ ಬರ್‍ತೀನಿ."[೧೫] ಹೋರಾಟವನ್ನು ಮುರಿಯುವ ಹೊಸ ತಂತ್ರ ಜಾಗತಿಕ ಸಂದರ್ಭದಲ್ಲಿ ತುಂಬ ಸರಳವಾಗಿ ಕಂಡುಕೊಂಡಿದೆ. ಈ ಹೋರಾಟ ನೇತೃತ್ವದ ನಾಯಕನನ್ನು ಬಂಧಿಸುವ ಮೂಲಕ ಹೋರಾಟವನ್ನು ತಣ್ಣಗೆ ಮಾಡುವ ತಂತ್ರವನ್ನು ಕಂಡುಕೊಂಡಿದೆ. ಇಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯ ಆಡಳಿತ ಕ್ರೌರ್ಯ, ಬಂಡವಾಳಶಾಹಿ ಶಕ್ತಿಯಬೆಂಬಲ, ರಾಜಕೀಯ ಹಿತಾಸಕ್ತಿಯಿಂದಾಗಿ,ಹೋರಾಟಗಾರ ಸೂರ್ಯ ಮರಳಿ ಹೆಣವಾಗಿ ಶಬರಿಯ ಕೇರಿಗೆ ಬರುತ್ತಾನೆ.

ಸೂರ್ಯನ ನಂತರದಲ್ಲೂ ನವಾಬ ಮತ್ತು ಶಬರಿ ಚಳವಳಿಯ ನೇತೃತ್ವ ವಹಿಸುತ್ತಾರೆ. ಇವರು ಪತ್ರವನ್ನು ಬರೆದು ಮನವಿ ಸಲ್ಲಿಸಲು ಹೊರಡುತ್ತಾರೆ. ಈ ಮನವಿಯಲ್ಲಿ ಬುಡಕಟ್ಟಿನ ಸ್ಥಿತಿಗತಿ, ಅವರಿಗೆ ಭೂಮಿ ಕೊಡಲೇಬೇಕೆಂಬ ಒತ್ತಾಯ, ಯಾವ ಕಾರಣಕ್ಕೂ ತೋಪನ್ನಾಗಲಿ ಪಕ್ಕದ ಬಯಲನ್ನಾಗಲಿ, ಬೆಟ್ಟ ಗುಡ್ಡ ಪ್ರದೇಶವನ್ನಾಗಲಿ ವಿದೇಶಿ ಕಂಪನಿಗೆ ಕೊಡಬಾರದೆಂಬ ಆಗ್ರಹ ಇತ್ತು. ಈ ಭೂಮಿಯನ್ನು ಉಳಿಸಿಕೊಳ್ಳುವ ಸಲುವಾಗಿ ಕೇರಿಯ ಜನರ ಸಹಿ ಸಂಗ್ರಹಿ ಜಮೀನ್ದಾರನಿಗೆ ಅರ್ಜಿ ಕೊಡುತ್ತಾರೆ. ಅಲ್ಲದೆ ನಗರಕ್ಕೆ ಹೋಗಿ ಮಂತ್ರಿಗಳಿಗೆ, ಎಂ.ಎಲ್.ಎ.ಗಳಿಗೆ ಕಂಡು ಅರ್ಜಿ ಕೊಟ್ಟು, ಈ ಭೂಮಿಯನ್ನು ಯಾವುದೇ ಕಾರಣಕ್ಕೂ ವಿದೇಶಿಕಂಪೆನಿಗೆ ಕೊಡಬಾರದು ಎಂದು ತಮ್ಮ ಪತ್ರದಲ್ಲಿ ತಿಳಿಸಿ, ಬರುತ್ತಾರೆ.

ಅಷ್ಟರಲ್ಲಾಗಲೇ ಬಹುರಾಷ್ಟ್ರೀಯ ಕಂಪೆನಿಯೊಂದರ ನಾಮಫಲಕ ಆಜಾಗದಲ್ಲಿ ಸ್ಥಾಪಿಸಲಾಗಿರುತ್ತದೆ. ಆ ಒಡೆಯ ಎಲ್ಲಿ, ಶಬರಿ ಕೇಳಿದಳು. "ಯಾವ್ ಒಡೆಯರು ಪೊಲೀಸ್ ಅಧಿಕಾರಿ ಕೇಳಿದ ಊರ್ನಲ್ಲಿರೊ ಹಳೆ ಒಡೆಯಾನೊ ಈ ಬೋರ್ಡ್ ಹಾಕಿರೊ ಹೊಸ ಒಡೆಯಾನಾ ಎಂದು ಕೇಳುತ್ತಾಳೆ. ಇದಕ್ಕೆ ಪ್ರತಿಕ್ರಿಯೆಯಾಗಿ,

ಯಾರೋ ಒಬ್ಬ ಈ ತೋಪಿನ್ ಜೀವ ತೆಗ್ದೋನು ಶಬರಿ ಸಂಕಟದಿಂದ ಸ್ಫೋಟಿಸಿದಳು."

ಜಾಗತಿಕ ಶಕ್ತಿಯ ಮುಂದೆ ಸ್ಥಳೀಯ ಶಕ್ತಿಯ ತಂತ್ರದ ಮುಂದೆ ಸ್ಥಳೀಯ ಹೋರಾಟ ನಿಲ್ಲದೆ ಹೋಗುವುದನ್ನು ಈ ಕಾದಂಬರಿ ಧ್ವನಿಸಿದೆ. ತನ್ನ ಪ್ರೀತಿಯ ಕರುಳುಬಳ್ಳಿಯಾಗಿ, ಶಬರಿಯ ಉಡಿಯೊಳಗೆ ಸೂರ್ಯನ ಕುಡಿ ಚಿಗುರುತ್ತಿದೆ . ಇತ್ತ ಸೂರ್ಯನ ಸಾವು ಚಳುವಳಿಗಾರರೆಲ್ಲರಿಗೂ ಬರಸಿಡಿಲಂತೆರಗಿ ದಿಕ್ಕೆಡಿಸುತ್ತದೆ. ಚಳುವಳಿಗಾರೆಲ್ಲರೂ ಶಬರಿ ಇದ್ದ ಊರಿಗೆ ವಾಹನದಲ್ಲಿ ಆತನ ಶವವನ್ನು ತರುತ್ತಾರೆ. ತನ್ನ ಪ್ರೀತಿಯ ಜೀವ ಹೋರಾಟಗಾರ, ತನ್ನ ಬದುಕಿಗೆ ಸೂರ್ಯನಂತೆ ಬಂದು ಬೆಳಕಾಗಿದ್ದ, ಸೂರ್ಯ ಸತ್ತು ಶವವಾಗಿ ಹಿಂತಿರುವುದು ಶಬರಿಯ ಸಂಕಟ ಮುಗಿಲು ಮುಟ್ಟುತ್ತದೆ.ಈ ಸನ್ನಿವೇಶದಲ್ಲಿ ಶಬರಿ ತಾಳಿದ ನಿಲುವು, ದಿಟ್ಟತೆ, ಶಬರಿ ಅಂತಃಶಕ್ತಿಯ ಪ್ರತೀಕದಂತೆ ಕಂಡುಬರುತ್ತಾಳೆ. ಬಹುರಾಷ್ಟ್ರೀಯ ಕಂಪೆನಿಯ ದೈತ್ಯ ಶಕ್ತಿಯ ಬರವು ಚಳುವಳಿಯನ್ನು ಮುರಿಯುವ ಸಂಚುಗಳು ಚಳವಳಿಯನ್ನು ವಿಫಲ ಮಾಡಲು ಯತ್ನಿಸುತ್ತವೆ. ಆದರೆ ಸೂರ್ಯನ ಆಶಯದಂತೆ ಉಳಿದ ಜನರು ಚಳುವಳಿಯ ನೇತೃತ್ವವಹಿಸಿಕೊಂಡು ಹೋರಾಟ ನಡೆಸುತ್ತಾರೆ.

ಭೂಮಿಗಾಗಿ ಜಾಗತಿಕ ಶಕ್ತಿಗಳ ವಿರುದ್ಧ ಸ್ಥಳೀಯ ಶಕ್ತಿಗಳು ಹೋರಾಟ ನಡೆಸುವುದು ಮತ್ತು ಅದನ್ನು ಸಮರ್ಥವಾಗಿ ಎದುರಿಸುವ, ಭೂ ಹೋರಾಟದ ತಾತ್ವಿಕ ಚೌಕಟ್ಟನ್ನು ಒಳಗೊಂಡಿ ಕಾದಂಬರಿಯ ಆಶಯವಾಗಿದೆ. ಈ ಕಾದಂಬರಿಯಲ್ಲಿ ಬರುವ ಹುಚ್ಚೀರ, ಸಣ್ಣೀರ, ತಿಮ್ಮರಾಯಿ, ಪೂಜಾರಪ್ಪ ಪಾತ್ರಗಳು ಶಿಕ್ಷಣದ ಮತ್ತು ಅರಿವಿನ ಮೂಲಕ ಹೋರಾಟದಲ್ಲಿ ದನಿ ಎತ್ತುವುದನ್ನು ಗಮನಿಸಬಹುದಾಗಿದೆ.ಈ ಹಿನ್ನೆಲೆಯಲ್ಲಿ ಭೂ ಹೋರಾಟವು ಜಾಗತಿಶಕ್ತಿಯ ವಿರುದ್ಧ ಅಥವಾ ಕಾರ್ಪೂರೇಟ್ ತಂತ್ರದ ವಿರುದ್ಧ, ಸ್ಥಳೀಯ ಹೋರಾಟಗಾರರು ಹೋರಾಟವನ್ನು ನಡೆಸುವುದನ್ನು ಈ ಕಾದಂಬರಿ ಧ್ವನಿಸಿದೆ. ಈ ಚಳುವಳಿಯನ್ನು ಮುರಿಯುವ ತಂತ್ರಗಳನ್ನು ಈ ಕಾದಂಬರಿಯಲ್ಲಿ ತಂತ್ರಗಳಿಗೆ ಪ್ರತಿಯಾಗಿ ಹೊಸ ಬಗೆಯ ಹೋರಾಟದ ಸಿದ್ಧತೆಯನ್ನು ಮಾಡಿಕೊಳ್ಳುವ ಧೋರಣೆಯನ್ನು ಹೊಮ್ಮಿಸಿದೆ.

"ಸೂರ್ಯ" ಕಾದಂಬರಿಯಲ್ಲಿ ಜಮೀನ್ದಾರಿ ವಿರುದ್ಧ ಸಂಘರ್ಷವನ್ನು ಈ ಕಾದಂಬರಿಯಲ್ಲಿ ಕಾಣುತ್ತೇವೆ. ಈ ಭೂಮಾಲೀಕನ ನಪುಂಸಕತನಕ್ಕೆ ಪ್ರತಿಯಾಗಿ ಕಥಾನಾಯಕಿ ಸೀತಕ್ಕೆ ಸವಾಲಾಗುವ ಚಿತ್ರಣವಿದೆ. ಈ ಕಾದಂಬರಿಯಲ್ಲಿ ಜಮೀನ್ದಾರನ ಎರಡನೇ ಹೆಂಡತಿಯಾಗಿ ಬರುವ ಸೀತಕ್ಕ ಜಮೀನ್ದಾರಿಕೆಯ ದರ್ಪ ದೌರ್ಜನ್ಯವನ್ನು ಮಟ್ಟ ಹಾಕುತ್ತಾಳೆ. ಜಮೀನ್ದಾರನ ಗಂಡುಸುತನಕ್ಕೆ ಸವಾಲಾಗಿ ಎರಡನೆ ಹೆಂಡತಿ ಸೀತಕ್ಕೆ ಊರಿನ ಹಿಡಿತವನ್ನು ತನ್ನಲ್ಲಿ ತೆಗೆದುಕೊಳ್ಳುತ್ತಾಳೆ. ನ್ಯಾಯದ ಪರವಾಗಿ ನಿಂತು ಊರಿಗೆ ನ್ಯಾಯವನ್ನು ಹೇಳುವಂತಹ ಮಹಿಳಾಶಕ್ತಿಯಾಗಿ ಸೀತಕ್ಕ ಬರುತ್ತಾಳೆ. ಕರಿಯ ಮತ್ತು ಆತನ ಹೆಂಡತಿ ಜಮೀನ್ದಾರನ ಮನೆಯಲ್ಲಿ ಹಗಲಿರಳು ದುಡಿಯುತ್ತಾರೆ. ಕರಿಯನ ಅಣ್ಣನ ಹೆಂಡತಿ ಮಾರಕ್ಕ ತನ್ನ ಮೈದುನ ಕರಿಯನ ಮೇಲೆ ಮೋಹಗೊಂಡು ಆಕೆಯೂ ಅವನ ಮೇಲೆ ಆರೋಪ ಹೊರಿಸುತ್ತಾಳೆ. ಈ ವಿಚಾರಕ್ಕಾಗಿ ಜಮೀನ್ದಾರನ ಬಳಿಗೆ ಹೋದಾಗ ಆತನ ತೀರ್ಮಾನ ಕರಿಯನ ವಿರುದ್ಧವಾಗಿರುತ್ತದೆ. ಈ ಕುರಿತು ಜಮೀನ್ದಾರನ ಹೆಂಡತಿ ಸೀತಕ್ಕ ಮಧ್ಯ ಪ್ರವೇಶ ಮಾಡಿ ಏನನ್ನೂ ಮಾಡದ ಕರಿಯನಿಗೆ ನ್ಯಾಯ ದೊರಕಿಸಿಕೊಡುತ್ತಾಳೆ.

ಈ ಕಾರಣಕ್ಕಾಗಿ ಜಮೀನ್ದಾರ ತನ್ನ ಊಳಿಗಮಾನ್ಯಶಾಹಿಯ ದರ್ಪ ಕುಸಿಯುವ ಚಿತ್ರಣವಿದೆ. ಅಲ್ಲದೆ ಎರಡನೇ ಹೆಂಡತಿ ಸೀತಕ್ಕನಿಂದ ತುಂಬಿದ ಸಭೆಗಳಲ್ಲಿ ಅವಮಾನಕ್ಕೊಳಗಾಗುವವುದರಿಂದ ಗೌಡ ಪರಿತಪಿಸುತ್ತಾನೆ. ಕರಿಯನ ಹೆಂಡತಿ ಚೆನ್ನಿ ತುಂಬು ಬಸುರಿ. ಜಮೀನ್ದಾರ ರಾತ್ರಿ ಕರಿಯನ ಮನೆಗೆ ನುಗ್ಗಿ ಆತನ ಬಸುರಿ ಹೆಂಡತಿ ಚೆನ್ನಿಯ ಮೇಲೆ ಅತ್ಯಾಚಾರ ಮಾಡಿ ಭೂಮಾಲೀಕ ಕೊಲೆಗೈಯ್ಯುತ್ತಾನೆ. ಭೂಮಾಲೀಕ ತಿಳಿಸದೇ ಇರುವಂತೆ ಬೆದರೆ ಒಡ್ಡುತ್ತಾನೆ. ಭೂಮಾಲೀಕನ ಬಂದೂಕಿನ ಬೆದರಿಕೆಯಿಂದ ತನ್ನ ಹೆಂಡತಿಯನ್ನ ತಾನೇ ಕೈಯಾರೆ ಬಾವಿಗೆ ಎಸೆಯುತ್ತಾನೆ. ಕರಿಯನಿಗೆ ಎಲ್ಲೂ ಹೇಳದಂತೆ ಬಂದೂಕಿನ ಬೆದರಿಕೆ ಹಾಕುತ್ತಾನೆ. ಪುಡಾರಿ ರಾಮಣ್ಣನ ಸಹಾಯದಿಂದ ಜಮೀನ್ದಾರ ಈ ಕೊಲೆಯನ್ನು ಮುಚ್ಚಿ ಹಾಕಲು ಯತ್ನಿಸುತ್ತಾನೆ. ಈ ಕೊಲೆಗೆ ಕರಿಯನೇ ಕಾರಣ ಎಂಬುದಾಗಿ ಊರಿನ ಜನ ಗುಸುಗುಸು ಸುದ್ದಿಯಾಗುವಂತೆ ನೋಡಿಕೊಳ್ಳುತ್ತಾನೆ.

ಆದರೆ ಜಮೀನ್ದಾರನನ್ನು ಕರಿಯ ನೋಡುವ ನೋಟದಲ್ಲಿ ಭೂಮಾಲೀಕನಿಗೆ ಭಯ ತರಿಸುತ್ತದೆ. ಆದರೂ ಆತನ್ನು ಆಳುಗಳ ಸಹಾಯದಿಂದ ಹಿಡಿದು ತಂದು ಪಂಚಾಯ್ತಿ ಮಾಡುವ ನೆಪದಲ್ಲಿ ಪಂಚಾಯ್ತಿ ಕಟ್ಟೆಗೆ ಕರೆತರುತ್ತಾನೆ. ಈ ಪಂಚಾಯ್ತಿ ಸೇರಿದ ಜನ ಒಂದೊಂದು ರೀತಿ ಮಾತಾಡಿಕೊಳ್ಳುತ್ತಿದ್ದ ಸಂದರ್ಭದಲ್ಲಿಯೇ

ಮತ್ತೊಮ್ಮೆ ಜಮೀನ್ದಾರನ ಹೆಂಡತಿಯ ಪ್ರವೇಶವಾಗುತ್ತದೆ. ಕರಿಯನೇ ತಪ್ಪಿತಸ್ಥ ಎಂದು ನಿರ್ಧಾರವಾಗುವ ಹೊತ್ತಿಗೆ ಸೀತಕ್ಕನ ಪ್ರವೇಶವಾಗುವುದರಿಂದ ಇಲ್ಲಿನ ಚಿತ್ರಣವೇ ಬದಲಾಗುತ್ತದೆ. ಜಮೀನ್ದಾರನ ಹೆಂಡತಿ ಸೀತಕ್ಕ ಘಟನೆ ನಡೆದ ಸತ್ಯಾಂಶವನ್ನೆ ಪಂಚಾಯ್ತಿಮುಂದೆ ಹೇಳಿದಾಗ ಜಮೀನ್ದಾರ ಹುಚ್ಚನಂತೆ ಸುತ್ತಾಡುತ್ತಾನೆ. ಕೊನೆಗೆ ತನ್ನ ಕೋಣೆಗೆ ಹೋಗಿ ತನ್ನ ಬಂದೂಕಿನಲ್ಲಿ ತನ್ನನ್ನು ತಾನು ಸುಟ್ಟುಕೊಳ್ಳುತ್ತಾನೆ.

ಊಳಿಗಮಾನ್ಯಶಾಹಿ ವ್ಯವಸ್ಥೆಯು ಪತನಗೊಳ್ಳುತ್ತಿರುವ ಚಿತ್ರಣವನ್ನು ಇಲ್ಲಿ ಕಾಣಬಹುದಾಗಿದೆ. ಜಮೀನ್ದಾರನ ಶೋಷಣೆ ಜಮೀನ್ದಾರಿಕೆಯ ನಾಶದ ಆಶಯವನ್ನು ಈ ಕಾದಂಬರಿಯು ಧ್ವನಿಸುತ್ತದೆ.

**"ಒಂದು ಊರಿನ ಕಥೆ"** ಕಾದಂಬರಿಯಲ್ಲಿ ಊಳಿಗಮಾನ್ಯಶಾಹಿವ್ಯವಸ್ಥೆಗೆ ಸವಾಲೊಡ್ಡುವ ಚಿತ್ರಣವನ್ನು ಕಾಣುತ್ತೇವೆ. ಈ ಊರಿನ ಕ್ರಾಂತಿಕಿಡಿಯಾಗಿರುವ ರಾಮು ಜಮೀನ್ದಾರಿಕೆ, ಪಾಳೆಗಾರಿಕೆ ವ್ಯಕ್ತಿತ್ವವನ್ನು ಮಟ್ಟಹಾಕಲು ಯತ್ನಿಸುತ್ತಾನೆ. ಸಂಘಟನಾತ್ಮಕ ಹೋರಾಟವನ್ನು ಕಟ್ಟುವ ಮೂಲಕ ತನ್ನ ಅರಿವಿನ ಪ್ರಜ್ಞೆಯಿಂದಾಗಿ ಊರಿನ ಕೆಳವರ್ಗದ ಜನರ ಕಣ್ಣು ತೆರೆಸುತ್ತಾನೆ.

ಊರಿನ ಮುಖಂಡರಾದ ಪಟೇಲ್ ತಿಮ್ಮೇಗೌಡ, ಬಸವಯ್ಯ, ಜೋಯಿಸರು ಬಹುಕಾಲದಿಂದಲೂ ಊರಿನ ಪಂಚಾಯ್ತಿ ತೀರ್ಮಾನ ಮಾಡುವವರಾಗಿದ್ದು. ಇತರೆ ವರ್ಗದವರಿಗೆ ಯಾವುದೇ ಅವಕಾಶವಿರುವುದಿಲ್ಲ. ರಾಮು ಗೌರಿಯನ್ನು ಮುಟ್ಟಿದ್ದ ವಿಚಾರದಲ್ಲಿ ಪಂಚಾಯ್ತಿ ಸೇರುತ್ತದೆ. ಆಗ ಎಲ್ಲಾ ಜನಾಂಗಕ್ಕೂ ಪಂಚಾಯ್ತಿ ಸದಸ್ಯರಾಗಿ ಸ್ಥಾನ ನೀಡಬೇಕೆಂಬ ಪ್ರಶ್ನೆ ಮುಖ್ಯವಾಗುತ್ತದೆ. ಆ ಗ ಈ ಹೊಸ ವಿಚಾರ ಪಟೇಲನಿಗೆ ನುಂಗಲಾರದ ತುತ್ತಾಗುತ್ತದೆ. ಈ ಊರಿನಲ್ಲಿ ಪ್ರಗತಿಪರವಾಗಿ ಆಲೋಚಿಸುವ ಬಸವಯ್ಯ ಕೃಷ್ಣಪ್ಪ , ಹನುಮಯ್ಯ, ಭೈರಪ್ಪನವರಿಗೆ ಪಂಚಾಯ್ತಿ ಕಟ್ಟೆಯಲ್ಲಿ ಸ್ಥಾನ ನೀಡಬೇಕೆಂಬ ಒತ್ತಾಯಬರುತ್ತದೆ.

ಈ ವಿಚಾರ ತಿಳಿದು ಪಟೇಲರು ತಮ್ಮ ಸ್ಥಾನಕ್ಕೆ ಕುತ್ತು ಬರಬಹುದೆಂಬ ಆತಂಕದಿಂದ ತಮ್ಮ ಕುಟಿಲ ತಂತ್ರದ ಮೂಲಕ ತಪ್ಪಿಸಿಕೊಳ್ಳುವ ಯತ್ನ ನಡೆಯುತ್ತದೆ. ಆದರೆ ಆಯಾ ಜನಾಂಗದ ಜನರು ಸೇರಿ ಪಂಚಾಯ್ತಿ ಕಟ್ಟೆಯಲ್ಲಿ ಎಲ್ಲಾ ವರ್ಗಕ್ಕೂ ಸ್ಥಾನ ನೀಡಬೇಕೆಂದು ಒತ್ತಾಯ ತರುತ್ತಾರೆ. ಆನಂತರದಲ್ಲಿ ಪಟೇಲ್ ತಿಮ್ಮೇಗೌಡ, ಬಸವಯ್ಯ, ಜೋಯಿಸರು, ತೀರ್ಮಾನಿಸಿದಂತೆ ಈ ಕೆಳವರ್ಗದ ಎಲ್ಲಾ ಸದಸ್ಯ ಮುಖಂಡರಿಗೆ ಪಂಚಾಯ್ತಿ ಕಟ್ಟೆಯಲ್ಲಿ ಸ್ಥಾನ ಸಿಗುವಂತಾಗುತ್ತದೆ. ಇಲ್ಲಿ ಪಂಚಾಯ್ತಿ ಸದಸ್ಯನಾಗುವ ಹನುಮ ಮದುವೆಯಾಗಬೇಕೆಂಬ ಷರತ್ತು ವಿಧಿಸಲಾಗುತ್ತದೆ. ಅದರಂತೆ ಕೃಷ್ಣಪ್ಪನ ಮಗಳು ಗೌರಿಯನ್ನು ಹನುಮಯ್ಯ ಮದುವೆ ಮಾಡಿಕೊಳ್ಳಲು ಷರತ್ತನ್ನುಹಾಕಿ ಅದಕ್ಕೆ ಒಪ್ಪುವಂತೆ ಮಾಡುತ್ತಾರೆ. ರಾಮು ಮಾಡದಿದ್ದ ತಪ್ಪಿನ ಅರಿವಾಗಿ ಹನುಮಯ್ಯ ಮದುವೆಗೆ ಒಪ್ಪುತ್ತಾನೆ.

ರಾಮು ಪ್ರೀತಿಸುತ್ತಿದ್ದ ಭೈರಪ್ಪನ ಮಗಳು ಪುಟ್ಟಿಯನ್ನು ಮದುವೆಯಾಗಲು ಇಚ್ಛಿಸುತ್ತಾನೆ. ನಂತರದಲ್ಲಿ ರಾಮು ಗೌರಿ ಮುಟ್ಟಿದ ಎಂಬ ಅವಮಾನಕ್ಕೆ ಪುಟ್ಟಿಯು ಮನನೊಂದಿರುತ್ತಾಳೆ. ಆದ್ದರಿಂದ ಆಕೆ ರಾಮುವನ್ನು ಮದುವೆಯಾಗಲು ಊರ ಹಿರಿಯ ಮುಖಂಡರ ಪಂಚಾಯ್ತಿ ಎದುರೇ ನಿರಾಕರಿಸುತ್ತಾಳೆ. ಆದರೂ ಪಂಚಾಯ್ತಿ ಹಿರಿಯರು ಒಪ್ಪಿಸಲು ಯತ್ನಿಸುತ್ತಾರೆ. ಇದರ ಪರಿಣಾಮವಾಗಿ ಪುಟ್ಟಿಯು ಮಾರನೇ ದಿನವೇ ಗಂಗೀಹಳ್ಳದಲ್ಲಿ ಬಿದ್ದು ಪ್ರಾಣ ಬಿಡುತ್ತಾಳೆ.

ಈ ಊರಿನ ಬದಲಾವಣೆಗೆ ಕಾರಣನಾದ ರಾಮು ಕ್ರಾಂತಿಕಾರನಾಗಿ ಕತೆಯಲ್ಲಿ ಕಂಡುಬರುತ್ತಾನೆ. ಅಲ್ಲದೆ ಊರಿನ ಭೂಮಾಲೀಕ ಪಟೇಲನ ಕುತಂತ್ರಗಳು ಮುಂದೆ ನಡೆಯದಂತೆ ಎಲ್ಲಾ ವರ್ಗದವರಿಗೂ ನಾಯಕತ್ವ ನೀಡಲಾಗುತ್ತದೆ. ಇಂತಹ ಸನ್ನಿವೇಶದಿಂದ ಭೂಮಾಲೀಕತ್ವ ಅಳಿದು, ಗ್ರಾಮಗಳಲ್ಲೂ ಪ್ರಜಾಪ್ರಭುತ್ವ ವ್ಯವಸ್ಥೆ ಅಸ್ತಿತ್ವಕ್ಕೆ ಬರುತ್ತದೆ. ಇಲ್ಲಿ ಊರಿನ ಪಟೇಲನ ಸ್ಥಾನ ಬಿಟ್ಟು ಕೊಟ್ಟ ನಂತರದಲ್ಲಿ ಹಳ್ಳಿ ಎಲ್ಲಾ ವರ್ಗದವರಿಗೆ ಅಧಿಕಾರ ದೊರುಕುತ್ತದೆ. ಜಮೀನ್ದಾರಿಕೆಯ ಅವಸಾನದ ವಸ್ತುಸ್ಥಿತಿಯು ಈ ಕಾದಂಬರಿಯಲ್ಲಿ ವ್ಯಕ್ತಗೊಳಿಸುತ್ತದೆ.

**"ಎದುರಾಳಿ"** ಕತೆ ಭೂಮಾಲೀಕನ ಶೋಷಣೆ ಕುರಿತು ಅರಿವನ್ನು ಮೂಡಿಸಿ,ಇಡೀ ಊರನ್ನೇ ಸಾಂಸ್ಕೃತಿಕವಾಗಿ ಎಚ್ಚರಗೊಳಿಸುತ್ತದೆ. ಈ ಕತೆಯ ನಾಯಕ ರಂಗಪ್ಪ ಪದವೀಧರನಾಗಿದ್ದು, ಈತ ಶೋಷಿತರ ಪರವಾಗಿದ್ದು, ಸಮಾಜದಲ್ಲಾಗುವ ಅನ್ಯಾಯದ ವಿರುದ್ಧ ತಿಳುವಳಿಕೆ ಮೂಡಿಸುವ ಬಂಡಾಯ ಮನೋಭಾವದವನಾಗಿದ್ದಾನೆ. ಇತ್ತ ಭೂಮಾಲೀಕ ಜಯಣ್ಣನ ದರ್ಪ, ಅನ್ಯಾಯ, ಅಹಂಕಾರವನ್ನು ಪ್ರತಿಭಟಿಸಲು

ಊರಿನ ಜನತೆ ರಂಗಪ್ಪನನ್ನು ನಾಯಕನನ್ನಾಗಿ ಒಪ್ಪಿಕೊಳ್ಳುತ್ತದೆ. ಕಥನಾಯಕ ಗೆಳೆಯನು ಪುಟ್ಟನರಸನ ಬದುಕಿಗೆ ಸ್ಪಂದಿಸುತ್ತಾ ಮತ್ತು ಆತನೊಂದಿಗೆ ಆತ್ಮೀಯವಾಗಿದ್ದಾನೆ. ಭೂಮಾಲೀಕ ಜಯಣ್ಣ ಪುಟ್ಟನರಸನ ಹತ್ತಿರಕ್ಕೆ ಚಪ್ಪಲಿ ಹೊಲಿಸಿಕೊಳ್ಳಲು ತನ್ನ ಆಳಿನ ಜೊತೆ ತನ್ನ ಮನಗೆ ಬರಲು ಆಹ್ವಾನಿಸಿರುತ್ತಾನೆ. ಆದರೆ ಅವನು ಬರೋದಿಲ್ಲಾ ಕಣಯ್ಯಾ ಹೋಗಿ ಹೇಳು ನಿನ್ನ ಜಮೀನ್ದಾರನಿಗೆ ಅವನೇನು ಕಡೀತಾನೆ ಕಡೀಲಿ ಎಂದು ನಾಯಕ ಪುಟ್ಟನರಸನ ಪರವಾಗಿ ಖಾರವಾಗಿ ಹೇಳಿ ಕಳುಹಿಸುತ್ತಾನೆ. ಈ ಸನ್ನಿವೇಶದಲ್ಲಿ ರಂಗಪ್ಪ ಪುಟ್ಟನರಸನ ನೆರವಿಗೆ ಬರುತ್ತಾನೆ. ಪುಟ್ಟನರಸ ತನ್ನ ಕಾಯಿಲೆಯಿಂದ ಬರಲಾಗದೆ ಇದ್ದುದರಿಂದ ಪುನಃ ಕಾಯಿಲೆ ವಾಸಿಯಾದ ನಂತರದಲ್ಲಿ ಆತನ ಮನೆಗೆ ಹೋಗಿ ಚಪ್ಪಲಿ ಹೊಲೆದು ಕೊಡುವುದಾಗಿ ಹೇಳುತ್ತಾನೆ. ಆಗ ಪುಟ್ಟನರಸನಿಗೆ ಭೂಮಾಲೀಕ ಅವಮಾನಿಸಿ, ಹೊಡೆದು ಕಳುಹಿಸುತ್ತಾನೆ. ಈ ವಿಚಾರ ತಿಳಿದ ರಂಗಪ್ಪ ತನ್ನ ಆಕ್ರೋಶ ವ್ಯಕ್ತಪಡಿಸುತ್ತಾನೆ. ಆದರೆ ಏನನ್ನೂ ಮಾಡಲಾಗದೆ ಕಥಾನಾಯಕ ಮೌನವಹಿಸಿ ಕಾಲಕ್ಕಾಗಿ ಕಾಯುತ್ತಾನೆ. ಆ ಕ್ಷಣಕ್ಕೆ ಪ್ರತಿಭಟಿಸಲು ಆಗದೆ, ರಂಗಪ್ಪನ ಆರ್ಥಿಕ ಸ್ಥಿತಿ ಕಾರಣವಾಗಿ, ಭೂಮಾಲೀಕನನ್ನು ಎದುರು ಹಾಕಿಕೊಳ್ಳಲಾಗದೆ, ಪಟ್ಟಣ ಸೇರಿಕೊಳ್ಳುತ್ತಾನೆ.

ಪುಟ್ಟನರಸನಿಗಾದ ಅವಮಾನವನ್ನು ರಂಗಪ್ಪ ನೆನಪಿಸಿಕೊಳ್ಳುತ್ತಾ, ಚಪ್ಪಲಿ ಹೊಲೀತೀವಿ ಅಂತ ಅದರಾಗೆ ಬಾರಿಸಿದ್ರೂ ತಿಂಬಾಕ್ಕಿಟ್ಟಿಲ್ಲ, ಮೈಮುಚ್ಕೊಕ್ ಬಟ್ಟೆಯಿಲ್ಲಾ ಅಂದ್ರೆ ಮಾನ ಮರ್ಯಾದೆನೂ ಇಲ್ವಾ ಈ ಮಾತುಗಳಿಂದ ರಂಗಪ್ಪನ ಸ್ವಾಭಿಮಾನ ಅನುರಣಿಸುತ್ತದೆ. ಆದರೆ ಚಪ್ಪಲಿಯಿಂದ ಹೊಡೆದಿದ್ದ ಭೂಮಾಲೀಕನನ್ನು ಕೊಲೆ ಮಾಡುವುದರ ಮೂಲಕ ಪುಟ್ಟನರಸ ತನ್ನ ಸೇಡನ್ನು ತೀರಿಸಿಕೊಂಡಿರುತ್ತಾನೆ. ರಂಗಪ್ಪ ಪಟ್ಟಣದಿಂದ ತನ್ನ ಹಳ್ಳಿಗೆ ಹಿಂದಿರುಗಿ ಭೂಮಾಲೀಕನ ವಿರುದ್ಧ ತಾನು ಸೇಡು ತೀರಿಸಿಕೊಳ್ಳಬೇಕೆಂಬ ಸಂಚನ್ನು ರೂಪಿಸಿರುತ್ತಾನೆ. ಆದರೆ ತನ್ನೂರಿಗೆ ಮರುಳುವುದರೊಳಗೆ ಪುಟ್ಟನರಸನೇ ಆ ಕೆಲಸ ಮಾಡಿ ಮುಗಿಸಿರುವುದು ಈತನಿಗೆ ಸಮಾಧಾನ ತರುತ್ತದೆ. ಆದರೆ ಭೂಮಾಲೀಕ ಜಯಣ್ಣ ಸತ್ತರೂ ಆತನ ಮಗ ಚಂದ್ರಣ್ಣನೂ ಸಹ ಅದೇ ಜಾಡನ್ನು ಹಿಡಿರುವುದನ್ನು ಕಾಣುತ್ತೇವೆ. ಭೂಮಾಲೀಕನ ಮಗನ ದೌರ್ಜನ್ಯ ಹಾಗೂ ಸಂಚಿನಿಂದ ಪುಟ್ಟನರಸ ಜೈಲು ಸೇರುವಂತಾಗಿರುತ್ತದೆ. ಈ ವಿಚಾರ ತಿಳಿದು ಕಥಾ ನಾಯಕ ಮರುಕಪಡುತ್ತಾನೆ. ಇಲ್ಲಿ ಪುಟ್ಟನರಸ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಿ ಗೆದ್ದರೂ, ಕೂಡಾ ಪುನಃ ಭೂಮಾಲೀಕತ್ವ ಆತನ ಮಗನಿಂದ ಸ್ಥಾಪಿತವಾಗುತ್ತದೆ. ಇಲ್ಲಿ ಭೂಮಾಲೀಕತ್ವದ ಕ್ರೌರ್ಯ, ದರ್ಪಗಳು ವಂಶಪರಂಪರೆಯಾಗಿ ಮುಂದುವರೆಯುವ ಪ್ರಕ್ರಿಯೆಯಾಗಿ ಈ ಕತೆಯಲ್ಲಿ ವ್ಯಕ್ತವಾಗಿದೆ. ಇಲ್ಲಿ ಭೂ ಪ್ರಶ್ನೆಗಿಂತ ಶೋಷಣೆಯ ಪ್ರಶ್ನೆ ಮುಖ್ಯವಾಗಿ ಕಂಡುಬರುತ್ತದೆ.

**ಮಳೆ, ಜನಪದ, ಕ್ಷಾಮ** ಕತೆಗಳಲ್ಲಿ ಮಳೆಯ ಜೊತೆಗೆ ವ್ಯವಸಾಯ ಸಂಬಂಧದ ಆಶಯಗಳು ಅಭಿವ್ಯಕ್ತಗೊಂಡಿವೆ. ಇದರ ಹಿಂದೆ ರೈತನ ಬೇಸಾಯದ ಕನಸಿದೆ, ರೈತನ ಬದುಕಿದೆ, ಭೂಮಿ ಪ್ರಶ್ನೆಯಿದೆ ಎಂಬುದಾಗಿ ಗುರುತಿಸಬಹುದಾಗಿದೆ.

**"ಜನಪದ"** ಕತೆಯಲ್ಲಿ ಮೂಲಭೂತವಾಗಿ ವೈಧಿಕಾಚರಣೆ ಮತ್ತು ಊಳಿಗಮಾನ್ಯಶಾಹಿ ವ್ಯವಸ್ಥೆಯಿಂದಾಗಿ ಇಡೀ ಊರನ್ನು ನಿಯಂತ್ರಣದಲ್ಲಿರಿಸಿಕೊಳ್ಳಲು ಯತ್ನಿಸುತ್ತದೆ. ಇಲ್ಲಿ ವೈಧಿಕಶಾಹಿ ಮತ್ತು ಊಳಿಗಮಾನ್ಯಶಾಹಿ ಶಕ್ತಿಗಳು ಇಡೀ ಊರಿನ ಹಸಿವು,ಅಳಿವು ಉಳಿವಿನ ಪ್ರಶ್ನೆಯಾಗಿ ಕಂಡುಬರುತ್ತದೆ. ಇಲ್ಲಿ ಪ್ರಕೃತಿಯ ಶಕ್ತಿಯ ಮುಂದೆ ಭೂಮಾಲೀಕ ಪುರೋಹಿತಶಾಹಿ ವರ್ಗ ಹಾಗೂ ರೈತ ಸಮುದಾಯವು ಎಲ್ಲರನ್ನು ಅಧೀನಗೊಳಿಸುತ್ತದೆ.

ಈ ಕತೆಯಲ್ಲಿ ಮಳೆಗಾಗಿ ಇಲ್ಲಿ ಕಂದಾಚಾರಗಳ ಆಚರಣೆಯನ್ನು ಕಾಣಬಹುದಾಗಿದೆ. ಮಳೆಯಿಲ್ಲದೆ ಬರಗಾಲ ಬಂದುದರಿಂದ ಭೂಮಾಲೀಕ ಚೇರ್‌ಮನ್‌ಚನ್ನಪ್ಪನ ಬಳಿ ಊರಿನ ರೈತರು ಮತ್ತು ದಲಿತರು ತಮ್ಮ ಸಂಕಷ್ಟವನ್ನು ಹೇಳಿಕೊಳ್ಳಲು ಬರುತ್ತಾರೆ. ಮಳೆ ಬರಲು ಜೋಯಿಸ ಮತ್ತು ಚನ್ನಪ್ಪ ಹಲವಾರು ಸಲಹೆಯನ್ನು ಕೊಡುತ್ತಾರೆ. ಆದರೆ ಯಾವುದೂ ಫಲಕಾರಿಯಾಗದೇ ಉಳಿಯುತ್ತದೆ. ಭೂಮಾಲೀಕನ ತಾಯಿಮಂಗಳಜ್ಜಿಯ ಸಲಹೆಯಂತೆ ಆಚರಣೆ ಮಾಡುವುದನ್ನು ಕಾಣುತ್ತೇವೆ. ಈ ಬರಗಾಲದಿಂದಾಗಿ ತನ್ನ ದಣಿ ಕಾಳು ಕೊಡುತ್ತಾರೆಂಬ ಆಕಾಂಕ್ಷೆಯ ಕಂಗಳಲ್ಲಿ ದಲಿತರು ನಿರೀಕ್ಷೆಯನ್ನಿಟ್ಟುಕೊಳ್ಳುತ್ತಾರೆ. ಇಲ್ಲಿ ಮಳೆಗಾಗಿ ಜೋಗಿ ಪದವನ್ನು ಹೇಳಿಸುವುದು, ಮೊದಲಾದ ಆಚರಣೆಗಳನ್ನು ಮಾಡಲಾಗುತ್ತದೆ.

ಈ ಮಳೆಯು ಒಂದೆ ಭೂಮಿ ತತ್ವ ಅಡಗಿರುವುದನ್ನು ಕಾಣುತ್ತೇವೆ. ಈ ಊರಿನ ಜನರಿಗೆ ಮಳೆಯೇ ಸರ್ವಸ್ವ ಹಾಗೂ ಮಳೆಯಿಂದಲೇ ಭೂಮಿಯ ಅಸ್ತಿತ್ವ ಹಾಗೂ ರೈತನ ಅಸ್ತಿತ್ವ ಎಂಬ ಅಂಶಗಳನ್ನು ಕತೆಯಲ್ಲಿ ವ್ಯಕ್ತವಾಗುತ್ತದೆ.

ಬರಗೂರರ "ಕ್ಷಾಮ" ಕತೆಯಲ್ಲಿ ಈ ಊರಿನ ಭೂಮಿಯನ್ನು ನಿಯಂತ್ರಿಸುವುದು ಪ್ರಕೃತಿಮಾತೆ, ಆಕೆ ಪೋಷಿಸುವುದು, ಪೊರೆಯುವುದು ಕಂಡುಬರುತ್ತದೆ. ಪ್ರಕೃತಿಯ ಮುಂದೆ ಯಾವ ಶಕ್ತಿಯು ನಿಲ್ಲುವುದಿಲ್ಲ. ಪ್ರಕೃತಿಯ ಬದುಕಿನೊಂದಿಗೆ ರೈತರ ಬದುಕು ಕಮರುತ್ತದೆ. ಇಂತಹ ಪರಿಸ್ಥಿತಿಯಲ್ಲಿ ರೈತಮಹಿಳೆಯನ್ನು ಶೋಷಣೆಯ ಚಿತ್ರಣವನ್ನು ಕಾಣುತ್ತೇವೆ.

ಈ ಕತೆಯಲ್ಲಿ ರೈತ ಬದುಕಿನ ಕರಾಳ ಮುಖವನ್ನು ವ್ಯಕ್ತಪಡಿಸುತ್ತದೆ. ರಾಮನ ಹೆಂಡತಿ ಚೆನ್ನಿ ರೈತ ಬದುಕಿನ ಪ್ರತಿನಿಧಿಯಾಗಿದ್ದಾಳೆ. ಗೂರಲು ಹತ್ತಿದ ತನ್ನಗಂಡನ ಜೊತೆಗೆ ವ್ಯವಸಾಯದ ಬದುಕನ್ನು ಸಾಗಿಸುತ್ತಿರುವ ಚೆನ್ನಿಗೆ ಕ್ಷಾಮವು ಬರಸಿಡಿಲಿನಂತೆ ಎದುರಾಗುತ್ತದೆ. ಇಂತಹ ವ್ಯವಸ್ಥೆಯ ವಿರುದ್ಧವಾಗಿ ಆಕೆ ಬದುಕನ್ನು ಸಮರ್ಥ ಎದುರಿಸುವ ಪ್ರತಿನಿಧಿಯಾಗಿ ಕಾಣುತ್ತಾಳೆ. "ಚೆನ್ನಿ ಪಾಲಿಗೆ ಮತ್ಯಾವ ಹೊಲವೂ ಇರಲಿಲ್ಲ. ಇರುವ ಹೊಲವೆಂದರೆ ಗೊರಲು ರಾಮ ತನ್ನ ಗಂಡ ಒಬ್ಬನೇ ಈ ಹೊಲದ ಉಳುವಿಗಾಗಿ ದಿನ ಬೆಳಗ್ಗೆ ದುಡಿದು ಎರಡು ಹೊತ್ತು ಕೂಳು ಹುಟ್ಟಿಸಬೇಕಿತ್ತು. ಮಗನಂತೂ ವುಟ್ಟಿಲ್ಲ, ಇವ್ರಿಗೆ ಕೂಳುವುಟ್ಸಾದೆ ನನ್ ಬಾಳು ಎಂದು ಎಷ್ಟೋ ಸಾರಿ ಅಂದುಕೊಂಡಿದ್ದಳು..."[೧೭] ಚೆನ್ನಿಗೆ ಸಂಸಾರದ ಸುಖವೂ ಇಲ್ಲ, ಜೊತೆಗೆ ಬಂಜರು ಭೂಮಿಯಲ್ಲಿ ದುಡಿತ,ಈ ದುಡಿತದಿಂದಲೇ ತಮ್ಮ ಹೊಟ್ಟೆಯನ್ನು ಸಾಕಿಕೊಳ್ಳಬೇಕೆಂಬುದು ಬದುಕಿನ ಪ್ರಶ್ನೆಯಾಗಿ ಕಾಡುತ್ತದೆ. ಇಲ್ಲಿ ದಲಿತರಿಗೆ ಭೂಮಿ ಇರುವ ವಿವರ ದೊರೆಯುತ್ತದೆ. ಆದರೆ ದಲಿತರಿಗೆ ನೀಡಿರುವ ಆ ಭೂಮಿ ಫಲವತ್ತಾಗಿಲ್ಲ, ಎಂಬುದು ಕಥೆಯಲ್ಲಿ ವ್ಯಕ್ತವಾಗುತ್ತದೆ. ಅಲ್ಲದೆ ಪ್ರಾಕೃತಿಕ ದುರಂತವಾಗಿ ಕಾಲ ಕಾಲಕ್ಕೆ ಸರಿಯಾಗಿ ಮಳೆ ಬಾರದೆ ಬೆಳೆಯನ್ನು ಬೆಳೆಯಲಾಗದೇ ಕ್ಷಾಮ ಎದುರಾಗುವುದನ್ನು ಕಾಣುತ್ತೇವೆ. ಇಲ್ಲಿ ಕ್ಷಾಮದಿಂದಾಗಿ ಮುಖ್ಯವಾಗಿ ಹಸಿವಿನ ಪ್ರಶ್ನೆ ಉದ್ಭವವಾಗುತ್ತದೆ.

ಈ ಕತೆಯಲ್ಲಿ ರೈತಾಪಿ ಬದುಕಿನ ವಿವರಗಳು ಬರುವಂತೆ ಭೂಮಾಲೀಕ ರಂಗಪ್ಪ ಇಲ್ಲಿನ ಹೆಣ್ಣುಗಳನ್ನು ಶೋಷಿಸುವ ನೆಲೆಯನ್ನು ಕಾಣುತ್ತೇವೆ. ರಂಗಪ್ಪ ಮಲ್ಲಿಯನ್ನು ಬಯಸಿ ಹೊಲದ ಕೆಲಸಕ್ಕೆ ಕರೆದಿರುತ್ತಾನೆ. ಆಕೆ ಸಿಗದೇ ರಂಗಪ್ಪ ಚೆನ್ನಿಯನ್ನು ಬಲೆಗೆ ಬೀಳಿಸಿಕೊಳ್ಳಲು ಯತ್ನಿಸಿ ವಿಫಲನಾಗಿರುತ್ತಾನೆ. ನಂತರ ಚೆನ್ನಿಯೇ ರಂಗಪ್ಪನ ಬಳಿ ಹೋದಾಗ ಆಕೆಯ ಎಲುಬಿನ ದೇಹವನ್ನು ನೋಡಿ ನಿರಾಕರಿಸುತ್ತಾನೆ. ಇದರ ನಡುವೆ ಹೊಲದ ಕೆಲಸಗಳು, ಮಳೆಯ ಅಬ್ಬರದ ಚಿತ್ರಣ, ಕೆರೆ ತುಂಬಿ ಕಟ್ಟೆ ಒಡೆಯುವ ಚಿತ್ರಣವನ್ನು ಕಾಣುತ್ತೇವೆ.

**ಕೊನೆ ಟಿಪ್ಪಣಿ**


೧.ಬರಗೂರುರಾಮಚಂದ್ರಪ್ಪ,ಸಂಸ್ಕೃತಿ ಶ್ರಮ ಮತ್ತು ಸೃಜನಶೀಲತೆ, ಮುನ್ನುಡಿ. ಪ್ರ.ಮು. ೨೦೦೧.

೨.ಬರಗೂರು ರಾಮಚಂದ್ರಪ್ಪ, ಶಬರಿ,ಮುನ್ನುಡಿ

೩. ಅದೇ,ಪುಟ ೧೨೧

೪. ಅದೇ ಪುಟ ೧೦೪

೫. ಅದೇ ಪುಟ ೧೦೪

೬. ಅದೇ ಪುಟ೧೧೯

೭. ಅದೇ ಪುಟ ೧೧೯

೮.ಅದೇ ಪುಟ ೧೨೪

೯. ಅದೇ ಪುಟ ೧೪೦

೧೦. ಅದೇ ಪುಟ ೧೫೧

೧೧. ಅದೇ ಪುಟ ೨೦೪

೧೨. ಅದೇ ಪುಟ ೨೦೮

೧೩. ಅದೇ ಪುಟ ೨೨೦

೧೪.ಅದೇ ಪುಟ ೨೨೧

೧೫. ಅದೇ ಪುಟ ೨೨೫

೧೬. ಅದೇ ಪುಟ ೨೫೧

೧೭.ಬರಗೂರು,ಕ್ಷಾಮ

## ೪.೨.೧೦ ದೇವನೂರು ಮಹಾದೇವ : ದಲಿತರ ಬದುಕಿನ ಭಾಗವಾಗಿ ಭೂಮಿ

ದಲಿತರ ಬದುಕನ್ನು ತನ್ನ ಅನುಭವದ ಮೂಲ ನೆಲೆಯ ಮೂಲಕ ಹಾಗೂ ಸಂವೇದನಾತ್ಮಕವಾಗಿ ಸೃಜನಶೀಲ ಕೃತಿಗಳಾಗಿ ಕಟ್ಟಿಕೊಡುವುದು ದೇವನೂರರ ವಿಶಿಷ್ಟತೆಯಾಗಿದೆ. ದೇವನೂರರ ಕಥನಗಳ ಮೂಲ ದ್ರವ್ಯ ಹಸಿವು ಮತ್ತು ಶೋಷಣೆ. ದೇವನೂರರ ಬರವಣಿಗೆ ಕುರಿತು ಟಿ.ಪಿ. ಅಶೋಕ ಅವರು ಹೇಳುವಂತೆ "ಇವರ ಕತೆಗಳಲ್ಲಿ ತೋರಿಕೆಯ ಬೌದ್ಧಿಕತೆಯಾಗಲೀ, ವಸ್ತುವಿನ ಅತಿರಂಜಕತೆಯಾಗಲೀ ಕಾಣಸಿಗುವುದಿಲ್ಲ. ತಾನು ಕಂಡ ಬದುಕನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತ, ಆತ್ಮೀಯವಾಗಿ ಅರ್ಥ ಮಾಡಿಕೊಳ್ಳಬಯಸುವ ಸೃಜನಶೀಲ ಮನಸ್ಸೊಂದು ತನ್ನ ಅನುಭವವನ್ನು ತಕ್ಕ ಭಾಷೆಯಲ್ಲಿ ಹಂಚಿಕೊಳ್ಳುವ ಬಗೆಯನ್ನು ಇವರ ಕತೆಗಳಲ್ಲಿ ಕಾಣಬಹುದು. ದೇವನೂರರ ಕತೆಗಳಲ್ಲಿ ಎದ್ದು ಕಾಣುವ ಗುಣವೆಂದರೆ ವಸ್ತುವಿನ ಹೊಸತನ ಆರ್ಭಟಗಳಿಂದ ಮುಕ್ತವಾದ ನಿರ್ಲಿಪ್ತ ಧಾಟಿ. ಈ ನಿರ್ಲಿಪ್ತತೆ ಕ್ರಮೇಣ ಹಿತಮಿತವಾದ ಹಾಸ್ಯ ವಿನೋದಗಳನ್ನು ಮೈಗೂಡಿಸಿಕೊಂಡು ಮಹಾದೇವ ಕೇವಲ ವೀಕ್ಷಕರಾಗದೇ, ಆ ವೀಕ್ಷಣೆಯನ್ನು ಈ ಹಾಸ್ಯ ವಿನೋದಗಳ ಮೂಲಕ ಆಪ್ತವಾಗಿಸಿಕೊಳ್ಳುತ್ತಾ, ಹೀಗೆ ಆಪ್ತವಾದ ಕೆಲವು ಅನುಭವಗಳ ಹಲವು ಮಗ್ಗುಲುಗಳನ್ನು ಪರೀಕ್ಷಿಸುತ್ತ, ಏಕಕಾಲದಲ್ಲಿ ಒಂದು ಅನುಭವದ ವಿವಿಧ ಮುಖಗಳನ್ನು ಕಾಣಿಸುತ್ತಾ ಹೋಗುತ್ತಾರೆ."[೧]

ಈ ಮಾತುಗಳ ಮೂಲಕ ಅವರ ಬರವಣಿಗೆಯ ಶಕ್ತಿಯನ್ನು ಗುರುತಿಸಿದ್ದಾರೆ. ಇದಕ್ಕೆ ಪೂರಕ ಮಾತಾಗಿ,ಅವರ ಬರವಣಿಗೆ ಎಲ್ಲಿಯೂ ತೋರಿಕೆಯಾಗದೆ ಸಹಜವಾಗಿ ವ್ಯಕ್ತವಾಗುವುದು ಹಾಗೂ ದಲಿತ ಬದುಕಿನ ಅಂತರ್‌ಸಂವೇದನೆಯ ಶಕ್ತಿಯಾಗಿ ಕಂಡು ಬರುತ್ತದೆ.ಇವರ ಕಥನ ಶಕ್ತಿಯ ಹಿಂದೆ ಮಹಿಳಾ ಶಕ್ತಿಯ ದನಿ ಇರುವುದನ್ನು ಅವರ **ಒಡಲಾಳ, ಕುಸುಮಬಾಲೆ** ಕಥನಗಳಲ್ಲಿ ಕಾಣುತ್ತೇವೆ. ಇಂತಹ ಸಂವೇದನೆಯಲ್ಲಿ ಭೂಹಕ್ಕು ಸ್ಥಾಪಿಸುವ,ಕೌಟುಂಬಿಕ ನೆಲೆಯ,ದಲಿತರ ಭೂಮಿವಾರಾಟದ ಚಿತ್ರಣಗಳು ವ್ಯಕ್ತವಾಗುತ್ತವೆ. ಇವರ **ಮೂಡಲಸೀಮೇಲಿ ಕೊಲೆಗಿಲೆ ಮುಂತಾಗಿ, ಗ್ರಸ್ತರು** ಕಥನಗಳಲ್ಲಿ ಮುಖ್ಯವಾಗಿ ಗಮನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಅವರ ಕೃತಿಗಳಲ್ಲಿ ದಲಿತರ ಬದುಕಿನ ಭಾಗವಾಗಿ ಭೂಮಿ ಆಶಯ ವ್ಯಕ್ತವಾಗುವುದನ್ನು ಕಾಣಬಹುದು.

ದೇವನೂರರ ಕೃತಿಗಳಲ್ಲಿ ಭೂಪ್ರಶ್ನೆ ಹಾಗೂ ರೈತ ಪ್ರಶ್ನೆಗಳ ಕುರಿತು ತಣ್ಣಗಿನ ಹೋರಾಟದ ಕಾವನ್ನು ಕಾಣಬಹುದು. ಅವರ ಕಥನಗಳಲ್ಲಿ ಭೂಮಿಯೊಂದಿಗಿನ ಅಂತರ್‌ಸಂಬಂಧದ ಮೂಲಕ ಸಂವಾದಿಸುವ ನೆಲೆಯನ್ನು ಕಾಣಬಹುದು. ದೇವನೂರರ ಭೂಮಿಯ ಬಗೆಗಿನ ಪರಿಕಲ್ಪನೆ ತಾಯ್ತನದ ಸ್ವರೂಪವನ್ನೊಳಗೊಂಡಿದೆ. ಈ ಹಿನ್ನೆಲೆಯಲ್ಲಿ ಭೂಮಿ ಕುರಿತಾಗಿ ಅವರ ಕಾದಂಬರಿಯಲ್ಲಿ ತಾಯ್ತನದ ಪ್ರಶ್ನೆಯು ಒಡಲಾಳದ ಸಾಕವ್ವನಲ್ಲಿ, ಕುಸುಬಾಲೆಯ ಚನ್ನನ ತಾಯಿಯಲ್ಲಿ ಕಾಣಬಹುದಾಗಿದೆ. ದೇವನೂರರ ಕಥನಗಳಲ್ಲಿ ಭೂಸಂಬಂಧಿ ತಾತ್ವಿಕ ಆಶಯವನ್ನು ಈ ರೀತಿ ಗುರುತಿಸಿಕೊಳ್ಳಲಾಗಿದೆ.

ಭೂಮಿಕುರಿತಾಗಿ ಮುಖ್ಯವಾಗಿ ಹೋರಾಟ ನಡೆಸದೇ ಇರುವುದು, ಮೇಲ್ನೋಟಕ್ಕೆ ಕಂಡುಬಂದರೂ, ದಲಿತರ ಬದುಕಿನ ಭಾಗವಾಗಿ ಭೂಮಿ ಬರುವ ಆಶಯವನ್ನು ದೇವನೂರರ ಎಲ್ಲ ಕೃತಿಗಳಲ್ಲಿ ಕಾಣುತ್ತೇವೆ. ದೇವನೂರರ ಕೃತಿಗಳಲ್ಲಿ ಭೂ ಮತ್ತು ರೈತ ಪ್ರಶ್ನೆಗಳನ್ನು ತಣ್ಣಗೆ ಹೇಳುವ ತಂತ್ರವಿದ್ದರೂ ಅದು ಪರಿಣಾಮದಲ್ಲಿ ಶಕ್ತಿಯುತವಾಗಿ ಧ್ವನಿಸುತ್ತದೆ. ರೈತ ಮಹಿಳಾ ನೆಲೆಯ ಭೂಪ್ರಶ್ನೆ ಹಾಗೂ ಕಾನೂನಿನ ಮೂಲಕ ಭೂ ಪ್ರಶ್ನೆಗೆ ಪರಿಹಾರ ಸೂಚಿಸಲು ಯತ್ನಿಸುತ್ತಾರೆ. ದಲಿತರ ಭೂ ಒಡೆತನ ಭೂಮಾಲೀಕತ್ವ ಹೊಂದುವ ಆಶಯಗಳು, ಈ ಸಮುದಾಯಕ್ಕೆ ಇದನ್ನು ಪಡೆಯಲು ಆಗದೆ ಇರುವ ಚಾರಿತ್ರಿಕ ಕಾರಣಗಳು ಕಂಡುಬರುತ್ತದೆ.ಜೀತ ಸಮಸ್ಯೆ ಜೊತೆಗೆ ಭೂ ಸಮಸ್ಯೆ ತಳುಕುಹಾಕಿಕೊಂಡಿರುವುದು ಅವರ ಕೃತಿಗಳಲ್ಲಿ ಗುರತಿಸಬಹುದಾಗಿದೆ.

"**ಒಡಲಾಳ**" ಕಾದಂಬರಿಯ ಕೇಂದ್ರ ವ್ಯಕ್ತಿ ಸಾಕವ್ವ, ತನ್ನ ಹುಂಜ ಹಟ್ಟಿಯಲ್ಲಿ ಕಳುವಾಗಿ ಹುಡುಕುವುದರ ಮೂಲಕ ಆಕೆಯ ಬದುಕು ತೆರೆದುಕೊಳ್ಳುತ್ತದೆ. ಕಿತ್ತು ತಿನ್ನುವ ಬಡತನದ ಸಾಕವ್ವನ ಕುಟುಂಬದ, ಸುತ್ತ ವಿನೋದ ವ್ಯಂಗಗಳ ನಡುವೆ ಸಾಕವ್ವನ ಕೇರಿಯ ಪುಟ್ಟ ಪ್ರಪಂಚವು ದಲಿತರ ಬದುಕನ್ನು ಅನಾವರಣಗೊಳಿಸುತ್ತದೆ. ಈ ಪುಟ್ಟ ಪ್ರಪಂಚದಲ್ಲಿ ಪಿತ್ರಾರ್ಜಿತ ಆಸ್ತಿಗಾಗಿ ವಾಗ್ವಾದಗಳು ನಡೆಯುತ್ತವೆ. ದಲಿತ ಕುಟುಂಬದ ಮುಖ್ಯಸ್ಥೆಯಾಗಿರುವ ಸಾಕವ್ವನಲ್ಲಿ ಭೂಮಿಯ ಒಡೆತನ ಇರುವುದನ್ನು ಕಾಣುತ್ತೇವೆ. ಅದು ಆಕೆಯ ಸ್ವಯಾರ್ಜಿತ ಗಳಿಸಿದ ಆಸ್ತಿ ಎಂಬುದಾಗಿ ಕಾದಂಬರಿಯಲ್ಲಿ ವ್ಯಕ್ತವಾಗುತ್ತದೆ. ಆ ಕುಟುಂಬದ ಸಣ್ಣಯ್ಯ ಸಾಕವ್ವನ ಆಸ್ತಿಗೆ ತಾನು ಹಕ್ಕುದಾರ ಎಂದು ವಾದಿಸುತ್ತಾನೆ. ಅದಕ್ಕೆ ಪ್ರತಿಯಾಗಿ ಸಾಕವ್ವ "ಏನಂದೆ ಇನ್ನೊಂದ್ಸಲ ಅನ್ನು.. ಅಕ್ಕದಾರನಾ ನೀನು

ಹುಟ್ಟುದ್ದುಹೆಣ್ಣೆಂಗ್ಸಾದರೂ ಗಂಡ್ಸಮೀರ್ಸಿ ಕಚ್ಚೆಕಟುಕೊಂಡು ಗೇದು, ಸಂಪಾದ್ಸಿವ್ನಿ,ಕನೂ ಭೂಪತಿ. ಆಸ್ತಿ ನನ್ನ ಸ್ವಾರ್ಜತ ಸ್ವಾರ್ಜತ.."[೨] ಸಾಕವ್ವನಿಗೆ ಅಕ್ಷರಜ್ಞಾನವಿಲ್ಲದಿದ್ದರೂ ಜನಬಳಕೆಯ ಕಾನೂನಿನ ಜ್ಞಾನ ಇರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಸ್ವಯಾರ್ಜಿತ ಆಸ್ತಿಗೆ ತಾನೇ ಹಕ್ಕುದಾರಳು ಎಂಬ ಕಾನೂನಿನ ಅರಿವು ಆಕೆಗಿದೆ. ಅಲ್ಲದೆ ಆಕೆಗೆ ಈಗಾಗಲೇ ನಾಲ್ಕು ಎಕರೆ ಭೂಮಿ ಮತ್ತು ಮನೆ ಇರುವುದು ಕಿರಿಯ ಸೊಸೆ ಚಲುವಮ್ಮನಿಂದ ತಿಳಿಯುತ್ತದೆ.

"ಪರದೇಸಿ ನಿಂತ ಥರ ಇರೋ ಈ ಹಟ್ಟಿ ಕಂಡಿಲ್ವಾ... ಮಳದೇವರು ಕಣ್ಣು ಬಿಟ್ಟರೂ ಬೆಳೆಗಾಣದ ನಾಲ್ಕು ಎಕ್ರ ಹೊಲ ಕಂಡಿಲ್ವಾ...ನಿಮ್ಮ ಇರೂ ಮೂರು ಗಂಡ್ಮಕ್ಕಳ್ಗ ತಲೆಗೆರಡು ಎಕ್ರನಾರು ಹಂಚಿ ಮತ್ತ ನೋಡವು.. ."[೩] ಇಲ್ಲಿ ದಲಿತರಿಗೆ ಭೂಮಿ ದಕ್ಕಿರುವುದು ಮತ್ತು ಈ ಭೂ ಹಕ್ಕು ಸ್ಥಾಪಿಸಿರುವುದನ್ನು ಕಾಣುತ್ತೇವೆ. ಆದರೆ ಎಂತಹ ಭೂಮಿಯನ್ನು ಪಡೆದಿದ್ದಾರೆ ಎಂಬ ವಿವರವನ್ನು ಕಾದಂಬರಿಕಾರ ಚೆಲುವಮ್ಮನ ಮಾತಿನಿಂದ ವ್ಯಕ್ತಗೊಳ್ಳುತ್ತದೆ.

ದಲಿತರಿಗೆ ಭೂಸುಧಾರಣಾ ಕಾನೂನಿನಿಂದಲೂ ಅಥವಾ ದರಕಾಸ್ತು, ಅರಣ್ಯ ಭೂಮಿಯ ರೂಪದಲ್ಲಿ ಭೂಮಿಯ ಒಡೆತನವಿರುವುದನ್ನು ಇಲ್ಲಿ ವ್ಯಕ್ತವಾಗಿದೆ. ಆದರೆ ಇವರಿಗೆ ನೀಡಿರುವ ವ್ಯವಸಾಯ ಯೋಗ್ಯವಲ್ಲದ ಭೂಮಿ ಇರುವುದರಿಂದ ದಲಿತರಿಗೆ ಈ ಭೂಮಿ ನಿರುಪಯುಕ್ತವೆನಿಸಿದೆ. ತಾವು ಸ್ವತಃ ಭೂಮಿಯ ಒಡೆಯರಾಗಿದ್ದರೂ ಯಾವುದೇ ರೀತಿಯ ಪ್ರಯೋಜನವಾಗದೇ ಇರುವುದನ್ನು ಕಾಣುತ್ತೇವೆ. ಹೀಗಾಗಿ ದಲಿತರಿಗೆ ಭೂಮಿ ಮತ್ತು ಭೂ ಒಡೆತನ ಬೇಡವಾಗಿದೆ.ಏಕೆಂದರೆ ಅದು ಫಲವತ್ತಾಗಿಲ್ಲದ ಬಂಜರು ಭೂಮಿಯಾಗಿರುವ ಕಾರಣ ಜೊತೆಗೆ ಆರ್ಥಿಕ ದುಃಸ್ಥಿತಿಯಿಂದಾಗಿ ಭೂಮಿ ದಲಿತರು ಭೂಮಿಯನ್ನು ನಿರಾಕರಿಸುತ್ತಾರೆ. ಹೀಗಾಗಿ ಇಲ್ಲಿ ಭೂ ಪ್ರಶ್ನೆ ಮುಖ್ಯವಾಗದೆ ಭೂಮಾಲೀಕನ ಪ್ರಶ್ನೆ ಮುಖ್ಯವಾಗುತ್ತದೆ. ದಲಿತರು ಜೀತಗಾರಿಕೆಯ ಮುಂದುವರೆದ ಭಾಗವಾಗಿ, ಕೃಷಿಕೂಲಿಕಾರ್ಮಿಕರಾಗಿ ದುಡಿಯುವ ಚಿತ್ರಣವಿದೆ.

ಇಲ್ಲಿ ಸಾಕವ್ವನ ಹುಂಜವನ್ನು ಆಸ್ತಿ ಕಲ್ಪನೆಯ ನೆಲೆಯಲ್ಲಿ ನೋಡಬಹುದಾಗಿದೆ. ತಾನು ಪ್ರೀತಿಯಿಂದ ಸಾಕಿದ್ದ ಹುಂಜವು ತನ್ನ ಹಟ್ಟಿಯಲ್ಲಿ ಕಳೆದುಹೋಗುತ್ತದೆ.ಇದನ್ನು ಪೊಲೀಸರು ಹಿಡಿದುಕೊಡುವ ನೆಪದಲ್ಲಿ ಕೋಳಿ ಯಾವ ರೀತಿ ಇತ್ತು ಎಂದು ಹೇಳು ಎಂದಾಗ ಪೊಲೀಸರಿಗೆ ಸಾಕವ್ವ ವಿವರಿಸುತ್ತಾಳೆ. ಸಾಕವ್ವನಿಂದ ಮನೆಯಲ್ಲಿದ್ದ ಹುಂಜವನ್ನು ಪಡೆದು ಈ ಹುಂಜದ ಮೂಲಕ ಹಿಡಿದುಕೊಡುತ್ತೇನೆಂದು ಹೇಳುವ ಮೂಲಕ ಆಡಳಿತಶಾಹಿ ವ್ಯವಸ್ಥೆಯು ಈಕೆಯನ್ನು ವಂಚಿಸುತ್ತದೆ. ಇಲ್ಲಿ ಸಾಕವ್ವನ ಸಹಜವಾದ ಕಳಕಳಿ,ಮುಗ್ಧತೆಯನ್ನು ಪೊಲೀಸ್‌ಆಡಳಿತ ವ್ಯವಸ್ಥೆ ದುರ್ಬಳಕೆ ಮಾಡಿಕೊಳ್ಳುತ್ತದೆ.

ಒಡಲಾಳ ಕಾದಂಬರಿಯಲ್ಲಿ ಸಾಕವ್ವ ದಲಿತ ರೈತಮಹಿಳಾ ಪ್ರತಿನಿಧಿಯಾಗಿ ಸಾಮಾಜಿಕ ಬಿಕ್ಕಟ್ಟುಗಳನ್ನು ಎದುರಿಸುವ ಶಕ್ತಿಯಾಗಿದ್ದಾಳೆ. ದಲಿತ ಸಮುದಾಯವನ್ನು ಪ್ರತಿನಿಧಿಸುವ ಸಾಕವ್ವ ಸಂಕಷ್ಟದಲ್ಲೂ ಬದುಕಿನ ಬಗೆಗಿನ ಕಲಾತ್ಮಕತೆ ಮತ್ತುಉತ್ಸಾಹ ತೋರುವುದು ಈ ಸಮುದಾಯ ಪ್ರಜ್ಞೆಗೆ ಪ್ರತೀಕವಾಗಿ ಕಂಡುಬರುತ್ತಾಳೆ.

"**ಕುಸುಮಬಾಲೆ**" ಯಲ್ಲಿ ದಲಿತ ಕುಟುಂಬದ ಚೆನ್ನನ ತಮ್ಮಂದಿರೂ ಜೀತಗಾರರಾಗಿದ್ದಾರೆ. ದುಡಿಯಲು ಹೋಗಿದ್ದ ಚೆನ್ನನನ್ನು ಹುಡಕಲು ಬಾಂಬೆಗೆ ತೆರಳುತ್ತಾರೆ. ಆತನನ್ನು ಹುಡುಕಿಕೊಂಡು ಬರಲು ಬಾಂಬೆಗೆ ತೆರಳಲು ಹಣದ ಸಮಸ್ಯೆ ಎದುರಾಗುತ್ತದೆ. ಈ ಹಣಕ್ಕಾಗಿ ತನ್ನ ಬಳಿ ಇದ್ದ ತುಂಡು ಭೂಮಿಯನ್ನು ಭೋಗ್ಯಕ್ಕೆ ಹಾಕಿ ಬಂದ ಹಣದಲ್ಲಿ ಹೋಗಲು ಇಚ್ಛಿಸುತ್ತಾರೆ. ಕಾದಂಬರಿಯಲ್ಲಿ ಚೆನ್ನನ ತಾಯಿ ಹೇಳುವಂತೆ "ಇನ್ನೊಂದು ಗಂಡ್ನೂ ಜೀತ್ಯ ಇರಸ್‌ಬುಡಾವು. ಹೊಲ್ವ ಭೋಗ್ಯಕ್ಕ್ ಹಾಕ್ ಬುಡಾವು."[೪]

ಇಲ್ಲಿ ಭೂಮಿಯನ್ನು ಭೋಗ್ಯಕ್ಕೆ ಹಾಕುವುದರ ಮೂಲಕ ದೂರದ ಬಾಂಬೆಗೆ ಹೋಗಿ ಮಗನನ್ನು ಹುಡುಕಿಕೊಂಡು ಬರುವ ಆಸೆಯನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಭೂಮಾಲೀಕನ ಶೋಷಣೆಗಳು ಭೂಮಿಯಲ್ಲಿ ಉತ್ತು ರೈತನಾಗುವ ಕನಸನ್ನು ಭಗ್ನಗೊಳಿಸುತ್ತದೆ. ದಲಿತರ ತುಂಡು ಭೂಮಿಯಲ್ಲಿ ಬೆಳೆಯನ್ನು ಬೆಳೆಯಲು ಆಗದೆ ದಲಿತರಿಗೆ ಆರ್ಥಿಕ ಸಮಸ್ಯೆ ಮುಖ್ಯವಾಗಿ ಕಾಡಿದೆ. ಇದನ್ನು ಮೀರಿ ಕೃಷಿಕನಾಗುವ ಕನಸು ನನಸಾಗದೇ ಉಳಿಯುತ್ತದೆ. ಏಕೆಂದರೆ ಇಲ್ಲಿ ದಲಿತರಿಗೆ ಜಮೀನಿನ ಒಡೆಯನಾಗುವುದು ಮುಖ್ಯವಾಗದೆ, ಹಸಿವಿನ ಪ್ರಶ್ನೆ ಮುಖ್ಯವಾಗಿ ಕಂಡುಬರುತ್ತದೆ.

ಚೆನ್ನನ ಅಪ್ಪನಂಥವರು ಭೂಮಾಲೀಕ ವ್ಯವಸ್ಥೆಯನ್ನು ಒಪ್ಪಿಕೊಂಡು, ಊಳಿಗ ವ್ಯವಸ್ಥೆಯನ್ನು ಆರಾಧಿಸುತ್ತಾರೆ. ಶಿವಾಚಾರದ ಜನ "ಬನ್ನಿ ಬುದ್ಯೋ,ಬನ್ ಬನ್ನಿಸೋಮೋ ಎಂದು ಮಾತನಾಡುವುದನ್ನು ಕಂಡು ಚೆನ್ನಪ್ಪನ ಅಪ್ಪನಿಗೆ ಆಶ್ಚರ್ಯವಾಗುತ್ತದೆ. ಬೆಚ್ಚಿ ಇದ್ಯಾಕ ಧಣಿಗಳ ಈ ಥರವಾದ ಮಾತ್ಗಳೂ ಅಚ್ಚರಿ ವ್ಯಕ್ತಪಡಿಸುತ್ತಾನೆ. ಇದಕ್ಕೆ ಪ್ರತಿಯಾಗಿ ಧಣಿ ಇನ್ಯಾನ್ನ ಮಾಡೋದು ಬುದ್ಯೋ. ನಿಂ ಜಾತ್ಯವರೆಲ್ಲಾ ನಾಳಕಿಂದ್ಲಿಯ ಜೀತ ಬುಟ್ ಬುಟ್ಟರಂತಲ್ಲಾ..... ಎಂದು ಒಬ್ಬ ಪ್ರತಿಕ್ರಿಯಿಸಿದರೆ, ಮತ್ತೋರ್ವ, ಜೀತ ಬುಟ್ ಮ್ಯಾಲ ಹೊಲಾರ್ನೇನ ಮಾತಾಡ್ಸಕ ಅದ್ದಯ್ಯ ಯಾನಾರೂ ನೋಡಕ್ಕ ಅದ್ದಯ್ಯ ಆಗ ಹೊಲಾರ್ರು ಅನ್ನತುಪ್ಪನಿಯಕಯ್ಯೂ ಉಣ್ಣಾದು..."[೫]

ಈ ಮಾತಿನಲ್ಲಿ ಭೂಮಾಲೀಕರ ಕುಹಕ ಮಾತನ್ನು ಗಮನಿಸಬಹುದು. ಇಲ್ಲಿ ಭೂಮಾಲೀಕರಿಗೆ ಜೀತಗಾರರನ್ನು ಕಳೆದುಕೊಳ್ಳುತ್ತೇವೆಂಬ ಆತಂಕ ಇವರನ್ನು ಕಾಡಿದೆ. ಈ ಮಾತನ್ನು ಕೇಳಿದ ಚೆನ್ನನ ಅಪ್ಪನಿಗೆ ತಮಾಶೆ ಮಾಡುತ್ತಿದ್ದಾರೆಂದು ನಗತೊಡಗಿದ. ಈತನಿಗೆ ಭೂಮಾಲೀಕರಲ್ಲಿನ ಒಲವು ತನ್ನ ಅಧಿಮ ಮನಸ್ಥಿತಿಯಿಂದ ಅವರ ಕೈಕೆಳಗೆ ದುಡಿಯುವುದನ್ನು ತಮ್ಮ ಪಾಲಿನ ಕರ್ತವ್ಯವೆಂದು ಭಾವಿಸಿದ್ದಾನೆ.

ಆದರೆ ಚನ್ನ ಮತ್ತು ಇತರೆ ದಲಿತ ಯುವ ಪೀಳಿಗೆ ಇದರಾಚೆಗೆ ನಿಂತು ಆಲೋಚಿಸುವ ಶಕ್ತಿಯುಳ್ಳವರಾಗಿದ್ದಾರೆ. ಚನ್ನ ಭೂಮಾಲೀಕರ ರಾಜಕೀಯ ಕುರಿತು ವಿವೇಚಿಸುತ್ತಾನೆ. ಚನ್ನನ ಅಪ್ಪನ ನಗುವಿಗೆ ಪ್ರತಿಯಾಗಿ ಮೆಡರುಗಣ್ಣನ ಹೆಳವನ ಮಾತನ್ನು ಗಮನಿಸಬಹುದು.ಇಂದಿರಾಗಾಂಧಿಯೇ ಜೀತಕ್ಕಿರಿಸಿಕೊಂಡಿದ್ದು, ಅದರಲ್ಲಿ ನಿಮ್ಮದೇನು ಎಂಬಂತೆ ಪ್ರಶ್ನಿಸುತ್ತಾನೆ. ಇಲ್ಲಿ ಸವರ್ಣೀಯರು ಪ್ರತಿಕ್ರಿಯೆಯನ್ನು ಗಮನಿಸಬಹುದು. ಜೀತ ವಿಮೋಚನಾ ರ್‍ಯಾಲಿ ಗ್ರಾಮೀಣ ಪರಿಸರದಲ್ಲಿ ತಲ್ಲಣ ಉಂಟು ಮಾಡುವುದನ್ನು ಗಮನಿಸಬಹುದಾಗಿದೆ.

ಆದರೆ ವಿದ್ಯಾವಂತ ಚೆನ್ನನಂಥ ಹೊಸ ಪೀಳಿಗೆಯ ದಲಿತ ಯುವಕರು ಭೂಮಾಲೀಕ ಹಿಡಿತದಿಂದ ಹೊರಬರಲು ಯತ್ನಿಸುತ್ತಾರೆ. ತನ್ನ ಊರಿನಲ್ಲಿ ಭೂಮಾಲೀಕರ ವಿರುದ್ಧ ದಲಿತ ಸಂಘಟನೆಗಳು ಮೆರವಣಿಗೆ ನಡೆಸುತ್ತವೆ. ಚೆನ್ನನ ಅಪ್ಪನಿಗೆ ಇದೊಂದು ರೀತಿ ತಮಾಷೆಯಾಗಿ ಕಾಣುತ್ತದೆ. ಚನ್ನನ ಅಪ್ಪ ಉಪಕತೆ ಹೇಳುವ ಮೂಲಕ ಯಥಾಸ್ಥಿತಿವಾದವನ್ನು ಮಂಡಿಸುತ್ತಾನೆ. ಆದರೆ ದಲಿತ ಸಂಘಟಕ ಮುಳ್ಳೂರುನಾಗರಾಜ ಅರಿವಿನ ಪ್ರಜ್ಞೆಯಾಗಿ ಬರುತ್ತಾನೆ. ಸಂಘಟನೆಯ ಮೂಲಕ ಆ ಊರಿನ ಶೋಷಣೆ ವಿರುದ್ಧ ದಲಿತರ ಜೀತ ವಿಮೋಚನಾ ಮೆರವಣಿಗೆಯನ್ನು ಮಾಡುತ್ತಾರೆ. ಇವೆಲ್ಲವನ್ನು ನೋಡಿದ ಚೆನ್ನನ ಅಪ್ಪ ಗೇಲಿ ಮಾಡುತ್ತಾನೆ.ಆದರೆ ಸವರ್ಣೀಯರು ಈ ರೀತಿಯ ರ್‍ಯಾಲಿ ದಲಿತರಿಗೆ ಅರಿವು ಮೂಡುತ್ತಿರುವುದರ ಬಗ್ಗೆ,ದಲಿತರ ಮೇಲೆ ಗೌರವ ಕೊಟ್ಟು,ಅವರಿಗೆ ಮಹತ್ವವನ್ನು ನೀಡುತ್ತಾರೆ. ಇದು ಚೆನ್ನನ ಅಪ್ಪನಿಗೆ ವಿಚಿತ್ರವಾಗಿ ಕಂಡು, ಆತ ನಗುತ್ತಾ ಗುಳ್ಳೇ ನರಿ ಲಿಂಗ ಕಟ್ಟಿಸಿಕೊಂಡ ಒಂದು ಉಪಕತೆಯನ್ನೇ ಹೇಳುತ್ತಾನೆ. ಈ ಕತೆಯ ಮೂಲಕ ದಲಿತರು ಜೀತದಿಂದ ಹೊರಬರಲು ಸಾಧ್ಯವಿಲ್ಲ ಎಂಬ ವಾದವನ್ನು ಮಂಡಿಸುತ್ತಾನೆ. ಭೂಮಾಲೀಕ ಪರವಾದ ತನ್ನೊಳಗೆ ಬೇರೂರಿದ ಜೀತ ಶೋಷಣೆಯಿಂದ ಹೊರಬರಲು ಯತ್ನಿಸದೆ ಚನ್ನನ ಅಪ್ಪ ಅಲ್ಲಿಯೇ ಉಳಿಯುವುದು ಸೂಚ್ಯವಾಗಿ ತಿಳಿಯುತ್ತದೆ. ಈ ಮಾತಿನಿಂದ ಚೆನ್ನನ ಅಪ್ಪನಿಗೆ ಸವರ್ಣೀಯರಿಂದ ಬೀಡಿಗಳು ಉಚಿತವಾಗಿ ಬೀಳತೊಡಗುತ್ತವೆ. ಈತ ಭೂಮಾಲೀಕರ ಪರವಾದ ಸಂಪ್ರದಾಯ ಶರಣತೆಯಿಂದ ಹೊರಬರಲು ಇಚ್ಛಿಸುವುದಿಲ್ಲ. ಆದರೆ ಇದನ್ನು ಮೀರಿ ಹೊರಬರುವ ಚನ್ನ ಮತ್ತು ಹೊಸ ಪೀಳಿಗೆಯ ಜನರು ತವಕದಲ್ಲಿರುವುದನ್ನು ಕಾಣುತ್ತೇವೆ.

"ಗ್ರಸ್ತರು" ಕತೆಯಲ್ಲಿ ಸತ್ವಯುತ ಅಭಿವ್ಯಕ್ತಿಯ ಮೂಲಕ ಭೂ ಪ್ರಶ್ನೆಗೆ ಪರಿಹಾರ ಸೂಚಿಸುವುದನ್ನು ಕಾಣಬಹುದಾಗಿದೆ. ಈ ಕತೆಯಲ್ಲಿ ವೈಚಾರಿಕ ದೃಷ್ಟಿಕೋನ, ಜೀವನ್ಮುಖಿ ನಿಲುವುಗಳು ಈ ಕತೆಯನ್ನು ಸತ್ವಯುತವಾಗಿ ವ್ಯಕ್ತಗೊಂಡಿವೆ. ಇಲ್ಲಿ ಬರುವ ವಿದ್ಯಾವಂತ ದಲಿತ ಯುವ ನಾಯಕ ಕ್ರಾಂತಿಕಾರಿ ಚಿಂತನೆಯ ಮೂಲಕ ವೈಚಾರಿಕ ನೆಲೆಯಲ್ಲಿ ಸಮಸ್ಯೆಗಳನ್ನು ನೋಡುತ್ತಾರೆ. ಈ ಕುರಿತು, "ಹುಡ್ಗ ಯೋಗ್ಯ ಅಂತ ಸಾವಿರ್ದವರ್‍ಗೂ ಸಾಲಕೊಟ್ಟೆ. ಸ್ವಾಮಿಗಳ ಕಾಲ್ಗೆ ಬಿದ್ದು ಕೆಲ್ಸ ಕೊಡ್ಸದವ ನಾನು ಇವ್ನೆ ಈಗ ಎಷ್ಟರವನು ಅಂತ ಗೊತ್ತಾಯ್ತು ತಕ್ಕೊ. ನಾ ಹೇಳೋದು ಇಷ್ಟೆ. ಅಸ್ಲು ಬಡ್ಡಿ ಜೊತ್ಮಾಡ್ಕೊಂಡು ಹಟ್ಟಿ ಬಾಗ್ಲು ಮೆಟ್ಬೋದಕ್ಕೆ ಹೇಳು. ಇಲ್ಲ, ನೀನೆ ಕಂಡಿದ್ದಿ. ಹೊಲ ಅಂಗೈಯಗ್ಲ ಉಳಿಯಾಕಿಲ್ಲ."[೬]

ಈ ಕಥಾ ನಾಯಕನ ವರ್ತನೆಯಿಂದ ತಾಯಿ ವಿದ್ಯಾಭ್ಯಾಸ ಮಾಡಿಸಲು ಭೂಮಾಲೀಕ ನಿಂದ ನೆರವು ಪಡೆದುದು ಕೂಡಾ ವ್ಯರ್ಥವಾಗುತ್ತದೆ. ಪುನಃ ಜೀತ ಮಾಡುವಂತೆ ಭೂಮಾಲೀಕ ಸೂಚಿಸುವ ನೆಲೆಯನ್ನು

ಕಾಣುತ್ತೇವೆ. ಭೂಮಾಲೀಕನ ಶೋಷಣೆಯಿಂದಾಗಿ ದಲಿತಗಿರುವ ಅಂಗೈಯಗಲದ ಭೂಮಿಯನ್ನು ವಶಪಡಿಸಿಕೊಳ್ಳುವುದಾಗಿ ಆತ ತಿಳಿಸುತ್ತಾನೆ. ಇಲ್ಲಿನ ಕಥಾನಾಯಕ ದೂರದ ಊರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಾನೆ. ಈ ನಾಯಕನ ಕುಟುಂಬವು ಇದಕ್ಕೆ ಪ್ರತಿಕ್ರಿಯೆ ನೀಡುತ್ತಾ "ಕಾಗ್ದ ಏನಾದ್ರು ಬರ್ದಿದ್ನಾ, ಎಂದು ಬತ್ತಾನಂತೆ ಎಂದು ಕೇಳುವುದು ಇಲ್ಲಿಗೆ ಮುಗಿಯುತ್ತದೆ. ಇನ್ನು ದೊಡ್ಡವ್ವನದು, ಹೊಲ ಮನೆ ಕೆಲಸಕ್ಕೆ ದೇಹ ತೇಯುವುದು."[೭]

ಈತನ ವಿದ್ಯಾಭ್ಯಾಸಕ್ಕಾಗಿ ತಾನು ಜೀತಕ್ಕಿದ್ದು ಓದಿಸುವ ಮಹಿಳಾ ಶಕ್ತಿಯ ದುಡಿಮೆಯನ್ನು ಕಾಣುತ್ತೇವೆ. ಆದ್ದರಿಂದ ರೈತ ನೆಲೆಯ ದುಡಿಮೆಯಿಂದಾಗಿ ಮಹಿಳೆಯು ಕೃಷಿ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿದ್ದಾಳೆ. ಇಲ್ಲಿ ರೈತ ಮಹಿಳಾ ಪ್ರಶ್ನೆಯನ್ನು ಕೂಡಾ ಕಾಣುತ್ತೇವೆ. ಊರಿನ ಭೂಮಾಲೀಕನ ಶಿಫಾರಸ್ಸಿನ ಮೂಲಕ ಕೊಡಿಸಿದ ನೌಕರಿಯನ್ನು ಕಥನಾಯಕ ಉದ್ದೇಶಪೂರ್ವಕವಾಗಿ ನಿರಾಕರಿಸುತ್ತಾನೆ. ತನ್ನ ಶಿಫಾರಸ್ಸನ್ನು ತಿರಸ್ಕರಿಸುವುದರಿಂದ, ಇದು ಗೌಡರಿಗೆ ನುಂಗಲಾರದ ತುತ್ತಾಗುತ್ತದೆ. ಅಲ್ಲದೆ ತಾನು ನೀಡಿದ್ದ ಸಾಲದ ಹಣವನ್ನು ತೀರಿಸಿಕೊಳ್ಳುವ ಉದ್ದೇಶದಿಂದ ಭೂಮಾಲೀಕ ಪಟ್ಟಣದಲ್ಲಿ ನೌಕರಿ ಕೊಡಿಸಿರುತ್ತಾನೆ. ಆದರೆ ಕೊಡಿಸಿದ ನೌಕರಿಗೂ ಹೋಗದೆ ತನ್ನ ಊರಿಗೆ ಮರಳಿ, ಊರಿನ ಗೌಡರಿಗೇ ಎದುರು ಮಾತನಾಡಿ ಆಕ್ರೋಶಕ್ಕೆ ತುತ್ತಾಗಿದ್ದಾನೆ. ಈ ವಿಷಯ ಕಥಾನಾಯಕನ ತಾಯಿಗೂ ತಿಳಿದು, ಗೌಡರ ಬಗ್ಗೆ ಈ ರೀತಿ ಸಿಡುಕಿದ್ದಕ್ಕೆ ತಾಯಿ ಕೋಪ ಮಾಡಿಕೊಳ್ಳುತ್ತಾಳೆ. ಇದಕ್ಕೆ ಪ್ರತಿಯಾಗಿ ಕಥಾನಾಯಕ "ಯಾವುದೂ ಬೇಡ, ಹೊಲ ಮನೆ ಅಂತ ಇರೋದು ಅಂತ ಬಂದ್ರೆ ಈಗ ಗೌಡ್ರಿಗೆ ಚುಚ್ಕೊಟ್ಟವರೆ..."[೮] ಎಂದು ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾನೆ.

ಕಥಾನಾಯಕ ರೈತನಾಗುವ ಹಂಬಲದೊಂದಿಗೆ ತನ್ನೂರಿಗೆ ಬಂದರೆ ಊರಿನಲ್ಲಿ ಈ ರೀತಿಯ ಪ್ರತಿಕ್ರಿಯೆ ಎದುರಿಸಬೇಕಾಗುತ್ತದೆ. ಊರಿನ ಭೂಮಾಲೀಕನ ಹಿಡಿತಕ್ಕೆ ಸಿಕ್ಕಿ ಕಥಾನಾಯಕ ನಲುಗುತ್ತಾನೆ. ಈ ಕತೆಯಲ್ಲಿ ಭೂ ಪ್ರಶ್ನೆಯು ಸಂಪೂರ್ಣವಾಗಿ ಭೂಮಾಲೀಕನ ಹಿಡಿತದಲ್ಲಿದೆ.ಇಂತಹ ಸನ್ನಿವೇಶವು ಕಥಾನಾಯಕ ರೈತನಾಗುವ ಕನಸನ್ನು ಕಮರುವಂತೆ ಮಾಡುತ್ತದೆ. ಇದ್ದ ಅಲ್ಪ ಪ್ರಮಾಣದ ಭೂಮಿಯನ್ನು ಭೂಮಾಲೀಕ ಲಪಟಾಯಿಸಲು ಸಂಚು ಹೂಡುತ್ತಾನೆ. ಭೂಮಾಲೀಕನ ಸಾಲ ತೀರಿಸಿಕೊಳ್ಳುವ ನೆಪದಲ್ಲಿ ರೈತನಾಗ ಬಯಸುವ ಕಥಾನಾಯಕನ ಆಸೆಗೆ ತಣ್ಣೀರೆರೆಯುವುದನ್ನು ಕಾಣುತ್ತೇವೆ. ಭೂಮಾಲೀಕನ ಸಂಚಿನಿಂದಾಗಿ ವ್ಯವಸ್ಥಿತವಾಗಿ ಭೂನಿರಾಕರಣೆಯಾಗಿರುವುದನ್ನು ಕಾಣಬಹುದಾಗಿದೆ.

"**ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ**" ಕತೆಯಲ್ಲಿ ಭೂ ಪ್ರಶ್ನೆ ವಿವರಗಳು ದೊರೆತರು ಇಲ್ಲಿ ದಲಿತರಿಗೆ ಮೂಲಭೂತವಾಗಿ ಭೂಮಿಯ ಒಡೆತನ ಇಲ್ಲದಿರುವುದನ್ನು ಕಾಣುತ್ತೇವೆ. ರಂಗನ ಕುರಿತು ನೀಡುವ ವಿವರಣೆಯನ್ನು ಗಮನಿಸಬಹುದು."ರಂಗ, ರಂಗಪ್ಪ, ರಂಗಸ್ವಾಮಿ, ಹೀಗೆ ತಮಗೆ ತಕ್ಕಹಾಗೆ ಆ ಊರಿನ ಜನರ ಕರೆಯುವರು. ಅವನ ಅಪ್ಪ ಅವ್ವ ಎತ್ತಲವರೊ ಏನೋ. ಅವನಂತೂ ಎರಡು ಬೆಳೆ ಪೈರಿನಿಂದಲೂ ಆ ಸೀಮೆಯ ಮಣ್ಣನ್ನೆ ಮಯ್ಯಿ ಕಯ್ಯಿಗೆ ಮೆತ್ತಿಕೊಂಡು ಬೆಳೆದಂಥವನು, ಅವನಿಗೆ ಅಪ್ಪನಪ್ಪನ ಕಾಲದಿಂದಲೂ ಅವನದಾದ ಆಸ್ತಿ ಎಂಬುದಿಲ್ಲ. ಒಂದು ಜೋಪಡಿ ಒಂದು ಹೆಂಡತಿ, ಒಂದು ಆರೇಳು ವರ್ಷದ ಮಗ ಅದಷ್ಟು ಇದ್ದು ಅದಷ್ಟೆ ಅವನ ಆಸ್ತಿ ಎಂಬಂತಿದೆ."[೯] ಇಲ್ಲಿ ಭೂಮಾಲೀಕತ್ವವು ದಲಿತರಿಗೆ ಇಲ್ಲದಿರುವುದು ಕಂಡುಬರುತ್ತದೆ.ಈ ಕತೆಯಲ್ಲಿ ಮೂರು ತಲೆಮಾರುಗಳನ್ನು ಕಳೆದರೂ ದಲಿತರಿಗೆ ಭೂ ಒಡೆತನ ಇಲ್ಲದಿರುವುದು ವ್ಯಕ್ತವಾಗುತ್ತದೆ.

ಈ ಕತೆಯಲ್ಲಿ ದಲಿತ ಕುಟುಂಬವು ತಲತಲಾಂತರಗಳಿಂದಲೂ ಭೂಮಾಲೀಕನ ಮನೆಯಲ್ಲಿ ಜೀತಮಾಡಿಕೊಂಡು ಬರುತ್ತಿರುವುದು ಸಂಪ್ರದಾಯವಾಗಿದೆ. ಈ ಕುರಿತು ರಂಗಪ್ಪನು "ಹುಟ್ಟಿದಾರಭ್ಯ ದಿನಪ್ರತಿ ಆ ಊರ ಗೌಡರ ಹೊಲದಲ್ಲಿ ರಾತ್ರಿ ಹಗಲು ಮಾಡುತ್ತ ಬಂದಿರುವನು. ಅವನು ಮಾಡೊ ಉಳುಮೆಗೆ ಗೌಡರ ಹಟ್ಟಿ ಕಂಬ ನಿಂತಿದೆ ನೋಡಿ ಅಂತ ಊರವರು ಅಂತಾರೆ. ಅಂತೆ ಅವನ ಜೋಪಡಿ ಅವನ ಹೆಂಡತಿ ಅವನ ಮಗ ಅವನ ರಟ್ಟೆಯ ಬಲದ ಮೇಲೆ ನಿಂತಿವೆ."[೧೦] ದಲಿತರ ನಿಜದುಡಿಮೆಯ ಬೆವರನ್ನು ಭೂಮಾಲೀಕ ದೋಚುವ, ಶ್ರಮದ ಶೋಷಣೆಯನ್ನು ಇಲ್ಲಿ ಕಾಣುತ್ತೇವೆ. ದಲಿತ ಬದುಕು ಕೇವಲ ಜೀತ ಮಾಡಿಕೊಂಡು ಇದ್ದು ಬಿಡುವ ಶೋಷಣೆಯ ಭೀಕರತೆ ಇಲ್ಲಿ ವ್ಯಕ್ತವಾಗುತ್ತದೆ. ಜೀತ ಮತ್ತು ದಲಿತನ ಬದುಕು ಅಳಿವು ಉಳಿವಿನ ಪ್ರಶ್ನೆಯಾಗಿರುವುದನ್ನು ಕಾಣುತ್ತೇವೆ.

ಶಾಸ್ತ್ರಿಮೇಷ್ಟ್ರು ಮನೆಗೆ ಹೋದ ರಂಗಪ್ಪನನ್ನು ಕುರಿತು ಶಾಸ್ತ್ರಿಗಳು ಹೇಳುವಂತೆ ನಮ್ಮ ರಂಗಪ್ಪ ಅಂತಂದ್ರೆ ವ್ಯವಸಾಯದಲ್ಲಿ ಸಿಸ್ಟೀಮು ಎಂದು ಮಾತಿನ ಹುರಿದುಂಬಿಸಿ ಶೋಷಿಸುವ ಹುನ್ನಾರವನ್ನು ಕಾಣುತ್ತೇವೆ. ಈ

ಶಾಸ್ತ್ರಿಮೇಸ್ಟ್ರು ಮಾತನಾಡುತ್ತಾ, "ರಂಗಪ್ಪನ ಕಡೆಗೆ ತಿರುಗಿ ಮತ್ತೇನಯ್ಯ ರಂಗಯ್ಯಾ ಈ ಸಲ ಮಳೆ ಬೆಳೆ ಹೇಗನ್ನುತ್ತೆ ಅಂದರು. ಅದಕ್ಕವ ಹೆಂಗೇಳಕಾಗುತ್ತೆ ಹೇಳಿ ಬುದ್ದಿ ಎಲ್ಲ ಅವನಿಚ್ಚೆ ನೋಡಿ, ಎಂದು ಮುಗಿಸಿ ತಡೆದು ಮತ್ತೆ ಹೋದಸಲವಂತೂ ಅರ್ಧಕ್ಕರ್ಧ ಕೈಗತ್ತಲಿಲ್ಲ ಅಳಿ. ಅಂಥದ್ರಲ್ಲಿ ಕಂಡವರ ಹೊಲ ನೆಚ್ಕಂಡು ಹೊಟ್ಟೆ ಹಿಡ್ಕೊಂಡಿರೋ ನಾವು ಎತ್ತಾಗ ಹೋಗ್ಬೇಕು ಅಳಿ."[೧೧] ತನ್ನ ದುಡಿತಕ್ಕೆ ಪ್ರತಿಫಲ ದಕ್ಕದೆ ಇರುವುದು ಆತನ ಮಾತಿನಿಂದ ವ್ಯಕ್ತವಾಗುತ್ತದೆ. ಶಾಸ್ತ್ರಿಯನ್ನು ಪ್ರಶ್ನಿಸುತ್ತಾನೆ. ಇಲ್ಲಿ ಭೂಮಿ ತನ್ನದಲ್ಲದ ಮತ್ತು ಕೊಡಬೇಕಾದ ಗೇಣಿ ಅಧಿಕವಾಗಿ ನೀಡಬೇಕಾಗಿದೆ. ತಾನು ಬೆಳೆದ ಬೆಳೆಯಲ್ಲಿ ಗೇಣಿಯನ್ನು ಹೆಚ್ಚಿನ ಪ್ರಮಾಣದಲ್ಲಿ ನೀಡುವುದು, ಆತನಿಗೆ ನಿರಾಸೆಯ ಕಾರ್ಮೋಡ ಕವಿದು ತನ್ನ ಬದುಕಿನಿಂದ ವಿಮುಖನನ್ನಾಗಿ ಮಾಡುತ್ತದೆ. ಬೆಳೆದ ಬೆಳೆ ತನಗೆ ದಕ್ಕದೆ ಎಲ್ಲವೂ ಒಡೆಯರ ಪಾಲಾಗಿ, ಸಾಲವು ಸಹ ತೀರದೆ ಹಾಗೆಯೇ ಉಳಿಯುತ್ತದೆ. ಭೂಮಾಲೀಕರ ಶೋಷಣೆಯಿಂದಾಗಿ ದಲಿತರ ಬದುಕು ದುಸ್ತರವಾಗಿ ಮುಂದಿನ ದಾರಿ ಕಾಣದೆ ಶೋಷಣೆಯ ಕರಾಳತೆಯಿಂದಾಗಿ ರೈತನಾಗುವ ಕನಸನ್ನು ನುಚ್ಚು ನೂರು ಮಾಡುತ್ತದೆ. ಆತ ಎಷ್ಟು ದುಡಿದರೂ ತನ್ನ ಕುಟುಂಬವನ್ನು ಸಂತೋಷವಾಗಿಡಲು ಸಾಧ್ಯವಾಗದೆ ಒಂದುಹೊತ್ತು ಸರಿಯಾಗಿ ಊಟವೂ ಮಾಡಲು ಆಗದೇ ಇರುವ ಸ್ಥಿತಿಯನ್ನು ಕಾಣುತ್ತೇವೆ. ತನ್ನ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯದೇ ಇರುವುದು ಆತನ ಅರಿವಿಗೆ ಬಂದಿರುವುದನ್ನು ಈ ಕತೆಯು ಧ್ವನಿಸುತ್ತದೆ.

**ಕೊನೆ ಟಿಪ್ಪಣಿ**

೧.ಟಿ.ಪಿ.ಅಶೋಕ,ಪುಟ

೨. ದೇವನೂರು, ಒಡಲಾಳ,ಪುಟ ೫೯,೬೦.

೩. ಅದೇ ಪುಟ ೬೧

೪. ದೇವನೂರು,ಕುಸುಮಬಾಲೆ,ಪುಟ ೭೬

೫. ಅದೇ ಪುಟ ೬೮

೬.ದೇವನೂರು, ಗ್ರಸ್ತರು, ದೇವನೂರು ಮಹಾದೇವರ ಅವರ ಕೃತಿಗಳು ಪುಟ ೮

೭.ಅದೇ ಪುಟ ೯

೮.ಅದೇ ಪುಟ ೧೨

೯.ದೇವನೂರು, ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ

೧೦.ಅದೇ ಪುಟ ೩೫

೧೧.ಅದೇ ಪುಟ ೩೯

## ೪.೨.೧೧ ಶಾಂತರಸ : ರೈತರ ಉರಿವ ಬದುಕು

ಹೈದ್ರಾಬಾದ್ ಕರ್ನಾಟಕವು ರಾಯಚೂರು ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟು ಚಾರಿತ್ರಿಕವಾಗಿ ನಿಜಾಮರಿಂದ ಆಡಳಿತಕ್ಕೊಳಪಟ್ಟ ಪ್ರದೇಶವಾಗಿತ್ತು. ಈ ಹಿನ್ನೆಲೆಯಲ್ಲಿ ಶಾಂತರಸರ ಕತೆಗಳು, ಚಾರಿತ್ರಿಕ ಮತ್ತು ವಾಸ್ತವದ ನೆಲೆಯಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದಾಗಿದೆ. ಈ ಕುರಿತು, "ಕುವೆಂಪು ಕಾದಂಬರಿಗಳು, ಕಾರಂತರ ಕಾದಂಬರಿಗಳು, ರಾವ್‌ಬಹಾದ್ದೂರರ ಗ್ರಾಮಾಯಣ ಯಾವ ಅರ್ಥದಲ್ಲಿ ದೇಸಿಯೋ ಅದೇ ಅರ್ಥದಲ್ಲಿ ಶಾಂತರಸರ ಕತೆಗಳೂ ದೇಸೀ ಆಗಿವೆ. ಒಂದು ಸ್ಥಳದಲ್ಲಿ, ಊರಿನಲ್ಲಿ ಊರಿಕೊಂಡು ಬದುಕುವ ಜನ ನಿಧಾನವಾಗಿ ಪರಸ್ಥಳದ, ಪರದೇಸಿಯ ಪ್ರಭಾವಕ್ಕೆ ಅಥವಾ ಆಘಾತಕ್ಕೆ ಗುರಿಯಾಗುತ್ತಾರೆ. ಒಟ್ಟು ಬದುಕಿನ ವಿನ್ಯಾಸ ಸೂಕ್ಷ್ಮವಾಗಿ ಆದರೆ ಮಹತ್ವಪೂರ್ಣ ಎಂಬ ರೀತಿಯಲ್ಲಿ ಬದಲಾಗುತ್ತದೆ."[೧] ಈ ರೀತಿಯ ಶಾಂತರಸರ ಪ್ರಾದೇಶಿಕ ಭೂ ವ್ಯವಸಾಯ ಸಂಬಂಧಗಳು ಅವರ ಕತೆಗಳಲ್ಲಿ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದಾಗಿದೆ.

ಶಾಂತರಸರ ಎಲ್ಲಾ ಕತೆಗಳಲ್ಲಿ ಹೆಣ್ಣು ಮತ್ತು ಅಧಿಕಾರ ಹಾಗೂ ಭೂಮಾಲೀಕರಿಂದ ದೌರ್ಜನ್ಯಕ್ಕೆ ಒಳಗಾಗಿರುವ ಚಿತ್ರಣವನ್ನು ಕಾಣುತ್ತೇವೆ. "ಶಾಂತರಸರಲ್ಲಿ ಈ ಭೂಮಾಲೀಕರಷ್ಟೇ ನಿರಂಕುಶವಾಗಿದ್ದ ನಿಜಾಮ್ ಆಡಳಿತದ ದಬ್ಬಾಳಿಕೆಗಳ ಚಿತ್ರವೂ ಇರುವುದು ಹಾಗೂ ಇದನ್ನು ಕೊಡುವುದು ಶಾಂತರಸರ ತಲೆಮಾರಿಗೆ ಮಾತ್ರ ಸಾಧ್ಯ. ಜಮೀನ್ದಾರೀ ಆಳುವ ವರ್ಗವನ್ನು ಮತ್ತು ಹೆಣ್ಣಿನ ಅಸ್ತಿತ್ವವನ್ನು ಶಾಂತಸರು ಹೇಗೆ ಕಂಡರಿಸಿದ್ದಾರೆ ಎನ್ನುವುದು ನನ್ನ ಕುತೂಹಲದಲ್ಲಿ ಮೊದಲ ಸಂಗತಿಯಾಗಿದೆ. ಜಮೀನ್ದಾರೀ ವ್ಯವಸ್ಥೆ ಮತ್ತು ಬಡವರ್ಗದ ಆರ್ಥಿಕ ಸಂಬಂಧಗಳ ಅನ್ವೇಷಣೆ ಕುಂವೀಗೆ ಮುಖ್ಯವಾದರೆ, ಶಾಂತರಸರಿಗೆ ಲೈಂಗಿಕ ಸಂಬಂಧಗಳ ಮೂಲಕ ಆಳುವ ವರ್ಗದ ನೈತಿಕ ಪತನವನ್ನು ಸೂಚಿಸುವುದು ಮುಖ್ಯವಾಗಿವೆ."[೨] ಅವರ ಬಹುಪಾಲು ಕತೆಗಳಲ್ಲಿ ಇಂತಹ ಭೂ ಸಮಸ್ಯೆಯ ಸುತ್ತ ಹೆಣೆಯಲಾದ ಕಥಾವಸ್ತುವನ್ನು ಈ ರೀತಿಯಾಗಿ ಕಂಡುಬರುತ್ತವೆ. ಇಲ್ಲಿ ಭೂಮಾಲೀಕರ ಮತ್ತು ಆಡಳಿತಶಾಹಿವರ್ಗ ಹಾಗೂ ಜನಪ್ರತಿನಿಧಿಗಳು ರೈತರ ಉರಿವ ಬದುಕಿನೊಂದಿಗೆ ವರ್ತಿಸುವ ಆಶಯ ಈ ಕತೆಯಲ್ಲಿ ಧ್ವನಿತವಾಗಿದೆ.

ಶಾಂತರಸರ ಕತೆಗಳಲ್ಲಿ ಹೈದ್ರಾಬಾದ್ ನಿಜಾಮರ ಕಾಲದ ಆಡಳಿತದ ಛಾಯೆಗಳು ಕಂಡುಬರುತ್ತವೆ. ಭೀಕರ ಬರಗಾಲದ ಸಂದರ್ಭದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ರೈತರ ಉರಿವ ಬದುಕಿನೊಡನೆ ವರ್ತಿಸುವ ಬಗೆಯನ್ನು ಈ ಕತೆಯು ಧ್ವನಿಸುತ್ತದೆ. ಸಾವು ಸತ್ತಾಗ ಕತೆಯು ಪ್ರಕೃತಿ ವಿಕೋಪದ ನೆಲೆಯಲ್ಲಿ ನಿರೂಪಿತವಾಗಿದೆ. ಭೂಮಾಲೀಕರ ವಂಚನೆ,ಸರ್ಕಾರದ ಯೋಜನೆಗಳು ರೈತರಿಗೆ ಹುಸಿಭರವಸೆಗಳನ್ನು ತುಂಬುವ ಚಿತ್ರಣವನ್ನು ಸಾವುಸತ್ತಾಗ ಕತೆ ಕಟ್ಟಿಕೊಡುತ್ತದೆ.

"**ಸಾವು ಸತ್ತಾಗ**" ಕತೆಯಲ್ಲಿ ಊರಿನಲ್ಲಿ ಬರಗಾಲ, ಕಿತ್ತು ತಿನ್ನುವ ಬಡತನ, ಹಸಿವಿನ ಪ್ರಶ್ನೆ ಮೊದಲಾದ ಆಶಯಗಳು ಕಂಡು ಬರುತ್ತದೆ. ಈರಣ್ಣ ಮತ್ತು ರಷೀದ ಮಾಸ್ತರು ಊರಿನಲ್ಲಿ ಅನ್ಯಾಯದ ವಿರುದ್ಧ ಎಚ್ಚರಿಸುತ್ತಿದ್ದ ಪ್ರಗತಿಪರ ಚಿಂತಕರು. ಬರಗಾಲಪೀಡಿತ ಪ್ರದೇಶವನ್ನು ಪರಿಶೀಲಿಸಲು ವಿಮಾನದಲ್ಲಿ ಅಧ್ಯಯನ ಸಮಿತಿಯ ತಂಡ ಬರುತ್ತದೆಂದು ಈ ಊರಿನ ಜನ ಕಾಯುತ್ತಿರುತ್ತಾರೆ. ಇದಕ್ಕೂ ಮುನ್ನ ತಹಶೀಲ್ದಾರರು ಮತ್ತು ಪೊಲೀಸರು ಶೋಷಣೆ ಕುರಿತಾದ ಹಾಡನ್ನು ಹಾಡಿದ್ದರಿಂದ ಈರಣ್ಣನನ್ನು ಮತ್ತು ರಷೀದ ಮಾಸ್ತರನ್ನುಬಂಧಿಸಲು ಯತ್ನಿಸುತ್ತಾರೆ. ಇದು ರಾಜಕೀಯ ಪುಢಾರಿಗಳಿಂದ ಬಂದ ಆದೇಶವನ್ನು ಪಾಲಿಸುವ ಸಲುವಾಗಿ ಈರಣ್ಣನನ್ನು ಒಂದು ದಿನದ ಮಟ್ಟಿಗೆ ಜೈಲಿನಲ್ಲಿರಿಸುತ್ತಾರೆ.

ಬರಗಾಲ ವೀಕ್ಷಣೆಗೆಂದು ಬಂದ ಅಧ್ಯಯನ ತಂಡವು ಹೋದ ಬಳಿಕ ಊರಿಗೆ ಎಂ.ಎಲ್.ಎ.ಗಳು, ಹಾಗೂ ಎಂ.ಪಿಗಳು ಬರುತ್ತಾರೆ. ಆ ಊರಿನ ಭೂಮಾಲೀಕರಾದ ಬೆಟ್ಟಪ್ಪ ಮತ್ತು ಗೋವಿಂದಪ್ಪನ ನೇತೃತ್ವದಲ್ಲಿ ಊರಿಗೆ ರಾಜಕಾರಣಿಗಳ ಆಗಮನವಾಗುತ್ತದೆ. ಆಗ ಊರಲ್ಲಿ ಸಮಾರಂಭವನ್ನು ಏರ್ಪಡಿಸಲಾಗುತ್ತದೆ. ಇಲ್ಲಿ ಭೀಕರ ಬರಗಾಲದ ಪರಿಣಾಮವಾಗಿ ಹಸಿವಿನಿಂದ ಊರಿನ ಜನ ತತ್ತರಿಸುತ್ತಿದ್ದಾರೆ. ಆದರೆ ಊರಿಗೆ ರಾಜಕಾರಣಿಗಳು ಬರುತ್ತಿರುವುದರಿಂದ ಸಮಾರಂಭವನ್ನು ಅದ್ದೂರಿಯಾಗಿ ಮಾಡಬೇಕೆನ್ನುವುದು ಭೂಮಾಲೀಕರ ಇಂಗಿತವಾಗಿದೆ. ಈ ರಾಜಕಾರಣಿಗಳನ್ನು ಸಂತೋಷ ಪಡಿಸಲು ಸಾಂಸ್ಕೃತಿಕ ಕಾರ್ಯಕ್ರಮವನ್ನು ಏರ್ಪಡಿಸುತ್ತಾರೆ. ಅಲ್ಲದೆ ಈರಣ್ಣನ ನೇತೃತ್ವದಲ್ಲಿ ಈ ಸಮಾರಂಭವನ್ನು ನಡೆಸುವಂತೆ ತೀರ್ಮಾನಿಸಲಾಗುತ್ತದೆ. ಇಂತಹ ಸಂಕಷ್ಟ ಕಾಲದಲ್ಲೂ

ಸಮಾರಂಭದಲ್ಲಿ ಅವರಿಗೆ ಹಾಡು ಕುಣಿತಾ ಬೇಕಾಗಿದೆ.

ಈ ಸಮಾರಂಭದಲ್ಲಿ ಬರಗಾಲಪೀಡಿತ ಜನರಿಗೆ ಪರಿಹಾರದ ಬಗ್ಗೆ ರಾಜಕಾರಣಿಗಳಿಂದ ಭರವಸೆಗಳ ಸುರಿಮಳೆಯಾಗುತ್ತದೆ.ರಾಜ್ಯಸರ್ಕಾರದಲ್ಲಿ ಬರಪರಿಹಾರಕ್ಕೆ ಬೊಕ್ಕಸದಲ್ಲಿ ಹಣವಿಲ್ಲ ಕೇಂದ್ರಸರ್ಕಾರದ ಹಣ ಬಿಡುಗಡೆಯಾದ ನಂತರದಲ್ಲಿ ಪರಿಹಾರ ನೀಡುವುದಾಗಿ ಭರವಸೆಯನ್ನು ನೀಡುತ್ತಾರೆ. ಆದರೆ ಊರಿನ ಜನ" ಕೇಂದ್ರದ್ದು ಬರಾಕ ಇನ್ನು ಎಷ್ಟು ದಿನ ಬೇಕು?ನಾಕೆಂಟ್ ದಿನ ಹಿಂಗೇ ಕಳದ್ರೆ ಉಪವಾಸದಿಂದ ಕೆಲವ್ರು ಸತ್ತೇ ಹೋಗ್‌ತಾರೆ."[೩] ಎಂದು ಹೇಳುವಾಗ ರೈತರ ದುರಂತದ ಬದುಕನ್ನು ಈ ಊರಿನಲ್ಲಿ ಕಾಣುತ್ತೇವೆ.

ಸರ್ಕಾರದ ಯೋಜನೆಗಳು ರೈತರನ್ನು ತಲುಪದೇ ಇರುವ ದುರಂತ ಕತೆಯಲ್ಲಿ ವ್ಯಕ್ತವಾಗುತ್ತದೆ. ಸಮಾರಂಭ ನಡೆಯುತ್ತಿದ್ದ ಸಂದರ್ಭದಲ್ಲಿ ಬರಪರಿಹಾರ ಬರುವವರೆಗೆ ಊರಿನ ಗೌಡರು ಜೋಳದ ಧಾನ್ಯವನ್ನು ನೀಡುವುದಾಗಿ ತಹಶೀಲ್ದಾರರಿಂದ ಭರವಸೆ ಮಾತು ಬರುತ್ತದೆ."ಈಗ ಯಾರ‍್ಯಾರ ಮನೆಯವರು ಉಪವಾಸ ಇದ್ರಿ ಅವ್‌ರಿಗೆಲ್ಲ ನಾಳೆ ತಮ್ಮ ಹಗೇವು ತೆಗೆಸಿ ನಾಕ್‌ನಾಕ್ ಸೇರಿ ಜ್ವಾಳಾ ಕೊಡಾಕ ಬೆಟ್ಟಪ್ಪ ಮತ್ತು ಗೋವಿಂದಪ್ಪನವರು ಒಪ್ಪಿಗೆಂಡಾರ. ಕಾಮಗಾರಿ ಸುರು ಆದ್‌ಮ್ಯಾಲ ಇದರ ಬಾಬತ್ ರೊಕ್ಕ ಮುರ್ಕಂತಾರ."[೪]ಎಂದು ತಶೀಲ್ದಾರ ಹೇಳುತ್ತಾನೆ.

ಆದರೆ ಇದು ಹುಸಿ ಭರವಸೆಯಾಗುತ್ತದೆ. ಜ್ವಾಳವನ್ನು ಕೊಡಲು ಭೂಮಾಲೀಕರು ನಿರಾಕರಿಸುತ್ತಾರೆ. ಇದು ಹುಸಿಭರವಸೆಯೆಂದು ತಿಳಿದ ಜನರನ್ನು ಪೊಲೀಸರ ಮೂಲಕ ಭೂಮಾಲೀಕರು ಊರ ಜನರನ್ನು ಹತ್ತಿಕ್ಕುತ್ತಾರೆ. ಮುಂದೆ ಏನೂ ಕಾಣದೆ "ಮುಂದೇನ್ ಮಾಡ್ಬೇಕ್ ಈರಣ್ಣಾ? ಸರಕಾರದವರಂತೂ ಏನೂ ಮಾಡಂಗ ಕಾಣೋದಿಲ್ಲ. ಎಂದು ನೆರದವರಲ್ಲಿ ಒಬ್ಬ ಕೇಳಿದ. ನನಗೂ ಏನು ತಿಳಿದಂಗ ಆಗೇದ. ಇಲ್ಲಿ ಉಪವಾಸ ಸಾಯುವುದಕ್ಕಿಂತ ಊರು ಬುಟ್ಟು ಹೋಗದೇ ಬೇಸು ಯಾರ್ ದಾರಿ ಅವ್ರೇ ನೋಡ್‌ಕೆಂಬದು ಒಳ್ಳೇದು. ನಾನಂತೂ ಊರು ಬಿಡ ವಿಚಾರ ಮಾಡೀನಿ."[೫] ಎಂದು ಈರಣ್ಣ ಪ್ರತಿಕ್ರಿಯಿಸುತ್ತಾನೆ.

ಹತಾಶ ಬದುಕಿನ ಹಿಂದೆ ಹಸಿವಿನ ಪ್ರಶ್ನೆ ಇದೆ. ಸರ್ಕಾರದ ಭರವಸೆಗಳು ಗಾಳಿ ಊದಿದ ಬಲೂನು ಒಡೆದಂತೆ ನಿರಾಶೆಯ ಕಾರ್ಮೋಡಗಳಾಗುತ್ತವೆ. ಆಹಾರದ ಸಮಸ್ಯೆಯಿಂದಾಗಿ ಜನರ ಬದುಕು ಜರ್ಜರಿತಗೊಳ್ಳುತ್ತದೆ.ಈ ಊರಿನಲ್ಲಿ ಒಕ್ಕಲುತನವನ್ನೇ ನಿರಾಕರಿಸುವುದನ್ನು ಕಾಣುತ್ತೇವೆ.ಹೈಸ್ಕೂಲಿಗೆ ಅರವಿಂದ ಎಂಬ ಅಧ್ಯಾಪಕ ವರ್ಗವಾಗಿ ಬರುತ್ತಾನೆ. ಈ ಊರಿನ ಪರಿಸ್ಥಿತಿ ಗಮನಿಸಿ ಅರವಿಂದ ವಿಚಾರ ವೇದಿಕೆ ಸ್ಥಾಪಿಸುತ್ತಾನೆ.ರೈತರಿಗಾಗುತ್ತಿದ್ದ ಅನ್ಯಾಯ ಅಲ್ಲದೆ ಅನೇಕ ವಿಚಾರಗಳನ್ನು ಊರ ಜನರಿಗೆ ತಿಳಿಸುತ್ತಾನೆ.

**ಕೊನೆ ಟಿಪ್ಪಣಿ**

೧.ಬಿಸಿಲ ಹನಿಗಳು, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು,ರಾಯಚೂರು.

೨.ರಹಮತ್ ತರೀಕೆರೆ ,ಶಾಂತರಸರ ಸಮಗ್ರ ಕತೆಗಳು,ಪ್ರತಿಕ್ರಿಯೆ

೩.ಶಾಂತರಸರ ಸಮಗ್ರ ಕತೆಗಳು, ಪುಟ ೩೪೪

೪.ಅದೇಪುಟ ೩೪೬

೫.ಅದೇ ಪುಟ ೩೪೮

## ೪.೨.೧೨ ಬೆಸಗರಹಳ್ಳಿರಾಮಣ್ಣ : ಭೂ ಅನ್ಯಾಯದ ವಿರುದ್ಧ ಆತ್ಯಂತಿಕ ಹೋರಾಟ

ಬೆಸಗರಹಳ್ಳಿ ರಾಮಣ್ಣನವರ ಕಥೆಗಳು, ಕನ್ನಡ ಸಾಹಿತ್ಯ ವಲಯದಲ್ಲಿ ಭೂ ಪ್ರಶ್ನೆ ಕುರಿತಾಗಿ ಇಂದಿಗೂ ಪ್ರಸ್ತುತವಾಗಿರುವುದನ್ನು ಕಾಣಬಹುದಾಗಿದೆ. ಕಥಾ ರಚನೆ ಕುರಿತು ಕ್ಯಾತನಹಳ್ಳಿ ರಾಮಣ್ಣನವರು ಹೇಳುವಂತೆ, "ಟಾಲ್‌ಸ್ಟಾಯ್, ಮೈಕೆಲ್ ಶೋಲಕೋವ್, ಥಾಮಸ್ ಹಾರ್ಡಿ ಮುಂತಾದ ಹೊರದೇಶಗಳ ಪ್ರಮುಖ ಲೇಖಕರಿಂದಲೂ ಪ್ರಭಾವಿತನಾಗಿದ್ದೇನೆ ಎಂದು ರಾಮಣ್ಣ ಅವರೇ ಹೇಳಿಕೊಂಡರೂ ಅವರ ಕತೆಗಳಲ್ಲಿ ನಮಗೆ ಪ್ರಮುಖವಾಗಿ ಕಂಡು ಬರುವುದು ಕುವೆಂಪು, ಜೀ.ಶಂಪ, ಸುಧಾಕರ ಮುಂತಾದವರ ಛಾಯೆ ಎಂಬುದಾಗಿದೆ."[೧] ಗ್ರಾಮೀಣ ನೆಲೆಯಿಂದ ಬಂದ ರಾಮಣ್ಣನವರು, ಗ್ರಾಮೀಣ ರೈತರ ಬದುಕನ್ನು ದಟ್ಟವಾದ ಅನುಭವಗಳ ಮೂಲಕ ಕತೆಗಳಾಗಿ ಕಟ್ಟಿಕೊಡುತ್ತಾರೆ. ಇದೇ ಕಾಲಕ್ಕೇ ತಮ್ಮ ಕಥನಗಳ ಮೂಲಕ ಭೂ ಅನ್ಯಾಯದ ವಿರುದ್ಧದ ಆತ್ಯಂತಿಕ ಹೋರಾಟದ ಆಶಯವನ್ನು ವ್ಯಕ್ತಪಡಿಸುತ್ತಾರೆ.

ಬೆಸಗರಹಳ್ಳಿಯವರು ಗ್ರಾಮೀಣ ಜನತೆಯ ಸಮಸ್ಯೆಯ ವಾಸ್ತವದ ನೆಲೆಗಟ್ಟನ್ನು ಕತೆಯಾಗಿಸುವ ಕಲೆಗಾರಿಕೆ ಇವರಲ್ಲಿ ಕಂಡುಬರುತ್ತದೆ. ಇದಕ್ಕೆ ಪೂರಕವಾಗಿ ಜಿ.ಎಸ್.ಆಮೂರ ಹೇಳುವಂತೆ, "ಬೆಸಗರಹಳ್ಳಿಯವರ ವಾಸ್ತವವಾದ ಘೋಷಿತ ಸಾಮಾಜಿಕ ವಾಸ್ತವವಾದವಲ್ಲವಾದರೂ ಅದಕ್ಕೆ ತೀರ ಹತ್ತಿರವಾದುದು. ಅವರ ಶ್ರೇಷ್ಠ ಕತೆಗಳಲ್ಲಿ ಕೇವಲ ವಾಸ್ತವದ ವಿರುದ್ಧ ಪ್ರತಿಭಟನೆಯಲ್ಲಿ ಸಮಾಜವಾದೀ ಶಕ್ತಿಗಳನ್ನು ಗುರುತಿಸಿ ನಿರೂಪಿಸಿರುವ ಪ್ರಯತ್ನವು ಇದೆ. ಈ ಶಕ್ತಿಗಳನ್ನು ಅವರು ವೈಜ್ಞಾನಿಕವಾಗಿ ಹಾಗೂ ಒಳಗಿನಿಂದ ನಿರೂಪಿಸುತ್ತಾರೆ."[೨] ಸಮಾಜವಾದಿ ಚಳವಳಿ ಕನ್ನಡ ನಾಡಿನಲ್ಲಿ ಉಚ್ಛ್ರಾಯಸ್ಥಿತಿಯಲ್ಲಿದ್ದ ಕಾಲದಲ್ಲಿ ರಾಮಣ್ಣನವರು ಬರೆಯತೊಡಗಿದರು. ಅವರ ಒಟ್ಟಾರೆ ಕತೆಗಳ ಆಶಯಗಳಲ್ಲಿ ಸಮಾಜವಾದಿ ಚಿಂತನೆಯನೆಲೆಯನ್ನು ಕಾಣಬಹುದಾಗಿದೆ. ಭೂ ಮತ್ತು ರೈತ ಪ್ರಶ್ನೆ ಕುರಿತು ಬೆಸಗರಹಳ್ಳಿಯವರು ಪರಿಹಾರ ಸೂಚಿಸುವ ಆಶಯಗಳನ್ನು ತಾತ್ವಿಕನೆಲೆಯ ಮೂಲಕ ಸ್ಥೂಲವಾಗಿ ಹೀಗೆ ಗ್ರಹಿಸಬಹುದಾಗಿದೆ.

ಕರ್ನಾಟಕದ ಸಾಂಸ್ಕೃತಿಲೋಕದಲ್ಲಿ ಹಾಗೂ ರಾಜಕೀಯ ವಲಯದಲ್ಲಾದ ಬದಲಾವಣೆಯ ಪರಿಣಾಮವು ಸಾಹಿತ್ಯದ ಮೇಲೂ ಪ್ರಭಾವ ಬೀರಿರುವುದನ್ನು ನೋಡಬಹುದಾಗಿದೆ. ಕರ್ನಾಟಕದಲ್ಲಿ ಆದ ಭೂಸುಧಾರಣೆ ತಿದ್ದುಪಡಿಯಿಂದಾಗಿ ಭೂ ಪ್ರಶ್ನೆಯೆಂಬುದು ಅವರ ಕತೆಗಳಲ್ಲಿ ಮುಖ್ಯವಸ್ತುವಾಗಿರುವುದನ್ನು ಕಾಣುತ್ತೇವೆ. ಈ ಸುಧಾರಣೆಯಿಂದಾಗಿ ಮಂಡ್ಯ ಮೈಸೂರು ಭಾಗಗಳಲ್ಲಿ ದೊಡ್ಡ ರಾಜಕಾರಣವಾಗಿ ಪರಿಣಮಿಸಿ ಭೂನ್ಯಾಯಮಂಡಳಿಯ ರಾಜಕೀಯ ಹುನ್ನಾರಗಳು ಇವರ ಕಥಾವಸ್ತುವಾಗಿರುವುದನ್ನು ಗಮನಿಸಬಹುದು. ಇವರ ಒಟ್ಟಾರೆ ಕತೆಗಳ ಸಂದರ್ಭದಲ್ಲಿ ಇಂಥ ಪರಿಣಾಮ ಆಗಿರುವುದನ್ನು ಸ್ಥೂಲವಾಗಿ ಗಮನಿಸಬಹುದಾಗಿದೆ. ಇವರ ಕತೆಗಳಲ್ಲಿ ಭೂ ಪ್ರಶ್ನೆಯೊಂದಿಗೆ ಅಂತರ್ಗತವಾಗಿರುವ ಆಡಳಿತಶಾಹಿ ಪ್ರಶ್ನೆ, ಶೋಷಣೆಯ ಪ್ರಶ್ನೆ, ಭೂ ಒಡೆತನದ ಪ್ರಶ್ನೆ, ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧದ ಪ್ರಶ್ನೆ, ಕಾನೂನಿನ ಪ್ರಶ್ನೆ, ಜೀತಪ್ರಶ್ನೆಗಳು ಇವರ ಕತೆಗಳಲ್ಲಿ ವ್ಯಕ್ತಗೊಂಡಿವೆ.

ಬೆಸಗರಹಳ್ಳಿಯವರ ಕತೆಗಳಲ್ಲಿ ಕಾನೂನಿನ ನೆಲೆ,ಹೋರಾಟ ನೆಲೆ, ಹಕ್ಕಿನ ನೆಲೆಯ, ಅಧಿಕಾರಿಶಾಹಿ ನೆಲೆಯ ಮೂಲಕ ವ್ಯಕ್ತಗೊಳ್ಳುತ್ತವೆ. ಬೆಟ್ಟದ ಮೇಲೊಂದು ಮನೆಯ ಮಾಡಿ, ಅವ್ವ, ಕತೆಗಳನ್ನು ಈ ನಿಟ್ಟಿನಲ್ಲಿ ಗಮನಿಸಬಹುದು. ಇವರ ಕಥನಗಳಲ್ಲಿ ಭೂ ಅನ್ಯಾಯದ ವಿರುದ್ಧದ ಆತ್ಯಂತಿಕ ಹೋರಾಟ ನಡೆಯುವುದನ್ನು ಕಾಣಬಹುದಾಗಿದೆ. ಗೇಣಿ ರೈತ ಸ್ವತಂತ್ರ ರೈತನಾಗಿ ಅಸ್ತಿತ್ವ ಪಡೆಯಲಾಗದೆ ಭೂಮಾಲೀಕನ ವಿರುದ್ಧ ಪ್ರತಿಭಟನೆಯನ್ನು ವ್ಯಕ್ತಪಡಿಸುವುದು ಆತ್ಯಂತಿಕ ಹೋರಾಟವಾಗಿ ಕಂಡುಬರುತ್ತದೆ. ಜೀತ ಕತೆಯು ವಿಧಿವಾದದ ನೆಲೆಯಲ್ಲಿ ವ್ಯಕ್ತವಾಗುತ್ತದೆ.ಇವರ ಅವ್ವ, ಸುಗ್ಗಿ ಕತೆಗಳಲ್ಲಿ ರೈತ ಮಹಿಳಾ ಪ್ರಶ್ನೆ ನೆಲೆಯ ಆಶಯಗಳು ವ್ಯಕ್ತವಾಗಿವೆ. ಈ ಹಿನ್ನೆಲೆಯಲ್ಲಿ ಅವರ ಪ್ರಾತಿನಿಧಿಕ ಕತೆಗಳಾದ **ತಾಯಿ, ಬೆಟ್ಟದ ಮೇಲೊಂದು ಮನೆಯ ಮಾಡಿ, ಚಲುವನ ಪರಂಗಿ ಗಿಡಗಳು, ಸುಗ್ಗಿ, ಅವ್ವ** ಕತೆಗಳನ್ನು ಅಧ್ಯಯನ ಮಾಡಲಾಗಿದೆ.

ಬೆಸಗರಹಳ್ಳಿ ರಾಮಣ್ಣನವರ ಮಹಿಳಾಪಾತ್ರಗಳು ಗಟ್ಟಿಯಾದ ನೆಲೆಯಲ್ಲಿ ಚಿತ್ರಣವಾಗಿರುವುದು ಅವರ ಕಥನದ ಶಕ್ತಿಯಾಗಿದೆ. ಅವರ "**ತಾಯಿ** "ಕತೆಯು ಈ ನೆಲೆಯಲ್ಲಿ ಸಮರ್ಥವಾಗಿ ರೈತಾಪಿಬದುಕನ್ನು ಕಟ್ಟಿಕೊಡುತ್ತದೆ. ಇಲ್ಲಿ ಹಳೇತಲೆಮಾರಿನಲ್ಲಿರುವ ನೈತಿಕತೆಯನ್ನು ಹೊಸತಲೆಮಾರಿನವರಲ್ಲಿ ನೈತಿಕತೆ ಗೈರುಹಾಜರಾಗಿರುವುದನ್ನು ಈ ಕತೆಯು ಧ್ವನಿಸುತ್ತದೆ.ಇಂಥ ನೈತಿಕ ಪ್ರಶ್ನೆ ಕಂಡುಕೊಳ್ಳಲು ಭೂಮಿಸಮಸ್ಯೆಯನ್ನು ಇಟ್ಟುಕೊಂಡು

ನೋಡಹೊರಟಿರುವುದು ಬೆಸಗರಹಳ್ಳಿ ರಾಮಣ್ಣನವರ ವಿಶೇಷತೆಯಾಗಿದೆ. ಕರ್ನಾಟಕದಲ್ಲಿ ಭೂ ಸುಧಾರಣೆ ಶಾಸನ ಜಾರಿಯಾದ ನಂತರ ಭೂ ಹಕ್ಕಿನ್ನು ಕುರಿತಾಗಿ ಹೆಣೆಯಲಾದ ಕತೆಯಾಗಿದೆ.

ತಾಯಿ ಉರುಗಮ್ಮನ ಬಳಿಗೆ ಬೋರಮ್ಮ ಬಂದು ಸತ್ಯಕ್ಕೆ ಬೆಲೆಯಿಲ್ಲ ಎಂದು ಹೇಳುತ್ತಾ, ಚನ್ನಮ್ಮನ ಪರವಾಗಿ ಬೋರಮ್ಮ ವಕಾಲತ್ತು ವಹಿಸುತ್ತಾಳೆ. ಚನ್ನಮ್ಮ ವಿಧವೆ ಮಕ್ಕಳಿರುವಾಕೆ, ನಮ್ಮೂರ ಚಂದ್ರುಸೆಟ್ಟಿ ಈಕೆಯ ಎರಡೂವರೆ ಎಕರೆ ಭೂಮಿಯನ್ನು ಲಪಟಾಯಿಸಲು ಸಂಚು ರೂಪಿಸುತ್ತಿರುವ ವಿಚಾರವನ್ನು ಉರುಗಮ್ಮನಿಗೆ ತಿಳಿಸುತ್ತಾಳೆ.

೧೯೭೪ರಲ್ಲಿ ಭೂ ಸುಧಾರಣೆ ಕಾನೂನು ಬಂದ ಹೊಸತರಲ್ಲಿ ಭೂವಿನ್ಯಾಸದಲ್ಲಾದ ಬದಲಾವಣೆ ಕುರಿತು ಗ್ರಾಮೀಣ ಜನತೆಯಲ್ಲಿ ಕಾನೂನಿನ ಜ್ಞಾನದ ಬಗ್ಗೆ ಬೋರಮ್ಮನ ಪಾತ್ರದಿಂದ ವ್ಯಕ್ತವಾಗುತ್ತದೆ. "ತೆನ್ನೆನ್ಸೀ ಆಟು,(ಟೆನೆನ್ಸಿ ಆಕ್ಟ್) ಅಂತ ಬಂದಿದ್ದದಂತಲ್ಲವ್ವ. ಅದಕ್ಕೆ ಇವಳ ಸಿಗುಸುಕೊಂಡು ಅವರಿವರ ಬಾಯಿಗೆ ಚೆನ್ನಾಗಿ ತನ್ನೆಡ ತೀದ ಊದುಬುಟ್ಟು ನಾನೇ ಭೂಮಿ ಮಾಡ್ತಿದ್ದೆ, ತೆನೆನ್ಸೀ ಆಟುಪರ್‌ಕಾರ ಉಳುವುನ್ದೇನೇ ಭೂಮಿ ಅಂತೀರಲ್ಲ, ನಂಗೆ ಕೊಡಿ ಬೇಕಾದ್ರೆ ಜಮೀನ ಉತ್ತ ಬಿತ್ತು ಬ್ಯಾಸಾಯ ಮಾಡ್ತಿದ್ದೋರು ಯಾರು ಅಂತ ಆಜುಬಾಜು ಗದ್ದೆಯೋರ ಸಾಕ್ಷ ಕೇಳಿ ಅಂತ ದುಪ್ಪೀ ಕಮೀಸ್ರು, ಆಸಿಟ್ಟು ಕಮೀಸ್ರುಗೆಲ್ಲ ಅರ್ಜಿ ಎಟ್ಟವನಂತೆ ..."[೩]

ಈ ಕತೆಯ ಕಾಲಕ್ಕೆ ಟೆನೆನ್ಸಿ ಕಾಯ್ದೆ ಜಾರಿಯಾಗಿರುವುದು ವ್ಯಕ್ತವಾಗುತ್ತದೆ.ಇಲ್ಲಿ ವಿಧವೆ ಚೆನ್ನಮ್ಮನ ಎರಡೂವರೆ ಎಕರೆ ಜಮೀನನ್ನು ಲಪಟಾಯಿಸಿರುವ ಚಂದ್ರಶೆಟ್ಟಿಯು ರಾಜಕೀಯ ಹುನ್ನಾರದ ಮೂಲಕ ಆಸ್ತಿಯನ್ನು ತನ್ನ ಹೆಸರಿಗೆ ವರ್ಗಾಯಿಸಲು ಯತ್ನಿಸುತ್ತಾನೆ. ಇದನ್ನು ತಪ್ಪಿಸಲು ಈ ಇಬ್ಬರು ಮಹಿಳೆಯರು ಹೋರಾಡುವ ಚಿತ್ರಣವಿದೆ. ಇಲ್ಲಿ ಅಧಿಕಾರಿಶಾಹಿಯು ಭೂ ಪ್ರಶ್ನೆಯೊಂದಿಗೆ ಶಾಮೀಲಾಗಿರುವುದನ್ನು ಕಾಣಬಹುದಾಗಿದೆ. ಸರ್ಕಾರದ ಧೋರಣೆಯಂತೆ ಉಳುವವನೆ ನೆಲದೊಡೆಯ ಎಂಬ ಆಶಯವಿದೆ. ಆದರೆ ಭೂಸುಧಾರಣೆಯ ಜಾರಿಯಾಗುವಲ್ಲಿ ಭೂನ್ಯಾಯ ಮಂಡಳಿಯ ರಾಜಕೀಯದ ಹುನ್ನಾರಗಳು ಇಲ್ಲಿ ಅನಾವರಣಗೊಳ್ಳುತ್ತವೆ.

ಈ ಸೆಟ್ಟೀ ಭೂಮಿಯನ್ನು ತನ್ನ ಹೆಸರಿಗೆ ಮಾಡಿಕೊಳ್ಳಲು ಕಂದಾಯ ಇಲಾಖೆಯ ಅಧಿಕಾರಿಗಳಾದ ವಿಲೇಜ್ ಅಕೌಂಟೆಂಟ್, ಶೇಕ್‌ದಾರ್ ಅವರೊಂದಿಗೆ ಷಾಮೀಲಾಗಿ ರಿಕಾರ್ಡ್‌ನೆಲ್ಲಾ ಬದಲಾಯಿಸುವ ಯತ್ನದ ಗುಮಾನಿಯಿಂದಾಗಿ ಬೋರಮ್ಮ ತನ್ನ ಶಂಕೆಯನ್ನು ವ್ಯಕ್ತಪಡಿಸುತ್ತಾಳೆ. ಈ ಕುತಂತ್ರದಲ್ಲಿ ಉರುಗಮ್ಮನ ಮಗ ವಿಲೇಜ್ ಅಕೌಂಟೆಂಟ್ ಸೆಟ್ಟಿಯ ಕಡೆಯಿಂದ ಎರಡು ಸಾವಿರ ಲಂಚ ತಿಂದಿರುವ ವಿಚಾರವನ್ನು ಬೋರಮ್ಮ ಉರುಗಮ್ಮನಿಗೆ ತಿಳಿಸುತ್ತಾಳೆ.

ಈ ಲಂಚ ಪಡೆಯಲು ಉರುಗಮ್ಮನ ಸೊಸೆಯು ತನ್ನ ಗಂಡನಿಗೆ ನೆರವಾಗುತ್ತಾಳೆ. ವಿಲೇಜ್ ಅಕೌಂಟೆಂಟ್‌ನ ತಾಯಿ ಉರುಗಮ್ಮ ಹೇಳುವಂತೆ ಒಂದು ಮನೆ ಉಳಿಸೋ ಶಕ್ತಿ ನಿನಗಿದೆ, ದೊಡ್ಡ ಮನಸ್ಸು ಮಾಡಿ ಉಳಿಸು ಎಂದು ಸಲಹೆ ನೀಡುತ್ತಾಳೆ.ತಾಯಿ ಉರುಗಮ್ಮ ತನ್ನ ಮಗನ ಸಂಪಾದನೆ ೭೫೦ ರೂಪಾಯಿ. ಅದರ ಮೇಲೆ ಸಂಪಾದನೆ ಮಾಡಿದ ಪಾಪದ ಹಣದಿಂದಲೇ ನನಗೆ ಹೊಟ್ಟೆಯಲ್ಲಿ ಕ್ಯಾನ್ಸರ್ ಬಂದಿದೆ ಎಂದು ಭಾವಿಸುತ್ತಾಳೆ.

ಇಲ್ಲಿ ಭೂ ದಾಖಲೆಗಳನ್ನು ತಿರುಚಲು ಲಂಚ ಪಡೆದು ಬೇರೆಯವರ ಹೆಸರಿಗೆ ಮಾಡುವ ಅಧಿಕಾರಿಶಾಹಿಯ ಹುನ್ನಾರವನ್ನು ತಾಯಿಯಿಂದ ಬಯಲಿಗೆ ಬರುತ್ತದೆ. ಬೋರಮ್ಮ ಮತ್ತು ಉರುಗಮ್ಮನ ಜೊತೆಯಲ್ಲಿ ಬರುವಾಗ ಮಾತನಾಡುತ್ತಾ, ತನ್ನ ಮಗ ಪುಟ್ಟರಾಜಪ್ಪ ಪಾಣಿಯನ್ನು ಬರೆಯದಿದ್ದರೆ, ಈ ಸೆಟ್ಟಿ ಚನ್ನಮ್ಮನಿಗೆ ಮೋಸ ಮಾಡಲು ಆಗುತ್ತಿರಲಿಲ್ಲ ಎಂದು ಮಾತನಾಡಿಕೊಳ್ಳುತ್ತಾರೆ. ಆದರೆ ಹಣ ನುಂಗುವರಿಗೆ, ತೀರ್ಥಪ್ರಸಾದದ ಸಮಾರಾಧನೆ ಮೂಲಕ ತಾಲ್ಲೂಕು ಭೂನ್ಯಾಯಮಂಡಲಿಯನ್ನೇ ತನ್ನ ವಶೀಕರಣ ವಿದ್ಯೆಯ ಮೂಲಕ ಹತೋಟಿತೆಗೆದುಕೊಳ್ಳುವ ಚಂದ್ರುಸೆಟ್ಟಿಯ ಸಂಚು ಈ ತಾಯಿ ಉರುಗಮ್ಮನಿಗೆ ತಿಳಿಯುತ್ತದೆ. ಆದರೂ ಈ ಚಂದ್ರಶೆಟ್ಟಿ ತನ್ನ ಕುಟಿಲೋಪಾಯಗಳಿಂದ ಭೂಮಿಯನ್ನು ವಶಪಡಿಸಿಕೊಳ್ಳಲು ಯತ್ನಿಸುತ್ತಾನೆ.

ವಿಧವೆ ಚನ್ನಮ್ಮ ಶ್ರೀರಂಗಪುರದ ಅಸಿಸ್ಟೆಂಟ್ ಕಮೀಷನರ್ ಕೃಷ್ಣಕುಮಾರ್‌ರವರಿಗೆ ದೂರು ನೀಡಲು ಹೋಗುತ್ತಾಳೆ. ಅಲ್ಲಿ ಭೂ ನ್ಯಾಯಮಂಡಳಿ ಸದಸ್ಯರಿಗೆ ರುಚಿಸಿದ್ದ ಸೆಟ್ಟಿಯ ಪ್ರಸಾದದಿಂದ ತಮ್ಮದು ನ್ಯಾಯಸಮ್ಮತವಾದುದು ಎಂದು ತೀರ್ಮಾನ ವ್ಯಕ್ತಪಡಿಸುತ್ತಾನೆ. ಆದರೆ ದಕ್ಷ ಯುವ ಐ.ಎ.ಎಸ್. ಅಧಿಕಾರಿಗೆ ತನ್ನ ದೂರನ್ನು ಚನ್ನಮ್ಮ ನೀಡುತ್ತಾಳೆ. ವಿಚಾರದಲ್ಲಿ ತಹಶೀಲ್ದಾರರಿಗೂ ಈ ಕೇಸಿನ ಹೂರಣವೆಲ್ಲ ಗೊತ್ತಿದ್ದರೂ

ಸ್ಥಳೀಯ ಪ್ರಭಾವಿ ಪುಢಾರಿಗಳಾದ ಭೂನ್ಯಾಯಮಂಡಳಿ ಸದಸ್ಯರುಗಳನ್ನು ಎದುರುಹಾಕಿಕೊಳ್ಳುವುದೇಕೆ ಭೂನ್ಯಾಯಮಂಡಳಿ ಅಧ್ಯಕ್ಷರಿಗೆ ವಹಿಸಿದರಾಯಿತು. ಭೂ ನ್ಯಾಯಮಂಡಳಿಯಲ್ಲಿ ಚನ್ನಮ್ಮನ ಕೇಸು ಶನಿವಾರ ಬರುವುದಾಗಿ ಹಳ್ಳಿಯ ಜನರಿಗೆ ತಿಳಿಯುತ್ತದೆ. ಅದಕ್ಕಾಗಿ,ಕಾತುರದಿಂದ, "ಈ ದಿನ ನ್ಯಾಯಕ್ಕೆ ವಿಜಯವೋ ಅಥವಾ ಅನ್ಯಾಯಕ್ಕೆ ವಿಜಯವೋ ಎಂಬುದು ತೀರ್ಮಾನವಾಗಿ, ಈ ಭೂ ನ್ಯಾಯ ಮಂಡಳಿಗಳೋ ಎಂಬ ನಗ್ನ ಸತ್ಯ ಬಯಲಾಗುವುದೆಂದು"[೫] ಜನರು ಬಹು ಕುತೂಹಲದಿಂದ ನೋಡುವ ಚಿತ್ರಣವನ್ನು ಇಲ್ಲಿ ಕಾಣುತ್ತೇವೆ.

"ಮಾನ್ಯ ಸದಸ್ಯರೆ ಇಡೀ ಭೂ ನ್ಯಾಯಮಂಡಲಿಯ ಸದಸ್ಯರು ಹಾಗೂ ಅಧ್ಯಕ್ಷರೂ ಲಂಚದ ಆಪಾದನೆಗೆ ಗುರಿಯಾಗಿದ್ದಾರೆ ಎಂಬ ಗೂಢಾರ್ಥವನ್ನು ಈ ಅರ್ಜಿಗಳು ಧ್ವನಿಸುತ್ತವೆ. ಆದ್ದರಿಂದ ಸ್ಥಳ ಪರಿಶೀಲನೆ ಮಾಡದೆ, ಜಮೀನಿನ ಬಳಿ ಹತ್ತಾರು ಜನ ಸಾರ್ವಜನಿಕರ ಎದುರಿಗೆ ಬಾಜುದಾರರನ್ನು ಪರೀಕ್ಷಿಸದೆ, ನನಗೆ, ಎ.ಸಿ. ಸಾಹೇಬರಿಗೆ, ತಹಶೀಲ್ದಾರರಿಗೆ ಬಂದಿರುವ ಅರ್ಜಿಗಳ ಆಧಾರದ ಮೇಲೆ ಈ ಕೇಸನ್ನು ತೀರ್ಮಾನಿಸಲು ನನ್ನ ಸಂಪೂರ್ಣ ವಿರೋಧವಿದೆ. ಜೊತೆಗೆ ಭೂ ನ್ಯಾಯಮಂಡಲಿಗಳು ಬಡ ಜಮೀನ್ದಾರರಿಗೆ ನ್ಯಾಯ ದೊರಕಿಸಿಕೊಡುವುದು."[೫೫] ಎಂದು ತಿಳಿಸಿ ವಿಚಾರಣೆಯನ್ನು ನಾಳೆಗೆ ಮುಂದೂಡುತ್ತಾರೆ. ಆದರೆ ಎ.ಸಿ.ಸಾಹೇಬರು ಸ್ಥಳ ಪರಿಶೀಲನೆ ನಡೆಸಿ, ನಂತರ ತೀರ್ಮಾನ ತೆಗೆದುಕೊಳ್ಳುವುದಾಗಿ ತಿಳಿಸುತ್ತಾರೆ.

ಇತ್ತ ಉರುಗಮ್ಮ ದೇವ್ರೆ ಚನ್ನಮ್ಮನಿಗೆ ನ್ಯಾಯ ದೊರಕಿಸಿ ಕೊಡು ಎಂದು ಆಕಾಶದ ಕಡೆಗೆ ಕೈ ಜೋಡಿಸಿ ಚನ್ನಮ್ಮನಿಗೆ ಭೂಮಿ ದಕ್ಕಿದರೆ ಮುಂದಿನ ವರ್ಷದ ಗಂಟ ನಾನು ಸಾಯದೇ ಬದುಕಿದ್ದರೆ ನೀಲಸಂದ್ರ ಮಾಯಮ್ಮ ನಿಂಗೆ ಬಂದು ನನ್ನ ತಲೆ ಮುಡಿ ಕೊಡ್ತೀನಿ ಹರಕೆ ಹೊರುತ್ತಾಳೆ. ಇಲ್ಲಿ ಉರುಗಮ್ಮ ತನ್ನ ಸ್ವಗತ ಮಾತನ್ನು ಮುಂದುವರೆಸುತ್ತಾ, "ನೀನು ಪಾಣಿ ತಿದ್ದೀ ಅನ್ಯಾಯಮಾಡಿದ್ದೀ. ಅದನ್ನ ಕೂಡಲೇ ಸರಿಮಾಡಿ ಸತ್ಯ ಬರ್‍ದು ಒಂದು ಮನೆ ಉದ್ಧಾರಮಾಡು. ಲಂಚದ ದುಡ್ಡಿನ ಅನ್ನ ತಿಂದು ನನ್ನೊಟ್ಟೆ ಒಳಗೆ ಕ್ಯಾನ್ಸೋರ್ ಗಡ್ಡೆ ಬೆಳಕೋತು. ನನ್ನದೊಂದೀ ಮಾತ ನಡೀಸ್ಕೋಡು"[೬] ಎಂದು ತನ್ನ ಪುತ್ರನಿಗೆ ಉರುಗಮ್ಮ ಅಂಗಲಾಚಿ ಬೇಡಿಕೊಳ್ಳುತ್ತಾಳೆ. ಈ ತಾಯಿಯ ಬೇಡಿಕೆಯನ್ನು ಮಗ ನಿರಾಕರಿಸುತ್ತಾನೆ.

ಅಷ್ಟರಲ್ಲಿ ಚೆನ್ನಮ್ಮನ ಜಮೀನಿನ ವಿಚಾರಣೆ ಭೂನ್ಯಾಯಮಂಡಳಿ ಮುಂದೆ ಬಂದು ವಿಚಾರಣೆ ಮಾಡಲಾಗುತ್ತದೆ. ವಿಚಾರಣೆ ಮಾಡಿದ ಸಂದರ್ಭದಲ್ಲಿ ಸೆಟ್ಟಿಯಪರವಾಗಿ ಕೆಲವರು ಸಾಕ್ಷಿಗಳನ್ನು ಹೇಳಲಾಗುತ್ತದೆ. ಕೊನೆಗೂ ಉರುಗಮ್ಮ ವಿಚಾರಣೆ ವೇಳೆ ಭೂ ನ್ಯಾಯಮಂಡಳಿಯ ಮುಂದೆ ನಡೆದ ವಿಚಾರದ ಸತ್ಯವನ್ನು ಹೇಳುತ್ತಾಳೆ.ಆಗ ತನ್ನ ಮಗ ವಿಲೇಜ್ ಅಕೌಂಟೆಂಟು ನಮ್ಮವ್ವ ಹೇಳುವುದು ಸತ್ಯ ಎಂದು ಒಪ್ಪಿಕೊಳ್ಳುತ್ತಾನೆ. ಮಗ ಸತ್ಯವನ್ನು ಹೇಳಿದ್ದಕ್ಕೆ ಉರುಗಮ್ಮ ತನ್ನ ಕಣ್ಣುಗಳಲ್ಲೇ ತುಂಬಿಕೊಳ್ಳುವಂತೆ ನೋಡುತ್ತಾಳೆ. ಕೊನೆಗೆ ಸತ್ಯದ ಸಂತಸದಲ್ಲಿ ಉರುಗಮ್ಮನ ಸಾವಿನಲ್ಲಿ ಅಂತ್ಯವಾಗುತ್ತದೆ.

ಭೂ ನ್ಯಾಯಮಂಡಳಿಯ ರಾಜಕೀಯ ಹುನ್ನಾರವನ್ನು ಅದರ ಅವ್ಯವಹಾರವನ್ನು ಕಥನವು ಸಹಜವಾಗಿ ವ್ಯಕ್ತಗೊಳಿಸಿದೆ.ಭೂಸುಧಾರಣಾ ಶಾಸನದಿಂದಾದ ಬದಲಾವಣೆಯು ಪ್ರತಿಫಲವು, ಭೂ ನ್ಯಾಯಮಂಡಳಿಯಲ್ಲಿ ಪಟ್ಟಭದ್ರಹಿತಾಸಕ್ತಿಗಳನ್ನು ಪೋಷಿಸುವ ಅಧಿಕಾರಿವರ್ಗ, ಇದಕ್ಕೆ ಸವಾಲೆಂಬಂತೆ ಚೆನ್ನಮ್ಮ ಮತ್ತು ಬೋರಮ್ಮ ಉರುಗಮ್ಮ ಮಹಿಳಾಶಕ್ತಿಗಳಾಗಿ ನಿಲ್ಲುತ್ತಾರೆ. ಭೂನ್ಯಾಯಮಂಡಳಿಯಲ್ಲಿ ಜಯಗಳಿಸುತ್ತಾರೆ. ಈ ಕತೆಯಲ್ಲಿ ಭೂಸುಧಾರಣಾ ಆಶಯಗಳು ವಿಫಲವಾಗುವ ದುರಂತದ ಚಿತ್ರಣವನ್ನು ಸಮರ್ಥವಾಗಿ ಧ್ವನಿಸಿದೆ.

**"ಬೆಟ್ಟದ ಮೇಲೊಂದು ಮನೆಯ ಮಾಡಿ"** ಕತೆಯಲ್ಲಿ ಒಂದು ಸಮೂಹದಲ್ಲಿರುವ ವರ್ಗ, ವರ್ಣಸಂಘರ್ಷದ ಹಿನ್ನೆಲೆಯಲ್ಲಿ ಭೂಹೀನ ರೈತರ ಕಡುಬಡತನ ಮತ್ತು ಭೂ ಒಡೆತನವುಳ್ಳ ಶ್ರೀಮಂತರೈತರ ದೌರ್ಜನ್ಯಗಳು ಚಿತ್ರಣಗೊಂಡಿವೆ. ಈ ಕತೆಯಲ್ಲಿ ರೈತ ಪ್ರಶ್ನೆಯಿದೆ, ಭೂ ಒಡೆತನದ ಹಕ್ಕಿನ ಪ್ರಶ್ನೆ ಇದೆ, ಗೇಣಿಸಮಸ್ಯೆಯಿದೆ, ಆರ್ಥಿಕ ಪ್ರಶ್ನೆಯೂ ಇದೆ.

ಈ ಕತೆಯಲ್ಲಿ ಭೂಮಾಲೀಕನ ದರ್ಪ ದೌರ್ಜನ್ಯಗಳ ಹಾಗೂ ಊಳಿಗಮಾನ್ಯಶಾಹಿ ವ್ಯವಸ್ಥೆಯ ವಿರುದ್ಧ ಯುವಕ ಊರಯ್ಯ ಹೋರಾಡುತ್ತಾನೆ.ತನ್ನ ದೇಹದ ರಕ್ತ ಬಸಿದು ದುಡಿದರೂ ತಾವೇ ದುಡಿದ ದುಡಿಮೆಯ ಫಲ ಉಣ್ಣಲಾಗದೇ ಈ ಕುಟುಂಬವು ಅವಮಾನವನ್ನು ಅನುಭವಿಸುತ್ತದೆ. ಇಂತಹ ಸ್ಥಿತಿಯನ್ನು ನೋಡಿದ ಯುವಕ ಊರಯ್ಯ ಸಿಡಿದೆದ್ದು ಪ್ರತಿಭಟಿಸುತ್ತಾನೆ.

ಹೋರಾಟದ ನೆಲೆಯಿಂದ ಹೊರಡುವ ಕತೆಯಲ್ಲಿ ಭೂಮಾಲೀಕರ ಶೋಷಣೆಯಿಂದಾಗಿ ಊರಯ್ಯನಂತಹ ಯುವಪೀಳಿಗೆಯಿಂದ ಆಕ್ರೋಶಕ್ಕೆ ತುತ್ತಾಗುತ್ತದೆ. ಹಳೆಯ ತಲೆಮಾರಿನ ಉರುಗಯ್ಯ ಭೂಮಾಲೀಕನ ದೌರ್ಜನ್ಯವನ್ನು ಮೌನವಾಗಿ ಸಹಿಸಿಕೊಂಡಿರುವ ಸ್ಥಿತಿ ಕಂಡುಬರುತ್ತದೆ. ಆದರೆ ಉರಗಯ್ಯನ ಮಗ ಊರಯ್ಯ ಭೂಮಾಲೀಕನ ಅನ್ಯಾಯದ ವಿರುದ್ಧ ಪ್ರತಿಭಟಿಸಲು ಅಂತರಂಗದಲ್ಲಿ ಕುದಿಯುತ್ತಾನೆ. ಇಲ್ಲಿ ಭೂಮಾಲೀಕ ಹರಿಶ್ಚಂದ್ರಯ್ಯನ ಜಮೀನಿನ ಗೇಣಿದಾರನಾಗಿ ಉರುಗಯ್ಯ ಕಷ್ಟವೊ ಸುಖವೋ ದುಡಿಯುತ್ತಿದ್ದಾನೆ. ಆದರೆ ಸಾಹುಕಾರ ಹರಿಶ್ಚಂದ್ರಯ್ಯನ ಜಮೀನಿನಲ್ಲಿ ಕುಟುಂಬದ ಸದಸ್ಯರೊಡಗೂಡಿ ಬಂದು ಇವರು ದುಡಿದು ಬೆಳೆದ ಬೆಳೆಯನ್ನೆಲ್ಲಾ ಭೂಮಾಲೀಕ ಹರಿಶ್ಚಂದ್ರಯ್ಯನಿಗೆ ನೀಡುವಂತೆ ತಾಕೀತು ಮಾಡಲಾಗುತ್ತದೆ. ಉರುಗಯ್ಯ ತಾನು ದುಡಿದ ಫಸಲು ಎಲ್ಲವನ್ನೂ ನೀಡಿದರೆ ತನ್ನ ಸಂಸಾರಕ್ಕೆ ಜೀವನ ಸಾಗಿಸುವುದು ಕಷ್ಟವೆಂದು ಹೇಳುತ್ತಾನೆ.

ಆದರೆ ಭೂಮಾಲೀಕ ತನ್ನ ಸಾಲಕ್ಕೆ ವಜಾಗೊಳಿಸಿದರೂ ಉರಗಯ್ಯನ ಸಾಲತೀರುವುದಿಲ್ಲ ಎಂದು ಬೆಳೆದ ಬೆಳೆಯೆಲ್ಲವನ್ನು ಹರಿಶ್ಚಂದ್ರಯ್ಯ ವಶಪಡಿಸಿಕೊಳ್ಳುತ್ತಾನೆ.ಇದು ಹರಿಶ್ಚಂದ್ರಯ್ಯನ ಸೋದರ ಮಾವ ತಂಗಪ್ಪನ ಕುತಂತ್ರದಿಂದ ಬೆಳೆಯನ್ನೆಲ್ಲಾ ಪಡೆಯುತ್ತಾರೆ. ಇಡೀ ಕುಟುಂಬವೇ ರಕ್ತ ಬಸಿದು ದುಡಿಯುತ್ತಿದೆ. ಕಣದ ತುಂಬ ರಾಶಿ ಬತ್ತವಿದೆ, ಹೋದ ಸಲಕ್ಕಿಂತ ಈ ಸಾರಿ ೭ ಖಂಡುಗ ಬತ್ತ ಬೆಳೆದಿದ್ದಾನೆ. ಆದರೆ ಭೂಮಾಲೀಕನಿಂದ ಹಳೆಯ ಬಾಕಿ ಮತ್ತು ಈಗಿನ ಬಾಕಿ ಸೇರಿ ೭ಕಾಲು ಖಂಡುಗ ಬತ್ತ ಗುತ್ತಿಗೆ ಕೊಡಬೇಕೆಂದು ಹೇಳುತ್ತಾನೆ. ತಾನು ಬೆಳೆದರೂ ತಮ್ಮ ಕುಟುಂಬ ಒಂದ್ಹೊತ್ತು ಊಟವಿಲ್ಲದೆ ಹಸಿವಿನಲ್ಲಿ ಬದುಕುತ್ತಿದೆ. ಇದು ತಿಳಿದಿದ್ದರೂ, ಭೂಮಾಲೀಕನಿಗೆ ಕರುಣೆ ಬಾರದೆ ತಾನು ಬೆಳೆದ ಬೆಳೆಯನ್ನೆಲ್ಲಾ ವಶಪಡಿಸಿಕೊಂಡರೂ,ಉರಗಯ್ಯನ ಸಾಲ ತೀರುವುದಿಲ್ಲ. ಉರುಗಯ್ಯನಿಗೆ ಸಾಲವನ್ನು ಮುಂದಿನ ಬೆಳೆಯಲ್ಲಿ ತೀರುವುದಾಗಿ ಹೇಳಿ ತಮಗೆ ಊಟಕ್ಕಾಗಿ ಬತ್ತ ಕೊಡಬೇಕೆಂದು ಒತ್ತಾಯಿಸುತ್ತಾರೆ. ಉರುಗಯ್ಯ ತೆಂಗಪ್ಪನ ಕಾಲಿಗೆ ಬಿದ್ದು ಬೇಡಿಕೊಂಡರೂ ನೀಡದೆ ನಿರಾಕರಿಸುತ್ತಾನೆ. ಊರಗೌಡನಾದ ಬುಡ್ಡೇಗೌಡನ ಎದುರಿಗೆ ತೆಂಗಪ್ಪ ದರ್ಪದಿಂದ ಉರುಗಯ್ಯನನ್ನು ಜಾಡಿಸಿ ಒದೆಯುತ್ತಾನೆ. ಅಲ್ಲಿಯೇ ಇದ್ದ ಉರುಗಯ್ಯನ ಮಗ ಊರಯ್ಯ ಇದನ್ನು ಪ್ರತಿಭಟಿಸುತ್ತಾನೆ. ತನ್ನ ತಂದಗೆ ಆದ ಅವಮಾನವನ್ನು ಸಹಿಸದೆ ಉರುಗಯ್ಯನ ಮಗ ಊರಯ್ಯ ಗಾಡಿ ತಡಿಕೆಯ ದಬ್ಬೆಯಿಂದ ತೆಂಗಪ್ಪನನ್ನು ಚನ್ನಾಗಿ ಥಳಿಸುತ್ತಾನೆ. ಇದಕ್ಕೂ ಜಗ್ಗದ ತೆಂಗಪ್ಪನ ದರ್ಪ ಮಿತಿ ಮೀರುತ್ತದೆ. ಊರಯ್ಯ ತನ್ನ ನಡುವಿನಲ್ಲಿದ್ದ ಬೆಟ್ಟುಗತ್ತಿಯಿಂದ ತೆಂಗಪ್ಪನ ರುಂಡವನ್ನು ಕತ್ತರಿಸುತ್ತಾನೆ. ಊರಯ್ಯನ ಬುಡ್ಡೇಗೌಡನ ಕಡೆಗೆ ತಿರುಗಿ "ಗೌಡ್ರೆ ನಮ್ಮಪ್ಪನಿಗೆ ಪಾಲು ಕೊಡಿಸಿ, ಸಾಹುಕಾರರ ಜಮೀನು ಗುತ್ತಿಗೆ ಮಾಡೋರ‍್ಗೆಲ್ಲಾ ಸರಿಯಾಗಿ ಪಾಲು ಕೊಡಿಸಿ"[೬]ಎನ್ನುತ್ತಾನೆ. ಕೊನೇ ಪಕ್ಷ ತಾವು ದುಡಿದದ್ದಕ್ಕೆ ಪಾಲು ಕೇಳುವ ಮೂಲಕ ನ್ಯಾಯ ದೊರಕಿಸಿ ಕೊಡಿ ಎಂದು ಆಗ್ರಹಿಸುತ್ತಾನೆ.

ಉರುಗಯ್ಯನ ಇಡೀ ಕುಟುಂಬವೇ ಭೂಮಾಲೀಕನ ಮನೆಯಲ್ಲಿ ಜೀತ ಮಾಡಿಕೊಂಡಿರುತ್ತದೆ. ಭೂಮಾಲೀಕರ ಭೂಮಿಯನ್ನು ಗೇಣಿ ಮಾಡಿಕೊಂಡಿದ್ದ ಉರುಗಯ್ಯನ ಕುಟುಂಬವನ್ನು ಸಾಲದ ರೂಪದಲ್ಲಿ ಶೋಷಿಸುತ್ತಾನೆ.ಇಲ್ಲಿ ಗೇಣಿ ರೈತನ ಶೋಷಣೆಯೇ ಮುಖ್ಯವಾಗಿದ್ದು, ಶೋಷಣೆಯ ವಿರುದ್ಧ ಊರಯ್ಯ ಪ್ರತಿಭಟನಾ ಶಕ್ತಿಯಾಗಿದ್ದಾನೆ. ದಲಿತ ಕುಟುಂಬಕ್ಕೆ ಆದ ಅನ್ಯಾಯಕ್ಕೆ ನ್ಯಾಯ ಕೇಳುವ ಯುವ ಶಕ್ತಿಯಾಗಿ ಊರಯ್ಯ ಕಂಡುಬರುತ್ತಾನೆ. ಇಲ್ಲಿ ಹಸಿವಿನ ಪ್ರಶ್ನೆ ಮುಖ್ಯವಾಗಿ ಕಂಡು ಬಂದರೂ, ದಲಿತ ಉರಗಯ್ಯ ಭೂಮಾಲಿಕ ಶೋಷಣೆಗೆ ಬಲಿಪಶುವಂತೆ ಕಾಣುತ್ತಾನೆ. ಆದರೆ ಉರಗಯ್ಯನ ಮಗ ಊರಯ್ಯ ಭೂಮಾಲೀಕನ ಶೋಷಣೆಯ ವಿರುದ್ಧ ಅರ್ಥಪೂರ್ಣ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾನೆ.ಕೆ ೂನೆಗೆ ಇನ್ನುಮೇಲಾದರೂ ನ್ಯಾಯವಾಗಿ ಗೇಣಿ ಪಡೆಯುವಂತೆ ಹೇಳು ಎಂದು ಜೊತೆಯಲ್ಲಿದ್ದ ಬುಡ್ಡೇಗೌಡನ ಮೂಲಕ ಭೂಮಾಲೀಕನಿಗೆ ತಿಳಿಸಲು ಹೇಳತ್ತಾನೆ.ಇಲ್ಲಿ ಗೇಣಿ ರೈತ ಸ್ವತಂತ್ರ ರೈತನಾಗಿ ಅಸ್ತಿತ್ವ ಪಡೆಯಲಾಗದೆ ಭೂಮಾಲೀಕನ ವಿರುದ್ಧ ಪ್ರತಿಭಟನೆಯನ್ನು ವ್ಯಕ್ತಪಡಿಸುವುದು ಕಂಡು ಬರುತ್ತದೆ. ಭೂಮಿಯನ್ನು ಗುತ್ತಿಗೆ ಪಡೆದುದಕ್ಕೆ ಗೇಣಿಪಾಲಿನಲ್ಲಿ ಹೆಚ್ಚು ಪಡೆದಿದ್ದಕ್ಕಾಗಿ ನ್ಯಾಯ ಕೇಳುವುದರ ಮೂಲಕ ಊರಯ್ಯ ತನ್ನ ಅರ್ಥಪೂರ್ಣ ಹೋರಾಟದ ಸಂಕೇತವಾಗಿ ನಿಲ್ಲುತ್ತಾನೆ.

"**ಚಲುವನ ಪರಂಗಿ ಗಿಡಗಳು**", ಕತೆಯು ಕೊರಡ್ಕಲ್ ಶ್ರೀನಿವಾಸರಾಯರ ಧಣಿಯರ ಸತ್ಯನಾರಾಯಣ ಕತೆಯಂತೆ ಸಾಮ್ಯತೆಯನ್ನು ಕಾಣುತ್ತೇವೆ. ಸತ್ಯನಾರಾಯಣ ಕತೆಯಲ್ಲಿ ಬೂದತುಕ್ರರು ಬಾಳೆಯನ್ನು ಬೆಳೆದು ಭೂಮಾಲೀಕನ ಕೆಂಗಣ್ಣಿಗೆ ಗುರಿಯಾಗುವಂತೆ ಚಲುವ ಪರಂಗಿ ಗಿಡವನ್ನು ಬೆಳೆದು ಭೂಮಾಲೀಕ ಗೋವಿಂದಸ್ವಾಮಿಯು ಕೆಂಗಣ್ಣಿಗೆ ಗುರಿಯಾಗುತ್ತಾನೆ. ಉತ್ತಿದವನೇ ಬೆಳೆಗೆ ಹಕ್ಕುದಾರ ಎಂಬ ಪರಿಕಲ್ಪನೆಗೆ ಧಕ್ಕೆ

ಬಂದಾಗ ಪ್ರತಿಭಟಿಸಲು ನಿಲ್ಲುವುದು ಚಲುವನಪರಂಗಿ ಗಿಡದಲ್ಲಿ ವ್ಯಕ್ತವಾಗಿದೆ.

ಕತೆ ಆರಂಭವಾಗುವುದು, ಸುಣ್ಣದಹಳ್ಳಿಯ ಹರಿಜನರ ಬದುಕಿನ ಮೂಲಕ ಗೋವಿಂದಸ್ವಾಮಿಯಂತಹ ಶ್ರೀಮಂತ ಜಮೀನ್ದಾರನ ಮುಷ್ಟಿಯಲ್ಲಿ ಸಿಲುಕಿ ಇಲ್ಲಿನ ಜನರು ನರಳುವುದನ್ನು ಕಾಣುತ್ತೇವೆ. ಶಾಲಾಭಿವೃದ್ಧಿಯ ಪೌಷ್ಠಿಕಾಂಶ ಯೋಜನೆಯ ಹಿನ್ನೆಲೆಯಲ್ಲಿ ಈ ಕತೆ ಆರಂಭವಾಗುತ್ತದೆ. ಸುಣ್ಣದಹಳ್ಳಿಯ ಚೇರ್ಮನ್ ಗೋವಿಂದಸ್ವಾಮಿ ಶಾಲಾಭಿವೃದ್ಧಿಯ ಹೆಸರಿನಲ್ಲಿ ಸರ್ಕಾರಿ ಸವಲತ್ತುಗಳನ್ನು ತನ್ನ ಸ್ವಂತಕ್ಕೆ ಬಳಸಿಕೊಳ್ಳುವುದು ಮತ್ತು ಭೂಹಿಡುವಳಿಗಳ ಕುರಿತು ಈಗಾಗಲೇ ಕಾನೂನು ಜಾರಿಯಾಗಿದ್ದರೂ ಸರ್ಕಾರಿ ಅಧಿಕಾರಿಗಳು ಮತ್ತು ರಾಜಕಾರಣಿಗಳ ಬೆಂಬಲದಿಂದ ಹರಿಜನರ ಆಸ್ತಿಪಾಸ್ತಿಗಳನ್ನು ತನ್ನದಾಗಿಸಿಕೊಳ್ಳುವ ತಂತ್ರವನ್ನು ಭೂಮಾಲೀಕ ಮಾಡುತ್ತಾನೆ. ಮೇಲ್ವರ್ಗದವರ ಕುತಂತ್ರ ಮತ್ತು ಶೋಷಣೆಯ ನೆಲೆಯನ್ನು ಕತೆಗಾರರು ಅನಾವರಣಗೊಳಿಸುತ್ತಾರೆ.

ಈ ಕತೆಯಲ್ಲಿ ೭ನೇ ತರಗತಿ ಓದುವ ಚೂಟಿ ಹುಡುಗ ಚಲುವ ತನ್ನ ಹಳ್ಳಿಯಲ್ಲಿ ನಡೆಯುತ್ತಿದ್ದ ಪೌಷ್ಠಿಕಾಂಶದ ಯೋಜನೆಯ ದಿನಾಚರಣೆ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾನೆ. ಈ ಪೌಷ್ಠಿಕಾಂಶವಾದ ಎ ಜೀವ ಸತ್ವದ ಅಂಶವು ಪರಂಗಿ ಹಣ್ಣುಗಳಲ್ಲಿ ಯಥೇಚ್ಛವಾಗಿ ಸಿಗುವುದರಿಂದ ಬಡವರು ಅವುಗಳನ್ನು ಸುಲಭವಾಗಿ ಬೆಳೆದು ತಿನ್ನಬಹುದೆಂಬ ವಿಚಾರ ತೋಟಗಾರಿಕೆ ಕ್ಷೇತ್ರದ ಮೇಲ್ವಿಚಾರಕರಾದ ಸುಬ್ಬಣ್ಣನವರಿಂದ ತಿಳಿಯುತ್ತದೆ. ಈ ಭಾಷಣದಿಂದ ಪ್ರಭಾವಿತನಾದ ಮೂಗೂರನ ಮಗ ಚಲುವ ತನ್ನ ಕುಟುಂಬದ ಮನವೊಲಿಸಿ ಪರಂಗಿ ಗಿಡಗಳನ್ನು ಬೆಳೆಸುತ್ತಾನೆ. ಪರಂಗಿಗಿಡ ಬೆಳೆದು ಗಿಡವಾಗಿ, ಮರವಾಗಿ, ಹೂವು ಬಿಟ್ಟು, ಹೀಚಾಗಿ, ಕಾಯಾಗಿ ಹಣ್ಣನ್ನು ಕೊಯ್ಯುವ ಸಂದರ್ಭದಲ್ಲಿ ದುಷ್ಟ ಭೂಮಾಲೀಕ ಗೋವಿಂದಸ್ವಾಮಿಯ ಕಣ್ಣು ಬೀಳುತ್ತದೆ. ಗೋವಿಂದಸ್ವಾಮಿಯ ಜಮೀನಿನ ಗುತ್ತಿಗೆದಾರನಾದ ಚಲುವನ ತಂದೆ ಮೂಗೂರ ಕಷ್ಟಪಟ್ಟು ಬೆಳೆದ ಬತ್ತದ ಬೆಳೆಯನ್ನು ಸಹ ಭೂಮಾಲೀಕ ತನ್ನ ಕಣಜಕ್ಕೆ ತುಂಬಿಕೊಂಡು ಅನ್ಯಾಯಕ್ಕೊಳಪಡಿಸಿರುತ್ತಾನೆ. ಇದರ ಪರಿಣಾಮವಾಗಿ ಹೊಲೆಯರನ್ನು ಮೂಗೂರ ಒಟ್ಟುಗೂಡಿಸಿಕೊಂಡು ಸಾಹುಕಾರನ ವಿರುದ್ಧ ಪ್ರತಿಭಟನೆ ವ್ಯಕ್ತಪಡಿಸುತ್ತಾನೆ. ಇದರಿಂದಾಗಿ ಭೂಮಾಲೀಕನ ಜಿದ್ದಿಗೆ ಮೂಗೂರ ಬೀಳುತ್ತಾನೆ. ಚಲುವ ಕಷ್ಟಪಟ್ಟು ಬೆಳೆಸಿದ್ದ ಪರಂಗಿ ಗಿಡಗಳ ಕಾಯಿಗಳನ್ನು ಕಿತ್ತು ಗಿಡಗಳನ್ನು ನಾಶಪಡಿಸಲು ಸಂದರ್ಭವನ್ನು ನೋಡಿ ಸಂಚು ರೂಪಿಸಿ, ಭೂಮಾಲೀಕ ಗೋವಿಂದಸ್ವಾಮಿ ತನ್ನ ಶಿಷ್ಯ ಗಣೇಶನೊಡಗೂಡಿ ಯತ್ನಿಸುತ್ತಾನೆ. ಈ ಅನ್ಯಾಯವನ್ನು ಕಂಡು ರೋಸಿ ಹೋದ ಚಲುವನ ತಂದೆ ಮೂಗೂರ ಕೈಯಲ್ಲಿ ಮಚ್ಚು ಹಿಡಿಯುವಂತೆ ಮಾಡುತ್ತದೆ. ಭೂಮಾಲೀಕನ ಶೋಷಣೆಯಿಂದ ನಲುಗಿ ಹೋದ ಮೂಗೂರ ರೊಚ್ಚು ಆಕ್ರೋಶವನ್ನು ಮಚ್ಚಿನ ಮೂಲಕ ವ್ಯಕ್ತಪಡಿಸುತ್ತಾನೆ. ಈ ರೀತಿ ಮೂಗೂರ ಸಿಡಿದೆದ್ದು ಜಮೀನ್ದಾರನ ಕ್ರೌರ್ಯದ ವಿರುದ್ದ ನಿಲ್ಲುವುದನ್ನು ಕಾಣುತ್ತೇವೆ. ಈ ಕತೆಯಲ್ಲಿ ಭೂಮಾಲೀಕನ ಶೋಷಣೆಯನ್ನು ಗೇಣಿ ರೈತ ಸತ್ವಪೂರ್ಣವಾಗಿ ಪ್ರತಿಭಟಿಸುವುದನ್ನು ನಿರೂಪಿಸಲಾಗಿದೆ.

"**ಸುಗ್ಗಿ**" ಕತೆಯಲ್ಲಿ ಮುಖ್ಯವಾಗಿ ಗ್ರಾಮೀಣ ಸೊಗಡನ್ನು ಪ್ರತಿಬಿಂಬಿಸುತ್ತದೆ.ಇದು ಅವಿಭಕ್ತಕುಟುಂಬದ ಸುಗ್ಗಿ ಕಣದ ಬತ್ತವನ್ನು ಪಾಲುಮಾಡುವುದರ ಸುತ್ತ ಹೆಣೆಯಲಾದ ಕಥಾವಸ್ತುವನ್ನು ಒಳಗೊಂಡಿದೆ. ಇಲ್ಲಿ ಬತ್ತ ಪಾಲುಮಾಡುವುದರ ಹಿಂದೆ ಪಿತ್ರಾರ್ಜಿತ ಆಸ್ತಿಯಾಗಿ ಬಂದ ಭೂಮಿಯನ್ನು ಹಂಚಿಕೊಳ್ಳುವ ಪ್ರಶ್ನೆ ವ್ಯಕ್ತವಾಗುತ್ತದೆ. ಈ ಕತೆಯಲ್ಲಿ ಘಟನೆಗಳ ಹಿನ್ನೆಲೆಯಲ್ಲಿ ಆಸ್ತಿಪಾಲಾಗುವುದು ತಪ್ಪುತ್ತದೆ.

ಈ ಭಾಗದ ರೈತರ ಸುಗ್ಗಿ ಸಂಭ್ರಮವನ್ನು ತುಂಬು ಲವಲವಿಕೆಯಿಂದ ರಾಮಣ್ಣನವರು ಚಿತ್ರಿಸಿದ್ದಾರೆ. ಸುಗ್ಗಿಯ ಆಚರಣೆ , ಸುಗ್ಗಿ ಪದಗಳು, ಕಣದಲ್ಲಿ ಕೃಷಿಕೂಲಿಗಾರರು ಕೇಕೇ ಹಾಕಿ ಕುಣಿಯುವ ಸಂಭ್ರಮ, ಮೊದಲಾದ ಚಿತ್ರಣವನ್ನು ರೈತ ಜೀವನದ ಉತ್ಸಾಹವನ್ನು ರಾಮಣ್ಣನವರು ತಮ್ಮ ಕತೆಯಲ್ಲಿ ಸೆರೆಹಿಡಿದಿದ್ದಾರೆ.

ಸಿದ್ದಣ್ಣ ಮತ್ತು ಪುಟ್ಟಸ್ವಾಮಣ್ಣರ ಸಹೋದರ ಸಂಬಂಧಕ್ಕೆ ಹುಳಿಹಿಂಡಲು ಮರಿದಿಮ್ಮ, ಕೆಂಪಣ್ಣ ಮುಂದಾಗುತ್ತಾರೆ. ಈ ಇಬ್ಬರು ಕುಟುಂಬದೊಳಗೆ ಒಡಕಿನ ಬೀಜ ಬಿತ್ತಲು ಯತ್ನಿಸುತ್ತಾರೆ. ಪುಟ್ಟಸ್ವಾಮಿಯ ಹೆಂಡತಿ ಬಸುರಿಯಾಗಿರುವ ಕಾರಣದಿಂದಾಗಿ ಪುಟ್ಟಸ್ವಾಮಣ್ಣನ ಹೆಂಡತಿ ಸರೋಜ ಪಾಲು ಮಾಡುವುದನ್ನು ವಿರೋಧಿಸುತ್ತಾಳೆ. ಆದರೂ ಮರಿದಿಮ್ಮ ಮತ್ತು ಕೆಂಪಣ್ಣ ಪಾಲು ಮಾಡಿ ಕಣಜದಲ್ಲಿ ಬತ್ತ ತುಂಬಲು ಇಟ್ಟಿಗೆ ಎಲ್ಲವನ್ನು ಸಿದ್ಧಗೊಳಿಸುತ್ತಾರೆ. ಇತ್ತ ಪಾಲಾಗುವುದಕ್ಕೆ ಯೋಚಿಸಿದ್ದ ಪುಟ್ಟಸ್ವಾಮಿಗೆ ಹಿಂದಿನ ನೆನಪು ಕಾಡತೊಡಗಿತು. "ಈಗ ಎಂಟು ಕಂಬದ ತೊಟ್ಟಿಯ ಮನೆ ಎರಡಾಗುತ್ತದೆ. ನಾಲ್ಕಾರು ತಲೆಮಾರುಗಳಿಂದ ಒಡೆಯದ ಮನೆ ಹೋಳಾಗುತ್ತದೆ. ಮಧ್ಯಕ್ಕೊಂದು ಗೋಡೆ, ಬಿರುಕು ಬಿಟ್ಟು ದೊಡ್ಡ ಕಂದರವಾಗುತ್ತದೆ.

ಹೀಗೆಯೇ ತಮ್ಮ ಮಕ್ಕಳು ಆಸ್ತಿಯೆಲ್ಲಾ ಚೂರುಚೂರು."[೪] ಆಸ್ತಿ ವಿಭಜನೆಯ ಜೊತೆಗೆ ಮನೆ ಮನಸ್ಸು ವಿಭಜನೆಯಾಗುವುದರ ಹಿಂದಿನ ಭಯವನ್ನು ಪುಟ್ಟಸ್ವಾಮಣ್ಣ ನೆನಪಿಸಿಕೊಳ್ಳುತ್ತಾನೆ. ಜೊತೆಗೆ ತಾಯಿ ಮಾತು ಮತ್ತು ತನ್ನ ಹೆಂಡತಿ ಮಾತಿನಿಂದ ಪುಟ್ಟಸ್ವಾಮಿ ಜರ್ಜರಿತನಾಗುತ್ತಾನೆ.

ಈತ ತನ್ನ ತಪ್ಪಿನ ಅರಿವಾಗಿ ಕಣದಲ್ಲೇ ಅಣ್ಣನೊಂದಿಗೆ ಪೂಜೆ ಸಲ್ಲಿಸುತ್ತಾನೆ. ಸಿದ್ದಣ್ಣ ಹೇಳಿದ ಮಾತಿಗೆ ಪುಟ್ಟಸ್ವಾಮಿ ದೊಡ್ಡ ಕಣಜಾನೇ ಎತ್ತರವಾಗಿ ಕಟ್ಟುವ ಬಗ್ಗೆ ಹೇಳುತ್ತಾನೆ. ಈ ವಿಚಾರ ತಿಳಿದು ಮರಿದಿಮ್ಮ ಕೆಂಪಣ್ಣರ ಕಡೆ ನೋಡಿದಾಗ ಅವರು ಮರೆಯಾಗುತ್ತಾರೆ. ಸುಗ್ಗಿ ಕತೆಯು ಬಿಗಿಯಾದ ಬಂಧದ ಮೂಲಕ ಹೆಣೆದಿರುವ ಕತೆಯಾಗಿದೆ. ಇಂತಹ ನಿಲುವಿನಿಂದಾಗಿ ಅವರ ಕುಟುಂಬ ಒಡೆಯದೆ ಒಂದಾಗುವುದರ ಜೊತೆಗೆ ಆಸ್ತಿಯು ಚೂರಾಗದೆ ಉಳಿಯುತ್ತದೆ. ಇತ್ತ ಪುಟ್ಟಸ್ವಾಮಿಯ ಹೆಂಡತಿ ಸರೋಜಳ ಗಂಡು ಮಗುವಿನ ಜನನದ ಸಂತಸ ಮತ್ತು ಸುಗ್ಗಿಯ ಸಂತಸ ಎರಡನ್ನು ಒಟ್ಟಿಗೆ ತರುವುದರ ಮೂಲಕ ಧನಾತ್ಮಕ ಆಶಯದೊಂದಿಗೆ ವ್ಯಕ್ತವಾಗುತ್ತದೆ.

ಈ ಕತೆಯಲ್ಲಿ ಪಿತ್ರಾರ್ಜಿತ ಆಸ್ತಿಯ ಹಕ್ಕಿನ ಮತ್ತು ತನ್ನ ಅಸ್ತಿತ್ವದ ಪ್ರಶ್ನೆಯಾಗಿ ಅದರ ಅಳಿವು ಉಳಿವು ಪ್ರಶ್ನೆಯಾಗಿ ಅಂತಿಮವಾಗಿ ಸುಖಾಂತ್ಯಗೊಳ್ಳುತ್ತದೆ. ಈ ಕತೆಯಲ್ಲಿ ಪ್ರಧಾನವಾಗಿ ರೈತರ ಬದುಕಿನ ಸಂಭ್ರಮ ಕ್ಷಣಗಳನ್ನು ಹಿಡಿದಿಡುವ ಶಕ್ತಿ ಬೆಸಗರಹಳ್ಳಿ ರಾಮಣ್ಣನವರಲ್ಲಿ ಮಾತ್ರ ಸಾಧ್ಯ.

"ಜೀತ" ಕತೆಯಲ್ಲಿ ಪ್ರಧಾನವಾಗಿ ಜೀತವ್ಯವಸ್ಥೆಯ ಸುತ್ತ ಭೂ ಪ್ರಶ್ನೆ ಕೇಂದ್ರಿಕೃತವಾಗಿರುವುದನ್ನು ಕಾಣಬಹುದಾಗಿದೆ. ಆದರೆ ಭೂಪ್ರಶ್ನೆಯಿಂದ ಹೊರಬರಲು ಇಲ್ಲಿನ ದಲಿತರ ಬದುಕು, ಜೀತಗಾರಿಕೆ ಸಮಸ್ಯೆ ಅಡ್ಡಿಯಾಗುತ್ತದೆ. ಅಲ್ಲದೆ ಭೂಮಾಲೀಕರ ಹಿಡಿತದಿಂದಲೂ, ಹೊರಬರಲು ಆಗದ ಅಸಹಾಯಕ ಸ್ಥಿತಿಯನ್ನು ಕಾಣುತ್ತೇವೆ. ಈ ಕಥೆಯ ನಾಯಕ ಪುಟ್ಟಸ್ವಾಮಿ ಭೂಮಾಲೀಕರನ್ನು ಪ್ರತಿಭಟಿಸಿ ಹೊರನಡೆಯುತ್ತಾನೆ. ಆದರೆ ಈ ಕಾಲಕ್ಕೆ ದಲಿತರಿಗೆ ಭೂಮಿ ದಕ್ಕಿದ್ದರೂ ಅದು ಉತ್ತಲು ಬಿತ್ತಲು ಆಗದೆ ಇರುವ ಸ್ಥಿತಿ ಕಂಡುಬರುತ್ತದೆ. ಇದರ ಪರಿಣಾಮವಾಗಿ ದಲಿತ ಕುಟುಂಬಕ್ಕೆ, ಜೀತ ಎಂಬುದು ಅನಿವಾರ್ಯವಾಗಿದೆ.

ಈ ಕತೆಯಲ್ಲಿ ದಲಿತ ಕುಟುಂಬದ ಅಣ್ಣ ತಮ್ಮಂದಿರಾದ ಚಿಕ್ಕರಾಮ ಭೂಮಾಲೀಕ ದೇವೀರಯ್ಯನ ಬಳಿ ಜೀತಕ್ಕಿದ್ದರೆ, ಈತನ ಅಣ್ಣ ಪುಟ್ಟಸ್ವಾಮಿ ಶಿವಲಿಂಗೇಗೌಡರ ಜೀತದಾಳಾಗಿ ದುಡಿಯುತ್ತಿದ್ದಾನೆ. ಈ ಎರಡು ಮಂದಿ ಭೂಮಾಲೀಕರ ಶೋಷಣೆಯ ಪರಮಾವಧಿಯಾಗಿರುವುದು ಈ ಕತೆಯಲ್ಲಿ ವ್ಯಕ್ತವಾಗುತ್ತದೆ.ಭೂಮಾಲೀಕ ದೇವೀರಯ್ಯನಿಗೆ ತಮ್ಮ ದನಗಳಿಂದಲೇ ಕಬ್ಬಿನಗದ್ದೆಯನ್ನು ಹಾಳುಮಾಡಿರುವುದು ಆಕ್ರೋಶಕ್ಕೆ ಕಾರಣವಾಗುತ್ತದೆ. ಚಿಕ್ಕರಾಮ ಬೆಳೆಯೆಲ್ಲಾ ಮೇಯಿಸಿದ್ದರಿಂದ, ಬೆಳೆಗಳು ಹಾಳಾಗಿವೆ. ಆದ್ದರಿಂದ ಭೂಮಾಲೀಕ ಮೈಕೈಯೆಲ್ಲಾ ಬಾಸುಂಡೆ ಬರುವಂತೆ ಚಿಕ್ಕರಾಮನಿಗೆ ಹೊಡೆಯುತ್ತಾನೆ.

ಈ ವಿಚಾರ ತನ್ನ ಅಣ್ಣನಿಗೆ ತಿಳಿದು ಭೂಮಾಲೀಕ ದೇವಿರಯ್ಯನಿಂದ ತಮ್ಮನನ್ನು ಬಿಡಿಸಿಕೊಂಡು ಬರುತ್ತಾನೆ.ಇನ್ನು ಚಿಕ್ಕರಾಮ ನಿನ್ನ ಮನೇಲಿರೋದಿಲ್ಲ. ನೀನು ಕೊಟ್ಟಿರೋ ದುಡ್ಡಿಗೆ ಮೂರು ನಾಮ. ಹೋಗಯ್ಯ ದೇವೀರಯ್ಯನ್ನು ಹಂಗಿಸುವ ಮೂಲಕ ಪ್ರತಿಭಟಿಸುತ್ತಾನೆ. ಪುಟ್ಟಸ್ವಾಮಿ ಚಿಕ್ಕರಾಮನನ್ನು ಕರೆದುಕೊಂಡು ಊರಿಗೆ ಕರೆದುಕೊಂಡು ಹೋಗಲು ಯತ್ನಿಸುತ್ತಾನೆ.

ಇಂತಹ ಅವಮಾನದಿಂದ ಪುಟ್ಟಸ್ವಾಮಿ ನಿದ್ದೆ ಮಾಡದೇ ಯೋಚಿಸುತ್ತಾ "ಥೂ ಇಂಥ ಅನಿಷ್ಟ ಬಾಳು ಬಾಳಬಾರದು. ಈ ಮನ್ಸನ ಜನ್ಮವೇ ಬ್ಯಾಡ. ತಿರ್ಗ ಹುಟ್ಟಿದರೆ ಮರವಾಗೋ, ಕಲ್ಲಾಗೋ ಮೂಗು ಬಸವನಾಗೋ ಹುಟ್ಟಬೇಕು. ಈ ಮನ್ಸನ ಜನ್ಮ ಏಳೇಳು ಜನ್ಮಕ್ಕೂ ಬೇಡ."[೯] ಎಂದು ಪುಟ್ಟಸ್ವಾಮಿ ತನ್ನ ಸ್ವಗತ ಮಾತಿನ ಮೂಲಕ ಈ ಸಾಮಾಜಿಕ ವ್ಯವಸ್ಥೆಯೊಳಗೆ ಎಷ್ಟೊಂದು ಕ್ರೌರ್ಯ ತುಂಬಿದೆ ಎಂಬುದನ್ನು ಈ ಕತೆ ಧ್ವನಿಸುತ್ತದೆ. ಇದು ತನ್ನ ಹಣೆಬರಹ ಎಂಬಂತೆ ಪುಟ್ಟಸ್ವಾಮಿ ತನ್ನ ಆಶಯವನ್ನು ವ್ಯಕ್ತಪಡಿಸುತ್ತಾನೆ.

ಇಲ್ಲಿ ದಲಿತ ಬದುಕಿನ ದಾರಿದ್ರ್ಯ, ಅಸಹಾಯಕತೆ, ಸ್ವಾಭಿಮಾನ ಪ್ರತಿಭಟಿಸುವ ಛಲ ಗುರಿಯ ಪ್ರತಿನಿಧಿಯಾಗಿ ಪುಟ್ಟಸ್ವಾಮಿ ಕಂಡುಬರುತ್ತಾನೆ. ತನ್ನ ಕನಸಿನಲೋಕದ ಮೂಲಕ "ಅಂಬಲಿಯೋ ಗಂಜಿಯೋ ಸಿಕ್ಕಿದ್ರೆ ಸಾಕು, ಕುಡ್ಸಿ ಸಾಕೇವು. ಅದಾದ್ರು ಎಲ್ಲಿದ್ದಾತು ನಮ್ಮ ತಾಪ. ಇರೋದು ಅರ್ಧ ಎಕ್ರೆ ಬರಡು ಹೊಲ. ಇನ್ನು ಸಾಲ ಬ್ಯಾರೆ.... ನೀವೇನಾದ್ರೂ ಅನ್ನಿ. ಹಾಳು ಜೀತಕ್ಕೆ ಮಕ್ಕಳು ಇರಿಸೋದು ಅಂದ್ರೆ ನಂಗೆ ಸಂಕಟ ಬೆಟ್ಟದಷ್ಟು, ಬಂದು ಎದೆಮೇಲೆ ಅದೀಕಂಡಾಗಾಯ್ತದೆ. ಹಾಳು ಜನ ಕಾಲದಿಂದಲೂ ನಮ್ಮ ಜೀತದ ಮನೆಯೋರು.

ವಂಶದೋರು ಅಂತ್ಲೆ ಕರ್ದು ರೂಢಿ. ಇನ್ನಾದ್ರು ನಿಲ್ಲಲಿ."[೧೦]

ಇಲ್ಲಿ ದಲಿತರಿಗೆ ಭೂಮಿ ಇರುವ ಪ್ರಸ್ತಾಪವಾಗುತ್ತದೆ. ಆದರೆ ಆ ಭೂಮಿ ಬಂಜರಾಗಿದ್ದು, ಅದರ ಮೇಲೆ ಸಾಲವಿದೆ ಎಂಬ ವಿಚಾರ ತಿಳಿದು ಬರುತ್ತದೆ. ಇಂತಹ ಭೂಮಿಯನ್ನು ನಂಬಿ ಬದುಕನ್ನು ಸಹ್ಯವಾಗಿಸಿಕೊಳ್ಳುವುದು ಆಗದ ಮಾತಾಗಿದೆ. ಪುಟ್ಟಸ್ವಾಮಿ ಕುಟುಂಬಕ್ಕೆ ಭೂಮಿ ದಕ್ಕಿದರು ಭೂಮಿಯ ಮೇಲಿನ ಪ್ರೀತಿಯಾಗಲೀ, ತುತ್ತಿನ ಚೀಲ ತುಂಬುವಂತಾಗಲು ಅದರ ಮೇಲಿನ ಸಾಲವಿದೆ. ಈ ಬಂಜರು ಭೂಮಿಯಿಂದಾಗಿ ಏನನ್ನು ಬೆಳೆಯಲು ಸಾಧ್ಯವಾಗುವುದಿಲ್ಲ. ಇಲ್ಲಿ ಮುಖ್ಯವಾಗಿ ಜೀತದಿಂದಲಾದರೂ ವಿಮುಕ್ತಿಯಾಗಲೇ ಬೇಕೆಂಬುದು ದಲಿತ ಯುವಕ ಪುಟ್ಟಸ್ವಾಮಿಯ ಅದಮ್ಯ ಬಯಕೆಯಾಗಿದೆ. ಜೀತ ನಿಲ್ಲಬೇಕು ಎಂಬುದು ಆತನ ಮೊದಲ ಆದ್ಯತೆಯಾಗಿದೆ. ಆದರೆ ಬದುಕಿನ ಪ್ರಶ್ನೆ, ಅಸ್ತಿತ್ವದ ಪ್ರಶ್ನೆಯಿಂದಾಗಿ ಜೀತದಿಂದ ಜಿಗಿದು ಸ್ವತಂತ್ರ ಬದುಕನ್ನು ಕಾಣುವ ಹಂಬಲ ಪುಟ್ಟಸ್ವಾಮಿಯಲ್ಲಿದೆ. ಆದರೆ ಜೀತದಿಂದ ಮುಕ್ತಿಹೊಂದಲು ಹಾಗೂ ಭೂಮಾಲೀಕರ ಶೋಷಣೆಯ ವಿರುದ್ಧ ಇಲ್ಲವಾಗಿಸಲು ಯತ್ನಿಸುತ್ತಾನೆ.ಆತ ರೈತನಾಗಿ ಸ್ವತಂತ್ರವಾಗಿ ದುಡಿಯುವ ಕನಸು ಕಾಣುತ್ತಾನೆ.

"ಇನ್ನು ಈ ಜೀತಕ್ಕೆ ಮುಕ್ತಾಯ ಹೇಳಬೇಕು. ಅಪ್ಪ ಅವ್ವ, ಅಣ್ಣ ಎಲ್ಲರನ್ನೂ ನೋಡಬೇಕು. ಇರುವ ಅರ್ಧ ಎಕರೆಯನ್ನೇ ರಟ್ಟೆಯ ಬಲ ಎಲ್ಲವನ್ನೂ ಬಿಟ್ಟು ಅಗೆದು ಹಸನು ಮಾಡಿ, ದುಡಿದು ಮಾನವಾಗಿ ಬದುಕಬೇಕು ಎಂದು ಮನಸ್ಸು ಘರ್ಜಿಸತೊಡಗಿತು."[೧೧] ಇದು ಪುಟ್ಟಸ್ವಾಮಿ ಅಂತರಂಗದಲ್ಲಾಗುತ್ತಿರುವ ತಲ್ಲಣಗಳು ಒಬ್ಬ ಸ್ವಾಭಿಮಾನಿ ರೈತನಾಗಿ, ಸ್ವತಂತ್ರಬದುಕನ್ನು ಕಟ್ಟಿಕೊಂಡು ಇಡೀ ಕುಟುಂಬವನ್ನು ಸುಖವಾಗಿಡುವ ಛಲ, ಹೋರಾಟದ ಕಿಡಿ ಒಮ್ಮೆಲೆ ಚಿಗುರುತ್ತದೆ. ಇಲ್ಲಿ ಭೂಮಿಯನ್ನು ಉಳುಮೆಮಾಡಿ ಹೊಸ ಬದುಕನ್ನು ರೂಪಿಸಿಕೊಳ್ಳಬೇಕೆಂಬ ಉತ್ಸಾಹವನ್ನು ಪುಟ್ಟಸ್ವಾಮಿಯಲ್ಲಿ ಕಾಣುತ್ತೇವೆ. ದಲಿತ ಯುವಕ ರೈತನಾಗುವ ಪ್ರಕ್ರಿಯೆ ಸ್ವಾಭಿಮಾನದ ಮತ್ತು ಛಲದ ಸಂಕೇತವಾಗಿ ವ್ಯಕ್ತವಾಗುತ್ತದೆ.

ಇದೇ ಹೊತ್ತಿಗೆ ಊರಿನಲ್ಲಿ ಮಳೆ ಬೆಳೆ ಇಲ್ಲದೆ ಬರ ಬಂದು ಅಪ್ಪ ಅವ್ವ ಇಬ್ಬರೂ ಇವರಿರುವಲ್ಲಿಗೆ ಬರುತ್ತಾರೆಂದು ತನ್ನ ಊರಿನ ಜನರಿಂದ ಕೇಳಿ ಚಿಕ್ಕರಾಮ ತನ್ನ ಅಣ್ಣನಿಗೆ ಹೇಳುತ್ತಾನೆ. ಪುಟ್ಟಸ್ವಾಮಿ ಸ್ವತಂತ್ರ ರೈತನಾಗುವ ಕನಸಿನ ಬದುಕನ್ನು ತನ್ನ ಬಂಜರು ಭೂಮಿ ಕಿತ್ತುಕೊಳ್ಳುತ್ತದೆ. ಆತನ ಬದುಕು ರೈತನನ್ನಾಗಿಸದೆ ಅರಳಿದ ಬದುಕನ್ನು ಕಮರುವಂತೆ, ಪರ್ಯಾಯ ವ್ಯವಸ್ಥೆಯಿಲ್ಲದೆ, ಜೀತವು ಬದುಕಿನ ಭಾಗವಾಗುವ ದುರಂತ ವ್ಯಕ್ತವಾಗುತ್ತದೆ. ಈ ದಲಿತ ಯುವಕ ರೈತನಾಗುವ, ತಾನು ಭೂಮಿಯ ಒಡೆಯನಾಗಿ ಸ್ವತಂತ್ರ ಬದುಕನ್ನು ಕಟ್ಟಿಕೊಳ್ಳಬೇಕೆಂಬ ಆಶಯವನ್ನು ಕತೆಯು ಧ್ವನಿಸುತ್ತದೆ.

"ಅವ್ವ" ಕತೆಯಲ್ಲಿ ಮಹಿಳಾಪ್ರಶ್ನೆ, ಜೀತಪ್ರಶ್ನೆಯನ್ನು ಗಟ್ಟಿಯಾದ ನೆಲೆಯಲ್ಲಿ ಹಿಡಿದಿಡುವುದನ್ನು ಕಾಣುತ್ತೇವೆ. ಓರ್ವ ಗಟ್ಟಿಗಿತ್ತಿ ಅವ್ವನನ್ನು ಕಥನದ ಮೂಲಕ ಕಟ್ಟಿಕೊಡುವುದರ ಜೊತೆಗೆ ಜೀತದ ಬದುಕನ್ನು ಎದುರಿಸುವ ಛಾತಿ,ಅವ್ವನಲ್ಲಿ ವ್ಯಕ್ತವಾಗುವುದನ್ನು ಕಾಣುತ್ತೇವೆ. ಇಂತಹ ಪಾತ್ರವನ್ನು ದೇವನೂರು ಮಹಾದೇವರ ಸಾಕವ್ವನಂತಹವರಲ್ಲಿ ಕಾಣಬಹುದಾಗಿದೆ.

ಇಲ್ಲಿ ಅವ್ವ ತನ್ನ ಮಗನನ್ನು ಕಷ್ಟಪಟ್ಟು ಸಾಕಿ ಸಲಹಿದ್ದಾಳೆ. ಭೂಮಾಲೀಕನಿಗೆ ತನ್ನ ಸಾಲ ತೀರಿಸುವ ಸಲುವಾಗಿ ಬಡ್ಡಿ ಹಣ ಕೊಡುವುದು ಅಥವಾ ತನ್ನ ಮಗನನ್ನು ತನ್ನಲ್ಲಿ ಜೀತಕ್ಕಿರಿಸುವಂತೆ ತಾಕೀತು ಮಾಡುತ್ತಾನೆ. ಆದರೆ ಭೂಮಾಲೀಕನ ಸಾಲದ ಬಡ್ಡಿಹಣವನ್ನು ಮುಖದ ಮೇಲೆ ಬಿಸಾಕುವಂತಹ ದಿಟ್ಟತನವನ್ನು ಅವ್ವ ತೋರುತ್ತಾಳೆ.

ಇಲ್ಲಿ ಅವ್ವ ಕೆಂಪಕ್ಕ, ತನ್ನ ಮಗ ಪುಟ್ಟರಾಮನ ವ್ಯವಸಾಯ ಕುಟುಂಬದ ಜೀವನ ಚಿತ್ರಣವನ್ನು ಈ ಕತೆ ವಿವರಿಸುತ್ತದೆ. ಅವ್ವ ಕೆಂಪಕ್ಕ ಪ್ರೀತಿಯಿಂದ ಸಾಕಿದ ಮುದಿಹಸು, ಈ ಹಸುವಿನ ಎರಡು ಮುದ್ದಾದ ಕರುಗಳು, ಈ ಕರುಗಳನ್ನು ಮಾರುವ ಹುನ್ನಾರದಲ್ಲಿರುವ ಮಗ ಪುಟ್ಟರಾಮ ಯೋಚಿಸುತ್ತಾನೆ. ಇದನ್ನು ತಪ್ಪಿಸಲು ಈ ಅವ್ವ ಇನ್ನಿಲ್ಲದ ಪಡಿಪಾಟಲು ಬೀಳುತ್ತಾಳೆ. "ಇಲ್ಲ ನೀನು ಆಡ್ಸಂಗೇ ಬುಡಬೇಕೇ?ಬತ್ತ , ರಾಗಿ ಮಾರ್ದೆ, ತೋಟದೇಲಿದ್ದ ತೆಂಗಿನಕಾಯಿ ಬಂದಷ್ಟು ದುಡ್ಡಿಗೆ ಮಾರ್ದೆ, ಇನ್ನೂ ಏನೇನು ಮಾರಬೇಕೂ ಅಂತ ಮಾಡಿದ್ದೀ? ಇವತ್ತು ಹಸ ಕರಗೋಳು, ನಾಳಾಕೆ ಭೂಮಿ, ನಾಳಿದ್ದು ಈ ಮಕ್ಕಳನ್ನೂ ಜೀತಕ್ಕೆ ಇರಿಸಬೇಕು ಅಂತ ಮಾಡಿದ್ದೀಯೇ?"[೧೨] ಎಂದು ಪ್ರಶ್ನಿಸುವ ಮೂಲಕ ತನ್ನ ಮಗ ಪುಟ್ಟರಾಮನ ಮೇಲೆ ಎರಗುತ್ತಾಳೆ. ಈ ಅವ್ವನಲ್ಲಿ ಸ್ವಾಭಿಮಾನದ ಬದುಕಿದೆ ಮತ್ತು ಬದುಕುವ ಛಲವಿರುವುದನ್ನು ಕಾಣುತ್ತೇವೆ. ಈ ಭೂಮಿಯಲ್ಲಿ ದುಡಿದು ಬದುಕುವ ಛಲ. ಜೀತಕ್ಕೆ

ತನ್ನ ಮೊಮ್ಮಕ್ಕಳನ್ನು ಕಳಿಸದೇ ಇರುವ ಛಲವನ್ನು ಈಕೆಯಲ್ಲಿ ಕಾಣಬಹುದಾಗಿದೆ. ಇಲ್ಲಿ ಹಸು ಮೇಯಲು ಹೋಗಿ ಹಿಂತಿರುಗಿಬಾರದೇ ಹೋದಾಗ ಈ ಅವ್ವ ಆತಂಕಗೊಳ್ಳುತ್ತಾಳೆ. ಈ ಹಸುಗಳು ಸಿಕ್ಕಾಗ ಅವ್ವ ಸಂತಸಪಡುವುದನ್ನು ಕಾಣುತ್ತೇವೆ.

ಊರಿನ ಸಾಹುಕಾರ ವೀರಭದ್ರಯ್ಯನ ಬಳಿ ಸಾಲ ತೆಗೆದಿದ್ದ ಈ ಅವ್ವನ ಬಳಿ ಆತ ವಸೂಲಿಗೆ ಬಂದಾಗ ಸ್ವಾಮಿ ಬಡವಿ, ಜೊತೆಗೆ ವಿಧವೆ ಬಡ್ಡಿ ಕೊಡಲಾರೆ ಅಸಲು ಕೊಡುತ್ತೇನೆ ಎನ್ನುತ್ತಾಳೆ. ಅದಕ್ಕೆ ಭೂಮಾಲೀಕ ವೀರಭದ್ರಯ್ಯ ಬಡ್ಡಿ ಕೊಟ್ಟೇ ಕೊಡಬೇಕು ಎನ್ನುತ್ತಾರೆ. ಇಲ್ಲದೆ ಇದ್ರೆ ನಿನ್ನ ಮಗನನ್ನು ಜೀತಕ್ಕಿರಿಸು ಎನ್ನುತ್ತಾರೆ.

"ಸ್ವಾಮಿ ಇನ್ನೊಂದು ಸಾರಿ ಜೀತಕ್ಕೆ ನನ್ನ ಮಗನ್ನ ನಿಂಮನೇಲಿ ಇರ್‍ಸೂ ಅನ್ನೂ ವಾಕ್ಸು ನೀವು ಕಡೀಸಬ್ಯಾಡಿ. ನಾಳೆ ಬನ್ನೋಗಿ, ನಿಂಬಡ್ಡಿ ಅದೇನು ಬಿಸಾಕ್ತಿನಿ ದೂಸ್ರ ಮಾತಾಡಬ್ಯಾಡಿ"[೧೮] ಭೂಮಾಲೀಕನ ಕ್ರೌರ್ಯವನ್ನ ತನ್ನ ಮಾತಿನ ಮೂಲಕ ಪ್ರತಿಭಟಿಸುತ್ತಾಳೆ. ಈ ಅವ್ವ ಮತ್ತೆಂದೂ ಜೀತದ ಬಗ್ಗೆ ಮಾತನಾಡದಂತೆ ಮುಖದ ಮೇಲೆ ಬಿಸಾಕ್ತಿನಿ ಎಂದು ಹೇಳುತ್ತಾಳೆ. ಈ ಮೂಲಕ ಭೂಮಾಲೀಕನ ವಿರುದ್ಧ ಪ್ರತಿಭಟಿಸುವುದು ವ್ಯಕ್ತವಾಗುತ್ತದೆ.

"**ಕಳೆ**" ಕತೆಯಲ್ಲಿ ಭೂಮಾಲೀಕನ ಜೀವನ, ಬಿಗುಮಾನ, ಅಹಂಕಾರ, ಯೌವ್ವನದಲ್ಲಿ ಆಡಿದ ಆಟ, ದಲಿತ ಕೂಲಿ ಆಳುಗಳನ್ನು ನಡೆಸಿಕೊಂಡು ಬಂದ ಬಗೆಯನ್ನು ವ್ಯಕ್ತಗೊಳಿಸುತ್ತದೆ. ಭೂಮಾಲೀಕನಾಗಿ ಇಡೀ ಊರನ್ನು ತನ್ನ ನಿಯಂತ್ರಣದಲ್ಲಿರಿಸಿಕೊಂಡು, ತನ್ನ ಆಜ್ಞೆಯಂತೆ ಊರಿನ ಜನ ಪಾಲಿಸಬೇಕೆಂಬ ಘಟನೆಯ ಸುತ್ತ ಈ ಕಥಾವಸ್ತುವನ್ನು ಹೆಣೆಯಲಾಗಿದೆ. ಇಲ್ಲಿ ಭೂಮಾಲೀಕನ ಸಮವಾಗಿ ಯಾರೂ ಇರಬಾರದು ಎಂಬ ಅಹಂಕಾರ ವ್ಯಕ್ತವಾಗುತ್ತದೆ. ಒಟ್ಟಾರೆ ಭೂಮಾಲೀಕನ ಕ್ರೌರ್ಯದ ಮುಖವನ್ನು ಈ ಕತೆಯು ಅನಾವರಣಗೊಳಿಸುತ್ತದೆ.

ಕತೆಯ ಆರಂಭದಲ್ಲಿ ಶಿವಲಿಂಗೇಗೌಡ ಮತ್ತು ಆತನ ಆಳು, ತೋಟದ ಜಮೀನಿನಲ್ಲಿ ತೆಂಗಿನ ಕಾಯಿ ಕಳ್ಳತನ ಪ್ರಸಂಗ ಎದುರಾಗುತ್ತದೆ. ಈ ಕಳ್ಳತನಕ್ಕೆ ಕಾರಣ ಯಾರೆಂಬುದನ್ನು ಪತ್ತೆ ಹಚ್ಚಲಾಗುತ್ತದೆ. ನಂತರ ಭೂಮಾಲೀಕ ತನ್ನ ಗದ್ದೆಯ ಬಯಲಿನಲ್ಲಿ ಹೆಣ್ಣಾಳುಗಳಿಂದ ಕಬ್ಬನ್ನು ನೆಡಿಸುತ್ತಿದ್ದನು. ಈ ಊರಿನಲ್ಲಿ ಇನ್ನು ನನ್ನ ಜಗ್ಗಿಸೋ ಗಂಡು ಯಾರು? ಎಂಬ ದರ್ಪವನ್ನು ಭೂಮಾಲೀಕ ವ್ಯಕ್ತಪಡಿಸುತ್ತಾನೆ. ಈ ಗೌಡ ಗದ್ದೆಯಲ್ಲಿ ಕೆಲಸ ಮಾಡುವ ಕೆಂಪಿಯನ್ನು ನನಪಿಸಿಕೊಂಡು ತನ್ನ ಯೌವ್ವನದಾಟಗಳನ್ನು ನೆನಪಿಸಿಕೊಳ್ಳುತ್ತಾನೆ. ತನ್ನ ತಮ್ಮ ರಾಮದಾಸಣ್ಣ ಶಂಕರಮಠ ಕಟ್ಟಲು ಹೊರಟಾಗ ಸುಖವಾದ ಜೀವನ, ಚಂದದ ಹೆಂಡತಿಯನ್ನು ಅನುಭವಿಸುವುದು ಬಿಟ್ಟು ಮಠಕಟ್ಟಲು ಹೋಗುವುದನ್ನು ತನ್ನ ತಮ್ಮನ ಕುರಿತು ಗೌಡರು ಗದರಿಕೊಳ್ಳುತ್ತಾರೆ.

ಇಲ್ಲಿ ಬರುವ ಬೆಸ್ತರ ಲಕ್ಕ ಈ ಭೂಮಾಲೀಕ ಎದುರು ಹಾದು ಹೋಗುತ್ತಾನೆ. ಲಕ್ಕನನ್ನು ಕಂಡ ಗೌಡ ಆತನನ್ನು ತಡೆದು, "ತೋಟ ಮಾರೀ ಅಂತ ಅಂತೆ ನಿಜವ್ವಾ? ಹೇ ಇಲ್ಲ ಕಣ್ರಪ್ಪ, ಲೇ.. ತಾಕೀ ಪೀಕಿ ಆಟ ನನ್ನತ್ರ ಆಡಬ್ಯಾಡ. ಮಾರೋದಾಗಿದ್ರೆ ನನಗೇ ಮಾರಬೇಕು. ಆ ವೈಸ್ ಚೇರ್ಮನ್ ಸಿದ್ದನಿಗೆ ಏನಾದ್ರೂ ಮಾರಿದ್ರೆ ನಿನ್ನ ಚರ್ಮ ಸುಲ್ಸಿ...ಲೇ.."[೧೯] ಎಂದು ಗೌಡಿಕೆಯ ದರ್ಪದಲ್ಲಿ ಕೇಳುತ್ತಾನೆ. ಲಕ್ಕನಿಗೆ ಯಾಕಾದರೂ ಸಿಕ್ಕಿದೆನು ಎಂದು ತಪ್ಪಿಸಿಕೊಳ್ಳುವ ತಂತ್ರ ಹೂಡುತ್ತಾನೆ. ಆದರೂ ಬಿಡದೆ, "ಮಾರಬೇಕು ಕಣ್ರಪ್ಪ ಒಂದರ್ಧ ಎಕರೇಯ. ಹಾಳು ಸೊಸೈಟಿಯೋರು ಸಾಲ ಕಟ್ಟದೇ ಹೋದ್ರೆ ಹರಾಜಾ ಮಾಡ್ತೀವಿ ಅಂತ ನೋಟೀಸ್ ಕೊಟ್ಟವ್ರೆ. ಹಂಗೆಬಾ ದಾರೀಗೆ ಕಳ್ಳನನ್ನ ಮಗನೆ. ಲೋ. ಈ ಊರೇಲಿ ನನ್ನ ಹುಕುಂ ಇಲ್ದೆ ಒಂದು ಹುಲ್ಲು ಕಡ್ಡಿಯೂ ಅಲ್ಲಾಡುವಂತಿಲ್ಲ. ರಾತ್ರೀಗೆ ಮನೇಗಂಟ ಬಾ. ಮಾತನಾಡುವ,"[೨೦] ಎಂದು ಹೇಳಿ ಕಳುಹಿಸುತ್ತಾನೆ. ಬೆಸ್ತರ ಲಕ್ಕನ ಸಹಕಾರಿ ಬ್ಯಾಂಕಿನ ಸಾಲ ತೀರಿಸುವ ಸಲುವಾಗಿ ತನಗಿದ್ದ ತುಂಡು ಭೂಮಿಯನ್ನು ಮಾರಾಟ ಮಾಡುವ ಅನಿವಾರ್ಯತೆ ಆತನಿಗೆ ಎದುರಾಗಿದೆ.

ಒಂದೆಡೆ ಸೊಸೈಟಿಯ ಸಾಲ, ಮತ್ತೊಂದೆಡೆ ಗೌಡನ ಹಿಡಿತ ಎರಡು ಕಡೆಯ ಹಿಡಿತದಿಂದ ಬೆಸ್ತರಲಕ್ಕನ ಬದುಕನ್ನು ಹಿಂಡಿ ಹಿಪ್ಪೆ ಮಾಡುತ್ತದೆ. ಒಂದೆಡೆ ತಾನು ಗಳಿಸಿಕೊಂಡು ಬಂದ ಭೂಮಿಯನ್ನು ಕಳೆದುಕೊಳ್ಳುವುದು, ಅದು ಗೌಡರ ಪಾಲಾಗುವುದುರಂತವನ್ನು ಕಾಣುತ್ತೇವೆ. ಅಲ್ಲದೆ ಗೌಡ ಹೇಳಿದ ಬೆಲೆಗೆ ಭೂಮಿಯನ್ನು ಆತ ಮಾರುವ ಪರಿಸ್ಥಿತಿ ಎದುರಾಗುತ್ತದೆ. ಸೊಸೈಟಿಯ ಸಾಲ ತೀರಿಸಲಿಕ್ಕಾಗಿಯೇ ತನ್ನ ಭೂಮಿಯನ್ನು ಅತ್ಯಂತ ಕಡಿಮೆ ಬೆಲೆಗೆ ಮಾರುವಂತಹ ಪರಿಸ್ಥಿತಿ ಲಕ್ಕನಿಗೆ ಎದುರಾಗಿದೆ. ಕೆಳವರ್ಗದ ಲಕ್ಕನಂತಹವರಿಗೆ ಭೂ ಪ್ರಶ್ನೆ ಜೊತೆಗೆ ಆರ್ಥಿಕ ಪ್ರಶ್ನೆಯನ್ನು ಕಾಣುತ್ತೇವೆ.

**ಕೊನೆ ಟಿಪ್ಪಣಿ**

೧.ಕ್ಯಾತನಹಳ್ಳಿ ರಾಮಣ್ಣ,ಅನಿಕೇತನ ಪು.೧೨೬.

೨.ಜಿ.ಎಸ್.ಆಮೂರ, ಕನ್ನಡ ಕಥನಸಾಹಿತ್ಯ :ಸಣ್ಣಕತೆ , ಪುಟ,೩೭೨.

೩.ಬೆಸಗರಹಳ್ಳಿ ರಾಮಣ್ಣ,ತಾಯಿ, ಪುಟ ೩೮೮

೪.ಅದೇ ಪುಟ ೩೯೫.

೫.ಅದೇ ಪುಟ ೩೯೬.

೬.ಅದೇ ಪುಟ.

೭.ಬೆಸಗರಹಳ್ಳಿ ರಾಮಣ್ಣ,ಬೆಟ್ಟದ ಮೇಲೊಂದು ಮನೆಯ ಮಾಡಿ, ಪುಟ,೩೭೭.

೮.ಬೆಸಗರಹಳ್ಳಿ ರಾಮಣ್ಣ,ಸುಗ್ಗಿ,ಪುಟ ೧೫

೯.ಅದೇ ಪುಟ ೯೧

೧೦.ಅದೇ ಪುಟ ೯೩

೧೧.ಬೆಸಗರಹಳ್ಳಿ ರಾಮಣ್ಣ, ಅವ್ವ ಪುಟ ೧೦೨

೧೨.ಅದೇ ಪುಟ ೧೧೭

೧೩.ಬೆಸಗರಹಳ್ಳಿ ರಾಮಣ್ಣ,ಕಳೆ ಪುಟ ೧೧೩

೧೪. ಅದೇ ಪುಟ ೧೧೭

## ೪.೨.೧೩ ಚನ್ನಣ್ಣವಾಲೀಕಾರ : ಭೂ ಹಂಚಿಕೆಯ ಕಾನೂನಿನ ಸಂಘರ್ಷ

ಚೆನ್ನಣ್ಣವಾಲೀಕಾರರ "ಒಂದು ಹೆಣ್ಣಿನ ಒಳಜಗತ್ತು" ಕಾದಂಬರಿಯಲ್ಲಿ ಭೂಮಿತಿ ಕಾಯ್ದೆಯ ಕುರಿತು ತಾರ್ಕಿಕ ಸಂಘರ್ಷವನ್ನು ಇವರಲ್ಲಿ ಕಾಣುತ್ತೇವೆ. ಭೂಸುಧಾರಣಾ ಕಾನೂನು ಜಾರಿಯಾದ ನಂತರದಲ್ಲಿ ಭೂಮಾಲೀಕರು ಎಷ್ಟು ಪ್ರಮಾಣದ ಭೂಮಿಯನ್ನು ಹೊಂದಿರಬೇಕೆಂಬುದನ್ನು ವ್ಯಕ್ತಗೊಳಿಸುತ್ತದೆ. ಭೂಮಿತಿ ಕಾಯ್ದೆ ಜಾರಿಗೊಳಿಸಿದ ಸಂದರ್ಭವನ್ನು ಕಾದಂಬರಿಕಾರ ಈ ವಿಚಾರವನ್ನು ಸಮರ್ಥವಾಗಿ ವ್ಯಕ್ತಗೊಳಿಸಿದ್ದಾರೆ. ಈ ಪ್ರದೇಶವು ನಿಜಾಮರ ಆಡಳಿತಕ್ಕೊಳಪಟ್ಟಿದ್ದು, ಅವರ ಆಡಳಿತದ ಫಲವಾಗಿ ಅನೇಕ ಭೂಮಾಲೀಕರು ಪಾಳೇಗಾರರ ಭೂನೀತಿಗಳು ಈ ಭಾಗದಲ್ಲಿ ಹಾಗೆಯೇ ಉಳಿದಿವೆ. ಇಲ್ಲಿ ಭೂ ಹಂಚಿಕೆಯ ವಿಚಾರ ಪ್ರಸ್ತಾಪವಾಗುವುದರಿಂದ ಭೂಹಂಚಿಕೆ ಕಾನೂನಿನ ಸಂಘರ್ಷವನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಒಂದು ಹೆಣ್ಣಿನ ಒಳಜಗತ್ತಿನ ಕಥಾಹಂದರವು ಹೆಣ್ಣಿನ ತುಮುಲವನ್ನು ಮುಖ್ಯವಾಗಿ ವ್ಯಕ್ತಗೊಳಿಸಿದರೂ, ಭೂ ಪ್ರಶ್ನೆ ಕುರಿತಾಗಿ ಇಲ್ಲಿ ಪಾರ್ಶ್ವಿಕವಾಗಿ ಅಧ್ಯಯನ ಕೈಗೊಳ್ಳಲಾಗಿದೆ.

ಈ ಕಾದಂಬರಿಯ ಕತೆಯಲ್ಲಿ ರತ್ನ ಮದುವೆಯಾದ ಒಂದೇ ತಿಂಗಳಲ್ಲಿ ತನ್ನ ಗಂಡನ ಕೊಲೆಯಾಗಿ ಗಂಡನನ್ನು ಕಳೆದುಕೊಂಡಿದ್ದಾಳೆ. ಆಗಿನ್ನೂ ಮದುವೆಯಾಗಿದ್ದ ಈಕೆಗೆ ತನ್ನ ಗಂಡನ ಸಾವು ಮಾನಸಿಕವಾಗಿ ಜರ್ಜರಿತಗೊಳಿಸುತ್ತದೆ. ತನ್ನ ತವರುಮನೆಯ ಅಣ್ಣನ ಮನೆಯಲ್ಲಿ ವಾಸವಿದ್ದು,ತನ್ನ ದೈಹಿಕ ಹಸಿವನ್ನು ತೀರಿಸಿಕೊಳ್ಳಲು ಮಾದರ ಮಲ್ಯಾನನ್ನು ಬಳಸಿಕೊಳ್ಳುತ್ತಾಳೆ. ಇವರಿಬ್ಬರ ಅನೈತಿಕ ಸಂಬಂಧವನ್ನು ತಿಳಿದ ರತ್ನಳ ಅಣ್ಣ ಸಂಚನ್ನು ರೂಪಿಸುತ್ತಾನೆ. ತನ್ನ ಅಣ್ಣನ ಒಳಸಂಚಿನಿಂದ ಮಲ್ಯಾ ಹಳ್ಳದಲ್ಲಿ ಕೊಚ್ಚಿಹೋಗಿ ಸಾಯುತ್ತಾನೆ.ಮಲ್ಯಾನ ಸಾವು ಮತ್ತು ಮಲ್ಯಾನ ಪ್ರೀತಿಯಿಂದಾಗಿ ರತ್ನ ಕೂಡಾ ಹಳ್ಳದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವುದರೊಂದಿಗೆ ಆಕೆ ಸಾಯುತ್ತಾಳೆ.

ಭೂ ಹಂಚಿಕೆಯ ಸಂದರ್ಭದಲ್ಲಾದ ಬಿಹಾರದಲ್ಲಾದ ದುರಂತವನ್ನು ಅಸ್ಸಾದಿಯವರು ಹೇಳುವಂತೆ "ತಮ್ಮ ಭೂಮಿ ತಮ್ಮ ನಾಯಿ, ದನಕರುಗಳಿಗೆ ಅಥವಾ ದನಕರುಗಳ ಹೆಸರುಗಳಿಗೆ ಬೆಕ್ಕುಗಳ ಹೆಸರುಗಳಲ್ಲಿ ವರ್ಗಾಯಿಸಿದರು. ಭೂಮಿ ಹಂಚಿಕೆ ಆಗುತ್ತಿಲ್ಲ. ಯಾರ ಕಡೆಗೂ ಹೋಗಲಿಲ್ಲ. ಭೂಮಿ ಅವರ ಕೈಯಲ್ಲೆ ಇಟ್ಟುಕೊಂಡು ಬಿಟ್ಟಿತ್ತು. ನಾನು ಯಾಕೆ ಹೇಳ್ತಿದ್ದೀನಿ ಅಂದರೆ ಮುಂದೆ ಕೂಡ ನಮಗೆ ಗೇಣಿ ಪದ್ಧತಿಯ ಅಂಶಗಳನ್ನು ತಂದಿರುವುದನ್ನು ನೋಡಿ. ಇದನ್ನು ತಂದರೂ ಕೂಡ ನಮ್ಮಲ್ಲಿ ಭೂ ವ್ಯವಸ್ಥೆ ಸಂಪೂರ್ಣವಾಗಿ ಜಾರಿಯಾಗಿಲ್ಲ"[೧] ಇಂತಹ ಆಶಯವನ್ನೇ ಒಂದು ಹೆಣ್ಣಿನ ಜಗತ್ತಿನಲ್ಲಿ ಕಾಣಬಹುದಾಗಿದೆ.

ಇಲ್ಲಿ ಭೂ ಪ್ರಶ್ನೆ ಕುರಿತಾಗಿ ಭೂಮಾಲೀಕ ದಿಬ್ಬ ಸಂಗಣ್ಣಗೌಡರ ಹೊಲವನ್ನು ಹತ್ತಿಪ್ಪತ್ತು ವರ್ಷಗಳಿಂದ ತಳವಾರ ಮಲ್ಲ ದುಡಿಯುತ್ತಾ ಬಂದಿದ್ದಾರೆ. ಭೂಒಡೆತನ ಒಬ್ಬನ ಹೆಸರಿನಲ್ಲಿರುವುದು ಭೂಮಿತಿ ಕಾಯ್ದೆಗೆ ವಿರುದ್ಧವಾಗಿದೆ. ಆದ್ದರಿಂದ ಇದರಿಂದ ತಪ್ಪಿಸಿಕೊಳ್ಳುವ ಸಲುವಾಗಿ ಭೂಮಾಲೀಕ ಸಂಗನಗೌಡ ಈ ರೀತಿಯ ತಂತ್ರವನ್ನು ರೂಪಿಸುತ್ತಾನೆ. " ಹಿಂದಕ್ಕೆ ಮೈಗೆ ಬಟ್ಟೆ,ಹೊಟ್ಟೆಗೆ ಹಿಟ್ಟು, ಇರಲು ಮನೆ ಇಲ್ಲದ ಜನ ಹೊಲಗಳಿಗೆ ಬಿಡಾರ ಹೂಡಲು ಆಗದಕ್ಕೆ ಬಹಳಷ್ಟು ಜನ ಊರು ಬಿಟ್ಟು ಹೋಗಿದ್ದರು. ಎಲ್ಲಾ ರೀತಿಯಿಂದ ಚೆನ್ನಾಗಿದ್ದ ಮಾಲೀಗೌಡರು ಹೊಲಗಳನ್ನು ಬಿಟ್ಟು ಹೋದ ಜನರ ಬಿರಾಡಕೊಟ್ಟು ಆ ಹೊಲಗಳನ್ನು ತಮ್ಮ ಹೆಸರಿಗೆ ಮಾಡಿಕೊಂಡಿದ್ದರು. ಇದರಿಂದ ಸಂಗಣ್ಣಗೌಡನ ಹೆಸರಿನಲ್ಲಿ ಮುನ್ನೂರ ಎಕರೆ ಜಮೀನಿತ್ತು. ಸರಕಾರ ಭೂಸೀಲಿಂಗ ತಂದ ಸಲುವಾಗಿ ಹೊಲಗಳು ಕೈ ಬಿಡಬಾರದೆಂದು ಹತ್ತಿಪ್ಪತ್ತು ವರುಷಗಳಿಂದ ತನ್ನಲ್ಲಿ ದುಡಿಯುತ್ತ ಬಂದಿದ್ದ ತಳವಾರ ಮಲ್ಲ, ಬ್ಯಾಡರ ಎಂಕ, ಕುರುಬರ ಬೀರ,ಹೊಲೇರ ಶಿವ್ವ, ಕಟುಗರ ಖಾಜ್ಯಾರ ಹೆಸರಿನಲ್ಲಿ ಮಾಡಿ ಸರಕಾರಕ್ಕೆ ಹೋಗುವ ಹೊಲಗಳನ್ನು ಉಳಿಸಿಕೊಂಡಿದ್ದರು."[೨]

ಈ ಭೂಮಿತಿ ಕಾಯ್ದೆ ಜಾರಿಯಾದ ನಂತರದಲ್ಲಿ ದುಡಿಯುತ್ತಿದ್ದ ಭೂಮಾಲೀಕರ ಜಮೀನಿನಲ್ಲಿ ತಳವಾರ ಮಲ್ಲ, ಬ್ಯಾಡರ ಎಂಕ, ಕುರುಬರ ಬೀರ, ಹೊಲೇರ ಶಿವ, ಕ ಟುಗರ ಬಾಬ್ಯಾರ ಹೆಸರಿನಲ್ಲಿ ಭೂಮಿಯ ಖಾತೆಯನ್ನು ಭೂಮಾಲೀಕ ಮಾಡಿಸಿಕೊಳ್ಳುತ್ತಾನೆ. ಈ ಭೂಮಿತಿ ಕಾಯ್ದೆಯಿಂದ ಹೆಚ್ಚು ಭೂಮಿಯನ್ನು ಇಟ್ಟುಕೊಳ್ಳುವಂತಿಲ್ಲವಾದ್ದರಿಂದ ಇವರುಗಳ ಹೆಸರಿನಲ್ಲಿ ಭೂಮಿಯನ್ನು ಭೂಮಾಲೀಕ ದಾಖಲಿಸುತ್ತಾನೆ. ಇವರಿಗೆ ಭೂ ಒಡೆತನ ಕೇವಲ ಹೆಸರಿಗೆ ಮಾತ್ರವಾಗಿದ್ದು, ಅವುಗಳು ಕೇವಲ ಕಾಗದ ಪತ್ರಗಳಲ್ಲಿವೆ. ಆನಂತರದಲ್ಲಿ

ತಮ್ಮ ಸಮಸ್ತ ಆಸ್ತಿಯ ಒಡೆತನವು ಭೂಮಾಲೀಕನ ಬಳಿ ಇರುವಂತೆ ನೋಡಿಕೊಳ್ಳುತ್ತಾನೆ. ಇದರಿಂದ ಈ ಜೀತದಾಳುಗಳು ಎಂದಿನಂತೆ ಭೂಮಾಲೀಕನ ಜಮೀನಿನಲ್ಲಿ ಜೀತದಾಳುಗಳಾಗಿ ಕೆಲಸ ಮಾಡುವುದನ್ನು ಕಾಣುತ್ತೇವೆ.

ಈ ಜೀತದಾಳುಗಳಿಗೆ ಕಾನೂನಿನ ಅರಿವು, ಶಿಕ್ಷಣ ಇಲ್ಲದೆ ಇಂತಹ ಬಿಕ್ಕಟ್ಟುಗಳಿಗೆ ಸಿಲುಕಿ ಭೂಹೀನನಾಗಿಯೇ ಇರುವುದನ್ನು ಕಾಣುತ್ತೇವೆ.ಗ್ರಾಮೀಣನೆಲೆಯ ದಲಿತರ ಬದುಕಿನ ಅಜ್ಞಾನ, ಶಿಕ್ಷಣದ ಕೊರತೆಯಿಂದ ಭೂಮಾಲೀಕ ತನಗೆ ಬೇಕಾದ ಹಾಗೆ ಶೋಷಣೆ ಮಾಡುತ್ತ ಬಂದಿರುವುದನ್ನು ಕಾಣುತ್ತೇವೆ. ಇಲ್ಲಿ ಮುಖ್ಯವಾಗಿ ಭೂಸುಧಾರಣೆಯಿಂದಾಗಿ ಭೂ ಒಡೆತನ ದಕ್ಕಬೇಕೆಂಬ ಮುನ್ಸೂಚನೆಯನ್ನು ನೀಡುತ್ತದೆ. ಆದರೆ ಭೂಮಾಲೀಕ ವ್ಯವಸ್ಥೆ ವ್ಯವಸ್ಥಿತವಾಗಿ ಭೂಒಡೆತನವನ್ನು ಕಾಪಾಡಿಕೊಂಡು ಬಂದಿರುವುದನ್ನು ಕಾದಂಬರಿ ಧ್ವನಿಸುತ್ತದೆ.

**ಕೊನೆ ಟಿಪ್ಪಣಿ**

೧. ಮುಝಾಫರ್ ಅಸ್ಸಾದಿ, ದಲಿತರು ಮತ್ತು ಪರ್ಯಾಯ ರಾಜಕಾರಣ, ಪುಟ ೫೦

೨. ಚೆನ್ನಣ್ಣ ವಾಲೀಕಾರ,ಒಂದು ಹೆಣ್ಣಿನ ಒಳಜಗತ್ತು,ಪುಟ ೧೩

## ೪.೨.೧೪ ಕುಂ.ವೀರಭದ್ರಪ್ಪ : ಭೂ ಒಡೆತನದ ಸ್ವಾಭಿಮಾನ

ಬಳ್ಳಾರಿ ಜಿಲ್ಲೆಯ ಪ್ರಾದೇಶಿಕ ಭಾಷೆಯ ಸೊಗಡು, ಅಲ್ಲಿನ ಸಾಮಾಜಿಕ ಸಮಸ್ಯೆ, ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯ, ಲೈಂಗಿಕ ದೌರ್ಜನ್ಯಗಳು ಅತ್ಯಂತ ಪರಿಣಾಮಕಾರಿಯಾಗಿ ಕುಂ.ವೀ.ಯವರ ಕಥನಗಳಲ್ಲಿ ವ್ಯಕ್ತವಾಗಿವೆ. ಈ ಕುರಿತು "ಸೃಜನಶೀಲ ಕಾಯಕದಲ್ಲಿ ಅತ್ಯಂತ ಬದ್ಧತೆಯುಳ್ಳ ಜನಮುಖೀ ಸಂವೇದನೆಯ ಬಹುರೂಪಿ ಜೀವನಾನುಭವದ ಹಿನ್ನೆಲೆಯಿಂದ ಬರೆಯುವ ಕುಂವೀಯು ಒಟ್ಟು ಬರಹದ ಹಿಂದೆ ನೊಂದ ಸಮುದಾಯಗಳ ದಟ್ಟ ಜೀವನಾನುಭವ ಕೂಡಿಕೊಂಡಿದೆ. ಏನನ್ನೇ ಬರೆದರೂ ದೇಸೀ ಸಂವೇದನೆಯ ದನಿಯಿಂದ ಸಮಷ್ಟಿ ಗ್ರಹಿಕೆಯಿಂದ ಕುಂವೀ ತಮ್ಮ ಪಾತ್ರಗಳನ್ನು ಕಟ್ಟುತ್ತಾರೆ."[೧] ಅವರ ಕತೆಗಳು ಗ್ರಾಮೀಣ ನೆಲೆಯ ಭೂಮಾಲೀಕ ವ್ಯವಸ್ಥೆಯ ವಿರುದ್ಧ, ಕ್ರೌರ್ಯದ ವಿರುದ್ಧ, ಸಂಘರ್ಷದ ನೆಲೆಯಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಕೆಳಸ್ತರದ ಹಾಗೂ ದಲಿತರ ಬದುಕನ್ನು ಬಹುವಾಗಿ ಪ್ರೀತಿಸುವ ಮೂಲಕ ಜಾಗೃತಿಯನ್ನು ಮೂಡಿಸುವುದು ಕತೆಗಳಲ್ಲಿ ಕಾಣಬಹುದಾಗಿದೆ.

ಕುಂ.ವೀ.ಯವರ ಕಥಾಸಾಹಿತ್ಯದಲ್ಲಿ ಭೂ ಪ್ರಶ್ನೆಯೊಂದಿಗೆ ಪ್ರಾತಿನಿಧಿಕವಾಗಿ,ಭೂಮಾಲೀಕ, ಜೀತ, ದಲಿತ, ರೈತ, ಊಳಿಗಮಾನ್ಯ ವ್ಯವಸ್ಥೆಯ ನಡುವಿನ ಸಂಘರ್ಷದ ನೆಲೆಗಳನ್ನು ಗುರುತಿಸಬಹುದಾಗಿದೆ. ಈ ಭಾಗದ ಭೂ ಪ್ರಶ್ನೆಯನ್ನು ಮುಖ್ಯವಾಗಿ ಪ್ರತಿನಿಧಿಸುವ ಕತೆಗಾರರಾಗಿ ಕುಂವೀಯವರನ್ನು ಒಬ್ಬರು. ಅವರ **ಕಪ್ಪು ನೆಲದಲ್ಲೊಂದು ಕೆಂಪುಕತೆ, ಡೋಮ, ಪರ್ಯಾವಸಾನ, ಕೊಟ್ರ ಹೈಸ್ಕೂಲಿಗೆ ಸೇರಿದ್ದು** ಕಥನಗಳ ಮೂಲಕ ಭೂ ಪ್ರಶ್ನೆಯನ್ನು ಕುರಿತು ಚರ್ಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ಅವರ ಕಥಾಸಾಹಿತ್ಯದ ತಾತ್ವಿಕ ಆಶಯಗಳನ್ನು ಹೀಗೆ ಗುರುತಿಸಬಹುದಾಗಿದೆ.

ಅವರ ಕಥನಗಳಲ್ಲಿ ಭೂ ಒಡೆತನದ ಸ್ವಾಭಿಮಾನದ ಆಶಯ ವ್ಯಕ್ತವಾಗುವುದನ್ನು ಕಾಣಬಹುದಾಗಿದೆ. ಭೂ ಪ್ರಶ್ನೆ ಪರಿಹರಿಸಲು ಸಾಂಪ್ರಾದಾಯಿಕ ಹಾಗೂ ಆಧುನಿಕ ಕಾನೂನನ್ನು ಎದುರಿಸುವ ಆಶಯವನ್ನು ಕುಂವೀಯವರಲ್ಲಿ ಕಾಣಬಹುದು. ಭೂ ಸುಧಾರಣಾ ಆಶಯಗಳನ್ನು ಅವರ ಕಥನಗಳಲ್ಲಿ ವ್ಯಕ್ತವಾಗಿದ್ದರೂ ಅಂತಿಮವಾಗಿ ಗೇಣಿದರರಿಗೆ, ರೇತರಿಗೆ, ದಲಿತರಿಗೆ ಭೂ ಒಡೆತನ ದಕ್ಕದೆ ಭೂಮಾಲೀಕರ ಹುನ್ನಾರಗಳನ್ನು ಬಯಲಿಗೆಳೆಯುತ್ತಾರೆ. ಭೂ ಪ್ರಶ್ನೆ ಹಕ್ಕಿನ ನೆಲೆ, ಹೋರಾಟದ ನೆಲೆ, ಸಂಘರ್ಷದ ನೆಲೆಯ ಮೂಲಕ ಅವರ ಕಥನಗಳಲ್ಲಿ ವ್ಯಕ್ತವಾಗಿವೆ. ಹೋರಾಟವನ್ನು ಅರಿವಿನ ಮೂಲಕ,ಶಿಕ್ಷಣದ ಮೂಲಕ ಸಂಘಟನಾತ್ಮಕ ಊಳಿಗಮಾನ್ಯಶಾಹಿ ವ್ಯವಸ್ಥೆಯನ್ನು ಎದುರಿಸುವ ಆಶಯವನ್ನು ವ್ಯಕ್ತಗೊಳಿಸುತ್ತದೆ.

**"ಕಪ್ಪುನೆಲದಲ್ಲೊಂದು ಕೆಂಪು ಕತೆ"** ಭೂ ರೈತ ಪ್ರಶ್ನೆಯನ್ನು ಕುರಿತು ಚರ್ಚಿಸುವ ಪ್ರಾತಿನಿಧಿಕ ಕತೆಯಾಗಿದೆ. ಇಲ್ಲಿ ಊರ ಗೌಡನ ಮನೆಯಲ್ಲಿ ಜೀತಕ್ಕಿರುವ ಪರತನ ಜೀವನ ವಿಧಾನವನ್ನು ಗಮನಿಸಬಹುದು. ಪರತ ತಾನು ಬೇಸಾಯಗಾರನಾಗಬೇಕೆಂಬ ಕನಸು ಕಾಣತ್ತಾನೆ. ಈ ಕತೆಯ ಕಾಲಕ್ಕಾಗಲೇ ಭೂಸುಧಾರಣಾ ಕಾಯ್ದೆ ಜಾರಿಯಾದ ಬಗ್ಗೆ ವಿವರವಿದೆ. ಭೂಸುಧಾರಣೆಯ ಮೂಲಕ ದಲಿತರಿಗೆ ಭೂಮಿ ದೊರೆತಿರುವ ಮತ್ತು ದಲಿತರು ಭೂ ಒಡೆತನ ಹೊಂದಿರುವ ವಿವರ ಕಂಡುಬರುತ್ತದೆ. ಭೂಸುಧಾರಣಾ ಶಾಸನವನ್ನು ಜಾರಿಗೊಳಿಸುವ ಸಂದರ್ಭದಲ್ಲಿ ಭೂಮಾಲೀಕರು ವಂಚಿಸುವ ಚಿತ್ರಣವನ್ನು ಬಯಲಿಗೆಳೆಯಲು ಈ ಕತೆ ಯತ್ನಿಸುತ್ತದೆ. ಸೈಕಲ್ಲಿನಲ್ಲಿ ಬಂದ ಕುಲಕರಣಿ ಪರತ ನಾಳೆ ನೀನು ಇಪ್ಪತ್ತು ರೂಪಾಯಿ ಕೊಡು, ಸರಕಾರದೋರು ನಿನಗೆ ಎರಡು ಎಕರೆ ಹೊಲ ಕೊಡುವ ಹಾಗೆ ಮಾಡುತ್ತೀನಿ ಎಂದು ಹೇಳುತ್ತಾನೆ. ನಾಳೆ ನೀನು ಇಪ್ಪತ್ತು ರೂಪಾಯಿ ಕೊಟ್ಟರೆ ಮುಂದಿನ ವಾರವೇ ಪಟ್ಟ ಬರುವ ಹಾಗೆ ಮಾಡುತ್ತೇನೆ ಎಂದು ಕುಲಕರಣಿ ಪರತನಿಗೆ ಭರವಸೆ ನೀಡುತ್ತಾನೆ. ಈ ಮಾತನ್ನು ಕೇಳಿ ಒಳಗೊಳಗೆ ಸಂತೋಷಗೊಂಡು ಇಪ್ಪತ್ತು ರೂಪಾಯಿಗಳನ್ನು ಪರತ ಕುಲಕರಣಿಗೆ ಕೊಡುತ್ತಾನೆ. ಈತನಿಗೆ ಭೂ ಸುಧಾರಣೆಯಿಂದಾಗಿ ಭೂಒಡೆತನ ಬರುವುದರಿಂದ ತಾನು ರೈತನಾಗುತ್ತೇನೆಂದು ಕನಸನ್ನು ಕಟ್ಟುತ್ತಾನೆ. ಭೂಮಿ ದೊರೆಯುವ ಸಂತೋಷಕ್ಕೆ ಪರತ ದೇವರು ನಿನ್ನನ್ನು ಚಂದಾಗಿಟ್ಟರಲಿ ಎಂದು ಕುಲಕರಣಿಯನ್ನು ಹಾರೈಸುತ್ತಾನೆ.

ಈ ಕುಲಕರಣಿಯ ವಂಚನೆಯ ಸಂಚು ಅರ್ಥವಾಗುವುದಿಲ್ಲ. ಆದರೆ ಪರತ ಭೂ ಒಡೆಯನಾಗುವುದರಿಂದ, ನಾನು ಮುಂದಿನವರ್ಷ ಜೆಳಿ ಬಿತ್ತಬಹುದೆಂಬ ಕನಸನ್ನು ಕಟ್ಟುತೊಡಗುತ್ತಾನೆ. ಈ

ಭೂ ಒಡೆತನದಿಂದಾಗಿ ತಾನೊಬ್ಬ ದೊಡ್ಡ ಜಮೀನ್ದಾರ ಆಗುತ್ತೇನೆಂಬಂತೆ ಭಾವಿಸುತ್ತಾನೆ. ಇಲ್ಲಿ ಭೂಹೀನರು, ಭೂ ಒಡೆಯರಾಗುವ ಆಶಯವು ಭೂಮಸೂದೆಯು ಹುಟ್ಟಿಸುತ್ತದೆ.

ಇಲ್ಲಿ ಭೂಮಿಯನ್ನು ತಾನು ಒಂದಲ್ಲಾ ಒಂದು ದಿನ ಪಡೆದೇ ತೀರುತ್ತೇನೆ ಎಂಬ ಹಂಬಲ ಪರತನಲ್ಲಿದೆ. ಈತ ತನ್ನ ಕೆಲಸ ಮುಗಿಸಿಕೊಂಡು ಬಂದು, ಊರ ಮುಂದಿನ ಗೌಡರ ಹೊಲವನ್ನು ನೋಡುತ್ತಲೇ ಕನಸು ಕಾಣತೊಡಗುತ್ತಾನೆ. ಪರತ ತನ್ನ ಮಗ, ಮುದುಕಿ, ಮಗಳು ಎಲ್ಲರೂ ಹೊಲದಲ್ಲಿ ಜೋಳ ಬಿತ್ತಿದಂತೆ, ಜ್ವಾಳವನ್ನು ಬೆಳೆದಂತೆ ಜನ ಆಡಿಕೊಂಡಂತೆ ಕನಸನ್ನು ಕಾಣತೊಡಗಿತ್ತಾನೆ. "ಎಲ್ಡೆಕರೆ ಹೊಲ ಸರಕಾರದೋರು ಕೊಟ್ಟಿರೋದ್ರಿಂದ ತಾನೂ ಎಲ್ಲರಂತೆ ತಲಿ ಎತ್ತಿಕೊಂಡು ಅಡ್ಡಾಡುವಂತಾಯ್ತು ಎಂದು ಯೋಚಿಸಿ ಎದೆ ಸೆಟಸಿ ತಲಿ ಎತ್ತಿ ನಡೆಯಲು ಪ್ರಯತ್ನಿಸಿದ."[೨] ಇಲ್ಲಿ ಭೂ ಒಡೆತನ ದಕ್ಕುವುದರಿಂದ ಸ್ವಾಭಿಮಾನದಿಂದ ತಲೆ ಎತ್ತಿ ನಡೆಯುವಂತಹ ಸ್ಥೈರ್ಯವನ್ನು ಕಾಣುತ್ತೇವೆ. ಶತಮಾನದಿಂದಲೂ ಭೂ ವಂಚಿತರಾಗಿ ಭೂಮಾಲೀಕರ ತುಳಿತಕ್ಕೊಳಗಾದ ಪರತನಂತಹವರು ಬಹಳಷ್ಟು ಮಂದಿ ಇದ್ದಾರೆ. ಭೂ ಹಕ್ಕುದಾರನಾಗುವ ಪರತ ಭೂ ಹಕ್ಕಿನಿಂದಾಗಿ ಎದೆಯೆತ್ತಿ ನಡೆಯುವ ಸ್ವಾಭಿಮಾನಿ ವ್ಯಕ್ತಿಯಾಗಿ ಕಾಣುತ್ತಾನೆ.

ಆದರೆ ಊಳಿಗಮಾನ್ಯಶಾಹಿ ವ್ಯವಸ್ಥೆಯು ಭೂ ಒಡೆತನದ ಕನಸನ್ನು ಭಗ್ನಗೊಳಿಸುತ್ತದೆ. ಪರತ ಗೌಡರ ಮನೆಯ ಜೀತದಾಳಾಗಿ ಬಿಟ್ಟಿ ಚಾಕರಿಯನ್ನು ಧಣಿ ಒಪ್ಪುವಂತೆ ಮಾಡುತ್ತಾನೆ. ಪರತನಿಗೆ ಭೂಮಿಯ ಬಗೆಗಿನೆ ಆಸೆ ಹೆಚ್ಚುಹೆಚ್ಚು ಆದಂತೆಲ್ಲಾ ಆತ ಧಣಿಯರ ಜಮೀನಿನ ಬಳಿ ಹೋಗಿ ನೋಡಿಕೊಂಡು ಬರುತ್ತಾನೆ. "ನಾಳೆ ತಾಸೀಲ್ದಾರ್ ಬತ್ತಾರಂತೆ. ಆಗ ಪಟ್ಟ ನಂದೂ ಅನ್ನಂಗ ಮಾಡಿಸ್ಕಂಡು ಆ ಮ್ಯಾರೆಗೆ ಒಡ್ಡಾಕಬೇಕು. ಆ ತಗ್ಗು ಸಮ ಮಾಡಬೇಕು. ಅಲ್ಲಿದು ಆಕಬೇಕು.. ಇಲ್ಲಿ ಅದು ಆಕಬೇಕು ಎಂದು ಲೆಕ್ಕ ಹಾಕುತ್ತ ಗುನುಗುನು ಅಂದ. ಬಂಗಾರ್ದಂತ ನೆಲ... ಇದ್ರ ಸಾವ್ಕಾರ ನಾನು..... ನಾನು ಮನ್ಸಾ ಆಕ್ತೀನಿ ಎಂದು ಯೋಚಿಸುತ್ತಿದ್ದ ಪರತ. ಏನ್ಲೇ.... ಏನ್ ನೋಡಾಕ ಹತ್ತಿ."[೩]

ನಾಳೆ ಭೂ ಒಡೆಯನಾಗುವ ಕನಸುಕಟ್ಟತೊಡಗುತ್ತಿದ್ದುದನ್ನು ಕಂಡು ದೂರದಲ್ಲಿದ್ದ ಚಿಕ್ಕ ಧಣಿ ಬೆದರಿಸುತ್ತಾನೆ. ಆ ಬೆದರಿಕೆಗೆ ಕನಸಿನಿಂದ ಎದ್ದವನಂತೆ ಏನಿಲ್ಲ ದಣಿ ಎಂದು ಊರೊಳಗೆ ಹೊರಡುತ್ತಾನೆ. ಕುಲಕರಣಿ ಊರಿಂದ ಎಂದೂ ಬರುತ್ತಾನೋ ಎಂದು ತಿಳಿಯಲು ಕಾತುರನಾಗಿದ್ದಾನೆ. ಪರತ ಹೋಗುವಾಗ ಎದುರಿಗೆ ಸಿಕ್ಕ ಮಾಂಕಾಳಪ್ಪನ ಹತ್ತಿರ ಹೋಗುತ್ತಾನೆ. ಸಿದ್ದೋನ ಗೌಡ್ರು ಹೊಲ ಅಂದಮ್ಯಾಲೆ ಉಶಾಗಿರು ಎಂದು ಆತ ಎಚ್ಚರಿಕೆ ನೀಡುತ್ತಾನೆ. ಗೌಡ ಆ ಹೊಲದ ಮೇಲೆ ಜೀವ ಇಟ್ಟುಕೊಂಡಿದ್ದಾನೆ ಎಂಬ ಸಂಗತಿ ಮಾಂಕಾಳಪ್ಪನಿಂದ ತಿಳಿಯುತ್ತದೆ. ಗೌಡ್ರ ಹೊಲ ಪಡೆಯಲು ಕಷ್ಟವಾಗಬಹುದು, ಯಾವುದಕ್ಕೂ ಉಶಾರಾಗಿರು ಎಂಬ ಎಚ್ಚರಿಕೆ ಮಾತು ಪರತನಿಗೆ ಆತಂಕ ಮೂಡಿಸುತ್ತದೆ. "ಸರಕಾರದೋರು ಕೊಟ್ಟರೋದು ಅಂದಮ್ಯಾಗೆ ಗೋಡ್ರು ದೂಸ್ರ ಎಂಗಾಡ್ಯೋರು.... ಎಲ್ಲ ಸಿವನಾಟ.. ಅದೆಂಗಾಯ್ತದೋ ಅಂಗಾಗ್ಲಿ.... ಪಟ್ಟ ಬಂದ್ರೆ ಈ ವರ್ಸ ಬೀಜ ಕುಂದ್ರುಸ್ತೀನಿ.. ಊರ್ಗೆ ದೊಡ್ಡೋರು ನೀವು. ನೀವು ಸಾಯ ಮಾಡ್ಬೇಕು"[೪]

ಇಷ್ಟಾದರೂ ಆ ಭೂಮಿಯ ಒಡೆತನ ತನಗೆ ದಕ್ಕಬೇಕೆಂಬ ಆಕಾಂಕ್ಷೆ ಇರುವುದರಿಂದ ಮಾಂಕಾಳಪ್ಪನ ನೆರವನ್ನು ಪರತ ಕೇಳುತ್ತಾನೆ. ಆನಂತರ ಕುಲಕರಣಿಯನ್ನು ಹುಡುಕುತ್ತ ಹೊರಡುತ್ತಾನೆ. ಪರತ ಹೋಗುವಾಗ ದಾರಿಯಲ್ಲಿ ಶೆಟ್ಟಿ ಎದುರಾಗುತ್ತಾನೆ, ಶೆಟ್ಟಿಗೆ ತನ್ನ ಮಗನನ್ನು ದುಡಿಯಲು ಕಳುಹಿಸುತ್ತೇನೆಂದು ಹಣ ಪಡೆದು ಇತ್ತ ಮಗನನ್ನು ಕಳುಹಿಸದೆ ಅತ್ತ ಹಣವನ್ನೂ ಹಿಂತಿರುಗಿಸದೆ ಇದ್ದುದಕ್ಕೆ ಶೆಟ್ಟಿ ಕೇಳುತ್ತಾನೆ. ಪರತ ಶೆಟ್ಟಿಗೆ ಸರಕಾರದೋರು ಎಲ್ಡೆಕರೆ ಹೊಲ ಕೊಡುತ್ತಾರೆ, ಅದರಲ್ಲಿ ದುಡಿದು ತಮ್ಮ ಬಾಕಿಯನ್ನು ತೀರಿಸುತ್ತೇನೆ ಎಂದು ಸಮರ್ಥಿಸುತ್ತಾನೆ. ತನ್ನ ಮಗನನ್ನು ದುಡಿಯಲು ಕಳುಹಿಸಿದರೆ ತಮ್ಮ ಹೊಲದ ಕೆಲಸ ಹಾಗೆ ಉಳಿಯುತ್ತದೆ ಎಂದು ಜವಾಬು ಕೊಡುತ್ತಾನೆ. ಪರತ ಧಣಿಯ ಮನೆಗೆ ಮನೆಗೆ ತೆರಳುತ್ತಾನೆ. ಕುಲಕರಣಿ ಆಗಲೇ ಗೌಡರ ಮನೆಯೊಳಗೆ ಇದ್ದುದು ಕಂಡುಬರುತ್ತದೆ. ಈಗಾಗಲೇ ಹೊಲದ ವಿಚಾರವನ್ನು ಗೌಡರಿಗೆ ಹೇಳಿರುವನೆಂದು ಪರತ ತಿಳಿಯುತ್ತಾನೆ.

ಈ ವಿಚಾರ ತಿಳಿದ ಗೌಡ "ಲ್ಯೇ ಪರತ, ಒಲಾ ಬೇಕಂತ ಕುಲಕರ್ಣಿ ತಾವ ದಸುಗತ್ತು ಮಾಡಿಯೆಂತೆಲ್ಲಾ.. ಜಾಪಟ ಎದಿಯಲೇ ಸಿಂದು... ಪಸೋ ಓಗ್ಲಿ ಮಾದಿಗ್ ಮುಂಡೇದು ಅಂತ ಕೂಳು ಹಾಕಿ ಇಟ್ಗಂಡ್ರೆ ನಂಗೇ ದ್ರೋಹ ಬಗೀತೀಯಾ ... ಅಹ... ಅದೆಂಗೆ ನೀನು ಒಲ್ದಾಗೆ ಕಾಲಿಡ್ತೀಯೋ ನೋಡಿಬುಡ್ತಿನಿ... ನಂಗೇನು ಕಲೆಟ್ರು

ಗೊತ್ತಿಲ್ಲಾಂತ ಮಾಡೀಯ? ನೋಡ್ಕಂತೀನಿ ನಾಳಿದ್ದ ಈ ಮನ್ಸಾತ ಕಾಲಿಡಬ್ಯಾಡ. ಧಡಧಡ ಔಟು ಎಗರಿದಂತೆ ಮಾತಾಡಿದ ಗೌಡ ಏದುಸಿರು ಬಿಡುತ್ತ ನಿಂತ. ಏನು ಮಾತನಾಡುವುದೆಂದು ತಿಳಿಯದೆ ಬಿಕ್ಕಿದ ಪರತ" ಗೌಡ ಕ್ರೋಶ ವ್ಯಕ್ತಪಡಿಸಿದ್ದಕ್ಕೆ ಪ್ರತಿಕ್ರಿಯೆಯಾಗಿ ಪರತ ಏನು ಹೇಳಬೇಕೆಂದು ತೋಚದೆ ಮೌನ ವ್ಯಕ್ತಪಡಿಸುತ್ತಾನೆ. ಪರತ ನಾನೇನು ಕೇಳಲಿಲ್ಲ ಗೌಡರೇ ಸರಕಾರದೋರು ಕೊಟ್ಟಿದ್ದು ಎಂದು ಪ್ರತಿಕ್ರಿಯಿಸುತ್ತಾನೆ. ಅದಕ್ಕೆ ನಮ್ಮ ಗೌಡ್ರು ದೇವರಂಥೋರು ಅಂತ ಹೇಳಿ ಬೇಡ ಎಂದು ಹೇಳಬೇಕಿತ್ತು ಎಂದು ಗೌಡ ಪರತನಿಗೆ ಹೇಳುತ್ತಾನೆ.

ಸರಕಾರದಿಂದ ಭೂ ಹಂಚಿಕೆಯಾಗುತ್ತಿರುವುದು ಪರತನಿಗೆ ಆತ್ಮವಿಶ್ವಾಸ ಮೂಡಿಸಿದೆ. ಪರತ ಧೈರ್ಯತಂದುಕೊಂಡು ಅದ್ಯಾವ ಬಾಯಿಂದ ಹೇಳಲಿ ನನ್ನಂಥ ಪಾಪಿಗೆ ನಿಮ್ಮಂಥವರ ದಯೆಯಿಂದ ನಾನು ಉದ್ಧಾರ ಆಗುತ್ತೇನೆ ಎನ್ನುತ್ತಾನೆ. ಅದಕ್ಕೆ ಗೌಡ ಈಗ ಉದ್ಧಾರಾಗಿರೋದೆ ಸಾಕು, ಉಂಡಮನಗೆ ದ್ರೋಹ ಬಗೆಯಬೇಡ ಹೊಲ ಬೇಡ ಅಂತ ಸರಕಾರಕ್ಕೆ ಬರೆದುಕೊಡು ಅಷ್ಟೇ ಎಂದು ಗೌಡ ಆದೇಶಿಸುತ್ತಾನೆ.

ಇದಕ್ಕೆ ಪ್ರತಿಯಾಗಿ ಪರತ "ನಾವು ಮನುಶ್ಯೋರು.. ನಾನು ನಾಕು ಜನದಂಗೆ ತಲಿ ಎತ್ಕೊಂಡು ಅಡ್ಡಾಡಬೇಕು. ದ್ಯಾವ್ರಿಟ್ಟಂಗಾಗ್ಲಿ... ಒಲ್ಯಂತ ಬರಕೋಡೋದಿಲ್ಲ.. ನಾನೇನು ಬ್ಯಾಕಂತ ಓಗಿದ್ದಿನಾ.. ಬಡವ್ರು, ಮಾದಿಗ್ರು ತಿನ್ಕಳ್ಳಿ ಅಂತ ಬುಟ್ಬುಡಿ.. ಅಡ್ನು ಬರಬ್ಯಾಡಿ ಒಡಿಯಾ, ಹೊಸದಾಗಿ ಮಾತು ಕಲಿತವನಂತೆ ಆವೇಶದಿಂದ ಮಾತಾಡಿ ನೆಲ ಬಡಿದು ಸಣ ಮಾಡಿದ." ಪರತನಿಗೆ ಹಸಿವಿನ ಸಿಟ್ಟು ಭುಗಿಲೆದ್ದು, ಅರಿವಿನ ಪ್ರಜ್ಞೆಯಿಂದ ಗೌಡನಿಗೆ ಸವಾಲೆಸೆಯುತ್ತಾನೆ. ಸರಕಾರದವರು ಬಡವರ ಪರವಿದ್ದಾರೆ ಎಂಬ ಧೈರ್ಯ ಪರತನಲ್ಲಿ ಆತ್ಮವಿಶ್ವಾಸ ಮೂಡಿಸುತ್ತದೆ.

ಸರಕಾರದ ಮುಂದೆ ಗೌಡೆಲ್ಲ ಏನ್ ಮಹಾ ಅಂದು ಮನದೊಳಗೆ ನಗುತ್ತಿದ್ದ ಪರತ ಸ್ವಾಭಿಮಾನದಿಂದ ಬೀಗುವುದನ್ನು ಕಾಣುತ್ತೇವೆ. ಇ ತ್ತ ಕುಲಕರಣಿಯನ್ನು ಭೇಟಿ ಮಾಡಿ ತನ್ನ ಹೊಲದ ಪಟ್ಟ ಯಾವಾಗ ಮಾಡಿಕೊಡುತ್ತೀರಿ ಎಂದು ಕೇಳುತ್ತಾನೆ. ಕುಲಕರಣಿ ಮತ್ತು ಗೌಡರ ಮೋಸ ಮತ್ತು ವಂಚನೆಯ ಅರಿವಾಗಿ ತಾನು ಕೊಟ್ಟಿದ್ದ ಇಪ್ಪತ್ತು ರೂಪಾಯಿ ವಾಪಸ್ಸು ಕೊಡಲು ಕೇಳುತ್ತಾನೆ. ಈಗಾಗಲೇ ನೂರು ರೂಪಾಯಿ ಕೊಟ್ಟವರೆ ನನ್ನನ್ನು ಕೇಳಿಲ್ಲ ನಿನ್ನ ಇಪ್ಪತ್ತು ರೂಪಾಯಿ ಏನು ಮಹಾ ಎಂದು ಕುಲಕರಣಿ ಜವಾಬು ಕೊಡುತ್ತಾನೆ. ಈ ಅನ್ಯಾಯಾನ ಸರಕಾರದೋರಿಗೆ ತಿಳಿಸಿ ತಕ್ಕ ಶಾಸ್ತಿ ಮಾಡಬೇಕೆಂಬ ಹಠವನ್ನು ಪರತ ತೊಡುತ್ತಾನೆ.

ಪರತ ಹೊಲದ ಧ್ಯಾನದಲ್ಲಿ ಲೀನನಾಗಿ ಹೊಲದ ಕನಸನ್ನು ಕಾಣುತ್ತಿರುತ್ತಾನೆ. ಇತ್ತ ತಾನು ಕೊಟ್ಟ ಇಪ್ಪತ್ತು ರೂಪಾಯಿ ಹಣವನ್ನು ಕೊಡದೆ ಕುಲಕರಣಿ ವಂಚಿಸಿದ್ದಾನೆ. ಭೂಒಡೆಯನಾಗುವ ಯೋಚನೆಯಲ್ಲಿ, ಊರ ಜನ ಈತನನ್ನು ಹುಚ್ಚನೆಂದು ಪರಿಗಣಿಸುವ ದುರಂತವನ್ನು ಕಾಣುತ್ತೇವೆ. ಊರಿಗೆ ಮಂತ್ರಿಗಳು ಬರುತ್ತಾರೆಂದು ತಿಳಿದು, ಪರತ ಮಂತ್ರಿಗಳಿಂದ ಭೂಮಿಯನ್ನು ಪಡೆಯಬಹುದೆಂಬ ಆಸೆ ಹೊತ್ತು ಮಂತ್ರಿಯನ್ನು ಕಾಣಲು ಬರುತ್ತಾನೆ. ಸಭೆಯಲ್ಲಿದ್ದ ಮಂತ್ರಿಯನ್ನು ಕಾಣಲು ಜನರ ನೂಕು ನುಗ್ಗಲಾಗಿ ಪರತ ತನ್ನ ಗೋಣಗಾಟವನ್ನು ಯಾರೂ ಲಕ್ಷಿಸುವುದಿಲ್ಲ.

ಮಂತ್ರಿ ಭಾಷಣ ಶುರುವಾದಾಗ "ಹೊಲಾ ಕೊಟ್ಟೀವಿ. ಮನಿಕೊಟ್ಟೀವಿ, ಇನ್ನೂ ಏನೇನ ಕೊಟ್ಟೀವಿ., ಇನ್ನೂ ಕೊಡಬೇಕಂತ ಮಾಡೀವಿ ಅಂತ ಹೇಳುತ್ತಿದ್ದ. ಮುಂದೆ ಕುಂತವರು ಚಪ್ಪಾಳೆ ಜಯಘೋಷಗಳಿಗೆ ಪುಳಕಿತರಾಗಿದ್ದ ಮಂತ್ರಿಗಳು ನಗು ಮುಖದಿಂದ ಕಾರೇರಿ ಬುರ್ರಂತ ಹೊಂಟು ಹೋದರು. ಯಾವುದೋ ಲೋಕಕ್ಕೆ ಹೋಗಿ ಬಂದವರಂತೆ ಏನೋ ಮಾತಾಡಿಕೊಳ್ಳುತ್ತಿದ್ದ ಜನ ಅಲ್ಲೆ ಸತ್ತು ಬಿದ್ದಿದ್ದ ಪರತನನ್ನು ನೋಡಿ "ಉಚ್ಚ ಸತ್ತ" ಅಂದರು." ಪರತನ ಕೂಗು ಮಂತ್ರಿ ಮಹೋದಯರಿಗೆ ಕೇಳಿಸುವುದಿಲ್ಲ. ಪರತನ ಹೊಲದ ಕನಸು,ತಾನು ಭೂ ಒಡೆಯನಾಗುವ ಕನಸು ಊರ ಗೌಡ ಮತ್ತು ಕುಲಕರಣಿಯ ಸಂಚಿನಿಂದ ನುಚ್ಚುನೂರಾಗುತ್ತದೆ. ಪರತನ ಕನಸು ಸಾವಿನ ದುರಂತದಲ್ಲಿ ಅಂತ್ಯಗೊಳ್ಳುತ್ತದೆ.

ಇಲ್ಲಿ ಭೂಮಿಯನ್ನು ಪಡೆಯಬೇಕೆಂಬ ಆಕಾಂಕ್ಷೆ ಹಾಗೆಯೇ ಉಳಿಯುತ್ತದೆ. ಈತನ ಏಕಮುಖಿಯಾದ ಭೂ ಹೋರಾಟ ವಿಫಲವಾಗುತ್ತದೆ. ಪರತನ ಭೂಹೋರಾಟವು ಕಾರಂತರ ಚೋಮನಂತೆ ಏಕ ವ್ಯಕಿಯ ಹೋರಾಟವಾಗಿ ವ್ಯಕ್ತವಾಗಿದೆ. ಭೂಸುಧಾರಣೆಯ ಸಂದರ್ಭದಲ್ಲಿ ಅಧಿಕಾರಿಶಾಹಿಗಳಿಂದ ವಂಚನೆಗೊಳಗಾಗುವ ಸಾಮಾನ್ಯ ರೈತರನ್ನು ಕಾಣುತ್ತೇವೆ. ಭೂಮಾಲೀಕರ ಪರವಾಗಿ ಅಧಿಕಾರಿಶಾಹಿ ನಡೆದುಕೊಳ್ಳುತ್ತಿದ್ದರೆಂಬುದನ್ನು ಈ ಕತೆಯು ಧ್ವನಿಸುತ್ತದೆ. ಈ ಗ್ರಾಮದ ಸಾಮಾಜಿಕ ವ್ಯವಸ್ಥೆಯ ರಾಜಕೀಯಹುನ್ನಾರಕ್ಕೆ ಪರತ ಬಲಿಯಾಗುವ

ದುರಂತವಿದೆ. ಭೂ ಸುಧಾರಣೆ ಎನ್ನುವುದು ರಾಜಕಾರಣದ ಹುನ್ನಾರವಾಗಿ ರಾಜಕೀಯ ಹಿತಾಸಕ್ತಿಗೆ ಬಲಿಯಾಗುವ ಆಶಯವಾಗಿ ವ್ಯಕ್ತವಾಗುತ್ತದೆ.

**'ಡೋಮ'** ಕತೆಯ ಆರಂಭದಲ್ಲಿ ಡೋಮನ ಪರಿಚಯವಿದೆ. ಡೋಮನ ತಾತ ತಾಶೀಲ್ದಾರರೊಬ್ಬರ ಹಿಂದೆ ತಿಂಗಳಾನುಗಟ್ಟಲೆ ಸುತ್ತುತ್ತ ಇದ್ದುದರಿಂದ, ಡೋಮನನ್ನು ತಾಶೀಲ್ದಾರ ಡೋಮ ಎಂದೆ ಆ ಊರಿನ ಜನರು ಕರೆಯುತ್ತಿದ್ದರು. ಡೋಮನ ಒಂದು ಕಣ್ಣು ಕುರುಡಾಗಿದ್ದು,ಇನ್ನೊಂದು ಕಣ್ಣು ತನ್ನ ಹೃದಯದಲ್ಲಿದೆ ಎಂದು ನಂಬಿದ್ದಾನೆ.

ಡೋಮನಿಗೆ ಸಣ್ಣಗೆ ಜ್ವರಬಂದು ಹನುಮಪ್ಪನ ತಾಯಿತವನ್ನು ಬಲರಟ್ಟೆಗೆ ಕಟ್ಟಿಕೊಂಡಾಗ, ಸ್ವರ್ಗದಲ್ಲಿರುವ ಹೆಂಡತಿ ಮತ್ತು ನಾಯಿ ಇಬ್ಬರೂ ಜೊತೆಗೂಡಿ ತನ್ನನ್ನು ಸ್ವರ್ಗಕ್ಕೆ ಸ್ವಾಗತಿಸಿದಂತಾಗಿ ಬೆವೆತು ನಿದ್ದೆಯೇ ಮಾಡುತ್ತಿರಲಿಲ್ಲ . ಡೋಮನಿಗೆ ಮೈಯೆಲ್ಲಾ ಚಿಗಿತಂತೆ ಹಾರುತ್ತಾ ಹಾರುತ್ತಾ ಹೋದ ಅನುಭವವಾಗತೊಡಗಿತು. ಈ ಗಿಡಗಳು ಎಷ್ಟೆತ್ತರ ಬೆಳೆಯುತ್ತವೆ? ಆ ಹಣ್ಣುಗಳ ಬಣ್ಣ ಎಂಥಾದ್ದು? ಆ ಹಣ್ಣುಗಳ ರುಚಿ ಎಂಥಾದ್ದು? ಎಂಬಂತಹ ಪ್ರಶ್ನೆಗಳು ಡೋಮನ ತಲೆ ತುಂಬ ತುಂಬಿಕೊಂಡಿವೆ. ಕೇಂದ್ರ ಸರ್ಕಾರದ ಯೋಜನೆಯ ಹಸಿರು ಕ್ರಾಂತಿಯೆಂಬ ಹುಸಿ ಸಿದ್ಧಾಂತ ಇಲ್ಲಿ ವ್ಯಕ್ತವಾಗುತ್ತದೆ. ಈ ಯೋಜನೆಯಿಂದಾಗಿ ಡೋಮನಿಗೆ ಸಸಿಗಳ ಬಗ್ಗೆ ಇದ್ದ ತೀವ್ರಕುತೂಹಲಕ್ಕೆ, ಸರ್ಕಾರಿ ನೌಕರನೊಬ್ಬನ ದಿವ್ಯ ನಿರ್ಲಕ್ಷ್ಯದಿಂದಾಗಿ ಈಯೋಜನೆಯು ಹುಸಿ ಎಂಬುದಾಗಿ ತಿಳಿಯುತ್ತದೆ. ಇದಕ್ಕೆ ಪೂರಕವೆಂಬಂತೆ ಬಿ.ಎಂ.ಪುಟ್ಟಯ್ಯ ಹೇಳುವಂತೆ, "೬೦-೭೦ರ ದಶಕದಲ್ಲಿ ಇಂಡಿಯಾದಲ್ಲಿ ಕೃಷಿರಂಗದಲ್ಲಿ ಬಹುದೊಡ್ಡ ಒಂದು ಗಂಭೀರ ಜೋಕ್ ನಡೆದು ಹೋಯಿತು. ಅದು ಹಸಿರು ಕ್ರಾಂತಿ ಎಂಬುದು."[೫] ಈ ಹಸಿರು ಕ್ರಾಂತಿಯ ಸರ್ಕಾರದ ಹುಸಿತನಗಳು ಹಾಗೂ ಕೇವಲ ಬಂಡವಾಳಶಾಹಿಗಳ ಪರವಾದ ಧೋರಣೆಗಳನ್ನು ಹೊಂದಿತ್ತು ಎಂಬುದನ್ನು ವ್ಯಕ್ತಗೊಳಿಸುತ್ತದೆ. ಬಡವರಗಾಗಿ, ದಲಿತರಿಗಾಗಿ ಹಸಿರುಕ್ರಾಂತಿಯ ಯೋಜನೆಗಳ ಫಲಗಳು ತಲುಪುವುದಿಲ್ಲ. ಇಂತಹ ಯೋಜನೆಯ ಗುರಿಗಳನ್ನು ಜನರಿಗೆ ತಲುಪಿಸಲು ಸರ್ಕಾರಿ ಅಧಿಕಾರಿಗಳು ಮುಂದಾಗದೇ ಇರುವುದು ಈ ಕತೆ ಧ್ವನಿಸಿದೆ.

ತಾನು ಒಬ್ಬ ಬೇಸಾಯಗಾರನಾಗುವ ಹಂಬಲ ಮತ್ತು ಕನಸು ಕಾಣುತ್ತಾನೆ. ಸರ್ಕಾರದವರು ಹಸಿರು ಕ್ರಾಂತಿಗೆ ಸಂಬಂಧಿಸಿದಂತೆ ಊರಿನಲ್ಲಿ ಕೊಟ್ಟಿದ್ದ ಹಣ್ಣಿನ ಸಸಿಗಳೆಲ್ಲ ಹಚ್ಚಿದ ಹದಿನಾರು ದಿನಗಳಲ್ಲಿ ಒಣಗಿಹೋದವು. ಡೋಮ ಮಾತ್ರ ತನ್ನ ಹಿತ್ತಲಿನ ಬಚ್ಚಲು ಹರಿಯುವ ನೀರಿಗೆ ಹಣ್ಣಿನ ಗಿಡವನ್ನು ನಟ್ಟಿರುತ್ತಾನೆ. ಅದು ಹಸಿರಾಗಿ ಕಲಕಲ ಎಂದು ನಳನಳಿಸುತ್ತಿರುವುದನ್ನು ಕಂಡು ಗೌಡರಿಗೆ ಒಂದು ರೀತಿ ಅಸೂಯೆ ಮೂಡುತ್ತದೆ. ಆದರೆ ಡೋಮ ಮಾತ್ರ ತಾನೇ ಪ್ರತಿದಿನವೂ ಎತ್ತಲಿಂದ ಬಂದರೂ ತನ್ನ ಹಿತ್ತಲಿನ ಗಿಡವನ್ನು ಬಹುಕುತೂಹಲದಿಂದ ಅದರ ಬೆಳವಣಿಗೆಯನ್ನು ನೋಡುತ್ತಾನೆ. ಆ ಗಿಡದಲ್ಲಿ ಗುಬ್ಬಿ ಸಂಸಾರ ಹೂಡಿ ಮೊಟ್ಟೆಹಾಕಿ ಮರಿ ಮಾಡುವುದನ್ನು ಸಹ ತನ್ನ ಹೆಂಡತಿ ಸಂಸಾರದೊಂದಿಗೆ ಸಮೀಕರಿಸಿಕೊಳ್ಳುತ್ತಾನೆ. ಡೋಮ ತಾನು ಬೇಸಾಯಗಾರನಾಗಬೇಕೆಂಬ ಕನಸು ತನ್ನ ಬದುಕಿನ ಒಂದು ಭಾಗವೆಂದೇ ಭಾವಿಸಿದ್ದಾನೆ.

ಪ್ರತಿದಿನದಂತೆ ಆತ ಹಿತ್ತಲಗಿಡದ ಪುಟ್ಟ ಗುಬ್ಬಿ ಸಂಸಾರವನ್ನು ಕುತೂಹಲದಿಂದ ವೀಕ್ಷಿಸುತ್ತಿದ್ದನು. ಡೋಮನ ಹಿತ್ತಲಿನ ಹಣ್ಣಿನ ಗಿಡವು ಗೌಡರ ಕೆಂಗಣ್ಣಿಗೆ ಗುರಿಯಾಗುತ್ತದೆ. ಸರ್ಕಾರದವರು ಕೊಟ್ಟಿದ್ದ ಹಣ್ಣಿನ ಗಿಡಗಳೆಲ್ಲ ಒಣಗಿ ಹೋಗಿವೆ. ಆದರೆ ಡೋಮನ ಹಿತ್ತಲಿನ ಹಣ್ಣಿನ ಗಿಡ ಚಿಗಿತು ಫಲ ನೀಡುತ್ತಿರುವುದು ಕಂಡು ಒಳಗೆ ಕುದಿಯುತ್ತಾರೆ. ಗೌಡರು ಆ ಹಣ್ಣಿನ ಗಿಡಗಳನ್ನು ಕಡಿಸಿ ತರುತ್ತಾರೆ.

ಇದನ್ನು ಕಂಡ ಡೋಮ "ಹೃದಯ ವಿದ್ರಾವಕ ದೃಶ್ಯ ಅವನ ಆಳಕ್ಕಿಳಿದಿದ್ದ ಕಣ್ಣುಗಳ ಶುಕ್ಲ ಪಟಲವನ್ನು ಗಕ್ಕನೆ ಕುಕ್ಕಿ ಬುಳಬುಳನೆ ನೀರು ಉದಿರಿಸತೊಡಗಿತು. ತುಂಡುತುಂಡಾಗಿ ಬಿದ್ದಿದ್ದ ಗಿಡದ ಒಂದೊಂದು ತುಂಡನ್ನೂ ಗಟ್ಟಿಯಾಗಿ ಎದೆಗವುಚಿಕೊಂಡು ಮುಗಿಲು ಮುಟ್ಟುವಂತೆ ಅಳತೊಡಗಿದನು. ಗುಬ್ಬಿಗೂಡು ಕೂಡ ಛಿದ್ರವಾಗಿ ಹೋಗಿದ್ದರೂ ಏಕಮಾತ್ರ ಮೊಟ್ಟೆ ಮಾತ್ರ ಮುಕ್ಕಾಗದೆ ಹುಡಿ ಮಣ್ಣು ಮೇಲೆ ಉರುಳಿ ನಿಂತಿತ್ತು. ಗುಬ್ಬಿ ದಂಪತಿಗಳು ಪಕ್ಷಿ ಸಹಜ ಅಸಹಾಯಕತೆಯನ್ನು ಚಿಕ್ ಚಿಕ್ ಚುಯ್ ಚುಯ್ ಅಂತ ಧ್ವನಿ ಪ್ರಕಟಿಸುತ್ತ ತಮ್ಮ ಪ್ರೀತಿದ್ಯೋತಕ ಮೊಟ್ಟೆಯನ್ನು ಸುರಕ್ಷಿತ ಜಾಗಕ್ಕೆ ಕದಲಿಸುವಂಥ ಪ್ರಯತ್ನ ನಡೆಸಿದ್ದವು."[೬] ಈ ದೃಶ್ಯವನ್ನು ಗಮನಿಸಿದ ಡೋಮನಿಗೆ ಅಯ್ಯೋ ನನ್ನ ಸೌಭಾಗ್ಯವೆಲ್ಲ ಮಣ್ಣುಗೂಡಿತೆ ಎಂದು ವಿಷಾದ ವ್ಯಕ್ತಪಡಿಸುತ್ತಾನೆ. ಈ ರೋಷದಲ್ಲಿ ಗೌಡರ ತೋಟದಲ್ಲಿರುವ ಎಲ್ಲಾ ಗಿಡಗಳನ್ನು ಕಡಿದು ಹಾಕುತ್ತಾನೆ.

ಆ ತಕ್ಷಣಕ್ಕೆ ಡೋಮ ಪ್ರತಿಕ್ರಿಯಿಸಿ ಪ್ರತಿಭಟನೆಯಾಗಿ ಗೌಡರ ತೋಟದಲ್ಲಿದ್ದ ಗಿಡಗಳನ್ನೆಲ್ಲಾ ಕತ್ತರಿಸಿ ಹಾಕುತ್ತಾನೆ. ಡೋಮನ ಬದುಕಿನ ಆಶಯಗಳಿಗೆ ಪ್ರತಿರೋಧ ಒಡ್ಡಿದವರಿಗೆ ಪ್ರತೀಕಾರ ತೀರಿಸಿಕೊಳ್ಳುವುದರಲ್ಲಿ ಆತ ಸಂತಸ ಕಾಣುತ್ತಾನೆ. "ಒಬ್ಬೊಬ್ಬರ ನೂರು ಮಾತುಗಳಿಗೆ ಉತ್ತರವಾಗಿ ಒಂದು ಮಾತನ್ನೂ ಆಡದೆ ಡೋಮ ಮಿಕಿಮಿಕಿ ಎಲ್ಲರನ್ನೂ ನೋಡಿದ, ಕೊನೆಗೆ ಗಹಿಗಹಿಸಿ ನಗತೊಡಗಿದ. ಕರ್ಣಕಠೋರವಾಗಿದ್ದ ಆ ನಗು ದೈವಸ್ಥರ ನಾಲಗೆಗೆ ಲಗಾಮು ಹಾಕಿತು. ಗಹಗಹಿಸಿ ನಗುತ್ತ ವಾಯುವ್ಯ ದಿಕ್ಕಿನ ಕಡೆ ನಡೆದ ಡೋಮನನ್ನು ಯಾರು ತಡೆಯಲಿಲ್ಲ."[೧೦]

**"ಕೊಟ್ರ ಹೈಸ್ಕೂಲಿಗೆ ಸೇರಿದ್ದು"** ಕಾದಂಬರಿಯಲ್ಲಿ ಭೂಸುಧಾರಣಾ ಕಾನೂನಿನ ಆಶಯವನ್ನು ಕಾಣಬಹುದಾಗಿದೆ. ಈ ಕಾದಂಬರಿಯು ಭೂ ಪ್ರಶ್ನೆಯನ್ನು ಮುಖ್ಯವಾಗಿ ಚರ್ಚಿಸುವುದರ ಜೊತೆಗೆ ಕಾನೂನಿನಲ್ಲಾಗಿರುವ ಮೋಸವಂಚನೆಗಳ ಕುರಿತು ಚರ್ಚಿಸುತ್ತದೆ. ದಲಿತರಿಗೆ ಹಾಗೂ ಹಿಂದುಳಿದ ವರ್ಗದವರಿಗೆ ಭೂ ಹಂಚಿಕೆಯಲ್ಲಾದ ಮೋಸ, ಭೂ ನ್ಯಾಯಮಂಡಳಿಯಿಂದ ಆಗುತ್ತಿದ್ದ ಅನ್ಯಾಯ ವಂಚನೆಗಳ ಕುರಿತು ಚಿತ್ರಣವಿದೆ. ನಾ.ಡಿಸೋಜರ ಕೊಲ್ಲನ ಮಗ ಹಾಲಪ್ಪ ವಿದ್ಯಾವಂತನಾದಂತೆ, ದಿಬ್ಬನ ಮಗ ಕೊಟ್ರ ವಕೀಲನಾಗುವ ಚಿತ್ರಣ ಎರಡು ಕಾದಂಬರಿಗಳ ಆಶಯಗಳಲ್ಲಿ ಸಾಮ್ಯತೆಗಳನ್ನು ಕಾಣಬಹುದಾಗಿದೆ. ಹೊಸಪೀಳಿಗೆಯ ಆಲೋಚನೆಯಿಂದ ಗೇಣಿರೈತರ ಸಮಸ್ಯೆಗೆ ಹಾಗೂ ತಮ್ಮ ಸಮುದಾಯದ ಸ್ಥಿತಿಗೆ ಕಾರಣ ಕಂಡುಕೊಳ್ಳುವ ಯತ್ನವಿದೆ.

ಭೂಮಾಲೀಕರ ಶೋಷಣೆಯಿಂದಾಗಿ ದಿಬ್ಬನಿಗೆ ಭೂ ಒಡೆಯನಾಗುವ ಅವಕಾಶದಿಂದ ಆತನನ್ನು ವಂಚಿಸುತ್ತಾರೆ. ಈ ಭೂಮಾಲೀಕರ ತಂಡದ ಜೊತೆಗೆ ವಕೀಲರು ಸೇರಿ ದಲಿತ ದಿಬ್ಬನನ್ನು ಭೂವಂಚಿತನನ್ನಾಗಿ ಮಾಡುತ್ತಾರೆ. ಈ ಕುರಿತು, "ದಿಬ್ಬನೂ ಇದಕ್ಕೂ ಮೊದಲು ಗೌಡನ ಒಂದಿಷ್ಟು ಹೊಲವನ್ನು ವರ್ಷ ಲಗಾಯ್ತು ಲಾವಣಿ ಹಿಡಿದು ಬೆಳೆದ ಬೆಳೆಯ ಮೂರನೇ ಒಂದು ಪಾಲುಂಡು ಹೇಗೋ ಬದುಕು ಹೊರೆಯುತ್ತಿದ್ದನು. ಲಾಂಡು ತಿರುಬೂನಲು ಆಕ್ಟು ಬಂತೋ, ಖುಷಿಯಾದನು. ಕಂದಾಯ ಕಟ್ಟಿದ ರಿಸೀಪ್ಟುಗಳೂ ತನ್ನ ಬಳಿಯಲ್ಲಿವೆ ಎಂದರೆ ತಾನು ಭೂಮಿಗೆ ಒಡಯನಾಗಿ ವಂಶಲಗಾಯ್ತು ಕಾಂಬುತ್ತಿದ್ದ ಕನಸೊಂದು ನನಸಾಗುತ್ತದೆಂದೇ ತಾನೂ ಒಬ್ಬ ನೆಮ್ಮದಿಗಾರನಾಗಬೇಕೆಂದು ತಾನೇ ಇಲೇಜು ಅಟೌಂಟು ರಮೇಸಪ್ಪಗೆ ಎರಡು ದೊಡ್ಡ ನೋಟು ಹೊಂದಿಸಿಕೊಟ್ಟದ್ದು.... ಎರಡು ಜೊತೆ ಕೈರ ಹರಿವಮಟ ಚಾವಡಿಗೂ ಝೋಪಡಿಗೂ ದಟ್ಟಂಡಿ ದಾರಂಡಿ ಅಲೆದದ್ದು.... ತನ್ನ ಗ್ರಹಗತಿಗಳು ಸುಮಾರೆಂಬ ಸಂಗತಿ ನೆನಪು ಮಾಡಿಕೊಳ್ಳುತ್ತಿರುವಾಗಲೇ ತಾನು ಪುಡಿಮಣ್ಣಿ ಕಣಕ್ಕೂ ಬೆವರು ಬೆರೆಸಿದ್ದ ಹೊಲ ಮತ್ತೆ ರಣಹೇಡಿಗಂಡನಂಥ ಗೌಡನ ಸುಪರ್ದಿ ಸೇರಿದ್ದು . ಅದನ್ನು ಮರಳಿ ಪಡೆಯುವ ಆಸೆಯಿಂದ ಸುವನಾಗಪ್ಪ ವಕೀಲರನ್ನು ಗೊತ್ತುಮಾಡಿದ್ದು, ಕೋರ್ಟಿಗೂ ಝೋಪಡಿಗೂ ದಟ್ಟಂಡಿ ದಾರಂಡಿ ಅಡ್ಡಾಡಿ ಮತ್ತೊಂದು ಎಮ್ಮೆ ಕರುವಿನ ಎಳೆತೊಗಲಿನ ಚಪ್ಪಲಿ ಸವೆದು ಹಾಳಾದದ್ದು... ಅಂಥ ಎಂಜಲು ಕಾಸಿಗೆ ಜುಮ್ಮೆನ್ನುವ ಪೈಕಿ ಅಲ್ಲದ ವಕೀಲನೇ ಗೌಡನ ಪರವಾಲಿ ಕೈ ಜಾಡಿಸಿ ಬಿಟ್ಟದ್ದು... ಇದ್ದ ಚೂರುಪಾರು ಮಾಂಸ ರಕ್ತ ಕಳೆದುಕೊಂಡು ನಡೆವಾಗ ಹುಟ್ಟಿದ ಆಯಾಸ ಪರಿಹಾರಾರ್ಥವಾಗಿ ಕಣ್ಣುಮುಚ್ಚಿ ಉರಕುಂದಿ ಈರಣ್ಣನೇನಾದ್ರು ತನ್ನೊಟ್ಟೇಲಿ ಗಂಡು ಮಗ ಕೊಟ್ಟಿದ್ರೇ ಆದ್ರೇ ಓದ್ಸಿ ವಕೀಲನನ್ನಾಗಿ ಮಾಡ್ತಿ ಎಂದು ಶಪಥ ಮಾಡಿದ್ದನು."[೧೧] ಗೇಣಿ ಪಡೆದಿದ್ದ ಭೂಮಿಯಲ್ಲಿ ದಿಬ್ಬ ದುಡಿಮೆ ಮಾಡಿ ತನ್ನ ಬದುಕನ್ನು ಕಂಡುಕೊಂಡಿದ್ದಾನೆ. ಭೂಸುಧಾರಣಾ ಕಾನೂನು ಬಂದ ನಂತರದಲ್ಲಿ ಭೂಮಿಗೆ ಕಂದಾಯದ ರಸೀತಿಯ ಮೂಲಕ ಹಕ್ಕು ಸ್ಥಾಪಿಸಲು ಯತ್ನಿಸುತ್ತಾರೆ. ಆ ದರೆ ಭೂಮಾಲೀಕರು ರಣಹದ್ದಿನಂತೆ ಎರಗಿ ದಿಬ್ಬನ ಭೂಮಿಯನ್ನು ತನ್ನ ವಶಪಡಿಸಿಕೊಳ್ಳುವ ಚಿತ್ರಣವಿದೆ.

ದಿಬ್ಬ ಗೌಡರ ಹೊಲವನ್ನು ಉಳುಮೆ ಮಾಡುತ್ತಿದ್ದ ಬೆಳೆಯ ಎರಡುಪಾಲಷ್ಟು ಭೂಮಾಲೀಕರಿಗೆ ನೀಡಿ, ಉಳಿದ ಒಂದು ಪಾಲನ್ನು ಮಾತ್ರ ತನ್ನ ಮನೆಗೆ ದಿಬ್ಬ ತೆಗೆದುಕೊಂಡು ಹೋಗುತ್ತಿದ್ದನ್ನು ಕಾಣುತ್ತೇವೆ. ಗೌಡರ ಮನೆಯಲ್ಲಿ ವಿಶೇಷ ಸಮಾರಂಭದಲ್ಲಿ ಸೇರುತ್ತಿದ್ದ ಸಂದರ್ಭದಲ್ಲಿ ದಿಬ್ಬ "ತಾನು ಒಂದಲ್ಲಾ ಒಂದು ರೀತಿಯಲ್ಲಿ ದುಡಿದಿರುವ ಮನೆಗಳು, ತನ್ನನ್ನು ಸಣ್ಣಗೆ ಮಾಡಿರುವ ಮನೆಗಳು, ಅವುಗಳ ಮೇಲೆ ತನಗೆ ಸಂಪೂರ್ಣ ಹಕ್ಕಿದೆ, ಕೇಳೋದು ಇಲ್ಲಾಂದರೆ ಗುದ್ದಾಡಿ ಇಸಿದುಕೊಂಡೋ ಕಸಿದುಕೊಂಡೋ ತಿನ್ನುವುದಕ್ಕೆ ತಾನು ಬಾಧ್ಯಸ್ಥನು."[೧೨]

ಇಲ್ಲಿ ದಿಬ್ಬನ ನಿಲುವು ಹಸಿವಿನ ಪ್ರಶ್ನೆಯನ್ನು ಪ್ರತಿನಿಧಿಸುತ್ತ, ಇಲ್ಲಿ ಯಾರೇ ಹಕ್ಕುದಾರರಾಗಿರಲೀ, ತನ್ನ ಶ್ರಮಕ್ಕೂ ತಕ್ಕ ಫಲವಿದೆ ಎಂದು ಭಾವಿಸುವುದನ್ನು ಗಮನಿಸಬಹುದಾಗಿದೆ. ವಿದ್ಯಾವಂತನಾದ ಕೊಟ್ರ ಗೌಡರ ಮನೆಗೆ ಹೋಗಲು ನಿರಾಕರಿಸುತ್ತಾನೆ. ಈ ಸನ್ನಿವೇಶನದಲ್ಲಿ ತನಗೂ ಈ ಗೌಡರ ಮನೆಗೆ ತಲೆಮಾರಿನ ಸಂಬಂಧವನ್ನು

ಇರುವುದನ್ನು ಹೇಳಿಕೊಳ್ಳುತ್ತಾನೆ. ಕೊನೆಗೆ ಕೊಟ್ರನೊಂದಿಗೆ ದಿಬ್ಬ ಗೌಡರ ಮನೆಗೆ ಹೋದಾಗ ಕೊಟ್ರಶಾಲೆಗೆ ಸೇರುತ್ತಾನೆಂಬ ವಿಷಯ ತಿಳಿದಾಗ ಗೌಡರು ನಾವು ರೊಕ್ಕ ಕೊಟ್ರೆ ತಾನೇ ನೀವು ಹೈಸ್ಕೂಲಿಗೆ ಸೇರಿಸುವುದು ಎಂದು ಛೇಡಿಸುತ್ತಾನೆ. ಹೇಗಾದರೂ ಮಾಡಿ ತನ್ನ ಮಗನನ್ನು ದೊಡ್ಡ ವಿದ್ಯಾವಂತನನ್ನಾಗಿ ಮಾಡಿ ತನ್ನ ಭೂಮಿಯನ್ನು ಪಡದೆ ತೀರಬೇಕೆಂದು ಹಠತೊಡುತ್ತಾನೆ. ತನ್ನ ಮಗ ಕೊಟ್ರ ಲಾಯರ್ ಆಗಿ ಕೋರ್ಟ್‌ನಲ್ಲಿ ನನ್ನ ಪರವಾಗಿ ವಾದಿಸಿ ಭೂಮಿಯನ್ನು ಪಡೆಯಬೇಕೆಂಬ ಕನಸನ್ನು ಕಟ್ಟುತ್ತಾನೆ.

ಈ ಕಾಯ್ದೆ ಬಂದನಂತರದಲ್ಲಿ ದಿಬ್ಬ ಭೂಮಾಲೀಕನಾಬೇಕೆಂಬ ಅದಮ್ಯ ಕನಸನ್ನು ಕಾಣುತ್ತಾನೆ. ತಾನು ಉಳುಮೆಮಾಡುತ್ತಿದ್ದ ಗೇಣಿ ಭೂಮಿಯ ಕಂದಾಯ ಕಟ್ಟಿದ ರಸೀದಿಯೊಂದಿಗೆ ಗ್ರಾಮಲೆಕ್ಕಿಗನ ಬಳಿ ಐದುನೂರು ರೂಪಾಯಿಗಳ ಲಂಚ ನೀಡಿ ಅರ್ಜಿ ಸಲ್ಲಿಸುತ್ತಾನೆ. ಅರ್ಜಿ ಕೊಟ್ಟ ನಂತರದಲ್ಲಿ ಸರ್ಕಾರದ ಆದೇಶಕ್ಕಾಗಿ ಕಾಯುತ್ತಾನೆ. ಈ ಭೂಮಿಯನ್ನು ತನ್ನ ಹೆಸರಿಗೆ ಮಾಡಿಕೊಳ್ಳಲು ಗ್ರಾಮಮಟ್ಟದಲ್ಲಾಗಲೀ, ನ್ಯಾಯಾಲಯದಲ್ಲಾಗಲೀ ದಿಬ್ಬನಿಗೆ ನ್ಯಾಯ ದೊರೆಯುವುದಿಲ್ಲ. ಭೂಮಾಲೀಕರ ಕುತಂತ್ರದಿಂದಾಗಿ ಭೂನ್ಯಾಯಮಂಡಳಿಯ ಗೋಸುಂಬೆತನ ಬಯಲಾಗುತ್ತದೆ.ಭೂ ಒಡೆಯನಾಗಲು ಊಳಿಗಮಾನ್ಯಶಾಹಿ ವ್ಯವಸ್ಥೆ ಬಿಡದೆ ಕೂಲಿಕಾರ್ಮಿಕರಾಗಿ ಉಳಿಯುವಂತೆ ಮಾಡಿದೆ.

ಇಲ್ಲಿ ದಿಬ್ಬ ತನ್ನ ಊರಿನಲ್ಲಿ ಒಂದು ಉತ್ತಮ ಮನೆಯನ್ನು ಕಟ್ಟಿಸಿಕೊಳ್ಳಲು ಅರ್ಜಿಯನ್ನು ಹಾಕುತ್ತಾನೆ. ಇದಕ್ಕೆ ತಹಶೀಲ್ದಾರರಿಗೆ ಮೂರು ಗಟ್ಟಿನೋಟು ಕೊಡಲಿಲ್ಲ ಎಂಬ ಕಾರಣಕ್ಕೆ ಸರ್ಕಾರ ಕಟ್ಟಿಸಿದ ಮನೆಯೂ ಕೂಡಾ ಸಿಗದೇ ತಪ್ಪಿಹೋಗುತ್ತದೆ. ಈ ತಹಶೀಲ್ದಾರನು ಕೂಡಾ ದಲಿತ ಅಧಿಕಾರಿಯಾಗಿದ್ದು, ಈತನಿಗೆ ಲಂಚ ನೀಡಿ ಪಡೆಯಬೇಕಾದ ಪರಿಸ್ಥಿತಿ ಬರುತ್ತದೆ. ಕೊನೆಗೆ ಮನೆಯೂ ಕೂಡಾ ದಕ್ಕದೆ ಇರುವ ದುರಂತವನ್ನು ಕಾಣುತ್ತೇವೆ.

"**ಕಪ್ಪು**" ಕಾದಂಬರಿಯಲ್ಲಿ ಇಬ್ಬರು ಭೂಮಾಲೀಕರ ನಡುವೆ ದಲಿತ ಕುಟುಂಬವೊಂದು ನಲುಗುವ ಚಿತ್ರಣವಿದೆ. ಇಲ್ಲಿ ಬರುವ ಭೂಮಾಲೀಕ ಕರೀಗೌಡ, ಮತ್ತು ರುದ್ರಗೌಡರ ನಡುವೆ ಬದ್ಧ ದ್ವೇಷ ವ್ಯಕ್ತವಾಗುವುದನ್ನು ಕಾಣುತ್ತೇವೆ. ಈ ಇಬ್ಬರ ನಡುವೆ ಬರುವ ದಲಿತ ಕುಟುಂಬದ ಭರಮಜ್ಜ ಮತ್ತು ಆತನ ಮಗ ಚಂಬಸ್ಸ, ಭರಮಜ್ಜನ ಮಗಳು ಗೌರಿ ಚಿತ್ರಣವಿದೆ. ಭೂಮಾಲೀಕರ ಹಿಡಿತದಿಂದ ಪಾರಾಗಲು ಇಲ್ಲಿ ದಲಿತ ಕುಟುಂಬ ಯತ್ನಿಸುತ್ತದೆ.

ಈ ಎರಡು ಮಂದಿ ಭೂಮಾಲೀಕರ ಕಾದಾಟದಲ್ಲಿ ಹಲವು ದಲಿತ ಜೀವಗಳು ಬಡಿದಾಡಿ ತನ್ನ ಪ್ರಾಣವನ್ನೇ ಕಳೆದುಕೊಳ್ಳುತ್ತವೆ. ಭರಮಜ್ಜನ ಮಗಳು ಗೌರಿಯ ಮೇಲೆ ಗೌಡನ ಕಣ್ಣು ಬೀಳುತ್ತದೆ. ಊರಿನ ಮಾರೆಮ್ಮನ ಜಾತ್ರೆಗೆ ಮೀಸಲಿಗಾಗಿ ಭರಮಜ್ಜನ ಮಗಳು ಗೌರಿಯನ್ನು ಮೀಸಲು ಬಿಡಬೇಕೆಂದು ಪೂಜಾರಿ ಎಲ್ಲಪ್ಪನಿಂದ ಹೇಳಿಸಲಾಗುತ್ತದೆ. ತನ್ನ ಒಬ್ಬಳೇ ಮಗಳು ಗೌರಿಯನ್ನು ಗೌಡನಿಗೆ ಬಲಿಗೊಡಬಾರದೆಂದು ರಾತ್ರಿಯೇ ಚಂಬಸ್ಸ, ಭರಮಜ್ಜ, ಗೌರಿ ಮೂರು ಮಂದಿ ಗಾಡಿಕಟ್ಟಿಕೊಂಡು ಮಾಸೂರನ್ನು ಬಿಡುತ್ತಾರೆ. ಗೌಡನ ಕಡುವೈರಿಯಾದ ರುದ್ರಗೌಡನ ಆಶ್ರಯದಲ್ಲಿ ತಂಗುತ್ತಾರೆ. ಇವರಿಬ್ಬರ ಕಾದಾಟದಲ್ಲಿ ಅಂತಿಮವಾಗಿ ಕರಿಗೌಡನ ತಮ್ಮ ಗೌರಿಯನ್ನು ಮರಳಿ ಮಾಸೂರಿಗೆ ಕರೆ ತರುತ್ತಾನೆ. ಗೌರಿ ಒಲ್ಲದ ಮನಸ್ಸಿನಿಂದ ಪುನಃ ಮಾರಿಗುಡಿ ಮೀಸಲಾಗುತ್ತಳೆ. ಇಲ್ಲಿ ಭೂಮಾಲೀಕನ ಕ್ರೌರ್ಯ ದಲಿತ ಕುಟುಂಬದ ಬದುಕನ್ನು ಬಲಿತೆಗೆದುಕೊಳ್ಳುವ ಚಿತ್ರಣವನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

**ಕೊನೆ ಟಿಪ್ಪಣಿ**

೧.ಮೊಗಳ್ಳಿ ಗಣೇಶ, ಬರಿಕಥೆಯಲ್ಲೊ ಅಣ್ಣಾ, ಆಯ್ದ ಅಭಿಪ್ರಾಯಗಳು ಪು.೯೮೮

೨.ಕುಂ.ವೀ.,ಕಪ್ಪುನೆಲದಲ್ಲೊಂದು ಕೆಂಪುಕತೆ, ಪುಟ.೯೪

೩.ಅದೇ ಪುಟ.೯೪

೪.ಅದೇ ಪುಟ ೯೭

೫.ಅದೇ ಪುಟ ೯೮

೬.ಅದೇ ಪುಟ ೧೦೧

೭.ಕುಂ.ವೀ., ಡೋಮ, ಬರಿ ಕಥೆಯಲ್ಲೋ ಅಣ್ಣಾ, ಪುಟ ೨೭೮

೮.ಬಿ.ಎಂ.ಪುಟ್ಟಯ್ಯ ,ದಲಿತರು ಮತ್ತು ಪರ್ಯಾಯ ರಾಜಕಾರಣ, ಪುಟ.೨೧೧

೯.ಕುಂ.ವೀ., ಡೋಮ, ಬರಿ ಕಥೆಯಲ್ಲೋ ಅಣ್ಣಾ, ಪುಟ ೨೭೯

೧೦.ಅದೇ ಪುಟ

೧೧. ಕುಂ.ವೀ.,ಕೊಟ್ರ ಹೈಸ್ಕೂಲಿಗೆ ಸೇರಿದ್ದು,ಪುಟ ೪

೧೨. ಅದೇ ಪುಟ ೪೦

## ೪.೨.೧೫ ಅರವಿಂದ ಮಾಲಗತ್ತಿ : ಜೀತಗಾರರ ಭೂ ಹಕ್ಕಿನ ಹೋರಾಟದ ನೆಲೆ

ಎಪ್ಪತ್ತರ ದಶಕದಲ್ಲಾದ ಭೂಸುಧಾರಣಾ ಕಾನೂನಿನ ತಿದ್ದುಪಡಿಯಿಂದಾಗಿ ರೈತರು, ಗೇಣಿರೈತರು ಹಾಗೂ ದಲಿತರು ಭೂಹೀನ ವರ್ಗದ ಜನರಿಗೆ ಭೂ ಒಡೆತನ ಲಭಿಸಿದುದನ್ನು ಗಮನಿಸಬಹುದು. ಈ ಸುಧಾರಣೆಗಳ ಮೂಲಕ ಭೂ ಒಡೆತನ ನೀಡುವ ಸಲುವಾಗಿ ಭೂನ್ಯಾಯಮಂಡಳಿಗಳು ಸ್ಥಾಪನೆಯಾದವು. ಈ ಭೂನ್ಯಾಯಮಂಡಳಿಯಲ್ಲಿದ್ದ ಕೆಲ ಪಟ್ಟಭದ್ರಹಿತಾಸಕ್ತಿಗಳಿಂದಾಗಿ ಭೂಹೀನ ರೈತರಿಗೆ ಭೂ ಒಡೆತನ ದಕ್ಕದಂತೆ ಮಾಡಿರುವುದನ್ನು ಗಮನಿಸಬಹುದಾಗಿದೆ. ಇಂತಹ ಊಳಿಗಮಾನ್ಯಶಾಹಿ ವ್ಯವಸ್ಥೆಯ ಹುನ್ನಾರಗಳಿಂದ ಭೂಸುಧಾರಣೆ ಕಾನೂನಿನ ಉದ್ದೇಶವನ್ನು ದುರ್ಬಳಕೆಮಾಡಿಕೊಂಡಿರುವುದನ್ನು ಕಾಣಬಹುದು. ಇಂತಹ ಕಥಾವಸ್ತುವನ್ನೊಳಗೊಂಡಿರುವ **ಭೂಮಸೂದೆ** ಕತೆಯನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

ಇಲ್ಲಿ ಭೂ ರೈತ ಪ್ರಶ್ನೆಯನ್ನು ಪ್ರಧಾನವಾಗಿಟ್ಟುಕೊಂಡು ಊಳಿಗಮಾನ್ಯಶಾಹಿ ವ್ಯವಸ್ಥೆಯ ವಿರುದ್ಧ ಹೋರಾಡುವ ಆಶಯವಿದೆ. ಭೂ ಪ್ರಶ್ನೆಯೊಂದಿಗಿರುವ ಕಾನೂನಿನ ಪ್ರಶ್ನೆ, ಭೂ ಒಡೆತನದ ಪ್ರಶ್ನೆಗಳು ಕತೆಯಲ್ಲಿ ಧ್ವನಿಸಿರುವುದು ವ್ಯಕ್ತವಾಗುತ್ತದೆ. ಈ ಕತೆಯಲ್ಲಿ ದಲಿತ ಬದುಕಿನ ಮೂರುತಲೆಮಾರುಗಳು ಪ್ರತಿನಿಧಿಸಿರುವುದನ್ನು ಕಾಣುತ್ತೇವೆ. ಮೊದಲ ತಲೆಮಾರಿನಲ್ಲಿ ಮೊದಲಿನವ ಬಾಳಪ್ಪ, ಎರಡನೇ ತಲೆಮಾರಿನವ ಬೆಳ್ಳಿಯಪ್ಪ, ಮೂರನೇ ತಲೆಮಾರಿನ ಪ್ರತಿನಿಧಿಯಾಗಿ ಬಂಗಾರಪ್ಪನಿದ್ದಾನೆ. ಈ ದಲಿತ ಬದುಕಿನ ಮೂರು ತಲೆಮಾರಿನ ಕಾಲಘಟ್ಟವು,ಒಂದೊಂದು ನೆಲೆಯ ಮೂಲಕ ಬದುಕುವ ಮತ್ತು ಹೋರಾಟ ನಡೆಸುವ ಚಿತ್ರಣವನ್ನು ಚಿತ್ರಿಸಲಾಗಿದೆ. ಈ ಕತೆಯ ತಾತ್ವಿಕ ಆಶಯಗಳನ್ನು ಸ್ಥೂಲವಾಗಿ ಹೀಗೆ ಗುರುತಿಸಲಾಗಿದೆ.

ಈ ಕತೆಯ ಮೂಲ ಸ್ವರೂಪದಲ್ಲಿ ಅಂಬೇಡ್ಕರ್‌ವಾದದ ಆಶಯಗಳು ಕಂಡುಬರುತ್ತವೆ. ಅಂಬೇಡ್ಕರ್ ಚಿಂತನೆಯ ಶಿಕ್ಷಣ ಸಂಘಟನೆ ಹೋರಾಟಗಳು ಕತೆಯಲ್ಲಿ ಮುಖ್ಯನೆಲೆಯಾಗಿವೆ. ಮೊದಲನೇ ತಲೆಮಾರಿನ ಬಾಳಪ್ಪ ವಿಧಿವಾದದ ನೆಲೆಯಲ್ಲಿ ಊಳಿಗಮಾನ್ಯ ವ್ಯವಸ್ಥೆಯ ಆದೇಶವನ್ನು ಒಪ್ಪಿತ ನೆಲೆಯಲ್ಲಿ ಪಾಲಿಸುವ ವ್ಯಕ್ತಿಯಾಗಿದ್ದಾನೆ.ಎರಡನೇ ತಲೆಮಾರಿನ ಬೆಳ್ಳಿಯಪ್ಪ ಶಿಕ್ಷಣ ಪಡೆದು ಹಕ್ಕಿನ ನೆಲೆಯಲ್ಲಿ ಹೋರಾಟ ನಡೆಸುತ್ತಾನೆ. ಮೂರನೇ ತಲೆಮಾರಿನ ಬಂಗಾರಪ್ಪ ಶಿಕ್ಷಣ, ಸಂಘಟನೆ ಮತ್ತು ಹೋರಾಟದ ಮೂಲಕ ಸಮರ್ಥವಾಗಿ ಊಳಿಗಮಾನ್ಯಶಾಹಿಯನ್ನು ಎದುರಿಸುತ್ತಾನೆ. ಅಲ್ಲದೆ ಜಾಗತಿಕನೆಲೆಯ ತಂತ್ರಗಳ ಮೂಲಕ ಹೋರಾಟ ನಡೆಸಲು ಸಿದ್ಧಗೊಂಡು ಬರುತ್ತಾನೆ.

"**ಭೂಮಸೂದೆ**" ಯಲ್ಲಿಮೊದಲನೇ ಪ್ರತಿನಿಧಿಯಾಗಿ ಬಾಳಪ್ಪ ಬಾಲ್ಯದ ಗೆಳೆಯ ಊರಿನ ಭೂಮಾಲೀಕ ಅರಿಮಯ್ಯನವರ ಮನೆಯ ಜೀತಗಾರನಾಗಿಯೇ ತನ್ನ ಬದುಕನ್ನು ಸವೆಸುತ್ತಾನೆ. ಬಾಳಪ್ಪನ ಮಗನ ಕಾಲಕ್ಕೆ ಭೂಮಸೂದೆ ಜಾರಿಗೆ ಬಂದು ಒಡೆಯರ ಜಮೀನು ಪಡೆಯುವ ಹಂಬಲವನ್ನು ಬಾಳಪ್ಪ ತೋರುವುದಿಲ್ಲ. ಈತ ಒಡೆಯರಿಗೆ ನಿಷ್ಠನಾಗಿ,ಅವರು ಹೇಳಿದ ಕೆಲಸಗಳನ್ನು ಮಾಡಿಕೊಂಡಿರುತ್ತಾನೆ. ಇಲ್ಲಿ ಭೂಮಾಲೀಕ ಅರಿಮಯ್ಯ ಮತ್ತು ಈತನ ಮಗ ಬೈದು ತಮ್ಮ ಬಳಿ ಬರಬೇಡವೆಂದು ನಿಷ್ಠುರವಾಗಿ ಹೇಳಿದರೂ ಆತ ಕೇಳದೇ ಪುನಃ ಅವರ ಮನೆಯ ಜೀತದ ಕೆಲಸ ಮಾಡಿ ಕೊಂಡಿರುತ್ತಾನೆ. "ಭೂಮಿ ಆಳಲಿಕ್ಕೆ ಹೋದವರೆಲ್ಲ ಆಳದರೋ ಊಳದವೇ ಉಳಿಯುವರು.. ಭೂಮಿ ತಾಯಿ ಉದ್ಯಾಗ ಮಗನಾಗಿ ಆಡುದ ಕಲಿಯೋ ಓದಿದರೆ ಬುದ್ದಿ ಬರ್ತದೆ ಅಂದು ಕೊಂಡೆ. ಆದರೆ ನೀನು ಮನಿಯಿಂದ ನಮ್ಮನ್ನೆಲ್ಲಾ ಹೊರಗೆ ನಿಲ್ಲಿಸದೆ ಮನಿ ಮಾರುವಾಗ ನನಗೆ ನಾನೇ ಮಾರಿಕೊಂಡಾಂಗ ಅನಸ್ತು ಇನ್ನ ಅವು ಭೂಮಿ ಕಿತ್ತುಕೊಳ್ಳಕ ಹೊರಟರೆ ಅರುಗೇನ ಅನಸ್ತದ ಏನಾರ ವಿಚಾರ ಮಾಡಿಯೇನು." ಈತನಿಗೆ ಜೀತದ ಬದುಕು ಸಹಜವಾಗಿಯೇ ಒಗ್ಗಿಕೊಂಡಿರುವುದನ್ನು ಕಾಣುತ್ತೇವೆ. ಈ ಮಾತಿನ ಹಿಂದೆ ಭೂಮಾಲೀಕರ ದಾಳಿಯು ಈತನಕ್ಕೆ ಭಯ ತರಿಸುತ್ತದೆ.

ಇದಕ್ಕೆ ಕಾರಣವಾಗಿ ಈ ಊರಿನ ಸಣ್ಣಬಸಯ್ಯನವರ ಗದ್ದೆ ಊಳುತ್ತಿದ್ದ ಬಾಳಪ್ಪನ ಸಂಬಂಧಿಕರಾದ ಯಲುಗಪ್ಪ ಮತ್ತು ಮಕ್ಕಳಾದ ಸೋಮಪ್ಪ ನೀಲಪ್ಪ ಭೂ ಮಸೂದೆ ಕಾನೂನು ತನಗೆ ತೊಡಕಾಗಬಹುದೆಂದು ಅರಿತ ಸಣ್ಣಬಸಯ್ಯ ತನ್ನ ಭೂಮಿ ಭೂಮಿ ಉಳುಮೆ ಮಾಡುತ್ತಿದದ್ದ ನೀಲಪ್ಪನನ್ನು ಸಂತೆಗೆ ಕರೆದುಕೊಂಡು ಹೋಗಿ, ಸಂತೆಯಲ್ಲಿ ಕುಡಿಸಿ ದಾರಿಯಲ್ಲಿ ಬರುವಾಗ ಹೊಳೆಯ ನೀರಿನಲ್ಲಿ ಮುಳುಗಿಸಿ ಬಿಡುತ್ತಾನೆ. ಬೆಳ್ಳಿಯಪ್ಪನ ಗೆಳೆಯ ತನ್ನ ತಂದೆಯ ಸಾಹಿಸಿಂದ ತತ್ತರಿಸಿ ಭೂಮಿಗಾಗಿ ಈತನೂ ಕಚೇರಿಗಳನ್ನು ಭೇಟಿ ಮಾಡಿ ಭೂಮಿಯನ್ನು ಪಡೆಯುತ್ತಾನೆ.

ಎರಡನೇ ತಲೆಮಾರಿನ ಬೆಳ್ಳಿಯಪ್ಪ ವಿದ್ಯಾವಂತನಾಗಿದ್ದಾನೆ. ಒಡೆಯರಿಂದ ಬರಬೇಕಾದ ಭೂಮಿ ತನಗೆ ಬರಬೇಕಾದುದು ನ್ಯಾಯಯುತ ಎಂದು ಭಾವಿಸಿದ್ದಾನೆ. ಆದರೆ ಈತನ ತಂದೆ ಹೇಳುವಂತೆ ಭೂಮಿಯನ್ನು ಕಿತ್ತುಕೊಳ್ಳಬೇಡ, ತಿಂದ ಮನೆಗೆ ಎರಡು ಬಗೆಯಬೇಡವೆಂದು ನೀತಿಯನ್ನು ಹೇಳುತ್ತಾನೆ. ಆದರೆ ಮಗ ಬೆಳ್ಳಿಯಪ್ಪ ಅದಕ್ಕೆ ತದ್ವಿರುದ್ಧವಾಗಿ ನಡೆದುಕೊಳ್ಳುತ್ತಾನೆ. ತಾನು ಶಿಕ್ಷಣ ಪಡೆದುದರಿಂದ ಭೂಮಾಲೀಕರ ಶೋಷಣೆಯ ಅರಿವು ಆತನಿಗಿರುವುದು ಕಂಡುಬರುತ್ತದೆ.ತಮಗಾಗುತ್ತಿರುವ ಅನ್ಯಾಯ, ಶೋಷಣೆಯ ಬಗ್ಗೆ ಅರಿವಿನಿಂದಾಗಿ ಆತನಿಗೆ ಭೂಮಿಯನ್ನು ಪಡೆಯುವುದು ಮುಖ್ಯವೆನಿಸಿದೆ. ಈ ಅರಿವಿನ ಪರಿಣಾಮವಾಗಿ ಬೆಳ್ಳಿಯಪ್ಪ ಭೂ ಒಡೆತನ ಪಡೆಯುವುದು ಸ್ವಾಭಿಮಾನ, ಸಮಾನತೆ ಸ್ವತಂತ್ರ ಪಡೆದಂತೆ ಎಂದು ಭಾವಿಸುತ್ತಾನೆ.

ಬೆಳ್ಳಿಯಪ್ಪ ಕಾನೂನಿನ ಪ್ರಕಾರ ಭೂಮಾಲೀಕನಾಗಲು ಯತ್ನಿಸುತ್ತಾನೆ.ಆದ್ದರಿಂದ ಭೂ ಮಸೂದೆ ಕಾನೂನನ್ನು ಉಪಯೋಗಿಸಿಕೊಂಡು ಭೂಮಾಲೀಕ ಅರಿಮಯ್ಯನ ಭೂಮಿಯನ್ನು ಕೇಳುವುದು ತನ್ನ ಹಕ್ಕು ಎಂದು ಹೇಳುತ್ತಾನೆ.ಈ ಕುರಿತು, "ತಲೀಮಾರಿಂದ ದುಡಿತಿರೋ ಭೂಮಿ ನಾವು ದುಡಿಯೋ ಭೂಮಿ ನಮಗೆ ಸ್ವಲ್ಪ ಕೊಡ್ರಿ ಅಂತ ಕೇಳೋದ ತಪ್ಪಾ? ಸರಕಾರ ಕಾಯ್ದಿ ಐತಿ ಕೇಳ್ತೀನಿ ಅವುರೇನು ಭಿಕ್ಷೆ ಕೊಡ್ತಾರಾ...? ಅವ್ರ ಮಕ್ಕಳು ಕಲ್ತು ಪ್ಯಾಟೀಗೆ ಹೋಗ್ಯಾರ, ನೌಕರಿ ಮಾಡ್ತಾರ ಸರಕಾರ ಅವ್ರಿಗೆ ದಾರಿ ತೋರ್ಸದೆ, ಅವರಿಗೆ ಎಷ್ಟು ಭೂಮಿ ಬೇಕೋ ಅಷ್ಟು ಇದ್ದೇ ಇರ್ತದೆ, ಅವ್ರು ಮೋಟಾರು ತಗೊಂಡು ಓಡ್ಯಾಡ್ತಾರ, ನಮಗೊಂದು ಚಕ್ಕಡಿನೂ ಬ್ಯಾಡ್ವಾ? ಇಷ್ಟು ವರ್ಷ ದುಡಿದು ಏನ್ ಮಾಡ್ದಿ ನೀನು? ಹೌದಪ್ಪ ನೀನು ನಿಮ್ಮಪ್ಪ, ನಿಮ್ಮ ತಾತ ನಮ್ಮನ್ಯಾಗ ಜೀತಗಾರಂಗ ಕೆಲಸ ಮಾಡಿರಿ, ತಗೋರಿ ಈ ಭೂಮಿ,ನೀವ ಮಾಡಕೊಂಡು ಉಣ್ರಿ ಅಂತ ಕೊಡಬಹುದಿತ್ತು. ಯಾಕ ಕೊಡಲಿಲ್ಲ ನಿನ್ನ ಮ್ಯಾಲಿ ಅಷ್ಟು ಪ್ರೀತಿ ಇದ್ರ."[೨] ಈ ಬೆಳ್ಳಿಯಪ್ಪನ ತೀಕ್ಷ್ಣವಾದ ಮಾತುಗಳು ತನ್ನ ಅಪ್ಪನಿಗೆ ಏನೊಂದು ಅರ್ಥವಾಗದಿಲ್ಲ.

ಹಳೆಯ ತಲೆಮಾರಿನ ಬಾಳಪ್ಪ, ಶಿಕ್ಷಣ ವಂಚಿತವಾಗಿ ತನ್ನ ಭೂ ಒಡೆಯ ಮಾಡಿದ್ದೇ ಸರಿ ಎನ್ನುವ ಇರಾದೆ ಈತನಿಗಿದೆ. ಆದರೆ ಶಿಕ್ಷಣ ಕಲಿತ ಯುವಕ ಬೆಳ್ಳಿಯಪ್ಪ ತನ್ನ ಅರಿವಿನಿಂದ ನೂರಾರು ವರ್ಷಗಳಿಂದ ಶೋಷಣೆ ಮಾಡುತ್ತಿರುವ ಭೂಮಾಲೀಕರ ವಿರುದ್ಧ ಸಿಡಿದೆದ್ದು ನಿಲ್ಲುತ್ತಾನೆ. ಆತ ಭೂ ಮಸೂದೆ ಕಾನೂನುಗಳ ಬಗ್ಗೆ ಮಾತನಾಡುತ್ತಾನೆ. ಈತನಲ್ಲಿ ಕಾನೂನು ಮೂಲಕ ಭೂಮಿಯನ್ನು ಪಡೆದು ಸಮಾಜದಲ್ಲಿ ಉನ್ನತ ಸ್ಥಾನ ಪಡೆಯಬೇಕೆಂದು ಹಂಬಲವಿದೆ. ಇಲ್ಲಿ ಭೂಮಿ ಸಮಾಜದಲ್ಲಿ ಸ್ಥಾನಮಾನ ನಿರ್ಧರಿಸುವ ಸಾಧನ, ತನ್ನ ಅಂತಸ್ತು, ಆರ್ಥಿಕತೆ ಪ್ರತಿನಿಧಿಸುವ ಅಂಶವಾಗಿದೆ ಎಂಬದು ಇಲ್ಲಿ ವ್ಯಕ್ತವಾಗುತ್ತದೆ.

ಬೆಳ್ಳಿಯಪ್ಪನನ್ನು ಊರಿನ ಭೂಮಾಲೀಕ ವ್ಯವಸ್ಥೆಯೇ ಈತನನ್ನು ವ್ಯವಸ್ಥಿತವಾಗಿ ಸಂಚುಹೂಡಿ ಆತ್ಮಹತ್ಯೆ ಮಾಡಿಕೊಳ್ಳುವಂತೆ ಮಾಡುತ್ತದೆ. ಬೆಳ್ಳಿಯಪ್ಪ ಹೋರಾಟದಿಂದ ಪಡೆದ ಭೂಮಿಯಲ್ಲಿ ಬೇಸಾಯ ಮಾಡುತ್ತಾನೆ.ತನ್ನ ತೋಟದಲ್ಲಿದ್ದ ನೀರೆತ್ತುವ ಪಂಪ್‌ಸೆಟ್‌ಯಂತ್ರ ಇದಕ್ಕಿದ್ದಂತೆ ರಾತ್ರೋರಾತ್ರಿ ಕಳುವಾಗುತ್ತದೆ. ಕಳುವಾಗುವುದರಿಂದ ಹಿಂದೆ ಆತನ ಆರ್ಥಿಕ ಸ್ಥಿತಿ ಕುಸಿಯುತ್ತದೆ. ಕ್ರಮೇಣ ಸರ್ಕಾರಿ ಅಧಿಕಾರಿಗಳು, ಪೊಲೀಸ್ ವ್ಯವಸ್ಥೆ ಜಾತಿಯ ದ್ವೇಷ ಬೆಳ್ಳಿಯಪ್ಪನನ್ನು ಸಾಲಗಾರನನ್ನಾಗಿ ಮಾಡಿ, ಕೊನೆಗೆ ಆತ್ಮಹತ್ಯೆ ಮಾಡಿಕೊಳ್ಳುವಂತೆ ಮಾಡುತ್ತದೆ. ಇಲ್ಲಿ ಬೆಳ್ಳಿಯಪ್ಪ ಭೂಮಾಲೀಕನಾಗುವುದನ್ನು ಸಹಿಸಿಕೊಳ್ಳದ ಭೂಮಾಲೀಕ ವ್ಯವಸ್ಥೆ ಆತನನ್ನು ತಣ್ಣಗೆ ಮುಗಿಸಿ ಬಿಡುತ್ತದೆ. ಕತೆಯಲ್ಲಿ ಬೆಳ್ಳಿಯಪ್ಪ ಮತ್ತು ನೀಲಪ್ಪರ ಸಾವುಗಳು ಭೂಮಸೂದೆ ಕಾನೂನಿನ ಪರಿಣಾಮವಾಗಿ ವ್ಯಕ್ತವಾಗಿವೆ. ಇಲ್ಲಿ ರೈತರ ಆತ್ಮಹತ್ಯೆಯ ಪ್ರಶ್ನೆ ವ್ಯಕ್ತವಾಗಿರುವುದು ಗುರುತಿಸಬಹುದಾಗಿದೆ. ಈ ಆತ್ಮಹತ್ಯೆ ಸರ್ಕಾರ ಮತ್ತು ಭೂಮಾಲೀಕ ವ್ಯವಸ್ಥೆ ಮುಖ್ಯಕಾರಣವಾಗಿರುವುದು ಗುರುತಿಸಬಹುದು.

ಬೆಳ್ಳಿಯಪ್ಪನ ಮಗ ಮೂರನೇ ತಲೆಮಾರಿನ ಯುವ ಉತ್ಸಾಹಿ ಯುವಕ ಬಂಗಾರಪ್ಪ ತನ್ನ ವಿದ್ಯೆ ಬುದ್ಧಿ ವ್ಯವಹಾರ ಜ್ಞಾನಗಳಿಂದ ದೂರದ ಮುಂಬೈ ನಗರದಿಂದ ಹಣ ಸಂಪಾದಿಸಿಕೊಂಡು ತನ್ನೂರಿಗೆ ಮರಳಿ ಬಂದಿದ್ದಾನೆ. ತಂದೆಯಂತೆಯೇ ಮಗನೂ ಛಲಗಾರನಾಗಿದ್ದಾನೆ. ಮೇಲ್ಜಾತಿಯ ಜನರು ತನ್ನ ತಂದೆಯನ್ನು ವ್ಯವಸ್ಥಿತ ಸಂಚು ರೂಪಿಸಿ ಆತ್ಮಹತ್ಯೆ ಮಾಡಿಕೊಳ್ಳುವಂತೆ ಮಾಡಿದ್ದು, ಈತನ ಗಮನಕ್ಕೆ ಬರುತ್ತದೆ. ಆದರೆ ಬಂಗಾರಪ್ಪ ಶಿಕ್ಷಣ ಮತ್ತು ಸಂಘಟನೆ, ಹೋರಾಟದ ಮೂಲಕ ಮೇಲ್ಜಾತಿ ಜಮೀನ್ದಾರಿ ವ್ಯವಸ್ಥೆಯನ್ನು ವ್ಯವಸ್ಥಿತವಾಗಿ ಬಗ್ಗುಬಡಿಯುವ ಶಕ್ತಿಯುಳ್ಳವನಾಗಿದ್ದಾನೆ. ಕತೆಯ ಮುಕ್ತಾಯದ ಸಂದರ್ಭದಲ್ಲಿ ಬಂಗಾರಪ್ಪನ ಬರುವಿಕೆಗೆ ಭೂಮಾಲೀಕ ವರ್ಗ ತತ್ತರಿಸುತ್ತದೆ.ಈತನ ಬರುವಿಕೆಯೆ ಜೀತ ವಿಮುಕ್ತಿಗೆ, ಶೋಷಣೆಯನ್ನು ಅಂತ್ಯ ಹಾಡಲು ಬಂದಂತೆ ಕತೆಯಲ್ಲಿ

ವ್ಯಕ್ತವಾಗುವ ಆಶಯವು ಪ್ರಗತಿಪರ ನಿಲುವನ್ನು ಹೊಂದಿದೆ.

ಮೊದಲನೇ ತಲೆಮಾರಿನ ಬಾಳಪ್ಪ ಭೂ ಪ್ರಶ್ನೆ ಇದ್ದರೂ, ಅದೇನಿದ್ದರೂ ಭೂ ಒಡೆಯರಿಗೆ ಮಾತ್ರ ಎಂದು ಒಪ್ಪಿತ ನೆಲೆಯ ಪ್ರಾಮಾಣಿಕತೆಯನ್ನು ತೋರುವುದು. ಎರಡನೇ ತಲೆಮಾರಿನ ಬೆಳ್ಳಿಯಪ್ಪ ಯುವಕ ಸ್ವಾಭಿಮಾನದ ಪ್ರಶ್ನೆಯಾಗಿ, ಭೂಮಿಯ ಮೇಲಿನ ಹಕ್ಕುಸ್ಥಾಪನೆ ಹಾಗೂ ಶೋಷಣೆ ವಿರುದ್ಧ ಹೋರಾಟ ನಡೆಸುವುದಾಗಿದೆ. ಅಲ್ಲದೆ ಆ ನೆಲೆಯಲ್ಲಿ ತನ್ನ ಆರ್ಥಿಕ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಯತ್ನ ಮಾಡುತ್ತಾನೆ. ಇದಕ್ಕಿಂತ ಮುಖ್ಯವಾಗಿ ರೈತನ ಆತ್ಮಹತ್ಯೆಯಂತಹ ಪ್ರಶ್ನೆ ಇಲ್ಲಿ ವ್ಯಕ್ತವಾಗುತ್ತದೆ. ಸರ್ಕಾರಿ ಅಧಿಕಾರಿಗಳು, ಪೋಲೀಸ್ ಅಧಿಕಾರಿಗಳು ಸೇರಿ ಈತನ ಮೇಲೆ ಸಂಚು ರೂಪಿಸಿ ಸಾವಿಗೆ ಕಾರಣವಾಗಿದ್ದರೂ ಆತ್ಮಹತ್ಯೆ ಎಂದು ಮುಚ್ಚಿ ಹಾಕುವ ಪ್ರಕರಣವನ್ನು ಕಾಣುತ್ತೇವೆ. ಆದರೆ ಇದು ಸರ್ಕಾರದ ಗಮನದವರೆಗೆ ಹೋಗುವುದಿಲ್ಲ. ಏಕೆಂದರೆ ಈ ಊರಿನ ಜನರೇ ಬೆಳ್ಳಿಯಪ್ಪ ರೈತಾಪಿಯಾಗದಂತೆ ಸಂಚು ರೂಪಿಸಿ ಆತನನ್ನು ಮುಗಿಸುತ್ತಾರೆ. ಈತನ ಸಾವು ಮುಖ್ಯವಾಹಿನಿಗೆ ಬಾರದೆ ಮತ್ತು ಸರ್ಕಾರದ ಗಮನಕ್ಕೆ ಬಾರದೇ ಹೋಗುವುದು ಒಂದು ದುರಂತವಾಗಿ ಕಂಡುಬರುತ್ತದೆ. ಮೂರನೇ ತಲೆಮಾರಿನ ಯುವಕ ಬಂಗಾರಪ್ಪ ಶಿಕ್ಷಣ, ಸಂಘಟನೆ, ಹೋರಾಟಗಳ ಮೂಲಕ ಭೂಮಾಲೀಕ ವ್ಯವಸ್ಥೆಯನ್ನು ಬಗ್ಗು ಬಡಿಯುವ ಶಕ್ತಿಯಾಗಿ ಬರುತ್ತಾನೆ.

**ಕೊನೆ ಟಿಪ್ಪಣಿ**

೧.ಮಾಲಗತ್ತಿ, ಭೂಮಸೂದೆ, ಕಥಾ ಸಂಕಲನ ಮುಗಿಯದ ಕಥೆ, ಪುಟ ೭೭, ೨೦೦೦ ಮೈಸೂರು.

೨. ಅದೇ ಪುಟ ೭೮.

### ೪.೨.೧೬ ವೈದೇಹಿ : ಹಕ್ಕಿಲ್ಲದ ಮಹಿಳಾ ಭೂ ಹಕ್ಕಿನ ಪ್ರಶ್ನೆ

ಹಕ್ಕಿಲ್ಲದವರು ಕತೆಯಲ್ಲಿ ಭೂಮಿಯನ್ನು ಅಪ್ಪಿ ಬದುಕುವ, ಭೂಮಿಯೊಂದಿಗೆ ಬೆರೆಯುವ ವಿಶೇಷತೆಯನ್ನು ಕಾಣುತ್ತೇವೆ. ಇಂಥ ವಿಶೇಷತೆಯೇ ಕತೆಯು ಓದುಗನ ಭಾವನಾ ಮುಖಿಯನ್ನಾಗಿಸುತ್ತದೆ. ಇದೊಂದು ರೀತಿಯಲ್ಲಿ ಧ್ವನ್ಯಾತ್ಮಕ, ಸೃಜನಶೀಲ ಕತೆಯಾಗಿದೆ.

ಈ ಕತೆಯಲ್ಲಿ ಕಥಾನಾಯಕಿ ಸಿರಿ ಭೂಮಿಯ ಪ್ರತೀಕವಾಗಿ ಕಂಡು ಬರುತ್ತಾಳೆ. ಕತೆ ಆರಂಭಕ್ಕೆ ಮುನ್ನವೇ ಸಿರಿಯ ಗಂಡನ ಹೋಟೆಲ್ ನಷ್ಟವಾಗಿದ್ದರಿಂದ ಈಕೆ ತನ್ನ ತಂದೆಯ ಮನೆಗೆ ಬಂದು ನೆಲೆಸುತ್ತಾಳೆ. ಆದರೆ ತೌರು ಮನೆಯಲ್ಲಿ ಸುಮ್ಮನೆ ಕೂರುವಂತಿಲ್ಲ ಸೋಮಾರಿ ಅಣ್ಣನಿಂದಾಗಿ ತನ್ನ ತಂದೆಯ ಮನೆಯ ಉಸ್ತುವಾರಿಯನ್ನೆಲ್ಲಾ ಈಕೆಯೇ ನೋಡಿಕೊಳ್ಳಬೇಕಾಗುತ್ತದೆ. ಈಕೆಯ ಕುಟುಂಬವು ಬೇಸಾಯ ದುಡಿಮೆಯ ಮೇಲೆ ಅವಲಂಬಿತವಾಗಿರುತ್ತದೆ. ಈ ಕುಟುಂಬದಲ್ಲಿ ಹುಚ್ಚಿ ತಂಗಿ, ಮದುವೆ ಬಂದ ಹೆಣ್ಣುಮಗಳು, ಈಕೆಯ ಸೋಮಾರಿ ತಮ್ಮ , ಈಕೆಯ ತಾಯಿ, ಇಬ್ಬರು ಮಕ್ಕಳು ಇವರೆಲ್ಲರನ್ನೂ ಸಾಕುವುದು ಸಿರಿಯ ಜವಾಬ್ದಾರಿಯಾಗಿದೆ.

"ಸಿರಿಯೆಂದರೆ ತೋಟಕ್ಕೇ ಲಗತ್ತಾದ ಹುಡುಗಿ. ಇವತ್ತಿಗೂ ಅವಳ ಮನಸ್ಸಿನಲ್ಲಿರುವುದು, ತೋಟ. ತಾನೇ ಸ್ವತಃ ನಿತು, ಚಕ್ಕಳ ಕಿತ್ತುಹೋಗಿದ್ದ ಅಪ್ಪನ ತೋಟಕ್ಕೆ ಇಂಬುಕೊಟ್ಟವಳು. ಇವತ್ತು ಕೂಡ ಕೆಲ ಕೆಲಸ ತುರ್ತು ಆಗುವುದಿತ್ತು. ಆದರೆ ಈ ನೆಂಟರೆಲ್ಲ ಇಷ್ಟು ಸಂಖ್ಯೆಯಲ್ಲಿ ತಾನು ಎಣಿಸದೇನೇ ಬಂದರು."

ಈಕೆ ಯಾವುದೇ ಗಂಡಿನ ಸಹಕಾರವಿಲ್ಲದೆ ಬೇಸಾಯ ಮಾಡುವ ಬದುಕುವ ಛಲವನ್ನು ಕಾಣುತ್ತೇವೆ. ಇದರ ಜೊತೆಗೆ ಬೇಸಾಯದ ಮೂಲಕ ತನ್ನ ತಂದೆಯ ಜಮೀನು ಉಳಿಸುವ ಹೊಣೆ ಈಕೆಯ ಮೇಲಿದೆ. ಈಕೆ ಜಮೀನಿನಲ್ಲಿ ಅಡಿಕೆ ತೋಟ ಮಾಡಲು ತನ್ನ ಬೆಂಡೋಲೆಯನ್ನು ಮಾರಿ ತೋಟಕ್ಕೆ ಬಂಡವಾಳ ಹೂಡುತ್ತಾಳೆ. ಸಿರಿ ಅಡಿಕೆ ಬೆಳೆಯ ಫಸಲನ್ನು ತೆಗೆಯುತ್ತಾಳೆ. ಈ ಎಲ್ಲಾ ಕಷ್ಟಗಳನ್ನು ಎದುರಿಸಿ ತನ್ನ ಜಮೀನನ್ನು ಉಳಿಸುವಬೆಳೆಸುವ ಯತ್ನವಿದೆ. ಆದರೆ ಈಕೆಗೆ ತನ್ನ ತಂದೆಯ ಆಸ್ತಿಯಲ್ಲಿ ಹಕ್ಕಿದೆಯೇ? ಎಂಬ ಪ್ರಶ್ನೆ ವ್ಯಕ್ತವಾಗುತ್ತದೆ.

" ಈಗ ಸೌದೆ ಮುಂಚಿನಷ್ಟು ಸುಲಭಲೆ ಸಿಗ್ತಿಲ್ಲೆ ವೇಣುಮಾವ. ಮರಕ್ಕೆ ಕತ್ತಿ ಮುಟ್ಟಿಸಿದರೆ ಅಪರಾಧ ಅಂತ್ರ್. ನಮ್ಮಂಥ ಪಾಪದವರು ಒಣಕು ಚಕ್ಕೆ ಚೂರು ಸವರಿಕೊಂಡು ಬರ್ತ್ತಿದ್ದೊ. ಆದಾಗ ದೊಡ್ಡ ಕಾಡು ಕಡಿತವ್ರಿಗೆ ಏನು ಸಾನೂ ಸಿಕ್ಸೆ ಇಲ್ಲೆ "

ಸಿರಿಯನ್ನು ಜಲಯಮಾಯಿ ರೇಗಿಸುವಾಗ " ಅಪ್ಪ ಇದ್ದ ಕಾಲದ ತೋಟ.ಈಗ ತಾನು ಮುಟ್ಟಿದ ಮೇಲೆ ತೋಟದ ಸ್ಥಿತಿ, ತಾನು ನೆಟ್ಟ ಹೊಸ ಗಿಡಗಳು ಇತ್ಯಾದಿಯೆಲ್ಲಾ ಇನಬಂದು ಉಸುರು ಇಲ್ಲ ಎಂಬಂತೆ ಒಂದೇ ಉಸುರಲ್ಲಿ ಹೇಳಿ. ಅಡಿಕೆ ಮರ ಕಂಡ್ರಿಯಾ ಆ ಬದಿಯೆಲ್ಲಾ ಕೃಷಿ ಮಾಡಿದು ನಾನೇ. ಈ ಸಲ ಅಡಿಕೆಗೆ ಒಳ್ಳೇ ರೇಟುಂಟಂಬ್ರು ನಾವು ಮಾರುಗೆ ಹೋಪ್ತಿಗೆ ಸಮುದ್ರ ಆರಿ ಮೊಣಕಾಲುದ್ದ ನೀರು ಅಕ್ಕು. "

"ಕಾಣಡ್ ನಿನ್ನ ಮಗ, ಹಕ್ಕುದಾರ ಎಂದಳು ಸಿರಿಯೂ ಬಿಡದೆ. ದಿನವೂ ಸುಮ್ಮನಿರುವ ಅಮ್ಮ ಇವರೆಲ್ಲ ಬಂದಂಲಾಗಲಾಯ್ತು ಬೇರೆಯೇ ಆಗಿ ಬಿಟ್ಟಿದ್ದಾಳೆ. ಅವರೆದುರು ತನ್ನನ್ನು ಹೀಗಳೆಯಬಹುದು ಎಂದುಕೊಂಡಿದ್ದಾಳೆ. ತಾನು ಯಾಕೆ ಸುಮ್ಮನಿರಬೇಕು. ಎಂದು ನಿರ್ಧರಿಸಿಕೊಂಡಂತೆ ಅವಳು ಊಹಿಸಿ ದಂತೆ ಜಲಯಮಾಯಿ ಒಳ್ಳೆ ತಾಟಕಿ ಹಂಗೆ ಮಾಡ್ತೆಯಲ್ಲ ಹೆಣ್ಣೆ ಎಂದರೆ. ಹೌದು ಮಾಯೇ, ನಾನು ತಾಟಕಿಯೇ. ಇಲ್ಲದ್ರೆ ಈ ಮನೆ ತೋಟ ಸಂಭಾಳಿಸ್ತ ಹಂಗೆ ಉಂಟುಂಬ್ರ ಅಣ್ಣ ತಾನು ಇಲ್ಲಿಗೆ ಗಂಡ ಮಕ್ಕಳು ಸಮೇತ ಬಂದು ಕುಳಿತುಕೊಳ್ಳುವವರೆಗೂ ಬಿಡಲಿಲ್ಲ. ಅಮ್ಮಂಗೆ ಒಂದು ಜತೆ ಇರಲಿ ಅಪ್ಪ ಹೋದ ಮೇಲೆ ಒಬ್ಬಳೇ ಆಗಿದ್ದಾಳೆ ಅಲ್ಲಿ. ಆ ತೋಟದ ನನಗೆ ಬೇಡ. ನನ್ನ ಸಂಪಾದನೆ ನನಗುಂಟು, ನೀನೇ ಇರು. ಗಂಡ ಹೇಗೋ ಹೊಟೇಲು ಮುಚ್ಚಿದ ಅಂದ ಮೇಲೆ ನಿಂಗೂ ಒಂದು ದಿಕ್ಕು ಬೇಕಲ್ಲ.. ಎಂದ. ನಾನು ಸತ್ಯ ನಂಬಿದೆ ಈಗ ಎಲ್ಲಾ ಭಾರ ಹೊತ್ತು ತೋಟ ಇನ್ನೇನು ರೂಢಿಗೆ ಬಂತು ಅನ್ನುವಾಗ ತೋಟ ಬೇಕಂತೆ."

ಈ ಮನೆಯ ಮಗ ಸಿರಿಯ ಅಣ್ಣನಿರುವುದರಿಂದ ನಿಜವಾದ ಹಕ್ಕುದಾರ ಈತನೇ ಆಗುತ್ತಾನೆ.ಆದರೆ ನಿಜವಾದ ದುಡಿಮೆಗಾರಳಾಗಿದ್ದ ಸಿರಿಗೆ ಭೂ ಒಡೆತನ ಸಿಗುವುದಿಲ್ಲ. ಕಾನೂನು ಆಕೆಯ ಪರವಾಗಿ ಇಲ್ಲ. ಈಕೆ

ಸ್ವಾಭಿಮಾನಿ ಧೈರ್ಯವಾಗಿ, ರೈತಾಪಿ ಕೆಲಸ ಮತ್ತು ಮನೆಯ ನಿರ್ವಹಣೆ ಮಾಡುತ್ತಿರುವುದು ಎಲ್ಲರಿಗೂ ಮೆಚ್ಚಿಗೆ ವಿಷಯವಾಗಿದೆ. ಆದರೆ ಈಕೆಯ ಆರ್ಥಿಕ ಸ್ಥಿತಿ ಇನ್ನೂ ಸುಧಾರಿಸಿಲ್ಲ. ಸಿರಿ ತನ್ನ ಬಡತನದ ಬೇಗೆ ಮತ್ತು ತನ್ನ ಮಗ,ಮಗಳು ಸವಿತಾಳನ್ನು ಪ್ರೀತಿಯಿಂದ ಸಾಕಿರುತ್ತಾಳೆ.

ಸಿರಿ ಹೇಳುವ ಮಾತು " ಗಟ್ಟಿ ಕೇಂಡ್ರೆ ಮಾಯಿ, ಅಮ್ಮನ ಕಾಣ್ತಾ ಹಕ್ಕು ಯಾರ್‌ದ್ ಹಂಗರೆ ನಂದಾ ಅವಂದಾ ಈ ಹಡಬೆ ರಾಧೆ, ನಾನು ಹಾಕಿದ ಅನ್ನನ್ನ ಕೋಪ ಬಂದ್ರೆ ನನ್ನ ಮುಖಕ್ಕೇ ಬಿಸಾಡ್ತಳಲ್ಲ ಅವಳಿಗೆ ಏನು ಹಕ್ಕುಂಟು ನನ್ನ ಮೇಲೆ ಹಂಗೆ ಮಾಡಗೆ ನಾನು ಹಾಕಿರೆ ಉಂಟು ಇಲ್ಲದ್ರೆ ಇಲ್ಲೆ ಅಂಥ ಸ್ಥಿತಿ."

ಈಕೆಯ ಸೋಮಾರಿ ಗಂಡ ಮನೆ ಬಿಟ್ಟುಹೋಗಿರುತ್ತಾನೆ. ಈ ಎಲ್ಲಾ ಜವಾಬ್ದಾರಿಗಳು ಸಿರಿಯ ಹೆಗಲ ಮೇಲೆ ಹೊತ್ತಿರುತ್ತಾಳೆ. ಇದೇ ಸಂದರ್ಭಕ್ಕೆ ಇದೇ ಕುಟುಂಬದ ಸದಸ್ಯರು ಸಂಬಂಧಿಗಳು ವಿದ್ಯಾಭ್ಯಾಸ ಮಾಡಿ ಬೇರೆ ಬೇರೆ ಊರುಗಳಲ್ಲಿ ದೊಡ್ಡ ದೊಡ್ಡ ಹುದ್ದೆಗಳಲ್ಲಿದ್ದು ಹಣಸಂಪಾದಿಸುತ್ತಿರುತ್ತಾರೆ.ಅಮೆರಿಕಾ ಹಾಕಾಂಗ್,ದೆಹಲಿ ಗಳಲ್ಲಿ ತಮ್ಮ ವೃತ್ತಿಬದುಕನ್ನು ಕಂಡುಕೊಂಡಿರುತ್ತಾರೆ. ಆದರೆ ಇವರೆಲ್ಲರೂ ಇದೇ ನೆಲೆಯಿಂದಲೇ ಹೋಗಿರುತ್ತಾರೆ. ಇವರೆಲ್ಲರೂ ಈ ನೆಲೆಯನ್ನೇ ಮರೆತು ಅಟ್ಟಹಾಸ ಮೆರೆಯುತ್ತಿರುತ್ತಾರೆ. ಮೂರು ವರ್ಷಕ್ಕೊಮ್ಮೆ ಬರುವ ಈ ಮಹಾಶಯರು ಸಿರಿಯ ಬಡತನವಾಗಿಲೀ, ಜವಾಬ್ದಾರಿಯಾಗಲೀ ಅರ್ಥಮಾಡಿಕೊಳ್ಳದೆ ಆಕೆಯ ಎದುರು ಅಸಭ್ಯವಾಗಿ ವರ್ತಿಸುತ್ತಾರೆ.

ಪದ್ದಮಾವಯ್ಯನ ಮಾತು"ಅಲ್ಲ ನಾನು ತಮಾಸೆಗೆಂದ ಈ ತೋಟಲಾದ್ರೂ ನಿಂಗೆ ಹಕ್ಕುಂಟ ಎಲ್ಲಿಯೂ ನಿಂಗೆ ಹಕ್ಕು ಎಲ್ಲುಂಟು ಮಗ ಎಲ್ಲಿ ಸಾನೊ ಇಲ್ಲೆ."

ಹೀಗೆ ವರ್ತಿಸುವವರಿಗೆ ಸಿರಿಯ ವಿರುದ್ಧ ಮಾತನಾಡುವ ಹಕ್ಕು ಇಲ್ಲದವರು ಎಂಬುದು ಧ್ವನಿಯಾಗಿ ಮೂಡಿ ಬಂದಿದೆ.ಇಂಥ ವ್ಯವಸ್ಥೆಯಿಂದಲೇ ಮೇಲೇರಿದ ಇವರುಗಳು ಹಿಂದಿನದನ್ನು ಮರೆತಿರುತ್ತಾರೆ. ಅಲ್ಲದೆ ಸಿರಿಯನ್ನು ಮತ್ತು ಈ ಕುಟುಂಬವನ್ನು ನೋಡುವ ದೃಷ್ಟಿಕೋನವು ದೋಷಪೂರ್ಣದಿಂದ ಕೂಡಿದೆ. ಸಿರಿಯ ಕುಟುಂಬದ ಬಡತನಕ್ಕೆ ಯಾವುದೇ ರೀತಿಯ ನೆರವಾಗದೇ ದೂರ ನಿಂತು ತುಚ್ಚವಾಗಿ ನೋಡುತ್ತಾರೆ. ಇವರಿಗೆ ಯಾವ ರೀತಿಯ ಹಕ್ಕಿಲ್ಲವೆಂಬುದನ್ನು ವ್ಯಂಗ್ಯದ ನೆಲೆಯನ್ನು ಇಲ್ಲಿ ಕಾಣುತ್ತೇವೆ. ಸಿರಿಗೆ ಹಿಂದೆ ಮುಂದೆ ವ್ಯಂಗ್ಯವಾಡುವ ಪದ್ದಮಾಮ ಮತ್ತು ಹೆಂಡತಿ ಜಲಜಮಾಯಿಯ ವ್ಯಂಗ್ಯಗಳಿಗೆ ಅರ್ಥವಿಲ್ಲವಾಗುತ್ತದೆ. ಆದರೆ ವೇಣುಮಾಮ ಮತ್ತು ಮಧುರಾರು ಸಿರಿಯ ಬಗ್ಗೆ ಗೌರವದಿಂದ ಮತ್ತು ಆಕೆಯ ಸ್ಥಿತಿಗತಿಯ ಅರ್ಥಮಾಡಿಕೊಂಡು ಅನುಕಂಪ ತೋರುತ್ತಾರೆ.

ಭೂಮಿ ಕುರಿತಾಗಿ ಧ್ವನಿಯನ್ನು ವ್ಯಕ್ತಗೊಳಿಸುವ ಈ ಕತೆಯಲ್ಲಿ ಇದೇ ನೆಲೆಯಿಂದಲೇ ನೌಕರಿಗಾಗಿ ವಿದೇಶಗಳಲ್ಲಿ ನೆಲೆಸಿದ ಈ ಕುಟಂಬದ ಜನರು ಭೂಮಿಯನ್ನು ನಿರ್ಲಕ್ಷ್ಯ ನೆಲೆಯಿಂದಲೇ ನೋಡುತ್ತಾರೆ. ಭೂಮಿಯಿಂದ ಲಾಭ ಬಂದರೆ ಒಪ್ಪುವುದು, ಲಾಭವಿರದಿದ್ದರೆ ಬಿಡುವುದನ್ನು ಕಾಣುತ್ತೇವೆ. ಇಲ್ಲಿ ಸಿರಿಯು ಕಷ್ಟಪಟ್ಟು ಹಸನಾದ ಬೆಳೆಯನ್ನು ತಮ್ಮ ಜಮೀನಿನಿಂದ ತೆಗೆದಿದ್ದಾಳೆ. ಆದರೆ ಸೋಮಾರಿಯಾದ ತಮ್ಮ ಕಾನೂನು ರೀತ್ಯ ಹಕ್ಕುದಾರರನಾಗುವುದು ವ್ಯವಸ್ಥೆಯ ವ್ಯಂಗ್ಯವಾದೀತು. ಒಂದು ಕಾಲಕ್ಕೆ ಈ ಭೂಮಿಯನ್ನು ನೌಕರಶಾಹಿಗಳಾದ ವೈಟ್‌ಕಾಲರ್ ಜನರು ಭೂಮಿಯನ್ನು ನಿರ್ಲಕ್ಷಕ್ಕೊಳಪಡಿಸುತ್ತಾರೆ. ಇಂಥದೇ ಆಶಯವನ್ನು ಅಮರೇಶ ನುಗಡೋಣಿಯವರ ಪಕ್ಕಕಲ್ಲದೆ ಪರಿಣಾಮಕಾಣಿಸದು ಕತೆಯಲ್ಲಿ ಕಾಣುತ್ತೇವೆ.

**ಕೊನೆ ಟಿಪ್ಪಣಿ**

೧.ವೈದೇಹಿ,ಹಕ್ಕಿಲ್ಲದವರು,ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ, ಪುಟ ೧೩೬

೨.ಅದೇ ಪುಟ ೧೩೭

೩.ಅದೇ ಪುಟ೧೪೦

೪.ಅದೇ ಪುಟ ೧೪೨

೫.ಅದೇ ಪುಟ ೧೪೩

### ೨.೨.೧೭ ಎಂ.ಎಸ್.ವೇದಾ : ಮಹಿಳಾ ಭೂ ಹಕ್ಕಿನ ನೆಲೆ

ಎಂ.ಎಸ್.ವೇದಾ ಅವರ ಪಾಲು ಕತೆಯಲ್ಲಿ ಗ್ರಾಮೀಣ ಬದುಕಿನ ವಿವರಗಳು, ರೈತಾಪಿ ಬದುಕಿನ ವಿವರಗಳು ವ್ಯಕ್ತಗೊಂಡಿವೆ.ಇಲ್ಲಿ ಭೂಹಕ್ಕನ್ನು ಕೌಟುಂಬಿಕ ನೆಲೆಯ ಅಣ್ಣತಮ್ಮಂದಿರು ಹಂಚಿಕೊಳ್ಳುವ ಚಿತ್ರಣವಿದೆ. ಈ ಕತೆಯಲ್ಲಿ ಬರುವ ತಾಯವ್ವನ ಪಾತ್ರ ಗಟ್ಟಿಯಾದ ನೆಲೆಯಲ್ಲಿ ವ್ಯಕ್ತವಾಗಿದೆ. ದೇವನೂರರ ಒಡಲಾಳದ ಸಾಕವ್ವನಂತೆ ಇಲ್ಲಿ ತಾಯವ್ವನ ಪಾತ್ರವೂ ಹಟ್ಟಿ ಬದುಕನ್ನು ಆವರಿಸಿಕೊಳ್ಳುವ ಚಿತ್ರಣವಿದೆ.

ತಾಯವ್ವನಿಗೆ ಮೂರು ಮಂದಿ ಗಂಡು ಮಕ್ಕಳು ಮತ್ತು ಒಬ್ಬಳೇ ಮಗಳು ಮಾದೇವಿ, ಈ ಮೂರು ಮಂದಿ ಮಕ್ಕಳಿಗೂ ಮದುವೆಯನ್ನು ಮಾಡಿಸಿದ್ದಾಳೆ. ಆದರೆ ಹಿರಿಯ ಮಗ ಸಿದ್ಲಿಂಗ ಮತ್ತು ಆತನ ಹೆಂಡತಿ ಚಂದಮ್ಮ ತನ್ನ ಆಸ್ತಿಯನ್ನು ಪಾಲುಮಾಡಲು ತಾಯವ್ವನ ಮೇಲೆ ಒತ್ತಾಯ ಹೇರುತ್ತಾರೆ. ತಾಯವ್ವ ತನ್ನ ಮಕ್ಕಳನ್ನು ಸಾಕಲು ಕಷ್ಟಗಳ ಎದುರಿಸಿದ ಚಿತ್ರಣವನ್ನು ಕಾಣುತ್ತೇವೆ. ತಾಯವ್ವನ ಮಗ ಸಿದ್ಲಿಂಗ ತನ್ನ ಹೆಂಡತಿಯ ಮಾತನ್ನು ಕೇಳಿ ಆಸ್ತಿಯಲ್ಲಿ ಪಾಲು ಕೇಳುತ್ತಾನೆ. "ಯಾಕವ್ವಾ ಈಗ ಮಾತುಕತೆ. ನಂಗೂ ನಿಂಗೂ ಯಾವ ಸಂಬಂಧ ಇದ್ದದ್ದು ಯಾಳು. ನಾಳೆ ದಿನ ಪಂಚಾಯ್ತಿ ಸೇರಿ ಅದೇನ್ ಪಾಲ್ ಬಂದದೋ ಆ ಪಾಲ ತಗಂಡು ಅಡ್ನಗ್ಯಾಡೆ ಹಾಕ್ಕಂಡು ನಮ್‌ಪಾಡ್ಗೆ ನಾವಿರಾ ಸುಖಕ್ಕೆ ಯಾಕಾ ನಮ್ಗೂ ನಿನ್ಗೂ ಜಗ್ಳ ಕದ್ನಾ?"[೬]

ಸಿದ್ಲಿಂಗ ಹೇಳುವ ಮಾತಿನಲ್ಲಿ ಮೊದಲಿಗೆ ತಮ್ಮ ಆಸ್ತಿ ಪಾಲಿನ ಬಗ್ಗೆ ಪ್ರಸ್ತಾಪಿಸುತ್ತಾನೆ.ತಾಯವ್ವನ ಈ ಮೂರು ಮಂದಿ ಮಕ್ಕಳು ವಿದ್ಯಾಭ್ಯಾಸ ಮಾಡಿರುತ್ತಾರೆ. ಇದರಲ್ಲಿ ಶಿವ್ಲಿಂಗ ಪಟ್ಟಣದಲ್ಲಿ ಮನೆ ಕಟ್ಟುವ ಕೆಲಸದಲ್ಲಿ ತೊಡಗಿಸಿಕೊಂಡಿದ್ದಾನೆ. ಇನ್ನೋರ್ವ ಮಗನು ಕೂಡ ಪಟ್ಟಣದಲ್ಲಿ ದುಡಿಯುತ್ತಿದ್ದಾನೆ. ತಾಯವ್ವ ತನ್ನ ಮಕ್ಕಳ ವರ್ತನೆಯಿಂದಾಗಿ ಮಕ್ಕಳ ಬಗೆಗಿನ ಪ್ರೀತಿಯನ್ನು ಕಳೆದುಕೊಂಡು ಒಬ್ಬಂಟಿಯಾಗಿದ್ದಾಳೆ. ಈ ಕುರಿತು ತಾಯವ್ವ ಊರಿನ ಯಜಮಾನ ಕುಂಡಪ್ಪನ ಎದುರು ಸಂಕಷ್ಟವನ್ನು ತೋಡಿಕೊಳ್ಳುತ್ತಾಳೆ.

ಇಲ್ಲಿ ಈರೇಗೌಡರ ನೇತೃತ್ವದಲ್ಲಿ ಪಾಲು ಮಾಡಲು ಪಂಚಾಯ್ತಿ ಸೇರುತ್ತದೆ. ಹಿರಿಯ ಮಗ ಶಿವ್ಲಿಂಗ ಮೊದಲಿಗೆ ಮಾತನಾಡುತ್ತ "ಚರಾಸ್ಥಿ, ಸ್ಥಿರಾಸ್ತಿಗೋಳ ಮೂರು ಪಾಲು ಮಾಡಬೇಕೆಂದು ತನ್ನ ಮಾತ ಆರಂಭಿಸಿದ್ದೇ ತಡ, ತಾಯವ್ವ ಉರುಬಿದ ನಿಗಿನಿಗಿ ಕೆಂಡವಾಗಿಬಿಟ್ಟವಳಾಗಿ ಅದ್ಯಾಕುಡಾ ಶಿವ್ಲಿಂಗ ನಿಮ್ ಮೂರ್ ಮಂದಿನೆಯಾ ಮಾದಪ್ಪಂಗೆ ವುಟ್ಟಿರಾದು. ಮಾದೇವಿನ್ನೂ ವುಟ್ಟಿಸೋನೇ ಕೂಸೇ ನಾನೇ ಯತ್ತೀವ್ನಿ. ಅವ್ಳುನ್ನೂ ಸೇರಿಸ್ ಕಂಡು ಪಾಲಾಗಬೇಕದೆ ಇಲ್ಲಿ."[೭] ಎಂದು ತಾಯವ್ವ ಸಿಡಿಯುತ್ತಾಳೆ.

ತಾಯವ್ವ ತನ್ನ ಮಕ್ಕಳು ಆಸ್ತಿ ಪಾಲಿಗಾಗಿ ಪಂಚಾಯ್ತಿಯಲ್ಲಿ ಊರಿನ ಮುಖ್ಯಸ್ಥ ಈರೇಗೌಡರ ಸೇರಿದ್ದರಿಂದ ಮಾದೇವಿಗೂ ಪಾಲು ಬೇಕೆಂದು ತಾಕೀತು ಮಾಡುತ್ತಾಳೆ. ತಾಯವ್ವ ತನ್ನ ಮಗಳು ಮಾದೇವಿ ಬಾಳು ಕೂಡ ತನ್ನ ಬಾಳಿನಂತಾದುದನ್ನು ಕಂಡು ಮರುಗುತ್ತಾಳೆ. ಮಾದೇವಿ ಗಂಡ ಕಾಯಿಲೆಯಿಂದ ಮೈಸೂರಿನಲ್ಲಿ ಆಸ್ಪತ್ರೆ ಸೇರಿದ್ದು, ಗಂಡನ ಮನೆಯನ್ನು ಬಿಟ್ಟು ಮಾದೇವಿ ತಾಯಿಯ ಮನೆಸೇರಿರುವ ವಿಚಾರ ತಾಯವ್ವನಿಗೆ ದುಃಖದ ವಿಚಾರವಾಗಿದೆ.

ಇಲ್ಲಿ ಮಹಿಳಾ ಭೂಹಕ್ಕಿನ ಪ್ರಶ್ನೆ ವ್ಯಕ್ತವಾಗುವುದನ್ನು ಕಾಣಬಹುದಾಗಿದೆ. ತಾಯವ್ವನ ಮಾತಿಗೆ ಪ್ರತಿಯಾಗಿ ಶಿವ್ಲಿಂಗ ಹೇಳುವ ಮಾತನ್ನು ಗಮನಿಸಬಹುದು."ಅದ್ಹೆಂಗಾದಾತು ನ್ಯಾಯ? ಮಾದೇವಿಗ್ಗ ಅದೇನ್ ಮಾಡ್ಬೇಕಿತ್ತೋ ಮದ್ವಾ, ವಸ್ಗಾ ಅದ್ನೆಲ್ಲಾ ಮಾಡೀಂವಿ ಅವುಳ್ಗೂ ಆಸ್ತೀಗೂ ಎಲ್ಲಿದ್ದದು ಸಂಬಂಧ ಮೂರ್ ಪಾಲ್ ಮಾಡಾದೇ ನ್ಯಾಯ." ಎಂದು ಪ್ರಶ್ನಿಸಿ ಪ್ರತಿಯಾಗಿ ತಾಯವ್ವ ತನ್ನ ಮಗಳ ಆಸ್ತಿ ಹಕ್ಕುಸ್ಥಾಪನೆಗಾಗಿ ಸಿಡಿಯುತ್ತಾಳೆ."ಮಾದೇವಿ ನಿನ್ನ ಆಸ್ತಿ ಮ್ಯಾಲೆ ಅಕ್‌ದಾರ್ಕೆ ಸಾಧಿಸ್ಕೆ ಬಂದೋಳೇನು? ಬಾಳುಮೆ ಮಾಡ್ಬೆ ಬಂದೋಳೊಂತ ಅನ್ನಕ್ಕೆ ನಿಂಗೇನ್ ಅಕ್ಕಿದ್ದರೂ ಅದ್ನ ಮೊದ್ಲು ಯಾಳ ಕೂಸೇ! ಆಸ್ತೀಯಾ ನಾಕು ಪಾಲ್ ಮಾಡಿರಾ.. ಇಲ್ಲಿ ಪಾಲುನ್ ಮಾತಾಡಿ. ಇಲ್ವೇರಾ ತಿಗಾ ಅವಿಕ್ಕಂಡು ಎದ್ಹೋಗಿ"[೮] ಎಂದು ಖಡಾಖಂಡಿತವಾಗಿ ಕಡ್ಡಿ ಎರಡು ತುಂಡು ಮಾಡಿದ ಹಾಗೆ ಪಂಚಾಯ್ತಿ ಕಟ್ಟೆಯಲ್ಲಿ ಕೇಳುತ್ತಾಳೆ. ಇಲ್ಲಿ ತಾಯವ್ವ ಮಹಿಳೆಯರು ಆಸ್ತಿಯ ಹಕ್ಕು ಇದೆ ಎಂಬುದನ್ನು ತನ್ನ ವಾದದ ಮೂಲಕ ಪಂಚಾಯ್ತಿಕಟ್ಟೆಯಲ್ಲಿ ಸಿಡಿದು ಕೇಳುತ್ತಾಳೆ.

ಇದಕ್ಕೆ ಊರಿನ ಈರೇಗೌಡರು ಸಹಮತ ವ್ಯಕ್ತಪಡಿಸಿ ತಾಯವ್ವನ ಮಗಳಿಗೆ ಭೂಮಿಯಲ್ಲಿ ಪಾಲು ಕೊಡುವಂತೆ ಸೂಚಿಸುತ್ತಾನೆ. ಈರೇಗೌಡರ ಮಾತಿನಂತೆ ತಾಯವ್ವನ ಮೂರು ಮಕ್ಕಳು ಒಪ್ಪಿಗೆ ಸೂಚಿಸಿ ತನ್ನ

ತಂಗಿ ಮಾದೇವಿಗೆ ಭೂಮಿಯಲ್ಲಿ ಪಾಲು ಕೊಡುವುದನ್ನು ಕಾಣುತ್ತೇವೆ. ಈ ಕತೆಯಲ್ಲಿ ಮಹಿಳೆಗೂ ಆಸ್ತಿಯಲ್ಲಿ ಪಾಲು ದಕ್ಕುವ ಚಿತ್ರಣವನ್ನು ಕಾಣುತ್ತೇವೆ.

ಪಿತ್ರಾರ್ಜಿತ ಆಸ್ತಿವಿವಾದವು ಭಾರತೀಯ ಸಂದರ್ಭದಲ್ಲಿ ಪುರುಷ ಪ್ರಧಾನ ಸಮಾಜದ ನೆಲೆಯಾಗಿದೆ. ಇಲ್ಲಿ ಆಸ್ತಿ ಹಕ್ಕು ಕೌಟುಂಬಿಕ ನೆಲೆಯಲ್ಲಿ ಅದು ಸಹಜವಾಗಿ ಪುರುಷ ಅಥವಾ ಆ ಮನೆಯ ಯಜಮಾನನಿಗೆ ವರ್ಗಾವಣೆಯಾಗುತ್ತದೆ. ಆದರೆ ಈ ಕತೆಯಲ್ಲಿ ತಾಯವ್ವ ಮಹಿಳಾ ಶಕ್ತಿಯ ದನಿಯಾಗಿ ತನ್ನ ಭೂಮಿಯಲ್ಲಿ ಹಕ್ಕನ್ನು ಕೇಳುತ್ತಾಳೆ. ಈ ಜಮೀನಿನಲ್ಲಿ ನಾಲ್ಕು ಮಂದಿ ಮಕ್ಕಳಿಗೂ ಸಮಪಾಲು ಹಂಚುವುದರ ಮೂಲಕ ಮಗಳು ಮಾದೇವಿ ಆಸ್ತಿಯ ಒಡತಿಯಾಗುತ್ತಾಳೆ. ಈ ಕತೆಯಲ್ಲಿ ಮಹಿಳೆಯು ಭೂ ಒಡೆತನ ಪಡೆಯುವ ಚಿತ್ರಣ ಕಂಡುಬರುತ್ತದೆ.

**ಪ್ರೀತಿಸಲಾಗದ, ದ್ವೇಷಿಸಲಾಗದ ಜಮೀನು**

ಜಮೀನು ಕಾದಂಬರಿಯಲ್ಲಿ ಭೂಮಿ ಕೇಂದ್ರ ಪ್ರಜ್ಞೆಯಾಗಿದೆ.ಇದರಲ್ಲಿ ಆಳು ಜಮೀನ್ದಾರನ ಸಂಘರ್ಷಗಳು ಮುಖ್ಯವಾಗಿಲ್ಲ. ಆದರೆ ಜಮೀನ್ದಾರ ಮತ್ತು ಜಮೀನ್ದಾರನ ಸಂಘರ್ಷಗಳು ಮುಖ್ಯವಾಗಿ ಕಂಡುಬರುತ್ತವೆ. ಈ ಕಾದಂಬರಿಯಲ್ಲಿ ಸಹಜವಾಗಿ ಹುಟ್ಟಿಕೊಳ್ಳುವ ದ್ವೇಷ, ಅಸೂಯೇ, ಸ್ವಾರ್ಥಪರತೆಯೇ ಇಲ್ಲಿನ ಘಟನೆಗಳಿಗೆ ಮುಖ್ಯ ಕಾರಣಗಳಾಗುತ್ತವೆ. ಇದುವರೆಗಿನ ಕಥನಗಳ ಅಧ್ಯಯನಗಳಲ್ಲಿ ಭೂಮಾಲೀಕ ಮತ್ತುಗೇಣಿದಾರ, ಭೂಮಾಲೀಕ ಮತ್ತುಭೂಹೀನರು, ಬಂಡವಾಳಶಾಹಿ ಮತ್ತು ರೈತರು ಮುಂತಾದವರು ಪರಸ್ಪರ ವಿರದ್ಧ ಸಂಘರ್ಷಕ್ಕಿಳಿಯುವುದನ್ನು ಗುರುತಿಸಲಾಗಿತ್ತು. ಆದರೆ ಈ ಕಾದಂಬರಿಯಲ್ಲಿ ಭೂಮಾಲೀಕ ಮತ್ತು ಭೂಮಾಲೀಕರ ನಡುವಿನ ಸಂಘರ್ಷವನ್ನು ಕಾಣುತ್ತೇವೆ.

"ಈ ಜಮೀನಿಗಾಗಿ ಏನೆಲ್ಲಾ ಮಾಡಿದೆ. ಎಷ್ಟೆಲ್ಲಾ ಪಾಡುಪಟ್ಟೆ, ನಾಲ್ಕು ಜನ ಬದುಕುವ ಹಾಗೆ ಬದುಕಲಿಲ್ಲ. ಸರಿಯಾಗಿ ಉಣಲಿಲ್ಲ. ಉಡಲಿಲ್ಲ. ಹೆಂಡತಿ ಮಕ್ಕಳಿಗೆ ನೆಮ್ಮದಿ ಕೊಡಲಿಲ್ಲ. ಆದರೆ ಅದನ್ನಾದರೂ ಉಳಿಸಿಕೊಂಡೆನಾ ಅದು ಇಲ್ಲ. ಹನ್ನೆರಡು ವರ್ಷಗಳ ಅವಧಿ ಏನೆಲ್ಲಾ ಕಳೆಸಿತು. ಏನೆಲ್ಲಾ ಕೂಡಿಸಿತು. ಏನೆಲ್ಲಾ ಕೊಟ್ಟಿತು. ಏನೆಲ್ಲಾ ಕಾಡಿಸಿತು. ಶಿವಪ್ಪನವರ ಮನೆ ಕೂಡಿ, ಕಳೆದು ಗುಣಿಸುತ್ತಿತ್ತು. ಇದ್ಯಾಕ್ ಹಾಗ್ ಕುಂತುಬುಟ್ರಿ, ದೇವಮ್ಮ ತಮ್ಮ ಮನದ ಆತಂಕ, ದುಃಖಗಳನ್ನು ಎಂದಿಂತೆಯೇ ಮರೆಸಿ ಕೇಳಿದ್ದರು. ಹನ್ನೆರಡು ವರ್ಷಗಳು ಹನ್ನೆರಡು ಯುಗಗಳೇ ಆಗಿಬಿಟ್ಟಿದ್ದವು. ಅದರಲ್ಲಿ ದೇವಮ್ಮ ಶಿವಪ್ಪರ ಸೋಲಿತ್ತು. ಗೆಲುವಿತ್ತು. ನೋವಿತ್ತು. ನಲಿವಿತ್ತು. ಪ್ರೀತಿಯಿತ್ತು, ದ್ವೇಷವಿತ್ತು, ಭಯವಿತ್ತು ಆತಂಕವಿತ್ತು, ಛಲವಿತ್ತು, ಒಲವಿತ್ತು,ಮಾನವ ಪಡೆಯಬಹುದಾದ ಸಮಸ್ತ ಅನುಭವ ಪ್ರಾಯಶಃ ಅದರಲ್ಲಿತ್ತು."

ಸರ್ಕಾರಿ ಅಧಿಕಾರಿ ಶಿವಪ್ಪ ಪ್ರಗತಿಪರ ರೈತನಾಗುವ ಅದಮ್ಯ ಕನಸನ್ನು ಹೊತ್ತು ಮೈಸೂರಿನ ೮ ಮೈಲಿ ದೂರದ ಸಂಗಮಳ್ಳಿಯಲ್ಲಿ ಜಮೀನು ಮಾಡುವ ಖಯಾಲಿಗೆ ಬೀಳುತ್ತಾರೆ. ಶಿವಪ್ಪ ಜಮೀನು ಮಾಡುವುದರಿಂದ ಪಕ್ಕದ ಜಮೀನ್ದಾರ ನಿವೃತ್ತ ಪೊಲೀಸ್ ಅಂದಾನಪ್ಪನ ಹಗೆತನಕ್ಕೆ ಕಾರಣವಾಗುತ್ತದೆ. ಸರ್ಕಾರಿ ಅಧಿಕಾರಿಯಾಗಿದ್ದುಕೊಂಡು ಯಾವುದೂ ಊರಿಂದ ಬಂದು ತನ್ನ ಏಕಚಕ್ರಾಧಿಪತ್ಯಕ್ಕೆ ಲಗ್ಗೆ ಇಟ್ಟಬಗ್ಗೆ ಪೊಲೀಸ್ ಅಂದಾನಪ್ಪನಿಗೆ ಅಸೂಯೆ ಹುಟ್ಟುತ್ತದೆ. ಆರಂಭದಲ್ಲಿ ಹುಸಿಹಿತೈಶಿಯಂತೆ ನಟಿಸಿದ ಅಂದಾನಪ್ಪ ಶಿವಪ್ಪನವರನ್ನು ಜಮೀನು ಮಾರುವವರಿಗೆ ಜಿಗಣೆಯಂತೆ ಕಿರುಕುಳ ನೀಡುತ್ತಲೇ ಬರುತ್ತಾನೆ.

ಶಿವಪ್ಪನ ಪಿತ್ರಾರ್ಜಿತ ಆಸ್ತಿ ೫ ಎಕರೆ ಮತ್ತು ತನ್ನ ಸಂಬಂಧಿಯಾದ ಚಂದವ್ವನಿಂದ ೩ ಎಕರೆ ಜಮೀನನ್ನು ತಮ್ಮ ಸಂಬಂಧಿಕರಿಂದ ಅದಲು ಬದಲು ಮಾಡಿಕೊಂಡು ಒಟ್ಟು ೮ ಎಕರೆ ಜಮೀನು ಒಂದೇ ಕಡೆ ಇರುವಂತೆ ನೋಡಿಕೊಳ್ಳುತ್ತಾರೆ.ಇಂಥ ಜಮೀನಿನಲ್ಲಿ ಶಿವಪ್ಪ ಮತ್ತು ಪತ್ನಿ ದೇವಮ್ಮ ಬೇಸಾಯ ಮಾಡಲು ಆರಂಭಿಸುತ್ತಾರೆ. ಶಿವಪ್ಪ ಈ ಜಮೀನು ಮಾಡುವುದು ಊರಿನ ಜನರಿಗೆ ಮತ್ತು ಅಂದಾನಪ್ಪನಿಗೆ ಸಹಿಸಲಾಗುವುದಿಲ್ಲ.ಅಂದಾನಪ್ಪ ಮತ್ತು ಊರವರ ಕುರಿಕುಳದಿಂದ ತಮ್ಮ ಜಮೀನನ್ನು ಉಳಿಸಿಕೊಳ್ಳುವುದೇ ಒಂದು ಹೋರಾಟವಾಗಿ ಕಂಡುಬರುತ್ತದೆ.

"ದೇವಮ್ಮ ಶಿವಪ್ಪ ಕಣ್ಣ ಮುಂದೆ ಆ ಎಂಟು ಎಕರೆ ಜಮೀನು ಜಗತ್ತಿನಲ್ಲಿರುವ ರಾಗ

ದ್ವೇಷಗಳಗಳೆಲ್ಲವನ್ನೂ, ಅನುಭವವನ್ನು ಅಡಗಿಸಿಕೊಂಡು ಕೂತ ಸಮುದ್ರದಂತೆ ಹರಡಿಕೊಂಡು ಕೂತಿತ್ತು. ಹೆಂಡತಿ ಮಕ್ಕಳು, ಸಂಸಾರ... ಪ್ರತಿಯೊಂದರಲ್ಲಿಯೂ ಹಾಸುಹೊಕ್ಕಾಗಿ ಬಿಟ್ಟ ಜಮೀನು ಅದು. ತಮ್ಮ ಖುಷಿಗಾಗಿ, ಖಯಾಲಿಗಾಗಿ, ಬೇಸಾಯ ಮಾಡುವ ಷೋಕಿಗಾಗಿ ಆರಂಭವಾದ ಜಮೀನು , ಮನುಷ್ಯ ಸ್ವಭಾವದ ಪ್ರೀತಿ, ಪ್ರೇಮ, ದ್ವೇಷ, ಸಂಚು, ಹಠ, ಹೋರಾಟ ಒಳಸಂಚು-ಪ್ರತಿ ಪ್ರತಿ ಪುಟಗಳನ್ನೂ ತೆರೆದು ತೆರೆದೂ ತೋರಿಸಿದ ಜಮೀನು, ನಗು-ಅಳು, ನೆಮ್ಮದಿ-ಆತಂಕ,ಧೈರ್ಯ-ಭಯ, ದಾರಿದ್ರ್ಯ ಶ್ರೀಮಂತಿಕೆ ಎಲ್ಲ ವೈರುಧ್ಯಗಳನ್ನೂ ಏಕಕಾಲದಲ್ಲಿ ದಂಡಿದಂಡಿಯಾಗಿ ಬೊಗಸೆಯೊಡ್ಡಿ ನಿಂತ ಜಮೀನು. ದ್ವೇಷಿಸಬೇಕೆಂದರೆ ದ್ವೇಷಿಸಲಾಗದ, ಪ್ರೀತಿಸಬೇಕೆಂದರೆ ಪ್ರೀತಿಸಲಾಗದ, ಉಳಿಸಿಕೊಳ್ಳಬೇಕೆಂದರೆ ಇಚ್ಛಿಸದ, ಬಿಡಬೇಕೆಂದರೆ ದುಃಖ ಗುದ್ದಿಕೊಂಡು ಬರುವ ಜಮೀನು.!"ಇಂಥ ಪ್ರಗತಿಪರತೆ ಅನನ್ಯತೆಯಿಂದಾಗಿ ರೈತನಾಗಬಯಸಿದ್ದ ಶಿವಪ್ಪನವರಿಗೆ ನಿರಾಶೆಯ ಕಾರ್ಮೋಡಗಳೇ ಎದುರಾಗುವ ಚಿತ್ರಣವಿದೆ.

ತಮ್ಮ ಜಮೀನಿಗೆ ದಳವಾಯಿ ಕೆರೆಯಿಂದ ನೀರು ಬರುವಂತೆ ಮಾಡಲು ಸರ್ಕಾರದೊಂದಿಗೆ ನಿತ್ಯವು ಹೋರಾಟ ನಡೆಸಿ ತಮ್ಮ ಜಮೀನಿಗೆ ನೀರು ತರಿಸುತ್ತಾರೆ. ಇದರೊಂದಿಗೆ ಊರಿನ ಕೆಲ ರೈತರಿಗೆ ನೀರಿನ ಅನುಕೂಲವಾಗುತ್ತದೆ. ಆದರೆ ಅಂದಾನಪ್ಪನಿಗೆ ನೀರಿನ ಸೌಲಭ್ಯ ದೊರೆಯದೇ ಇರುವುದು ಅಂದಾನಪ್ಪನ ಮತ್ತು ಊರಿನ ಜನರ ಕೆಂಗಣ್ಣಿಗೆ ಗುರಿಯಾಗಬೇಕಾಗುತ್ತದೆ. ಮೈಸೂರು ಪೇಟೆ ಶಿವಪ್ಪ ತನ್ನ ಜಮೀನಿಗೆ ಮಾತ್ರ ನೀರನ್ನು ತಂದುಕೊಂಡಿದ್ದಾನೆ. ಇದರಿಂದ ಅಂದಾನಪ್ಪ ಊರಿನ ಜನರನ್ನೇ ಎತ್ತಿ ಕಟ್ಟುತ್ತಾನೆ.

ಇದಕ್ಕೂ ಮುನ್ನ ತನ್ನ ತಮ್ಮನ ಇಬ್ಬರು ಮಕ್ಕಳನ್ನು ಈ ಜಮೀನಿನಲ್ಲಿ ಜೀತದಾಳುಗಳಾಗಿ ಇಡುತ್ತಾನೆ. ಈ ಕುತಂತ್ರದಿಂದ ಶಿವಪ್ಪನ ಜಮೀನಿನ ಎಲ್ಲಾ ಫಸಲುಗಳು ಅಂದಾನಪ್ಪನ ಮನೆಗೆ ವರ್ಗಾವಣೆಯಾಗುತ್ತವೆ. ಈ ಇಬ್ಬರು ಜೀತದಾಳುಗಳು ಸ್ವತಃ ಮೋಸದಿಂದ ಹಣಗಳಿಸುತ್ತಾರೆ. ಇಂಥ ಮೋಸವು ಶಿವಪ್ಪನವರಿಗೆ ತಿಳಿಯುವುದಿಲ್ಲ. ರೈತಾಪಿ ಹೆಣ್ಣುಮಗಳಾಗಿದ್ದ ಶಿವಪ್ಪನ ಹೆಂಡತಿ ದೇವಮ್ಮನಿಗೆ ಇದರ ಸುಳಿವು ಬೇಗನೆ ದೊರೆಯುತ್ತದೆ. ಅಷ್ಟರಲ್ಲಾಗಲೇ ಅಂದಾನಪ್ಪ ಶಿವಪ್ಪನ ಸ್ನೇಹ ಸಂಪಾದಿಸಿ ತಮ್ಮ ಜಮೀನಿಗೆ ಸ್ವಲ್ಪ ನೀರುಬರುವಂತೆ ಮಾಡಿಕೊಂಡಿರುತ್ತಾನೆ. ಅಲ್ಲದೆ ತನ್ನ ತಮ್ಮ ಮಕ್ಕಳಿಂದ ಸರ್ಕಾರಕ್ಕೆ ಡಿಕ್ಲರೇಷನ್ ಕೊಡಿಸುವ ಸಿದ್ಧತೆ ನಡೆಸಿ ಈ ಜಮೀನನ್ನು ಲಪಟಾಯಿಸುವ ಯತ್ನ ನಡೆಸುತ್ತಾನೆ. ಅಷ್ಟರಲ್ಲಾಗಲೇ ದೇವಮ್ಮ ಈ ಇಬ್ಬರು ಜೀತದಾಳುಗಳನ್ನು ಕೆಲಸದಿಂದ ತೆಗೆಸುತ್ತಾಳೆ. ಅಲ್ಲಿಗೆ ಭೂಮಿಯನ್ನು ಲಪಟಾಯಿಸುವ ಅಂದಾನಪ್ಪನ ತಂತ್ರ ವಿಫಲವಾಗುತ್ತದೆ.

ಅಂದಾನಪ್ಪ ಅನಧಿಕೃತವಾಗಿ ಕಾಲುವೆ ನೀರನ್ನು ಬಳಸುತ್ತಿದ್ದದನ್ನು ಊರಿನಲ್ಲಿ ಶಿವಪ್ಪನ ಹಿತೈಶಿ ರಾಮಣ್ಣನ ನೇತೃತ್ವದಲ್ಲಿ ಕಾಲುವೆಯನ್ನು ಮುಚ್ಚಿಸಲಾಗುತ್ತಿದೆ. ಆನಂತರದಲ್ಲಿ ಅಂದಾನಪ್ಪ ಊರಿನಲ್ಲಿ ಪಂಚಾಯ್ತಿಯನ್ನು ಕರೆಸಿ , ಶಿವಪ್ಪ ಸಮರ್ಥವಾಗಿ ಉತ್ತರ ಕೊಡುತ್ತಾರೆ. ಇದು ಅಂದಾನಪ್ಪನ ತಂಡದವರಿಗೆ ಅವಮಾನವಾಗುತ್ತದೆ.

ದೇವಮ್ಮನ ಮೇಲೆ ಒಮ್ಮೆ ಜಗಳಕ್ಕೂ ಹೋಗುತ್ತಾರೆ. ಆನಂತರದಲ್ಲಿ ಪೊಲೀಸ್ ಸ್ಟೇಷನ್ ಮೆಟ್ಟಿಲು ಹತ್ತುತ್ತಾರೆ. ಆನಂತರದಲ್ಲಿ ಪಂಚಾಯ್ತಿ ಸೇರಿಸಿ ಊರಿನಲ್ಲಿ ಕಟ್ಟು ವಿಧಿಸುತ್ತಾರೆ. ಇಷ್ಟರಲ್ಲಾಗಲೇ ಶಿವಪ್ಪನ ಜಮೀನಿನಲ್ಲಿ ನಾಲ್ಕೈದು ಮಂದಿ ಕೆಲಸದಾಳುಗಳು ಬಂದುಹೋಗುತ್ತಾರೆ. ಕೊನೆಗೆ ಶಿವಪ್ಪನ ಹೆಂಡತಿ ದೇವಮ್ಮನೇ ಖಾಯಮ್ಮಾಗಿ ಜಮೀನಿನ ಉಸ್ತುವಾರಿ ನೋಡಲು ನಿಂತುಬಿಡುತ್ತಾರೆ. ಇವರೆಲ್ಲರೂ ಅಂದಾನಪ್ಪನ ಕುತಂತ್ರದಿಂದ ಈ ಜಮೀನಿನಿಂದ ಹೊರನಡೆದವರಾಗಿದ್ದಾರೆ.ಈ ಊರಿನ ಪಂಚಾಯ್ತಿಯಲ್ಲಿ ಮಾಡದ ತಪ್ಪಿಗೆ ಶಿವಪ್ಪನವರ ಮೇಲೆ ಕಟ್ಟು ವಿಧಿಸಿದ್ದರು ಶಿವಪ್ಪ ಪಕ್ಕದ ಊರಿನಿಂದ ಕೂಲಿಜನರನ್ನು ಕರೆಸಿ ಅಡಿಕೆ ಸಸಿನಡೆಸಿದ್ದರು.

ಜಮೀನು ಮಾಡುವ ಖಯಾಲಿಗೆ ಬಿದ್ದು ದೇವಮ್ಮ ಮೈಮೇಲಿದ್ದ ಒಡವೆಗಳೆಲ್ಲಾ ಖಾಲಿಯಾಗಿರುತ್ತವೆ. ಇರುವ ಮೂರು ಮಂದಿ ಹೆಣ್ಣುಮಕ್ಕಳು, ಒಬ್ಬನೇ ಗಂಡುಮಗನನ್ನು ಹೊಂದಿದ್ದ ಈ ಕುಟುಂಬ ಜಮೀನು ಮಾಡುವ ಉತ್ಸಾಹಕ್ಕೆ ಬಿದ್ದು ಬಂಗಾರವನ್ನೆಲ್ಲಾ ಕಳೆದುಕೊಂಡು,ಸಾಲಮಾಡಿಕೊಂಡಿದೆ. ಇತ್ತ ಜಮೀನಿನ ಬಳಿ ಅಂದಾನಪ್ಪ ಹೆಜ್ಜೆ ಹೆಜ್ಜೆಗೂ ತೊಡರು ನೀಡುತ್ತಿದ್ದಾನೆ. ಕೊನೆಗೆ ಜಮೀನನ್ನು ಮಾರುಬೇಕೆಂದು ನಿರ್ಧರಿಸುತ್ತಾರೆ. ಆದರೆ ಜಮೀನನ್ನು ಮಾರುವುದಕ್ಕೂ ಅಂದಾನಪ್ಪ ಮತ್ತು ಆ ಊರಿನ ಜನರು ಅಡ್ಡಿಯಾಗುತ್ತಾರೆ.

ಇಂಥ ಅನುಭವದ ಮಡುಗಟ್ಟಿ ಕೊನೆಗೆ ಈ ದುಷ್ಟಜನರಿಂದ ಹೊರ ಬರಬೇಕೆಂದು ದೇವಮ್ಮ ಮತ್ತು ಶಿವಪ್ಪ ನಿರ್ಧರಿಸುತ್ತಾರೆ. ಈ ಮಾತುಗಳಲ್ಲಿ ನಿರಾಶೆಯು ಕೊಡ ತುಂಬಿಬಂದಿದೆ. ಭೂಮಾಲೀಕ ಮತ್ತು

ಭೂಮಾಲೀಕರ ನಡುವಿನ ದ್ವೇಷಗಳು, ಸಂಘರ್ಷಗಳು ಎಂಥ ಸ್ಥಿತಿಗೆ ತಂದುಬಿಡುತ್ತವೆ ಎಂಬುದನ್ನು ಈ ಕಾದಂಬರಿಯಲ್ಲಿ ವ್ಯಕ್ತಗೊಳ್ಳುತ್ತದೆ.

ಕೊನೆಗೂ ಊರಿನ ಜನರಿಗೆ ತಿಳಿಯದಂತೆ ಮೈಸೂರಿನ ಉದ್ಯಮಿ ಸಿದ್ಧಪ್ಪನಿಗೆ ಮಾರುವು ಸಿದ್ಧತೆ ನಡೆಸುತ್ತಾರೆ. ಈ ವಿಷಯವೂ ಹೇಗೊ ತಿಳಿದು ಊರಿನ ಶಾನುಭೋಗರು ಜಮೀನಿನ ದಾಖಲೆ ಸರಿಯಿಲ್ಲ ಎಂಬುದಾಗಿ ಹೇಳಿಕಳುಹಿಸುತ್ತಾರೆ. ಆದರೂ ಧೈರ್ಯಮಾಡಿ ಸಿದ್ದಪ್ಪನವರು ಈ ಜಮೀನನ್ನು ಕೊಳ್ಳುತ್ತಾರೆ.

ಇಲ್ಲಿ ಭೂಮಾಲೀಕ ಭೂಮಾಲೀಕರ ನಡುವಿನ ಸಂಘರ್ಷವೂ ಊರ ಸಮಸ್ಯೆಯಾಗಿ ಪರಿಣಮಿಸುತ್ತದೆ. ಈ ಸಮಸ್ಯೆ ಆನಂತರದಲ್ಲಿ ಊರ ಜನರ ಪ್ರತಿಷ್ಠೆಯ ಪ್ರಶ್ನೆಯಾಗುತ್ತದೆ. ಆದರೆ ಶಿವಪ್ಪನವರ ಪ್ರಾಮಾಣಿಕತೆಯನ್ನು ಕೇಳುವವರು ಯಾರು ಉಳಿಯುವುದಿಲ್ಲ. ಈ ಎಲ್ಲಾ ಕಿರುಕುಳಗಳನ್ನು ಎದುರಿಸಿಯೂ ಕೊನೆಯಲ್ಲಿ ತಮ್ಮ ಜಮೀನ್ನು ಮಾರಲೂ ಆಗದೇ, ಪ್ರೀತಿಸಲೂ ಆಗದೆ, ದ್ವೇಷಿಸಲೂ ಆಗದೇ ಜಮೀನನ್ನು ಬಿಡುವ ಚಿತ್ರಣವಿದೆ.

**ಕೊನೆ ಟಿಪ್ಪಣಿ**

೧. ಎಂ.ಎಸ್.ವೇದಾ,ಪಾಲು,ಪುಟ ೫.

೨. ಅದೇ ಪುಟ,೬

೩. ಅದೇ ಪುಟ ೧೫

೪.ಎಂ.ಎಸ್.ವೇದಾ, ಜಮೀನು ಪುಟ ೫,೬

೫. ಅದೇ ಪುಟ ೪

## ೪.೨.೧೮ ಮ.ನ.ಜವರಯ್ಯ : ಕುಲದ ಭೂ ಕಾನೂನು ಮತ್ತು ಸರ್ಕಾರಿ ಭೂ ಕಾನೂನಿನ ನಡುವೆ ಸಂಘರ್ಷ

ಕಾದಂಬರಿಕಾರ ಮ.ನ.ಜವರಯ್ಯ ಅವರ ಮಾಗಿ ಕಾದಂಬರಿಯು ಭೂ ಸಂಬಂಧಿ ಕುರಿತಾಗಿ ಮುಖ್ಯ ಪ್ರಶ್ನೆ ಎತ್ತುವ ಕೃತಿಯಾಗಿದೆ. ಭೂ ಸುಧಾರಣಾ ಸಂದರ್ಭದಲ್ಲಿ ಬಂದಂತಹ ಈ ಕೃತಿಯು ಸಾಂಪ್ರಾದಾಯಿಕ ಕಾನೂನು ಮತ್ತು ಪ್ರಜಾಸತ್ತಾತ್ಮಕ ಕಾನೂನಿನ ನಡುವೆ ನಡೆಯುವ ಸಂಘರ್ಷದ ಒಟ್ಟು ಸ್ವರೂಪವಾಗಿ ಇಲ್ಲಿ ಧ್ವನಿತವಾಗಿದೆ. ಇಲ್ಲಿ ರೈತಮಹಿಳಾ ಹೋರಾಟದ ನೆಲೆ ಹಾಗೂ ರೈತ ಮಹಿಳಾ ಹಕ್ಕಿನ ಪ್ರಶ್ನೆಯು ಮುಖ್ಯವಾಗಿ ಕಂಡುಬಂದಿದೆ.

"ಮಾಗಿ" ಕಾದಂಬರಿಯಲ್ಲಿ ಭೂಸುಧಾರಣಾ ಕಾನೂನು ಜಾರಿಗೊಳ್ಳುವ ವಿಚಾರ ಪ್ರಸ್ತಾಪವಾಗಿರವುದು ಕಂಡುಬರುತ್ತದೆ.ಈ ಕಾದಂಬರಿಯನ್ನು ೧೯೭೭ರಲ್ಲಿ ಬರೆದು ಮುಗಿಸಿದ್ದಾಗಿ ತಮ್ಮ ಮುನ್ನುಡಿಯಲ್ಲಿ ಲೇಖಕರು ಹೇಳಿದ್ದಾರೆ.ಈ ಕಾದಂಬರಿಯಲ್ಲಿ ದಲಿತರು ಭೂಮಿಯ ಒಡೆಯರಾಗಿರುವ ಚಿತ್ರಣವಿದೆ. ದಲಿತರೇ ಭೂಮಾಲೀಕರಾಗಿರುವುದರಿಂದ ಕೌಟುಂಬಿಕ ನೆಲೆಯಲ್ಲಿ ಭೂಮಿಗಾಗಿ ನಡೆಯುವ ಸಂಘರ್ಷವಿದೆ. ಇಲ್ಲಿ ಬರುವ ದಲಿತರು ಭೂಮಾಲೀಕರಾಗಿದ್ದು, ಕೆಲ ವಿದ್ಯಾವಂತ ಯುವಕರಿಗೆ ಭೂಮಿಯ ಆಕರ್ಷಣೆಗಿಂತ ಪಟ್ಟಣದ ನೌಕರಿ ಆಕರ್ಷಕವಾಗಿ ಕಂಡುಬಂದಿರುವುದು ಗಮನಿಸಬೇಕಾದ ಅಂಶವಾಗಿದೆ.

ಯಜಮಾನ್ ದಾಸಪ್ಪನಿಗೆ ಮಹಾರಾಜರು ಕೆರೆಯ ಮುಂದಿನ ಜಮೀನು ಗೇಣಿಗೆ ನೀಡುತ್ತಾರೆ. ಈ ಭೂಮಿಯನ್ನು ದಸರಾ ಸಂದರ್ಭದಲ್ಲಿ ಮಹಾರಾಜರು ಯಜಮಾನ್ ದಾಸಪ್ಪನಿಗೆ ಅರಮನೆಗೆ ಸಮೀಪದಲ್ಲಿದ್ದ ದೊಡ್ಡಕೆರೆಯ ಮೈದಾನದ ಎದುರಿಗಿದ್ದ ಬಯಲನ್ನು ದಾನವಾಗಿ ನೀಡುತ್ತಾರೆ.ಇಂತಹ ಭೂಮಿಯಲ್ಲಿ ದಾಸಪ್ಪನವರು ಹೊಸ ಊರು ಕಟ್ಟಲು ತಮ್ಮ ಜೊತೆಗೆ ಬಂದ ಕುಟುಂಬಗಳಿಗೆ ಭೂಮಿಯನ್ನು ಹಂಚಿದ ವಿವರ ದೊರೆಯುತ್ತದೆ. ಇದು ಸಹಜವಾಗಿ ಉಚಿತವಾಗಿ ಬಂದಂತಹ ಭೂಮಿಯ ಒಡೆತನವಾಗಿದೆ. ಇದನ್ನು ದಲಿತರು ತಮಗೆ ಬಂದಿದ್ದ ಭೂಮಿಯನ್ನು ಪಿತ್ರಾರ್ಜಿತ ಆಸ್ತಿಯನ್ನಾಗಿ ಮಾಡಿಕೊಳ್ಳುತ್ತಾರೆ. ಪಿತ್ರಾರ್ಜಿತ ಆಸ್ತಿಯನ್ನು ಪಡೆಯಲು ತಮ್ಮತಮ್ಮೊಳಗೆ ಸಹೋದರರು ಕಾದಾಡುವ ಚಿತ್ರಣ ಇಲ್ಲಿ ವ್ಯಕ್ತವಾಗಿದೆ.

ಇನಾಂ ಆಗಿ ಬಂದ ಕೆರೆ ಭೂಮಿಯನ್ನು ದಾಸಪ್ಪ ಸತ್ತನಂತರದಲ್ಲಿ ಅವರ ಕುಟುಂಬದ ಇಬ್ಬರು ಹೆಂಡತಿಯರ ಮಕ್ಕಳು ಪಾಲುಮಾಡಿಕೊಳ್ಳಲು ಈ ಸಹೋದರರು ಯತ್ನಿಸುತ್ತಾರೆ. ಅವರ ನಾಲ್ಕು ಗಂಡುಮಕ್ಕಳಲ್ಲಿ ಭೂಮಿಯ ಬಗೆಗಿನ ಪ್ರೀತಿಯಾಗಲೀ, ರೈತನಾಗುವ ಕನಸಾಗಲೀ ಕಂಡುಬರುವುದಿಲ್ಲ. ದಾಸಪ್ಪನ ಹಿರಿಯ ಮಗ ಚಾಮನಿಗೆ ಸರ್ಕಾರಿ ಕೆಲಸ ಮುಖ್ಯವೆನಿಸಿದೆ.ಆದರೆ ಇವರು ಪಿತ್ರಾರ್ಜಿತ ಆಸ್ತಿಯನ್ನು ಬಿಟ್ಟುಕೊಡುವುದಿಲ್ಲ.

"ಅಪ್ಪ ಅವ್ವ ಸತ್ತ ಮೇಲೆ ತೋಟ ಮಾಡುವುದು ಚಾಮನಿಗೆ ಸರಿಕಾಣಲಿಲ್ಲ. ಸರಕಾರಿ ಚಾಕರಿ ಇಲ್ಲದೆ ಹೋದರೆ ಮುಂದೆ ಜೀವನ ಭಾಳಾ ದುಸ್ತರವೆನ್ನುವವರೆಗೂ ಯೋಚಿಸಿದ್ದ. ತ್ವಾಟಾ ತ್ವಾಟಾ ಅಂತ ಕುಂತುಗಂಡ್ರೆ, ಮೈಯಲ್ಲಿ ಸಕ್ತೀ ಇರಾಗಂಟಾ ಗೆಯ್ತೀನಿ, ಸಂಪಾದನೇನೂ ಕೊಡ್ತದೆ. ನಾಳೇ ಜಿನಾ ಒಂದ್ ಕಾಯ್ಲಿಯೋ ಕಸಾಲಿಯೋ ಬಂದು ಮನೇಲ್ ಬಿದ್ಕಂಡ್ರೆ ಆಗ ತ್ವಾಟಾ ಮಾಡುವರು ಯಾರು ಸಂಪಾನೆ ಎಲ್ಲಿಂದ ಬಂದದು ಮುಪ್ಪಿನ್ ಕಾಲ್ಕೇ ತ್ವಾಟಾ ನಂಗೇನ್ ಪಿಂಚಣೀ ಕ್ವಟ್ಟದ ಎಂದು ಯೋಚಿಸಿದ್ದ ಚಾಮ ರೈಲ್ವೇ ವರ್ಕ್‌ಷಾಪಿನಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದ."[೧] ಈತ ಭೂಮಿಯನ್ನು ನಿರಾಕರಿಸದೆ ದುಡಿಮೆಯನ್ನುಮಾತ್ರ ನಿರಾಕರಿಸುತ್ತಾನೆ. ಇವರಿಗೆ ಭೂಮಿ ಸದ್ಯಕ್ಕೆ ಬೇಕಾಗಿಲ್ಲ. ಆದರೆ ಪಿತ್ರಾರ್ಜಿತ ಆಸ್ತಿಗಾಗಿ ಕಾದಾಡುವ ಚಿತ್ರಣ ವ್ಯಕ್ತವಾಗುತ್ತದೆ.

ದಾಸಪ್ಪನ ಎರಡನೇ ಹೆಂಡತಿಯ ಮಗ ಗಿರಿಯಪ್ಪನಿಗೂ ಭೂಮಿ ಕುರಿತಾದ ಪ್ರೀತಿಯಿಲ್ಲ. ಆದರೆ ಗಿರಿಯಪ್ಪನ ಹೆಂಡತಿ ಮಾಗಿ ಮಾತ್ರ ಭೂಮಿಯ ಬಗೆಗಿನ ಅದಮ್ಯ ಪ್ರೀತಿಯನ್ನು ಹೊಂದಿದವಳಾಗಿದ್ದಾಳೆ.ಇಲ್ಲಿ ಮಾಗಿಯು ಭೂಮಿಯನ್ನು ಪಡೆಯುವ ಮತ್ತು ಹೋರಾಟ ಮಾಡುವ ದಲಿತ ರೈತಮಹಿಳೆಯಾಗಿ ಕಂಡುಬರುತ್ತಾಳೆ. ಗಿರಿಯಪ್ಪನ ಹೆಂಡತಿಯಾಗಿರುವ ಮಾಗಿ ಅಧಿಕೃತವಾಗಿ ಮದುವೆಯಾಗದ ಕಾರಣ ಆಸ್ತಿಯ ಕಾರಣಕ್ಕಾಗಿ ಸಂಘರ್ಷ ಏರ್ಪಡುವುದನ್ನು ಕಾಣುತ್ತೇವೆ. ತನ್ನ ಗಂಡ ಗಿರಿಯಪ್ಪ ಪಾಲಿಗೆ ಬರುವ ಭೂಮಿಯನ್ನು ಕೊಡಬೇಕೆಂದು ಪಂಚಾಯ್ತಿ ಸೇರಿಸಲಾಗುತ್ತದೆ.

"ಈ ಪಂಚಾಯ್ತಿಯಲ್ಲಿ ಬೀದಿ ಪಂಚರ ನ್ಯಾಯದಲ್ಲಿ ತನಗೆ ನ್ಯಾಯ ನನಗೆ ಸಿಗದಾದರೆ ಊರೊಟ್ಟಿನ ನ್ಯಾಯವೇ ಆಗಲಿ. ಅಲ್ಲೂ ನ್ಯಾಯ ಸಿಗದಾದರೆ ನಾನು ಕೋರ್ಟಿಗೆ ಹೋಗುತ್ತೇನೆ. ಎಂದು ಮಾಗಿ ಹಿಂದಿನ

ದಿನ ಕಾಳಪ್ಪನಿಗೆ ಹೇಳಿಕೊಂಡಿದ್ದಳು. ಅವಳ ಈ ನಿರ್ಧಾರ ಕಾಳಪ್ಪನ ಮನಸ್ಸಿನಲ್ಲಿತ್ತು. ಆದ್ದರಿಂದಲೇ ಮಡಿಕಂಡು ಬಂದವಳಿಗೆ ಆಸ್ತಿಯ ಹಕ್ಕು ಇಲ್ಲವೆಂಬ ಊರ ನಡತೆಯನ್ನೇ ಬದಲಿಸುವ ನಿರಂತರ ಸೆಣಸಾಟದಲ್ಲಿ ತೊಡಗಿದ್ದು ಕಾಳಪ್ಪ."[೨] ಈ ಕಾದಂಬರಿಯಲ್ಲಿ ಮಡಿಕಂಡು ಬಂದವಳಿಗೆ ಆಸ್ತಿಹಕ್ಕು ಇಲ್ಲ ಎಂಬ ಪ್ರಶ್ನೆ ಮುಖ್ಯ ಚರ್ಚೆಯಾಗಿದೆ. ಭೂಒಡೆತನಕ್ಕೆ ಹೊಸ ಸಮಸ್ಯೆ ಸೃಷ್ಟಿಯಾಗಿರುವುದು ಕಾದಂಬರಿಕಾರನ ಜಿಜ್ಞಾಸೆಯಾಗಿದೆ.

ಈ ಊರನ್ನಾಳಿದ ದಾಸಪ್ಪನ ಮಕ್ಕಳ ಸ್ಥಿತಿಯನ್ನು ಕುರಿತು ಕಾನೂನು ತೊಡಕನ್ನು ಎದುರಿಸುತ್ತಾರೆ. "ಈಗ ಸರಕಾರದ ಕಾನೂನಿನ ಮುಂದೆ ಕುಲದ ಕಾನೂನು ನಡೆಯುವುದಿಲ್ಲವೆಂದು ಬೇರೆ ಅದೇ ಸಮಯಕ್ಕೆ ನೆನಪಾಗಿ ಬಿಟ್ಟಿತು. ಗಿರಿಯಪ್ಪನ ಮುಖದ ಮೇಲೆ ಹಲವಾರು ಚಿಂತೆಯ ಸುಳಿಗಳು ಒಮ್ಮೆಗೆ ಹುಚ್ಚು ಅಲೆಯನ್ನೆಬ್ಬಿಸಿದ್ದವು. ಇಷ್ಟೆಲ್ಲಾ ಯೋಚಿಸಿ, ಕೊನೆಗೊಮ್ಮೆ ಮಾಗಿಯ ಮುಖ ನೋಡಿದ ಕ್ಷಣದಲ್ಲಿ ಮೈಯೆಲ್ಲಾ ಹುರಿದವನಂತೆ ಹಲ್ಲು ಕಡಿಯುತ್ತಿದ್ದ. ಆದರೆ ಚಾಮ ಮಾತ್ರ ಯಾವುದನ್ನೂ ಲಕ್ಷ್ಯ ದಲ್ಲಿಟ್ಟುಕೊಂಡಿದ್ದಂತಿರಲಿಲ್ಲ. ಅದೇ ನಿರ್ಲಕ್ಷ್ಯ ಧಾಟಿಯ ಒಂದೇ ಮಾತಿನಲ್ಲಿ ತನ್ನ ಅಭಿಪ್ರಾಯವನ್ನು ಪಂಚರ ಮುಂದೆ ಹೇಳಿಬಿಟ್ಟ. ನೋಡ್ರಪ್ಪಾ ಇದೇ ನನ್ ಕ್ಡನೇ ಮಾತು. ಮಡಿಕಂಡ್ ಬಂದಿರುವಳಿಗೆ ಆಸ್ತಿ ಹಕ್ಕಿಲ್ಲ ಅನ್ನೋ ಕುಲದ ಕಾನೂನು ನಾಯೇನು ಕುಲೇಸ್ತರಿಗೆ ಯೇಳಿಕೊಡಬೇಕಾಗಿಲ್ಲ."[೩] ಎಂದು ಚಾಮ ಪ್ರತಿಕ್ರಿಯಿಸುತ್ತಾನೆ. ಇಲ್ಲಿ ಗಿರಿಯಪ್ಪನ ಆಲೋಚನೆಯಲ್ಲಿ ವಾಸ್ತವದ ಸಂಗತಿ ಕಂಡು ಬರುತ್ತದೆ. ಕಾನೂನಿನ ಮುಂದೆ ಕುಲದ ಕಾನೂನು ನಡೆಯುವುದಿಲ್ಲ ಎಂಬ ಪ್ರಶ್ನೆ ಇಲ್ಲಿ ಮುಖ್ಯವಾಗಿದೆ.

ಈ ಕಾದಂಬರಿಯಲ್ಲಿ ಬರುವ ಭೂಮಾಲೀಕ ಸುಂದ್ರಿಯ ತಾಯಿ ಇದಿಯಮ್ಮನ ಭೂಮಿಯನ್ನು ಕಬಳಿಸುವ ತಂತ್ರವಿದೆ. ಭೂಮಾಲೀಕ ಸ್ವಾಮೇಗೌಡ ಮತ್ತು ಶಾನುಭೋಗರ ಕುತಂತ್ರದಿಂದ ಇದಿಯಮ್ಮನ ಆಸ್ತಿಯನ್ನು ಕಬಳಿಸಲು ಯತ್ನಿಸುತ್ತಾರೆ. ಶಾನುಭೋಗರ ದಾಖಲೆಪತ್ರಗಳ ತಂತ್ರದಿಂದಾಗಿ ಈಕೆಯ ಭೂಮಿಯನ್ನು ಲಪಟಾಯಿಸುತ್ತಾರೆ. ಭೂಮಾಲೀಕ ವ್ಯವಸ್ಥೆಯು ಭೂಮಿಗಾಗಿ ಯಾವ ದುಷ್ಕೃತ್ಯಕ್ಕೂ ಸಿದ್ಧ ಎಂಬುದು ಇಲ್ಲಿ ವ್ಯಕ್ತವಾಗಿದೆ.

ಕುಲಕಸುಬಿನ ಜೊತೆಗೆ ಬಿಟ್ಟಿಚಾಕರಿಯನ್ನು ಮಾಡಿಕೊಂಡು ಬರುತ್ತಿರುವ ದಲಿತ ಕುಟುಂಬದಲ್ಲಿ ಮಾಗಿಯ ತಂಗಿ ಕುಣಕಿ, ಸವತಿ ಸಣ್ಣಿಯರು ಎಲೆ ಮಾರುವ ಕೆಲಸದಲ್ಲಿ ತೊಡಗಿದ್ದರು.ಇದಕ್ಕಾಗಿ ಭೂಮಾಲೀಕರಿಂದ ಎರಡು ಪಲ್ಲ ಭತ್ತ ಪಡೆಯುತ್ತಿದ್ದರು. ಮಂಗೀಜವರೀಯು ಒಣಬಾಡು,ಈಚಲಗರಿ, ಪುಳ್ಳೀಸೌದೆ, ಮಾರಿಕೊಂಡು ಜೀವನ ಸಾಗಿಸುವ ಚಿತ್ರಣವಿದೆ. ಸಿಂದಳ್ಳಿಯ ಸಿದ್ಧಿಯು ಬೆಂಕಿಪೆಟ್ಟಿಗೆ ನುಗ್ಗೇಸೊಪ್ಪು, ಅಗಸೇಸೊಪ್ಪು ಮಾರಿಕೊಂಡು ತನ್ನ ಕುಟುಂಬವನ್ನು ಸಾಕುವುದನ್ನು ಕಾಣುತ್ತೇವೆ.

ಆಸ್ತಿಪಾಲಿಗಾಗಿ ಮಾಗಿ ಲಾಯರ್ ಗುಂಡಪ್ಪನ ಬಳಿ ಹೋಗಿ ತನ್ನ ಸ್ಥಿತಿಯನ್ನು ಹೇಳಿಕೊಳ್ಳುತ್ತಾಳೆ. ಲಾಯರ್ ಕರುಣೆಯ ಮನುಷ್ಯ ಹೇಗಾದರೂ ನಿಮ್ಮ ಭೂಮಿಯನ್ನು ಕೊಡಿಸುತ್ತೇನೆ ಎಂದು ಭರವಸೆ ನೀಡಿರುತ್ತಾನೆ. ಅದರಂತೆ ಲಾಯರ್ ಗುಂಡಪ್ಪ ನೋಟೀಸು ಕಳುಹಿಸುತ್ತಾನೆ. ಈ ನೋಟೀಸು ಬಂದಿದ್ದರಿಂದ ಮಾಗಿಯ ಮೈದುನ ಚಾಮನಿಗೆ ಶಾಕ್ ಆಗುತ್ತದೆ.

ಇದಕ್ಕೆ ಪ್ರತಿಕ್ರಿಯೆಯಾಗಿ ಊರಿನ ಜನರು ಮಾಗಿ ಬದುಕಿನ ಸಂಕಷ್ಟದಿನಗಳು, ಆಕೆಯ ಬದುಕಿನ ಛಲವನ್ನು ಮೆಚ್ಚುಗೆ ವ್ಯಕ್ತಪಡಿಸುತ್ತಾರೆ.ಮಾಗಿ ಎಷ್ಟೇ ಆದರೂ ಭೂಮಿತಾಯಿಯಂತ ಗಟ್ಟಿಹೆಂಗಸು,ಅವಳ ಮುಂದೆ ಚಾಮನ ಆಟ ನಡೆಯುವುದಿಲ್ಲ ಎನ್ನುತ್ತಾರೆ. ಒಂದು ದಿನ ಆತ ಬಾಗಲೇ ಬೇಕು, ಪಾಪಿ ಸ್ವತ್ತು ಯಾರಿಗೆ ತಾನೇ ದಕ್ಕೀತು,ಸತ್ತಾಗ ಹೊತ್ಕೊಯ್ಯುವುದಿಲ್ಲ ಎನ್ನುತ್ತಾರೆ.ಮಾಗಿ ಇಲ್ಲಿ ಎಂತಹ ಕಷ್ಟ ಎದುರಾದರೂ ಭೂಮಿತಾಯಿಯಂತೆ ಸಹಿಸಿಕೊಂಡು ಬಂದವಳಾಗಿದ್ದಾಳೆ.

ಲಾಯರ್ ಗುಂಡಪ್ಪ ಕಳುಹಿಸಿದ ನೋಟೀಸ್ ಬಂದಿರುವುದುನ್ನು ಚಿಕ್ಕಯಜಮಾನ ಸಾವಕಯ್ಯನ ಮೂಲಕ ತಿಳಿಸುತ್ತಾನೆ. "ನಾಳಗವ್ವೋ, ನಾಳೇ ಬೆಳಗ್ಗೇನೇ ನಿಮ್ ಪಾಲೂ ಪಾರಿಕತ್ತೀನ್ ನ್ಯಾಯಾ ತೀರಸ್‌ಗಾಬೇಕಂತೆ ಕಣ್ರವ್ವಾ, ನಿಮ್ ಬಾವ್ನೋರೇ ಬಂದು ನ್ಯಾಯಕ್ ಪಿರ್ಯಾದ್ ಆಗವ್ರೆ ಎಂದು ತಾಕರ್ತಿ ಕೊಟ್ಟ ಮೇಲೆ ಮಾಗಿಗೆ ಆ ಸುದ್ದಿ ತಿಳಿದಿದ್ದು, ಅವಳೂ ಬೆಳಗ್ಗೆ ಎದ್ದು ತರಾತುರಿಯಲ್ಲಿ ಹಳ್ಳಿಯಿಂದ ತಂದಿದ್ದ ಭತ್ತ ರಾಗಿ ಎಲ್ಲವನ್ನೂ ಒಂದು ಕಾಸು ಅತ್ತಾ ಇತ್ತಾ ಅಡ್ಡಾದಿಡ್ಡಿಯಲ್ಲಿ ಮಾರಿ ಪಂಚಾಯ್ತಿಯವರು ಸೇರುವ ಮುಂಚೆ ಕುಲದ ಕಾಣಿಕೆಗೆ ಸ್ವಲ್ಪ ದುಡ್ಡು ಮಾಡಿಕೊಂಡಳು."[೪] ತನ್ನ ಭೂಮಿಯನ್ನು ನ್ಯಾಯವಾಗಿ ಪಡೆಯುವ ಸಲುವಾಗಿ ಮಾಗಿ ಹೊರಡುತ್ತಾಳೆ.

ಇಲ್ಲಿ ಅಣ್ಣತಮ್ಮಂದಿರ ಪಾಲಿನ ಆಸ್ತಿಯನ್ನು ಸಮವಾಗಿ ಬರೆಯುವಂತೆ ಮಾಡಲಾಗುತ್ತದೆ. "ಗಿರಿಪಯಪ್ಪನ ಹೆಂಡತಿ ಸಣ್ಣಿಯೂ ಹೆಂಡತಿಯಾಗಿ ಮಾಳಗಮ್ಮನ ಓರಗಿತ್ತಿಯಾಗಿಯೇ ಇದ್ದಾರೆ. ಆದ್ದರಿಂದ ಅಪ್ಪನ ಆಸ್ತಿಯಲ್ಲಿ ಗಿರಿಯಪ್ಪನ ಪಾಲಿಗೆ ಬಂದಿರುವ ಪಾಲಿನ ಮೇಲೆ ಅವಳಿಗೂ ಸಮಹಕ್ಕು ಇದೆಯೆಂಬುದನ್ನು ಪತ್ರದಲ್ಲಿ ಸರಿಯಾಗಿ ಕಾಣಿಸಿದ್ದರು. ಆದರೂ ಸದ್ಯದ ಸ್ಥಿತಿಯಲ್ಲಂತೂ ಇರುವಂಥ ಆಸ್ತಿಯನ್ನು, ಮನೆ ತೋಟಗಳು ಮತ್ತು ಗಂಡು ಮಕ್ಕಳನ್ನು ರೂಡಿಸಿ ಬೆಳೆಸಬಲ್ಲವಳು ಮಾಳಗಮ್ಮನೇ ಆದುದರಿಂದ ಸಂಸಾರದ ಹೊಣೆ ಮಾಳಗಮ್ಮನ ಮೇಲೆಯೇ ಇದೆ. ಅಂದ ಮಾತ್ರಕ್ಕೆ ಗಿರಿಯಪ್ಪನ ಆಸ್ತಿಯೆಲ್ಲಾ ಮಾಳಗಮ್ಮನೊಬ್ಬಳಿಗೆ ಸೇರಬೇಕೆಂಬುದು ಇದರರ್ಥವಲ್ಲ. ಸಣ್ಣಮ್ಮನಿಗೆ ಈಗ ಮಕ್ಕಳಿಲ್ಲ. ಚೊಚ್ಚಲ ಬಸರಿ. ಮುಂದೇನಾದರೂ ಗಂಡು, ಹೆಣ್ಣು ಮಕ್ಕಳು ಆದಂಥ ಕಾಲಕ್ಕೆ ಅವಳ ಮಕ್ಕಳಿಗೂ ಮಾಳಗಮ್ಮನ ಮಕ್ಕಳಷ್ಟೇ ಸಮವಾದ ಆಸ್ತಿ ಹಕ್ಕು ಇರುತ್ತದೆ. ಎಂದು ಕರಾರು ಪತ್ರದಲ್ಲಿ ಸ್ಪಷ್ಟಪಡಿಸಿದರು."[೫]

ಸರ್ಕಾರಿ ಕಾನೂನಿನ ಭಯಕ್ಕೆ ಬಾಗಿ ಕುಲದ ಕಾನೂನನ್ನು ಈ ಹಟ್ಟಿಯ ಜನರು ಪಾಸು ಮಾಡುತ್ತಾರೆ. ಒಂದು ವೇಳೆ ಸರ್ಕಾರಿ ಕಾನೂನು ರೀತ್ಯ ಹೋಗಿದ್ದರೆ ಅಧಿಕೃತ ಹೆಂಡತಿಯಾದವಳಿಗೆ ಭೂಒಡೆತನ ದಕ್ಕುತ್ತಿತ್ತು. ಆದರೆ ಕಾನೂನಿನ ಅಜ್ಞಾನದಿಂದಲೇ ಕುಲದ ಕಾನೂನಿನ ಮೂಲಕ ಇತ್ಯರ್ಥಪಡಿಸಿಕೊಂಡಿರುವುದು ಕಂಡುಬರುತ್ತದೆ. ತನ್ನ ಪಾಲಿಗೆ ಬಂದಿರುವ ಭೂಮಿಯನ್ನು ರಕ್ಷಿಸಿಕೊಂಡು ಬೆಳೆಬೆಳೆದು ಪೈರನ್ನು ತೆಗೆಯುವ ಛಲ ಮತ್ತು ಹಂಬಲ ಈಕೆಯಲ್ಲಿ ಕಾಣುತ್ತೇವೆ. ಮಲತಾಯಿಯ ತಮ್ಮನಾದ ಗಿರಿಯಪ್ಪನಿಗೆ ಮಾರಣಾಂತಿಕ ಹೊಡೆತಗಳನ್ನು ನೀಡಲು ಕಾಳ ಯತ್ನಿಸುತ್ತಾನೆ. ಆದರೂ ಮಾಗಿ ತನ್ನ ಪಾಲಿಗೆ ಬಂದ ಭೂಮಿಯನ್ನು ಇತರರು ಕಬಳಿಸದಂತೆ ಹೋರಾಟ ನಡೆಸಿ ಪಡೆಯುತ್ತಾಳೆ. ತನ್ನ ಹೊಲವನ್ನ ತಾನೇ ನಿಂತು ಬೇಸಾಯ ಮಾಡಿಸುತ್ತಾಳೆ. ತನ್ನ ಎಳೆ ವಯಸ್ಸಿನ ಮಗನೊಂದಿಗೆ ದುಡಿಮೆ ಮಾಡಿ ಅಡಿಕೆ ಹಾಗೂ ಪರಂಗಿ ಬೆಳೆಯನ್ನು ತೆಗೆಯುತ್ತಾಳೆ. ಇಲ್ಲಿ ದಲಿತರು ರೈತನಾಗುವ ಬಯಕೆ ಇಲ್ಲದೆ ಇದ್ದರೂ ತಮ್ಮ ಜಮೀನಿನ ಹಕ್ಕು ಸ್ಥಾಪನೆ ಮುಖ್ಯವೆನಿಸಿದೆ. ಈಕೆಯ ಮಗ ವಿದ್ಯಾವಂತನಾಗಿ ಸರ್ಕಾರಿ ನೌಕರಿ ಹಿಡಿಯುತ್ತಾನೆ. ಇಲ್ಲಿ ದಲಿತ ಯುವಕರು ಸರ್ಕಾರಿ ನೌಕರಿಯತ್ತ ಮುಖಮಾಡಿರುವುದು ಕಂಡುಬರುತ್ತದೆ. ಆದರೆ ಮಾಗಿ ದಲಿತ ರೈತಮಹಿಳೆಯಾಗಿ ಭೂಮಾಲೀಕತ್ವ ಹೊಂದಿ ಹಸನಾದ ಬೆಳೆಯನ್ನು ತೆಗೆಯುವ ಛಾತಿಯನ್ನು ಕಾದಂಬರಿಯು ಧ್ವನಿಸಿದೆ.

ಹೋರಾಟ ನಡೆಸಿ ಭೂಮಿಯನ್ನು ಪಡೆದಿದ್ದ ಮಾಗಿ ಅಂತಿಮವಾಗಿ ತನ್ನ ಮಗ ಕರಿಯ ಸರ್ಕಾರಿ ನೌಕರಿ ನಂತರದಲ್ಲಿ ನಂತರದಲ್ಲಿ ಆಕೆಯೂ ಪಟ್ಟಣದಲ್ಲಿ ವಾಸವಾಗಿದ್ದ ಮಗನ ಬಳಿ ಹೋಗಿ ವಾಸವಿರುತ್ತಾಳೆ. ಇಲ್ಲಿ ಭೂಮಿ ಆಕಾಲದ ತುರ್ತಾಗಿ, ಅಗತ್ಯವಾಗಿ ಕಂಡು ಬಂದಿರುವ ಆಶಯವನ್ನು ಗುರುತಿಸಬಹುದು.ಇಲ್ಲಿ ಚಾಮನಿಗೆ ಸರ್ಕಾರಿ ಹುದ್ದೆಯಿಂದ ನಿವೃತ್ತಿ ನಂತರ ಭೂಮಿ ಅಗತ್ಯವಾಗಿದೆ. ಮಾಗಿ ತನ್ನ ಮಗ ವಿದ್ಯಾವಂತನಾಗಿ ಸರ್ಕಾರಿ ನೌಕರಿ ಹಿಡಿಯುವವರೆಗೂ ಭೂಮಿ ಅಗತ್ಯವಾಗಿ ಕಂಡಿದೆ.

ಇಲ್ಲಿ ದಲಿತ ಸಮುದಾಯ ಸರ್ಕಾರಿ ನೌಕರಿಯೇ ಪರ್ಯಾಯ ಎಂಬುದಾಗಿ ಭಾವಿಸಿದೆ. ಇದರಿಂದ ಸಾಮಾಜಿಕ ಸ್ಥಾನಮಾನ ಹೆಚ್ಚುತ್ತದೆ ಎಂಬುದಾಗಿ ಭಾವಿಸಿದೆ.ಈ ಸರ್ಕಾರಿ ಉದ್ಯೋಗ ತಮ್ಮ ಬದುಕಿನ ಆರ್ಥಿಕ ಸ್ಥಿರತೆಯನ್ನು ತಂದುಕೊಡುತ್ತದೆ ಎಂಬ ವಾಸ್ತವ ಸತ್ಯ ವ್ಯಕ್ತವಾಗಿದೆ. ವ್ಯವಸಾಯ ತಮ್ಮ ಬದುಕಿನ ಅಸ್ಥಿರತೆಯ ಸಂಕೇತವಾಗಿ ಕಂಡಿದೆ. ಏಕೆಂದರೆ ಕಾಲಕಾಲಕ್ಕೆ ಮಳೆಯಿಲ್ಲದೆ ಬೆಳೆಯಿಲ್ಲದೆ ಪ್ರಾಕೃತಿಕ ವಿಕೋಪದಿಂದ ರೈತನ ಬದುಕು ಅತಂತ್ರ ಸ್ಥಿತಿಗಾಗಿ ಈ ವರ್ಗ ಇದರತ್ತ ಮುಖಮಾಡಿರುವುದನ್ನು ಗುರುತಿಸಬಹುದಾಗಿದೆ.

**ಕೊನೆ ಟಿಪ್ಪಣಿ**

೧. ಮನಜ,ಮಾಗಿ, ಪುಟ ೪೭

೨. ಅದೇ ಪುಟ ೫೩

೩. ಅದೇ ಪುಟ ೭೨

೪. ಅದೇ ಪುಟ ೧೪೧

೫. ಅದೇ ಪುಟ ೧೪೨

## ೪.೨.೧೯ ವಿಶುಕುಮಾರ್ : ಇಕ್ಕಟ್ಟುಗಳ ನಡುವೆ ಭೂ ಹಕ್ಕಿಗಾಗಿ ಹೋರಾಟ

ವಿಶುಕುಮಾರ್ ಅವರು ಉತ್ತರಕನ್ನಡ ಜಿಲ್ಲೆಯ ಭೂಸಮಸ್ಯೆಯನ್ನು ತಮ್ಮ ಕಾದಂಬರಿಯಲ್ಲಿ ವ್ಯಕ್ತಗೊಳಿಸಿದ್ದಾರೆ. ಇಲ್ಲಿನ ಬಿಕ್ಕಟ್ಟುಗಳನ್ನು ಲೇಖಕ ಕಥನವಾಗಿಸಲು ಯತ್ನಿಸಿದ್ದಾರೆ. ಒಂದು ಕಡೆ ಪ್ರಜಾಪ್ರಭುತ್ವ ವ್ಯವಸ್ಥೆಯ ಸರ್ಕಾರದ ಭಯ, ಮತ್ತೊಂದೆಡೆ ಭೂಮಾಲೀಕರ ಭಯ,ಇನ್ನೊಂದೆಡೆ ರೈತರ ಮೇಲಿನ ಪ್ರೀತಿ ಇಂತಹ ಇಕ್ಕಟ್ಟುಗಳ ನಡುವೆ ಕಾದಂಬರಿಯಲ್ಲಿ ಭೂಹಕ್ಕಿಗಾಗಿ ಹೋರಾಟ ನಡೆಸುವ ಆಶಯವಿದೆ.

ಈ ಕಾದಂಬರಿಯ ಮುನ್ನುಡಿಯಲ್ಲಿ ವಾಸ್ತವದ ಬಿಕ್ಕಟ್ಟನ್ನು ಕುರಿತು ಲೇಖಕರೇ ಹೇಳುವಂತೆ."ತುರ್ತು ಪರಿಸ್ಥಿತಿಯಲ್ಲಿ ತುರ್ತಾಗಿ ಬರೆದ ಹಾಗೆ ಅನ್ನಿಸಿದೆ. ಧಣಿ ಒಕ್ಕಲುಗಳು ತುರ್ತುಪರಿಸ್ಥಿತಿಯ ಅವಧಿಯಲ್ಲಿ ಭೂಮಸೂದೆಯ ಕಾನೂನಿನ ನೆರಳಲ್ಲಿ ಅನುಭವಿಸಿದ ಹಲವಾರು ಘಟನೆಗಳ ಮತ್ತು ವ್ಯಕ್ತಿಗಳ ಚಿತ್ರಣ ಒಂದು ಹಳ್ಳಿಯಲ್ಲಿ ಕ್ರೋಢಿಕರಿಸಿ ಕಾದಂಬರಿಯಾಗಿ ಬಂದಿದೆ. ಕಾದಂಬರಿಯನ್ನು ಕರ್ಮವೀರ ದಲ್ಲಿ ಓದಿದ ಧಣಿಗಳನೇಕರು ಇದು ಒಕ್ಕಲುಗಳ ಪರವಾಗಿ ಬರೆದಿದೆ, ಧಣಿಗಳ ಬವಣೆ ಲೇಖಕರಿಗೆ ಇದ್ದಂತಿಲ್ಲ ಎಂದಿದ್ದಾರೆ. ಆದರೆ ಮನಃ ಪೂರ್ವಕವಾಗಿ ಎರಡೂ ಬಣಗಳ ಕಷ್ಟನಷ್ಟ ಇಷ್ಟಗಳನ್ನು ನಿರೂಪಿಸಲು ಪ್ರಯತ್ನಿಸಿದ್ದೇನೆ. ಕಾದಂಬರಿ ಬಹು ದಿನಗಳವರೆಗೆ ಒಳಗೆಯೇ ಇರಲು ಕಾರಣ-ಇದನ್ನು ಪ್ರಕಟಿಸುವುದಕ್ಕೆ ಭಯವಿತ್ತು. ಭೂಮಸೂದೆಯ ಸಿಹಿ-ಕಹಿಗಳನ್ನು ಪ್ರಕಟಿಸಿದರೆ ಸರಕಾರದ ವಿರುದ್ಧವಂತೂ ಏನನ್ನೂ ಬರೆಯಲಾರ. ಆದರೆ ಪರಿಸರದ ಆಗುಹೋಗುಗಳನ್ನು ಇದ್ದಂತೆ ಬರೆಯುವುದಕ್ಕೆ ಆತ ಹೆದಲಾರ." [೧]

ದಕ್ಷಿಣ ಕನ್ನಡ ಮತ್ತು ಉತ್ತರಕನ್ನಡ ಜಿಲ್ಲೆಗಳ ಭೂ ಸಮಸ್ಯೆಗಳು ಜಟಿಲ ಹಾಗೂ ಸಂಕೀರ್ಣ ಸ್ವರೂಪವನ್ನು ಒಳಗೊಂಡಿವೆ ಎಂಬುದನ್ನು ಧ್ವನಿಸುತ್ತದೆ. ಈ ಕಾದಂಬರಿಯಲ್ಲಿ ಪ್ರಾತಿನಿಧಿಕವಾದ ಪ್ರಶ್ನೆಗಳೆಂದರೆ, ಹಕ್ಕಿನ ನೆಲೆ, ಕಾನೂನಿನ ನೆಲೆ, ದಬ್ಬಾಳಿಕೆಯ ನೆಲೆಗಳು ಮುಖ್ಯವಾಗಿ ಕಂಡುಬರುತ್ತವೆ. ಪ್ರಾದೇಶಿಕವಾಗಿ ಉತ್ತರ ಕನ್ನಡ ಜಿಲ್ಲೆಯ ಗೇಣಿದಾರರು ದಿನಕರ ದೇಸಾಯಿವರ ಮತ್ತು ಗಿರಿಪಿಕಳೆ ಮಾಸ್ತರ ನೇತೃತ್ವದಲ್ಲಿ ೧೯೫೦ರಲ್ಲಿ ನಡೆದ ಗೇಣಿರೈತ ಹೋರಾಟದ ಪ್ರಭಾವವು ಕಾದಂಬರಿಯ ಮೇಲಾಗಿರುವುದನ್ನು ಕಾಣಬಹುದು. ಭೂ ಸುಧಾರಣೆಯ ಕಾಲಕ್ಕೆ ಹಾಗೂ ಭೂ ಹಂಚಿಕೆಯ ಸಂದರ್ಭದಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿದ್ದ ಜ್ವಲಂತ ಭೂ ಸಮಸ್ಯೆಗಳ ಚಿತ್ರಣ ಇಲ್ಲಿ ವ್ಯಕ್ತವಾಗಿವೆ.

ಈ ಕಾದಂಬರಿಯ ಪ್ರಾದೇಶಿಕ ಜಗತ್ತು ಉತ್ತರ ಕನ್ನಡ ಜಿಲ್ಲೆಯ ಕರಾವಳಿ ತೀರದ ಗೇಣಿದಾರ ರೈತರ ಬದುಕನ್ನು ಅನಾವರಣಗೊಳಿಸಿದೆ. ಭೂಮಸೂದೆ ಕಾನೂನು ಜಾರಿಗೊಳಿಸಿದ ಹಿಂದುಳಿದ ವರ್ಗದ ನಾಯಕ ದೇವರಾಜಅರಸು ಅವರ ಅವಧಿಯಲ್ಲಿ "ಉಳುವವನೇ ನೆಲದೊಡೆಯ" ಎಂಬ ಆಶಯದೊಂದಿಗೆ ಭೂ ಹಂಚಿಕೆಯಾಯಿತು. ಯಾವ ಗೇಣಿದಾರ ಉಳುಮೆ ಮಾಡುತ್ತಿದ್ದ ಜಮೀನಿನ ಮೇಲೆ ಡಿಕ್ಲರೇಷನ್ ಕೊಡುತ್ತಾನೋ ಅಂತಹ ಜಮೀನಿಗೆ ಭೂಮಾಲೀಕನಾಗುವುದು ಮಸೂದೆಯ ಮುಖ್ಯಉದ್ದೇಶವಾಗಿದೆ. ಆದರೆ ವಾಸ್ತವದಲ್ಲಿ ಭೂ ನ್ಯಾಯಮಂಡಳಿಗಳ ರಾಜಕಾರಣದಿಂದ ಗೇಣಿ ರೈತರಿಗೆ ಭೂಮಿ ದಕ್ಕದೆ ಇರುವ ದುರಂತವನ್ನು ಕಾದಂಬರಿಯಲ್ಲಿ ಕಾಣಬಹುದಾಗಿದೆ. ಭೂ ನ್ಯಾಯಮಂಡಳಿಯ ಸದಸ್ಯರೇ ಭೂಮಾಲೀಕರಾಗಿದ್ದು ಗೇಣಿ ಮತ್ತು ರೈತ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವೇ ಎಂಬುದು ಪ್ರಶ್ನೆಯಾಗಿದೆ. ಹೆಚ್ಚಿನ ಭೂಮಿಯನ್ನು ಹೊಂದಬಾರದು ಎಂಬ ಭೂಮಿತಿ ಕಾಯ್ದೆ ಬಂದುದು ಭೂಮಾಲೀಕರಿಗೆ ನುಂಗಲಾರದ ತುತ್ತಾಗಿದೆ.ಇದರಿಂದಾಗಿ ಹೆಚ್ಚಿನ ಭೂಮಿಯನ್ನು ಹೊಂದಿದ್ದ ಭೂಮಾಲೀಕ ಬೇರೆ ಹೆಸರಿನಲ್ಲಿ ಭೂ ದಾಖಲೆಗಳನ್ನು ಸೃಷ್ಟಿಸಿ ನೋಂದಾಯಿಸಿಕೊಳ್ಳುವುದನ್ನು ಕಾಣುತ್ತೇವೆ. ಇದು ದಲಿತರಿಗೆ, ಗೇಣಿದಾರ ರೈತರಿಗೆ ಭೂಮಿಯನ್ನು ದಕ್ಕದ ಹಾಗೆ ಮಾಡುವ ಹುನ್ನಾರವಾಗಿ ಈ ಕಾದಂಬರಿಯಲ್ಲಿ ಕಾಣುತ್ತೇವೆ.ಭೂಸುಧಾರಣೆಯ ವಾಸ್ತವದ ಬಿಕ್ಕಟ್ಟನ್ನು ಕಾದಂಬರಿಯು ಎದುರಿಸುವ ಬಗೆಯನ್ನು ಇಲ್ಲಿ ಗಮನಿಸಬಹುದಾಗಿದೆ.

"೧೯೭೪ರ ಮಾರ್ಚ್ ತಿಂಗಳಿಂದ ಸಾಗುವಳಿ ಭೂಮಿಗಳೆಲ್ಲ ಸರಕಾರ ಸ್ವಾಧೀನ, ಯಾರೂ ಭೂಮಾಲೀಕರಿಗೆ ಗೇಣಿ ಸಲ್ಲಿಸುವ ಅಗತ್ಯವಿಲ್ಲ ಎಂಬ ಸುದ್ದಿ ನಿರಕ್ಷರಕುಕ್ಷಿಗಳಿಗೂ ಹಬ್ಬಿದ್ದರಿಂದ, ಒಡೆಯರಿಗೆ ಈ ವರ್ಷದಿಂದ ಗೇಣಿ ಸಲ್ಲಿಸಬೇಕೇ ಬೇಡವೇ ಎಂದು ಪಂಜು ಬಹುದಿನಗಳಿಂದ ತಲೆ ಕೆಡಿಸಿಕೊಂಡಿದ್ದ." [೨]

"ಭೂಮಿ" ಕಾದಂಬರಿಯು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಘಟಿಸಿದ, ಭೂಸುಧಾರಣೆ ಶಾಸನ ಜಾರಿಯಾದ ನಂತರದ ಬೆಳವಣಿಗೆ ಕುರಿತಾದ ಕಥಾನಕವಾಗಿದೆ. ಭೂಮಿಯನ್ನು ದಕ್ಕಿಸಿಕೊಳ್ಳಲು ದಲಿತರು, ಒಕ್ಕಲುಗಳು

ಸಂಘಟನಾತ್ಮಕ ನೆಲೆಯಲ್ಲಿ ಹೋರಾಟ ನಡೆದಿರುವುದನ್ನು ಕಾದಂಬರಿಯಲ್ಲಿ ಕಂಡುಬರುತ್ತದೆ.

ಕಾದಂಬರಿಯು ಭೂ ಮಸೂದೆ ಶಾಸನ ಜಾರಿಯಾಗುವುದರೊಂದಿಗೆ ಆರಂಭಗೊಳ್ಳುತ್ತದೆ. ಅವಿದ್ಯಾವಂತ ದಲಿತರಿಗೂ ಸುದ್ದಿ ಮುಟ್ಟುವುದರಿಂದ ಭೂಮಾಲೀಕನಿಗೆ ತನ್ನ ಒಡೆತನ ಕಳೆದುಕೊಳ್ಳಬೇಕಾದ ಸನ್ನಿವೇಶವಿದೆ. ತನಗೆ ಬರಬೇಕಿದ್ದ ಗೇಣಿರೂಪದ ದವಸಧಾನ್ಯ ತಪ್ಪಿಹೋಗುತ್ತೆಂಬ ಆತಂಕ ಭೂಮಾಲೀಕರಿಗೆ ಕಾಡುತ್ತದೆ. ಭೂಮಸೂದೆ ಜಾರಿಯಾದಾಗ ದಲಿತರು ಮತ್ತು ಗೇಣಿದಾರರು ಒಂದೆಡೆ ಒಗ್ಗೂಡಿ ರೈತ ಸಂಘಟಿತರಾಗುತ್ತಾರೆ. ಭೂಮಾಲೀಕ ವ್ಯವಸ್ಥೆಯ ವಿರುದ್ಧ ಪಂಜು, ರೈತರ ನಾಯಕ ವೆಂಕ್ಟ, ಮಂಜಯ್ಯ, ಮಾಸ್ತಿ, ಮೂಡೂರ, ಮೊದಲಾದವರು ಸಂಘಟಿತರಾಗಿ ಹೋರಾಟವನ್ನು ರೂಪಿಸುತ್ತಾರೆ.

ಗೇಣಿದಾರನಾದ ಪಂಜು ಒಡೆಯರ ಬಳಿ ನೇರವಾಗಿ ಹೇಳುವ ಮಾತು"ನಾನೀಗ ಗೇಣಿಹಾಕುವುದಿಲ್ಲಾಂತ ಹೇಳಿದ್ವಲ್ಲ, ಒಡೆಯ. ಕಾನೂನು ಎಲ್ಲರಿಗೂ ಒಂದೇ ಆಗಿರುವಾಗ, ಎಲ್ಲ ಒಕ್ಕಲುಗಳೂ ಗೇಣಿ ಕೊಡದೆ ಆಸ್ತಿಯೆಲ್ಲ ತಮ್ಮದೇ ಅಂತ ಸಂತೋಷದಲ್ಲಿರುವಾಗ ನಾನು ಏನು ಮಾಡಲಿ ಅಂತ ನಿಮ್ಮೊಡನೆ ಕೇಳಿದೆ. ಇದರಲ್ಲಿ ಏನಾದರೂ ತಪ್ಪಿದ್ರೆ ಕ್ಷಮಿಸಿ."[೩] ಇಲ್ಲಿ ಪಂಜು ಸಾಮಾಜಿಕ ನ್ಯಾಯ ಕೇಳುವ ಧೈರ್ಯವನ್ನು ಭೂಮಸೂದೆ ಕಾನೂನು ತಂದುಕೊಟ್ಟಿರುವುದು ವ್ಯಕ್ತವಾಗುತ್ತದೆ. ಈತ ಒಡೆಯನಿಗೆ ನೇರವಾಗಿ ನಯವಾಗಿ ಪ್ರಶ್ನೆಕೇಳುತ್ತಾನೆ. ಒಡೆಯನೆದುರು ಮಾತನಾಡುವುದೇ ಒಂದು ಅಪರಾಧವಾಗಿದ್ದ ಕಾಲದಲ್ಲಿ ಒಕ್ಕಲುಗಳು ಇಂದು ಎದುರು ಪ್ರಶ್ನೆಕೇಳುವ ಧೈರ್ಯವನ್ನು ಮಾಡಿದ್ದಾರೆ.

ಇಲ್ಲಿ ಭೂಮಾಲೀಕ "ಪಂಜು ಇದೆಲ್ಲಾ ರಾಜಕೀಯ ನಿನಗೆ ಅರ್ಥ ಆಗುವುದಿಲ್ಲ. ಕಾನೂನು ಎಂಬ ಮಾಯೆಗೆ ರಾಜಕಾರಣಿಗಳು ತಳ್ಳುತ್ತಿದ್ದಾರೆ ನಿಮ್ಮನ್ನು. ಧಣಿ-ಒಕ್ಕಲುಗಳ ನೆಂಟಸ್ಥಿಕೆಯನ್ನು ಕಡಿದುಹಾಕಿ ವೈರತ್ವ ಬೆಳೆಸುತ್ತಿದ್ದಾರೆ. ಯಾರದ್ದೋ ಭೂಮಿಯನ್ನು ಯಾರಿಗೋ ಹಂಚಿಕೊಡುವವರು, ಯಾರದ್ದೋ ಬಸ್ಸನ್ನು ಯಾರಿಗೋ ಕೊಡಬಹುದು, ಯಾರ‍್ಯಾರದ್ದೋ ಹೆಂಡ್ತೀ ಮಕ್ಕಳನ್ನು ಮತ್ಯಾರಿಗೋ ಕೊಡುವ ಕಾನೂನು ತರಬಹುದು. ಹೌದಾ , ನೀನೀಗ ನನಗೆ ಗೇಣಿ ಹಾಕಲಿಲ್ಲ ಅನ್ನು ನಾಳೇ ನನ್ನ ಭೂಮಿಗೆ ನೀನೇ ಒಡೆಯ ಆಗಿರ‍್ತಿ ಅಂತ ಭರವಸೆ ಏನಿದೆ ನಿನಗೆ? ಸರಕಾರ ನಿನಗೆ ಕೊಡುವ ಭೂಮಿಗೆ ಇಂತಿಷ್ಟು ಕ್ರಮ ಕಟ್ಟುತ್ತದೆ. ಆ ಹಣವನ್ನು ಇಂತಿಷ್ಟು ಕಂತಿನೊಳಗೆ ಸರಕಾರಕ್ಕೆ ನೀನು ತಪ್ಪದೇ ಕಟ್ಟದೇ ಇದ್ದರೆ ಸರಕಾರಕ್ಕೆ ಕೊಡಬೇಕಾದ ಗೇಣಿಯೋ ತೀರ್ವೆಯೋ ಲೇವಿಯೋ ಮಣ್ಣೋ ಮಸಣಾನೋ ಬಾಕಿ ಉಳಿದರೆ ಸಾರ್ವಜನಿಕವಾಗಿ ನಿನ್ನ ಭೂಮಿಯನ್ನು ಹರಾಜು ಮಾಡ್ತಾರೆ, ಕಣ್ಣುಮುಚ್ಚಿ ತೆರೆಯುವುದರೊಳಗೆ ಭೂಮಿಯನ್ನು ಮತ್ಯಾರೋ ರಾಜಕಾರಣಿ ಗೆದ್ದುಕೊಳ್ಳುತ್ತಾನೆ. ಆದರೆ ಈಗ, ನೀನು ಧಣಿಗೆ ಸಕಾಲದಲ್ಲಿ ಗೇಣಿ ಕೊಡದಿದ್ದರೂ ಧಣಿ ಸಹಿಸಿಕೊಳ್ಳುತ್ತಾನೆ. ನಿನಗೆ ಬೇಕುಬೇಕಾದಾಗ ಅಡ್ವಾನ್ಸೋ ಕೈಸಾಲಾನೋ ಕೊಡುತ್ತಿರುತ್ತಾನೆ. ರಾಮರಾಜ್ಯದ ಕನಸು ಕಾಣ್ತಾ ಇದ್ದೆವು. ಬ್ರಿಟಿಷ್ ರಾಜ್ಯವಾದರೂ ಪರವಾಗಿರಲಿಲ್ಲ. ಆದರೆ ಈ ಕಾಂಗ್ರೆಸ್ ರಾಜ್ಯದ ಭವಿಷ್ಯ ಇನ್ನೇನು ಆಗಲಿಕ್ಕಿದೆಯೋ....!"[೪] ದಲಿತರು ಭೂ ಒಡೆಯರಾಗುವುದನ್ನು ತಪ್ಪಿಸುವ ತಂತ್ರ ಕಂಡುಬರುತ್ತದೆ. ರಾಮರಾಜ್ಯದ ಕನಸು ಹುಸಿ ಎಂಬುದನ್ನು ಭೂಮಾಲೀಕ ಪ್ರತಿಪಾದಿಸುತ್ತಾನೆ.ಇಂತಹ ವ್ಯವಸ್ಥೆಯ ಯಥಾಸ್ಥಿತಿಯಾಗಿದ್ದು, ಜೀತ ವ್ಯವಸ್ಥೆ ಹಾಗೆಯೇ ಮುಂದುವರೆಯಬೇಕೆಂಬ ಆಶಯ ಭೂಮಾಲೀಕನಲ್ಲಿ ಕಂಡುಬರುತ್ತದೆ.

ಪಂಜು ಮತ್ತು ವೆಂಕ್ಟ ಭೂಮಿಗಾಗಿ ನಡೆಸುವ ಹೋರಾಟವು ಒಡೆಯರಿಗೆ ಗೇಣಿ ಕೊಡದಂತೆ ತಾಕೀತು ಮಾಡುತ್ತದೆ. ಒಡೆಯರ ಮಗ ಕಮಲಾಕ್ಷ ದುಷ್ಟನಂತೆ ದಲಿತರ ಮೇಲೆ ಎರಗುತ್ತಾನೆ. ತನ್ನ ಒಕ್ಕಲನ್ನು ಯಾರು ಮುಟ್ಟುತ್ತಾರೆ ಎಂದು ಮುಖಂಡನಾದ ವೆಂಕ್ಟನ ಮೇಲೆ ಹರಿಹಾಯುತ್ತಾನೆ. ಎಲ್ಲ ಗೇಣಿ ಒಕ್ಕಲುಗಳು ಡಿಕ್ಲರೇಶನ್ ಕೊಡಲು ಮುಂದಾಗುವ ಚಿತ್ರಣವಿದೆ. ಇಂತಹುದರ ವಿರುದ್ಧ ಒಡೆಯರು ತಮ್ಮ ತೋಳ್ಬಲ, ಹಣ ಬಲದ ಮೂಲಕ ಹಳ್ಳಿಗಳಲ್ಲಿ ಭೂಹೀನರನ್ನು ಹತ್ತಿಕ್ಕಲು ಯತ್ನಿಸುತ್ತಾರೆ.

"ಕಾನೂನಿನ ಮುಂದೆ ಏನೂ ನಡೆಯುವುದಿಲ್ಲ. ಒಕ್ಕಲು ಮಸೂದೆ ಬಂದಂದಿನಿಂದ ಒಡೆಯರು ಶಕ್ತಿ ಪ್ರದರ್ಶನಕ್ಕೆ ಹೊರಟಿದ್ದಾರೆ. ಗುಂಡಿ ಬೈಲಿನಲ್ಲಿ ಒಬ್ಬ ಒಕ್ಕಲಿಗೆ ಧಣಿ ಸಿಕ್ಕಾಪಟ್ಟೆ ಹೊಡೆದು ಹೊರಗೆ ಹಾಕಿದ್ದಾರೆ. ಅಮಾಸೆಕಟ್ಟೆಯಲ್ಲಿ ಧಣಿಗೂ ಒಕ್ಕಲಿಗೂ ಜಟಾಪಟಿಯಾಗಿ ಪೋಲೀಸರು ಬಂದಿದ್ದಾರೆ. ಇಂಥದ್ದು ಇನ್ನು ಆಗುತ್ತದೆ. ಈಗೆಲ್ಲಾ ಒಡೆಯರು ಒಟ್ಟಾಗಿದ್ದಾರೆ ಕೋರ್ಟಿಗೆ ಹೋಗಿ ಕಾನೂನನ್ನೇ ಮುರಿಯಬೇಕೆಂದು ಲಕ್ಷ

ಲಕ್ಷ ಹಣ ಸಂಗ್ರಹಿಸಿದ್ದಾರೆ."[೫] ಭೂ ಮಸೂದೆ ಸಂದರ್ಭಕ್ಕೆ ನಾಡಿನಾದ್ಯಂತ ಭೂಮಾಲೀಕರು ತನ್ನ ತೋಳ್ಬಲದ ಮೂಲಕ ಭೂಹೀನರ ಭೂಮಿಗೆ ಕೈಹಾಕುತ್ತಿದ್ದುದು ಸಹಜವಾಗಿ ಕಂಡುಬರುತ್ತದೆ. ಭೂಮಾಲೀಕರೇ ಸ್ವತಃ ಬೇಸಾಯ ಮಾಡುವ ಪರಿಸ್ಥಿತಿ ತಮ್ಮದೇ ಭೂಮಿಯನ್ನು ಗೇಣಿದಾರರಿಗೆ, ತಮ್ಮ ಒಕ್ಕಲುಗಳಿಗೆ ಬಿಟ್ಟುಕೊಡುವುದು ಈ ವರ್ಗಕ್ಕೆ ಸಹಿಸದ ಸಂಗತಿಯಾಗಿತ್ತು.

ಪಂಜುವಿನ ಮುಂದಾಳ್ತನದಲ್ಲಿ ಆಸುಪಾಸಿನ ರೈತರೆಲ್ಲ ಸೇರಿ ರೈತ ಸಂಘವನ್ನು ಸಂಘಟಿಸಿದ್ದಕ್ಕಾಗಿ, ರೈತರ ಪ್ರಾಣ ಹೋದರೂ ಸರಿ. ನಾವು ಹೂಡಿದ ಗದ್ದೆ ನಮ್ಮದಾಗಬೇಕೆಂಬ ಛಲ ಈ ಒಕ್ಕಲುಗಳಲ್ಲಿದೆ. ಇದೇ ಗ್ರಾಮದಲ್ಲಿ ದೇವಸ್ಥಾನದ ಪೂಜೆ ಮಾಡುತ್ತಿದ್ದ ಪೂಜಾರಿಯ ಹೆಂಡತಿ ವೆಂಕಮ್ಮ ತನ್ನ ಗೇಣಿದಾರನಾದ ಪಂಜುವಿನ ಮನೆಗೆ ಹೋಗುತ್ತಾಳೆ. ಈ ಸಂದರ್ಭದಲ್ಲಿ ಭೂಮಾಲೀಕರ ಪರವಾಗಿ ಈ ಕುರಿತು ಈಕೆ ಪ್ಲೇಗ್ ಹಬ್ಬಿದ ಹಾಗೆ ಬಂತಪ್ಪ ಭೂ ಮಸೂದೆ ಕಾನೂನು ಎಂದು ವ್ಯಕ್ತಪಡಿಸುತ್ತಾಳೆ. ಇಲ್ಲಿ ಭೂಮಾಲೀಕನ ಪರವಾಗಿ ಪುರೋಹಿತಶಾಹಿ ವೆಂಕಮ್ಮ ಕಾನೂನು ಕುರಿತೆ ಬರಗಾಲ ಮತ್ತು ಕಲಿಗಾಲ ಬಂತು ಎಂದು ಹೇಳುತ್ತಾಳೆ. ಆಕೆಯ ಕಣ್ಣಿಗೆ ಭೂಮಸೂದೆಯನ್ನು ಎಂಬುದು ಪ್ಲೇಗ್ ರೋಗದಂತೆ ಕಾಣುತ್ತಿದೆ.

ಒಡೆಯರ ಮನೆಗೆ ವಾರಕ್ಕೊಮ್ಮೆ ಭೇಟಿಯಾಗಿ ವರ್ಗ ಊಳಿಗ ಬರೆದು ಕೊಡುವ ಶ್ಯಾನುಭೋಗರು ಈ ಊರಿಗೆ ಬರುತ್ತಾರೆ. ಇಲ್ಲಿನ ಒಕ್ಕಲುಗಳೆಲ್ಲ ಡಿಕ್ಲರೇಶನ್ ಕೊಡಲು ಮುಂದೆ ಬಂದಿದ್ದು, ಎಲ್ಲಾ ಒಕ್ಕಲುಗಳೂ ಡಿಕ್ಲೆರೇಶನ್ ಕೊಟ್ಟರೆ ಭೂಮಾಲೀಕರ ಗತಿ ಏನು ಎಂಬುದಾಗಿ ಈ ಶ್ಯಾನುಭೋಗ ಚಿಂತಿಸುತ್ತಾನೆ. ಒಡೆಯರಿಂದ ಸ್ವಲ್ಪ ಹಣ ಪಡೆದು ಅವರಿಂದ ಬೀಳ್ಕೊಟ್ಟ ಶ್ಯಾನುಭೋಗರು ಹೋಗುವಾಗ ದಾರಿಯಲ್ಲಿ ಗೊಣಗಿಕೊಂಡು ಹೋಗುತ್ತಿದ್ದಾನೆ. "ಇವರ ಆಸ್ತಿ, ಇವರ ಹೆಂಡತಿಯ ಆಸ್ತಿ, ಎಲ್ಲೆಲ್ಲೋ ಇದೆ. ಹೀಗೆ ಕಂಜೂಸು ಮಾಡಿದ್ದಕ್ಕೇ ಬಂದಿದ್ದು ಒಕ್ಕಲು ಮಸೂದೆ. ಇಷ್ಟರವರೆಗೆ ಅರಾಮ ಕೂತು ಅನುಭವಿಸಿದ್ದು ಬಂತು. ಇನ್ನು ಅಕ್ಕಿ ಬೇಕಿದ್ರೆ ಸ್ವಂತ ಗದ್ದೆಗೆ ಇಳಿದು ಉಳಬೇಕು."[೬]

ಈ ಭೂಮಸೂದೆಯಿಂದ ಜೀತಗಾರಿಕೆ, ಗೇಣಿದಾರಿಕೆ ಹೋಗುವುದರಿಂದ ಒಡೆಯರೇ ತಾವೇ ಸ್ವತಃ ಉಳುಮೆ ಮಾಡಿ ತಿನ್ನಬೇಕಾದ ಪರಿಸ್ಥಿತಿ ಬಂದಿದೆ.ಭೂ ಮಸೂದೆಯಿಂದಾಗಿ ಒಡೆಯರು ಊರಲ್ಲಿಪಂಚಾಯಿತಿ ಇಟ್ಟುಕೊಂಡಿದ್ದಾರೆ. ಆದರೆ ಶ್ಯಾನುಭೋಗರು ಗೇಣಿರೈತರನ್ನು ಹಾಜರಾಗದಂತೆ ನೋಡಿಕೊಳ್ಳುತ್ತಾರೆ. ಒಡೆಯರ ಮಗ ಕಮಲಾಕ್ಷ ತನ್ನ ತೋಳ್ಬಲದಿಂದ ರೈತ ಒಕ್ಕಲುಗಳನ್ನು ಬೆದರಿಸುತ್ತಾನೆ.

"ಯಾವ ಧೈರ್ಯದ ಮೇಲೆ ಡಿಕ್ಲರೇಶನ್ ಕೊಟ್ಟದ್ದೋ?ಸರಕಾರಿ ಆಫೀಸಿನಲ್ಲಿ ನೀನು ಒಕ್ಕಲು ಅಂತ ದಾಖಲೆ ಇದೆಯಾ?ಉಂಡ ಮನೆಗೆ ದ್ರೋಹ ಬಗೆಯುವವರು ನೀವು! ಪಂಚಾತಿಕೆಗೆ ಕರೆದರೆ ಭೂಮಿ ಬೇಕಾದ್ದು ಒಡೆಯನಿಗೆ ನನಗಲ್ಲ, ಬೇಕಿದ್ರೆ ಬರ್ತಾರೆ ಅಂತ ಗಡಂಗಿನಲ್ಲಿ ಕೂತು ಹೇಳುತ್ತೀಯಾ, ನೋಡು ಬಂದಿದ್ದೇವೆ, ನಮ್ಮ ಭೂಮಿ ಕೇಳುವುದಕ್ಕೆ. ಸರಿಯಾಗಿ ಕೇಳು, ನಿನ್ನನ್ನು ನಾವು ಒಕ್ಕಲಾಗಿ ಇಲ್ಲಿ ಇಟ್ಟುಕೊಂಡಿಲ್ಲ. ಈ ಭೂಮಿ ನಮ್ಮದು. ನವು ಸ್ವಂತ ಸಾಗುವಳಿ ಮಾಡುತ್ತಾ ಇದ್ದೇವೆ ನಿನ್ನನ್ನು ಕೂಲಿಕೆಲಸಕ್ಕೆ ಇಷ್ಟು ದಿವಸ ಇಟ್ಟುಕೊಂಡಿದ್ದೆವು. ಈವತ್ತಿನಿಂದ ನೀನು ನಮ್ಮ ಕೂಲಿಯಾಳು ಅಲ್ಲ, ಮನೆ ಖಾಲಿ ಮಾಡು , ನಿನ್ನ ಸಾಮಾನು ಹೊರಗಿಡಿಸು..."[೭]

ಹೀಗೆ ದಬ್ಬಾಳಿಕೆಯ ಮೂಲಕ ಧಣಿಯ ಮಗ ಕಮಲಾಕ್ಷ ಹದ್ದಿನಂತೆ ಬಡ ಒಕ್ಕಲುಗಳ ಮೇಲೆ ಎರಗುತ್ತಾನೆ. ಕಮಲಾಕ್ಷನ ತೋಳ್ಬಲದ ಪಿತೂರಿಯಿಂದ ಒಕ್ಕಲುಗಳಿಗೆ, ದಲಿತರಿಗೆ ಭೂಮಿ ದಕ್ಕದ ಹಾಗೆ ನೋಡಿಕೊಳ್ಳುತ್ತಾನೆ. ಕಮಲಾಕ್ಷ ಇದ್ದಕ್ಕಿದ್ದಂತೆಯ ದಣಿಯ ಒಕ್ಕಲಾಗಿದ್ದ ರೈತನಾಯಕ ಪಂಜುವಿನ ಮನೆಯ ಸಾಮಾನುಗಳನ್ನು ಹೊರಕ್ಕೆ ಕಿತ್ತೆಸೆಯುತ್ತಾನೆ. ಈ ಸುದ್ದಿ ತಿಳಿದ ವೆಂಕ್ಪ ಮತ್ತು ಆತನ ಸ್ನೇಹಿತರು ಗುಂಪು ದಂಡೆತ್ತಿ ಬಂದು ಕಮಲಾಕ್ಷನ ಗುಂಪನ್ನು ಚದುರಿಸುತ್ತಾರೆ. ವೆಂಕ್ಪ ಮತ್ತವರ ಸ್ನೇಹಿತರು ಮುಂದಿನ ಹೋರಾಟವನ್ನು ಒಗ್ಗೂಡಿ ಮಾಡುವುದಾಗಿ ಆಲೋಚಿಸುತ್ತಾರೆ. ಪೋಲೀಸು ಕಂಪ್ಲೆಂಟ್ ಕೊಡಬೇಕಾದಲ್ಲಿ ದೂರದ ಊರಿಗೆ ಹೋಗಬೇಕಾಗುತ್ತಿತ್ತು. ಅದರಂತೆಯೇ ಡಿಕ್ಲರೇಶನ್ ಕೊಡಲು ತಹಶೀಲ್ದಾರ ಕಚೇರಿಗೆ ನಡೆದು ಹೋಗಬೇಕಾಗಿತ್ತು.

ಇತ್ತ ಗ್ರಾಮಪಂಚಾಯಿತಿಯ ಸೆಕ್ರೆಟರಿ ಧಣಿಯರ ಊರ ಮುಂದಿನ ಜಮೀನು ನಿನಗೆ ಕೊಡಿಸುತ್ತೇನೆಂದು ಪಂಜುವಿನಿಂದ ೨೦ ರೂಪಾಯಿ ಲಂಚಪಡೆಯುತ್ತಾನೆ. ಈ ಸೆಕ್ರೆಟರಿ ಒಡೆಯರೊಂದಿಗೆ ಶಾಮೀಲಾಗಿರುವುದು ಪಂಜುವಿಗೆ ಆನಂತರ ತಿಳಿಯುತ್ತದೆ. ಆತ ಕೊಟ್ಟ ೨೦ ರೂಪಾಯಿ ಖೋತಾ ಆಗುತ್ತದೆ. ಇತ್ತ ಈ ಊರಿನ ದೇವಸ್ಥಾನದ ಪೂಜೆ ಮಾಡುವವರಿಲ್ಲದೆ ಗರ್ಭಗುಡಿಗೆ ಬೀಗ ಜಡಿಯಲಾಗುತ್ತದೆ. ಪೂಜೆ ಮಾಡುತ್ತಿದ್ದ ಭಟ್ರು

ತೀರಿಕೊಂಡ ನಂತರದಲ್ಲಿ ನೇವೇದ್ಯಕ್ಕೆ ಅಕ್ಕಿ ಬಾರದೆ ಇದ್ದುದರಿಂದ ದೇವಸ್ಥಾನದ ಬಾಗಿಲು ಹಾಕಿದೆ.ಈ ಕಾನೂನಿನ ಪರಿಣಾಮ ಜಮೀನಿನ ಗೇಣಿಯು ಬಾರದೇ ಇದ್ದುದರಿಂದ ದೇವಸ್ಥಾನಕ್ಕೆ ಈ ದುಃಸ್ಥಿತಿ ಬಂದಿದೆ. ಈ ದೇವಸ್ಥಾನದ ಪೂಜೆಯನ್ನು ಅಡಿಗರು ವಹಿಸಿಕೊಂಡಿದ್ದನ್ನು ಒಡೆಯರಿಗೆ ತಿಳಿಯುತ್ತದೆ.ಕೊನೆಗೆ ದೇವಸ್ಥಾನದ ಬಾಗಿಲಿನ ಬೀಗವನ್ನು ಹಾಕಿ ಒಂದು ಕವರಿನಲ್ಲಿ ರಿಜಿಸ್ಟರ್ಡ್ ಪೋಸ್ಟ್ ಮಾಡಿ ಕೀಯನ್ನು ಸರಕಾರಕ್ಕೆ ಕಳುಹಿಸಿಕೊಡುತ್ತಾರೆ. ಇಂತಿಂಥ ಕಾರಣಕ್ಕೆ ದೇವಸ್ಥಾನದ ಬಾಗಿಲನ್ನು ಹಾಕುತ್ತೇವೆ ಎಂದು ಬರೆದು ಕಳುಹಿಸಲಾಗಿದೆ.

"ಈಗ ದೇವಸ್ಥಾನ ಬಂದಾಗಿದೆ. ಗೊತ್ತಿಲ್ವಾ ನಿನಗೆ? ನೈವೇದ್ಯಕ್ಕೆ ಅಕ್ಕಿ ಇಲ್ಲವಂತೆ. ಒಕ್ಕಲು ಮಸೂದೆ ಬಂದು ದೇವರಿಗೂ ಇಲ್ಲ, ನನಗೂ ಇಲ್ಲ. ಕಾಯಿ ತಂದಿದ್ದೀಯಾ? ನೀನೇ ಒಡಕೋ. ಅಥವಾ ನಾನು ಒಡಕೊಡ್ಲಾ? ವೆಂಕಮ್ಮ ಪಟಪಟಾ ಎಂದು ಮಾತನಾಡುತ್ತಾ ಹೆಂಗಸಿನ ಬಳಿ ಹೋದರು."[೮] ಈ ಭೂಮಸೂದೆಯ ಪರಿಣಾಮವಾಗಿ ದೇವಸ್ಥಾನದ ಬಾಗಿಲು ಹಾಕಿರುವುದು ಕಂಡುಬರುತ್ತದೆ. ಒಕ್ಕಲುಗಳಿಂದಲೇ ದೇವಸ್ಥಾನದ ಪೂಜೆ ನಿಂತು ಹೋಯಿತು ಎಂಬ ಅಪವಾದವನ್ನು ಭೂಮಾಲೀಕರು ಮಾಡುತ್ತಾರೆ.

ಒಡೆಯರ ಮಗ ಕಮಲಾಕ್ಷ ಮೊದಲು ತೋಳ್ಬಲದ ಮೂಲಕ ಹೋರಾಟವನ್ನು ಹತ್ತಿಕ್ಕಲು ಯತ್ನಿಸಿ ವಿಫಲನಾಗುತ್ತಾನೆ. ಪುನಃ ಸಂಚನ್ನು ಹೂಡಿ ಅದರಲ್ಲಿ ಯಶಸ್ವಿಯಾಗುತ್ತಾನೆ. ನೇರವಾಗಿ ರಾತ್ರಿ ವೇಳೆ ಕಾರಿನಲ್ಲಿ ಬಂದ ತಂಡವು ಪಂಜುವಿನ ಕುಟುಂಬವನ್ನು ಕಾರಿನಲ್ಲಿ ಕೂರಿಸಿಕೊಂಡು ಯಾವುದೋ ಹಳ್ಳಿಗೆ ಹೊತ್ತೊಯ್ದು ಹೋಗಿ ಬಿಡುತ್ತದೆ. ರಾತ್ರಿಯಾದ ಗದ್ದಲವು ಹೇಗೋ ತಿಳಿದು ಇತ್ತ ವೆಂಕ್ಟನ ತಂಡವು ಬೆನ್ನತ್ತಿ ಕಾರನ್ನು ತಡೆಯುವಲ್ಲಿ ಯಶಸ್ವಿಯಾಗುತ್ತದೆ. ಆದರೆ ಪಂಜುವಿನ ಕುಟುಂಬವು ಅಪರಿಚಿತ ಹಳ್ಳಿಯಲ್ಲಿ ಬಿಟ್ಟಿದ್ದರಿಂದ ಗಡಿಪಾರು ಮಾಡಿದವರಂತೆ ಆ ಗ್ರಾಮದ ಜನತೆ ಸುತ್ತಲೂ ನೆರೆಯುತ್ತಾರೆ. ಅವರ ಕತೆ ಮತ್ತು ವ್ಯಥೆಯನ್ನು ಕೇಳಿದ ಊರಿನ ಜನರು ಇದು ಧಣಿ ಒಕ್ಕಲು ಘರ್ಷಣೆ ಎಲ್ಲಿಯೂ ಹೊಸತಲ್ಲ ಹೇಳುತ್ತಾರೆ. ಈ ಮಸೂದೆಯ ವೇದನೆ ಅನುಭವಿಸದ ಧಣಿಯೂ ಇಲ್ಲ , ಒಕ್ಕಲೂ ಇಲ್ಲ ಎಂದು ಸಾಮಾನ್ಯವೆಂಬಂತೆ ಜನರು ಹೇಳುತ್ತಾರೆ. ಸರ್ಕಾರ ಮಾಡಿದ ಭೂ ಮಸೂದೆಯ ಪರಿಣಾಮ ಈ ಇಬ್ಬರಲ್ಲೂ ಆತಂಕಗಳು ಕಂಡುಬರುತ್ತದೆ.

ಈ ಸುದ್ದಿ ಹೇಗೋ ತಿಳಿದ ಹತ್ತಿರದ ಯುವ ಮಂಡಲದ ಹುಡುಗರು ಈ ಕುಟುಂಬಕ್ಕೆ ನೆರವಾಗುತ್ತಾರೆ.ಆನಂತರ ಪೋಸ್ಟಾಫೀಸಿನ ಮುಖಾಂತರ ಪೊಲೀಸ್ ಸ್ಟೇಶನ್ನಿಗೆ, ಡೆಪ್ಯೂಟಿ ಕಮಿಷನರಿಗೆ, ಮಂತ್ರಿಗಳಿಗೆ ಟೆಲಿಗ್ರಾಮು ಕಳುಹಿಸುತ್ತಾನೆ. ನಂತರ ತನ್ನ ಊರಿಗೆ ವಾಪಸ್ಸಾಗುವ ಹೊತ್ತಿಗೆ ತನ್ನ ಮನೆಯ ಚಿತ್ರಣವೇ ಬೇರೆಯಾಗಿರುತ್ತದೆ. ಒಡೆಯನ ಮಗ ಕಮಲಾಕ್ಷನ ಕುತಂತ್ರದಿಂದಾಗಿ ತನ್ನ ಮನೆಯ ಒಕ್ಕಲುಗಳು ಬೇರೆ ನೆಲೆಸಿದ್ದಾರೆ. ಅಲ್ಲಿಗಾಗಲೇ ಸಬ್‌ಇನ್ಸ್‌ಪೆಕ್ಟರ್ ಬಂದು ಪಂಜುವಿನ ವಿಚಾರಣೆ ನಡೆಸುತ್ತಾರೆ. ಒಡೆಯರ ಪಿತೂರಿಯಿಂದಾಗಿ ಅಲ್ಲಿಗೆ ಹರಿಜನ ಐತನ ಸಂಸಾರ ಈ ಭೂಮಾಲೀಕನ ಒಕ್ಕಲಾಗಿದೆ.ಪಂಜುವಿನ ನಾಯಿಮರಿ ಆತನನ್ನು ಕಂಡು ಓಡೋಡಿ ಬರುತ್ತದೆ. ಈ ನಾಯಿಯ ಸಾಕ್ಷಿಯನ್ನು ಇನ್ಸ್‌ಪೆಕ್ಟರ್‌ಗೆ ತೋರಿಸುತ್ತಾನೆ. ಈ ಸಾಕ್ಷಿಯನ್ನು ಒಪ್ಪದೇ ಅಲ್ಲಿನ ಒಕ್ಕಲುಗಳೆಲ್ಲಾ ದಂಗಾಗುತ್ತಾರೆ. ನಂತರ ಡೆಪ್ಯುಟಿ ಕಮಿಷನರ್, ಮಂತ್ರಿಗಳು ಕೂಡಬರುತ್ತಾರೆ.

ಮಂತ್ರಿಗಳು, ಡೆಪ್ಯುಟಿ ಕಮಿಷನರಿಗೆ ಈ ವಿವಾದಕ್ಕೆ ಸಂಬಂಧಿಸಿದಂತೆ ಪತ್ರ ಬರೆದಿದ್ದ ಪಂಜು ತನ್ನ ನೆರವಿಗೆ ಬರುತ್ತಾರೆಂದು ಆಸೆ ಇಟ್ಟುಕೊಂಡಿರುತ್ತಾನೆ. ಆಸೆ ನಿರಾಸೆಯ ಕಾರ್ಮೋಡವಾಗಿ ಕರಗಿ ಹೋಗುತ್ತದೆ. ಮಂತ್ರಿಗಳು ಇನ್ಸ್‌ಪೆಕ್ಟರ್‌ನನ್ನು ಕರೆದು ಆತನ ಕಿವಿಯಲ್ಲಿ ಉಸುರಿ ವಿಚಾರಣೆ ನಡೆಸುವಂತೆ ಆದೇಶಿಸುತ್ತಾರೆ. ಮಂತ್ರಿಗಳು ಹೊರಡುವ ಮುನ್ನ ದೇವಸ್ಥಾನದ ಬೀಗ ಹಾಕಿರುವುದನ್ನು ಗಮನಿಸುತ್ತಾರೆ. ಮಹಾಲಿಂಗೇಶ್ವರ ದೇವಸ್ಥಾನದ ತುಂಬಾ ಗೊಡೆಯೆಲ್ಲೆಲ್ಲಾ ಗಿಡಗಂಟೆಗಳು ಬೆಳೆದಿರುವುದನ್ನು ನೋಡುತ್ತಾರೆ. ದೇವಸ್ಥಾನಕ್ಕೆ ಯಾಕೆ ಬೀಗ ಹಾಕಿದ್ದೀರಾ ಎಂದು ಕೇಳಿದಾಗ ಒಕ್ಕಲು ಮಸೂದೆ ಜಾರಿಯಾದ ಪರಿಣಾಮವೇ ಈ ದುಃಸ್ಥಿತಿ ಬಂದಿದೆ ಎಂದು ವ್ಯಕ್ತಪಡಿಸುತ್ತಾರೆ. ಇದಕ್ಕೆ ಬೀಗದ ಕೈ ಇಲ್ಲದೆ, ಪೂಜಾರಿ ರಿಜಿಸ್ಟರ್ಡ್ ಪೋಸ್ಟಿನಲ್ಲಿ ಸರಕಾರಕ್ಕೇ ಕಳುಹಿಸಿರುವುದು ತಿಳಿದುಬರುತ್ತದೆ. ಆನಂತರ ಕತೆ ಏನಾಯ್ತು ಎಂಬುದು ಯಾರಿಗೂ ಗೊತ್ತಿಲ್ಲ. ಬೀದಿ ಪಾಲಾಗಿರುವ ಪಂಜುವಿನ ಕುಟುಂಬದ ಸ್ಥಿತಿ ಇನ್ನೊಂದು ಕಡೆ ಇದೆ.

ಈ ಕುರಿತು, "ನಡೆಯುವ ನೆಲವನ್ನೇ ನೋಡುತ್ತ ಪಂಜು ಹೆಜ್ಜೆ ಇಕ್ಕಿದ. ರೈತರ ಬಡಕಲು ಕಾಲುಗಳು ಹಿಂಬಾಲಿಸಿದವು. ವಾಗಿ ಭಾಗಿ, ಮಕ್ಕಳು ಹಿಂಬಾಲಿಸಿದರೂ ಯಾರೂ ಅಳುತ್ತಿರಲಿಲ್ಲವಾದರೂ ಬಿರಿದ ಭೂಮಿಯು ಗರ್ಭಕ್ಕೆ ಇಳಿಯುವಂಥ ಭೀತಿ ಮಾತ್ರ ಹೃದಯದಾಳದಲ್ಲಿ ಆವರಿಸಿತ್ತು."[೯]

ಈ ಎರಡು ಸನ್ನಿವೇಶಗಳು ಭೂ ಮಸೂದೆಯ ಒಟ್ಟು ಪರಿಣಾಮವನ್ನು ಎತ್ತಿ ತೋರುತ್ತವೆ.ಈ ಕಾದಂಬರಿಯು ಸ್ಥಾವರಕ್ಕಂಟಿಕೊಂಡ ಭೂಮಾಲೀಕತ್ವದ ಯಥಾಸ್ಥಿತಿ ವಾದವನ್ನು ಮಂಡಿಸಿದರೆ, ಎರಡನೆಯದು ಹೋರಾಟವು ಜೀವಂತ ಬದುಕಿನ ಅರ್ಥ ಶೋಧಿಸುವ ಆಶಯವಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯ ಭಯ, ಮತ್ತೊಂದೆಡೆ ಭೂಮಾಲೀಕರ ಭಯ,ಇನ್ನೊಂದೆಡೆ ರೈತರ ಮೇಲಿನ ಪ್ರೀತಿ ಇಂತಹ ಇಕ್ಕಟ್ಟುಗಳ ನಡುವೆ ಭೂಹಕ್ಕಿಗಾಗಿ ಹೋರಾಟ ನಡೆಸುವ ಆಶಯ ಈ ಕಾದಂಬರಿಯಲ್ಲಿ ಧ್ವನಿಸುತ್ತದೆ.

**ಕೊನೆ ಟಿಪ್ಪಣಿ**

೧. ವಿಶುಕುಮಾರ್, ಭೂಮಿ, ಮುನ್ನುಡಿ

೨. ವಿಶುಕುಮಾರ್,ಭೂಮಿ, ಪು.೫

೩. ಅದೇ ಪುಟ ೬

೪. ಅದೇ, ಪುಟ ೧೨

೫. ಅದೇ ಪುಟ ೨೫

೬. ಅದೇ ಪುಟ ೨೫

೭. ಅದೇ ಪುಟ ೨೬

೮.ಅದೇ ಪುಟ ೨೫

೯. ಅದೇ ಪುಟ ೨೬

## ೪.೨.೨೦ ಮೊಗಳ್ಳಿ ಗಣೇಶ್ : ದಲಿತರ ಭೂಮಿಯ ಕನಸು

ಸಮಕಾಲೀನ ಬದುಕಿನ ಸಂವೇದನೆಯ ಆಶಯಗಳನ್ನು ಮೊಗಳ್ಳಿ ಗಣೇಶ್ ಅವರ ಸೃಜನಶೀಲ ಕಥನಗಳಲ್ಲಿ ಕಾಣಬಹುದಾಗಿದೆ. ದೇವನೂರರಂತೆ ಮೊಗಳ್ಳಿಯವರು ದಲಿತ ಸಂವೇದನೆಯ ನೆಲೆಯಲ್ಲಿ ಅಭಿವ್ಯಕ್ತಿಗೊಳಿಸುವ ಕತೆಗಾರರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಸಮಕಾಲೀನ ಸಂದರ್ಭದ ಭೂ ಸಮಸ್ಯೆಯನ್ನು ಕುರಿತು ವಿವೇಚಿಸುತ್ತಾರೆ. ಆದ್ದರಿಂದ ಅವರ ಕತೆಗಳು ಇಂತಹ ಭೂ ಸಮಸ್ಯೆಯನ್ನು ಕುರಿತಾಗಿ ವಿಸ್ತಾರ ನೆಲೆಯಲ್ಲಿ ವ್ಯಕ್ತಗೊಳ್ಳುತ್ತವೆ. ಸಮಕಾಲೀನ ಬದುಕಿನ ಸಾಂಸ್ಕೃತಿಕ ಎಚ್ಚರಗಳನ್ನು ತಮ್ಮ ಕತೆಗಳಲ್ಲಿ ಮೂಡಿಸಿದ್ದಾರೆ.ಮೇಲುನೋಟಕ್ಕೆ ದೇವನೂರರ ಕತೆಗಳಂತೆ ಕಂಡುಬಂದರೂ, ಅವರ ಕತೆಗಳು ತಮ್ಮದೇ ಆದ ಶೈಲಿಯ ಮೂಲಕ ಅಭಿವ್ಯಕ್ತಗೊಳ್ಳುತ್ತವೆ. ಇಂತಹ ಆಶಯಗಳುಳ್ಳ ಅವರ **ಭೂಮಿ, ಮಣ್ಣು** ಪ್ರಾತಿನಿಧಿಕ ಕತೆಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

ಭಾರತೀಯ ಆದಿವಾಸಿ ಸಮಾಜದ ನೆಲೆಯನ್ನು ತಾತ್ವಿಕವಾಗಿ ಎ.ಎಸ್. ಪ್ರಭಾಕರ್ ಅವರು ಹೇಳುವಂತೆ, "ಭಾರತದ ಆದಿಮ ಸಮಾಜಗಳ ಸಂಸ್ಕೃತಿ ರೂಪಗೊಂಡಿರುವುದೇ ಭೂಮಿಯ ಜೊತೆಗಿನ ಅವುಗಳ ಅನನ್ಯ ಅನುಸಂಧಾನದಲ್ಲಿ. ಭೂಮಿ ಮತ್ತು ಆದಿಮ ಜನಾಂಗಗಳ ನಿರಂತರ ಅನುಸಂಧಾನದ ಫಲವಾಗಿಯೆ ಸಂಸ್ಕೃತಿಗೆ ವಿಕಾಸಶೀಲ ಪ್ರವೃತ್ತಿ ಮೈಗೂಡಿಬಂದಿದೆ. ಆದಿಮ ಜನ ಸಮೂಹಗಳು, ಸಮುದಾಯಗಳಾಗಿ ಸಂಘಟಿತವಾದದ್ದೆ. ಅವು ಭೂಮಿಯ ಜೊತೆ ಸಾಧ್ಯವಾಗಿಸಿಕೊಂಡ ಆಧ್ಯಾತ್ಮಿಕ ಮೋಹದಿಂದಾಗಿ ಭೂಮಿ ಲೌಕಿಕದಲ್ಲಿ ಅನೇಕ ಸಾಧ್ಯತೆಗಳನ್ನು ಸಾಕಾರಗೊಳಿಸುವ ಜೀವಂತ ವೇದಿಕೆಯೆಂಬ ಪರಿಭಾವನೆ ಈ ಸಮುದಾಯಗಳ ಮೋಹವನ್ನು ಆಧ್ಯಾತ್ಮದ ಮಟ್ಟಕ್ಕೆ ಎತ್ತರಿಸಿದೆ. ಇಂದು ಆದಿವಾಸಿಗಳು ಮತ್ತು ಕೆಳಜಾತಿಗಳ ಬಹುತೇಕ ಆಚರಣೆಗಳು ಮತ್ತು ಅಭಿವ್ಯಕ್ತಿ ಸಾಧ್ಯತೆಗಳು ಭೂಮಿಯ ಜೊತೆಗಿನ ಅವುಗಳ ಸಂಬಂಧದ ಫಲವಾಗಿ ಹುಟ್ಟಿಕೊಂಡಿವೆ."[೧]

ಇಂತಹ ಆದಿಮ ಸಮುದಾಯವು ಭೂಮಿಯನ್ನು ಅಪ್ಪಿ ಬದುಕುವ ಅದನ್ನ ತನ್ನ ಉಸಿರಾಗಿಸಿಕೊಂಡಿರುವುದು ಕಂಡುಬರುತ್ತದೆ. ಈ ಸಮುದಾಯಕ್ಕೆ ಭೂ ವಂಚನೆ ಮಾಡುವ ವರ್ಗದ ಹುನ್ನಾರಗಳು ಅರ್ಥವಾಗದೇ ಉಳಿಯುತ್ತದೆ. ಹೀಗಾಗಿ ಭೂಹೀನ ಸಮುದಾಯವು ಭೂಮಿ ಬಯಕೆಯ ಕನಸು ನನಸಾಗದೇ ಉಳಿಯುತ್ತದೆ. ಮೊಗಳ್ಳಿಯವರ ಕಥನಗಳಲ್ಲಿರುವ ಭೂಸಂಬಂಧಿ ಅಂಶಗಳನ್ನು ತಾತ್ವಿಕವಾಗಿ ಹೀಗೆ ಗುರುತಿಸಿಕೊಳ್ಳಲಾಗಿದೆ.

ಭೂಮಿಯನ್ನು ಅಪ್ಪಿ ಬದುಕುವ ಅದು ತನ್ನ ಉಸಿರಾಗಿಸಿಕೊಂಡಿರುವುದು ಮೊಗಳ್ಳಿಯವರ ಭೂಮಿ ಮತ್ತು ಮಣ್ಣು ಕತೆಗಳಲ್ಲಿ ಕಂಡುಬರುತ್ತದೆ. ಭೂಹೀನ ಸಮುದಾಯವು ಭೂಮಿ ಬಯಕೆಯ ಕನಸು ನನಸಾಗದೇ ಉಳಿಯುತ್ತದೆ.ಅದನ್ನು ಹೋರಾಟದ ಮೂಲಕ ದಕ್ಕಿಸಿಕೊಳ್ಳಲು ಯತ್ನಿಸಿದರೂ ಊಳಿಗಮಾನ್ಯ ವ್ಯವಸ್ಥೆಯ ಹುನ್ನಾರಗಳಿಂದಾಗಿ ಭೂಮಿಯ ಕನಸು ಕನಸಾಗಿಯೇ ಉಳಿಯುತ್ತದೆ. ಮಣ್ಣು ಕತೆಯಲ್ಲಿ ರೈತ ಪ್ರಶ್ನೆಯ ಜೊತೆಗೆ ಬೆಂಬಲ ಬೆಲೆಯಿಲ್ಲದ ಕಾರಣ ರೈತರ ಆತ್ಮಹತ್ಯೆಯಂತಹ ಪ್ರಸ್ತಾಪಗಳು ಇಲ್ಲಿ ಬರುತ್ತವೆ. ಈ ಸಾಲದ ವಿಚಾರ ಜಾಗತಿಕ ಸಂದರ್ಭದ ರೈತರ ಸ್ಥಿತಿಗತಿಯನ್ನು ಬಿಂಬಿಸುವಂತೆ ಕಂಡುಬರುತ್ತದೆ.

"ಭೂಮಿ" ಕತೆಯಲ್ಲಿ ಆದಿವಾಸಿ ಸಮುದಾಯದ ಭೂಮಿಯ ನಂಟು ಹುಟ್ಟಿನಿಂದಲೇ ಬಂದಂತಹುದಾಗಿದೆ. ಆದರೆ ಭೂ ಒಡೆತನದ ಹಿಡಿತವನ್ನು ತನ್ನ ವಶದಲ್ಲಿ ಹಿಡಿದಿಟ್ಟುಕೊಂಡಿರುವ ಭೂಮಾಲೀಕ ತನ್ನ ಲೌಕಿಕ ಸಾಧ್ಯತೆಯ ದಾಳವಾಗಿ ಬಳಸಿಕೊಳ್ಳುವ ಚಿತ್ರಣವಿದೆ. ಬುಡಕಟ್ಟು ಜನಾಂಗವು ಭೂ ಒಡೆತನವನ್ನು ಪಡೆಯು ಸಲುವಾಗಿ ಮಾಡುವ ಸಾಹಸದ ಚಿತ್ರಣ ಕತೆಯಲ್ಲಿದೆ. ಅಲೆಮಾರಿ ಜನಾಂಗದ ದೊಂಬನಿಗೆ ಭೂ ಒಡೆತನ ಹೊಂದುವುದು ಭೂ ಹೋರಾಟದ ಪ್ರಶ್ನೆಯಾಗಿ ಕಂಡುಬರುತ್ತದೆ. ಬುಡಕಟ್ಟು ಸಮುದಾಯದ ಪ್ರತಿನಿಧಿಯಾಗಿ ಭೂ ಪ್ರಶ್ನೆಗೆ ದೊಂಬ ಉತ್ತರ ಕಂಡುಕೊಳ್ಳಲು ಯತ್ನಿಸುವ ಚಿತ್ರಣವಿದೆ. ಅಲೆಮಾರಿ ದೊಂಬನು ತನ್ನ ಕುಟುಂಬವನ್ನು ಸಾಕುವ ದೃಷ್ಟಿಯಲ್ಲಿಟ್ಟುಕೊಂಡು ದೊಂಬರಾಟದ ಮೂಲಕ ಜೀವನ ಸಾಗಿಸುತ್ತಿದ್ದಾನೆ. ತನ್ನ ದೊಂಬರಾಟದಿಂದ ಸುತ್ತಮುತ್ತಲ ಹಳ್ಳಿಯ ಜನರಿಗೆ ಮನರಂಜನೆ,ಸಂತೋಷ ಪಡಿಸುತ್ತ ತನ್ನ ಬದುಕನ್ನು ಸಾಗಿಸುತ್ತಿರುತ್ತಾನೆ.

ಭೂಮಿ ಕತೆಯಲ್ಲಿ ದೊಂಬನ ಕುರಿತು ಅಂತರ್ವಾಣಿ ಹೇಳುವಂತೆ"ಯಾಕೋ ದೊಂಬಾ,

ಗೊತ್ತಾಗಲಿಲ್ಲವೇನೋ, ನನ್ನನ್ನು ಮರೆತು ಬಿಟ್ಟೆಯಾ ನನ್ನ ತೊಟ್ಟಿಲಿಗೆ ಬರುವುದಿಲ್ಲವೇನು ನೀನು. ಹೀಗೇ ಎಷ್ಟು ದಿನ ಅಂತ ಊರೂರು ಅಲೆಯುತ್ತೀಯೇ ನನ್ನ ಮೊಲೆಹಾಲು ನಿನಗೆ ಬೇಡವೇನೂ. ನನ್ನ ಮಣ್ಣು ನೆತ್ತರು ನಿನಗೆ ಬೇಡವೇ. ಬಾ ಮಗನೇ ಬಾರೋ ನನ್ನ ದೊಂಬನೇ, ನನ್ನ ಬೆವರ ಜಲವು ನನ್ನ ಈ ಹಸುರು ತುರುಬು ನಿನಗೆ ಬೇಡವಾಯಿತೇ?ಬಾರೋ, ನೀನು ಬಾರೋ ನನ್ನ ಒಡಲ ಮಣ್ಣೊಳಗೆ ಇಳಿದು ಬಾರೋ, ಮಿಂದು ಮಾಗಿ ಮೊಳಕೆಯಾಗಿ ಚಿಗುರು ಎಲೆ ಎಲೆ ಹೀಚು ಕಾಯಿಯಾಗಿ, ಹೂವಾಗಿ, ಮೊಗ್ಗಾಗಿ, ಬೀಜವಾಗಿ , ಆಗಿ ಆಗಿ, ಹುಟ್ಟಿ ಹುಟ್ಟಿ ಜೀವವಾಗು ಬಾರೋ"[೨] ಬುಡಕಟ್ಟು ಸಮುದಾಯದ ದೊಂಬನಂತಹವರಲ್ಲಿ ಭೂಮಿಯೊಂದಿಗಿನ ಅಂತರ್ ಸಂಬಂಧಗಳನ್ನು ಇಲ್ಲಿ ವ್ಯಕ್ತವಾಗಿವೆ. ಮಣ್ಣಿನ ಗಾಢವಾದ ಅಂತರ್‌ಸಂಬಂಧವನ್ನು ಕಾವ್ಯಾತ್ಮಕವಾಗಿ ದೊಂಬನೊಂದಿಗೆ ಸಮೀಕರಿಸಲಾಗಿದೆ. ಈ ಭೂಮಿಯು ಮಾತೃಸ್ವರೂಪಿಯಾಗಿ,ಬುಡಕಟ್ಟುಸಮುದಾಯದ ದೊಂಬನನ್ನು ತನ್ನಮಗನ ಸ್ವರೂಪದಲ್ಲಿ ಪೋಷಿಸುವಂತೆ ವ್ಯಕ್ತವಾಗುತ್ತದೆ. ಬುಡಕಟ್ಟು ಸಮುದಾಯಕ್ಕೆ ಭೂಮಿ ಮಾತೃಸ್ವರೂಪಿಯಾಗಿದೆ.

ಈ ಆದಿವಾಸಿಗಳ ಬೇರುಗಳು ಭೂಮಿಯೊಂದಿಗಿನ ನಂಟಿನಿಂದ ಆರಂಭವಾಗಿದ್ದು, ಭಾರತೀಯ ಸಮಾಜದಲ್ಲಿ ಆದಿವಾಸಿಗಳು ಭೂಮಿಯನ್ನು ಸುಲಭವಾಗಿ ಬಿಟ್ಟುಕೊಡದೆ ಹೋರಾಟ ನಡೆಸುತ್ತ ಬಂದಿದ್ದಾರೆ. ಇಲ್ಲಿ ದೊಂಬ ತನ್ನ ದೊಂಬರಾಟವನ್ನು ಊರೂರು ಅಲೆದು ತನ್ನ ಮಂತ್ರ ವಿದ್ಯೆಯಿಂದ ಜನರನ್ನು ಆಕರ್ಷಿಸುತ್ತಾ,ಅತಿಮಾನುಷ ಘಟನೆಗಳನ್ನು ತೋರಿಸಿ ಜನರನ್ನು ರಂಜಿಸುತ್ತಾನೆ. ಈ ರಂಜನೆಯಿಂದ ಬಂದ ಆದಾಯದಲ್ಲಿ ಆತನ ಜೀವನ ನಡೆಯುತ್ತದೆ. ಅನಿರೀಕ್ಷಿತವಾಗಿ ಪಾಳೇಗಾರನ ಊರಿಲ್ಲಿ ತನ್ನ ದೊಂಬರಾಟ ಪ್ರದರ್ಶಿಸುತ್ತಾನೆ.ಈ ಊರಿನ ಪಾಳೆಯಗಾರನಿಗೆ ದೊಂಬನ ಆಟವನ್ನು ಪ್ರಶ್ನಿಸುತ್ತಾನೆ.

ಈ ಪಾಳೆಗಾರಿಕೆಯ ದರ್ಪ, ಊಳಿಗಮಾನ್ಯಶಾಹಿ ವ್ಯಕ್ತಿತ್ವದ ಪಾಳೆಗಾರ ಈತನಿಗೆ ಷರತ್ತು ವಿದಿಸುತ್ತಾನೆ. ಊರ ಕೋಡುಗಲ್ಲ ಬೆಟ್ಟದ ತುದಿ ತುದಿಯ ಶಿಖರ, ಆ ಶಿಖರದ ನೆತ್ತಿಯ ಮೇಲಕ್ಕೆ ಅದರೆತ್ತರದಿಂದ ಕೆಳಕ್ಕೆ ದುಮುಕಿ ಹಾರಿ ಹೋಗಬೇಕು. ನಿನಗೆ ಎಷ್ಟು ಶಕ್ತಿಯಿದೆಯೋ ಅಷ್ಟು ದೂರ ಹಾರಿ ಹೋಗಿ ಬೀಳಬಹುದು ಹಾಗೆ ನಿನ್ನಿಂದ ಸಾಧ್ಯವೊ ಎಂದು ಸವಾಲಾಕುತ್ತಾನೆ. ಇದಕ್ಕೆ ಪ್ರತಿಯಾಗಿ ದೊಂಬ "ಏನೂ ಇಲ್ಲ ಒಡೆಯರೇ, ನಿಮ್ಮ ಪ್ರಕಾರ ಆ ಶಿಖರದ ನೆತ್ತಿಯಿಂದ ನಾನು ಜಿಗಿದು ಹಾರಿ ಹಾರಿ ನನ್ನ ಶಕ್ತ್ಯನುಸಾರ ಎಷ್ಟು ದೂರ ಹಾರಿ ಹೋಗಬಲ್ಲೆನೋ ಅದಷ್ಟು ಭೂಮಿಯೂ, ಅದಷ್ಟು ಜಾಗವೂ ಅದಷ್ಟು ನೆಲವೂ ನನ್ನದಾಗಬೇಕು, ನಮ್ಮವರದಾಗಬೇಕು."[೩] ಎಂದು ಪ್ರತಿಷರತ್ತನ್ನು ಹಾಕುತ್ತಾನೆ. ಇದಕ್ಕೆ ಇಬ್ಬರೂ ಸಮ್ಮತಿ ಸೂಚಿಸುತ್ತಾರೆ.

ದೊಂಬರಾಟ ಎಂಬುದು ಈ ನಾಡಿನ ಕಲೆಯಾಗಿದೆ. ಆದರೆ ಈ ಕಲೆ ಸಾವು ಬದುಕಿನ ಹಾಗೂ ತನ್ನ ಸಮುದಾಯದ ಪ್ರತಿಷ್ಠೆಯಾಗಿ ಭೂಮಿಯನ್ನು ಪಡೆಯುವ ಸಲುವಾಗಿ ದೊಂಬ ಕಲೆಯನ್ನೇ ಪಣಕ್ಕಿಡುತ್ತಾನೆ.ಗೊರೂರರ ಹೇಮಾವತಿ ಕಾದಂಬರಿಯಲ್ಲಿ ಶ್ರೀನಿವಾಸ ಪೆರುಮಾಳರು ತನ್ನ ಸಂಗೀತ ಕಲೆಯ ಮೂಲಕ ಭೂಮಾಲೀಕನ ವಿರುದ್ಧ ಗೆದ್ದಂತೆ ಇಲ್ಲಿಯೂ ದೊಂಬರಾಟದ ಕಲೆಯನ್ನು ದೊಂಬ ಪಣಕ್ಕಿಡುತ್ತಾನೆ. ಇಲ್ಲಿ ದೊಂಬರಾಟದ ಜೊತೆಗೆ ಭೂಮಿಯನ್ನು ಪಡೆಯುವ ಸಲುವಾಗಿ ದೊಂಬ ಸವಾಲಾಗಿ ಸ್ವೀಕರಿಸುತ್ತಾನೆ. ತಾನು ಹಾರಿದ ಅದಷ್ಟು ಭೂಮಿಯನ್ನು ತನ್ನದಾಗಬೇಕು ತಮ್ಮವರದಾಗಬೇಕೆಂಬ ಅದಮ್ಯ ಬಯಕೆ ಅವನಲ್ಲಿ ವ್ಯಕ್ತವಾಗುತ್ತದೆ. ಅದಿಮ ಜನಾಂಗಕ್ಕೆ ಭೂ ಒಡೆತನ ದಕ್ಕದೆ ಭೂಮಾಲೀಕನ ಹಿಡಿತದಲ್ಲಿರುವುದರಿಂದ ಭೂಒಡೆತನವನ್ನು ತಮ್ಮ ಸಮುದಾಯಕ್ಕೆ ಪಡೆಯುವ ಹಂಬಲವಿದೆ.ಇದೊಂದು ರೀತಿಯಲ್ಲಿ ಅಸಂಘಟಿತ ಹೋರಾಟವಾದರೂ, ಅದು ಸಾಮುದಾಯಿಕ ಹಿತವನ್ನಿಟ್ಟುಕೊಂಡು ದೊಂಬ ಹೋರಾಟ ನಡೆಸುತ್ತಾನೆ.ಅದಕ್ಕಾಗಿ ಬೆಟ್ಟದ ತುದಿಯಿಂದ ತನ್ನ ಪ್ರಾಣವನ್ನು ಲೆಕ್ಕಿಸದೆ ಹಾರುವ ಮೂಲಕ ತಮ್ಮ ಜನಾಂಗಕ್ಕೆ ಭೂಮಿ ದಕ್ಕಬೇಕೆಂದು ಹೋರಾಟ ನಡೆಸುತ್ತಾನೆ.

ಈ ಪ್ರತಿಸವಾಲು ಮಾತನ್ನು ಕೇಳಿ ಪಾಳೆಗಾರನಿಗೆ ಆತನ ಜಮೀನ್ದಾರಿ ದೇಹದಿಂದ ಬೆವರು ಸೋರುತ್ತಿತ್ತು. ದೊಂಬನ ನೋಟ ಸೀಳುತ್ತಿತ್ತು. ಅವನ ನಿಲುವಿನ ಗತ್ತಿನಲ್ಲಿ ಅಸಂಖ್ಯಾತರು ಕೊರಳೆತ್ತಿ ಏನನ್ನೊ ಗಟ್ಟಿಯಾಗಿ ಕೇಳಿದಂತಿತ್ತು. ಇದು ಜೀವನ್ಮರಣದ ಪ್ರಶ್ನೆ ಎಂಬಂತೆ ಜಾರಿ ಕೆಳಗೆ ಬಿದ್ದು ಮತ್ತಷ್ಟು ಭಯತಂದಿತು. ಇಲ್ಲಿ ಪೇಟ ಕಳಚಿ ಬೀಳುವುದು, ಪಾಳೆಗಾರಿಕೆ ಕಳಚಿ ಬಿತ್ತೆಂಬ ಸಂಕೇತವಾಗಿ ಧ್ವನಿಸುತ್ತದೆ. ಭೂಮಾಲೀಕನಿಗೆ ದೊಂಬ ದೊಡ್ಡ ಸವಾಲಾಗಿ, ನಡುಕ ಮತ್ತು ಬೆವರು ಹರಿಸುವಂತೆ ಮಾಡುತ್ತಾನೆ. ಇಲ್ಲಿ ಭೂಮಾಲೀಕ ಭೂಮಿ

ಕಳೆದುಕೊಳ್ಳುವುದರೊಂದಿಗೆ ತನ್ನ ಅಧಿಕಾರವನ್ನು, ತನ್ನ ದರ್ಪ, ಅಹಂಕಾರವನ್ನು ಕಳೆದುಕೊಳ್ಳುತ್ತೇನೆಂಬ ಭಯ ಆತನಲ್ಲಿ ಕಾಡುತ್ತದೆ.

ಆಕಾಶದಲ್ಲಿ ಹಾರಾಡುತ್ತಿದ್ದ ದೊಂಬ ತುಂಬ ದಣಿದಿರುವುದನ್ನು ಕಾಣುತ್ತೇವೆ. ಆದರೆ, "ನೆಲದ ಹಂಬಲದಿ ಅದಿಮರ ಭಾರದಿ ನಿತ್ರಾಣನಾಗಿಬಿಟ್ಟಿದ್ದ. ಈ ಭೂಮಿತಾಯ ತೊಟ್ಟಿಲಲ್ಲಿ ನಾನೀಗ ಮನುಷ್ಯ ಎಂದು ಆನಂದದ ಅಲೆಯಲ್ಲಿ ಮುಳುಗಿದ. ಕೆಳಕ್ಕೆ ಇಳಿಯುತ್ತಾ ಅಲ್ಲ ಅಲ್ಲ ಬೀಳುತ್ತಾ ಅಥವಾ ಜಾರುತ್ತಾ ನೆಲದ ಸೆಳೆತದಲ್ಲಿ ಸಿಲುಕಿ ಬಿದ್ದೇ ಹೋದ. ಅವನ ರೆಕ್ಕೆಗಳು ದಣಿದು ಹಣ್ಣಾಗಿದ್ದವು. ಈ ಭೂಮಿ ನಮ್ಮದು ಇನ್ನಿದು ನಮ್ಮದು ಎಂದು ನೆಲಕ್ಕೆ ಮೈಚಾಚಿ ಒರಗಿ ಕೂಗಿಕೊಂಡ."[೪] ಇದು ಒಂದು ಸಮುದಾಯದ ಹೋರಾಟವಾಗಿ ಭೂಮಿಯನ್ನು ಪಡೆಯುವ ನಿಟ್ಟಿನಲ್ಲಿ ದೊಂಬ ನಿತ್ರಾಣನಾಗಿದ್ದಾನೆ. ಪಾಳೇಗಾರಿಕೆಯ, ಊಳಿಗಮಾನ್ಯಶಾಹಿ ವ್ಯವಸ್ಥೆಯ ಶೋಷಣೆಯ ಬಂಧನದಿಂದ ಹಾರಿ ಹೊರಬಂದು ದೊಂಬ ಮನುಷ್ಯನಾಗುತ್ತಾನೆ.

ಇದಕ್ಕೆ ಪೂರಕವೆಂಬಂತೆ ಎ.ಎಸ್.ಪ್ರಭಾಕರ್‌ರವರು ಹೇಳುವಂತೆ, "ರೆಕ್ಕೆ ಕಟ್ಟಿಕೊಂಡು ಹಾರಿದ ಡೊಂಬರನ ರೂಪಕ, ಕತೆ ಕಟ್ಟಿದ ಸಮುದಾಯಗಳ ಯಾವ ಆಶಯಗಳನ್ನು ಪ್ರತಿನಿಧಿಸುತ್ತಿದೆ...? ಅಥವಾ ಇಡೀ ಕಥೆಯೇ ಒಂದು ರಂಜಕ ಸಂಗತಿಯನ್ನ ಮಾತ್ರ ನಮ್ಮ ಮುಂದಿಡುತ್ತದೆಯೇ? ಸಮಸ್ಯೆ ಸರಳವಾದುದಲ್ಲ. ಭೂಮಿಯ ಒಡೆತನ ಮತ್ತು ರೆಕ್ಕೆ ಕಟ್ಟಿಕೊಂಡು ಹಾರಿ ಬಿಡುವೆನೆಂಬ ಡೊಂಬರವನ ಛಲಗಳೆರಡೂ ಭಾರತದ ಆಂತರಿಕ ವಿಷಯ ಆರ್ಥಿಕ ಸಂರಚನೆಯ ಫಲವಾದ, ಎರಡು ಭಿನ್ನ ವರ್ಗಗಳನ್ನು ಪ್ರತಿನಿಧಿಸುತ್ತವೆ. ಸಂಘರ್ಷದಲ್ಲಿ ಅಂತಿಮವಾಗಿ ಗೆದ್ದ ತಂಡದ ಹೇಷಾರವ ವಾಚ್ಯವಾಗಿದ್ದರೆ, ಸೋತವರ ಅಸಹಾಯಕ ಅಭಿವ್ಯಕ್ತಿ ರೂಪಕಗಳಲ್ಲಿ ಮಡುಗಟ್ಟುತ್ತದೆ. ಭೂಮಿಯ ಕುರಿತ ತಮ್ಮ ಪಾರಂಪರಿಕ ಅಧಿಕಾರವನ್ನು ಮರಳಿ ಪಡೆಯಲು ನಮ್ಮ ಆದಿಮ ಸಮುದಾಯಗಳು ಡೊಂಬರವನಂತೆ ಪ್ರಯತ್ನಿಸುತ್ತಲೇ ಬಂದಿವೆ."[೫]

ಇಲ್ಲಿ ಭಾರತೀಯ ಸಂದರ್ಭ ಭೂ ಸಮಸ್ಯೆ ಕುರಿತು ಈ ಕತೆಯು ಧ್ವನಿಸುವುದನ್ನು ಸಮೀಕರಿಸಲಾಗಿದೆ. ಇಂದಿಗೂ ಬಡುಕಟ್ಟು ಸಮುದಾಯವು ಭಾರತೀಯ ಸಂದರ್ಭದಲ್ಲಿ ಇಂತಹ ಹೋರಾಟಗಳಲ್ಲಿ ತೊಡಗಿಸಿಕೊಂಡಿವೆ. ಅಲ್ಲದೆ ಭೂಮಾಲೀಕರಿಂದ ಅಂದಿನಿಂದಲೂ ಶೋಷಣೆಗೆ ಒಳಗಾಗುತ್ತಲೆ ಬಂದಿದ್ದಾರೆ.

ದೊಂಬ ಸವಾಲನ್ನು ಗೆದ್ದರು ಭೂಮಾಲೀಕ ಪಾಳೇಗಾರ ರಾಜಕೀಯ ಹುನ್ನಾರ ಮಾಡುತ್ತಾನೆ. ಈ ಷರತ್ತಿನಲ್ಲಿ ಗೆದ್ದ ದೊಂಬನಿಗೆ ಭೂಮಿಯನ್ನು ಕೂಡದೇ ಭೂಮಾಲೀಕ ಪಾಳೇಗಾರ ಹಿಯಾಳಿಸುತ್ತಾನೆ. ಏಕೆಂದರೆ ತನ್ನತನವನ್ನು ಇಲ್ಲಿ ಕಳೆದುಕೊಳ್ಳಬೇಕಾದ ಪರಿಸ್ಥಿತಿಯಿಂದಾಗಿ ಪಾಳೇಗಾರನಿಗೆ ದೊಂಬನ ಗೆಲುವನ್ನು ಒಪ್ಪಿಕೊಳ್ಳಲು ಸಾಧ್ಯವಾಗುತ್ತಿಲ್ಲ. ದೊಂಬನನ್ನು ಕುರಿತು ಪಾಳೆಗಾರ ಭೂಮಿಗೂ ನಿನಗೂ ಸಂಬಂಧವಿದೆ ಎಂದು ಭಾವಿಸುವ ನಿನ್ನಂಥ ಮೂರ್ಖ ಇನ್ನೊಬ್ಬನಿಲ್ಲ ಎಂದು ಛೇಡಿಸುತ್ತಾನೆ. ಹುಚ್ಚನೆಂದು ಹಿಯಾಳಿಸಿ ತಾನು ಗೆದ್ದ ಭೂಮಿಯನ್ನು ನೀಡದೆ ಭೂಮಾಲೀಕ ನಿರಾಕರಿಸುತ್ತಾನೆ.

ಆದರೆ ದೊಂಬ ಭೂಮಿ ಮತ್ತು ಆಕಾಶವನ್ನೇ ದಿಟ್ಟಿಸಿನೋಡುವಂತೆ ಪಾಳೇಗಾರನನ್ನು ನೋಡುತ್ತಾನೆ. ಈ ಭೂಹೋರಾಟ ಇಲ್ಲಿಗೆ ನಿಲ್ಲುವುದಿಲ್ಲ,ಅದರ ಸಂಕೇತವಾಗಿ ದೊಂಬ ಬಿಳಲು ಬಿಡುತ್ತಾನೆ. ಈ ಬಿಳಲು ಎಲ್ಲೆಡೆಗೂ ವ್ಯಾಪಿಸುತ್ತದೆ ತನ್ನ ಜನಾಂಗ ದನಿ ಎತ್ತುತ್ತದೆ ಎಂಬುದರ ಸಂಕೇತವಾಗಿದೆ. ಇಲ್ಲಿ ಭೂಮಿಯನ್ನು ಪಡೆಯುವುದು ಜನಾಂಗದ ಪ್ರತಿಷ್ಠೆಯ ಪ್ರಶ್ನೆಯಾಗಿ ಮತ್ತು ಭೂ ಪ್ರಶ್ನೆಯಾಗಿದೆ.

ಭೂ ಹೋರಾಟದ ಕಿಚ್ಚನ್ನು ಯಾವುದೇ ಕಾರಣಕ್ಕೂ ನಾಶಮಾಡಲಾಗುವುದಿಲ್ಲ ಎಂಬುದು ಸಾಂಕೇತಿಕವಾಗಿ ಇಲ್ಲಿ ವ್ಯಕ್ತವಾಗುತ್ತದೆ. "ಆ ದೊಂಬ ಭೂಮಿಯಾಳದವರೆಗೂ ಹಾರಿ ಹಾರಿ ಅಲ್ಲಲ್ಲ. ಜಾರಿ ಜಾರಿ ಇಳಿದಂತೆ, ಒಳ ಒಳಕ್ಕೆ ಹೊರಟಂತೆ ಬೆಳೆಯುತ್ತಲೇ ಸಾಗುತ್ತಿದ್ದ ಪಾಳೆಯಗಾರ ತನ್ನೆಲ್ಲ ಶಕ್ತಿಯನ್ನು ಬಿಟ್ಟು ಎಳೆದಾಡಿದ ಏನೂ ಪ್ರಯೋಜನವಾಗಲಿಲ್ಲ."[೬] ದೊಂಬನ ಹೋರಾಟದ ಶಕ್ತಿಯನ್ನು ನಾಶಮಾಡಲು ಪಾಳೇಗಾರನಿಂದ ಸಾಧ್ಯವಾಗುವುದಿಲ್ಲ. ಈ ಹೋರಾಟವು ಭೂಮಿಯೊಳಗೆ ಆಳವಾಗಿ ಬೇರೂರುತ್ತ ಹೋಗುತ್ತದೆ. ಭೂಮಾಲೀಕ ತನ್ನ ಶಕ್ತಿಯಿಂದ ಚಳುವಳಿಯನ್ನು ಕಿತ್ತೆಸೆಯಬಹುದು ಎಂದು ಭಾವಿಸಿದ್ದರೆ, ಅದು ಭೂ ಹೋರಾಟವನ್ನಲ್ಲ ಎಂಬ ಸಂದೇಶವನ್ನು ಕತೆಯು ಧ್ವನಿಸುತ್ತದೆ.

ದೊಂಬನ ಹೋರಾಟದ ತೀವ್ರತೆಯು ಮಹತ್ವವನ್ನು ಇಲ್ಲಿ ಗಮನಿಸುವುದಾದರೆ,"ದೊಂಬನ ದೇಹ

ಬೆಳೆದು ಸಾವಿರಾರು ಹೂವಾಗಿ, ಮೊಗ್ಗಾಗಿ, ಗಿಡಮರ ಬಳ್ಳಿ ಲತೆ ಬೀಜವಾಗಿ ಮರವಾಗಿ ಪಚ್ಚೆ ಪೈರು ಹಸುರು, ಸಿರಿಯಾಗಿ, ಹೂ ಮಣ್ಣು ಗಂಧವಾಗಿ, ಬೀಜ ಜೀವವಾಗಿ ಇಡೀ ಆ ಬಯಲೆಲ್ಲವನ್ನೂ ರಂಗುಗೊಳಿಸುವಂತೆ ಕಂಗೊಳಿಸಿ, ಬೆಳೆದು ಹೋಗಿತ್ತು. ಇಡೀ ಬಯಲು ಜೀವರಸದಿಂದ ಘಮಘಮಿಸುತ್ತಿತ್ತು. ಅವನ ಹೆಂಡತಿ ಮಕ್ಕಳು ಆ ಹಸಿರ ಸಿರಿಯಲ್ಲಿ ಕೇವಲ ಗತಿಸಿದ ದೇಹಾತ್ಮಗಳಂತೆ ನೋಡುತ್ತ ಅದರೊಳಗೆ ಇಳಿಯುತ್ತಿದ್ದವು. ಭೂಮಿ ಪಲ್ಲವಿಸಿದ ಪೂರ್ವಿಕರ ನಗೆಯಂತೆ ಹೊಳೆಯುತ್ತಿತ್ತು."[೭]

ಭಾರತೀಯ ಸಮಾಜದಲ್ಲಿ ಬುಡಕಟ್ಟು ಸಮುದಾಯವು ಭೂಸಮಸ್ಯೆಯನ್ನು ಸಾಮಾನ್ಯವಾಗಿ ಎದುರಿಸುತ್ತಿರುವ ಚಿತ್ರಣವು ಈ ಕತೆಯಲ್ಲಿ ವ್ಯಕ್ತವಾಗಿದೆ. ಈ ಹಿನ್ನೆಲೆಯಲ್ಲಿ ದೊಂಬನ ಭೂ ಹೋರಾಟವು ತನ್ನ ಸಮುದಾಯದ ಒಡೆತನಕ್ಕೆ ನಡೆಸಿದಂತಹ ಹೋರಾಟವಾಗಿ ವ್ಯಕ್ತವಾಗಿದೆ.ಇಲ್ಲಿನ ಹೋರಾಟವು ಹಕ್ಕಿನನೆಲೆಯಲ್ಲಿ ವ್ಯಕ್ತವಾಗಿದೆ.

ಭೂಮಿಯ ಸುತ್ತ ಸುತ್ತುವ ಬದುಕು ಜಾಗತಿಕ ಸಂದರ್ಭದ ಹೊಸ ಸಮಸ್ಯೆಗಳಿಗೆ ಸಿಕ್ಕು ನಲುಗುತ್ತದೆ. ಇದರಿಂದ ಹೊರಬರುವ ಶಕ್ತಿಯನ್ನು ತೋರಲು ವಿಫಲವಾಗುತ್ತದೆ. ಆದರೆ ಆಧುನಿಕ ಶಿಕ್ಷಣ ಪಡೆದ ಯಶವಂತ ಮರಳಿ ಮಣ್ಣಿಗೆ ಎಂಬಂತೆ ಈ ಭೂಮಿಯಲ್ಲಿಯೇ ಏನಾದರೂ ಸಾಧಿಸಬೇಕೆಂಬ ಹಂಬಲದೊಂದಿಗೆ ಹೊರಡುವುದು,ಕಡೆಯಲ್ಲಿ ಆಶಾದಾಯಕ ಬೆಳವಣಿಗೆಯಾಗಿದೆ.ವಾಸ್ತವದ ಬೆಂಬಲ ಬೆಲೆ,ಆತ್ಮಹತ್ಯೆಯಂತಹ ಪ್ರಶ್ನೆಗಳಿಗೆ ತೀರಾ ಹತ್ತಿರವಾಗಿ ಕಂಡುಬರುತ್ತದೆ.

"**ಮಣ್ಣು**" ಕತೆಯಲ್ಲಿ ಸಮಕಾಲೀನ ಬದುಕನ್ನು ನೋಡುವ ಬಗೆ, ಇಲ್ಲಿನ ಸಮಸ್ಯೆಗಳ ಸ್ವರೂಪವನ್ನು ಕುರಿತು ವಿವರಿಸಲು ಯತ್ನಿಸುತ್ತದೆ. ಕತೆಯ ಆರಂಭದಲ್ಲಿ ಭೂಮಾಲೀಕತ್ವದ ಊಳಿಗವ್ಯವಸ್ಥೆ ನಶಿಸಿ ಹೋಗಿರುವ ಆಶಯವನ್ನು ವ್ಯಕ್ತಪಡಿಸುತ್ತದೆ. ಈ ಕತೆಯಲ್ಲಿ ಯಶವಂತನ ಅಪ್ಪ ಊರ ಪಟೇಲ, ಯಶವಂತನನ್ನು ದೊಡ್ಡ ವಕೀಲನನ್ನಾಗಿ ಮಾಡಬೇಕೆಂಬ ಹಂಬಲ ಮಣ್ಣುಗೂಡಿ ಹೋಗುತ್ತದೆ. ಕಥಾನಾಯಕ ಯಶವಂತನ ತಂದೆ ಪಟೇಲ ಸಾಲ ಮಾಡಿರುವ ವಿಚಾರದಿಂದ ತನ್ನ ಇಬ್ಬರು ಸಹೋದರರು ಜವಾಬ್ದಾರಿಯಿಂದ ಜಾರಿಕೊಳ್ಳುತ್ತಾರೆ. ಈ ಸಾಲದ ವಿಚಾರ ಜಾಗತಿಕ ಸಂದರ್ಭದ ರೈತರ ಸ್ಥಿತಿಗತಿಯನ್ನು ಬಿಂಬಿಸುವಂತೆ ಕಂಡು ಬರುತ್ತದೆ. ಈ ಜಾಗತಿಕ ವ್ಯವಸ್ಥೆಯು ಭೂಮಾಲೀಕತ್ವವನ್ನು ನಾಶಮಾಡುವ , ಸಾಲಗಾರನಾಗಿ ಮಾಡುವ ಸಂಕೇತವಾಗಿ ಕತೆಯಲ್ಲಿ ಮೂಡಿ ಬಂದಿದೆ. ಈ ಕುರಿತು,"ಸತತವಾಗಿ ಮೂರು ವರ್ಷಗಳಿಂದಲೂ ಮಳೆ ಬಾರದೆ ಬೆಳೆಯೂ ಸಿಗದೆ, ವ್ಯವಸಾಯಕ್ಕೆಂದು ಮಾಡಿದ್ದ ಬ್ಯಾಂಕಿನ ಸಾಲವು ಹೆಬ್ಬಾವಿನಂತೆ ಸುತ್ತಿಕೊಳ್ಳುತ್ತಿದೆ. ಅಪ್ಪ ಹೋಗಿ ಆ ಹೊಲೆಯರ ಮಾದೇವನಿಂದ ಬಡ್ಡಿಗೆ ಮೂವತ್ತು ಸಾಲ ತಂದು ಮಣ್ಣಿಗೆ ಸುರಿದು ಮಣ್ಣು ಸೇರಿಕೊಂಡು ಬಿಟ್ಟ."[೮]

ಭೂಮಾಲೀಕನ ಊಳಿಗಮಾನ್ಯಶಾಹಿ ಮನೋಧರ್ಮವು ಜಾಗತಿಕ ಸಂದರ್ಭದಲ್ಲಿ ಬಾಗಿರುವುದನ್ನು ಕಾಣುತ್ತೇವೆ. ಒಂದು ಕಾಲಕ್ಕೆ ಇಡೀ ಊರನ್ನೇ ತನ್ನ ನಿಯಂತ್ರಣದಲ್ಲಿಟ್ಟುಕೊಳ್ಳುತ್ತಿದ್ದ ಪಟೇಲರು ಇಂದು ಬೀದಿಗೆ ಬಿದ್ದಿರುವ ಸ್ಥಿತಿಯನ್ನು ಕಾಣುತ್ತೇವೆ. ಪಟೇಲರ ಮಕ್ಕಳು ಇರುವ ಭೂಮಿಯನ್ನೆಲ್ಲಾ ಮಾರಿಕೊಂಡು ಬೀದಿಗೆ ಬಿದ್ದಿರುವ ಚಿತ್ರಣವಿದೆ.

ಇಲ್ಲಿ ಬೆಲೆಯ ಪ್ರಶ್ನೆ ಕುರಿತು, "ಕೃಷಿಯಲ್ಲಿ ವೆಂಕೋಬಿ ಆಸಕ್ತಿ ಕಳೆದುಕೊಂಡಿದ್ದ. ಬರಗಾಲವೂ ಆತನ ನಿರಾಶೆಯು ಜೊತೆಯಲ್ಲಿ ಕೂಡಿಕೊಂಡಿತ್ತು. ಸ್ವತಃ ವೆಂಕೋಬಿಯು ತಮ್ಮನ ಜೊತೆ ಎಕರೆಗಟ್ಟಲೆ ಬೆಳೆದಿದ್ದ ಹೂಕೋಸಿಗೆ ಬಿಡಿಗಾಸಿನಷ್ಟೂ ಬೆಲೆ ದಕ್ಕದೆ ಪಾತಾಳಕ್ಕೆ ಬಿದ್ದಂತಾಗಿ ಮರು ವರ್ಷ ಟೊಮೇಟೊ ಬೆಳೆದು ಆ ಬೆಳೆಗೂ ಬಿಡಿಗಾಸೂ ಸಿಗದೆ ಲಾರಿಗಟ್ಟಲೆ ಟೊಮೇಟೊ ಹಣ್ಣುಗಳನ್ನು ಮಾರುಕಟ್ಟೆಯಲ್ಲಿ ಸುರಿದು ಬಂದು ತಾವಿನ್ನು ಯಾಕೆ ಇಷ್ಟೊಂದು ನಷ್ಟದ ಬಾಬತ್ತಿಗೆ ಬಿದ್ದು ಸಾಯಬೇಕೆಂದು ಜಡ್ಡುಗಟ್ಟಿದ್ದ."[೯] ಈ ಮಾತಿನಲ್ಲಿ ಜಾಗತಿಕ ಪರಿಣಾಮ ದಟ್ಟವಾಗಿ ಬೀರಿರುವುದನ್ನು ಕಾಣುತ್ತೇವೆ. ತಾವು ಬೆಳೆದ ಬೆಳೆಗೆ ಮಾರುಕಟ್ಟೆಯಲ್ಲಿ ಅಗತ್ಯ ಬೆಲೆ ದೊರೆಯದೆ ಸಾಯುವ ಮಾತನ್ನು ಆಡುತ್ತಾನೆ. ರೈತನ ಪ್ರಶ್ನೆಯ ಜೊತೆಗೆ ಬೆಲೆಯೂ ಕೂಡಾ ಸೇರಿ ರೈತರ ಆತ್ಮಹತ್ಯೆಯಂತಹ ಪ್ರಸ್ತಾಪಗಳು ಇಲ್ಲಿ ಬರುತ್ತವೆ.

ಯಶವಂತ ಯುನಿವರ್ಸಿಟಿಯಲ್ಲಿ ಕ್ರಾಂತಿಕಾರಿ ಪ್ರೊಫೆಸರ್ ಜೊತೆಗೂಡಿ ಊರಿನಾಸೆ ಬಿಟ್ಟು ಕ್ರಾಂತಿಕಾರಿ ಮನೋಧರ್ಮವನ್ನು ಬೆಳೆಸಿಕೊಂಡು ಸಂಶೋಧನೆಗೆ ತೊಡಗಿಕೊಂಡಿರುತ್ತಾನೆ. ಇದೇ ಕಾಲಕ್ಕೆ ತನ್ನ ತಂದೆ ಪಟೇಲ

ಸಾಯುವ ಮುನ್ನ "ಮಣ್ಣು ಅಂದ್ರೆ ಚಿನ್ನಕಣಪ್ಪಾ, ನಿನ್ನೊಳಗೆ, ನೀ ನಿಂತಿರುವ ನೆಲದೊಳಗೆ ನಿನ್ನ ಕರ್ಮದೊಳಗೆ ಚಿನ್ನದ ಭಂಡಾರವೇ ಇದೆ. ಅದನ್ನು ಯಾವತ್ತೂ ಮರೀಬ್ಯಾಡ. ಅದ ಮಸಿ ಮಾಡ್ಕೋಬ್ಯಾಡ. ನಿನ್ನ ಕಷ್ಟ ಕಾಲದಲ್ಲಿ ಅದೇ ನಿನ್ನ ತಲೆ ಕಾಯೋದು ಮಗನೇ ಎಂದು ಪ್ರಾಣ ಬಿಟ್ಟಿದ್ದರು."[೯] ಯಶವಂತನ ತಂದೆಯಲ್ಲಿ ಮಣ್ಣಿನ ಬಗೆಗಿರುವ ಅನನ್ಯತೆಯನ್ನು ವ್ಯಕ್ತವಾಗುತ್ತದೆ. ಈ ಮಣ್ಣು ತಲ ತಲಾಂತರದಿಂದಲೂ ಬಂದಿದ್ದು,ರೈತರ ಜೀವನಾಧಾರವಾಗಿದ್ದು, ಭೂಮಿ ರೈತರ ಬದುಕನ್ನು ಕಟ್ಟಿಕೊಡುತ್ತದೆ. ಮಣ್ಣು ಶ್ರಮಕ್ಕೆ ತಕ್ಕ ಪ್ರತಿಫಲ ನೀಡುವ ಚಿನ್ನ ಮತ್ತು ಕರ್ಮಭೂಮಿ ಎಂದು ಆತನ ತಂದೆ ಭಾವಿಸಿರುತ್ತಾನೆ. ತನ್ನ ಶ್ರಮಕ್ಕೆ ತಕ್ಕ ಹಾಗೆ ಭೂ ತಾಯಿ ರೈತನನ್ನು ಕಾಯುತ್ತಾಳೆಂಬ ಸಂದೇಶವನ್ನು ಪಟೇಲ ನೀಡುತ್ತಾನೆ. ಇತ್ತ ಯಶವಂತ ವಿಶ್ವವಿದ್ಯಾಲಯ ಕ್ಯಾಂಪಸ್ಸಿನಲ್ಲಿ ಯಮುನಾಳ ಪ್ರೇಮಪಾಶಕ್ಕೆ ಬೀಳುತ್ತಾನೆ.ಆನಂತರದಲ್ಲಿ ಯಶವಂತ ಯಮುನಾಳನ್ನು ಮದುವೆಯಾಗುತ್ತಾನೆ.

ಪ್ರೊಫೆಸರನ ಕ್ರಾಂತಿಕಾರಿ ಮನೋಧರ್ಮವನ್ನು ಜಾಗತಿಕ ಸಂದರ್ಭವು ಹೇಗೆ ದಂಡಿಸುತ್ತದೆ ಎಂಬುದನ್ನು ಇಲ್ಲಿ ಗಮನಿಸಬಹುದಾಗಿದೆ. ಜಾಗತಿಕ ಸಂದರ್ಭವು ಚಳುವಳಿಯನ್ನು ಭಯೋತ್ಪಾದಕನ ರೀತಿಯಲ್ಲಿ ನೋಡುತ್ತದೆ. ಅದನ್ನು ಯಾವ ಬಗೆಯಲ್ಲಿ ಮಟ್ಟಹಾಕಬೇಕೆನ್ನುವ ಸಂಚನ್ನು ರೂಪಿಸಿ ಕ್ರಾಂತಿಕಾರ ಪ್ರೊಫೆಸರನನ್ನು ಭಯೋತ್ಪಾದಕನೆಂದು ಬಿಂಬಿಸಿ ಆತನನ್ನು ಬಂಧಿಸಲಾಗುತ್ತದೆ. ತನ್ನ ಪ್ರೊಫೆಸರನನ್ನು ನಂಬಿದ್ದಕ್ಕೆ ಅವರಿಗಾದ ಅನ್ಯಾಯ ತನಗೂ ಆಗಬಹುದೆಂದು ಊಹಿಸಿ ಆತ ತನ್ನ ಊರಿಗೆ ಮರಳುತ್ತಾನೆ. ಯಶವಂತನು ವಾಸ್ತವ ಬದುಕಿನ ಅರಿವಾಗಿ ತನ್ನೂರಿಗೆ ಮರಳುವಷ್ಟರಲ್ಲಿ ತನ್ನ ಕುಟುಂಬದಲ್ಲಿ ಹಲವು ಅವಘಡಗಳು ಜರುಗಿದುದನ್ನು ಕಾಣುತ್ತಾನೆ. ತನ್ನ ಸಹೋದರ ವೆಂಕೋಬಿಯ ಸ್ಥಿತಿ ಮತ್ತು ತನ್ನ ತಂಗಿ ತ್ರಿವೇಣಿ ಸ್ಥಿತಿ ಎಲ್ಲವೂ ವಿಚಿತ್ರ ರೀತಿಯಲ್ಲಿ ಸಂಭವಿಸಿರುತ್ತದೆ.

ಕೊನೆಗೆ ಈ ಮಣ್ಣಿನ ಬದುಕು ಯಶವಂತನಿಗೆ ಸಹ್ಯವಾಗುತ್ತದೆ. "ಏನನ್ನಾದರೂ ಇಲ್ಲೇ ಈ ಮಣ್ಣೊಳಗೇ ಮಾಡಬೇಕೆಂದು ಯಶವಂತ ಕತ್ತಲೆಯನ್ನು ಬಿಡಿಸಿಕೊಳ್ಳುತ್ತಾ ಮನೆಯ ಕಡೆಗೆ ಹೆಜ್ಜೆ ಕಿತ್ತ."[೧೦] ಯಶವಂತ ಇಲ್ಲಿ ಮರಳಿ ಮಣ್ಣಿಗೆ ಎಂಬಂತೆ ರೈತನಾಗುವ ಹಂಬಲ ವ್ಯಕ್ತಪಡಿಸುತ್ತಾನೆ.ಪುನಃ ಭೂ ಪ್ರಶ್ನೆ ಇಲ್ಲಿ ಕೇಂದ್ರವಾಗಿದೆ.

**ಕೊನೆ ಟಿಪ್ಪಣಿ**


೧. ಎ.ಎಸ್.ಪ್ರಭಾಕರ್, ಕಾಗೋಡು ಚಳವಳಿ ಸುವರ್ಣಸಂಪುಟ, ಪುಟ.೨೭೬

೨.ಮೊಗಳ್ಳಿ ಗಣೇಶ್,ಭೂಮಿ,ಪುಟ ೮೧

೩.ಅದೇ ಪುಟ ೮೧

೪.ಅದೇ ಪುಟ೮೪

೫.ಎ.ಎಸ್.ಪ್ರಭಾಕರ್, ಕಾಗೋಡು ಚಳವಳಿ ಸುವರ್ಣಸಂಪುಟ, ಪುಟ ೮೪

೬.ಮೊಗಳ್ಳಿ ಗಣೇಶ್,ಭೂಮಿ, ಪುಟ೮೪

೭. ಅದೇ ಪುಟ೮೪

೭.ಮೊಗಳ್ಳಿ ಗಣೇಶ್, ಮಣ್ಣು,ಪುಟ ೧೪೧

೮.ಅದೇ ಪುಟ ೧೪೨

೯.ಅದೇ ಪುಟ೧೪೫

೧೦.ಅದೇ ಪುಟ ೧೫೭.

## ೪.೨.೨೧ ಅಮರೇಶ ನುಗಡೋಣಿ : ಜಾಗತಿಕ ವಿದ್ಯಮಾನಗಳಿಂದ ಭೂ ಸಮಸ್ಯೆ

ಅಮರೇಶ ನುಗಡೋಣಿಯವರ ಕತೆಗಳಲ್ಲಿ ಹೈದ್ರಾಬಾದ್ ಕರ್ನಾಟಕದ ದಟ್ಟ ಜೀವನಾನುಭವ, ಅಲ್ಲಿನ ಭಾಷೆಯ ಸೊಗಡು ಅವರ ಕೃತಿಗಳಲ್ಲಿ ವ್ಯಕ್ತವಾಗಿದೆ. ಚಾರಿತ್ರಿಕವಾಗಿ ಹೈದ್ರಾಬಾದ್ ಕರ್ನಾಟಕದ ನಿಜಾಮರ ಮತ್ತು ರಜಾಕರ ಆಡಳಿತದ ಛಾಪು ವ್ಯಕ್ತಗೊಂಡಿರುವುದು ಇವರ ಕಥನಗಳಲ್ಲಿ ಕಂಡುಬರುತ್ತದೆ. ಇಲ್ಲಿನ ಭೂ ವ್ಯವಸಾಯ ಸಂಬಂಧಗಳು ಇಂತಹ ಆಡಳಿತವ್ಯಾಪ್ತಿಗೆ ಒಳಪಟ್ಟಿರುವುದನ್ನು ಕಾಣುತ್ತೇವೆ. ನುಗಡೋಣಿಯವರ ಬಹುತೇಕ ಕತೆಗಳಲ್ಲಿ ಊಳಿಗಮಾನ್ಯಶಾಹಿಯ ವಿರುದ್ಧವಾಗಿ ಸಂಘರ್ಷಕ್ಕಿಳಿಯುವ ಆಶಯಗಳನ್ನು ನೋಡಬಹುದಾಗಿದೆ. ಈ ಹಿನ್ನೆಲೆಯಲ್ಲಿ ಅವರ ಕಥಾಸಂಕಲನಗಳಾದ ಮಣ್ಣು ಸೇರಿತು ಬೀಜ, ತಮಂಧದ ಕೇಡು, ಧರೆ ಉರಿದರೆ ಕಥಾಸಂಕಲನಗಳನ್ನು ಗಮನಿಸಬಹುದಾಗಿದೆ. ಸಮಕಾಲೀನ ಸಂದರ್ಭದ ಭೂಸಮಸ್ಯೆ ಕುರಿತು ಪಕ್ವಕಲ್ಲದೆ ಪರಿಣಾಮಕಾಣಿಸದು ಕತೆಯಲ್ಲಿ ಜಾಗತಿಕ ಚರ್ಚೆ ನಡೆಸಿರುವುದು ವ್ಯಕ್ತವಾಗಿದೆ.

ಹೈದ್ರಾಬಾದ್ ಕರ್ನಾಟಕ ಮೂಲದ ನುಗಡೋಣಿಯವರ ಪ್ರಾದೇಶಿಕತೆ ಅವರ ಬಹುಮುಖ್ಯ ಆಯಾಮವಾಗಿರುವುದನ್ನು ಕಾಣಬಹುದಾಗಿದೆ. ಈ ಪ್ರಾದೇಶಿಕ ಆಯಾಮದ ಜೊತೆಗೆ ಇಲ್ಲಿನ ಭೂ ಪ್ರಶ್ನೆಯ ಕುರಿತು ಎಚ್.ಎಸ್.ರಾಘವೇಂದ್ರರಾವ್ ಅವರು ಹೇಳುವಂತೆ "ಅಲ್ಲಿನ ಜೀವನಕ್ರಮದ ಮುಖ್ಯ ಆಸರೆಯಾದ ವ್ಯವಸಾಯದ ಭೂಮಿಯ ಒಡೆತನವನ್ನು ಅವಲಂಬಿಸಿದ ಉತ್ಪಾದನಾ ಸಂಬಂಧಗಳನ್ನು ಪರಿಶೀಲಿಸುವ ಇತಿಹಾಸ ಮತ್ತೊಂದು ಬಗೆಯದು. ಫ್ಯೂಡಲ್ ವ್ಯವಸ್ಥೆಯ ಶಿಖರಸ್ಥಿತಿಯು ಇಡೀ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿರುವುದು ಈ ಜಿಲ್ಲೆಗಳಲ್ಲಿಯೇ. ಆದರೆ ಸಂಪೂರ್ಣವಾದ ಅಧಿಕಾರವು, ಸಂಪೂರ್ಣವಾದ ದಾಸ್ಯವನ್ನೂ ಹುಟ್ಟಿಸುವುದರಿಂದ ಅಸಹಾಯಕತೆಯ ಫಲವಾದ ಸಮನ್ವಯ, ಸಹಜೀವನಗಳು ಹುಟ್ಟಿಕೊಳ್ಳುತ್ತವೆ. ಇಂಥಕಡೆ ಅಸಮಾನತೆ, ಶೋಷಣೆಗಳನ್ನು ಪ್ರಶ್ನಿಸದೆ ಒಪ್ಪಿಕೊಂಡ ಮೇಲೆ ಉದಯಿಸುವ ಪ್ರೀತಿ, ಸ್ವಾಮಿಭಕ್ತಿ, ಸಮಾಧಾನಗಳಂತಹ ಮೌಲ್ಯಗಳು ಸಹಜವಾಗಿರಬಹುದು. ಆದರೆ ಅವುಗಳ ಬಗ್ಗೆ ನಾಸ್ಟಾಲ್ಜಿಕ್ ಆಗುವುದರ ಔಚಿತ್ಯವು ಪ್ರಶ್ನಾರ್ಹವಾಗುತ್ತದೆ." [೧]

ಆಧುನಿಕ ಭಾರತದ ಸಂದರ್ಭದ ಸಮಕಾಲೀನ ಭೂ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸುವ **"ಪಕ್ವಕಲ್ಲದೆ ಪರಿಣಾಮ ಕಾಣಿಸದು"** ಕತೆಯನ್ನು ಪ್ರಾತಿನಿಧಿಕವಾಗಿ ಗಮನಿಸಲಾಗಿದೆ.ಸಮಕಾಲೀನ ಸಂದರ್ಭದ ಭೂ ಪ್ರಶ್ನೆಗಳನ್ನು ಈ ಕತೆ ಚರ್ಚಿಸುತ್ತದೆ. ದಲಿತರಿಗೆ ಭೂ ಒಡೆತನ ನೀಡುವುದಕ್ಕಾಗಿ ಹೋರಾಟ ನಡೆಯುತ್ತದೆ. ದಲಿತರು ಭೂಮಿಯನ್ನು ನಿರಾಕರಿಸುವ ಹೊಸ ಬಗೆಯ ಚಿತ್ರಣವನ್ನು ಇಲ್ಲಿ ಕಾಣುತ್ತೇವೆ. ಪ್ರಸ್ತುತ ಜಾಗತಿಕ ವಿದ್ಯಮಾನಗಳು ಹುಟ್ಟು ಹಾಕಿರುವ ಹೊಸಬಗೆಯ ಸಮಸ್ಯೆ ಈ ಕತೆಯಲ್ಲಿ ವ್ಯಕ್ತವಾಗಿದೆ.

ಕತೆಯ ಆರಂಭದಲ್ಲಿ ಶರಭನಗೌಡನ ಪಾಳೆಯಗಾರಿಕೆಯ ಪ್ರವೃತ್ತಿ, ಊಳಿಗಮಾನ್ಯಶಾಹಿ ವ್ಯವಸ್ಥೆಯ ನೆಲಕಚ್ಚಿರುವ ಸಂಕೇತವಾಗಿ ಕಂಡುಬರುತ್ತದೆ.ಇಲ್ಲಿ ಆತನ ಮಕ್ಕಳು ದೂರದ ಪಟ್ಟಣಗಳಲ್ಲಿ ನೌಕರಿ ಅರಸಿ ತಾಯಿಯೊಂದಿಗೆ ಪಟ್ಟಣದಲ್ಲಿ ನೆಲೆಸಿದ್ದಾರೆ. ಊರಿನಲ್ಲಿ ೩೭೦ ಎಕರೆ ಭೂ ಒಡೆಯನಾಗಿದ್ದು, ಈತನೊಂದಿಗೆ ಜೀತದಾಳು ದಸ್ತಗಿರಿ ಜೊತೆಗೆ ಹಳ್ಳಿಯಲ್ಲಿ ವಾಸವಾಗಿದ್ದಾರೆ. ದಲಿತ ನಾಯಕ ಚಂದ್ರಪ್ಪ ಮತ್ತು ಗೌಡ ಪರಸ್ಪರ ಮನೆಯಲ್ಲಿ ಭೇಟಿಯಾಗುತ್ತಾರೆ. ಅವರಿಬ್ಬರಲ್ಲೂ ವಾದವಿವಾದಗಳು ನಡೆದು, ಭೂಮಾಲೀಕನ ಗತ್ತು, ಊಳಿಗದ ದರ್ಪಗಳು ವ್ಯಕ್ತವಾಗುತ್ತದೆ.ಅದಕ್ಕೆ ಪ್ರತಿಯಾಗಿ ಚಂದ್ರಪ್ಪ ಬಂದೂಕಿನ ಮೂಲಕ ಬೆದರಿಸಿ, ಭೂಮಾಲೀಕನ ಊಳಿಗದ ದರ್ಪವನ್ನು ಬಾಗುವಂತೆ ಮಾಡುತ್ತಾನೆ.

ಕತೆಯಲ್ಲಿ ತನ್ನ ಮಕ್ಕಳು ಪಟ್ಟಣದಲ್ಲಿ ಸೇರಿ ಕೆಲಸ ಮಾಡುತ್ತಿದ್ದು, ಈ ಮಕ್ಕಳು ತಮ್ಮ ಬಿಡುವಿನ ವೇಳೆಯಲ್ಲಿ ಆಗಾಗ್ಗೆ ತಮ್ಮೂರಿಗೆ ಹೋಗಿ ಬರುತ್ತಿರುತ್ತಾರೆ. ಈ ಗೌಡ ತನ್ನ ಹಿರಿ ಮಗನಿಗೆ ಜಮೀನು ನೋಡಿಕೊಂಡಿರುವಂತೆ ಹೇಳುತ್ತಾನೆ. ಆದರೆ ಹಿರಿಮಗ ತನ್ನ ಅಪ್ಪನಿಗೆ ಇದ್ದು ಬಿದ್ದವರ ಭೂಮಿಯನ್ನು ಕೊಂಡು ಹಾಕಿದ್ದೀಯಾ ಎಂದು ಕೇಳುತ್ತಾನೆ. ಇಂತಹ ಅಗತ್ಯವೇನಿತ್ತು? ಈಗಿರುವ ಭೂಮಿಯನ್ನಾದರೂ ಯಾರು ರಕ್ಷಿಸುತ್ತಾರೆ. ಈ ಗೌಡ ಬಡ ರೈತರ ಭೂಮಿಯನ್ನು ಆಕ್ರಮಿಸುವ ಮತ್ತು ಕೊಳ್ಳುವ ಮೂಲಕ ಭೂಮಾಲೀಕರಾಗಿರುವುದು ತಿಳಿದು ಬರುತ್ತದೆ. ಈ ತಂದೆಯನ್ನು ಮಗ ತಾನು ವಾಸವಿರುವ ಜಾಗಕ್ಕೆ ಕರೆಯುತ್ತಾನೆ.ಆದರೆ, ಈತ ನನಗೆ ಜಮೀನು, ವ್ಯವಸಾಯ ಬಿಟ್ಟು ಬೇರೇನು ಬರುವುದಿಲ್ಲ.ಇಲ್ಲಿ ಮಾಡುತ್ತಿರುವುದು

ನಿಮಗೋಸ್ಕರ ಎಂದು ಗೌಡ ಪ್ರತಿಕ್ರಿಯಿಸುತ್ತಾನೆ. ನೀನೇ ಬಂದು ವ್ಯವಸಾಯ ಮಾಡು ತನ್ನ ಮಗನಿಗೆ ಸೂಚಿಸುತ್ತಾನೆ. ಇಲ್ಲಿ ಆಸ್ತಿಯ ಒಡೆತನ ವಂಶಪರಂಪರೆಯಾಗಿ ಮುಂದುವರೆಸಿಕೊಂಡು ಹೋಗುವಂತೆ ತನ್ನ ಮಗನಿಗೆ ಗೌಡ ಸೂಚಿಸುತ್ತಾನೆ.

ಆದರೆ ಆಧುನಿಕ ವಿಚಾರ ಹೊತ್ತ ಹಿರಿಮಗ ಪ್ರತಿಕ್ರಿಯಿಸಿದ್ದು ಹೀಗೆ"ಅಪ್ಪ ನಿನ್ನ ಕೆಲವು ವಿಷಯಗಳು ತಿಳಿಯುವುದಿಲ್ಲ. ನಿನ್ನ ವ್ಯವಸಾಯದ ಒಂದು ವರ್ಷದ ಉತ್ಪನ್ನ ಏನಿದೆ. ಅದು ನನ್ನ ಒಂದು ತಿಂಗಳ ಗಳಿಕೆಗೆ ಸಮಯಿಲ್ಲ. ಏನೋ ನಿನ್ನ ಸ್ವಭಾವ ನಗರಕ್ಕೆ ಒಗ್ಗುವುದಿಲ್ಲ. ಹಳ್ಳಿಯಲ್ಲಿ ನೆಮ್ಮದಿಯಿಂದ ಇರುವ ನಿನ್ನ ಸ್ವಭಾವ ಡಾಕ್ಟರ್ ಆಗಿ ನಾನು ಅರಿತಿದ್ದೀನಿ. ವ್ಯವಸಾಯದಲ್ಲಿ ಸುಖವಿಲ್ಲ ಹೀಗೆ ಮುಂದುವರಿದರೆ ನೀನು ಭಾರಿ ಸಾಲಗಾರ ಆಗ್ತಿದ್ದಿ."[೨] ಇದು ಸಮಕಾಲೀನ ಸಂದರ್ಭದ ರೈತನ ಸಮಸ್ಯೆ ಕುರಿತು ವಿಚಾರವನ್ನು ಪ್ರಸ್ತಾಪಿಸುತ್ತದೆ. ಇದು ಆಧುನಿಕ ಸಂದರ್ಭದ ಭೂ ಪ್ರಶ್ನೆ ಹಾಗೂ ವ್ಯವಸಾಯದ ಉತ್ಪನ್ನವನ್ನು ಲಾಭದ ಲೆಕ್ಕದಲ್ಲಿ ನೋಡುವ ಕ್ರಮ ಇಲ್ಲಿದೆ. ವ್ಯವಸಾಯದಲ್ಲಿ ಹಣ ತೊಡಗಿಸಿದರೆ ಸಾಲಗಾರನಾಗುವ ಬಗೆ, ವ್ಯವಸಾಯದಲ್ಲಿ ಸುಖವಿಲ್ಲ ಎಂಬ ಮಾತುಗಳ ಮೂಲಕ ಜಾಗತಿಕ ಸಂದರ್ಭದ ಪರಿಣಾಮದ ನೆರಳುಗಳು ಇಲ್ಲಿ ಸ್ಪಷ್ಟವಾಗಿವೆ. ತಿಂಗಳ ಸಂಬಳಗಳು ಲಕ್ಷಗಟ್ಟಲೆ ಇರುವಾಗ ಭೂಮಿಯ ಬಗೆಗಿರುವ ಪ್ರೀತಿ ಆಕಾಂಕ್ಷೆಗಳು ಇಲ್ಲಿ ಲಾಭದ ಪ್ರಶ್ನೆಯಾಗಷ್ಟೇ ಕಂಡುಬರುತ್ತದೆ.

ತನ್ನ ಹಿರಿ ಮಗ ತನ್ನ ತಂದೆಗೆ ಅಪ್ಪನಿಗೆ ಹೇಳುತ್ತಾ ವಿದೇಶಿ ಕಂಪನಿಗಳು ನಮ್ಮ ಸರಹದ್ದಿನಲ್ಲಿ ಸ್ಥಾಪನೆ ಆಗಲಿವೆ ಎಂದು ಸೂಚಿಸುತ್ತಾನೆ. ಆ ಕಂಪೆನಿಗಳಿಗೆ ಬಹಳ ಭೂಮಿ ಅಗತ್ಯವಿದ್ದು,ಆಗ ನಮ್ಮ ಜಮೀನಿಗೆ ಬೆಲೆ ಬರುತ್ತದೆ ಎಂದು ತನ್ನ ಆಶಯವನ್ನು ವ್ಯಕ್ತಪಡಿಸುತ್ತಾನೆ. ಆದ್ದರಿಂದ ತನ್ನ ತಂದೆಯನ್ನು ಊರಿನಲ್ಲಿ ಎರಡುವರ್ಷದವರೆಗೆ ಇರುವಂತೆ ಹೇಳುತ್ತಾನೆ. ಇಲ್ಲಿ ನಮ್ಮ ನೆಲವನ್ನು ಭಾರಿ ಬೆಲೆಗೆ ವಿದೇಶಿ ಕಂಪನಿಗಳಿಗೆ ಮಾರುವ ಮಾತನ್ನು ಆಡುತ್ತಾನೆ. ವಿಶೇಷ ಆರ್ಥಿಕ ವಲಯದ ಭೂ ಆಕ್ರಮಣದ ಹುನ್ನಾರಗಳು ಈ ಕತೆಯಲ್ಲಿ ಧ್ವನಿತವಾಗುತ್ತದೆ. ಇದು ಫಲವತ್ತಾದ ಕೃಷಿ ಭೂಮಿಯನ್ನು ಲಕ್ಷಾಂತರ ರೂ.ಗಳಿಗೆ ಮಾರುವ ಮತ್ತು ಲಾಭದಾಯಕ ದೃಷ್ಟಿಯಿಂದ ನೋಡುವ ಬಗೆಯಾಗಿದೆ.

ಅಷ್ಟರಲ್ಲೇ ಭೂಮಾಲೀಕ ಗೌಡನಿಗೆ ಆಗಾಗ್ಗೆ ಅಪರಿಚಿತ ವ್ಯಕ್ತಿಗಳು, "ಗೌಡ್ರೇ ನೀವು ಭಾರಿ ಜಮೀನ್ದಾರರು. ನಿಮ್ಮ ಜಮೀನಿನಲ್ಲಿ೧೫ ರಿಂದ ೨೦ ಭಾಗ ನಿಮ್ಮೂರಿನ ಬಡವರಿಗೆ ಹಂಚಿದರೆ ಭೂರಹಿತರೂ ಅಸ್ತಿತ್ವ ಪಡಿತಾರೆ"[೩] ಎಂಬ ಮಾತುಗಳ ಮೂಲಕ ಫೋನಿನಲ್ಲಿ ಎಚ್ಚರಿಸುತ್ತಾರೆ. ಈ ಊರಿನ ಭೂರಹಿತ ಗೇಣಿರೈತರಿಗೆ ಭೂಮಿಯನ್ನು ನೀಡುವಂತೆ ಎಚ್ಚರಿಕೆ ಮಾತುಗಳು ಬರುವುದು.ನಕ್ಸಲ್ ಚಳವಳಿಯ ಮುನ್ಸೂಚನೆಯಂತಿದೆ.ಈ ಬೆಳವಣಿಗೆಯನ್ನು ಗಮನಿಸಿದ್ದ ಗೌಡ ಭೂಮಿಯನ್ನು ಭೂರಹಿತರಿಗೆ ನೀಡುವಂತೆ ನಿರ್ಧಾರ ಮಾಡುತ್ತಾನೆ.

ಈ ಸಂದರ್ಭದಲ್ಲಿ ಗೌಡರು ಹೋರಾಟಗಾರ ಚಂದ್ರಪ್ಪನೊಂದಿಗೆ ಸಾಕಷ್ಟು ವಾದವಿವಾದಗಳು ನಾಟಕೀಯವಾಗಿ ನಡೆಯುತ್ತದೆ.ಈ ನಾಯಕನಿಗೆ ಇದೊಂದು ರೀತಿ ದಂಧೆ ಮಾಡಿಕೊಂಡಿದ್ದೀಯಾ ಎಂದು ಗೌಡ ಛೇಡಿಸುತ್ತಾನೆ. "ಗೌಡ್ರೇ ದಂಧೆ ಅಂತಂದು ನನ್ನ ಅವಮಾನ ಮಾಡಿದ್ದೀರಿ ಹೋರಾಟ ಅನ್ರಿ, ಚಳುವಳಿ ಅನ್ರಿ, ಇದು ಅಸ್ತಿತ್ವ ಇಲ್ಲದ ಜನರ ಪರ ಹೋರಾಟ ಭೂರಹಿತರಿಗೆ ಅಸ್ತಿತ್ವ ನೀಡುವ ಚಳುವಳಿ, ಚಂದ್ರಪ್ಪ ಗಂಭೀರವಾಗಿ ಹೇಳಿದ ಆತನ ಉಸಿರಾಟ ಬಿಸಿಯಾಯ್ತು ಗೌಡನಿಗೆ ಭಂಡಧೈರ್ಯಇನ್ನೂ ಇತ್ತಲ್ಲ. ಭಪ್ಪರೆ ಮಗನೆ ಚಳುವಳಿ ಹೋರಾಟ ತಮ್ಮಾ. ಬ್ರಿಟಿಸರನ್ನ ನಿಜಾರಮರನ್ನ, ರಜಾಕಾರರನ್ನ ಈ ಪ್ರಾಂತ, ದೇಶ ಬುಟ್ಟು ಓಡಿಸೋ ಚಳುವಳಿ ಸತ್ಯಾಗ್ರಹ ಮಾಡಿದ್ದೇನು?"[೪] ಎಂದು ಪ್ರಶ್ನಿಸುತ್ತಾರೆ.

ಈ ಕತೆಯ ನಾಯಕ ಚಂದ್ರಪ್ಪನ ಹೋರಾಟದ ಹಿಂದೆ ಭೂರಹಿತರ ಬದುಕಿಗೆ ಅಸ್ತಿತ್ವ ಕಲ್ಪಿಸಿಕೊಡಲು ಯತ್ನಿಸುತ್ತಿದ್ದಾನೆ. ಭೂರಹಿತರ ಪರವಾದ ಹೋರಾಟವಾದರೂ ಇದಕ್ಕೆ ಭೂರಹಿತರು ಪ್ರತಿಕ್ರಿಯಿಸಿದ್ದು,ಭೂಮಿಯನ್ನು ನಿರಾಕರಿಸುವುದರ ಮೂಲಕ ಎಂಬುದನ್ನು ಗಮನಿಸಬಹುದು.ಈ ಭೂ ಹೋರಾಟವು ಭೂಹೀನರು ಭೂಮಿಯನ್ನು ನಿರಾಕರಿಸುವುದರಿಂದ ಹೋರಾಟವು ವಿಫಲತೆಯ ಹಾದಿಹಿಡಿಯುತ್ತದೆ.

ಹೋರಾಟಗಾರ ಚಂದ್ರಪ್ಪನೊಂದಿಗೆ ಬಿರುಸಾದ ಮಾತುಕತೆಯಲ್ಲಿ "ಇಲ್ಲ, ಇಲ್ಲ ಗೌಡ್ರೇ, ಭೂರಹಿತರಿಗೆ ಅದೂ ನಿಮ್ಮ ಜಮೀನಿನಲ್ಲಿ ಹಿಂದಿನಿಂದಲೂ ದುಡಕಂಡು ಬಂದ ನಿಮ್ಮ ಕೇರಿ ಮಂದಿಗೇ ಬದುಕಲು ಭೂಮಿ

ಹಂಚ್ರಿ ಅಂತ ಕೇಳ್ತೀವಿ. ಮನ ಒಲಿಸ್ತೀವಿ. ಯಾಕಂದ್ರ ಈಗ ನೋಡ್ರಿ ಗೌಡ್ರೇ, ನಿಮ್ಮ ಆಸ್ತಿಮ್ಯಾಲೆ ನಿಮ್ಮ ಮಕ್ಕಳಿಗೆ ಬಾಳ ಆಶೆಯೇನಿಲ್ಲ. ನಿಮ್ಮೂರಿನ ಕೂಲಿಕಾರರು, ಬಡವರು ಕೇರಿ ಮಂದಿಗೆ ಭೂಮಿ ಇಲ್ಲ. ಇವರೇ ನಿಮ್ಮ ನಿಜವಾದ ಮಕ್ಕಳು. ನೀವು ಇವರಿಗೆಲ್ಲ ಭೂಮಿ ಕೊಟ್ಟರೆ, ಈ ಜನ , ಈ ದೇಶದ ಜನ, ಮೊದಲ ಸಲ ತಮ್ಮ ದೇಶದಾಗ ಅಸ್ತಿತ್ವ ಪಡಿತಾರ. ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಯಾವ ದೇಶದಲ್ಲಾದರೂ ಅಸ್ತಿತ್ವ ಪಡೆಯುಷ್ಟು ಶಕ್ತಿವಂತರು. ನೀವೇ ಯೋಚ್ನೆ ಮಾಡ್ರೀ "[೫] ಕೂಲಿಕಾರರ, ಬಡವರ ಪ್ರಶ್ನೆ, ಅಸ್ತಿತ್ವದ ಪ್ರಶ್ನೆಯಾಗಿ ಈ ಹೋರಾಟದ ಆಶಯಗಳು ವ್ಯಕ್ತವಾಗುತ್ತವೆ. ಭೂ ಒಡೆತನ ಪ್ರಶ್ನೆಯನ್ನು ಈ ಚಳುವಳಿ ಗಂಭೀರವಾಗಿ ಪರಿಗಣಿಸಿದೆ.

ಈ ಹೋರಾಟದ ಸಂದರ್ಭದಲ್ಲಿ ಭೂಮಿಯನ್ನು ಭೂರಹಿತರಿಗೆ ನೀಡುವಂತೆ ಗೌಡ ತನ್ನ ಸಂಕಷ್ಟದ ಸಮಯದಲ್ಲಿ ಸಲಹೆ ಸೂಚನೆಗಳನ್ನು ಪಡೆಯುತ್ತಿದ್ದ ಮಹಾಂತ ತಾತನ ಬಳಿ ಈ ಸಲಹೆ ಪಡೆದುಬಂದಿರುತ್ತಾನೆ. "ನಿಮ್ಗೆ ನೂರಾರು ಎಕರೆ ಭೂಮಿ ಇದೆ. ಕಾನೂನು ಪ್ರಕಾರ ಆಸ್ತಿ ಮಾಡುವ ಹಕ್ಕು ವ್ಯಕ್ತಿಗಳಿಗೆ ಇದೆ. ಆದ್ರೆ ನಿಮ್ಮ ಮಕ್ಕಳು ಒಳ್ಳೆ ಸ್ಥಿತಿಯಲ್ಲಿದ್ದಾರೆ. ಈ ನಿಮ್ಮ ಭೂಮಿಯ ಉತ್ಪನ್ನ ಅವರಿಗೆ ಕೇವಲ ಅನ್ನಿಸಬಹುದು. ಅವರಿಗೆ ನಿಮ್ಮ ಈ ಭೂಮಿ ಮ್ಯಾಲೆ ಗಮನ ಇಲ್ಲ. ಆಶೇನೂ ಇಲ್ಲ. ಜಮೀನ್ದಾರರ ವಿರುದ್ಧ ಹೋರಾಡುವ ಗುಂಪಿನವರ ವಿಧಾನದ ಬಗ್ಗೆ ಸರಕಾರ ವಿಚಾರ ಮಾಡ್ತದ. ನೀವು ಬಡವರಿಗೆ ತಕ್ಕಮಟ್ಟಿನ ಭೂಮಿ ಹಂಚಿ ಬಿಡಿ ಈಗ ಬಂದಿರುವ ಅಪಾಯ ತಪ್ಪುತ್ತದೆ ಲೋಕಕ್ಕೆ ನಿಮ್ಮಿಂದ ಒಳ್ಳೆಯ ಕಾಣಿಕೆನೂ ಸಲ್ಲುತ್ತದೆ."[೬]

ಈ ಹಿನ್ನೆಲೆಯಲ್ಲಿ ಮಹಾಂತ ತಾತ ಹೇಳಿದ ಸಲಹೆಯಿಂದಾಗಿ ಭೂ ರಹಿತರಿಗೆ ಭೂಮಿಯನ್ನು ಹಂಚಲು ಗೌಡರು ನಿರ್ಧರಿಸುತ್ತಾರೆ. ಆದರೆ ತನ್ನೂರಿನ ಗೇಣಿರೈತರಿಗೆ, ಕೂಲಿಗಾರರಿಗೆ, ಬಡವರಿಗೆ ಗೌಡರೇ ಕರೆದು ಭೂಮಿಯನ್ನು ನೀಡಲು ಮುಂದಾಗುತ್ತಾರೆ. ಆದರೆ ಅವರುಗಳೆಲ್ಲಾ ಭೂಮಿಯನ್ನು ನಿರಾಕರಿಸುವುದನ್ನು ಗಮನಿಸಬಹುದು.

"ವಡ್ಡರ ಮಲ್ಲ, ಜಮೀನು ತಗಂಡು ನಾವೇನು ಮಾಡಾಮಿ ತಂದೆ. ಹಿಂಗಂತೀನಿ ಅಂತ ಮುಖ ಕರ್ರಗ ಮಾಡಬ್ಯಾಡ್ರೀಯಪ್ಪ ನಮ್ಮ ಸೀಮೆಗೆ ಮಳೆ ಬೀಳದ ಕಮ್ಮಿ. ಅದ್ಯಾವುದೋ ಡ್ಯಾಮಿನಿಂದ ನೀರು ಬರ್ತಾವು, ನೀರು ಬರ್ತಾವು ಅಂತ ತಾತ ಅಂತಿದ್ದ. ನಮ್ಮಪ್ಪನೂ ಹೇಳ್ತಿದ್ದ. ನನ್ನ ಕಾಲಕ್ಕೂ ನಮ್ಮ ಸೀಮೆಗೆ ನೀರಾವರಿ ಬರ್ಲಿಲ್ಲ. ಬಂದ್ರೂ ಸುಖಾ ಇಲ್ಲಂತ ಕೆಳಗಡೆ ಸೀಮೆ ಮಂದಿ ಹೇಳ್ತಾರ ಜಮೀನ್ದಾಗ ಸುಖಾಯಿಲ್ಲ ಅಂತ ಕೂಲಿ ಮಾಡಾಕ ರೈತ ಮಂದಿ ನಡದಾರ. ಗೌಡ್ರ"[೭] ಇಲ್ಲಿ ಜ್ವಲಂತವಾಗಿ ಕಾಡುತ್ತಿರುವ ನೀರಿನ ಪ್ರಶ್ನೆ ಇಲ್ಲಿ ವ್ಯಕ್ತವಾಗುತ್ತದೆ. ನೀರಾವರಿ ಬಂದರೂ ಸಹ ಈ ಭೂಮಿಯ ಸತ್ವ ಆರಿಹೋಗಿದೆ ಎಂಬ ಹೊಳಹು ವ್ಯಕ್ತವಾಗುತ್ತದೆ. ಭೂಮಿಯನ್ನು ನಿರಾಕರಿಸುವುದಕ್ಕೆ ವ್ಯವಸಾಯದಿಂದ ಆದಾಯ ಏನು ಇಲ್ಲ ಎಂಬುದು ಸ್ಪಷ್ಟವಾಗಿ ಇಲ್ಲಿನ ಭೂಹೀನರ ಚಿಂತನೆಯಾಗಿದೆ. ಇದು ಕೂಡ ಪ್ರಕೃತಿ ವಿಕೋಪದಿಂದ ಉದ್ಭವವಾದ ಭೂಸಮಸ್ಯೆಯಾಗಿದೆ.

ಆಧುನಿಕ ಸಂದರ್ಭದಲ್ಲಿ ವ್ಯವಸಾಯದಿಂದ ಸಾಲ ಮಾಡಿಕೊಂಡು ಆತ್ಮಹತ್ಯೆ ನಡೆದ ಪ್ರಸಂಗಳನ್ನು ನಾಡಿನ ಅನೇಕ ಭಾಗಗಳಲ್ಲಿ ಘಟಿಸಿವೆ. ಈ ಕತೆಯಲ್ಲೂ ಆತ್ಮಹತ್ಯೆಯಂತಹ ಪ್ರಶ್ನೆಗಳಿಂದಾಗಿ ಭೂಮಿಯನ್ನು ನಿರಾಕರಿಸುವುದನ್ನು ಗಮನಿಸಬಹುದಾಗಿದೆ.ಇದು ವಡ್ಡರ ಮಲ್ಲನ ಮಾತಿನಲ್ಲಿ ವ್ಯಕ್ತವಾಗುತ್ತದೆ. "ಗೌಡ,ಕಿಸಾನ್ ಮಂದಿ ಜಮೀನು ಐತಂತ. ಅದನ್ನ ನಂಬಿಕೊಂಡು ಒಕ್ಕಲತನ ಮಾಡಿ ಮಾಡಿ ಸಾಲ ಮಾಡಿಕೊಂಡು ತೀರಿಸಕ ಆಗ್ದೆ ಸತ್ತು ಸತ್ತು ಹೋಗ್ಯಾರ. ನಮ್ಮ ತಾಲ್ಲೂಕದಾಗ ಸತ್ತಾರಲ್ಲ ಗೌಡ. ನಿನ್ಗ ತಿಳಿಲಾರದ್ದೇನಲ್ಲ."[೮]

ಗ್ರಾಮೀಣ ಪ್ರದೇಶದಲ್ಲಿ ನೌಕರಶಾಹಿ ವ್ಯವಸ್ಥೆಯ ಪರಿಣಾಮ ಎಷ್ಟರ ಮಟ್ಟಿಗೆ ಬೀರಿದೆ ಎಂದರೆ ಭೂ ವ್ಯವಸಾಯ ಸಂಬಂಧಗಳನ್ನು ಕಳಚಿಕೊಳ್ಳುತ್ತವೆ.ನೌಕರಶಾಹಿ ವೃತ್ತಿ ಬದುಕನ್ನು ರೈತರು ಅಪ್ಪಿಕೊಂಡಿರುವುದು ಇಲ್ಲಿ ವ್ಯಕ್ತವಾಗುವುದನ್ನು ಗಮನಿಸಬಹುದು. "ಖರೇ ಅದ. ಗೌಡ, ಮಲ್ಲ ಅಂಬೋದು ಖರೇ ಅದ. ನಮ್ಮೂರಾಗ ಹತ್ತು ಹದಿನೈದು ಕೂರಿಗೆ ಜಮೀನಿದ್ದ ಮಂದಿ ಸಾಲ ಮಾಡಿ ಕೊನಿಗಿ ಸಡಕ್ ಕೆಲ್ಸಕ್ಕೆ ನಿಂತಾರ. ನಿಮ್ಗ ಗೊತ್ತದಲ್ಲ. ಬಾಳ ಮಂದಿ ಜಮೀನ್ದಾಗ ಫಾಯಿದಾ ಇಲ್ಲಂತ ನಿಮ್ಗ ಸತ್ತದಾಗ ಮಾರಿ ಮಾರಿ ಹೋಗ್ಯಾರ."[೯] ಇಲ್ಲಿ ಬದುಕಿನ ಪ್ರಶ್ನೆ ಬಹುಮುಖ್ಯವಾಗಿದ್ದು, ವ್ಯವಸಾಯದಿಂದ ಬದುಕು ಸಾಗುವುದಿಲ್ಲ ಎಂಬ ಸತ್ಯವನ್ನು ಭೂಹೀನ ರೈತರು ಕಂಡುಕೊಂಡಿದ್ದಾರೆ. ಹೀಗಾಗಿ ನೌಕರಿ ಹಿಡಿಯುವಲ್ಲಿ ಎಲ್ಲಾ ವರ್ಗದ ಜನರು ನಗರ ಪಟ್ಟಣಗಳಲ್ಲಿ ನೆಲೆಸುತ್ತಿರುವುದು ಕಂಡುಬರುತ್ತದೆ. ಭೂಮಿಯನ್ನು ನಿರಾಕರಿಸುವ ಪ್ರಕ್ರಿಯೆ ಜೊತೆಗೆ ನಗರದ ಬದುಕು, ನೌಕರಿ ಬದುಕನ್ನು

ಆಶ್ರಯಿಸುವ ನೆಲೆ ಈ ಕತೆಯಲ್ಲಿ ವ್ಯಕ್ತವಾಗುತ್ತದೆ.

"ಗೌಡ, ನಿಮ್ಗ ನಾವೇನು ಹೇಳಮಿ? ಈಗ ಬಡಾಸಡಕ್ ಕೆಲ್ಸಕ್ಕೆ ಹೋದ್ರ ವಾರಕ್ಕೆ ಸಾವುರ ರೂಪಾಯಿ ಸಿಗ್ತವ. ಗಂಡ ಹೆಣ್ತಿ ಹೋದ್ರಕ ನಮ್ಮ ಜೀವನಕ್ಕ ತ್ರಾಸಿಲ್ಲ. ಈಗ ನೋಡ್ರಿ, ನನ್ನ ಮಗ ಓದ್ಯಾನ, ರಾಮನ ಮಗ್ಳು ಓದ್ಯಾಳ. ಕೇರ್‍ಯಾಗ ದುಡಕಂಡು ತಿಂಬ ಮಂದಿ ಈಗೀಗ ಶಾಲಿ ಕಲತು ಕುಂತಾವ. ನಿಮ್ಮ ಮಕ್ಕಳು ದೊಡ್ಡ ದೊಡ್ಡ ಕೆಲ್ಸದಾಗರ ಅಂಬೋದು ಕೇಳೀವಿ ಅವುರಿಗೆ ಹೇಳ್ರಿ ನಮ್ಮ ಮಕ್ಕಳಿಗೆ ಒಂದು ಸಣ್ಣ ಸಣ್ಣ ಚಾಕ್ರಿ ಕೊಡ್ಸಿದ್ರ ತಿಂಗ ತಿಂಗಳ ಪಗಾರ ಬರುವಂತೆ ಆದ್ರೆ ನಮ್ಗ ಪಾಡ."[೧೦]

ವ್ಯವಸಾಯ ಆದಾಯ ವರ್ಷಕ್ಕೊಮ್ಮೆ ಅಥವಾ ಆರು ತಿಂಗಳಿಗೊಮ್ಮೆಯಾದರೆ ನಗರದ ನೌಕರಿಗೆ ತಿಂಗಳ ತಿಂಗಳ ಸಂಬಳ ವಾರಕ್ಕೆ ಸಾವಿರ ದುಡಿಯುವ ಹಂಬಲವು ಈ ಹಳ್ಳಿಗರಿಗೆ ಇದ್ದು,ನಗರದ ಬದುಕು ಆಕರ್ಷಣೆಯಾಗಿ ರೈತರಿಗೆ ಕಂಡಿದೆ.ಭೂಮಿಯ ನಿರಾಕರಣೆ ಗೌಡನಿಗೆ ಅವಮಾನ ಮಾಡಿದಂತಾಗುತ್ತದೆ. "ದಸ್ತಗಿರಿ, ನನ್ನ ಜಮೀನು ಪುಗಸಟ್ಟೆಯಾಗಿ ಅಭಿಮಾನದಿಂದ ಕರದು ಕೊಡಾಕ ಹೋದ್ರ ಈ ಮಂದಿ, ನಮ್ಮೂರಿನ ಮಂದಿ ಬ್ಯಾಡಂದ್ರಪ್ಪ, ನನ್ಗ ಅವಮಾನ ಮಾಡಿದ್ರಲ್ಲ?"[೧೧] ಎಂದು ತನ್ನ ಅಳಲನ್ನು ಹೇಳಿ ತನ್ನ ಆಳು ದಸ್ತಗಿರಿಯನ್ನು ಕೇಳುತ್ತಾನೆ. ಈ ದಸ್ತಗಿರಿ ಗೌಡ ಪಟ್ಟಣ ಸೇರುತ್ತೇನೆಂದಾಗ ನಾನೂ ಕೂಡಾ ನಿಮ್ಮ ಜೊತೆಗೆ ಬಂದು ಚಾಕ್ರಿಮಾಡಿಕೊಂಡಿರುತ್ತೇನೆ ಎಂಬುದಾಗಿ ತಿಳಿಸುತ್ತಾನೆ. ಸ್ವತಃ ಮನೆಯಾಳಾದ ದಸ್ತಗಿರಿ ಕೂಡಾ ಭೂಮಿಯನ್ನು ನಿರಾಕರಿಸುತ್ತಾನೆ.

ಇಲ್ಲಿ ಹೋರಾಟಗಾರ ಚಂದ್ರಪ್ಪನಿಗೆ ಚಳುವಳಿಯಿಂದ ಜಯ ದೊರೆತರೂ ಅಂತಿಮವಾಗಿ ಭೂಮಿ ನಿರಾಕರಣೆಯೊಂದಿಗೆ ಚಳವಳಿಯ ವಿಫಲತೆಯ ಹಾದಿಯತ್ತ ಸಾಗುತ್ತದೆ. ಈ ಕತೆಯು ಜಾಗತಿಕ ಸಂದರ್ಭದ ಭೂ ಸಮಸ್ಯೆಯನ್ನು ಕುರಿತು ಚರ್ಚಿಸುತ್ತದೆ. ಇಲ್ಲಿ ಭೂಮಿಯನ್ನು ಲಾಭದ ಪ್ರಶ್ನೆಯಾಗಿ ನೋಡಲಾಗುತ್ತದೆ. ಭೂಹೀನ ರೈತರಿಗೆ ಭೂಮಿ ಅಪಾಯ ಸಂಕೇತವಾಗಿ ಕಂಡುಬರುವುದರಿಂದ ನೌಕರಶಾಹಿತ್ವದತ್ತ ಇವರು ಮುಖಮಾಡಿರುವುದು ವ್ಯಕ್ತವಾಗುತ್ತದೆ. ಇಂತಹ ಜಾಗತೀಕರಣದ ಆಶಯಗಳು ಭೂನಿರಾಕರಣೆಯಿಂದಾಗಿ ಭೂಮಿಯಿಂದ ವಿಮುಖತೆಯತ್ತ ಸಾಗುವುದನ್ನು ಕತೆಯು ಧ್ವನಿಸುತ್ತದೆ.

"ಬೇಟೆ" ಕತೆಯು ಸಹ ಭೂಮಿಗಾಗಿ ಹೋರಾಟ ನಡೆಸುವುದನ್ನು ಕಾಣುತ್ತೇವೆ. ಮಲ್ಲಿಹಳ್ಳಿಯ ಜಮೀನ್ದಾರ ಗೌಡನಿಂದ ಒಂದು ಕೂರಗಿ ಹೊಲವನ್ನು ಆತನ ಮನೆಯಲ್ಲಿ ಜೀತ ಮಾಡುತ್ತಿದ್ದ ಚನ್ನಪ್ಪ ಪಡೆಯುತ್ತಾನೆ. ಚನ್ನಪ್ಪ ಮಗ ಪರಮಶಿವಯ್ಯ ಲಿಂಗದಹಳ್ಳಿಯ ಗಂಗವ್ವನನ್ನು ಮದುವೆಯಾಗುತ್ತಾನೆ. ಹಿರೇಗೌಡ ನೀಡಿದ ಊರ ಹೊರಗಿನ ಗುಡ್ಡದ ಬಳಿಯ ಹೊಲಕ್ಕೆ ತಾವೇ ಭೂಕಂದಾಯ ಕಟ್ಟಿ ತಮ್ಮ ಹೆಸರಿಗೆ ಜಮೀನು ಮಾಡಿಸಿಕೊಂಡು ಬದುಕುತ್ತಿರುತ್ತಾರೆ. ಗಂಗವ್ವ ಕೂಲಿಕೆಲಸ ಮಾಡಿ ಸಂಜೆ ಹೊತ್ತಿನಲ್ಲಿ ತಮ್ಮ ಜಮೀನನ್ನು ಹಸನುಗೊಳಿಸಿ ಭೂಮಿಯಲ್ಲಿ ಬೆಳೆಯನ್ನು ತೆಗೆಯುತ್ತಾಳೆ. ಇದನ್ನು ಪರಮಶಿವಯ್ಯನ ಸೋಮಾರಿ ತಮ್ಮ, ಈರಪ್ಪ ಕೇರಿ ಮಂದಿಯನ್ನು ಕಲೆಹಾಕಿ ಆ ಭೂಮಿಯಲ್ಲಿ ಪಾಲು ಕೇಳುತ್ತಾನೆ. ಈ ಪಾಲಿಗಾಗಿ ಜಗಳವಾಗಿ ತಮ್ಮ ಈರಪ್ಪ ಸಾವಪ್ಪುತ್ತಾನೆ. ಇದರಿಂದಾಗಿ ಈ ದಂಪತಿಗಳಿಬ್ಬರು ಊರನ್ನು ಬಿಟ್ಟು ಲಿಂಗದಹಳ್ಳಿಯಲ್ಲಿ ನೆಲೆಸುತ್ತಾರೆ.

ಇತ್ತ ಹಿರೇಗೌಡನ ಮಗ ಪಂಪಾಪತಿ ಗೌಡ ಪರಮಶಿವಯ್ಯನ ಭೂಮಿಯನ್ನು ಕಬಳಿಸಲು ಸಂಚು ರೂಪಿಸುತ್ತಾನೆ. ಇವರ ಭೂಮಿಯಲ್ಲಿ ಕಾರ್ಖಾನೆಯನ್ನು ಸ್ಥಾಪಿಸಲು ಯೋಜನೆ ರೂಪಿಸುತ್ತಾನೆ. ಆ ಮೂಲಕ ಈ ದಂಪತಿಗಳಿಗೆ ಕಾರ್ಖಾನೆಯಲ್ಲಿ ಕೆಲಸ ಒದಗಿಸುವ ಭರವಸೆ ನೀಡುತ್ತಾನೆ. ಆದರೆ ಈ ದಂಪತಿಗಳು ಈ ಭೂಮಿಯನ್ನು ಹಸನು ಮಾಡಿದ ಕಷ್ಟಗಳನ್ನು ಹೇಳಿಕೊಳ್ಳುತ್ತಾರೆ.

"ಗುಡ್ಡದ ಹೊಲ ನಮ್ಮುದು ಅಂತ ಗೊತ್ತಿಲ್ಲೇನು ಅಂದ ಪಂಪಾತಿಗೌಡ ನಮ್ಮಪ್ಪಗ ನಿಮ್ಮ ಹೆತ್ತೋರು ದಾನ ಮಾಡಿದ್ರು ಅದುಕಗ್ಗಾಡಿಸಂದಿದ್ದದ್ದನ್ನು ನಾನು ಜೀವ ಬತ್ತಂಗ ದುಡುದ ಹೊಲ ಅಂತ ಕಾಣುವಂಗ ಮಾಡಿಕೊಂಡಿದ್ವಿ ಒಮ್ಮೆ ದಾನ ಕೊಟ್ಟ ಮ್ಯಾಲೆ ಮತ್ತೆ ಕಸಗಂಡ್ರೆ, ನಿಮ್ಮ ಹೆತ್ತೋರಿಗೆ ಶಾಂತಿ ಸಿಗುತ್ತೇನು?" ಇದಕ್ಕೆ ಗೌಡ ಆ ಭೂಮಿ ನನಗ ಬೇಕು ಅಲ್ಲಿ ಫ್ಯಾಕ್ಟರಿ ಹಾಕಬೇಕಂತ ಮಾಡೀನಿ. ನಿನ್ಗ, ನಿನ್ನ ಹೆಣ್ತಿ ಮಕ್ಕಳಿಗೆ ಕೆಲ್ಸ ಕೊಡ್ತಿನಿ ಬದುಕಿ ಕೊಂಡು ಇರು ನಿಮ್ಮ ತಮ್ಮನ ಕೊಲೆ ಕೇಸು ಬಗೆಹರಿಸ್ತೀನಿ."[೧೨]

ಈ ಮಾತನ್ನು ಕೇಳಿದ ಈ ದಂಪತಿಗಳು ತಮ್ಮ ಜಾತಿಯ ರಾಜಕೀಯ ಮುಖಂಡ ಪುರುಷೋತ್ತಮನ

ಬಳಿ ಹೇಳುತ್ತಾರೆ. ಈ ಮುಖಂಡನ ಸಲಹೆಯಂತೆ ಮಲ್ಲಿಹಳ್ಳಿಗೆ ಬಂದು ನೆಲೆಸುತ್ತಾರೆ. ಈ ಸಂದರ್ಭದಲ್ಲಿ ಭೂಮಿ ಲಿಂಗ ಎಂಬ ಹಸುಗೂಸೊಂದು ಸಾವನ್ನಪ್ಪುತ್ತದೆ. ಊರಿನ ಭೂಮಾಲೀಕನ ಜೊತೆಗೆ ಗ್ರಾಮ ಲೆಕ್ಕಾಧಿಕಾರಿ ಷಾಮೀಲಾಗಿರುವ ವಿಷಯ ಪುರುಷೋತ್ತಮ ಮತ್ತು ದಂಪತಿಗಳಿಗೆ ತಿಳಿದು ಭೂಮಿ ದಕ್ಕುವುದು ಗಗನ ಕುಸುಮವೆಂದೇ ಭಾವಿಸುತ್ತಾರೆ. ಈ ಭೂಮಾಲೀಕನ ಹುನ್ನಾರದಿಂದ ತನ್ನ ಸ್ವಜಾತಿ ಪುರುಷೋತ್ತಮನೂ ಸಹ ಅವರೊಂದಿಗೆ ಕೈಜೋಡಿಸುತ್ತಾನೆ. ಇದರಿಂದಾಗಿ ಪರಮಶಿವಯ್ಯ ಮತ್ತು ಗಂಗವ್ವ ಜಮೀನು ಕೈತಪ್ಪಿಹೋಗುತ್ತದೆ.

**"ಹೊತ್ತು ಮೂಡುವ ಸಮಯ"** ಕತೆಯು ಪ್ರಧಾನವಾಗಿ ಮನೋ ದೈಹಿಕ ಸಂಬಂಧ ಚಿತ್ರಣವನ್ನು ನೀಡಿದರೂ,ಅಂತಿಮವಾಗಿ ಆಸ್ತಿಪರಿಕಲ್ಪನೆಯನ್ನು ವ್ಯಕ್ತಗೊಳಿಸುವುದನ್ನು ಕಾಣಬಹುದಾಗಿದೆ. ಅಕ್ಕಮ್ಮನ ವಿವರಗಳು,ಅಕ್ಕಮ್ಮನ ಗಂಡ ಗೌಡ ಭೂಮಾಲೀಕನಾಗಿದ್ದು, ಮೂರು ಮಂದಿ ಹೆಂಡತಿಯರನ್ನು ಹೊಂದಿದ್ದಾನೆ. ಅಕ್ಕಮ್ಮ ಮೂರನೆಯವಳು, ಮೂರು ಮಂದಿಗೆ ಮಕ್ಕಳಾಗುವ ಭಾಗ್ಯವಿಲ್ಲದೆ ಕೊರಗುವ ಸ್ಥಿತಿಯನ್ನು ಕಾಣಬಹುದಾಗಿದೆ. ಆದರೆ ಮೂರನೇ ಹೆಂಡತಿ ಅಕ್ಕಮ್ಮನಿಗೆ ಮಕ್ಕಳ ಬಯಕೆಗಾಗಿ ತನ್ನ ನೈತಿಕ ಹಂತವನ್ನು ಮೀರುವ ಪ್ರಕ್ರಿಯೆನ್ನು ಕಾಣುತ್ತೇವೆ. ಅಕ್ಕಮ್ಮನಿಗೆ ಮನೆಯ ಕೆಲಸದಾಳು,ದಲಿತರ ಹುಡುಗ ಲಿಂಗನಿಂದ ಮಗುವನ್ನು ಪಡೆಯುವ ಬಯಕೆಯಾಗುತ್ತದೆ. "ಲಿಂಗ ಇದ್ದಿದ್ರ.. ಇದ್ದಿದ್ರ.. ಅವುನ ಜತಿಗೆಮಕ್ಕಂಡೇ ಮಕ್ಕಳನ್ನ ಪಡಕಂತಿದ್ದೆ. ಹೆಸರಿಗೆ ಒಬ್ಬ ಗಂಡಾಗಿರ್ತಿದ್ದ ಈಗ... ಈಗ ನನ್ನ ಹೊಟ್ಟ್ಯಾಗ ಹುಟ್ಟಿದ ಮಕ್ಕಳಿಗೆ ಈ ಆಸ್ತಿ ಇರ್ಬೇಕು. ಒಂದು ಸಾಕು ಅಂದುಕೊಂಡಾಗ ಮೈಯಲ್ಲ ಬಿಸಿಯಾಗಿ ಉರಿಯತೊಡಗಿಳು."[೧೩]

ಇಲ್ಲಿ ತನ್ನ ಮಕ್ಕಳಿಂದ ಆಸ್ತಿಯನ್ನು ಮತ್ತು ಭೂ ಒಡೆತನದ ಹಕ್ಕು ತಮ್ಮಲ್ಲೇ ಉಳಿಸಿಕೊಳ್ಳುವ ಯತ್ನ ಕಂಡುಬರುತ್ತದೆ. ಭೂಮಿಯ ಬಯಕೆ ಜೊತೆಗೆ ಮಗುವಿನ ಬಯಕೆಯಿದೆ. ತನ್ನ ವಂಶದ ಆಸ್ತಿ ಉಳಿಯಬೇಕಾದರೆ ಮಗು ಬೇಕೆಂಬ ಹಂಬಲವಿದೆ.ಇದಕ್ಕಾಗಿ ನೈತಿಕ ಗೆರೆಯನ್ನು ದಾಟಿ ಅನೈತಿಕತೆಗೆ ಸಿದ್ಧಳಾಗಿದ್ದಾಳೆ. ಆಸ್ತಿಗಾಗಿ ಭೂ ಒಡೆತನದಿಂದಾಗಿ ತನ್ನ ಮಗುವಿನಿಂದ ಆಸ್ತಿಯ ಒಡೆತನವನ್ನು ದಕ್ಕಿಸಿಕೊಳ್ಳುವ ಯತ್ನವನ್ನು ಅಕ್ಕಮ್ಮನಲ್ಲಿ ಕಾಣುತ್ತೇವೆ.

**ಕೊನೆ ಟಿಪ್ಪಣಿ**


೧.ಎಚ್.ರಾಘವೇಂದ್ರ ರಾವ್,ಮಣ್ಣು ಸೇರಿತು ಬೀಜ, ಮುನ್ನುಡಿ. ಪುಟ೫

೨. ನುಗಡೋಣಿ,ಪಕ್ಷಕಲ್ಲದೆ ಪರಿಣಾಮ ಕಾಣಿಸದು,ಹೊಸತು,ಜನವರಿ ವಿಶೇಷ ಸಂಚಿಕೆ,೨೦೦೭

೩. ಅದೇ

೪. ಅದೇ

೫. ಅದೇ

೬.ಅದೇ

೭. ಅದೇ

೮. ಅದೇ

೯. ಅದೇ

೧೦. ಅದೇ

೧೧. ಅದೇ

೧೨.ಅಮರೇಶ ನುಗಡೋಣಿ, ಬೇಟೆ, ಪುಟ ೧೮

೧೩.ನುಗಡೋಣಿ,ಹೊತ್ತು ಮೂಡುವ ಸಮಯ.ಪು ೧೫

## ೪.೨.೨೨ ಇತರೆ ಕಥನಕಾರರಲ್ಲಿ ಭೂ ಹೋರಾಟ ಪ್ರತಿನಿಧೀಕರಣ

### ೧.ಬಸವರಾಜ ಕಟ್ಟೀಮನಿ : ಹರಿಜನಾಯಣ

ಬಸವರಾಜ ಕಟ್ಟೀಮನಿಯವರ ಹರಿಜನಾಯಣ ಕಾದಂಬರಿಯಲ್ಲಿ ದಲಿತ ಸಂಘಟನೆಯ ನಾಯಕತ್ವ ವಹಿಸಿಕೊಂಡಿರುವ ಶಂಭು ದಲಿತ ಸಮುದಾಯದ ಅರಿವಿನ ಬೆಳಕಾಗಿ ಬಂದು, ಸಾಮಾಜಿಕ ಎಚ್ಚರ ಕುರಿತಾಗಿ ಶಿಕ್ಷಣ ನೀಡುತ್ತಾನೆ. ದಲಿತ ಸಂಘಟನೆಗಳನ್ನು ಈ ಊರಿನಲ್ಲಿ ಸ್ಥಾಪಿಸುವ ಚಿತ್ರಣವನ್ನು ಕಾಣುತ್ತೇವೆ. ಈ ಸಂಘಟನೆಗಳ ಮೂಲಕ ತಮ್ಮ ಮೂಲಭೂತ ಹಕ್ಕುಗಳಿಗಾಗಿ ಹೋರಾಟ ನಡೆಸುತ್ತಾನೆ. ಈ ಸಂಘಟನೆ ಮುಖಾಂತರ ತನ್ನ ಊರಿನ ಬಳಿ ಇರುವ ನೂರು ಎಕರೆ ಸರ್ಕಾರಿ ಭೂಮಿಯನ್ನು ಭೂಹೀನ ದಲಿತರಿಗೆ ದಕ್ಕುವಂತೆ ಹೋರಾಟ ನಡೆಸಲಾಗುತ್ತದೆ.

ಈ ಸರ್ಕಾರಿ ಭೂಮಿ ಇನ್ನೇನು ದಲಿತ ಸಮುದಾಯಕ್ಕೆ ಸಿಗುವಷ್ಟರಲ್ಲಿ ಜಮೀನ್ದಾರಿವರ್ಗ ಮತ್ತು ಅಧಿಕಾರಿಶಾಹಿ ವರ್ಗ ಭೂಮಿ ಮಂಜೂರಾತಿಯನ್ನು ತಡೆಯುತ್ತದೆ. ಇಲ್ಲಿ ಜಾತಿ ರಾಜಕಾರಣದಿಂದಾಗಿ ಸ್ವತಂತ್ರಯೋಧರಿಗಾಗಿ ಮೀಸಲಾಗಿಟ್ಟಿದ್ದ ನೂರು ಎಕರೆ ಭೂಮಿಯು ಅಧಿಕಾರಿಗಳ ಕೈವಾಡದಿಂದಾಗಿ ಊರ ಗೌಡನ ವಶವಾಗುವ ದುರಂತವನ್ನು ಕಾಣುತ್ತೇವೆ. ಇಂತಹ ಸನ್ನಿವೇಶದಲ್ಲಿ ದಲಿತ ಸಮುದಾಯವು ಮೂಕ ಪ್ರೇಕ್ಷಕನಂತೆ ನೋಡುತ್ತದೆ. ಇಲ್ಲಿ ದಲಿತ ಮಂತ್ರಿ ಮತ್ತು ಶಾಸಕರಿದ್ದರೂ ಏನೂ ಮಾಡಲಾಗದೆ ಕೈ ಚೆಲ್ಲುವ ಚಿತ್ರಣವ್ಯಕ್ತವಾಗುತ್ತದೆ. ಇಂತಹ ವ್ಯವಸ್ಥೆಯಿಂದಾಗಿ ದಲಿತನಾಯಕರಿಗೆ ಅಧಿಕಾರದ ದಾಹದಿಂದ ಸಾಮಾಜಿಕ ಅನ್ಯಾಯಕ್ಕೆ ಒಂದು ಸಮುದಾಯ ಒಳಗಾಗುತ್ತಿದ್ದರೂ, ಈ ಮಂತ್ರಿಗಳು ಶಾಸಕರು ಮೌನವಹಿಸಿರುವುದನ್ನು ರಾಜಕೀಯ ಹುನ್ನಾರವಾಗಿ ಕಂಡುಬರುತ್ತದೆ.

ವಾಸ್ತವದ ಭಾರತದ ಸಂವಿಧಾನಾತ್ಮಕ ಪ್ರಜಾಪ್ರಭುತ್ವ ವ್ಯವಸ್ಥೆಗೆ ಭೂಹೀನರಿಗೆ ಭೂಹಂಚಿಕೆ ಮಾಡಬೇಕೆಂಬುದು ಮುಖ್ಯವೆನಿಸದಿರುವ ದುರಂತವನ್ನು ಈ ಕಾದಂಬರಿಯಲ್ಲಿ ಕಾಣುತ್ತೇವೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅದು ಕೇವಲ ರಾಜಕಾರಣ ಮಾಡುವ ಮತ್ತು ಅಧಿಕಾರ ಹಿಡಿಯುವ ತಂತ್ರವಾಗಿ ಮಾತ್ರ ಭೂಮಿ ಪ್ರಶ್ನೆ ಕಂಡಿರುವುದನ್ನು ಈ ಕಾದಂಬರಿಯು ಧ್ವನಿಸುತ್ತದೆ.

### ೨.ಬಿ.ಟಿ.ಲಲಿತಾನಾಯಕ್: ಗತಿ

**ಗತಿ** ಕಾದಂಬರಿಯಲ್ಲಿ ನಾಯಕಿ ಸೋನಿ ಒಬ್ಬ ದಿಟ್ಟ ಮಹಿಳೆಯಾಗಿ ಹಳ್ಳಿಯಲ್ಲಿ ವಾಸಮಾಡುವ ಚಿತ್ರಣವನ್ನು ಕಾಣುತ್ತೇವೆ. ಈಗ ಆಕೆಗೆ ತನಗೊಬ್ಬ ಗಂಡನಿಲ್ಲದ ಭಯವು ಆಕೆಗೆ ಆವರಿಸಿದ್ದು ವಿಧವೆಯ ಬದುಕನ್ನು ತನ್ನ ಊರಿನಲ್ಲಿ ನಡೆಸುತ್ತಾಳೆ. ಇದರಿಂದಾಗಿ ಊರಮುಖಂಡರ ಕಣ್ಣಿಗೆ ಬೀಳುತ್ತಾಳೆ. ಇದು ವಿಧವೆ ಮಹಿಳೆಯನ್ನು ನೋಡುವ ದೃಷ್ಟಿಕೋನವನ್ನು ಸೂಚಿಸುತ್ತದೆ.

ಈ ಕಾದಂಬರಿಯಲ್ಲಿ ಬರುವ ವಿಧವೆ ಲಕ್ಷ್ಮಿಯನ್ನು ಲೈಂಗಿಕವಾಗಿ ಲಿಂಗಾಯಿತ ಸ್ವಾಮಿ ಶೋಷಣೆ ಮಾಡುತ್ತಾನೆ. ಅಲ್ಲದೆ ಅವಳಿಗೆ ನೆರವು ಮತ್ತು ಆಶ್ರಯನೀಡುವುದನ್ನು ಕಾಣುತ್ತೇವೆ. ಈಕೆಗೆ ಬರ ಬೇಕಾದ ದಾಯಾದಿಗಳ ಆಸ್ತಿಯನ್ನು ಪಡೆಯುವ ಬಗ್ಗೆ, "ಅವರೆಲ್ಲಾ (ಅತ್ತೆ ಮಾವ, ಮೈದುನ)ಅದಾರ ಅಂದ ಬಳಿಕ, ಈಗ ಹೋಗ್ತೀನಿ ಅಂತಿಯಲ್ಲಾ ನೀ ಎಂಥಾ ಹುಚ್ಚಿ ಆದಿ ಮಗನ್ನ ನೀನೆ ಕೊಂದು ಹಾಕಿದೀ ಅಂತ ಅವರು ಪೊಲೀಸರಿಗೆ ದೂರು ಕೊಡ್ತಾರ. ನಿನ್ನ ಜೈಲಿಗೆ ಹಾಕಸ್ತಾರ. ನಿನ್ನ ಗಂಡನ ಆಸ್ತಿ ಏನೇನು ಅದೊ ಅದನ್ನೆಲ್ಲ ನಿನ್ನ ಮೈದ್ನ ವಹಿಸ್ಕಂಡಬಿಡ್ತಾನ...." [೧] ಆಸ್ತಿ ಕಲ್ಪನೆ ದಯಾದಿ ನೆಲೆಗಳಲ್ಲಿ ಭೂ ಪ್ರಶ್ನೆಯನ್ನು ನೋಡಲಾಗಿದೆ.

ವಿಧವೆ ಲಕ್ಷ್ಮಿ ಸಮಾಜವನ್ನು ಎದುರಿಸುವ ಧೈರ್ಯತೋರುತ್ತಾಳೆ. ಆನಂತರದಲ್ಲಿ ಹರಸಿಂಗನ ವಿವಾದದಿಂದಾಗಿ ಆಕೆ ಈತನಿಗೆ ಗೂಟದಿಂದ ಹೊಡೆದಿರುತ್ತಾಳೆ. ಇದು ಪಂಚಾಯ್ತಿ ಕಟ್ಟೆಗೆ ಬಂದಾಗ ಸಭಿಕರ ಒಲವು ಹರಸಿಂಗನತ್ತ ವಾಲುತ್ತದೆ. ಅನಂತರದಲ್ಲಿ ಲಕ್ಷ್ಮಿಗೆ ನೂರೊಂದು ರೂಪಾಯಿ ದಂಡವನ್ನು ಹಾಕುತ್ತಾರೆ. ದಂಡ ಮತ್ತು ಇಪ್ಪತ್ತು ಛಡಿಪೆಟು ಶಿಕ್ಷೆ ಗಳನ್ನು ಪ್ರತಿರೋಧಿಸಿ ಲಕ್ಷ್ಮಿ ಹೊರಬರುತ್ತಾಳೆ. ಅಪರಿಚಿತಸೋರ್ವ ಪೊಲೀಸ್ ಕೋರ್ಟ್, ಜೈಲು ಹೆಸರು ಎತ್ತಿದ ತಕ್ಷಣ ಎಲ್ಲರೂ ಮೌನವಹಿಸಿ

ತಲೆಬಾಗುವುದನ್ನು ಕಾಣುತ್ತೇವೆ.

ಅದೇ ರೀತಿ ಸೋನಿ ಮತ್ತು ಆಕೆಯ ಗಂಡ ಮಾನ್ಯಾನ ನಡುವಿನ ಕಲಹ ಕುರಿತು ಪಂಚಾಯ್ತಿ ಕಟ್ಟೆ ಸೇರಲಾಗುತ್ತದೆ. ಗಂಡನ ಪರವಾಗಿ ತೀರ್ಮಾನ ನೀಡಿದ ಪಂಚಾಯ್ತಿಕಟ್ಟೆಯು ಕೊನೆಗೆ ಸೋನಿಯನ್ನು ಗಂಡನೊಂದಿಗೆ ಹೋಗಲು ಸೂಚಿಸುತ್ತದೆ. ಆದರೆ ಗಂಡನ ಬಳಿ ಹೋಗುವುದಾದರೆ ಸಾಯುತ್ತೇನೆ ಆಕೆ ಎಂದು ಪ್ರತಿಭಟಿಸುತ್ತಾಳೆ.ಇಲ್ಲಿ ಹೆಣ್ಣನ್ನು ಪ್ರಧಾನವಾಗಿ ಚಿತ್ರಿಸುವುದರೊಂದಿಗೆ ಹೆಣ್ಣಿಗೆ ಯಾವುದೇ ಹಕ್ಕನ್ನು ನೀಡದೆ ಇರುವುದನ್ನು ಕಾಣುತ್ತೇವೆ. ವಿಧವೆ ಲಕ್ಷ್ಮಿಗೆ ತನ್ನ ಗಂಡನ ಪಾಲು ಬರಬೇಕಾದ ಆಸ್ತಿಯನ್ನು ನೀಡದೆ ಆಕೆಗೆ ವಂಚಿಸುವುದನ್ನು ಕಾಣಬಹುದಾಗಿದೆ.

**೩. ಆರ್.ವಿ.ಭಂಡಾರಿ : ಬೆಂಕಿಯ ಮಧ್ಯೆ**

ಆರ್.ವಿ.ಭಂಡಾರಿಯವರ ಬೆಂಕಿಯ ಮಧ್ಯೆ ಕಾದಂಬರಿಯಲ್ಲಿ ಜೀತದಾಳು ಕುಸ್ಲುವಿನ ಹೋರಾಟವನ್ನು ಮುಖ್ಯವಾಗಿ ಗಮನಿಸಬಹುದಾಗಿದೆ. ತನ್ನ ಭೂಮಾಲೀಕರಾದ ದೊಡ್ಡಣ್ಣ ಹೆಗ್ಡೇರ ಬಳಿ ಜೀತಗಾರನಾಗಿದ್ದ ಈತ ಇವರ ಮನೆಯನ್ನು ತೊರೆಯುತ್ತಾನೆ. ಕೊಣೂರಿನ ಬಳಿ ಬಂಜರು ಭೂಮಿಯಲ್ಲಿ ಈತ ಎರಡು ಎಕರೆ ಭೂಮಿಯನ್ನು ಸಾಗುವಳಿ ಮಾಡುತ್ತಾನೆ. ಈ ಸಾಗುವಳಿ ಭೂಮಿಯನ್ನು ಗಂಡಹೆಂಡತಿ ಇಬ್ಬರು ಸೇರಿ ಭೂಮಿಯನ್ನು ಹಸನು ಗೊಳಿಸುತ್ತಾರೆ. ಹಗಲು ಬೇರೆಡೆ ದುಡಿದು ರಾತ್ರಿ ಗಂಡಹೆಂಡತಿಯರಿಬ್ಬರು ಸೇರಿ ತಮ್ಮ ಜಮೀನಿನಲ್ಲಿ ದುಡಿಯುತ್ತಾರೆ. ಹೀಗೆ ದುಡಿದರು ಭೂಮಿಯಲ್ಲಿ ಉತ್ತಮ ಬೆಳೆಯನ್ನು ತೆಗೆಯಲು ಹದಗೊಳಿಸುತ್ತಾನೆ.

ತಾನು ಸಾಗುವಳಿ ಮಾಡಿದ ಭೂಮಿಯನ್ನು ತನ್ನ ಹೆಸರಿಗೆ ನೋಂದಣಿ ಮಾಡಿಸಿಕೊಳ್ಳಲು ಯತ್ನಿಸಿದರೂ ಕೈಗೊಡದೆ ವಿಫಲವಾಗುತ್ತದೆ. ತನ್ನ ಬೆವರು ಹರಿಸಿ ತಾನು ಸಾಗುವಳಿ ಮಾಡಿದ್ದ ಭೂಮಿಗೆ ಬೆಳೆ ಹಾಕಿ ಉತ್ತಮ ಫಲವನ್ನು ಬೆಳೆಯುತ್ತಾನೆ. ಇದು ಭೂಮಾಲೀಕನ ಸಂಬಂಧಿಕರ ಕೆಂಗಣ್ಣಿಗೆ ಗುರಿಯಾಗುತ್ತದೆ.

ಈ ಭೂಮಿಯನ್ನು ಹೇಗಾದರೂ ವಶಪಡಿಸಿಕೊಳ್ಳಬೇಕೆಂಬ ಆಸೆಯಿಂದ ಹೆಗ್ಡೆಯರ ಸಂಬಂಧಿಕ ಸಂಚು ಹೂಡುತ್ತಾನೆ. ಈ ಭೂಮಿಗಾಗಿ ಕುಸ್ಲುವಿನ ಮತ್ತು ಭೂಮಾಲೀಕರನಡುವೆ ಸಂಘರ್ಷ ಏರ್ಪಡುತ್ತದೆ. ಈ ಕುಸ್ಲು ತನ್ನ ಜಮೀನನ್ನು ಉಳಿಸಿಕೊಳ್ಳಲು ಹೋರಾಟ ನಡೆಸುತ್ತಾನೆ. ಇದಕ್ಕಾಗಿ ದಲಿತ ಬಿಡಿಓ ಅಧಿಕಾರಿ ಮುನಿಯಪ್ಪ ಹಾಗೂ ತಾಲ್ಲೂಕ್ ಬೋರ್ಡ್ ಅಧ್ಯಕ್ಷ ಚಿಕ್ಕಣ್ಣನ ಮತ್ತು ದಲಿತರ ನಾಯಕ ಪಾವಸ್ಕರನ ನೆರವು ದೊರೆಯುತ್ತದೆ. ಇವರ ನೆರವಿನಿಂದ ಭೂಮಿಯನ್ನು ಕಬಳಿಸದಂತೆ ವಿಫಲಗೊಳಿಸುತ್ತಾರೆ. ಇದರಿಂದ ತಾನು ಸಾಗುಮಾಡಿದ ಭೂಮಿಗೆ ಕುಸ್ಲುವೆ ಒಡೆಯನಾಗುತ್ತಾನೆ.

ಭೂಸುಧಾರಣಾ ಕಾನೂನು ಬಂದ ಹಿನ್ನೆಲೆಯಲ್ಲಿ ದಲಿತರಿಗೆ, ಭೂಹೀನರಿಗೆ ಭೂಮಿಯ ಒಡೆತನ ನೀಡಬೇಕೆಂಬ ಆಶಯ ಇಲ್ಲಿ ಸಾರ್ಥಕಗೊಳ್ಳುತ್ತದೆ. ಇಲ್ಲಿ ಉಳುವವನೇ ಹೊಲದೊಡೆಯ ಆಶಯವನ್ನು ಹೊಂದಿದ್ದರೂ, ಭೂಮಾಲೀಕನ ವಂಚನೆಯಿಂದ ಇಂತಹ ಕಾನೂನುನನ್ನು ವಿಫಲಗೊಳಿಸಲು ಯತ್ನಿಸುವುದು ಕಾಣುತ್ತೇವೆ. ಆದರೆ ಈ ಕಾದಂಬರಿಯಲ್ಲಿ ಭೂಹೀನ ವರ್ಗ ಎಚ್ಚೆತ್ತು ಕಾನೂನುನನ್ನು ಕಾರ್ಯಾನುಷ್ಠಾನಕ್ಕೆ ತರಲು ಯತ್ನಿಸುವುದು ಆಶಯವಾಗಿ ಕಂಡುಬಂದಿದೆ.

**೪.ನ. ಸುಬ್ರಹ್ಮಣ್ಯಂ : ಬಸಪ್ಪನ ಜಮೀನು**

ನ.ಸುಬ್ರಹ್ಮಣ್ಯಂ ಅವರು ೫೦ ರ ದಶಕದಲ್ಲಿ ಹೆಣೆದ ಈ ಕತೆಯು ಭೂ ಸಮಸ್ಯೆಯ ಕುರಿತು ಚರ್ಚಿಸುತ್ತದೆ. ಆಡಳಿತ ವ್ಯವಸ್ಥೆಯ ದೋಷಗಳಿಂದಾಗುವ ಅನಾಹುತಗಳು ಭೂಮಿಯ ಸುತ್ತ ಸುತ್ತುವುದರಿಂದ ಈ ಕಥಾವಸ್ತುವು, ಮುಂದೆ ಆಗುವ ಅನಾಹುತಗಳ ಕುರಿತು ಈ ಕತೆ ವಿವೇಚಿಸುತ್ತದೆ. ಈ ಕತೆಯಲ್ಲಿ ಭೂ ಒಡೆತನದ ಹಕ್ಕು ಯಾರಿಗೆ ಸೇರಬೇಕೆಂಬುದರ ಜೊತೆಗೆ ಬಂಜರುಭೂಮಿಯ ಅಭಿವೃದ್ಧಿ,ಭೂಹೀನರಿಗೆ ಸಾಗುವಳಿ ಮಾಡಲು ಭೂ ಹಕ್ಕು ನೀಡುವ ಚಿತ್ರಣವನ್ನು ಕಾಣಬಹುದಾಗಿದೆ.

ಬಸಪ್ಪನ ಜಮೀನು ಕತೆಯಲ್ಲಿ ಜಮೀನಿನ ಸುತ್ತ ಸಂಭವಿಸುವ ವಿವಾದದಿಂದ ಚಿತ್ರಣವಾಗಿದೆ. ಈ ಜಮೀನನ್ನು ಪಡೆಯಲು ಸಲುವಾಗಿ ಊರಿನಲ್ಲಿ ಪೈಪೋಟಿ ನಡೆಯುತ್ತದೆ.ಈ ಕತೆಯಲ್ಲಿ ಜಮೀನು ಯಾರಿಗೆ

ಸೇರಬೇಕೆಂಬ ಮತ್ತು ಒಡೆತನ ಯಾರಿಗೆ ಸೇರಬೇಕೆಂಬ ವಿವಾದದ ಸುತ್ತಲೇ ಗಿರಕಿ ಹೊಡೆಯುತ್ತದೆ. ಸರ್ಕಾರದವರು "ಹೆಚ್ಚು ಆಹಾರ ಬೆಳೆಯಿರಿ ಅನ್ನೊ ಒಂದು ಸಂಸ್ಥೆಯನ್ನು ಸ್ಥಾಪಿಸಿ. ಎಲ್ಲೆಲ್ಲೂ ಬಾವಿಗಳನ್ನು ತೋಡಿಸೋದು, ಸಾಧ್ಯವಾದ ಕಡೆಯಲ್ಲೆಲ್ಲ ನದಿಗಳಿಂದ ಕಾಲುವೆ ಹರಿಸಿ ಬಂಜರು ಪ್ರದೇಶಗಳನ್ನೆಲ್ಲ ಸಾಗುವಳಿ ಮಾಡಿಸುವುದು, ಬೇಸಾಯಗಾರರಿಗೆ ಹೆಚ್ಚು ಆಹಾರ ಬೆಳೆಯಲಿ ಅಂತ ಒಳ್ಳೆ ಗೊಬ್ಬರ, ಬಿತ್ತನೆ, ಹೊಸತರದ ಉಪಕರಣಗಳನ್ನು ಕೊಡೋದು, ಅಲ್ಲದೆ ಹೆಚ್ಚು ಆಹಾರ ಬೆಳೆದವರಿಗೆ ಬಹುಮಾನ ಕೊಡೋದು ಹೀಗೆಲ್ಲ ಜನಗಳಿಗೂ ಒಂದೆರಡು ವರ್ಷದಲ್ಲೇ ತುಂಬಾ ಪಾಳು ಬಿದ್ದಿದ್ದ ಜಮೀನೆಲ್ಲ ಸಾಗುವಳಿಯಾಯ್ತು"[೨] ಇದು ಸರ್ಕಾರದ ಕಾರ್ಯಕ್ರಮವಾದರೂ ಬಂಜರು ಭೂಮಿಯನ್ನು ಉತ್ತು ಬಿತ್ತುವುದಕ್ಕೆ ಪ್ರೋತ್ಸಾಹಿಸುವುದನ್ನು ಗಮನಿಸಬಹುದಾಗಿದೆ. ಸರ್ಕಾರಿ ಅಧಿಕಾರಿಗಳು ಪರಿಶೀಲನೆ ನಡೆಸುತ್ತಿದ್ದ ಅವಧಿಯಲ್ಲಿ ಈ ಪಾಳು ಜಮೀನು ಅವರ ಕಣ್ಣಿಗೆ ಬೀಳುತ್ತದೆ. ಯಾರದು ಈ ಜಮೀನು ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಬಿಷಪ್ಪನ ಹೆಸರಿನ ಬದಲಾಗಿ, ಬಸಪ್ಪ ಎಂಬ ಹೆಸರಿನಲ್ಲಿ ಜಮೀನು ದಾಖಲಾಗಿರುತ್ತದೆ. ಆದರೆ ಬಸಪ್ಪ ಅನ್ನುವ ಹೆಸರಿನ ವ್ಯಕ್ತಿ ನಮ್ಮ ಊರಿನಲ್ಲಿ ಇಲ್ಲ ಎಂದು ನಿಂತಿದ್ದ ಮುದುಕ ತಿಳಿಸುತ್ತಾನೆ.

ಜಮೀನಿನ ಮಾಲೀಕ ಯಾರೆಂಬುದು ತಿಳಿಯದೆ ಕೊನೆಗೆ ಸರ್ವೇ ಸಂಖ್ಯೆ ದೊರೆಯುತ್ತದೆ ಆದರೆ ಒಡೆತನ ಯಾರದೆಂಬುದು ತಿಳಿಯುವುದಿಲ್ಲ. ಆಗ ಕಡಿಮೆ ಬೆಲೆಗೆ ಒಪ್ಪಿಸಿಕೊಡುವುದರ ಬದಲು ಹರಾಜು ಹಾಕಿಸಿ ಯಾರಿಗೆ ಅಭಿಲಾಷೆ ಇದೆಯೋ ಅವರು ಇದನ್ನು ತೆಗೆದುಕೊಳ್ಳಲಿ ಎಂಬ ಸಲಹೆ ಬರುತ್ತದೆ. ಆದ್ದರಿಂದ ಸರ್ಕಾರಕ್ಕೂ ಲಾಭವಾಗುತ್ತೆ, ಅಲ್ಲದೆ ಸಾಗುವಳಿ ಮಾಡುವವರೂ ಪ್ರೀತಿಯಿಂದ ಮಾಡುತ್ತಾರೆಂಬ ಸೂಚನೆ ಬರುತ್ತದೆ. ಈ ಭೂಮಿಯನ್ನು ಹರಾಜು ಮಾಡಲು ಊರಿನ ಪಟೇಲ ವೇದಿಕೆಯಲ್ಲಿ ನಿಲ್ಲುತ್ತಾನೆ. ಈ ಭೂಮಿಯನ್ನು ಹರಾಜು ಹಾಕಲು ಪೈಪೋಟಿ ನಡೆಯುತ್ತಿರುತ್ತದೆ. ಆ ಸನ್ನಿವೇಶಕ್ಕೆ ಪಾದ್ರಿಯೊಬ್ಬ ಬಂದು ಈ ಜಮೀನು ನಮ್ಮದು ಎಂದು ಹೇಳುತ್ತಾನೆ. ಆಗ ಈ ಅಧಿಕಾರಿಗಳು ಪುನಃ ಶಾನುಭೋಗರಿಂದ ಮಾಹಿತಿ ಪಡೆಯುತ್ತಾರೆ. ಆನಂತರ ಪಾದ್ರಿರಿಚರ್ಡ್ ಗುಡ್ಡದ ಮೇಲೆ ಚರ್ಚ್ ಮುರಿದು ಬಿದ್ದ ಸುಟ್ಟದಾಖಲೆಗಳನ್ನು ತೋರಿಸುತ್ತಾನೆ.

ಶಾನುಭೋಗರಿಗೆ ಪರಿಶೀಲಿಸುವಂತೆ ಸರ್ಕಾರದ ಅಧಿಕಾರಿಗಳು ತಾಕೀತು ಮಾಡುತ್ತಾರೆ. ನೀವು ತೋರಿಸಿದ ದಾಖಲೆ ಎಷ್ಟು ವರ್ಷದ್ದೂ ಎಂದು ಕೇಳುವ ಮೂಲಕ ಹಿಂದಿನ ಬಾಕಿ ದಾಖಲೆಗಳನ್ನು ನೋಡಲು ಸೂಚಿಸುತ್ತಾರೆ. ಚರ್ಚು ಸುಟ್ಟು ಹೋಗಿದೆ ಎಂಬುದಕ್ಕೆ ಊರಿನ ಶಂಕರಯ್ಯ ಹಿಂದಿನ ಕತೆಯನ್ನು ವಿವರಿಸುತ್ತಾನೆ. ಬ್ರಿಟೀಷರ ಆಡಳಿತದಿಂದಾಗಿ ಹಳ್ಳಿಗಳಲ್ಲಿ ಕ್ರೈಸ್ತ ಧರ್ಮವನ್ನು ಪ್ರಚಾರ ಮಾಡಲು ಯತ್ನಿಸಿರುತ್ತಾರೆ. ಈ ಹಳ್ಳಿಯ ಜನರನ್ನು ಮತಾಂತರ ಮಾಡಲು ಪಾದ್ರಿಗಳು ಯತ್ನಿಸುತ್ತಿದ್ದಾರೆಂದು ಈ ಊರಿನ ಮಠದ ಅಯ್ಯಗಳು ಜನರಲ್ಲಿ ಎಚ್ಚರಿಕೆ ಮೂಡಿಸುತ್ತಾರೆ. ಎಚ್ಚೆತ್ತ ಜನರು ಮಾರಿಗುಡಿ ಜಾತ್ರೆಯ ಸಂದರ್ಭದಲ್ಲಿ ಗುಡ್ಡದ ಮೇಲಿದ್ದ ಏಸುಕ್ರಿಸ್ತನ ದೇವಸ್ಥಾನವನ್ನು ಸುಟ್ಟು ಹಾಕುತ್ತಾರೆ. ಈ ಸುಟ್ಟು ಹಾಕಿದ ಸಂದರ್ಭದಲ್ಲಿ ಭೂಮಿಯ ದಾಖಲೆ ಹಾಗೂ ಭೂಮಿಯು ಬೇರೆಯವರ ಪಾಲಾಗಿರುತ್ತದೆ.

ಇತ್ತ ರೆಕಾರ್ಡುಗಳಿರುವ ಕಂದಾಯ ಕಚೇರಿಗೆ ಭೇಟಿ ನೀಡಿ ಹಿಂದಿನ ಎಲ್ಲಾ ರೆಕಾರ್ಡ್‌ಗಳನ್ನು ತೆಗೆಸಿ ನೋಡುತ್ತಾರೆ. ಬಸಪ್ಪ ಎನ್ನುವ ಹೆಸರಿನ ಬದಲು ಬಶಪ್ಪ ಎಂದಿರುವುದನ್ನು ಕಾಣುತ್ತಾರೆ. ಅಮಲ್ದಾರರು ಬಹು ಪ್ರಯಾಸದಿಂದಲೇ ಓದ ತೊಡಗುತ್ತಾರೆ. "ಹೆಸರು ಮಾತ್ರ ಸ್ಪಷ್ಟವಾಗಿರಲಿಲ್ಲ. ನೋಡಿದರೆ ಬಶಪ್ಪ ಎಂದು ಬರೆದಿದ್ದಂತೆ ತೋರಿತು. ಅದನ್ನು ಹೆಡ್‌ಗುಮಾಸ್ತನಿಗೆ ಕೈ ಕೊಟ್ಟು ಚೆನ್ನಾಗಿ ಪರಿಶೀಲಿಸಿ, ಇದು ಬಿಷಪ್ಪ ಎಂದಾಗುತ್ತೆ ಮಹಾಸ್ವಾಮಿ. ಫಾದರ್ ರಿಚರ್ಡ್ ಇದ್ದಕ್ಕಿಂತೆ ಒಂದು ಹಾರು ಹಾರಿ ಸ್ವಾಮಿ ನೋಡಿದಿರಾ ಬಿಷಪ್ ಬಿಷಪ್ ಅಂದ ಬಿಷಪ್ಪನ ಹೆಸರಿನಲ್ಲೇ ಜಮೀನಿದ್ದುದ್ದು ಅಂತ. ಆ ಜಮೀನು ಚರ್ಚಿಗೆ ಸೇರಿದ್ದುದರಿಂದಲೇ ಬ್ರಿಟಿಷ್ ಸರ್ಕಾರದವರು ಅದಕ್ಕೆ ಕಂದಾಯ ರಿಯಾಯ್ತಿ ಕೊಟ್ಟಿದ್ದು"[೩] ಎಂದು ವ್ಯಕ್ತಪಡಿಸುತ್ತಾನೆ.

ಈ ಕತೆಯಲ್ಲಿ ಕಾನೂನಿನ ನೆಲೆ, ಆಡಳಿತಶಾಹಿ ಅವಾಂತರಗಳು ವ್ಯಕ್ತವಾಗುತ್ತದೆ. ಇಲ್ಲಿ ಭೂ ಒಡೆತನಕ್ಕೆ ಸಂಬಂಧಿಸಿದ ವಿಚಾರವನ್ನು ಪ್ರಸ್ತಾಪಿಸುತ್ತದೆ. ಭೂ ಒಡೆತನಕ್ಕಾಗಿ ಅಧಿಕಾರಿಶಾಹಿಗಳು ಮಾಡಿದ ತಪ್ಪಿನಿಂದಾಗಿ ಊರಿನಲ್ಲಿ ಅವಾಂತರಗಳಿಗೆ ಕಾರಣವಾಗುತ್ತದೆ. ಆದರೆ ಸರ್ಕಾರದ ಯೋಜನೆಯಾದ ಹೆಚ್ಚು ಆಹಾರಬೆಳೆಯಿರಿ ಸಂಸ್ಥೆಯು ಮಾಡುತ್ತಿದ್ದ ಕಾರ್ಯ ಪ್ರಗತಿಪರವಾಗಿದೆ. ಬಂಜರು ಭೂಮಿಯ ಅಭಿವೃದ್ಧಿಗಾಗಿ ನಡೆಸುವ ಸರ್ಕಾರದ ಕಾರ್ಯಕ್ರಮಗಳು ಕತೆಯಲ್ಲಿ ವ್ಯಕ್ತವಾಗುತ್ತದೆ.

## ೫.ನಟರಾಜ ಹುಳಿಯಾರ್ : ಬಿರು ಬಿಟ್ಟ ನೆಲ

ನಟರಾಜ ಹುಳಿಯಾರರ 'ಬಿರು ಬಿಟ್ಟ ನೆಲ' ಕತೆಯು ರೈತರು ಬರಗಾಲದ ದುರಂತವನ್ನು ಅನುಭವಿಸುವ ಆಶಯವನ್ನು ವ್ಯಕ್ತಪಡಿಸಿದೆ. ಕೊನೆಹಳ್ಳಿಯಲ್ಲಿ ಮಳೆಯಾಗದೇ ಇದ್ದುದರಿಂದಈ ಊರಿನ ರೈತನ ಮಗನಾದ ರಾಜಣ್ಣ ನಗರ ಸೇರುತ್ತಾನೆ. ಕೆಲವು ವರ್ಷಗಳ ನಂತರ ತನ್ನೂರಿಗೆ ಮರಳುತ್ತಾನೆ. ಆ ಕಾಲಕ್ಕೆ ತನ್ನ ಊರು ಬರಗಾಲದಿಂದ ತತ್ತರಿಸಿರುವುದು ಕಂಡುಬರುತ್ತದೆ. ತನ್ನ ಊರಿನ ಹಿಂದಿನ ಸಮೃದ್ಧಿಯನ್ನು ಮತ್ತು ರೈತ ಸಂಘದ ಹೋರಾಟದ ಕೆಚ್ಚನ್ನು ನೆನಪಿಸಿಕೊಳ್ಳುತ್ತಾನೆ. ಒಂದುಕಾಲಕ್ಕೆ ಕೊನೆಹಳ್ಳಿ ರೈತ ಸಂಘವೆಂದರೆ ಸರ್ಕಾರಿ ಅಧಿಕಾರಿಗಳು ಊರನ್ನು ಪ್ರವೇಶಿಸಬೇಕೆಂದರೆ ಸಂಘದ ಅನುಮತಿ ಪಡೆದು ಬರಬೇಕಾಗಿತ್ತು. ಇಂತಹ ಬೆಳವಣಿಗೆಯ ನಡುವೆ ರಾಜಣ್ಣನ ಅಣ್ಣ ಶಿವಣ್ಣ ಬರಗಾಲದಿಂದ ತಮ್ಮ ಭೂಮಿಯನ್ನು ಮಾರುವ ಪ್ರಸ್ತಾಪ ಮಾಡುತ್ತಾನೆ.

"ಕೆರೆ ಹಿಂದಿನ ಭೂಮಿನ ನಾರಿನ ಪ್ಯಾಕ್ಟರಿಗೆ ಮಾರಿಬಿಡಾನ ಅಂತಿದೀನಿ, ಪಾಲು ಮಾಡಿ ಬಿಡೋಣಕಣಯ್ಯ ಈ ಬೇವರ್ಸಿ ಊರಲ್ಲಿ ಸಾಯೋದಕ್ಕಿಂತ ತಿಪಟೂರಲ್ಲಿ ಬೀಡಿ ಅಂಗಡಿ ಇಡಬೇಕು ಅಂತ ಮಾಡಿನಿ "[೬]

ಇದು ಬರಗಾಲದ ಭೀಕರತೆ ಮತ್ತು ಭೂ ಸಂಬಂಧವನ್ನು ಕಡಿದುಕೊಳ್ಳುವ ಸಂಕಟವು ವ್ಯಕ್ತಗೊಳ್ಳುತ್ತದೆ. ರಾಜಣ್ಣನ ತಂದೆ ಮತ್ತು ಅಣ್ಣಂದಿರಿಂದಾಗಿ ಊರಿನಲ್ಲಿ ರೈತ ಸಂಘವು ಒಡೆಯುತ್ತದೆ. ಈ ಊರಿನ ಸ್ಥಿತ್ಯಂತರದಿಂದಾಗಿ ರೈತರ ಬದುಕುಗಳು ದುರಂತವನ್ನು ಕಾಣುತ್ತವೆ. ಈತನ ಮನೆಯಲ್ಲಿ ದೊಡ್ಡಪ್ಪನ ಮಗಳು ಗೌರಿ ಗಂಡನ ಶೋಷಣೆಯಿಂದಾಗಿ ನೆಲೆಸಿದ್ದಾಳೆ. ಇದೇ ಕಾಲಕ್ಕೆ ಚುನಾವಣಾ ರಾಜಕೀಯ ಗದ್ದಲ ಸೇರಿ ಸಂಘಟಿತವಾಗಿದ್ದ ಊರು ಒಡೆದು ಹೋಳಾಗುತ್ತದೆ. ಬರಗಾಲವು ಊರಿನ ಮನಸ್ಥಿತಿಯನ್ನು ಒಡೆದು ಹೋಳು ಮಾಡುತ್ತದೆ. ಅಲ್ಲದೆ ಭೂಮಿಯಿಂದ ವಿಮುಖಿನನ್ನಾಗಿ ಮಾಡುತ್ತದೆ. ಈ ಊರಿನ ನೆಲ ಬಿರುಕುಬಿಟ್ಟು, ಇಲ್ಲಿನ ಹಸಿದ ಹೊಟ್ಟೆಯ ನರಳುವಿಕೆ, ಈ ಹಸಿವಿನಿಂದಾಗಿ ಹೆಣ್ಣುಗಳು ಮೈಮಾರಿಕೊಳ್ಳುವ ದುರಂತಕ್ಕೆ ಕಾರಣವಾಗುತ್ತದೆ.

ಈ ಕತೆಯಲ್ಲಿ ರೈತ ಪ್ರಶ್ನೆ,ಭೂಪ್ರಶ್ನೆಯ ಜೊತೆಗೆ ಪ್ರಕೃತಿವಿಕೋಪದ ಕರಾಳ ಛಾಯೆ ಗ್ರಾಮೀಣ ಬದುಕನ್ನು ದುರಂತಕ್ಕೀಡುಮಾಡುತ್ತದೆ. ಸಂಘಟಿತ ಹೋರಾಟವು ತಮ್ಮ ವೈಯಕ್ತಿಕ ಕಾರಣಗಳಿಂದ ಒಡೆದುಹೋಳಾಗುವ ಇಂದಿನ ದುರಂತವನ್ನು ಈ ಕತೆಯು ಧ್ವನಿಸುತ್ತದೆ.

## ೬. ಶಿವರುದ್ರಕಲ್ಲೋಳಿಕರ : ಹೊಲಗೇರಿಯ ರಾಜಕುಮಾರ

ಹೊಲಗೇರಿ ರಾಜಕುಮಾರ ಕಾದಂಬರಿಯಲ್ಲಿ ಕೂಲಿಕೆಲಸ ವರ್ಷವಿಡೀ ದೊರೆಯುವ ಸಾಧ್ಯತೆ ಅಸಂಭವ. ಹೀಗಾಗಿ ಅನಿಶ್ಚಯದ ದುಡಿಮೆ. ಅದರಿಂದ ಹುಟ್ಟುವ ನಿರುದ್ಯೋಗ ಅಥವಾ ಕನಿಷ್ಠ ಪ್ರತಿಫಲದ ಜೀತ ಇವುಗಳೇ ಜೀವನಾಧಾರವಾದಾಗ ದಲಿತರ ಆರ್ಥಿಕ ಸ್ಥಿತಿಗತಿಗಳು ಸಹಜವಾಗಿಯೇ ಅತ್ಯಂತ ನಿಕೃಷ್ಟವಾಗಿರುತ್ತವೆ.

ಮಾದೇವನ ತಂದೆ ತನಗೆಷ್ಟೇ ಕಷ್ಟಗಳು ಎದುರಾದರೂ ಮಗನ ವಿದ್ಯಾಭ್ಯಾಸಕ್ಕೆ ತೊಂದರೆ ಮಾಡಿದವನಲ್ಲ. ಮಾದೇವನಿಗೆ ಶಾಲೆ ಕಾಲೇಜುಗಳಲ್ಲಿ ದೊರೆತ ಫ್ರೀಶಿಪ್,ಸ್ಕಾಲರ್‌ಶಿಪ್‌ಗಳೂ ಅವನ ಓದಿಗೆ ನೆರವಾಗುತ್ತವೆ. ವಿದ್ಯಾಭ್ಯಾಸದ ಫಲವಾಗಿ ಅಂಬೇಡ್ಕರ್ ಕುರಿತು ಮಾದೇವ ಹೆಚ್ಚು ತಿಳಿದುಕೊಳ್ಳುತ್ತಾನೆ.ಸಂಘಟನೆಯ ಕೆಲಸವನ್ನು ಆರಂಭಿಸುತ್ತಾನೆ. ಹೀಗೆ ವಿದ್ಯಾವಂತ ದಲಿತರು ಅಂಬೇಡ್ಕರರನ್ನು ತಮ್ಮ ಸ್ವಾಭಿಮಾನದ ಸಂಕೇತವಾಗಿ ಒಪ್ಪಿಕೊಂಡು ಒಂದುಗೂಡಲು ಪ್ರಯತ್ನಿಸುತ್ತಾರೆ. ಸವರ್ಣೀಯ ವಿದ್ಯಾರ್ಥಿಗಳೊಂದಿಗೆ ದಲಿತ ವಿದ್ಯಾರ್ಥಿಗಳು ಶಾಲೆಗಳಲ್ಲಿ ಅನುಭವಿಸಬೇಕಾದ ವೇದನೆ ಹಿಂಸೆ,ಅವಮಾನಗಳನ್ನು ಕಾದಂಬರಿ ವಿವರಿಸಲು ಪ್ರಯತ್ನಿಸಿದೆ.

ಮಾದೇವನ ತಪ್ಪುಗ್ರಹಿಕೆಯಿಂದಾಗಿ ಹೋರಾಟದಲ್ಲಿ ತೊಡಗಿರುತ್ತಾನೆ. ಇದಕ್ಕೆ ಅಂಬೇಡ್ಕರ್ ಪುಸ್ತಕ ಕುರಿತ ಪ್ರತಿಭಟನೆಗೆ ಬಾಬಾ ಸಾಹೇಬರಿಗೆ ಆದ ಅವಮಾನ ಎಂದರೆ ಇನ್ನೊಬ್ಬ ದಲಿತ ಜಗತ್ತಿಗೆ ಆದ ಅವಮಾನ ಭಾವಿಸುತ್ತಾರೆ. ಆದರೆ ಪ್ರೊ.ಕದಂ ಮಾತ್ರ "ನೀವ ಭಾಳ ಸಣ್ಣಾವ್ರದೀರಿ ನಿಮಗೆ ತಿಳ್ಯೋದಿಲ್ಲ.. ಇದು ವೈಚಾರಿಕ ಜಗತ್ತಿಗೆ ಅವಮಾನ. ನಮ್ಮ ತಾರ್ಕಿಕ ಬಲವನ್ನು ವಿಸ್ತಾರ ಮಾಡಿಕೊಳ್ಳಬೇಕೇ ಹೊರತು ಒಬ್ಬ ವ್ಯಕ್ತಿ, ಹೊಲೆಯರು ,ಮಾದಿಗರು,ಸಮಗಾರರು ಎಂದು ಜಾತಿ ವಿಷವರ್ತುಲಕ್ಕೆ ಸೀಮಿತ ಮಾಡಿಕೊಳ್ಳಬೇಡ. ಬಾಬಾ ಸಾಹೇಬರನ್ನು ಅರ್ಥಮಾಡಿಕೊಳ್ಳುವುದು ಬೇಕಾದಷ್ಟಿದೆ... ಅವರ ಪುಸ್ತಕ ನಿಷೇಧಿಸಿದೆ ಎಂದರೆ ದೇಶದ ಶೇಕಡಾ ತೊಂಬತ್ತರಷ್ಟು ಜನರಿಗೆ ಅನ್ಯಾಯ ಮಾಡಿದೆ ಎಂದು ಹೇಳಲು ಕಲಿಯರಿ. ಹೊಲಗೇರಿಯ ರಾಜಕುಮಾರ "[೭] ಪ್ರೊ.ಕದಂ ಅವರ ಮಾತುಗಳು ವೈಚಾರಿಕವಾಗಿ ಔಚಿತ್ಯಪೂರ್ಣವಾಗಿವೆ.

ಪ್ರೊ.ಕದಂ ಅವರ ಮಾತಿನಿಂದ ಮಾದೇವ ತನ್ನ ತಪ್ಪನ್ನು ತೋರಿಸಿಕೊಡುತ್ತದೆ. ತನಗೆ ಜೀವನ ನೀಡಿದ ಹೊಲಗೇರಿಗೆ ಹಿಂದಿರುಗುತ್ತಾನೆ. ತನ್ನೂರಿನಲ್ಲಾಗುತ್ತಿದ್ದ ಅನ್ಯಾಯದ ವಿರುದ್ಧ ಹೋರಾಟ ನಡೆಸುತ್ತಾನೆ.ತನ್ನೂರಿನ ಜನರೊಂದಿಗೆ ಗುರುತಿಸಿಕೊಳ್ಳುವುದಲ್ಲದೆ ಮತ್ತೆ ಆತ ಹೋರಾಟದ ಮುಂಚೂಣಿಯಲ್ಲಿ ನಿಂತುಕೊಳ್ಳುತ್ತಾನೆ. ದಲಿತ ಸಂಘಟನೆ ನೆಲೆಯಿಂದ ಆರಂಭಗೊಂಡು. ದಲಿತ ಸಂಘಟನೆ ಪ್ರಬಲವಾಗಿ ಬೆಳೆದು ವಿದ್ಯಾವಂತ ಅವಿದ್ಯಾವಂತ, ಯುವಕ ಬಾಲಕ,ಪುರುಷ ಮಹಿಳೆ ಎಂಬ ಭೇದವಿಲ್ಲದೆ ಒಂದಾಗಿ ಹೋರಾಡುವ ಗಟ್ಟಿದನಿಯೊಂದಿಗೆ ಮುಕ್ತಾಯವಾಗುತ್ತದೆ.

### ೭. ಮಲ್ಲಿಕಾರ್ಜುನ ವಣೇನೂರ : ಮೂಗ

ಮಲ್ಲಿಕಾರ್ಜುನ ವಣೇನೂರರ ಮೂಗ ಕತೆಯಲ್ಲಿ ಮೂಗ ರೈತನಾಗುವ ಕನಸಿನ ಚಿತ್ರಣವಿದೆ.ಈ ಮೂಗ ಊಳೂರಿನಲ್ಲಿ ಎಲ್ಲ ಜನರ ಪ್ರೀತಿಗೆ ಪಾತ್ರನಾದ ವ್ಯಕ್ತಿಯಾಗಿದ್ದಾನೆ.ಈತನ ಆಟಿಕೆ ಸಾಮಾನು ಮಾಡುವುದು ,ಕೋಲಾಟದ ಕಲೆಯಿಂದಾಗಿ ಊರಿನಲ್ಲಿ ಎಲ್ಲರಿಗೂ ಅಚ್ಚುಮೆಚ್ಚು.ಇದರೊಂದಿಗೆ ತಾನು ರೈತನಾಗುವ ಹೊಲ ಉಳುಮೆ ಬೆಳೆ ತೆಗೆಯುವುದು ಈತನ ಜೀವಮಾನದ ಅದಮ್ಯ ಕನಸಾಗಿದೆ.

ಮೂಗನ ಬಳಿ ಇದ್ದ ಹೊಲವನ್ನು ಲಪಟಾಯಿಸಲು ಭೂಮಾಲೀಕ ಈರಾ ರೆಡ್ಡಿಯ ಮಗ ಎನ್ನುಗ ಸಂಚು ರೂಪಿಸುತ್ತಾನೆ. "ಭೂಮಿ ಬುಟ್ಟು ಬುಡಲೇ ನಾನೆ ಬಿತ್ಗಂಡು ನಿನ್ಗೆ ಇಷ್ಟಂತ ಕಾಳು ಕೊಡ್ತೀನಿ"[೬] ಈ ವಿಚಾರ ತಿಳಿದ ಮೂಗ ಎನ್ನುಗನಿಗೆ ಹೊಡೆಯುತ್ತಾನೆ. ಮೂಗ ಹೊಡೆದ ವಿಚಾರ ತಿಳಿದು, ಎನ್ನುಗನ ಕಡೆಯವರು ಮೂಗನ್ನು ಚೆನ್ನಾಗಿ ಥಳಿಸುತ್ತಾರೆ. ಆನಂತರದಲ್ಲಿ ಅತಿಕ್ರಮಣದಿಂದಾಗಿ ಮೂಗನ ಹೊಲವು ಎನ್ನುಗನ ಪಾಲಾಗುತ್ತದೆ.

ಇತ್ತ ಮೂಗ ಮೊದಲ ಹೆಂಡತಿ ಕಳೆದುಕೊಂಡು ಎರಡನೇ ಹೆಂಡತಿಯನ್ನು ಮದುವೆಯಾಗಿರುತ್ತಾನೆ. ಈ ಊರಿನ ಮಾರೆಣ್ಣ ಮೂಗನಿಗೆ ಸಮಾಧಾನಿಸುತ್ತಾನೆ. "ನೋಡಪಾ ಮೂಕ ಅವುನು ಎನ್ನುಗ ಇದಾನಲ ಆಮಿಂಡ್ರುಮಗ ಅವನಂತೂ ಹೊಲ ಬಿಟ್ಟು ಕೊಡೋನಲ್ಲ ಮೊದ್ಲೆ ನೀನು ಭೊಮ್ಮಮ್ಮ ಅಂದ್ರೆ ಬಿದ್ದು ಸಾಯೋ ಮನುಷ್ಯ"[೭] ಎಂದು ಮಾರೆಣ್ಣ ಮೂಗನಿಗೆ ಹೇಳುತ್ತಾನೆ.

ಇದೇ ಊರಿನ ಅಂಗಡೆಲ್ಲಮ್ಮ ಮೂಗನ ಭೂಮಿ ಬಗೆಗಿನ ಬಯಕೆಯನ್ನು ಗಮನಿಸಿ " ನೋಡಲೋ ಅಲ್ಲಿ ಹಗರ್ಯಾಗ ಒಂದೀಟು ಜಾಗ ಐತೆ, ಆ ಉಸುಕಿನ್ಯಾಗ ಕರಿಬಿಚ್ಚಣ್ಣು ಅವು ಇವು ಬೇಕಾದಂಗ ಬೆಳೆತಾವ ನೀನು ಮಾಡಿಕ್ಯಂಬಗಿದ್ರೆ ನೋಡು ಮತ್ತೆ"[೮] ಎಂದು ಸಲಹೆ ಮಾಡುತ್ತಾಳೆ. ಈಗಾಗಲೇ ಮೂಗ ಭೂಮಿಯನ್ನು ಕಳೆದುಕೊಂಡು ದುಃಖದಲ್ಲಿದ್ದ ಈತನಿಗೆ ಆಸೆಯ ಚಿಗುರೊಡೆಯುತ್ತದೆ. ತಾನು ಭೂಮಿಯನ್ನು ಉತ್ತುವ ಬಿತ್ತುವ ರೈತನಾಗುವ ಕನಸನ್ನು ಮೂಗ ಕಟ್ಟಿಕೊಳ್ಳುತ್ತಾನೆ.

ಮೂಗ ತನ್ನ ಸಂಜ್ಞೆಯ ಮೂಲಕ ವ್ಯಕ್ತಪಡಿಸುವುದನ್ನು ಗಮನಿಸಬಹುದು. " ಸ್ವಂತ ನನ್ನ ಭೂಮಿನ ಅವ್ನು ಕಸುಕೊಂಡ, ಎಮ್ಮೆ ಪುಡಿ ಪುಡಿ ಆಂಗಾವದ್ದ, ನ್ಯಾಯ ಅಂಬೋದುಯಿದ್ರೆ ಅವುನೊಲನಾ ನನ್ಗೆ ಬಿಡಿಸಿಕೊಡ್ರಿ ಮೂಗ ಸಂಜ್ಞೆಯಿಂದ ನನ್ನೊಲಯೆನ್ನುವಾಗ ಎದೆತಟ್ಟಿ ಹೇಳಿದ ರೀತಿ ನ್ಯಾಯ ಅಂಬೂದು ಇದ್ರೆ."[೯] ಇಲ್ಲಿ ನ್ಯಾಯದ ಬೇಡಿಕೆಯಿದೆ, ತಾನು ಭೂಮಿಯನ್ನು ಕಳೆದುಕೊಂಡ ಸಂಕಟವಿದೆ. ಹಗರಿ ಎಂಬ ಊರಲ್ಲಿ ಜನರು ಉಸುಕಿನ ಭೂಮಿಯನ್ನು ಆಕ್ರಮಿಸಿಕೊಳ್ಳಲು ಹೋದಾಗ ಅಲ್ಲಿನ ಜನರು ಬೆನ್ನತ್ತಿ ಓಡಿಸುತ್ತಾರೆ. ಮೂಗ ಜನರ ಕಾಟಕ್ಕೆ ಓಡಿ ಬಂದು ಈಶ್ವರ ಗುಡಿಯ ಮುಂದಿನ ಬಿಲ್ವಪತ್ರೆ ಮರವನ್ನು ಏರುತ್ತಾನೆ. ಮರದ ಮೇಲಿದ್ದ ಮೂಗನನ್ನು ಕೆಳಗಿಳಿಸಲು ಯತ್ನಿಸುತ್ತಾರೆ. ಊರ ಜನರ ಕೆಟ್ಟ ಮನಸ್ಸುಗಳ ಆಚೆ ಜಿಗಿದು ಹೋಗುತ್ತಾನೆ.

ತನ್ನ ಸ್ವಂತ ಭೂಮಿಯನ್ನು ಕಳೆದುಕೊಂಡು, ಅದನ್ನು ಹೋರಾಟದಿಂದ ಪಡೆಯಲು ಸಾಧ್ಯವಾಗದೇ ಉಳಿಯುತ್ತದೆ. ಈತನ ಮೂಕವೇದನೆ ಊರಿನ ಜನರಿಗೆ ಅರ್ಥವಾಗದೇ ಉಳಿಯುತ್ತದೆ. ಈತನ ರೈತನಾಗುವ ಅದಮ್ಯ ಬಯಕೆ ಬಯಕೆಯಾಗಿಯೇ ಉಳಿಯುತ್ತದೆ.

### ೭. ಎಸ್. ಗಂಗಾಧರಯ್ಯ : ನವಿಲ ನೆಲ

ಎಸ್.ಗಂಗಾಧರಯ್ಯ ಅವರ ನವಿಲ ನೆಲ ಕತೆಯಲ್ಲಿ ಭೂಮಿಯೊಂದಿಗಿನ ಮಾನವೀಯ ಸಂಬಂಧವನ್ನು

ವ್ಯಕ್ತಗೊಳಿಸುತ್ತದೆ. ಕಂದಾಯ ಇಲಾಖೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತಿಯಾದ ಚಕ್ರಪಾಣಿ ತನ್ನೂರಿಗೆ ಮರಳುತ್ತಾನೆ. ಚಕ್ರಪಾಣಿಯ ಮಗ ಇಂಜಿನಿಯರಿಂಗ್ ವಿದ್ಯಾಭ್ಯಾಸ ಮಾಡಿ ವಿದೇಶಕ್ಕೆ ವೃತ್ತಿಗಾಗಿ ಹೋಗುತ್ತಾನೆ. ಇತ್ತ ಚಕ್ರಪಾಣಿ ನಿವೃತ್ತಿ ಬದುಕನ್ನು ತನ್ನ ಹುಟ್ಟೂರಿನಲ್ಲಿ ರೈತನಾಗಿ ಕಳೆಯುವ ಬಯಕೆ ಹೊಂದುತ್ತಾನೆ.

ಈ ಮುನ್ನ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಸಂದರ್ಭದಲ್ಲಿ ತಮ್ಮ ಊರಿನ ಬಳಿ ದಿಬ್ಬದ ಬಳಿಯ ಸಮತಟ್ಟಾದ ಭೂಮಿಯನ್ನು ಹಿಂದುಳಿದ ವರ್ಗದವರಿಂದ ಬಗರ್‌ಹುಕುಂ ಸಾಗುವಳಿಗೆ ಅರ್ಜಿಹಾಕಿಸಿ ತಾನೇ ಲಪಟಾಯಿಸಿರುತ್ತಾನೆ. ಈ ಅಧಿಕಾರಿಯ ಧೋರಣೆಯನ್ನು ಗಮನಿಸಬಹುದು.

ಚಕ್ರಪಾಣಿ ಊರಿನ ಮಂದಿನ ಮಲ್ಬಿಯ ನೆಲ ವನ್ನು ಉಳುಮೆ ಬೆಳೆಯನ್ನು ಮಾಡುವ ಕನಸು ಹೊತ್ತಿರುತ್ತಾನೆ. ಇದೇ ಕಾಲಕ್ಕೆ ಸರ್ಕಾರವು ಅಭಿವೃದ್ಧಿ ಯೋಜನೆಯ ಮೂಲಕ ಹಳ್ಳಿಯ ಕೆರೆಗಳ ಹೂಳೆತ್ತುವ ಕಾರ್ಯ ಆರಂಭಿಸುತ್ತದೆ. ಇದೇ ಊರಿನಲ್ಲಿ ಹೊಸ ಕೆರೆಯನ್ನು ನಿರ್ಮಿಸುವ ಯೋಜನೆಯನ್ನು ರೂಪಿಸುತ್ತದೆ. ಚಕ್ರಪಾಣಿಯ ಬಗರ್‌ಹುಕುಂ ಸಾಗುವಳಿ ಭೂಮಿಯನ್ನು ಕೆರೆ ನಿರ್ಮಿಸಲು ಅರ್ಜಿ ಸಲ್ಲಿಸಲಾಗುತ್ತದೆ. ಇದಕ್ಕೆ ಪ್ರತಿಯಾಗಿ ಚಕ್ರಪಾಣಿ ತೋಟ ಹಣ್ಣಿನ ತೋಟವನ್ನು ಮಾಡಲು ಮುಂದಾಗುತ್ತಾನೆ. ಊರಿನ ಜನಸಮುದಾಯದ ಮುಂದೆ ಕೆರೆ ನಿರ್ಮಾಣವಿದೆ. ಸಾರ್ವಜನಿಕ ಹಿತ ಅದರಲ್ಲಿ ಅಡಿಗಿದ್ದು, ಚಕ್ರಪಾಣಿ ಕೊನೆಗೆ ಭೂಮಿಯನ್ನು ಉಳಿಸಿಕೊಳ್ಳಲು ಹೋರಾಟ ನಡೆಸಿದ್ದು ವಿಫಲವಾಗುತ್ತದೆ.

ಇತ್ತ ಚಕ್ರಪಾಣಿಯ ಮಗ ವಿದೇಶದಲ್ಲಿ ಮದುವೆಯಾಗಿ ತನ್ನ ಮಗಳಿಗೆ ನವಿಲು ಎಂದು ಹೆಸರಿಡುತ್ತಾನೆ. ಏಕಕಾಲಕ್ಕೆ ತನ್ನ ಭೂಮಿಯನ್ನು ಕಳೆದುಕೊಂಡ ಸಂಕಟ ಮತ್ತು ತನ್ನ ಮಗ ಮದುವೆಯಾಗಿ ಮಗುವಿಗೆ ತಂದೆಯಾಗಿರುವುದು ತಿಳಿದು ಒಂದು ರೀತಿಯಲ್ಲಿ ಶಾಕ್ ಆಗುತ್ತದೆ. "ಚಕ್ರಪಾಣಿಗೆ ಜನರ ಮಾತುಗಳಿಂದ ಆತನ ಎದೆಯಲ್ಲಾದ ನೋವು ಭೂಮಿಯಿಂದಾಗಬಹುದಾದ ಗಾಯಕ್ಕೆ ನಿದ್ದೆ ಕಳಕಂಡು ಮದ್ದಿಗಾಗಿ ಅಲೆಯುತ್ತಿದ್ದ."[೯] ತನ್ನ ಮಗ ಚಿಕ್ಕವನಾಗಿದ್ದಾಗ ತಮ್ಮ ಭೂಮಿಯಲ್ಲಿ ನವಿನಂತೆ ಕುಣಿಯುತ್ತಿದ್ದ ಅಂದಹಾಗೆ ತನ್ನ ಮಗಳಿಗೆ ನವಿಲು ಎಂದು ಹೆಸರಿಟ್ಟಿದ್ದಾನೆಂದು ಸಮಾಧಾನಪಟ್ಟುಕೊಳ್ಳುತ್ತಾನೆ.

ಈ ಊರ ರೈತರ ನೀರಿನ ಸಮಸ್ಯೆ ಒಂದು ಕಡೆ ಇದೆ. ಇನ್ನೊಂದೆಡೆ ಸರ್ಕಾರವೇ ಭೂಮಿಯನ್ನು ವಶಪಡಿಸಿಕೊಂಡು ಅಭಿವೃದ್ಧಿಯ ಹೆಸರಿನಲ್ಲಿ ಮುಂದಾಗಿದೆ. ಆತನಿಗೆ ಪುನರ್ವಸತಿಗೂ ಏರ್ಪಾಟಾಗಿದೆ. ಏಕ ಕಾಲಕ್ಕೆ ಭೂಮಿ ಪ್ರಶ್ನೆ ಮತ್ತು ರೈತಪ್ರಶ್ನೆಯನ್ನು ಈ ಕತೆಯು ಪ್ರತಿನಿಧಿಸುತ್ತದೆ.

ಕೃಷ್ಣನಾಯಕರ ಮೋತುನ ಮದ್ವೆ ಕತೆಯು ಲಂಬಾಣಿ ಜನಾಂಗದ ಬದುಕಿನ ಜೊತೆಗೆ ಭೂ ಪ್ರಶ್ನೆಯನ್ನು ವ್ಯಕ್ತಗೊಳಿಸುತ್ತದೆ. ಊರಿನ ಭೂಮಾಲೀಕ ಗೌಡನ ಮನೆಯಲ್ಲಿ ಜೀತಕ್ಕಿಂದ ಕಥಾನಾಯಕ ತಂದೆ ಖಾಯಿಲೆಯಿಂದ ಸಾವುಬದುಕಿನೊಂದಿಗಿರುತ್ತಾನೆ. ಈತನ ಚಿಕಿತ್ಸೆಗಾಗಿ ತಮ್ಮ ಬಳಿಯಿದ್ದ ನಾಲ್ಕು ಭೂಮಿಯನ್ನು ಗೌಡನಿಗೆ ಒತ್ತೆ ಇಡುತ್ತಾರೆ. ಚಿಕಿತ್ಸೆ ಫಲಕಾರಿಯಾಗದೆ ತಂದೆ ಸಾವಪ್ಪುತ್ತಾನೆ.ಈ ಸಂದರ್ಭದಲ್ಲಿ ಒತ್ತೆ ಇಟ್ಟ ಭೂಮಿಯ ಮೇಲಿನ ಸಾಲ ಬೆಳೆದು ತೀರಿಸಲಾಗುವುದಿಲ್ಲ.

ಭೂಮಾಲೀಕ ಸಾಲ ತೀರಿಸದಿದ್ದರಿಂದ ಭೂಮಿಯನ್ನು ತನ್ನದಾಗಿ ಮಾಡಿಕೊಳ್ಳುತ್ತಾನೆ. ಹೇಗಾದರೂ ಮಾಡಿ ಸಾಲ ತೀರಿಸಿ ಭೂಮಿಯನ್ನು ತನ್ನದಾಗಿಸಿಕೊಳ್ಳಬೇಕೆಂಬ ಬಯಕೆ ಮೋತುವಿಗೆ ಅದಮ್ಯವಾಗಿದೆ. ಭೂಮಾಲೀಕನ ಮನೆಯಲ್ಲಿ ಜೀತಕ್ಕಿದ್ದರೂ ಸಾಲ ತೀರದೆ ಹೋಗುತ್ತದೆ. ಮೋತು ಮಹಾರಾಷ್ಟ್ರದ ರತ್ನಗಿರಿಗೆ ಹೋಗಿ ದುಡಿದು ಹಣಸಂಪಾದಿಸಿ ಸಾಲ ತೀರಿಸುವ ನಿರ್ಧಾರ ಕೈಗೊಳ್ಳುತ್ತಾನೆ. ಆತ ರತ್ನಗಿರಿಗೆ ನಾಲ್ಕಾರು ತಿಂಗಳಲ್ಲಿ ಹಣ ಸಂಪಾದಿಸಿ ಭೂಮಿಯನ್ನು ಪಡೆಯಲು ತನ್ನೂರಿಗೆ ಮರಳುತ್ತಾನೆ.

ಆದರೆ ಊರಿನ ವಾತಾವರಣವೇ ಬದಲಾಗಿ ಭೂಮಿಗಾಗಿ ಸಾಲ ತೀರಿಸುವ ಬದಲು ಮದುವೆ ಮಾಡಿಸಲು ಯತ್ನಿಸುತ್ತಾರೆ. ಊರ ಜನರ ಒತ್ತಾಯಕ್ಕೆ ಮಣಿದು ಮೋತು ಮದುವೆಗೆ ಒಪ್ಪುತ್ತಾನೆ. ತಾನು ಗಳಿಸಿದ ಹಣದ ಜೊತೆಗೆ ಸಾಲ ಮಾಡಿ ಅದ್ದೂರಿಯ ಮದುವೆ ಮಾಡಲಾಗುತ್ತದೆ. ಮೋತು ಮತ್ತಷ್ಟು ಸಾಲಗಾರನಾಗಿದ್ದರಿಂದ ರೈತನಾಗುವ ಕನಸು ಕನಸಾಗಿಯೇ ಉಳಿಯುತ್ತದೆ. ಭೂಮಿಯನ್ನು ಪಡೆಯುವ ಸಲುವಾಗಿ ಹೆಂಡತಿಯೊಂದಿಗೆ ಪುನಃ ರತ್ನಗಿರಿಗೆ ತೆರಳುತ್ತಾನೆ. ಈ ವಿಷಯ ತಿಳಿದು ತಾಯಿ ಅರೆಹುಚ್ಚಿಯಂತಾಗುತ್ತಾಳೆ. ಆದರೆ ಮೋತು ತಾಯಿಗೆ ಭರವಸೆ ನೀಡುತ್ತಾನೆ. " ಎಟ್ ವರ್ಷ ಕಳೆದರೂ ನಮ್ಮ ಸಾಲ ತೀರೋದಿಲ್ಲ ನಮ್ಮ ಭೂಮಿ ಬಿಡಿಸ್ಕೊಳ್ಳೋದು

ಆಗುವುದಿಲ್ಲ ಅದಕ್ ಒಂದು ಮೂರ್‍ನಾಕ್ ತಿಂಗಳು ನೀ ಗಟ್ಟಿ ಮನಸ್ಸು ಮಾಡಿ ಇರು. ನಾ ದುಡದು ರುಪ್ಯೆ ಗಳಿಸಿಕೊಂಡು ಬರ್‍ತೀನಿ"[೧೯]

ಭೂಮಾಲೀಕ ವ್ಯವಸ್ಥೆ ಸಾಲದ ಬಲೆಯೊಳಗೆ ನೇಯ್ದು ನೇಯ್ಗೆಯಿಂದ ಬಿಡಿಸಿಕೊಳ್ಳಲು ಮೋತು ಹೊರ ನಡೆಯುತ್ತಾನೆ. ಒಂದೆಡೆ ಭೂಮಿಯ ಅದಮ್ಯ ಬಯಕೆಯಿದೆ. ಭೂಮಿಯನ್ನು ಲಪಟಾಯಿಸುವ ಭೂಮಾಲೀಕ ವರ್ಗವು ಯಥಾಸ್ಥಿತಿಯನ್ನು ಕಾಪಾಡಿಕೊಳ್ಳಲು ಯತ್ನಿಸುತ್ತದೆ.

**೮.ಮುಟ್ಟುಗಪ್ಪೆ ಪರುಶರಾಂ - ಭೂ ಸಂಬಂಧಿ ನೆಲೆ**

**'ಬಯಕೆ ತೋಟದ ಬೇಲಿಯೊಳಗೆ'** ಕತೆಯಲ್ಲಿ ನಿಂಗಪ್ಪ ಅಪ್ಪ ದುರುಗ ಭೂಮಾಲೀಕರಲ್ಲಿ ಜೀತಕ್ಕಿದ್ದವರು. ನಿಂಗ ಮತ್ತು ವೆಂಕರು ಬಾಲ್ಯದ ಗೆಳೆಯರು. ನಿಂಗ, ವೆಂಕ ಮತ್ತು ಕರಿಯಜ್ಜ ಮೂರು ಮಂದಿ ಸೇರಿ ಬೀಡಿ ಕಟ್ಟಲು ಬಳಸುವ ತುಮುರೆಲೆ ತರಲು ಕಾಡಿಗೆ ಹೋಗುತ್ತಾರೆ.

ಬೇಸಾಯದ ಬದುಕಿನೊಂದಿಗೆ ತುಮುರೆಲೆಯಿಂದ ಬೀಡಿ ಕಟ್ಟುವುದನ್ನು ಉಪಕಸುಬಾಗಿಸಿ ಕೊಂಡಿರುವುದು ಈ ಕತೆಯಲ್ಲಿ ವ್ಯಕ್ತವಾಗುತ್ತದೆ. ಕೋಣನ ಮನೆಯಿಂದ ಅಬಸಿ ಅಡವಿಕಡೆ ಈ ಮೂರು ಮಂದಿ ತುಮುರೆಲೆ ತರಲು ಹೋಗುತ್ತಾರೆ. ಕರಿಯಜ್ಜನಿಗೆ ಅಬಸಿ ಅಡವಿ ಬಳಿ ಹೋದ ತಕ್ಷಣವೇ ತನ್ನ ಹಿಂದಿನ ದಿನಗಳ ನೆನಪುಗಳು ಒತ್ತರಿಸಿ ಬರುತ್ತವೆ. ಈ ಭಾಗದ ತಣಿಗೆ ಗೌಡ ಸುತ್ತಲ ಹಳ್ಳಿಯ ಜಮೀನೆಲ್ಲ ಆಕ್ರಮವಾಗಿ ವಶಪಡಿಸಿಕೊಂಡಿದ್ದಾನೆ. ಇಂತಹ ಅಕ್ರಮ ಜಮೀನುಗಳನ್ನು ಗೇಣಿರೈತರಿಗೆ ಕೊಟ್ಟು ಗೇಣಿ ಬತ್ತವನ್ನು ಗೌಡ ವಸೂಲಿ ಮಾಡುತ್ತಿರುತ್ತಾನೆ.

ಈ ಕಾಲಕ್ಕಾಗಲೇ ಉಳುವವನೇ ಹೊಲದೊಡೆಯ ಎಂಬ ಕಾನೂನು ಜಾರಿಯಾಗಿದ್ದರಿಂದ ಭೂ ಒಡೆತನಕ್ಕಾಗಿ ರೈತರೆಲ್ಲ ತಿರುಗಿಬೀಳುತ್ತಾರೆ. ಅಲ್ಲದೆ ಭೂಒಡೆತನಕ್ಕಾಗಿ ಸರ್ಕಾರಕ್ಕೆ ಅರ್ಜಿ ಹಾಕುತ್ತಾರೆ. ಆದರೆ ಭೂಮಾಲೀಕ ಮಂತ್ರಿಯೊಬ್ಬನ ಪ್ರಭಾವ ಬಳಸಿ ರೈತರ ಆಟನಡೆಯದಂತೆ ವ್ಯವಸ್ಥಿತವಾಗಿ ಹುನ್ನಾರ ನಡೆಸುತ್ತಾನೆ.ಇದಕ್ಕೆ ಕರಿಯಜ್ಜ ಪ್ರತಿಕ್ರಿಯಿಸಿದ ಬಗೆಯನ್ನು ಇಲ್ಲಿ ಗಮನಿಸಬಹುದು. "ಊರಗಿನ್ ಗದ್ಯಲ್ಲ ಸೂಳೇಮಗ ಗೌಡುನ್ ಸೊತ್ತು ಕಾನಿಗೆ ಬಂದ್ರೂ ಅವುಂದೇ ಊರಿಗೋದ್ರು ಅವುಂದೇ ತ್ಯಾಟುಕ್ಕೇ ಸಪ್ಪಿನ್‌ಬ್ಯಟ್ಯಕ್ಕೆ ಅಂತ ಗುಡ್ಡ ಬ್ಯಟ್ಯನೆಲ್ಲ ಸವುರ್ಸಿ ಅದಂಥಾ ನೀಲ್ ಗೀರಿ, ಅಕೇಸಿ ಮರ ಹಾಕಾಕೆ ಪ್ಯಾಟರಿಗೆ ಗುತ್ಗೆ ಕೊಟ್ಟಾನೆ ಇವುನ್ ದುರಾಸಿಂದ್ಲೇ ಕಾಡೆಲ್ಲ ಹಳುಚುಗಾಗಿ ಬೀಡೆ ಸೆಯ್ಯನೆ ಅಂದ್ರೆ ಒಂದು ತುಮ್ರ್ ಎಲೆಸಿಗಂಗಿಲ್ಲ ಇವುನವ್ವನ್"[೨೦]

ಇಲ್ಲಿ ಸಹಜವಾಗಿ ದೊರೆಯುತ್ತಿದ್ದ ತುಮ್ರಿ ಎಲೆಯೂ ಸಿಗದ ಹಾಗೆ ಬೆಟ್ಟ ಗುಡ್ಡಗಳನ್ನೆಲ್ಲಾ ಅಗೆದು ಭೂಮಿಯನ್ನು ಆಕ್ರಮಿಸಿಕೊಂಡಿದ್ದಕ್ಕೆ ಕರಿಯಜ್ಜ ಆಕ್ರೋಶ ವ್ಯಕ್ತಪಡಿಸುತ್ತಾನೆ. ಆ ಕಾಲಕ್ಕೆ ಈ ಸಂಚಿನ ಬಗ್ಗೆ ಭೂಮಾಲೀಕರ ವಿರುದ್ಧವಾಗಿ ಯಾರೂ ಚಕಾರವೆತ್ತುವಂತಿರಲಿಲ್ಲ. ಈ ಕತೆಯಲ್ಲಿ ಮೌನವಾಗಿ ಭೂಮಾಲೀಕನ ದರ್ಪಕ್ಕೆ ಭೂರಹಿತರು ತಲೆ ಬಾಗುವುದನ್ನು ಕಾಣುತ್ತೇವೆ. ಆದರೆ ಇಲ್ಲಿ ಕರಿಯಜ್ಜ ಭೂಮಾಲೀಕರ ವಿರುದ್ಧ ದನಿ ಎತ್ತುವುದು ಮುಖ್ಯನೆಲೆಯಾಗಿ ಕಂಡುಬರುತ್ತದೆ.

**`ಗುಳೆ'** ಕತೆಯಲ್ಲಿ ಸರ್ಕಾರದ ಯೋಜನೆಯ ಮೂಲಕ ತನ್ನ ಹಣದ ಮಾಯೆಯಿಂದ ಭೂಮಿಯನ್ನು ಉಳಿಸಿಕೊಳ್ಳುವ ತಂತ್ರವು ವ್ಯಕ್ತವಾಗುತ್ತದೆ. ಭೂಮಾಲೀಕ ಸಾಹುಕಾರ ಶಂಕರಣ್ಣ,ಗೋಪಾಲಯ್ಯ,ಲಂಚ ನೀಡುವ ಮೂಲಕ ತಮ್ಮ ೨೦ ಎಕ್ರೆ ಭೂಮಿಯನ್ನು ಉಳಿಸಿಕೊಳ್ಳುತ್ತಾನೆ.ಆದರೆ ಬಡವರಿಗೆ ನೀಡಿದ್ದ ಬಗರ್‌ಹುಕುಂನಿಂದ ಪಡೆದ ಜಮೀನನ್ನು, ಅರಣ್ಯ ಇಲಾಖೆಯವರು ಪುನಃ ಕಾಡಾಗಿ ಮಾರ್ಪಡಿಸುವ ಯೋಜನೆಯ ಮೂಲಕ ಭೂಮಿಯನ್ನು ವಶಪಡಿಸಿಕೊಳ್ಳುವ ಚಿತ್ರಣವಿದೆ. ಈ ಭೂಮಿಯನ್ನು ಬಳಸಿರುವ ಬಡಕುಟುಂಬದ ಅಕ್ಕಮ್ಮ ಮತ್ತು ಆತನ ದುರ್ಬಲ ರೋಗಿಷ್ಟ ಗಂಡ ರಂಗಪ್ಪನ ಎರಡು ಎಕರೆ ಜಮೀನನ್ನು ಸರ್ಕಾರ ವಶಪಡಿಸಿಕೊಳ್ಳುತ್ತದೆ. ಇದು ಅರಣ್ಯ ಒತ್ತುವರಿ ಕಾಯ್ದೆಯಡಿ ಬಗರ್‌ಹುಕುಂನ ಭೂಮಿಯನ್ನು ವಶಪಡಿಸಿಕೊಳ್ಳುತ್ತದೆ.

ಇದು ಅಕ್ಕಮ್ಮನ ಕುಟುಂಬಕ್ಕೆ ಆಸರೆಯಾಗಿದ್ದ ಏಕೈಕ ಎರಡು ಎಕರೆ ಹೊಲವನ್ನು ಸರ್ಕಾರ ವಶಪಡಿಸಿಕೊಂಡು ನಾಡನ್ನು ಕಾಡಾಗಿಸಲು ಯತ್ನಿಸುತ್ತದೆ.ಈ ಭೂಮಿಗೆ ಗಿಡಗಳನ್ನು ನೆಡುವ ಮೂಲಕ

ಕಾಡನ್ನಾಗಿಸಲು ಸರ್ಕಾರ ಯತ್ನಿಸುತ್ತದೆ. ಇಲ್ಲಿ ಸಹಜವಾಗಿ ರೈತಾಪಿ ಬದುಕನ್ನು ನಡೆಸುತ್ತಿದ್ದ ಹಳ್ಳಿಗರಿಗೆ ನುಂಗಲಾರದ ತುತ್ತಾಗುತ್ತದೆ. ಇದರಿಂದ ಬಡ ಕುಟುಂಬದ ಅಕ್ಕಮ್ಮನ ಇದ್ದ ಎರಡು ಎಕರೆ ಹೊಲವು ಇಲ್ಲದಂತಾಗುತ್ತದೆ.

ಈ ಯೋಜನೆಯ ಪ್ರಕಾರ ಸರ್ಕಾರದ ಬುಲ್ಡೋಜರ್ ನೆಲಸಮ ಮಾಡಲು ಬರುತ್ತದೆ. ಈ ಬುಲ್ಡೋಜರ್‌ನ ಚಾಲಕ ಮುಸ್ತಾಫ ಇಲ್ಲಿನ ಜನರಿಂದ ಮುತ್ತಪ್ಪಣ್ಣನಾಗಿ ಮಾನವೀಯತೆಯ ಮುಖವಾಗಿ ಕಾಣುತ್ತಾನೆ. ಇದೇ ಕಾಲಕ್ಕೆ ದುಃಖದಲ್ಲಿದ್ದ ಅಕ್ಕಮ್ಮನ ಬದುಕಿಗೆ ಬೆಳಕಾಗುವಂತೆ ಈತ ಬರುತ್ತಾನೆ. ಈತ ಅವರ ಬಡತನಕ್ಕೆ ನೆರವು ನೀಡಲು ಮುಂದಾಗಿ ಸಾಗರ ಪಟ್ಟಣದಲ್ಲಿ ದುಡಿಮೆಗೆ ದಾರಿ ತೋರುತ್ತಾನೆ.

ಈ ಕತೆಯಲ್ಲಿ ಬಗರ್‌ಹುಕುಂ ಸಾಗುವಳಿಯಲ್ಲಿ ಪಡೆದುಕೊಂಡಿದ್ದ ಭೂಮಿಯನ್ನು ಸರ್ಕಾರದ ಯೋಜನೆಯ ಹೆಸರಿನಲ್ಲಿ ಭೂಹೀನರಿಗೆ ನೀಡಿದ್ದ ಭೂಮಿಯನ್ನು ಪುನಃ ಸರ್ಕಾರವೇ ವಶಪಡಿಸಿಕೊಳ್ಳುತ್ತದೆ. ಇದನ್ನು ಪ್ರತಿಭಟಿಸಲು ಆಗದೆ ಹಳ್ಳಿಯ ಜನರು ಮೌನ ವಹಿಸುವುದನ್ನು ಕಾಣುತ್ತೇವೆ.

**ಹೆಂಚು** ಕತೆಯು ಕಾಗೋಡಿನಲ್ಲಿ ನಡೆದ ಚಳವಳಿಯ ಘಟನೆಯನ್ನು ಆಧರಿಸಿದ ಕಥಾವಸ್ತುವಾಗಿದೆ. ಕಾಗೋಡು ಸತ್ಯಾಗ್ರಹದಲ್ಲಿ ಊರಿನ ಜನರನ್ನು ಹುರಿದುಂಬಿಸಲು ಹೋರಾಟಗಾರ ಗಣಪತಿಯಪ್ಪ ಇಲ್ಲಿ ಕಾಣಿಸಿಕೊಳ್ಳುತ್ತಾರೆ. "ಗಾಂಧಿ ಆಸ್ರಿವಾದದಿಂದ ನಮ್ಗೆ ಸ್ವತಂತ್ರಂತೂ ಬಂತು ಆದ್ರೂ ನಾವಿನ್ನೂ ಗೇಣಿದಾರ್ರಾಗೆ ಉಳ್ದು ಬಿಟ್ಟುವು. ವಡೇರ ಗದ್ದೆ ಹೊಡೆರು ಬತ್ತವ ಬ್ಯಳಿಯರು ನಾವು ಅರೆಹೊಟ್ಟೆ ಹರ್ಕು ಬಟ್ಟೆಗೆ ದಿನದೂಡಿ ದುಡ್ದುದ್ನ ಗೇಣಿ ರೂಪ್ದಾಗೆ ಗುತ್ಗೆ ತುಂಬಬೇಕು ಹಿಂಗೇ ಆದ್ರೆ ನಾಂವು ರೈತ್ರು ಉದ್ಧಾರ ಆಗಂಗೆಲ್ಲನಾಂವ್ ಸಾಗ್‌ಮಾಡ ಭೂಮಿ ಎಲ್ಲಿವರ್ಗೂ ನಮ್ದು ಅಗದೆಲ್ಲೊ ಅಲ್ಲೀವರ್ಗೂ ನಮ್ಗೆ ಸ್ವತಂತ್ರ್ಯಯಲ್ಲ ನನ್ ಅಣ್ಣತಮ್ದಿರೆ ದಯ್ಮಾಡಿ ನೀಂವು ಗೇಣಿ ಕೊಡದ್ನ ನಿಲ್ಲುಸ್‌ಬೇಕು ಆ ಭೂಮಿ ನ್ಯಾಯ್ವಾಗಿ ನಮ್ಗೇ ಸಲ್ಬೇಕು ಅದಕ್ಕಾಗಿ ನೀವೆಲ್ಲ ಕಾಗೋಡು ಸತ್ಯಾಗ್ರಹದಾಗೆ ಪಾಲ್ಗೊಳ್ಳಬೇಕು."[೧೨] ಎಂದು ಕನ್ನನಿಗೆ ಹುರಿದುಂಬಿಸುತ್ತಾರೆ.

ಈ ಕತೆಯು ಮುಂದೆ ಸಾಗುತ್ತ,ಗಿಡ್ಡ ರಾಮಕೃಷ್ಣಯ್ಯ ಗೇಣಿ ರೈತನಾಗಿರುವ ಚಿತ್ರಣವನ್ನ ಕಾಣುತ್ತೇವೆ. ಭೂ ಸುಧಾರಣಾ ಕಾನೂನು ಬಂದ ನಂತರದಲ್ಲಿ ಭೂಮಾಲೀಕ ಗದ್ದೆ ಕೊಡಲು ನಿರಾಕರಿಸುತ್ತಾನೆ. ಆದರೆ ಗಿಡ್ಡ ತನ್ನ ಹಠ ಬಿಡದೆ ಹೆಚ್ಚಿಗೆ ಪಲ್ಲ ಭತ್ತ ನೀಡಿ ಗೇಣಿ ಭೂಮಿಯನ್ನು ಪಡೆಯುತ್ತಾನೆ. ಆದರೆ ಭೂ ಸುಧಾರಣಾ ಕಾನೂನು ಬಂದ ನಂತರದಲ್ಲಿ ಗೇಣಿರೈತರು ಸರ್ಕಾರಕ್ಕೆ ಅರ್ಜಿ ಕೊಡುತ್ತಿರುವುದನ್ನು ಗಮನಿಸಬಹುದಾಗಿದೆ." ಅಂತೂ ಅಂದಿನ ರೋಗ ಅರ್ಜಿ ಕೊಡುವುದು ಅದು ಗುಜರಿಗೆ ಹೋಗುವುದು ಮತ್ತೆ ಅರ್ಜಿ ಕೊಡುವುದು ಹೀಗೆ ಇಪ್ಪತ್ತು ವರ್ಷಗಳೇ ಕಳೆದ ಮೇಲೆ ಆ ಕೂಗು ಕೂಳಾಗಿತ್ತು."[೧೩] ಈ ಕತೆಯಲ್ಲಿ ಭೂಸುಧಾರಣೆಯಿಂದ ಭೂಮಿ ದಕ್ಕಿದೆ ಎಂಬ ಸಂದೇಶ ವ್ಯಕ್ತವಾಗುತ್ತದೆ. ಗೇಣಿ ರೈತರು ತಾವು ಉಳುಮೆ ಮಾಡುತ್ತಿದ್ದ ಭೂಮಿಯನ್ನು ಅರ್ಜಿ ಹಿಡಿದು ಅಲೆದಲೆದು ಇಪ್ಪತ್ತು ವರ್ಷಗಳವರೆಗೆ ಕಾಯ್ದಿದ್ದರ ಫಲ ಅದು ಕೂಳಾಗಿತ್ತು. ಅಂದರೆ ಅದು ಗೇಣಿ ರೈತನ ಬದುಕಿನ ಆಸರೆಯಾಗಿತ್ತು ಎಂಬ ಮಾತು ಧ್ವನಿಸುತ್ತದೆ.

ಏಕ ಕಾಲಕ್ಕೆ ಗೇಣಿರೈತರ ಅರ್ಜಿಗಳ ಮೂಲಕ ದಿಕ್ಕುತಪ್ಪಿಸುವ ಮತ್ತು ಭೂಮಿಯಿಂದ ವಂಚಿಸುವ ಸಂಚು ಭೂಮಾಲೀಕರಿಂದ ನಡೆಯುತ್ತಿದ್ದುದನ್ನು ಕಾಣಬಹುದಾಗಿದೆ. ಈ ಬಗ್ಗೆ ಗೇಣಿರೈತ ಜಾಗೃತಗೊಂಡು ಪ್ರತಿಕ್ರಿಯಿಸಿರುವುದನ್ನು ಕಾಣುತ್ತೇವೆ. "ಕ್ರಮೇಣ ಜಾಗೃತಗೊಂಡ ಒಡೆಯರು ತಮ್ಮ ಗೇಣಿದಾರರಿಗೆ ಬೆದರಿಕೆ ಒಡ್ಡಿಯೋ ಆ ಗದ್ದೆಯಲ್ಲಿ ಈ ಗದ್ದೆ ತಗೋ ಎಂದೂ ಅಷ್ಟಿಷ್ಟು ಕಾಸು ಹೆಂಡ ಕೊಟ್ಟೋ ಖಾಲಿ ಪೇಪರ್ ಮೇಲೆ ಹೆಬ್ಬೆಟ್ಟೊತ್ತಿಸಿಕೊಂಡು ಅವರನ್ನೆಲ್ಲಾ ಶಾಶ್ವತವಾಗಿ ನರಕದ ಕೂಪಕ್ಕೆ ತಳ್ಳಿದರು. ಕನ್ನನ ಅಪ್ಪ ಗಿಡ್ಡ ಮಾತ್ರ ಯಾವುದಕ್ಕೂ ಜಗ್ಗದೆ ಸೊರಬ, ಸಾಗರ ಎಂದು ಸುತ್ತಿ ಅರ್ಜಿ ಹಾಕಿ ಆರು ಎಕರೆಯನ್ನು ತನ್ನಂತೆ ಮಾಡಿಕೊಂಡ."[೧೪]

ಇಲ್ಲಿ ಭೂಸುಧಾರಣಾ ಕಾನೂನು ಜಾರಿಯಾಗುವ ಮೂಲಕ ಉಳುವವನೇ ಒಡೆಯ ಎಂಬ ಆಶಯ ಈ ಕತೆಯಲ್ಲಿ ವ್ಯಕ್ತವಾಗುತ್ತದೆ. ಅಲ್ಲದೆ ಗೇಣಿರೈತರ ಅವಿರತ ಹೋರಾಟದ ಮೂಲಕ ಭೂಮಿಯು ದಕ್ಕಿರುವುದು ಇಲ್ಲಿ ಕಂಡುಬರುತ್ತದೆ. ಕನ್ನ ತನ್ನಪಾಲಿಗೆ ಬಂದ ಭೂಮಿಯನ್ನು ತನ್ನ ಇಬ್ಬರು ತಮ್ಮಂದಿರೊಂದಿಗೆ ಎರಡೆರಡು ಎಕರೆ ಭೂಮಿಯನ್ನು ಹಂಚಿಕೊಳ್ಳುತ್ತಾರೆ.

## ೯.ಕಲಿಗಣನಾಥ ಗುಡದೂರು : ಮಣ್ಣು

ಮಣ್ಣು ಕತೆಯಲ್ಲಿ ಸಾಂತಪ್ಪನ ಭೂಮಿಯೊಂದಿಗಿನ ಅಂತರ್‌ಸಂಬಂಧದಲ್ಲಿ ಜೀವ ಮತ್ತು ಭೂಮಿ ಎರಡು ಒಂದೇ ಎಂಬ ದನಿಯಾಗಿ ಕತೆಯಲ್ಲಿ ವ್ಯಕ್ತಗೊಂಡಿದೆ. ಬೇಸಾಯದ ಭೂಮಿ ಸಾಂತಪ್ಪನ ಉಸಿರಾಗಿದೆ. ತನ್ನ ತಮ್ಮನಿಂದ ತಾನು ಉತ್ತುತ್ತಿದ್ದ ಭೂಮಿಯನ್ನು ಮಾರುವ ವಿಚಾರ ಬರುತ್ತದೆ. ಸಾಂತಪ್ಪ ಭೂಮಿಯನ್ನು ಮಾರುವುದರ ವಿರುದ್ಧ ಹೋರಾಡುವ ಚಿತ್ರಣ ಈ ಕತೆಯ ವಸ್ತುವಾಗಿದೆ.

ಸಾಂತಪ್ಪ ಮಣ್ಣಿನೊಂದಿಗಿನ ಸಂಬಂಧವನ್ನು ಹೀಗೆ ವ್ಯಕ್ತಪಡಿಸುತ್ತಾನೆ."ಒಂದ್ ಇಂಚು ಅಂದ್ರ ಒಂದು ಇಂಚು ಹೊಲಾನ ರೊಕ್ಕಕ್ಕ ಮಾರಾಂಗಿಲ್ಲ. ಹಿಡಿ ಮಣ್ಣನ್ನ ಉಡಿ ತುಂಬಾ ಬಂಗಾರ ತಂದೀನಿ ಕೊಡು ಅಂದ್ರೂ ಕೊಡಾಂಗಿಲ್ಲ. ಒಂದಾ ಮುಂಜಾನೆಲಿಂದ ಹಿಡಿದು ರಾತ್ರಿ ಆಗೊ ತನಕ ಹೊಲ್ದಾಗ... ಹೇಣ್ತಿ ಮಕ್ಳು, ಎಲ್ಲಾರು ಕೂಡಿ ದುಡುದು ಬರಡು ಬರಡಾಗಿದ್ದನ್ನ ಬಂಗಾರ ಬಂಗಾರ ಬೆಳೆಯಾಂಗ ಮಾಡೀವಿ... ದನಗಳ ಜೊತೆ ದನಗಳಾಗಿ ದುಡಿದೀವಿ... ಬಿಸಿಲಿಗಿ ಬೆವರೀವಿ... ಛಳಿಗಿ ನಡುಗೀವಿ.. ಮಳಿಯಾಗ ನೆನಿದೀವಿ...ಮೈಯಿ ಹಚ್ಚಿ ಅಪ್ಪಿಕೊಂಡೀವಿ.... ದುಡಿದೀವಿ.."[೨೫]

ಸರ್ಕಾರದವರು ಭೂಮಿಗೆ ಉತ್ತಮ ಬೆಲೆ ನೀಡುತ್ತೇನೆಂದರೂ ಅದನ್ನು ನಿರಾಕರಿಸುತ್ತಾನೆ. ಆದರೆ ಸಾಂತಪ್ಪ ತನ್ನ ಭೂಮಿಯನ್ನು ಮಾತೃಸ್ವರೂಪಿಯಾಗಿ ನೋಡುತ್ತಾನೆ. ಭೂಮಿಯನ್ನು ಹಡೆದ ತಾಯಿ ಸಮನಾಗಿ ಸಾಂತಪ್ಪ ಕಾಣುತ್ತಾನೆ. ಈ ಭೂಮಿ ತಾಯಿನ್ನ ಕೊಟ್ಟು ಬುಡಾಕ ನನ್ನನ್ನ ಅದೇನಂತ ತಿಳಿದಿದ್ದೀರಿ ಎಂದು ಸಾಂತಪ್ಪ ಪ್ರತಿಕ್ರಿಯಿಸುತ್ತಾನೆ. ತನ್ನ ಭೂಮಿಯಲ್ಲಿ ಬೆಳೆದ ಫಸಲನ್ನು ಸ್ಮರಿಸಿಕೊಳ್ಳುತ್ತಾ, ತನ್ನ ಭೂಮಿಯನ್ನು ಯಾರೂ ಹೆಚ್ಚು ಬೆಲೆಗೆ ಲಪಟಾಯಿಸುತ್ತಾರೆಂಬ ಭಯ ಆತನಿಗೆ ಕಾಡುತ್ತದೆ. ತನ್ನ ಹೊಲದಲ್ಲಿ ಬೆಳೆಯನ್ನು ಬೆಳೆಯುವಾಗ ಸಂಭ್ರಮದ ನೆನಪುಗಳು ಮೆಲುಕುಹಾಕುತ್ತಾನೆ.

ಸಾಂತಪ್ಪನ ತಂದೆ ಸಾಯುವ ಮುಂದೆ ನೀನು ಹಿರಿಮಗ ನೀನೇ ಇನ್ನು ಮುಂದೆ ಮಣ್ಣಿನ ಮಗ ಆಗು, ಮಣ್ಣನ್ನ ನಂಬಿ ಬದುಕು,ಇದ್ದಷ್ಟು ಹೊಲಾ ಉಳಿಸಿಕೊಂಡು ಹೋಗು ಎಂದು ಹೇಳಿರುತ್ತಾನೆ. ಇತ್ತ ತನ್ನ ತಮ್ಮ ಬಸವರಾಜ ಮಾಜಿ ಎಂ.ಎಲ್.ಎ. ಜೊತೆಗೂಡಿ ತಮ್ಮ ಹೊಲವನ್ನು ಮಾರಲು ಬರುವ ವಿಚಾರ ಜನರಿಂದ ಸಾಂತಪ್ಪನಿಗೆ ತಿಳಿಯುತ್ತದೆ. ಇದಕ್ಕೆ ಪ್ರತಿಕ್ರಿಯಾಗಿ ಸಾಂತಪ್ಪ ನಂ ಹೊಲದ ಒಂದಿಡಿ ಮಣ್ಣಿಗಿ ಸಾವಿರ ಅಲ್ಲ. ಅದೇಟನ ಕೊಟ್ರೂ ನನ್ಗಂತು ಮಾರಾಕ ಮನ್ಸಿಲ್ಲ ಎಂದು ಪ್ರತಿಕ್ರಿಯಿಸುತ್ತಾನೆ.

ಊರಿನ ಹೊಲ ಮಾರಿ ಪಟ್ಟಣದಲ್ಲಿ ಪ್ಲಾಟು ಸೈಟು ಕೊಳ್ಳುವುದರಿಂದ ಲಾಭ ಸಿಗುತ್ತದೆ ಎಂಬ ಆಸೆಯನ್ನು ತಮ್ಮನಿಗೆ ಹುಟ್ಟಿಸುತ್ತಾರೆ. ಇಲ್ಲಿ ಆಧುನಿಕವಾದಂತಹ ಭೂ ಸಮಸ್ಯೆಯನ್ನು ಇಲ್ಲಿ ಹುಟ್ಟು ಹಾಕುವುದನ್ನು ಕಾಣಬಹುದಾಗಿದೆ. ಸಾಂತಪ್ಪನ ತಮ್ಮ ಈ ಭೂಮಿಯನ್ನು ಮಾರಿ ನಗರ ಪ್ರದೇಶದಲ್ಲಿ ಸೈಟು ಮಾಡುವ ಮತ್ತು ಆ ಭೂಮಿಯಿಂದ ಹೆಚ್ಚಿನ ಲಾಭಗಳಿಕೆಯ ದುರಾಲೋಚನೆ ಮಾಡುತ್ತಾನೆ. ಅಣ್ಣನಲ್ಲಿರುವಂಥ ಭೂಮಿಯ ನಂಟು ತಮ್ಮನಲ್ಲಿ ಕಾಣಲಾಗುವುದಿಲ್ಲ.ಈತ ಭೂಮಿಯನ್ನು ಇಲ್ಲಿ ಲಾಭದ ಗಳಿಕೆಯಾಗಿ ನೋಡಲಾಗುತ್ತಾನೆ. ಭರಮ ಈ ರೀತಿ ಹೇಳಿದಾಗ ತನ್ನ ತವರು ನೆಲವನ್ನು ಬಿಟ್ಟುಕೊಡಲಾಗುವುದಿಲ್ಲ ಎಂದು ಮನಃಪೂರ್ವಕವಾಗಿ ನಿಖರವಾಗಿ ಹೇಳುತ್ತಾನೆ. ಈ ಭೂಮಿ ಮಾರಾಟದಿಂದ ಚಿಂತಿತನಾಗಿ ಹುಚ್ಚನಂತೆ ಬರಬರುತ್ತಾ ಸ್ವಗತವಾಗಿ ಸಾಂತಪ್ಪ ಮಾತನಾಡಿಕೊಳ್ಳತೊಡಗುತ್ತಾನೆ.

ನಾನಿರುವತನಕ ಈ ಮಣ್ಣನ್ನು ನನ್ನ ಜೀವಕ್ಕಿಂತ ಹೆಚ್ಚಾಗಿ ನೋಡಿಕೊಳ್ಳುತ್ತೇನೆ ಎನ್ನುತ್ತಾನೆ. ಇಲ್ಲಿನ ಭೂ ಸಂಬಂಧ ಜೀವನ್ಮರಣದ ಪ್ರಶ್ನೆಯಾಗಿರುವುದನ್ನು ಕತೆಗಾರ ವ್ಯಕ್ತಪಡಿಸುತ್ತಾನೆ. ಒಂದು ವೇಳೆ ಈ ಭೂಮಿ ಮಾರಾಟ ಮಾಡಿದರೆ ತಾನು ತನ್ನ ಪ್ರಾಣಕ್ಕೆ ಕುತ್ತು ತಂದುಕೊಳ್ಳುವುದಾಗಿ ತಿಳಿಸುತ್ತಾನೆ. ಮಾತ್ರವಲ್ಲದೆ ಸಾಂತಪ್ಪ ಭೂಮಿ ಮಾರಾಟವಾಗಿದೆ ಎಂಬ ಭ್ರಮೆಯಿಂದ ವಿಷ ಸೇವಿಸುತ್ತಾನೆ. ಇದು ತನ್ನ ತಮ್ಮನಿಗೆ ಅರಿವಾಗಿ ಹೊಲ ಮಾರುವ ವಿಚಾರವನ್ನು ಕೈಬಿಡುತ್ತಾನೆ. ಈ ಕತೆಯಲ್ಲಿ ಮುಖ್ಯವಾಗಿ ಭೂ ಸಂಬಂಧವು ಸಾಂತಪ್ಪನಲ್ಲಿ ಭೂಮಿ ಮಾತೃಸ್ವರೂಪಿಯಾಗಿ ಕಂಡಿದೆ. ಭೂಮಿ ಆತನ ಬದುಕಾಗಿದೆ, ಆತನ ಉಸಿರಾಗಿದೆ.

**ಕೊನೆ ಟಿಪ್ಪಣಿ**

೧.ಬಿ.ಟಿ.ಲಲಿತನಾಯಕ್,ಗತಿ ಪುಟ ೭೮

೨.ನ.ಸುಬ್ರಹ್ಮಣ್ಯಂ, ಬಸಪ್ಪನ ಜಮೀನು,ಹೊಸತು,ಜನವರಿ ವಿಶೇಷ ಸಂಚಿಕೆ,೨೦೦೭

೩. ಅದೇ

೪.ನಟರಾಜ್ ಹುಳಿಯಾರ್,ಬಿರುಬಿಟ್ಟ ನೆಲ,ಮತ್ತೊಬ್ಬಸರ್ವಾಧಿಕಾರಿ, ಪುಟ ೭೮

೫.ಶಿವರುದ್ರಕಲ್ಲೋಳಿಕರಹೊಲಗೇರಿ ರಾಜಕುಮಾರ,ಪುಟ ೧೫೪

೬. ಮಲ್ಲಿಕಾರ್ಜುನ ವಣೇನೂರ, ಮೂಗ, ಮಣ್ಣಿನ ಕುಡಿಕೆ, ಪುಟ ೭

೭. ಪುಟ ೮

೮.ಪುಟ ೯

೯. ಪುಟ ೯

೧೦.ಎಸ್.ಗಂಗಾಧರಯ್ಯ, ನವಿಲ ನೆಲ, ನವಿಲ ನೆಲ, ಪುಟ ೧೧೧

೧೧. ಅದೇ ಪುಟ ೮೯

೧೨. ಮುಟ್ಟುಗಪ್ಪೆ ಪರುಶುರಾಂ,ಬಯಕೆ ತೋಟದ ಬೇಲಿಯೊಳಗೆ, ಜಪ್ತಿ, ಪುಟ ೨೨

೧೩.ಮುಟ್ಟುಗಪ್ಪೆ ಪರುಶುರಾಂ,ಹೆಂಚು, ಜಪ್ತಿ, ಪುಟ ೪೦.

೧೪. ಅದೇ ಪುಟ ೪೧

೧೫.ಕಲಿಗಣನಾಥ ಗುಡದೂರು,ಮಣ್ಣು,ಉಡಿಯಲ್ಲಿಯ ಉರಿ,ಪುಟ ೫೭

ಅಧ್ಯಾಯ : ಐದು

## ಸಮಾರೋಪ

### ಅನುಬಂಧ

೧.೦ ಆಧಾರ ಗ್ರಂಥಗಳು

೨.೧ ಅಧ್ಯಯನಕ್ಕೆ ಆಯ್ದುಕೊಂಡ ಮೂಲ ಪಠ್ಯಗಳು

೨.೨ ಪರಾಮರ್ಶನ ಕೃತಿಗಳು ಮತ್ತು ಲೇಖನಗಳು

# ಸಮಾರೋಪ

ಭೂಮಿ ಮತ್ತು ರೈತ ಪ್ರಶ್ನೆಗಳ ಕುರಿತ ಅಧ್ಯಯನವು ಆಸಕ್ತಿಕರ ಹಾಗೂ ಗಂಭೀರವಾದ ಅಧ್ಯಯನವಾಗಿದೆ. ಇದು ಸಮಕಾಲೀನ ರೈತ ಮತ್ತು ಭೂ ಪ್ರಶ್ನೆಗಳನ್ನು ಒಟ್ಟಾಗಿ ನೋಡುವ ಗುರಿ ಹೊಂದಿದೆ. ಭೂ-ರೈತ ಪ್ರಶ್ನೆಗಳ ಆಶಯಗಳನ್ನು ಕತೆ ಮತ್ತು ಕಾದಂಬರಿಗಳನ್ನು ಅನುಲಕ್ಷಿಸಿ ಅಧ್ಯಯನ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಆಧುನಿಕ ಕನ್ನಡ ಕಥನ ಸಾಹಿತ್ಯದಲ್ಲಿ ಭೂ ಹೋರಾಟದ ಪ್ರತಿನಿಧೀಕರಣ ಎಂಬ ಶೀರ್ಷಿಕೆಯನ್ನು ಇಟ್ಟುಕೊಂಡು ಪ್ರಸ್ತುತ ಅಧ್ಯಯನ ಮಾಡಲಾಗಿದೆ.

ಜಾಗತಿಕ ಸಂದರ್ಭದಲ್ಲಿ ರೈತ ಪ್ರಶ್ನೆ, ಭೂ ಪ್ರಶ್ನೆಗಳು ಜ್ವಲಂತವಾಗಿವೆ. ಆದ್ದರಿಂದ ಈಗ ನಡೆಯುತ್ತಿರುವ ರೈತರ ಆತ್ಮಹತ್ಯೆಗಳು, ಜಾಗತೀಕರಣ ಹೊಡೆತ ಮತ್ತು ಪರಿಣಾಮ, ಭೂ ಆಕ್ರಮಣಗಳು ಮೊದಲಾದ ವಿಚಾರಗಳನ್ನು ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಇಂತಹ ಸಮಸ್ಯೆಗಳನ್ನು ವಾದಗಳ, ಚಿಂತನೆಗಳ, ಕಾನೂನಿನ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಆಧುನಿಕ ಕನ್ನಡ ಕಥನಗಳ ಸಂದರ್ಭದಲ್ಲಿ ಭೂ ಪ್ರಶ್ನೆ ರೈತ ಪ್ರಶ್ನೆಗಳಿಗೆ ಕಥನಕಾರರು, ವಿಭಿನ್ನ ನೆಲೆಯಲ್ಲಿ ವಿಭಿನ್ನ ಕಾಲಘಟ್ಟದಲ್ಲಿ ಪ್ರತಿಕ್ರಿಯಿಸಿದ ಬಗೆಯನ್ನು ತಾತ್ವಿಕವಾಗಿ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಈ ಕಥನಗಳಲ್ಲಿ ತಾತ್ವಿಕ ಆಶಯವಾಗಿ ಉದಾರವಾದಿ ನೆಲೆ, ಹಕ್ಕಿನ ನೆಲೆ, ಹೋರಾಟದ ನೆಲೆ, ಅನುಕಂಪದ ನೆಲೆ, ದಬ್ಬಾಳಿಕೆ ನೆಲೆ, ಕಾನೂನಿನ ನೆಲೆ, ಕೌಟುಂಬಿಕ ನೆಲೆ ಮತ್ತು ಜಾಗತಿಕ ಈ ನೆಲೆಗಳ ಮೂಲಕ ಅಧ್ಯಯನ ಕೈಗೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನದ ವಿಷಯ ಹರವುಗೊಂಡಿದೆ.

ಮೊದಲ ಅಧ್ಯಾಯದಲ್ಲಿ ಆರಂಭದ ಅಧ್ಯಯನದ ಖಚಿತತೆಗಾಗಿ ಅಧ್ಯಯನ ಉದ್ದೇಶ, ವ್ಯಾಪ್ತಿ ಮತ್ತು ವೈದಾನಿಕತೆ ಎಂಬ ಉಪಶೀರ್ಷಿಕೆಯ ಮೂಲಕ ಅಧ್ಯಯನದ ಮುಂದಿನ ಗುರಿಯನ್ನು ಹೇಳಲಾಗಿದೆ. ಈ ಅಧ್ಯಾಯದಲ್ಲಿ ಭೂ ಸಂಬಂಧಿ ಪ್ರಶ್ನೆಗಳು ಹೇಗೆ ಉದ್ಭವವಾದವು? ಇಂಥ ಪ್ರಶ್ನೆಗಳು ಯಾಕೆ ಮತ್ತು ಯಾರನ್ನು ಪ್ರತಿನಿಧಿಸಿದವು ಎಂಬುದನ್ನು ಕಥಾನಕಗಳ ಮೂಲಕ ಪರಿಶೀಲಿಸಲಾಗಿದೆ. ನೇರವಾಗಿ ಭೂ ಸಂಬಂಧಿ ಸಂಗತಿಗಳಾದ ಸಾಮಾಜಿಕ ಏಣಿಶ್ರೇಣಿಗಳ ಪಡೆದ ವಿವಿಧ ಆಯಾಮಗಳ ಕುರಿತು ವಿಶ್ಲೇಷಿಸಲಾಗಿದೆ. ಭೂ ಹೋರಾಟಗಳು ಹಾಗೂ ರೈತಹೋರಾಟಗಳು ವರ್ತಮಾನದ ಒತ್ತಡಗಳಿಗೆ ಯಾವ ರೀತಿ ಪ್ರತಿಕ್ರಿಯಿಸಿವೆ? ಅವುಗಳಿಗೆ ಸೃಜನಶೀಲ ಕಥನಕಾರರು ಪ್ರತಿಕ್ರಿಯಿಸಿದ ಬಗೆಯನ್ನು ಪರಿಶೀಲಿಸಲಾಗಿದೆ. ಅಧ್ಯಯನದ ವ್ಯಾಪ್ತಿಯನ್ನು ಆಧುನಿಕ ಕನ್ನಡ ಕತೆ ಮತ್ತು ಕಾದಂಬರಿಗಳಿಗೆ ಮಿತಿಗೊಳಿಸಿಕೊಳ್ಳಲಾಗಿದೆ. ಆದ್ದರಿಂದ ಕಥನಗಳಲ್ಲಿ ಭೂ ರೈತ ಪ್ರಶ್ನೆ ಒಳಗೊಳ್ಳುವ ಪ್ರಾತಿನಿಧಿಕ ಕತೆ ಮತ್ತು ಕಾದಂಬರಿಗಳನ್ನು ಆಯ್ಕೆಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

ಈ ಅಧ್ಯಯನದಲ್ಲಿ ಬಹುಶಿಸ್ತೀಯ ಹಾಗೂ ಅಂತರ್‌ಶಿಸ್ತೀಯ ವಿಧಾನವನ್ನು ಅನುಸರಿಸಲಾಗಿದೆ. ಸಾಹಿತ್ಯ ತತ್ವ ಮತ್ತು ಸಾಹಿತ್ಯ ಅಧ್ಯಯನದ ಮಾನದಂಡಗಳ ಚೌಕಟ್ಟಿನಲ್ಲಿ ಅಧ್ಯಯನ ಮಾಡಲಾಗಿದೆ. ಈವರೆಗೆ ನಡೆದ ಅಧ್ಯಯನದಲ್ಲಿ ಭೂ ಹೋರಾಟ ಕುರಿತ ಕೃತಿಗಳು, ಕಾಗೋಡು ರೈತ ಹೋರಾಟ ಕುರಿತ ಕೃತಿಗಳು, ರೈತ ಹೋರಾಟ ಕುರಿತ ಕೃತಿಗಳು ಹಾಗೂ ಸಂಶೋಧನಾ ಕೃತಿಗಳನ್ನು ವಿಶ್ಲೇಷಿಸಲಾಗಿದೆ. ಇವುಗಳಲ್ಲದೆ ಬಿಡಿಲೇಖನಗಳನ್ನು ಕೂಡಾ ವಿಭಾಗೀಕರಣ ಮಾಡಿಕೊಂಡು ಸಮೀಕ್ಷೆ ಮಾಡಲಾಗಿದೆ.

ಎರಡನೇ ಅಧ್ಯಾಯದಲ್ಲಿ ಆಧುನಿಕ ಕನ್ನಡ ಕಥಾನದಲ್ಲಿ ಭೂ ಹೋರಾಟದ ಸೈದ್ಧಾಂತಿಕ ಚರ್ಚೆಯನ್ನು ಅಧ್ಯಯನ ಮಾಡಲಾಗಿದೆ. ಈ ಶೀರ್ಷಿಕೆಯನ್ನು ಅಧ್ಯಯನ ಮಾಡುವುದರ ಜೊತೆಗೆ ಈ ಪರಿಕಲ್ಪನೆಯನ್ನು ಬಳಸಿರುವ ಉದ್ದೇಶವನ್ನು ಸ್ಪಷ್ಟಪಡಿಸಲಾಗಿದೆ. ಶೀರ್ಷಿಕೆಯ ಮೂಲಕ ಇಡೀ ಅಧ್ಯಯನದ ಗುರಿಯನ್ನು ತಲುಪಲು ಯತ್ನಿಸಲಾಗಿದೆ.

ಆಧುನಿಕತೆಯ ಪ್ರಕ್ರಿಯೆ ರೈತರ ಬದುಕಿನ ಮೇಲೆ ಉಂಟು ಮಾಡಿದ ಪರಿಣಾಮ ಮತ್ತು ಅವರ ಬದುಕನ್ನು ಪರಿವರ್ತಿಸಿದ ಬಗೆಯನ್ನು ಇಲ್ಲಿ ಗಮನಿಸಬಹುದಾಗಿದೆ. ಇಂಥ ಪ್ರಕ್ರಿಯೆಯಲ್ಲಿ ರೈತ ತನ್ನ ಬೇಸಾಯ ಪದ್ಧತಿಯಲ್ಲಿ ಕಂಡುಕೊಂಡ ಹೊಸಬಗೆಯ ಸಾಧನಗಳ ಕುರಿತು ಚರ್ಚಿಸಲಾಗಿದೆ. ಈ ಅಧ್ಯಯನದ ಕೇಂದ್ರ ಕಾಳಜಿ ಆಧುನಿಕ ಕನ್ನಡ ಕಥನಗಳ ಮೂಲಕ ಭೂರೈತ ಪ್ರಶ್ನೆಯನ್ನು ಶೋಧಿಸಲಾಗಿದೆ. ಇದು ಕಾವ್ಯ ನಾಟಕ, ಜನಪದ ಇತರೆ ಪ್ರಕಾರಗಳಂತೆ ಇಲ್ಲಿ ಕನ್ನಡ ಕಥಾಸಾಹಿತ್ಯದ ಪ್ರಕಾರವನ್ನು ಮುಖ್ಯವಾಗಿ ಗಮನಿಸಲಾಗಿದೆ. ಭೂ ಪ್ರಶ್ನೆ ಶೋಧಿಸುವ ಮುನ್ನ ಕಥನವನ್ನು ಪರಿಕಲ್ಪನೆಯಾಗಿ ವಿಶ್ಲೇಷಿಸಲಾಗಿದೆ. ಭೂ ಹೋರಾಟವನ್ನು ವಿಶ್ಲೇಷಣಾತ್ಮಕ ನೆಲೆಯಲ್ಲಿ

ಅರ್ಥೈಸಲಾಗಿದೆ. ಇದು ಆಧುನಿಕ ಕನ್ನಡ ಕತೆ, ಕಾದಂಬರಿಗಳಲ್ಲಿ ಭೂಮಿ ಕುರಿತಾಗಿ ನಡೆಯುವ ಸಂಘರ್ಷದ ಹುಡುಕಾಟದ ಭಾಗವಾಗಿದೆ. ಈ ಪರಿಕಲ್ಪನೆಯ ಮೂಲಕ ಭೂ ಹೋರಾಟವೆಂದರೇನು, ಅದು ನಡೆದು ಬಂದ ದಾರಿ, ಭೂ ಒಡೆತನದ ಇತಿಹಾಸ ಬೆಳವಣಿಗೆ ಮೊದಲಾದ ಆಶಯಗಳನ್ನು ಅಧ್ಯಯನ ಮಾಡಲಾಗಿದೆ. ಈ ಭೂ ಹೋರಾಟವನ್ನು ಎರಡು ಹಂತಗಳ ಮೂಲಕ ಮತ್ತು ಮಾದರಿ ಹೋರಾಟಗಳಾದ ಕಮ್ಯುನಿಸ್ಟ್‌ಮಾದರಿ, ಸಮಾಜವಾದಿ ಮಾದರಿ, ಭೂದಾನಚಳುವಳಿ,ಕಾನೂನು ಮಾದರಿ, ನಕ್ಸಲ್‌ಮಾದರಿಗಳ ಭೂ ಸಮಸ್ಯೆಯ ಪರಿಹಾರವನ್ನು ಕಂಡುಕೊಳ್ಳಲು ಯತ್ನಿಸಿರುವುದನ್ನು ಚರ್ಚಿಸಲಾಗಿದೆ.

ಭೂ ಒಡೆತನದ ಸಮಸ್ಯೆ ಅಂದು ಇತ್ತು. ಈಗಲೂ ಇರುವುದರಿಂದ ಭೂ ಒಡೆತನದ ಪ್ರಶ್ನೆಗಳು ಬೇರೆ ಬೇರೆ ಕಾಲದಲ್ಲಿ ಬೇರೆ ರೀತಿಯ ಸ್ವರೂಪದಲ್ಲಿ ವ್ಯಕ್ತವಾಗಿದೆ. ಈ ಹಿನ್ನೆಲೆಯಲ್ಲಿ ಭೂ ಒಡೆತನ ಎನ್ನುವುದು ಇಂದು ನಿನ್ನೆಯದಲ್ಲ ಎಂಬುದನ್ನು ಗಮನದಲ್ಲಿರಿಸಿಕೊಂಡು, ಭೂ ಒಡೆತನದ ಅಂಶಗಳು ಬೇರೆ ಬೇರೆ ಕಾಲದಲ್ಲಿ ಬೆಳೆದು ಬಂದ ಬಗೆಯನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಆಧುನಿಕ ಕನ್ನಡ ಕಥನದಲ್ಲಿ ಭೂಮಿ ಮತ್ತು ರೈತ ಬೇರೆ ಬೇರೆಯಲ್ಲ ಎಂದು ಈ ಅಧ್ಯಯನ ಭಾವಿಸಿದೆ. ಭೂ ಸಮಸ್ಯೆ ಇದ್ದಲ್ಲಿ ರೈತ ಸಮಸ್ಯೆಯೂ ಇದ್ದಂತೆಯೇ. ಭೂಮಿಯನ್ನು ಹೊರತುಪಡಿಸಿ ರೈತನಿಲ್ಲ. ಹೀಗಾಗಿ ರೈತ ಎಂಬ ಶಬ್ದವನ್ನು ಪರಿಕಲ್ಪನಾತ್ಮಕವಾಗಿ ಅರ್ಥೈಸಲಾಗಿದೆ. ಜೀತ ಸಮಸ್ಯೆಯು ಭೂಮಿಯನ್ನು ಆಧರಿಸಿದ್ದು, ಅದರಂತೆ ಗೇಣಿರೈತನ ಸಮಸ್ಯೆ, ರೈತಮಹಿಳಾ ಪ್ರಶ್ನೆಯು ಕೂಡಾ ಗಂಭೀರವಾದುದು ಆದ್ದರಿಂದ ಎಲ್ಲಾ ಅಂಶಗಳನ್ನು ಪರಿಕಲ್ಪನಾತ್ಮಕವಾಗಿ ಅಭ್ಯಸಿಸಲಾಗಿದೆ. ಭೌಗೋಳಿಕವಾಗಿ ಕಥನಕಾರರನ್ನು ಅಥವಾ ಕಥನಗಳನ್ನು ವಿಭಾಗಿಸಿಕೊಳ್ಳುವುದು ಸರಿಯಲ್ಲವೆನಿಸಿದರೂ, ಕಥಾವಸ್ತುವಿನ ವೈವಿಧ್ಯತೆಯ ದೃಷ್ಟಿಯಿಂದ ಹಾಗೂ ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಈ ರೀತಿಯ ಅಧ್ಯಯನ ಉಪಯುಕ್ತವೆಂದು ಈ ಅಧ್ಯಯನ ಗುರುತಿಸಿಕೊಂಡಿದೆ. ಅಧ್ಯಯನದ ಅನುಕೂಲಕ್ಕಾಗಿ ಸ್ಥೂಲವಾಗಿ ದಕ್ಷಿಣವಲಯ, ಉತ್ತರ ವಲಯ, ಮಲೆನಾಡು ಮತ್ತು ಕರಾವಳಿ ಪ್ರದೇಶ ಎಂಬುದಾಗಿ ವಿಭಾಗ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಮೂರರಲ್ಲಿ ಭೂ ಪ್ರಶ್ನೆ, ಭೂ ಸುಧಾರಣೆ, ಚಳುವಳಿ ಮತ್ತು ಚಿಂತನೆಗಳು ಎಂಬ ಉಪ ಶೀರ್ಷಿಕೆಯ ಮೂಲಕ ಅಧ್ಯಯನ ಕೈಗೊಳ್ಳಲಾಗಿದೆ. ಭೂ ಸುಧಾರಣೆ ಕುರಿತ ಚಾರಿತ್ರಿಕ ಸ್ವರೂಪ ಎಂಬ ಉಪ ಶೀರ್ಷಿಕೆಯ ಮೂಲಕ ಎರಡು ವಿಭಾಗಗಳನ್ನು ಮಾಡಲಾಗಿದೆ. ವಸಾಹತು ಸನ್ನಿವೇಶದ ಭಾರತದಲ್ಲಿ ಭೋಹೋರಾಟಗಳು ನಡೆದು ಬಂದ ಬಗೆ, ಸ್ವಾತಂತ್ರ್ಯೋತ್ತರ ಭಾರತದಲ್ಲಿ ಭೂ ಹೋರಾಟಗಳನ್ನು ಬೆಳೆದು ಬಂದ ಬಗೆಯನ್ನು ಕ್ರಮವಾಗಿ ವಿಶ್ಲೇಷಣೆ ಮಾಡಲಾಗಿದೆ. ಭಾರತದ ಮಟ್ಟದಲ್ಲಿ ಭೂಸುಧಾರಣೆಗಳು, ಕರ್ನಾಟಕದ ಮಟ್ಟದಲ್ಲಿ ಭೂಸುಧಾರಣೆಗಳು ಎಂದು ಮಾಡಿಕೊಳ್ಳಲಾಗಿದೆ. ಇವೆರಡೂ ಅಂಶಗಳಿಗೆ ವಸಾಹತು ಸಂದರ್ಭ ಮತ್ತು ಸ್ವಾತಂತ್ರ್ಯೋತ್ತರ ಸಂದರ್ಭ ಎಂದು ವಿಭಾಗಿಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಆಧುನಿಕ ಕರ್ನಾಟಕದಲ್ಲಿ ಭೂಸುಧಾರಣಾ ಕಾನೂನುಗಳು ಎಂಬ ಉಪ ಶೀರ್ಷಿಕೆಯಲ್ಲಿ ಕರ್ನಾಟಕ ಭೂಸುಧಾರಣಾ ಕಾನೂನು ಆಶಯಗಳನ್ನು ಕುರಿತು ಚರ್ಚಿಸಲಾಗಿದೆ.

ಭೂ ಸಂಬಂಧಿ ಚಳುವಳಿ ಎಂಬ ಉಪ ಶೀರ್ಷಿಕೆಯಲ್ಲಿ ನಾಲ್ಕು ವಿಭಾಗಗಳನ್ನು ಮಾಡಿಕೊಳ್ಳಲಾಗಿದೆ. ರಾಷ್ಟ್ರ ಮಟ್ಟದಲ್ಲಿ ನಡೆದ ಭೂ ಹೋರಾಟಗಳನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ಕರ್ನಾಟಕದಲ್ಲಿ ನಡೆದ ಭೂಹೋರಾಟಗಳನ್ನು ಕುರಿತು ಚರ್ಚಿಸಲಾಗಿದೆ. ರೈತರ ಆತ್ಮಹತ್ಯೆಗೆ ಕಾರಣಗಳೇನು ಅವುಗಳು ಯಾರುಹೊಣೆಗಾರರು ಮುಂತಾದ ವಿಚಾರಗಳನ್ನು ಚರ್ಚಿಸಲಾಗಿದೆ. ಕಾರ್ಪೊರೇಟ್ ಭೂ ಆಕ್ರಮಣ, ವಿಶೇಷ ಆರ್ಥಿಕ ವಲಯಗಳು, ಗುತ್ತಿಗೆ ಕೃಷಿ ಮುಂತಾದ ಪ್ರಸ್ತುತ ಜಾಗತಿಕ ಭೂ ರೈತ ಸಮಸ್ಯೆಗಳನ್ನು ಚರ್ಚಿಸಲಾಗಿದೆ.

ಭೂರೈತ ಸಮಸ್ಯೆ ಕುರಿತಾದ ಚಿಂತನೆಗಳನ್ನು ಉಪ ಶೀರ್ಷಿಕೆಯ ಮೂಲಕ ಅಧ್ಯಯನ ಕೈಗೊಳ್ಳಲಾಗಿದೆ. ಕಾರ್ಲ್‌ಮಾರ್ಕ್ಸ್ ಚಿಂತನೆ ಮತ್ತು ಭೂಮಿಯ ಪ್ರಶ್ನೆ, ಲೋಹಿಯಾ ಚಿಂತನೆ ಮತ್ತು ಭೂಮಿಯ ಪ್ರಶ್ನೆ, ಗಾಂಧಿ ಚಿಂತನೆ ಮತ್ತು ಭೂಮಿಯ ಪ್ರಶ್ನೆ, ಅಂಬೇಡ್ಕರ್ ಚಿಂತನೆ ಮತ್ತು ಭೂಮಿಯ ಪ್ರಶ್ನೆ ಎಂಬ ಉಪ ಶೀರ್ಷಿಕೆಯ ಮೂಲಕ ಭೂರೈತ ಸಮಸ್ಯೆಗೆ ಪರಿಹಾರ ಯತ್ನಗಳನ್ನು ಗುರುತಿಸಲಾಗಿದೆ. ಅಲ್ಲದೆ ವಾದಗಳ ಹಿನ್ನೆಲೆಯಲ್ಲಿ ಕರ್ನಾಟಕ ಚಿಂತಕರನ್ನು ಸಹ ಚರ್ಚಿಸಲಾಗಿದೆ.

ಈ ವಾದಗಳ ಹಿನ್ನೆಲೆಯಲ್ಲಿ ಕನ್ನಡದ ಚಿಂತಕರು, ಹೋರಾಟಗಾರರು ಮತ್ತು ಚಳುವಳಿಗಳನ್ನು ರೂಪಿಸಿದ

ಬಗೆಯನ್ನು ವಿಶ್ಲೇಷಣೆ ಮಾಡಲಾಗಿದೆ. ಅಲ್ಲದೆ ಭೂರೈತ ಪ್ರಶ್ನೆಗಳನ್ನು ಪರಿಹರಿಸಲು ತಾಳಿದ ನಿಲುವನ್ನು ವಿಶ್ಲೇಷಣೆ ಮಾಡಲಾಗಿದೆ. ಭೂ ಸಂಬಂಧಿ ಪೂರಕ ಹೋರಾಟಗಳು ಎಂಬ ಉಪ ಶೀರ್ಷಿಕೆಯ ಮೂಲಕ ಈ ಹೋರಾಟಗಳನ್ನು ಭೂ ರೈತ ಸಮಸ್ಯೆಗೆ ಸ್ಪಂದಿಸಿದ ಬಗೆಯನ್ನು ವಿಶ್ಲೇಷಣೆ ಮಾಡಲಾಗಿದೆ. ಜಲ ಮತ್ತು ಪರಿಸರ ಹೋರಾಟಗಳ ಕುರಿತು ಅಧ್ಯಯನ ಮಾಡಲಾಗಿದೆ. ಜಲ ಮತ್ತು ಪರಿಸರ ಹೋರಾಟಗಳು ಇದರ ಪರಿಮಾಮಗಳು ಭೂ ಸಂಬಂಧಿ ಆಶಯಗಳಿಗೆ ಸಹಕಾರಿಯಾಗಿರುವುದನ್ನು ಗುರುತಿಸಲಾಗಿದೆ. ಭೂ ರೈತ ಪ್ರಶ್ನೆಯನ್ನು ರೈತ ಸಂಘಟನೆಗಳು, ದಲಿತ ಸಂಘಟನೆಗಳು ಪ್ರತಿಕ್ರಿಯಿಸಿದ ಬಗೆಯನ್ನು ವಿಶ್ಲೇಷಣೆ ಮಾಡಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಈ ಬಗೆಯ ಚಾರಿತ್ರಿಕ ಆಶಯಗಳ ಕುರಿತ ಸೃಜನಶೀಲ ಲೇಖಕ ತಮ್ಮ ಸಾಹಿತ್ಯ ಕೃತಿಗಳ ಮೂಲಕ ನೋಡಲು ಯತ್ನಿಸಿರುವ ಬಗೆಯನ್ನು ಅಧ್ಯಯನ ಮಾಡಲಾಗಿದೆ. ಚಳುವಳಿಗಳು, ಸುಧಾರಣೆಗಳು, ಪ್ರಜಾಪ್ರಭುತ್ವ ವ್ಯವಸ್ಥೆ ಭೂ ರೈತ ನನ್ನು ಕಾಣ ಬಗೆಯನ್ನು ಸೂಕ್ಷ್ಮ ಮನಸ್ಸಿನ ಲೇಖಕ ಅವರದೇ ಆದ ತಮ್ಮ ಭಾಷಿಕ ನೆಲೆಯ ಮೂಲಕ ಭಿನ್ನವಾಗಿ ಕತೆ ಕಾದಂಬರಿಗಳನ್ನು ಕಟ್ಟಿಕೊಡುತ್ತಾರೆ.ಈ ಮೂಲಕ ಸ್ಥಳೀಯ ಸಮಸ್ಯೆಗಳನ್ನೂ ಸಹ ಕಟ್ಟಿಕೊಡುವುದನ್ನು ಕಾಣಬಹುದು. ಇಂಥ ಸುಧೀರ್ಘವಾದ ಹಾಸಿನಲ್ಲಿ ಸೃಜನಶೀಲ ಲೇಖಕ ಮಾಡಿರುವ ಪ್ರಯತ್ನವನ್ನು ವಿಶ್ಲೇಷಣೆ ಮಾಡಲಾಗಿದೆ. ಪ್ರಸ್ತುತ ಅಧ್ಯಯನದ ಜೀವದ್ರವ್ಯವಾಗಿ ಇಲ್ಲಿ ಕತೆ ಕಾದಂಬರಿಗಳನ್ನು ಬಳಸಿಕೊಳ್ಳಲಾಗಿದೆ. ಈ ಕಥನವನ್ನು ಅಭ್ಯಾಸ ಮಾಡುವ ಮುನ್ನ ವಸಾಹತು ಸನ್ನಿವೇಶ ಮತ್ತು ಸ್ವಾತಂತ್ರ್ಯೋತ್ತರ ಸಂದರ್ಭ ಎಂಬ ಕಾಲಘಟ್ಟವನ್ನು ವಿಭಾಗಿಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

ಕನ್ನಡದ ಪ್ರಾತಿನಿಧಿಕ ಲೇಖಕರಾದ ಮಾಸ್ತಿ, ಕುವೆಂಪು, ಕೊರಡ್ಕಲ್‌ಶ್ರೀನಿವಾಸರಾವ್, ಶಿವರಾಮಕಾರಂತ, ರಾವ್‌ಬಹಾದ್ದೂರ್, ಗೊರೂರು, ಆನಂದಕಂದ, ನಿರಂಜನ, ನಾ.ಡಿಸೋಜ, ಬಸವರಾಜ ಕಟ್ಟೀಮನಿ, ಅನಂತ ಮೂರ್ತಿ, ಪಿ.ಲಂಕೇಶ್, ಕೆ.ಪಿ. ಪೂರ್ಣಚಂದ್ರತೇಜಸ್ವಿ, ಬರಗೂರುರಾಮಚಂದ್ರಪ್ಪ, ಬೆಸಗರಹಳ್ಳಿ ರಾಮಣ್ಣ, ದೇವನೂರು ಮಹಾದೇವ, ಕುಂ.ವೀರಭದ್ರಪ್ಪ, ಅರವಿಂದ ಮಾಲಗತ್ತಿ,ವಿಶುಕುಮಾರ್, ವೈದೇಹಿ,ಎಂ.ಎಸ್.ವೇದಾ, ಅಮರೇಶ್‌ನುಗಡೋಣಿ, ಮತ್ತು ಮೊಗಳ್ಳಿಗಣೇಶ್ ಮುಂತಾದವರ ಕತೆ ಮತ್ತು ಕಾದಂಬರಿಗಳ ಮೂಲಕ ಅಧ್ಯಯನ ಮಾಡಲಾಗಿದೆ. ಇವರ ಕಥನಗಳಲ್ಲಿ ಸಮಕಾಲೀನ ಸಂದರ್ಭದಲ್ಲಿನ ಭೂರೈತ ಪ್ರಶ್ನೆಗಳನ್ನು ನಿರ್ವಹಿಸಿರುವ ಮತ್ತು ಪರಿಹರಿಸಲು ಯತ್ನಿಸಿರುವ ಬಗೆಯನ್ನು ಚರ್ಚಿಸಲಾಗಿದೆ. ಈ ಭೂರೈತ ಪ್ರಶ್ನೆಗಳಿಗೆ ಪರ್ಯಾಯ ನೆಲೆಯ ಹುಡುಕಾಟವನ್ನು ಸೃಜನಶೀಲ ಮನಸ್ಸುಗಳ ಬಗೆಯನ್ನು ವಿಶ್ಲೇಷಿಸಲಾಗಿದೆ. ಕಥನಗಳಲ್ಲಿ ಭೂರೈತ ಪ್ರಶ್ನೆಗಳಿಗೆ ಜೀವಪರ ಮೌಲ್ಯಗಳ ಹುಡುಕಾಟದ ಭಾಗವಾಗಿ ತಮ್ಮ ಕಾಲದ ಸಾಮಾಜಿಕ ಒತ್ತಡಗಳ ಆಶಯಗಳನ್ನು ಅಧ್ಯಯನ ಮಾಡಲಾಗಿದೆ. ಸಮಾಜದ ಮಂದಿದ್ದ ಒತ್ತಡಗಳು ಸಾಂಸ್ಕೃತಿಕ ಆಶಯಗಳು ಕತೆ ಕಾದಂಬರಿಗಳ ಮೂಲಕ ಅಭಿವ್ಯಕ್ತಗೊಂಡು ಕನ್ನಡದ ಮನಸ್ಸುಗಳು ಕಟ್ಟಿಕೊಟ್ಟಿರುವ ವಿಭಿನ್ನ ಧೋರಣೆಗಳು, ಜೀವಪರ ಮೌಲ್ಯಗಳನ್ನು ಅಧ್ಯಯನ ಮಾಡಲಾಗಿದೆ.

ಮಾಸ್ತಿಯವರ ಟಾಲ್‌ಸ್ಟಾಯ್ ಮಹರ್ಷಿಯ ಭೂರ್ಜ ವೃಕ್ಷಗಳು ಕತೆಯಲ್ಲಿ ಕೊನೆಗೂ ಆಸ್ತಿ ಸಾಮಾಜಿಕ ಸ್ವತ್ತಾಗಬೇಕೋ ಅಥವಾ ವೈಯಕ್ತಿಕ ಒಡೆತನಕ್ಕೆ ಒಳಪಡಬೇಕೋ ಎಂಬ ಪ್ರಶ್ನೆ ಉಳಿದೇ ಉಳಿಯುತ್ತದೆ. ಖಾಸಗಿ ಭೂ ಒಡೆತನವನ್ನು ನಿರಾಕರಣೆ ಮಾಡುವುದನ್ನು ಕಾಣಬಹುದಾಗಿದೆ. ಆದರೆ ಕತೆಯ ವಿವರಗಳನ್ನು ಗಮನಿಸಿದಾಗ ಆಸ್ತಿಯ ಸಂಗ್ರಹಕ್ಕಿಂತ ಸಮಾನ ಹಂಚಿಕೆಯ ಆಶಯ ಅಥವಾ ಸಹಕಾರಿ ದುಡಿಮೆಯ ಆಶಯಗಳು ಮುಖ್ಯವಾಗಿರುವಂತೆ ಕಾಣುತ್ತವೆ. ಕಾನೂನುಗಳನ್ನು ರೂಪಿಸುವ ಕೆಲವೇ ಮಂದಿ ಶ್ರೀಮಂತ ಭೂಮಾಲೀಕರು ಮತ್ತು ಅವರೇ ರಚಿಸಿಕೊಂಡ ಸರ್ಕಾರ ಅದು ಬಡರೈತ ಕೂಲಿಕಾರ್ಮಿಕರ ಮೇಲೆ ನಡೆಸುವ ದಬ್ಬಾಳಿಕೆ, ಶೋಷಣೆಗಳ ಕುರಿತು ಮಾಸ್ತಿಯವರಲ್ಲಿ ಟಾಲ್‌ಸ್ಟಾಯ್‌ಗೆ ಇರುವಂಥ ಮರುಕವೇ ಇದೆ. ಆದರೆ ಟಾಲ್‌ಸ್ಟಾಯ್ ಯಾವುದು ಸರಿ, ಯಾವುದು ತಪ್ಪು ಎಂಬ ಖಚಿತ ನಿರ್ಧಾರಕ್ಕೆ ಬರಲಾಗದೆ ಮಾನಸಿಕ ತೊಳಲಾಟದಲ್ಲಿ ಕೊನೆಯುಸಿರೆಳೆಯುವುದು ಆ ಪ್ರಶ್ನೆಯನ್ನು ಮತ್ತಷ್ಟು ಸಂಕೀರ್ಣಗೊಳಿಸುತ್ತದೆ. ಕೊನೆಗೂ ಇಲ್ಲಿ ಆಸ್ತಿಯ ಪ್ರಶ್ನೆ ಪರಿಹಾರವಾಗದೇ ಉಳಿಯುತ್ತದೆ.

ಕುವೆಂಪು ಕಥನಗಳಲ್ಲಿ ರೈತರ, ಗೇಣಿದಾರರ, ದಲಿತರ, ಮಹಿಳೆಯರ ಸಮಸ್ಯೆಗಳು ಉದಾರವಾದಿ ನೆಲೆಯಲ್ಲಿ ಕಂಡರಿಸಿದ್ದಾರೆ. ಈ ಎಲ್ಲಾ ಕೃತಿಗಳ ಆಶಯದ ಹಿಂದೆ ರೈತ ಬದುಕಿನ ವಾಸ್ತವ ಚಿತ್ರಣವನ್ನು ಕುವೆಂಪುರವರು ಕಟ್ಟಿಕೊಡುತ್ತಾರೆ. ಇಂದಿನ ಜಾಗತೀಕರಣದ ನೀತಿಗಳು ಕೃಷಿ ಜಗತ್ತಿನ ಮೇಲೆ ಬೀರುತ್ತಿರುವ

ಋಣಾತ್ಮಕ ಪರಿಣಾಮಗಳನ್ನು ಗಮನಿಸಿದರೆ, ಅವು ರೈತರ ಮೇಲೆ ಉಂಟುಮಾಡುತ್ತಿರುವ ಪರಿಣಾಮಗಳು ಎಂಥವು ಎನ್ನುವುದನ್ನು ಗುರುತಿಸಬಹುದು. ಇವೇ ಕಾರಣವಾಗಿ ರೈತರ ಆತ್ಮಹತ್ಯೆಯಂಥ ದುರಂತಗಳು ಸಂಭವಿಸುತ್ತಿವೆ ಎನ್ನುವುದು ಕುವೆಂಪು ದರ್ಶನದ ಒಂದು ಭಾಗವಾಗಿ ದನ್ವಂತರಿ ಚಿಕಿತ್ಸೆಯಲ್ಲಿ ಮೂಡಿ ಬಂದಿದೆ.

ಕೊರಡ್ಕಲ್ ಶ್ರೀನಿವಾಸರಾವ್ ಅವರ ದನಿಯರ ಸತ್ಯನಾರಾಯಣ ಕತೆಯಲ್ಲಿ ಭೂಮಾಲೀಕನ ಅನ್ಯಾಯದ ವಿರುದ್ಧ ದಲಿತರ ಆಕ್ರೋಶ ವ್ಯಕ್ತವಾಗಿದೆ. ಈ ಆಕ್ರೋಶ ಭೂಮಾಲೀಕನನ್ನು ತಲುಪುವುದಿಲ್ಲ. ಈ ದಲಿತ ಕುಟುಂಬ ತನ್ನ ಹಕ್ಕಿಗಾಗಿ ಹೋರಾಟ ಮಾಡದೆ ಭೂಮಾಲೀಕನ ಅನ್ಯಾಯದ ವಿರುದ್ಧ ತನ್ನೊಳಗೆ ಆಕ್ರೋಶ ವ್ಯಕ್ತಪಡಿಸುತ್ತದೆ. ಈ ಹಿನ್ನೆಲೆಯಲ್ಲಿ ಅವರ ಪ್ರಾತಿನಿಧಿಕ ಕತೆಯಲ್ಲಿ ಭೂಮಾಲೀಕರ ವಿರುದ್ಧದ ಆಕ್ರೋಶ ವ್ಯಕ್ತವಾಗಿರುವುದನ್ನು ಗುರುತಿಸಬಹುದಾಗಿದೆ.

ಶಿವರಾಮ ಕಾರಂತರ ಚೋಮನ ದುಡಿ ಕಾದಂಬರಿಯಲ್ಲಿ ಉದಾರವಾದಿ ಭೂ ಹೋರಾಟದ ನೆಲೆ ಇದೆ. ಭೂಮಿಯ ಬಯಕೆಯ ಆಶಯವು ಚೋಮನಂಥವರಲ್ಲಿ ಒತ್ತಾಸೆಯಾಗಿ ಮೂಡಿಬಂದಿದೆ. ಆದರೆ ಕಾರಂತರ ಚೋಮ ಭೂ ಒಡೆತನದ ಕನಸು ಕಾಣುವಲ್ಲಿ ಆತನ ಹೋರಾಟದ ಬದುಕು ಅಂತ್ಯಗೊಳ್ಳುತ್ತದೆ. ಆದರೆ ಸಂಪ್ರದಾಯವಾದಿ ಮನಸ್ಸು ಭೂಮಿ ಕೊಡುವುದನ್ನು ನಿರಾಕರಿಸುತ್ತದೆ. ಸಂಕಪ್ಪಯ್ಯ ಚೋಮನಿಗೆ ಭೂಮಿಯನ್ನು ನೀಡಲು ಬಯಸುತ್ತಾನೆ. ಆದರೆ ತನ್ನ ತಾಯಿ ಇದಕ್ಕೆ ಒಪ್ಪುವುದಿಲ್ಲ ಎಂದು ನಿರಾಕರಿಸುತ್ತಾನೆ. ತನ್ನ ವೈಯಕ್ತಿಕ ಬದುಕಿನ ಹೋರಾಟಕ್ಕಿಂತ ತನ್ನ ಕುಟುಂಬದ ಮೇಲೆ ಒಂದರ ಮೇಲೊಂದು ದುರಂತಗಳು ಸಂಭವಿಸುತ್ತವೆ. ವೈಯಕ್ತಿಕ ಬದುಕಿನ ದುರಂತದ ಜೊತೆಗೆ ಕೌಟುಂಬಿಕ ಬದುಕು ಕೂಡಾ ಆತನನ್ನು ಭೂ ಹೋರಾಟದ ಹಿನ್ನೆಡೆಗೆ ಕಾರಣವಾಗುತ್ತದೆ.

ರಾವ್‌ಬಹಾದ್ದೂರರ ಬಿತ್ತಿಬೆಳೆದವರು, ಮತ್ತು ಗ್ರಾಮಾಯಣದ ಕಥನಗಳಲ್ಲಿ ಗ್ರಾಮೀಣ ಸಮುದಾಯದಲ್ಲಿ ಉಂಟಾಗುತ್ತಿರುವ ಸ್ಥಿತ್ಯಂತರಗಳನ್ನು ಪ್ರಾದೇಶಿಕ ನೆಲೆಯಲ್ಲಿ ಕಟ್ಟಿಕೊಡುತ್ತಾರೆ. ನೈತಿಕ ಮೌಲ್ಯಗಳಿಗೆ ವಿಶೇಷ ಪ್ರಾಧಾನ್ಯತೆಯನ್ನು ಅವರ ಕಥನಗಳಲ್ಲಿ ಕಾಣಬಹುದಾಗಿದೆ. ಗ್ರಾಮೀಣ ಸಮುದಾಯದ ಆಂತರಿಕ ದ್ವೇಷ ಅಸೂಯೆ ಕಲಹಗಳು ಅವನತಿ ಹಾದಿ ಹಿಡಿದಿರುವ ದುರಂತವನ್ನು ಗ್ರಾಮಾಯಣದಲ್ಲಿ ಚಿತ್ರಿಸುತ್ತಾರೆ. ವಸಾಹತು ಸ್ಥಾಪಿಸಿದ ಕೈಗಾರಿಕೆಗಳಿಗೆ, ವಸಾಹತುಶಾಹಿ ವ್ಯಾಪಾರ ವಾಣಿಜ್ಯಗಳ ಲಾಭ ಗಳಿಕೆಯ ರಫ್ತಿಗಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಒತ್ತಡವನ್ನು ರೈತರ ಮೇಲೆ ವ್ಯಾಪಾರ ವಾಣಿಜ್ಯಗಳ ಲಾಭ ಗಳಿಕೆಯ ರಫ್ತಿಗಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಒತ್ತಡವನ್ನು ರೈತರ ಮೇಲೆ ಹೇರಿರುವುದು ಈ ಕಾದಂಬರಿಯಲ್ಲಿ ಕಂಡುಬರುತ್ತದೆ. ಇಂದು ನವವಸಾಹತು ಇದೇ ಕೆಲಸವನ್ನು ಬೇರೊಂದು ರೂಪದಲ್ಲಿ ಮಾಡುತ್ತಿರುವುದನ್ನು ಕಾದಂಬರಿಯು ಧ್ವನಿಸುತ್ತದೆ. ಈ ಹಿನ್ನೆಲೆಯಲ್ಲಿ ಭೂ ಉತ್ಪಾದನೆ ಮತ್ತು ರೈತ ಬದುಕಿನ ಸಂಬಂಧ ಹಾಗೂ ಭೂ ಸಂಬಂಧಗಳು ಇವರ ಕಾದಂಬರಿಯಲ್ಲಿ ಧ್ವನಿತವಾಗಿವೆ.

ಗೊರೂರು ಮತ್ತು ಶೇಷನಾರಾಯಣರ ಕಥನಗಳಲ್ಲಿ ಗಾಂಧಿವಾದದ ಪ್ರಭಾವದಿಂದ ಮೂಡಿದ ಸುಧಾರಣಾವಾದಿ ಆಶಯಗಳನ್ನು ಕಾಣಬಹುದು. ಇಂದಿನ ವ್ಯವಸ್ಥೆಯಲ್ಲಿ ಕಂಡುಬರುವಂಥ ಅತಿ ಎನಿಸುವಷ್ಟು ಪ್ರಾಮಾಣಿಕ ಆದರ್ಶಪರ ವ್ಯಕ್ತಿಗಳು ಇವರ ಕಥನಗಳಲ್ಲಿ ಕಂಡುಬರುತ್ತಾರೆ. ಇಲ್ಲಿ ವ್ಯವಸ್ಥೆಯನ್ನು ಅಮೂಲಾಗ್ರವಾಗಿ ಬದಲಾಯಿಸುವುದಕ್ಕಿಂತ ಇರುವ ಜಡ ವ್ಯವಸ್ಥೆಯನ್ನು ಸುಧಾರಿಸುವ ಪ್ರಯತ್ನ ಈ ಇಬ್ಬರ ಕಥನಗಳಲ್ಲಿ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ರೈತ ಸಮುದಾಯದ ಸುಧಾರಣೆಯ ಆಶಯಗಳು ಇವರ ಕಾದಂಬರಿಗಳಲ್ಲಿ ವ್ಯಕ್ತವಾಗುತ್ತವೆ.

ಆನಂದಕಂದರ ಮಾಲ್ಕೀ ಹಕ್ಕು ಕತೆಯು ಭೂ ಜಾಗೀರುದಾರಿಕೆಯ ಸಮಸ್ಯೆಯನ್ನು ಕುರಿತು ಚರ್ಚಿಸುತ್ತದೆ. ನಿರಂಜನರ ಚಿರಸ್ಮರಣೆ ಕಾದಂಬರಿಯಲ್ಲಿ ಮಾರ್ಕ್ಸ್‌ವಾದಿ ನೆಲೆಯಲ ಭೂಹೋರಾಟವನ್ನು ಕಾಣುತ್ತೇವೆ. ರೈತ ಜೀವನದ ಸಂಘರ್ಷದ ನೆಲೆ ಮತ್ತು ರೈತ ಹೋರಾಟದ ಬದುಕನ್ನು ಕೇಂದ್ರವಾಗಿರಿಸಿಕೊಂಡಿದೆ. ಈ ಕಾದಂಬರಿಯಲ್ಲಿ ಮುಖ್ಯವಾಗಿ ವರ್ಗಸಂಬಂಧಿ ಹೋರಾಟವಿದೆ. ಇಲ್ಲಿ ರೈತ ಪ್ರಶ್ನೆ, ಭೂಸಂಬಂಧಿ ಕುರಿತ ಹೋರಾಟದ ಕೆಚ್ಚಿದೆ. ಕಾದಂಬರಿಯು ಅಂತಸ್ಸತ್ವದಲ್ಲಿ ಮಾರ್ಕ್ಸ್‌ವಾದಿ ನೆಲೆಯ ರೈತ ಹೋರಾಟವನ್ನು ಗುರುತಿಸಲಾಗಿದೆ.

ನಾ.ಡಿಸೋಜ ಅವರ ಬಹುಪಾಲು ಕತೆಗಳಲ್ಲಿ ಭೂಸಂಬಂಧಿ ಗೇಣಿ ರೈತರ ಪ್ರಶ್ನೆ, ಭೂಮಾಲೀಕ ಪ್ರಶ್ನೆ,

ಶೋಷಣೆಯ ಪ್ರಶ್ನೆ, ಸ್ವಾಭಿಮಾನದ ಪ್ರಶ್ನೆಗಳು ಪ್ರತಿಭಟನಾತ್ಮಕ ನೆಲೆಯಲ್ಲಿ ಭೂ ಸಮಸ್ಯೆಗೆ ಪರಿಹಾರ ಸೂಚಿಸಲು ಯತ್ನಿಸಿರುವುದನ್ನು ಕಾಣುತ್ತೇವೆ. ಅವರ ಕಥನಗಳಲ್ಲಿ ರೈತರು ಬಂಧಮುಕ್ತರಾಗಿ ಹೊರಬರುವ ಎದೆಗಾರಿಕೆ ಹಾಗೂ ದಿಟ್ಟತನವನ್ನು ಕಾಣುತ್ತೇವೆ. ನಾ.ಡಿಸೋಜ ಅವರ ಕಥನಗಳಲ್ಲಿ ನ್ಯಾಯಯುತ ಭೂ ಹಕ್ಕಿಗಾಗಿ ಹೋರಾಟ ನಡೆಸುವ ಆಶಯವನ್ನು ಕಾಣುತ್ತೇವೆ.

ಕೆಲ ಲೇಖಕರು ಹೋರಾಟಗಳನ್ನು ನೇರವಾಗಿ ವಸ್ತುವಾಗಿಸಿಕೊಂಡ ಕತೆ ಕಾದಂಬರಿಗಳನ್ನು ಬರೆದವರು ಇದ್ದಾರೆ. ಅಂಥ ಲೇಖಕರಲಲ್ಲಿ ಅನಂತಮೂರ್ತಿಯವರು ಬಹಳ ಮುಖ್ಯರು. ಇವರ ಭಾರತೀಪುರ, ಅವಸ್ಥೆ ಕಾದಂಬರಿಗಳು ಭೂರೈತ ಪ್ರಶ್ನೆಗಳ ಕುರಿತು ಚಿತ್ರಿಸುತ್ತವೆ. ಕಾಗೋಡು ಸತ್ಯಾಗ್ರಹ ಮತ್ತು ರೈತ ಹೋರಾಟಗಳ ಪ್ರಭಾವವನ್ನು ಅವಸ್ಥೆ ಕಾದಂಬರಿಯಲ್ಲಿ ಕಾಣುತ್ತೇವೆ. ಒಬ್ಬ ಆದರ್ಶ ರಾಜಕಾರಣಿಯ ಹೋರಾಟವನ್ನು ಈ ಹಿನ್ನೆಲೆಯಲ್ಲಿ ಚಿತ್ರಿಸಿರುವುದನ್ನು ಕಾಣಬಹುದು. ಪಿ. ಲಂಕೇಶರ ಮಾರಲಾಗದ ನೆಲ ಕತೆಯಲ್ಲಿ ಭೂಮಾಲೀಕ ತನ್ನ ಪಿತ್ರಾರ್ಜಿತ ಆಸ್ತಿಯನ್ನು ಮಾರಲಾಗದೆ ನಗರಕ್ಕೆ ವಾಪಸ್ಸಾಗುವ ಚಿತ್ರಣವಿದೆ.

ತೇಜಸ್ವಿಯವರ ಸ್ವರೂಪ, ನಿಗೂಢಮನುಷ್ಯರು, ಕರ್ವಾಲೋ, ಚಿದಂಬರ ರಹಸ್ಯ, ಜುಗಾರಿ ಕ್ರಾಸ್, ಮಾಯಾ ಲೋಕ ಈ ಕಥನಗಳಲ್ಲಿ ರೈತ ಬದುಕಿನ ಬವಣೆಯ ಚಿತ್ರಣವಿದೆ. ರೈತ ಮತ್ತು ಭೂಮಾಲೀಕರ ನಡುವೆ ವ್ಯತ್ಯಾಸವೇ ಇರದಂಥ ಸಮಸ್ಯೆ, ಕಷ್ಟಗಳ ಚಿತ್ರಣವಿದೆ. ಜಾಗತೀಕರಣ ಕಣ್ಣಿಗೆ ಕಾಣುತ್ತಿಲ್ಲ, ನಮ್ಮ ಕಣ್ಣಿಗೆ ಅಗೋಚರ ಶತ್ರುವಿನಂತೆ ಕಾಡುತ್ತಿದೆ. ಜಾಗತೀಕರಣಕ್ಕೆ ಒಳಗಾಗಿರುವ ರೈತರು ಯಾರ ವಿರುದ್ಧ ಹೋರಾಡುವುದು ಎನ್ನುವುದೇ ಒಂದು ದೊಡ್ಡ ಸಮಸ್ಯೆಯಾಗಿದೆ. ಇಂಥ ಕಾಣದ ಕೈಗಳು ರೈತ ಬದುಕಿನ ಮೇಲೆ ಬೀರಿರುವ ಪ್ರಭಾವವನ್ನು ಅತ್ಯಂತ ವಿಸ್ತಾರ ನೆಲೆಯಲ್ಲಿ ತೇಜಸ್ವಿಯವರು ಪರಿಶೀಲಿಸುತ್ತಾರೆ. ಮಾಯಾಲೋಕದಲ್ಲಿ ನೀರು, ರೈತರು ಬೆಳೆದ ಬೆಳೆ, ವಿದ್ಯುತ್, ರೈತ ಹೋರಾಟಗಳು ಈ ಎಲ್ಲಾ ಹಿನ್ನೆಲೆಯಲ್ಲಿ ಜಾಗತೀಕರಣದ ಪ್ರಭಾವಗಳನ್ನು ಗುರುತಿಸಬಹುದಾಗಿದೆ. ಈ ಪ್ರಭಾವ ಕೇವಲ ಭೂರಹಿತರಿಗೆ ಭೂಮಿಯನ್ನು ಒದಗಿಸುವ ಸೀಮಿತ ಉದ್ದೇಶವನ್ನು ಇಟ್ಟುಕೊಳ್ಳದೆ, ಸಣ್ಣ ಹಿಡುವಳಿದಾರರಿಂದ ಹಿಡಿದು ದೊಡ್ಡ ಜಮೀನ್ದಾರರವರೆಗೂ ಕೃಷಿಯನ್ನು ನಂಬಿ ಬದುಕುತ್ತಿರುವ ಅತಂತ್ರ ಜೀವನದ ಸ್ಥಿತಿಗತಿಗಳಿಗೆ ಜಾಗತೀಕರಣವು ಕಾರಣವಾಗಿರುವುದನ್ನು ಜೊತೆಜೊತೆಗೆ ಭಾರತದ ಸಾಂಪ್ರದಾಯಿಕ ಜನರ ಮನಸ್ಥಿತಿಗಳಿಗೂ ಕಾರಣವಾಗಿರುವುದನ್ನು ಗುರುತಿಸುತ್ತಾರೆ. ವಸಾಹತುಶಾಹಿಯ ಕೊಡುಗೆಯಾಗಿ ಬಂದ ಆಧುನಿಕ ಸಂಸ್ಥೆಗಳು ಭಾರತೀಯ ಸಮಾಜದಲ್ಲಿ ಅದರಲ್ಲೂ ವಿಶೇಷವಾಗಿ ರೈತ ಸಮುದಾಯ ಬುಡಕಟ್ಟು ಜನಜೀವನದ ಮೇಲೆ ಬೀರುವ ಪರಿಣಾಮಗಳನ್ನು ಕರ್ವಾಲೋ ಮತ್ತು ಚಿದಂಬರ ರಹಸ್ಯದಂಥ ಕಾದಂಬರಿಗಳಲ್ಲಿ ಕಟ್ಟಿಕೊಟ್ಟಿದ್ದಾರೆ.

ಬರಗೂರರ ಕೃತಿಗಳಲ್ಲಿ ಸಾಮಾಜಿಕ ಅಸಮಾನತೆ ವಿರುದ್ಧ, ಊಳಿಗ ಮಾನ್ಯಶಾಹಿ ವಿರುದ್ಧ ಸಮಾನತೆಯನ್ನು ಆಗ್ರಹಿಸಿ ಪ್ರತಿಭಟನಾತ್ಮಕ ನೆಲೆಯ ಮೂಲಕ ಹೋರಾಡುವುದನ್ನು ಕಾಣಬಹುದು. ಆ ಮೂಲಕ ಶೋಷಣೆಗೊಳಗಾದ ಸಮುದಾಯದ ನಾಯಕನಾಗಿ ಭೂಮಾಲೀಕನ ವಿರುದ್ಧದ ಎದುರಾಳಿಯಾಗಿ, ನೊಂದವರ ಪರವಾಗಿ ಮಾನವೀಯತೆ ಮೆರೆಯುವುದನ್ನು ಇವರ ಕೃತಿಗಳ ನಾಯಕನಲ್ಲಿ ಕಾಣುತ್ತೇವೆ. ಅವರ ಶಬರಿ,ಸೂರ್ಯ, ಒಂದು ಊರಿನ ಕತೆ, ಎದುರಾಳಿ, ಕ್ಷಾಮ ಮೊದಲಾದ ಕಥನಗಳಲ್ಲಿ ಭೂ ರೈತ ಶೋಷಣೆಯ ವಿರುದ್ಧ ಸಂಘಟಿತ ಬಂಡಾಯದ ಅಂಶಗಳನ್ನು ಗುರುತಿಸಬಹುದಾಗಿದೆ. ಬರಗೂರರು ಉಳುವವನೆ ಹೊಲದೊಡೆಯ ಎಂಬ ಸೀಮಿತ ಕಲ್ಪನೆಯನ್ನು ವಿಶಾಲ ತಳಹದಿಯ ಮೇಲೆ ಕಟ್ಟಿಕೊಡಲು ಯತ್ನಿಸಿದ್ದಾರೆ. ಹೀಗಾಗಿ ದುಡಿಯುವವನೇ ಒಡೆಯ ಎಂಬ ಕಲ್ಪನೆಯನ್ನು ಶಬರಿ ಕಾದಂಬರಿಯಲ್ಲಿ ತಂದಿದ್ದಾರೆ. ಬರಗೂರರ ಮಳೆ ಮತ್ತು ಕ್ಷಾಮ ನೈಸರ್ಗಿಕ ಪ್ರಕ್ರಿಯೆಗಳ ಹೆಸರುಗಳೇ ಆಗಿರುವುದೊಂದು ವಿಶೇಷವಾಗಿದೆ. ಮಳೆ ಫಲವತ್ತತೆಗೆ ಸಂಕೇತವಾದರೆ, ಕ್ಷಾಮ ಬರುಡುತನಕ್ಕೆ ಸಂಕೇತವಾಗಿದೆ.

ದೇವನೂರರ ಕಥನಗಳು ದಲಿತರ ನೆಲೆಯಲ್ಲಿ ಭೂ ಪ್ರಶ್ನೆಯನ್ನು ವಿವರಿಸಲು ಯತ್ನಿಸುತ್ತವೆ. ಈ ಹಿನ್ನೆಲೆಯಲ್ಲಿ ಅವರ ಕೃತಿಗಳಲ್ಲಿ ದಲಿತರ ಬದುಕಿನ ಭಾಗವಾಗಿ ಭೂಮಿಯ ಆಶಯ ವ್ಯಕ್ತವಾಗುವುದನ್ನು ಕಾಣಬಹುದು. ಮ.ನ.ಜವರಯ್ಯ ಅವರ ಮಾಗಿ ಕಾದಂಬರಿಯಲ್ಲಿ ಭೂಮಿ ಅಗತ್ಯಕ್ಕಾಗಿ ಜಮೀನು ಬೇಕು ಇಲ್ಲಿ ಭೂಮಿಯನ್ನು ಅಪ್ಪಿ ಬದುಕುವ ಆಶಯವಿಲ್ಲ. ಅನಿವಾರ್ಯ ಪರಿಸ್ಥಿತಿಗಳಲ್ಲಿ ಅನುಕೂಲಕ್ಕಾಗಿ ಭೂಮಿಯನ್ನು ಪಡೆಯುವ ಸಲುವಾಗಿ ಹೋರಾಟ ನಡೆಸುವ ಚಿತ್ರಣವಿದೆ.

ಶಾಂತರಸರ ಸಾವು ಸತ್ತಾಗ ಕತೆಯಲ್ಲಿ ಭೂ ಸಮಸ್ಯೆಯ ಸುತ್ತ ಹೆಣೆಯಲಾದ ಕಥಾವಸ್ತು ಒಳಗೊಂಡಿರುವುದು ಕಂಡುಬರುತ್ತದೆ. ಇಲ್ಲಿ ಭೂಮಾಲೀಕರ ಮತ್ತು ಆಡಳಿತಶಾಹಿ ವರ್ಗ ಹಾಗೂ ಜನಪ್ರತಿನಿಧಿಗಳು ರೈತರ ಉರಿವ ಬದುಕಿನೊಂದಿಗೆ ವರ್ತಿಸುವ ಸಂಗತಿಗಳು ಕತೆಯಲ್ಲಿ ಧ್ವನಿತವಾಗಿವೆ.

ಬೆಸಗರಹಳ್ಳಿ ರಾಮಣ್ಣನವರು ಗ್ರಾಮೀಣ ರೈತರ ಬದುಕನ್ನು ದಟ್ಟವಾದ ಅನುಭವಗಳ ಮೂಲಕ ಕತೆಗಳಾಗಿ ಕಟ್ಟಿಕೊಡುತ್ತಾರೆ. ಇದೇ ಕಾಲಕ್ಕೆ ತಮ್ಮ ಕಥನಗಳ ಮೂಲಕ ಭೂ ಅನ್ಯಾಯದ ವಿರುದ್ಧ ಆತ್ಯಂತಿಕ ಹೋರಾಟದ ಆಶಯವನ್ನು ವ್ಯಕ್ತಪಡಿಸುತ್ತಾರೆ. ಶೋಷಣೆ ಕುರಿತು ಯಾವುದೇ ರೀತಿಯ ರಾಜಿಗೆ ಒಪ್ಪದ ಆತ್ಯಂತಿಕ ಹೋರಾಟದ ಮನೋಭಾವ ವಿಶೇಷವಾಗಿ ಕಥನಗಳಲ್ಲಿ ಕಂಡುಬರುತ್ತದೆ.

ಕುಂ.ವೀರಭದ್ರಪ್ಪ ಅವರ ಕಥನದಲ್ಲಿ ಸ್ವಾಭಿಮಾನಿಯಾಗಿ ಹೋರಾಟ ನಡೆಸುವುದು ಮುಖ್ಯ ಆಶಯವಾಗಿ ಕಂಡುಬರುತ್ತದೆ. ಭೂಮಾಲೀಕರ ವಿರುದ್ಧ, ಸ್ವಾಭಿಮಾನಿಯಾಗಿ ಬದುಕುವ ಛಲ ರೈತ ಮಹಿಳೆ, ಗೇಣಿದಾರ, ದಲಿತ ವ್ಯಕ್ತಿಗಳಲ್ಲಿ ಕಂಡುಬರುತ್ತದೆ. ನಾ.ಡಿಸೋಜರ ಕಥನಗಳಲ್ಲೂ ಇಂಥ ಆಶಯಗಳನ್ನು ಕಾಣಬಹುದಾಗಿದೆ. ಭೂಮಿ ಅಸ್ತಿತ್ವದ ಪ್ರಶ್ನೆಯಾಗಿ ಸಾಮಾಜಿಕ ಅಗತ್ಯವಾಗಿ ಕಂಡುಬರುತ್ತದೆ. ಇದು ಸಾಮಾಜಿಕ ಏಣಿಶ್ರೇಣಿಗಳನ್ನು ನೋಡುವ ಭೂಮಿಯನ್ನು  ಪಡೆಯುವ ಆಗ್ರಹಪೂರ್ವಕ ನೆಲೆಯಲ್ಲಿ ವ್ಯಕ್ತಗೊಳ್ಳುತ್ತದೆ.

ಚೆನ್ನಣ್ಣವಾಲೀಕಾರರ ಕಥನದಲ್ಲಿ ಭೂಮಿತಿ ಕಾಯ್ದೆಯ ಕುರಿತು ತಾರ್ಕಿಕ ಸಂಘರ್ಷವನ್ನು ಕಾಣುತ್ತೇವೆ. ಭೂಸುಧಾರಣಾ ಕಾನೂನು ಜಾರಿಯಾದ ನಂತರದಲ್ಲಿ ಭೂಮಾಲೀಕರು ಎಷ್ಟು ಪ್ರಮಾಣದ ಭೂಮಿಯನ್ನು ಹೊಂದಿರಬೇಕೆಂಬುದನ್ನು ವ್ಯಕ್ತಗೊಳಿಸುತ್ತದೆ. ಭೂಮಿತಿ ಕಾಯ್ದೆ ಜಾರಿಗೊಳಿಸಿದ ಸಂದರ್ಭದ ವಸ್ತು ಸ್ಥಿತಿಯನ್ನು ವಾಲೀಕಾರರ ಕಾದಂಬರಿಯು ಸಮರ್ಥವಾಗಿ ವ್ಯಕ್ತಗೊಳಿಸಿವೆ. ಈ ಪ್ರದೇಶವು ನಿಜಾಮರ ಆಡಳಿತಕ್ಕೊಳಪಟ್ಟಿದ್ದು, ಅವರ ಆಡಳಿತದ ಫಲವಾಗಿ ಅನೇಕ ಭೂಮಾಲೀಕರು ಪಾಳೇಗಾರರು ಭೂನೀತಿಗಳು ಈ ಭಾಗದಲ್ಲಿ ಹಾಗೆಯೇ ಉಳಿದಿವೆ.

ಅರವಿಂದ ಮಾಲಗತ್ತಿಯವರ ಭೂಮಸೂದೆ ಕತೆಯಲ್ಲಿ ಅಂಬೇಡ್ಕರ್ ವಾದದ ನೆಲೆಯ ಶಿಕ್ಷಣ, ಸಂಘಟನೆ, ಹೋರಾಟದ ಆಶಯವನ್ನು ಕಾಣುತ್ತೇವೆ. ಈ ಕತೆಯಲ್ಲಿ ಪ್ರಧಾನವಾಗಿ ಜೀತಗಾರರ ಭೂಹಕ್ಕಿನ ಹೋರಾಟವನ್ನು ಕಾಣುತ್ತೇವೆ. ಇಲ್ಲಿ ಭೂ ಪ್ರಶ್ನೆಯನ್ನು ಪ್ರಧಾನವಾಗಿಟ್ಟುಕೊಂಡು ಊಳಿಗಮಾನ್ಯಶಾಹಿ ವ್ಯವಸ್ಥೆಯ ವಿರುದ್ಧ ಹೋರಾಡುವ ಆಶಯವಿದೆ. ಭೂ ಪ್ರಶ್ನೆಯೊಂದಿಗಿರುವ ಕಾನೂನಿನ ಪ್ರಶ್ನೆ, ಭೂ ಒಡೆತನದ ಪ್ರಶ್ನೆಗಳು ಕತೆಯಲ್ಲಿ ಧ್ವನಿಸಿದೆ. ಬಾಳಪ್ಪ ಭೂಮಾಲೀಕನ ಒಪ್ಪಿತ ನೆಲೆಯಲ್ಲಿ, ಬೆಳ್ಳಿಯಪ್ಪ ಶಿಕ್ಷಣದ ಅರಿವಿನ ಮೂಲಕ ಹಕ್ಕಿನ ನೆಲೆಯಲ್ಲಿ, ಬಂಗಾರಪ್ಪ ಶಿಕ್ಷಣ ಸಂಘಟನೆ, ಹೋರಾಟದ ಮೂಲಕ ಭೂಮಾಲೀಕರನ್ನು ಎದುರಿಸುವ ದಿಟ್ಟತನದಿಂದ ಬರುತ್ತಾನೆ. ಬಂಗಾರಪ್ಪ ತನ್ನ ಸಮುದಾಯದ ಸಂಕಷ್ಟಗಳಿಂದ ಬಿಡುಗಡೆಗೊಳಿಸುವ ಆಶಯವಾಗಿ ಬಂದಿದ್ದಾನೆ. ಇಂಥದೇ ಆಶಯವನ್ನು ನಾ.ಡಿಸೋಜರ ಮಂಜಿನಕಾನುವಿನ ಹಾಲಪ್ಪನಲ್ಲಿ ಕಾಣುತ್ತೇವೆ.

ವಿಶುಕುಮಾರ್ ಅವರ ಭೂಮಿ ಕಾದಂಬರಿಯಲ್ಲಿ ಭೂಮಾಲೀಕರ ಸಿಟ್ಟು ಸರ್ಕಾರದ ಭಯ ರೈತರ ಮೇಲಿನ ಪ್ರೀತಿ ಮುಂತಾದ ಸಂಕೀರ್ಣತೆಗಳಿವೆ. ನ್ಯಾಯಯುತವಾಗಿ ಸಾಮಾಜಿಕ ನ್ಯಾಯಕ್ಕಾಗಿ ನಡೆಸುವ ಹೋರಾಟ ಈ ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಇಲ್ಲಿ ಭೂಮಾಲೀಕ ವ್ಯವಸ್ಥೆ, ಸರ್ಕಾರಗಳು ಗೇಣಿರೈತರ ಸಮಸ್ಯೆಗಳಿಗೆ ಸ್ಪಂದಿಸದೆ ಮತ್ತಷ್ಟು ಸಮಸ್ಯೆಗಳಿಗೆ ಸಿಲುವಂತೆ ಮಾಡುತ್ತವೆ.

ಮ.ನ.ಜವರಯ್ಯ ಅವರ ಮಾಗಿ ಕಾದಂಬರಿಯು ಭೂ ಸಂಬಂಧಿ ಕುರಿತಾಗಿ ಮುಖ್ಯ ಪ್ರಶ್ನೆ ಎತ್ತುವ ಕೃತಿಯಾಗಿದೆ. ಭೂಸುಧಾರಣಾ ಸಂದರ್ಭದಲ್ಲಿ ಬಂದಂಥ ಈ ಕೃತಿಯು ಸಾಂಪ್ರಾದಾಯಿಕ ಕಾನೂನು ಮತ್ತು ಪ್ರಜಾಸತ್ತಾತ್ಮಕ ಕಾನೂನಿನ ನಡುವೆ ನಡೆಯುವ ಸಂಘರ್ಷದ ಒಟ್ಟು ಸ್ವರೂಪವನ್ನು ಚಿತ್ರಿಸುತ್ತದೆ. ಇಲ್ಲಿ ರೈತ ಮಹಿಳಾ ಹೋರಾಟದ ನೆಲೆ ಹಾಗೂ ರೈತ ಮಹಿಳಾ ಹಕ್ಕಿನ ಪ್ರಶ್ನೆಯು ಮುಖ್ಯವಾಗಿ ಕಂಡುಬಂದಿದೆ.

ಅಮರೇಶ ನುಗಡೋಣಿಯವರ ಕತೆ ಪಕ್ಕಕಲ್ಲದೆ ಪರಿಣಾಮ ಕಾಣಿಸದು ಮತ್ತು ರಾವ್ ಬಹಾದ್ದೂರರ ಜತ್ತಿಬೆಳೆದವರು ಕಾದಂಬರಿಯಲ್ಲಿ ಭೂಮಿ ಕುರಿತಾಗಿ ಬರುವ ವಿಭಿನ್ನ ಕಲ್ಪನೆಗಳಿರುವುದನ್ನು ಕಾಣಬಹುದು. ಭೂಮಿಗಾಗಿ ಹೋರಾಟ ನಡೆಸುವ ದಲಿತರು ಮತ್ತು ಗೇಣಿದಾರರನ್ನು ಕಾಣುತ್ತೇವೆ. ಇಲ್ಲಿ ಜಮೀನ್ದಾರರೇ ಭೂಮಿಯನ್ನು ಹಂಚಲು ಉದ್ದೇಶಿಸಿದರೂ ಪಡೆಯುವುದಿಲ್ಲ. ಇವರ ಭೂ ಸ್ವೀಕರಣಕ್ಕೆ ಇರುವ

ವಿರೋಧದಂತೆಯೇ ಹೋರಾಟದಿಂದ ಪಡೆಯುವವರೆಗೂ ತಮ್ಮದೇ ಆದ ಕಾರಣಗಳಿರುವುದನ್ನು ಕಾಣಲಾಗಿದೆ.

ಮೊಗಳ್ಳಿಗಣೇಶ್ ಅವರ ಭೂಮಿ ಕತೆಯಲ್ಲಿ ಆದಿಮ ಸಮುದಾಯವು ಭೂಮಿಯನ್ನು ಅಪ್ಪಿ ಬದುಕುವ ಅದನ್ನು ತನ್ನ ಉಸಿರಾಗಿಸಿಕೊಂಡಿರುವುದನ್ನು ವ್ಯಕ್ತಗೊಳಿಸಲಾಗಿದೆ. ಈ ಸಮುದಾಯಕ್ಕೆ ಭೂ ವಂಚನೆ ಮಾಡುವ ವರ್ಗದ ಹುನ್ನಾರಗಳು ಅರ್ಥವಾಗದೇ ಉಳಿಯುತ್ತವೆ. ಹೀಗಾಗಿ ಭೂಹೀನ ಸಮುದಾಯದ ಭೂಮಿಯ ಬಯಕೆಯ ಕನಸು ನನಸಾಗದೇ ಉಳಿಯುತ್ತದೆ. ಇತರೆ ಪ್ರಾತಿನಿಧಿಕ ಕಥನಕಾರರಲ್ಲಿ ಬಸವರಾಜ ಕಟ್ಟೀಮನಿ, ಆರ್.ವಿ.ಭಂಡಾರಿ, ನಟರಾಜ್‌ಹುಳಿಯಾರ್, ಎಸ್.ಗಂಗಾಧರಯ್ಯ, ಕಲಿಗಣನಾಥ ಗುಡದೂರು, ಪರುಶುರಾಮ ಮುಟಗುಪ್ಪೆ, ಮುಂತಾದವರ ಕಥನಗಳನ್ನು ಅಧ್ಯಯನ ಮಾಡಲಾಗಿದೆ.

ಸಮಾರೋಪದಲ್ಲಿ ಅಧ್ಯಯನದ ಫಲಿತಗಳು ಹಾಗೂ ಮುಂದಿನ ಅಧ್ಯಯನದ ಸಾಧ್ಯತೆಗಳನ್ನು ಕುರಿತು ಚಿಂತಿಸಲಾಗಿದೆ. ಅನುಬಂಧದಲ್ಲಿ ಆಕರಗಳ ಮೂಲಪಠ್ಯಗಳನ್ನು, ಪರಾಮರ್ಶನ ಸಾಹಿತ್ಯ ಕೃತಿಗಳ ಮತ್ತು ಲೇಖನಗಳ ಪಟ್ಟಿಗಳನ್ನು ನೀಡಲಾಗಿದೆ.

## ಅಧ್ಯಯನ ಕಂಡುಕೊಂಡ ಫಲಿತಗಳು

ಕನ್ನಡ ಸೃಜನಶೀಲ ಮನಸ್ಸುಗಳು ಕತೆ ಕಾದಂಬರಿಗಳ ಮೂಲಕ ಭೂ ರೈತ ಸಮಸ್ಯೆಗಳಿಗೆ ಪ್ರತಿಕ್ರಿಯಿಸಿರುವ ಬಗೆಯನ್ನು ಸುಧೀರ್ಘ ಅಧ್ಯಯನ ನಡೆಸಿದ ನಂತರ ಕಂಡುಕೊಂಡ ಫಲಿತಗಳು.

೧. ಭೂ ರೈತ ಪ್ರಶ್ನೆಗಳನ್ನು ಕುರಿತು ಲೇಖಕನ ಮನೋಧರ್ಮ ಯಾವ ರೀತಿ ಕೆಲಸಮಾಡಿದೆ ಎಂಬುದನ್ನು ಗುರುತಿಸಲಾಗಿದೆ.

೨. ಈ ಎಲ್ಲಾ ಲೇಖಕರೂ ಭೂಮಿ ಸಮಾನವಾಗಿ ಹಂಚಿಕೆ ಆಗಬೇಕು ಎಂಬ ಧೋರಣೆಯನ್ನು ಹೊಂದಿದ್ದಾರೆ. ಭೂ ಒಡೆತನವು ಕೆಲವರಲ್ಲಿ ಸಿಗಬೇಕೆಂಬ ಆಶಯವಿದೆ. ಕೆಲವರಲ್ಲಿ ಭೂ ಒಡೆತನ ಸಿಗಲೇ ಬೇಕು ಎಂಬ ಒತ್ತಾಸೆಯಿದೆ. ಕೆಲವರಲ್ಲಿ ಅಗತ್ಯಕ್ಕಷ್ಟೇ ಭೂ ಒಡೆತನ ಬೇಕೆಂಬುದಿದೆ. ಇನ್ನೂ ಕೆಲ ಲೇಖಕರಲ್ಲಿ ಅನುಕಂಪಮಾತ್ರವಿದೆ.

೩.ಭೂಮಿ ಸ್ಥಿರಸ್ವತ್ತಾಗಿದ್ದು, ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ರೀತಿಯಲ್ಲಿ ವ್ಯಕ್ತಿಯ ಸ್ಥಾನಮಾನದ ನಿರ್ಧಾರಕ ಅಂಶವಾಗಿ, ಅವನಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿದೆ. ಇದನ್ನು ಬೇರೆ ಬೇರೆ ಆಯಾಮಗಳಲ್ಲಿ ಗುರುತಿಸಲಾಗಿದೆ.

೪. ಭೂಹೋರಾಟಗಳ ಅಗತ್ಯ ಮತ್ತು ಅದರ ಪರಿಣಾಮಗಳ ಕುರಿತು ಬರೆಯುವ ಲೇಖಕರು ಅದನ್ನು ತಮ್ಮ ಸೃಜನಶೀಲ ಅಭಿವ್ಯಕ್ತಿಗೆ ವಸ್ತುವಾಗಿ ಯಾಕೆ ಆರಿಸಿಕೊಂಡರು.ಅವರ ಪ್ರತಿಕ್ರಿಯೆಗಳು ಹೇಗೆ ಮೂಡಿವೆ ಎನ್ನುವುದನ್ನು ಕಂಡುಕೊಳ್ಳಲಾಗಿದೆ.

೫. ಈ ಹೋರಾಟವು ತನ್ನ ಉದ್ದೇಶ ಈಡೇರಿದ ನಂತರ ಸಫಲವಾದರೆ ಸರಿ. ಆದರೆ ವಿಫಲವಾದರೆ ಇಂಥ ಸಾವಿರಾರು ಹೋರಾಟಗಳಿಗೆ ಶಕ್ತಿಯಾಗಿ ಪ್ರೇರಣೆಯೊದಗಿಸುತ್ತದೆ. ಅದು ಮತ್ತೆ ಮತ್ತೆ ಮರುಹುಟ್ಟು ಪಡೆಯುತ್ತದೆ. ಭೂಮಾಲೀಕರು ಇರುವವರೆಗೂ ಹೋರಾಟ ನಿರಂತರವಾಗಿರುತ್ತದೆ. ಇಂಥ ಚಳುವಳಿಗಳು ನಿತ್ಯವೂ ಎಚ್ಚರದ ಗಂಟೆಯಾಗಿರುತ್ತವೆ. ಮುಂದಿನ ಹೋರಾಟಗಳಿಗೆ ಸದಾ ಸ್ಫೂರ್ತಿಯಾಗಿರುತ್ತವೆ.

೬. ರೈತ ಬದುಕಿನ ಬೇರೆ ಬೇರೆ ಆಯಾಮಗಳನ್ನು ಇವತ್ತಿನ ಮಾರುಕಟ್ಟೆ, ರೈತಚಳುವಳಿ ಹಿಡಿದಿರುವ ದಾರಿಯನ್ನು, ರೈತರು ಎದುರಿಸುತ್ತಿರುವ ಸಮಸ್ಯೆಗಳನ್ನು ಅದರ ಕಾರಣ, ಪರಿಣಾಮಗಳನ್ನು ಮತ್ತು ಪ್ರಚಲಿತವಿರುವ ಕಾರ್ಪೋರೇಟ್ ಭೂಸಮಸ್ಯೆಗಳು ಕನ್ನಡ ಸಾಹಿತ್ಯ ಜಗತ್ತು ಕಟ್ಟಿಕೊಡಲು ಸಮರ್ಥವಾಗಿದೆ ಎಂಬುದು ಇದರಿಂದ ಸಾಬೀತಾಗಿದೆ.

೭.ಸಾಮಾನ್ಯವಾಗಿ ಆಳು-ಭೂಮಾಲೀಕ, ಗೇಣಿದಾರ ಭೂಮಾಲೀಕ ,ಜೀತದಾರ ಭೂಮಾಲೀಕ, ಭೂಮಾಲೀಕ ಭೂಮಾಲೀಕರ ನಡುವೆ ನಡೆಯುವ ಸಂಘರ್ಷದ ಸ್ವರೂಪವನ್ನು ಕಂಡುಕೊಳ್ಳಲಾಗಿದೆ. ವ್ಯಕ್ತಗೊಂಡಿವೆ.

೮. ಉಳುವವನೇ ಹೊಲದೊಡೆಯ ಎಂಬ ಸ್ಥಾಪಿತ ಉಕ್ತಿ ಇರುವುದನ್ನು ಕಂಡಿದ್ದೆವು. ಆದರೆ ಮುಂದೆ ಈ ಉಕ್ತಿ ಬದಲಾಗಿ, ದುಡಿಯುವವನೇ ಹೊಲದೊಡೆಯ ಎಂಬ ಉಕ್ತಿಗೆ ದಾರಿ ಮಾಡಿಕೊಟ್ಟಿರುವುದನ್ನು ಕಂಡುಕೊಳ್ಳಲಾಗಿದೆ.

೯. ಇಟ್ಕೊಂಡೋಳಿಗೆ ಆಸ್ತಿ ಹಕ್ಕು, ಕುಲದ ಕಾನೂನು ಮತ್ತು ಸರ್ಕಾರದ ಕಾನೂನಿನ ನಡುವೆ ನಡೆಯುವ ಸಂಘರ್ಷ, ಭೂಹಂಚಿಕೆಯಿಂದ ಜಗಳಾಹಂಚಿಕೆ, ಆಸ್ತಿಯ ಹಕ್ಕು ಜಗಳಕ್ಕೆ ಮೂಲ, ಮುಂತಾದ ಹೊಸ ಹೊಸ ಸಂಘರ್ಷಾತ್ಮಕ ನೆಲೆಗಳಿಗೆ ಸೃಜನಶೀಲ ಚಿಂತನೆ ಚಾಚಿಕೊಂಡಿರುವುದನ್ನು ಗುರುತಿಸಲಾಗಿದೆ.

೧೦. ಸ್ವಾಭಿಮಾನದ ಬದುಕನ್ನು ಬದುಕಲು, ತನ್ನ ಸ್ಥಾನಮಾನ, ಅಂತಸ್ತನ್ನು ಹೆಚ್ಚಿಸಿಕೊಳ್ಳಲು ಹೋರಾಟದ ಮೂಲಕ ಭೂಮಿ ಪಡೆಯುವುದು ಸಾಮಾಜಿಕ ಪ್ರಕ್ರಿಯೆಯ ಮಾದರಿಯಾಗಿ ಚಿತ್ರಿತವಾಗಿದೆ. ಈ ಭೂಮಿಯನ್ನು ಪಡೆಯುವುದರಿಂದ ಸಾಮಾಜಿಕ ಏಣಿಶ್ರೇಣಿಗಳು ಲಭ್ಯವಾಗಿ ಮೇಲಿನ ವರ್ಗದೊಂದಿಗೆ ಗುರುತಿಸಿಕೊಳ್ಳಲು ಸಾಧ್ಯ ಎಂಬುದು ಕೆಲವೆಡೆ ಬಿಂಬಿತವಾಗಿದೆ.

೧೧. ಆದಿಮ ಸಮುದಾಯವು ಭೂಮಿಯನ್ನು ಅಪ್ಪಿ ಬದುಕುವುದು ಮತ್ತು ಅದು ಇಂಥ ಬದುಕನ್ನೇ ತನ್ನ ಉಸಿರಾಗಿಸಿಕೊಂಡಿರುವುದು ಕಂಡುಬರುತ್ತದೆ. ಈ ಸಮುದಾಯಕ್ಕೆ ಭೂ ವಂಚನೆ ಮಾಡುವ ಭೂಮಾಲೀಕವರ್ಗದ ಹುನ್ನಾರಗಳು ಅರ್ಥವಾಗದೇ ಉಳಿಯುತ್ತವೆ. ಹೀಗಾಗಿ ಭೂಹೀನ ಸಮುದಾಯದ ಭೂಮಿ ಬಯಕೆಯ ಕನಸು ನನಸಾಗದೇ ಉಳಿಯುವುದು ಪ್ರಜಾಪ್ರಭುತ್ವ ವ್ಯವಸ್ಥೆಯ ವ್ಯಂಗ್ಯವೆನ್ನುವಂತೆ ಸೃಜನಶೀಲ ಕೃತಿಗಳಲ್ಲಿ ಅಭಿವ್ಯಕ್ತಗೊಂಡಿದೆ.

**ಅಧ್ಯಯನದ ಮುಂದಿನ ಸಾಧ್ಯತೆಗಳು**

ಭೂ ರೈತ ಪ್ರಶ್ನೆಯನ್ನು ಕುರಿತು ಸಮಗ್ರವಾಗಿ ಕಥನದ ಮೂಲಕ ಅಧ್ಯಯನ ಮಾಡುತ್ತಿರುವುದು ಮೊದಲ ಯತ್ನವಾಗಿದೆ. ಇದರ ವ್ಯಾಪ್ತಿ ದೊಡ್ಡದು. ಹಾಗಾಗಿ ಒಂದು ಶತಮಾನದ ಕಥಾಸಾಹಿತ್ಯವನ್ನು ಅಧ್ಯಯನ ಮಾಡುವ ಪ್ರಯತ್ನ ಇದಾಗಿದೆ. ಭೂ ರೈತ ಪ್ರಶ್ನೆಗಳನ್ನು ಒಂದು ಶತಮಾನ ಕಥಾಸಾಹಿತ್ಯದ ಮೂಲಕ ಅಧ್ಯಯನ ಮಾಡುವುದು ಈ ಅಧ್ಯಯನದ ಗುರಿಯಾಗಿತ್ತು. ಇದೊಂದು ಮಾದರಿಯಾಗಿ ಇತರೆ ಆಯಾಮಗಳ ಮೂಲಕ ಅಧ್ಯಯನ ಮಾಡುವವರಿಗೆ ಸಾಕಷ್ಟು ಸಾಧ್ಯತೆಗಳನ್ನು ಕಲ್ಪಿಸಿಕೊಟ್ಟಿದೆ. ಭೂ ರೈತಪ್ರಶ್ನೆಗಳು ಜಾಗತಿಕ ಸಂದರ್ಭದಲ್ಲಿ ಬಹುದೊಡ್ಡ ಸವಾಲುಗಳನ್ನೆದುರಿಸುತ್ತಿವೆ. ಆದ್ದರಿಂದ ಇದೇ ವಿಷಯದ ಮೇಲೆ ಅಧ್ಯಯನ ಕೈಗೊಳ್ಳುವವರಿಗೆ ನೂರಾರು ವಸ್ತುಗಳು ಇಲ್ಲಿ ಹರಡಿಕೊಂಡಿವೆ. ಆದ್ದರಿಂದ ಇಲ್ಲಿ ಕೆಲ ಪ್ರಾತಿನಿಧಿಕ ಲೇಖಕರನ್ನಷ್ಟೇ ಇಟ್ಟುಕೊಂಡು ಅಧ್ಯಯನ ಮಾಡಬಹುದು. ತೌಲನಿಕವಾಗಿ, ವಸಾಹತು,ವಸಾಹತ್ತೋತ್ತರ ಕಾಲಘಟ್ಟಗಳ ಮೂಲಕವೂ, ಕಥಾ ಸಾಹಿತ್ಯವಷ್ಟೇ ಅಲ್ಲದೆ ಬೇರೆ ಪ್ರಕಾರಗಳಲ್ಲಿಯೂ ಈ ಸಮಸ್ಯೆಯ ಸ್ವರೂಪವನ್ನು ಅಧ್ಯಯನ ಮಾಡಬಹುದು. ಇಂಥ ನೂರಾರು ಸಾಧ್ಯತೆಗಳನ್ನು ಈ ಅಧ್ಯಯನವು ಮುಂದಿನ ಅಧ್ಯಯನಕಾರರಿಗೆ ಬಿಟ್ಟುಕೊಟ್ಟಿದೆ. ಇದೊಂದು ರೀತಿಯಲ್ಲಿ ಸ್ಥೂಲ ನೋಟದ ಅಧ್ಯಯನ ಮಾತ್ರವಾಗಿದೆ.

## ೧.೧ ಅಧ್ಯಯನಕ್ಕೆ ಆಯ್ದುಕೊಂಡ ಮೂಲ ಪಠ್ಯಗಳು


೧. ಅನಂತಮೂರ್ತಿ ಯು.ಆರ್., ೧೯೭೭

**ಭಾರತೀಪುರ**, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

೨. ಅನಂತಮೂರ್ತಿ ಯು.ಆರ್., ೧೯೯೬, (೩ನೇ ಮು.)

**ಅವಸ್ಥೆ**, ಅಕ್ಷರ ಪ್ರಕಾಶನ,ಹೆಗ್ಗೋಡು,ಸಾಗರ.

೩. ಅ.ನ.ಕೃಷ್ಣರಾಯ ೨೦೦೬

**ಮಣ್ಣಿನ ಮಗ**, ಅ.ನ.ಕೃ ಅವರ ಸಮಗ್ರಕಥಾಸಂಕಲನ,ಸಾಗರ ಪ್ರಕಾಶನ,ಬೆಂಗಳೂರು.

೩. ಅರವಿಂದ ಮಾಲಗತ್ತಿ, ೨೦೦೦

**ಭೂ ಮಸೂದೆ**, ಮುಗಿಯದ ಕಥೆ, ಮೈಸೂರು.

೪. ಅಮರೇಶ ನುಗಡೋಣಿ,೨೦೦೭

**ಪಕ್ವಕಲ್ಲದೆ ಪರಿಣಾಮ ಕಾಣಿಸದು**,ಹೊಸತು,ಜನವರಿ ವಿಶೇಷ ಸಂಚಿಕೆ.

೫. ಅಮರೇಶ ನುಗಡೋಣಿ,೨೦೦೭

**ಹೊತ್ತು ಮೂಡುವ ಸಮಯ**,ಬೇಟೆ, ಮಣ್ಣು ಸೇರಿತು ಬೀಜ,

೬. ಆನಂದ ಕಂದ, ೧೯೩೨,

**ಮಾಲ್ಕೀ ಹಕ್ಕು**, ಬಡತನದಬಾಳು, ಧಾರವಾಡ

೭. ಕಲಿಗಣನಾಥ ಗುಡದೂರು, ೨೦೦೦.

**ಮಣ್ಣು**, ಉಡಿಯಲ್ಲಿ ಉರಿ, ಲೋಹಿಯಾ ಪ್ರಕಾಶನ, ಬಳ್ಳಾರಿ.

೮. ಕುವೆಂಪು , ೨೦೦೦ , (೧೧ನೇಮು)

**ಕಾನೂರು ಸುಬ್ಬಮ್ಮ ಹೆಗ್ಗಡತಿ** ,ಉದಯ ರವಿ ಪ್ರಕಾಶನ,ಮೈಸೂರು.

೯. ಕುವೆಂಪು , ೧೯೯೫, (೫ನೇಮು)

**ಮಲೆಗಳಲ್ಲಿ ಮದುಮಗಳು**,ಉದಯರವಿಪ್ರಕಾಶನ,ಮೈಸೂರು.

೧೦. ಕುವೆಂಪು, ೧೯೯೦,(೮ನೇಮುದ್ರಣ.)

**ನನ್ನ ದೇವರು ಇತರೆ ಕತೆಗಳು**, ಉದಯರವಿ ಪ್ರಕಾಶನ,ಮೈಸೂರು.

೧೧. ಕೊರಡ್ಕಲ್ ಶ್ರೀನಿವಾಸರಾಯ, ೧೯೩೮

**ದನಿಯರ ಸತ್ಯನಾರಾಯಣ**,ನಂದಾದೀಪ,ಉಡುಪಿ.

೧೨ ಕೃಷ್ಣನಾಯಕ್, ೨೦೦೫

**ಮೋತುನ ಮದ್ವೆ**,ಲದೇಣಿಯಾ,ಲೋಹಿಯಾಪ್ರಕಾಶನ,ಬಳ್ಳಾರಿ.

೧೩ ಗಂಗಾಧರಯ್ಯ ಎಸ್. ೨೦೦೩

**ನವಿಲ ನೆಲ**, ನವಿಲ ನೆಲ,ಸಾರಂಗ ಪ್ರಕಾಶನ,ತಿಪಟೂರು.

೧೪. ಗೊರೂರು,೨೦೦೪,(೫ನೇ ಮು.)

**ಹೇಮಾವತಿ**, ಪ್ರಕಾಶನ,ಬೆಂಗಳೂರು.

೧೫. ಚನ್ನಣ್ಣ ವಾಲೀಕಾರ, ೨೦೦೨

**ಒಂದು ಹೆಣ್ಣಿನ ಒಳಜಗತ್ತು**,ಸ.ಕಾ.ಸಂಪುಟ,ದಲಿತಬಂಡಾಯಸಾಹಿತ್ಯ ಪ್ರ. ಕೇಂದ್ರ, ಗುಲಬರ್ಗಾ.

೧೬. ಚನ್ನಣ್ಣ ವಾಲೀಕಾರ , ೧೯೭೮,
**ಕಪ್ಪು ಕತೆಗಳು**,ಕುತ್ತದಲ್ಲಿ ಕುದ್ದವರು,ರಾಯಚೂರು, ಹೈದ್ರಾಬಾದ್‌ಕರ್ನಾಟಕ.

೧೭. ಚದುರಂಗ ೧೯೮೦
**ವೈಶಾಖ**,ಸುರುಚಿ ಪ್ರಕಾಶನ, ಮೈಸೂರು.

೧೮. ಜವರಯ್ಯ ಮ.ನ., ೧೯೮೭.
**ಮಾಗಿ**, ಸಂಕ್ರಮಣ ಪ್ರಕಾಶನ, ಧಾರವಾಡ.

೧೯. ಡಿಸೋಜ ನಾ., ೧೯೮೭
**೨೫ಕಥೆಗಳು**,ಗೀತಾ ಬುಕ್ ಹೌಸ್,ಮೈಸೂರು.

೨೦. ಡಿಸೋಜ ನಾ., ೧೯೯೭
**ಮುಂಜಿನ ಕಾನು**, ರವೀಂದ್ರ ಪುಸ್ತಕಾಲಯ, ಕಾರ್ಗಲ್, ಶಿವಮೊಗ್ಗ.

೨೧. ಡಿಸೋಜ ನಾ., ೧೯೯೭
**ಮುಳುಗಡೆ**, ರವೀಂದ್ರ ಪುಸ್ತಕ ಭಂಡಾರ, ಕಾರ್ಗಲ್,ಶಿವಮೊಗ್ಗ.

೨೨. ಡಿಸೋಜ ನಾ.,೨೦೦೧
**ಕೊಳಗ**,ಗೀತಾ ಬುಕ್ ಹೌಸ್,ಮೈಸೂರು.

೨೩. ಡಿಸೋಜ ನಾ. ೨೦೦೧
**ಅಭಿವೃದ್ಧಿಯ ಒಂದು ಪರಿ**, ೪ನವೆಂಬರ್ ,ಸಾಪ್ತಾಹಿಕ ಪುರವಣಿ, ವಿಜಯಕರ್ನಾಟಕ .

೨೪. ಡಿಸೋಜ ನಾ. ೨೦೦೨
**ಮಹಾದ್ವಾರ**, ಸೆಪ್ಟೆಂಬರ್೧, ಸಾಪ್ತಾಹಿಕ ಪುರವಣಿ,ಪ್ರಜಾವಾಣಿ.

೨೫. ದೇವನೂರು ಮಹಾದೇವ ೧೯೯೨
**ದೇವನೂರು ಅವರಕೃತಿಗಳು**, ಪತ್ರಿಕೆ ಪ್ರಕಾಶನ,ಬೆಂಗಳೂರು.

೨೬ ನಟರಾಜ್ ಹುಳಿಯಾರ್ ೨೦೦೪
**ಬಿರುಬಿಟ್ಟ ನೆಲ**, ಮತ್ತೊಬ್ಬ ಸರ್ವಾಧಿಕಾರಿ,ಸಾಗರ ಪ್ರಕಾಶನ,ಬೆಂಗಳೂರು.

೨೭. ನಿರಂಜನ, ೧೯೯೭
**ಚಿರಸ್ಮರಣೆ**, ಡಿ.ವಿ.ಕೆ.ಮೂರ್ತಿ, ಮೈಸೂರು.

೨೮. ಪೂರ್ಣಚಂದ್ರತೇಜಸ್ವಿ, ೧೯೭೩
**ಪರಿಸರದ ಕತೆಗಳು**, ಪುಸ್ತಕ ಪ್ರಕಾಶನ,ಮೈಸೂರು.

೨೯. ಪೂರ್ಣಚಂದ್ರತೇಜಸ್ವಿ, ೨೦೦೬
**ಕರ್ವಾಲೋ,ಚಿದಂಬರ ರಸಹ್ಯ,ನಿಗೂಢ ಮನುಷ್ಯರು,ಸ್ವರೂಪ**, ಪುಸ್ತಕ ಪ್ರಕಾಶನ,ಮೈಸೂರು.

೨೯. ಪೂರ್ಣಚಂದ್ರತೇಜಸ್ವಿ,೨೦೦೬
**ಮಾಯಾಲೋಕ,ಜುಗಾರಿಕ್ರಾಸ್**, ಪುಸ್ತಕ ಪ್ರಕಾಶನ, ಮೈಸೂರು.

೩೦. ಬಸವರಾಜ ಕಟ್ಟೀಮನಿ, ೧೯೭೯
**ಹರಿಜನಾಯಣ**, ಪ್ರತಿಭಾ ಗ್ರಂಥಮಾಲೆ, ಧಾರವಾಡ.

೩೧. ಬರಗೂರು ರಾಮಚಂದ್ರಪ್ಪ ೧೯೯೯,

**ಒಂದು ಊರಿನ ಕತೆಗಳು**, ಅಂಕಿತ ಪುಸ್ತಕ ಬೆಂಗಳೂರು.

೩೨. ಬರಗೂರು ರಾಮಚಂದ್ರಪ್ಪ, ೨೦೦೫

**ಶಬರಿ**, ಅಂಕಿತ ಪ್ರಕಾಶನ, ಬೆಂಗಳೂರು.

೩೩. ಬೆಸಗರಹಳ್ಳಿ ರಾಮಣ್ಣ ೧೯೬೨ , ೧೯೮೫, ೮೬

**ಕನ್ನಂಬಾಡಿ**, ಸಮಗ್ರಕತೆಗಳು, ಪಲ್ಲವಿ ಪ್ರಕಾಶನ, ಮಂಡ್ಯ.

೩೪. ಬೆಸಗರಹಳ್ಳಿ ರಾಮಣ್ಣ ,೧೯೯೮,

**ಕೊಳಲು ಮತ್ತು ಖಡ್ಗ**,ಬೆಂಗಳೂರು.

೩೫. ಭಂಡಾರಿ ಆರ್.ವಿ, ೧೯೮೪

**ಬೆಂಕಿಯಮಧ್ಯೆ**,ಬಂಡಾಯ ಪ್ರಕಾಶನ,ಹೊನ್ನಾವರ.

೩೬. ಮಲ್ಲಿಕಾರ್ಜುನ ವಣೇನೂರ ೨೦೦೦

**ಮೂಗ,ಮಣ್ಣಿನ ಕುಡಿಕೆ**,ಲೋಹಿಯಾ ಪ್ರಕಾಶನ,ಬಳ್ಳಾರಿ.

೩೭. ಮ.ನ.ಜ . ೧೯೮೭,

**ಮಾಗಿ**,ಸಂಕ್ರಮಣ ಪ್ರಕಾಶನ,ಧಾರವಾಡ.

೩೮. ಮಾಸ್ತಿ,ಸಂಪುಟ ೪

**ಸಣ್ಣಕತೆಗಳು** ೧೩,ಸಂಪುಟ೪,ಜೀವನ ಕಾರ್ಯಾಲಯ ಬೆಂಗಳೂರು.

೩೯. ಮೊಗಳ್ಳಿ ಗಣೇಶ್ ೨೦೦೧

**ಭೂಮಿ**, ಪ್ರಿಸಂ ಬುಕ್ ಪ್ರೈ.,ಬೆಂಗಳೂರು

೪೦. ಮೊಗಳ್ಳಿ ಗಣೇಶ್ ೨೦೦೧

**ಮಣ್ಣು**,ಪ್ರಿಸಂ ಬುಕ್ ಪ್ರೈ.,ಬೆಂಗಳೂರು.

೪೧. ಮುಟ್ಟುಗಪ್ಪೆ ಪರುಶುರಾಂ, ೨೦೦೪

**ಜಪ್ತಿ**,ಕಥಾಸಂಕಲನ, ಕರ್ನಾಟಕ ಕನ್ನಡ ಬರಹಗಾರರ ಮತ್ತುಪ್ರಕಾಶಕರ ಸಂಘ ,ಬೆಂಗಳೂರು.

೪೨. ಲಂಕೇಶ್ ಪಿ.,

**ಕಲ್ಲುಕರಗುವ ಸಮಯ**, ಪತ್ರಿಕೆ ಪ್ರಕಾಶನ,ಬೆಂಗಳೂರು.

೪೩. ವೀರಭದ್ರಪ್ಪ ಕುಂ., ೨೦೦೫

**ಪರ್ಯಾವಸಾನ**,ಇದು ಬರಿಕಥೆಯಲ್ಲೊ ಅಣ್ಣಾ,

೪೪. ಸುಬ್ರಹ್ಮಣ್ಯಂ ನ., ೨೦೦೭

**ಬಸಪ್ಪನ ಜಮೀನು**,ಹೊಸತು,ಜನವರಿ ವಿಶೇಷ ಸಂಚಿಕೆ.

೪೫. ಶಿವರಾಮಕಾರಂತ, ಮ.ಮು.೨೦೦೩

**ಚೋಮನದುಡಿ**, ಎಸ್.ಬಿ.ಎಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

೪೬. ಶಿವರಾಮಕಾರಂತ, ೧೯೪೮

'**ಕುಡಿಯರ ಕೂಸು**, ಹರ್ಷಮುದ್ರಣಾಲಯ, ಪುತ್ತೂರು.

೪೭ ಶಿವ ರುದ್ರ ಕಲ್ಲೋಳಿಕರ ೧೯೯೪

**ಹೊಲಗೇರಿಯ ರಾಜಕುಮಾರ**,ಅನಾರ್ಯ ಪ್ರಕಾಶನ,ಧಾರವಾಡ.

೪೮. ಶೇಷನಾರಾಯಣ, ೨೦೦೫. (೨ನೇಮು)

**ಬೀಸು**,.ವಸಂತ ಪ್ರಕಾಶನ,ಬೆಂಗಳೂರು.

೪೯. ಶಾಂತರಸ ,೧೯೯೭

**ಶಾಂತರಸರ ಸಮಗ್ರ ಕತೆಗಳು**,ಪ್ರಿಯದರ್ಶಿನಿ ಪ್ರಕಾಶನ,ಬೆಂಗಳೂರು.

೫೦. ರಾವ್‌ಬಹಾದ್ದೂರ್,೧೯೭೦ (ದ್ವಿ.ಮು.)

**ಗ್ರಾಮಾಯಣ**,ಉಷಾಸಾಹಿತ್ಯ ಮಾಲೆ, ಮೈಸೂರು.

೫೧. ರಾವ್‌ಬಹಾದ್ದೂರ್,೧೯೭೦ (ದ್ವಿ.ಮು.)

**ಬಿತ್ತಿಬೆಳೆದವರು**,ಕನ್ನಡ ಸಂಸ್ಕೃತಿ ಇಲಾಖೆ,ಬೆಂಗಳೂರು.

೫೨. ಲಂಕೇಶ್ ಪಿ.

**ಮಾರಲಾಗದ ನೆಲ**, ಉಪಮಾಪತಿಸ್ಕಾಲರ್‌ಶಿಪ್‌ಯಾತ್ರೆ, ಪತ್ರಿಕೆಪ್ರಕಾಶನ,ಬೆಂಗಳೂರು.

೫೩. ಬಿ.ಟಿ.ಲಲಿತಾನಾಯಕ್, ೧೯೮೬

**ಗತಿ**,ಪತ್ರಿಕೆ ಪ್ರಕಾಶನ,ಬೆಂಗಳೂರು.

೫೪. ವೇದಾ. ಎಂ.ಎಸ್,೨೦೦೦ (ಪ್ರ.ಮು.)

**ಪಾಲು**,ಸಂವಹನ ೧೨, ಎ ಈವನಿಂಗ್ ಬಜಾರ್‌ಹಿಂಭಾಗ,ಶಿವರಾಂ ಪೇಟೆ, ಮೈಸೂರು.

೫೫. ವೇದಾ. ಎಂ.ಎಸ್,೨೦೦೦ (ಪ್ರ.ಮು.)

**ಜಮೀನು**,ಸಂವಹನ ೧೨, ಎ ಈವನಿಂಗ್ ಬಜಾರ್‌ಹಿಂಭಾಗ,ಶಿವರಾಂ ಪೇಟೆ, ಮೈಸೂರು.

೫೬. ವಿಶುಕುಮಾರ್,೧೯೭೭

**ಭೂಮಿ**,ಗೀತಾ ಬುಕ್ ಹೌಸ್,ಮೈಸೂರು.

೫೭. ವೀರಭದ್ರಪ್ಪ ಕುಂ., ೧೯೯೩

**ಕೊಟ್ರಹೈಸ್ಕೂಲಿಗೆಸೇರಿದ್ದು**,ಕನ್ನಡ ಸಂಘ,ಕ್ರೈಸ್ಟ್ ಕಾಲೇಜು, ಬೆಂಗಳೂರು.

೫೮. ವೈದೇಹಿ, ೧೯೯೧

**ಹಕ್ಕಿಲ್ಲದವರು**,ಸಾಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ, ಅಕ್ಷರ ಪ್ರಕಾಶನ, ಹೆಗ್ಗೋಡು,ಸಾಗರ.

## ೧.೨. ಪರಾಮರ್ಶನ ಕೃತಿಗಳು


೧.ಅನಂತಮೂರ್ತಿ ಯು.ಆರ್., **ಪ್ರಜ್ಞೆಮತ್ತು ಪರಿಸರ**, ಅಕ್ಷರ ಪ್ರಕಾಶನ,ಹೆಗ್ಗೋಡು,ಸಾಗರ.

೨.ಅಗ್ರಹಾರ ಕೃಷ್ಣಮೂರ್ತಿ(ಸಂ):ಡಿ.ಆರ್.ನಾಗರಾಜ, **ಸಂಸ್ಕೃತಿ ಕಥನ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೨

೩.ಆಮೂರ ಜಿ.ಎಸ್, **ಕನ್ನಡ ಕಥನ ಸಾಹಿತ್ಯ ಸಣ್ಣಕತೆ**, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು- ೨೦೦೩

೪.ಆಮೂರ ಜಿ.ಎಸ್., **ಕನ್ನಡ ಕಥನ ಸಾಹಿತ್ಯ;ಕಾದಂಬರಿ**, ಶ್ರೀಹರಿ ಪ್ರಕಾಶನ, ಧಾರವಾಡ-೧೯೯೪

೫. ಆಮೂರ ಜಿ.ಎಸ್., **ಕಥನಶಾಸ್ತ್ರ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು೨೦೦೧

೬.ಆಚಾರ್ಯ ನರೇಂದ್ರದೇವ, **ಜನತಾಂತ್ರಿಕ ಸಮಾಜವಾದ**, ಜನಪ್ರಕಾಶನ,ಬೆಂಗಳೂರು-೧೯೮೨

೭.ಆನಂದಮೂರ್ತಿ ಜಿ.ವಿ.,ಕಾಳೇಗೌಡ ನಾಗವಾರ (ಸಂ), **ಶಾಂತವೇರಿ ಗೋಪಾಗೌಡ ನೆನಪಿನ ಸಂಪುಟ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.೧೯೯೭

೮.**ಕರ್ನಾಟಕ ರೈತಹೋರಾಟದ ಆಶೋತ್ತರಗಳು**, ಕರ್ನಾಟಕ ರಾಜ್ಯ ರೈತ ಸಂಘ,ಮಂಡ್ಯ೧೯೮೪

೯.ಕಕ್ಕಿಲ್ಲಾಯ ಬಿ.ವಿ., **ಮಾರ್ಕ್ಸ್‌ವಾದಿ ವಿಚಾರಧಾರೆ೧**, ಮಾರ್ಕ್ಸ್‌ಜೀವನ ಚಿಂತನ, ನವಕರ್ನಾಟಕ ಪಬ್ಲಿಕೇಶನ್,ಬೆಂಗಳೂರು.೧೯೮೬.

೧೦.ಕಕ್ಕಿಲ್ಲಾಯ ಬಿ.ವಿ., **ಮಾರ್ಕ್ಸ್‌ವಾದಿ ವಿಚಾರಧಾರೆ೨**, ಫ್ರೆಡರಿಕ್ ಎಂಗೆಲ್ಸ್, ಮಾರ್ಕ್ಸ್‌ಜೀವನ ಚಿಂತನ, ನವಕರ್ನಾಟಕ ಪಬ್ಲಿಕೇಶನ್,ಬೆಂಗಳೂರು.೧೯೮೬.

೧೧.ಕರೀಗೌಡ ಬೀಚನಹಳ್ಳಿ, **ವ್ಯಷ್ಟಿ ಮತ್ತು ಸಮಷ್ಟಿ**, ಅಜಂತ ಪ್ರಕಾಶನ,ಬೆಂಗಳೂರು-೧೯೯೧

೧೨.ಕಾಳೇಗೌಡ ನಾಗರವಾರ,ನಟರಾಜಹುಳಿಯಾರ್, (ಸಂ.) **ಸ್ವಾತಂತ್ರ್ಯದ ಅಂತರ್ಜಲ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.೧೯೯೬

೧೩.ಕೋದಂಡರಾಮ ಎನ್.ಕೆ., **ಕನ್ನಡ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ**, ಗಾಯತ್ರಿ ಸ್ಮಾರಕ ಗ್ರಂಥಮಾಲೆ, ಮೈಸೂರು-೧೯೯೬

೧೪. ಕೀರ್ತಿನಾಥ್ ಜಿ.ಎನ್., **ಶಿವಮೊಗ್ಗ ಜಿಲ್ಲೆಯಲ್ಲಿ ಸಮಾಜವಾದಿ ಚಳುವಳಿಗಳು(೧೯೪೦-೧೯೭೮)** ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ(ಅಪ್ರಕಟಿತ)ಕನ್ನಡ ವಿಶ್ವವಿದ್ಯಾಲಯ.೧೯೯೫

೧೫.ಕಂಠಿ ಎನ್.ಎಂ., **ರೈತ ಸರಕಾರ ಸ್ಥಾಪನೆ ಏಕೆ?, ಹೇಗೆ**, ಅಮರ ಸಾಹಿತ್ಯ ಪ್ರಕಾಶನ,ಬಿಜಾಪುರ೧೯೯೪.

೧೬.ಕೀರ್ತಿನಾಥ ಕುರ್ತಕೋಟಿ, **ವಿಮರ್ಶಾವಿನಯ ಕಾದಂಬರಿ**, ಮನೋಹರ ಗ್ರಂಥಮಾಲಾ, ಧಾರವಾಡ ೧೯೯೬

೧೭. ಗಣಪತಿಯಪ್ಪ ಹೆಚ್.,**ರೈತನ ಕಷ್ಟವನ್ನು ರೈತನೇ ರೈತನೇ ಬಲ್ಲ!** ತಾಲ್ಲೂಕು ರೈತ ಸಂಘ,ಸಾಗರ-೧೯೫೧

೧೮.ಗಂಗಾರಾಂ ಚಾಂಡಾಳ, **ಕರ್ನಾಟಕ ದಲಿತ ಚಳುವಳಿ ಮತ್ತು ಡಾ.ಬಿ.ಆರ್.ಅಂಬೇಡ್ಕರ್ ಪ್ರಭಾವ**,ಚೈತ್ರಪ್ರಕಾಶನ, ಚಿಕ್ಕತಿರುಪತಿ,ಕೋಲಾರ.೨೦೦೨.

೧೯.ಗಾಂಧಿ ಮೋ.ಕ., **ನನ್ನ ಆದರ್ಶಗ್ರಾಮ**, ಗಾಂಧಿಸ್ಮಾರಕನಿಧಿ, ಕರ್ನಾಟಕ ಶಾಖೆ, ಬೆಂಗಳೂರು.೧೯೮೪

೨೦.ಗೋಪಾಲಕೃಷ್ಣರಾವ್ ಕೆ.ಎಲ್.,ಅನು: **ಮಾರ್ಕ್ಸ್,ಏಂಗೆಲ್ಸ್ ಕಮ್ಯುನಿಸ್ಟ್ ಪಾರ್ಟಿ ಪ್ರಣಾಳಿಕೆ**, ಪ್ರಗತಿಪ್ರಕಾಶನ,ಮಾಸ್ಕೋ೧೯೭೮

೨೧.ಗುರುಪಾದ ಮರಿಗುದ್ದಿ, **ಕುವೆಂಪುಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ**, ಸಹ್ಯಾದ್ರಿ ಪ್ರಕಾಶನ, ಮೈಸೂರು.೧೯೮೯

೨೨.ಗಂಗಾಧರ ಮೂರ್ತಿ,**ನಾಗಸಂದ್ರ ಭೂ ಆಕ್ರಮಣ ಚಳುವಳಿ**, ಕರ್ನಾಟಕ ದಲಿತ ಸಂಘರ್ಷಸಮಿತಿ, ಕೋಲಾರ.

೨೩.ಗೋವಿಂದರಾಜ ಗಿರಡ್ಡಿ,**ಸಮಗ್ರ ವಿಮರ್ಶೆ, ಸಂ ೨**, ಸಪ್ನಬುಕ್‌ಹೌಸ್,ಬೆಂಗಳೂರು.-೨೦೦೧

೨೪.ಗೋವಿಂದರಾಜ ಗಿರಡ್ಡಿ,**ಸಣ್ಣ ಕಥೆಯ ಹೊಸ ಒಲವುಗಳು**,೧೯೭೮.
೨೫.ಗೋಪಾಲಕೃಷ್ಣಯ್ಯ ಕೆ.ಎಸ್.,**ಸಮಾಜವಾದ ಪರಿಚಯ**, ಪ್ರಸಾರಾಂಗ,ಬೆಂಗಳೂರು ವಿಶ್ವ ವಿದ್ಯಾಲಯ,ಬೆಂಗಳೂರು-೨೦೦೪
೨೬.ಗೋವಿಂದರಾಜು ಸಿ.ಆರ್.,**ಕನ್ನಡ ಗಡಿಚಳವಳಿಗಳು** ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ,ಹಂಪಿ- ೧೯೯೯
೨೭.ಚಂದ್ರಶೇಖರ್ ಸಿ.ಬಿ.,**ಕಾಗೋಡು ಒಂದು ನೆನಪು**,ಬೆಂಗಳೂರು-೨೦೦೧
೨೮.ಚಂದ್ರಶೇಖರ್ ಟಿ.ಆರ್, **ಕಬ್ಬು ಬೆಳೆಗಾರರ ಹೋರಾಟ**, ಹೊಸಪೇಟೆ-೧೯೮೭
೨೯.ಚಂದ್ರಶೇಖರ್ ಎಸ್., **ದಕ್ಷಿಣ ಭಾರತ:ವಸಾಹತುಶಾಹಿ,ರಾಷ್ಟ್ರೀಯತೆ ಮತ್ತು ಸಂಘರ್ಷ**, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೦
೩೦.ಚಿದಾನಂದಮೂರ್ತಿಎಂ.,**ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ,ಧಾರವಾಡ-೧೯೯೫
೩೧.ಚಾರು ಚಂದ್ರಭಂಡಾರಿ, **ಭೂದಾನ ಯಜ್ಞಸಮಗ್ರದರ್ಶನ**, ೧೯೫೭, ದ್ವಿ.ಮು.ಸರ್ವ ಸೇವಾಸಂಘ ಪ್ರಕಾಶನ, ಬೆಂಗಳೂರು
೩೨.ಚಿನ್ನಸ್ವಾಮಿ ಸೋಸಲೆ ಎನ್.,**ಗಡಿ ಚಳವಳಿಗಳು**, ಪ್ರಸಾರಾಂಗ,ಕನ್ನಡ ವಿಶ್ವವಿದ್ಯಾಲಯ,ಹಂಪಿ-೧೯೯೯
೩೩.ಜವರಯ್ಯ ಮ.ನ.(ಅನು):**ಡಾ.ಅಂಬೇಡ್ಕರ್ ಸಮಗ್ರ ಚಿಂತನ ಸಂ.೧**,ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು. ೧೯೮೯.
೩೪.ತಂಬಂಡ ವಿಜಯ್‌ಪೂಣಚ್ಚ ,**ರೈತ ಚಳವಳಿಗಳು ಏಕೀಕರಣೋತ್ತರ ಕರ್ನಾಟಕ ಚಳವಳಿಗಳು**,ಕನ್ನಡ ವಿಶ್ವವಿದ್ಯಾಲಯ,ಹಂಪಿ-೨೦೦೦
೩೫. ಪ್ರೊ.ನಂಜುಂಡಸ್ವಾಮಿ ಎಂ.ಡಿ., **ನಮ್ಮ ನಾಡು**, ಕರ್ನಾಟಕ ರಾಜ್ಯ ರೈತ ಸಂಘ,ಶಿವಮೊಗ್ಗ
೩೬.ಪ್ರೊ.ನಂಜುಂಡಸ್ವಾಮಿ ಎಂ.ಡಿ., **ರೈತ ಹೋರಾಟ ಏಕೆ ?**, ಕರ್ನಾಟಕ ರಾಜ್ಯ ರೈತ ಸಂಘ-೧೯೮೨
೩೭.ನಟರಾಜ ಹುಳಿಯಾರ್, **ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ,ಆಧುನಿಕತೆ ಮತ್ತು ಪರಂಪರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೪
೩೮.ನಟರಾಜ ಹುಳಿಯಾರ್,ಕಾಳೇಗೌಡನಾಗವಾರ (ಸಂ): **ಉತ್ತರ ದಕ್ಷಿಣ**,ಸಂ.೨,ಕನ್ನಡಮತ್ತು ಸಂಸ್ಕೃತಿ ನಿರ್ದೇಶನಾಲಯ,ಬೆಂಗಳೂರು. ೧೯೯೮.
೩೯.ಪ್ರೊ.ನಾಗೇಶ್ ಎಚ್.ವಿ.,**ಸಾಮಾಜಿಕ ಚಳುವಳಿಗಳು**, ಪ್ರಸಾರಾಂಗ,ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೯೯.
೪೦.ಪ್ರೊ.ನಾಗೇಶ್ ಎಚ್.ವಿ.,ಎ.ಇ.ಪುನೀತ್, **ಭಾರತದಲ್ಲಿ ರೈತ ಹೋರಾಟಗಳು**, ಚಂದ್ರನಾಥ ಪ್ರಕಾಶನ, ಧಾರವಾಡ ೧೯೮೪.
೪೧.ನಾಗೇಶ್ ಜಿ., **ಕಾಗೋಡು ಸತ್ಯಾಗ್ರಹ ನೇತಾರ ಹೆಚ್.ಗಣಪತಿಯಪ್ಪ**, ದಶಮಿತ್ರಪ್ರಕಾಶನ , ಸಾಗರ ೨೦೦೨.
೪೨.ನಾಡಕರ್ಣಿ ಎಂ.ವಿ., **ಕರ್ನಾಟಕ ರೈತ ಹೋರಾಟಗಳು**, ಪ್ರಿಂಟರ್ಸ್ ಪ್ರಕಾಶನ,ಬೆಂಗಳೂರು.೧೯೮೬
.೪೩.ನಾಗರಾಜ್ ಡಿ.ಆರ್.,**ಸಾಹಿತ್ಯ ಕಥನ**, ಅಕ್ಷರ ಪ್ರಕಾಶನ, ಸಾಗರ.-೧೯೯೬
೪೪.ನಾಗರಾಜ್ ಡಿ.ಆರ್., **ಅಮೃತ ಮತ್ತು ಗರುಡ, ಅಕ್ಷರ ಪ್ರಕಾಶನ**, ಹೆಗ್ಗೋಡು,ಸಾಗರ ೧೯೯೮.
೪೫.ನಾಗರಾಜ್.ಡಿ.ಆರ್, **ಶಕ್ತಿ ಶಾರದೆಯ ಮೇಳ**, ಅಕ್ಷರ ಪ್ರಕಾಶನ, ಸಾಗರ-೧೯೯೮.
೪೬.ನಾಗರಾಜ್ ಎಂ.ಜಿ.,**ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹ(ಸಹಸ್ರಮಾನ ಸಂಪುಟಗಳು೧,೨,೩)** ಪ್ರತಿಭಾವಂತ ಸಂಸದೀಯ ಪಟುಗಳ ಬರಹಮಾಲಿಕೆ, ವಿಧಾನಮಂಡಲ ಗ್ರಂಥಾಲಯ ಉಪಸಮಿತಿ, ವಿಧಾನಸೌಧ, ಬೆಂಗಳೂರು೨೦೦೫

೪೭.ನಾರಾಯಣಸ್ವಾಮಿ,ಜ.ಹೋ.,(ಅನು):ಮೂಲ ರಾಮಮನೋಹರ ಲೋಹಿಯಾ,**ಭಾರತದ ರೈತ,** ನೆಲಮನೆ ಪ್ರಕಾಶನ,ಮೈಸೂರು.೧೯೮೧.

೪೮.ನಾಗಭೂಷಣ್ ಸ್ವಾಮಿ ಓ.ಎಲ್, **ವಿಮರ್ಶೆಯ ಪರಿಭಾಷೆ,** ಅಂಕಿತ ಪುಸ್ತಕ,ಬೆಂಗಳೂರು.೧೯೯೮

೪೯.ನಾರಾಯಣಸ್ವಾಮಿ ಜ.ಹೋ(ಅನು):**ಭಾರತದ ರೈತ,** ನೆಲಮನೆ ಪ್ರಕಾಶನ,ಮೈಸೂರು-೧೯೮೧

೫೦. ನಾಗರಾಜು.ಟಿ ಸಾಮಾಜಿಕ ಚಳವಳಿಗಳು,ಚೇತನಬುಕ್‌ಹೌಸ್,ಮೈಸೂರು. ೧೯೯೯

೫೧.ನಿರಂಜನ,**ಚಿರಸ್ಮರಣೆ ಕಯ್ಯೂರು,** ಸಮುದಾಯ ಪ್ರಕಾಶನ, ಬೆಂಗಳೂರು-೧೯೮೧

೫೨.ಪುರುಷೋತ್ತಮ ಬಿಳಿಮಲೆ, (ಸಂ):**ಬಂಡಾಯ ದಲಿತ ಸಾಹಿತ್ಯ,**ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೨೦೦೫.

೫೩.ಫಕೀರ್‌ಮಹಮದ್‌ಕಟ್ಪಾಡಿ,**ಕಯ್ಯೂರಿನ ರೈತ ವೀರರು,** ನವಕರ್ನಾಟಕ ಪ್ರಕಾಶನ, ಬೆಂಗಳೂರು ೧೯೯೨

೫೪.ಪ್ರಭಾಕರ ಎ.ಎಸ್.,**ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು,** ಕನ್ನಡ ವಿಶ್ವವಿದ್ಯಾಲಯ,- ೨೦೦೦

೫೫.ಪುಟ್ಟಯ್ಯ ಬಿ.ಎಂ.,**ಕನ್ನಡ ದಲಿತ ಸಾಹಿತ್ಯ ಮತ್ತು ಪ್ರತಿ ಸಂಸ್ಕೃತಿ,** ಪಿ.ಎಚ್‌ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ(ಅಪ್ರಕಟಿತ)ಕನ್ನಡ ವಿಶ್ವವಿದ್ಯಾಲಯ, ಹಂಪಿ.೧೯೯೭.

೫೬.ಪ್ರಹ್ಲಾದಅಗಸನಕಟ್ಟೆ,**ದಲಿತ ಬಂಡಾಯ ಕಾವ್ಯ ಮತ್ತು ವಿಚಾರವಾದಗಳು,** ಹರ್ಷ ಪ್ರಕಾಶನ, ಹುಬ್ಬಳ್ಳಿ,೨೦೦೪.

೫೭.ಬಾಪು ಹೆದ್ದೂರ ಶೆಟ್ಟಿ, **ಸಮಾಜವಾದ ಜನತಂತ್ರ ಮತ್ತು ಕಮ್ಯುನಿಸಂ,**ಅಕ್ಷರ ಪ್ರಕಾಶನ,ಸಾಗರ-೧೯೮೯

೫೮.ಬಾಪುಹೆದ್ದೂರಶೆಟ್ಟಿ ,ಹನುಮಂತ(ಸಂ):**ಭಾರತೀಯ ಸಮಾಜವಾದದ ಹೆಜ್ಜೆಗುರುತುಗಳು,** ಜನ ಪ್ರಕಾಶನ, ಬೆಂಗಳೂರು-೧೯೭೯

೫೯.ಬಾಪುಹೆದ್ದೂರಶೆಟ್ಟಿ (ಅನು) ಮೂಲ ಪ್ರೊ.ಮಧುದಂಡವತೆ,**ಸಮಾಜವಾದ :ಐದು ದಶಕಗಳು,** ಸಮಾಜವಾದಿ ಪ್ರತಿಷ್ಠಾನ,ಬೆಂಗಳೂರು.೧೯೮೭.

೬೦.ಬಾಪು ಹೆದ್ದೂರಶೆಟ್ಟಿ, **ಭಾರತದಲ್ಲಿ ಸಮಾಜವಾದ,**ಜನಪ್ರಕಾಶನ,ಬೆಂಗಳೂರು.೧೯೮೭.

೬೧.ಬಸವರಾಜಪ್ಪ ಹೆಚ್.ಇ.,**ಚಿತ್ರದುರ್ಗ ಪ್ರದೇಶದ ಭೂಹಿಡುವಳಿಗಳ ಚಾರಿತ್ರಿಕ ಸಾಂಸ್ಕೃತಿಕ ಅಧ್ಯಯನ** (೧೭೭೬-೧೯೨೫)ಪಿಹೆಚ್‌ಡಿಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ(ಅಪ್ರಕಟಿತ),ಕನ್ನಡ ವಿಶ್ವವಿದ್ಯಾಲಯ,ಹಂಪಿ ೨೦೦೧.

62 ಃN DÂ ಫ್oI Do; ಫ್ತ್(ಸಂ) **೨೦ನೇ ಶತಮಾನದ ಕನ್ನಡ ಸಾಹಿತ್ಯಘಟ್ಟಗಳು,** ಕರ್ನಾಟಕ ವಿದ್ಯಾ ವರ್ಧಕ ಸಂಘ,ಧಾರವಾಡ ೨೦೦೨.

೬೩.ಬಸನಗೌಡ ಬಾಬಾಪಾಟೀಲ, **ಸರಕಾರಕ್ಕೆ ರೈತನ ಸವಾಲು,** ಹಸಿರುಕ್ರಾಂತಿ ಪ್ರಕಾಶನ, ೧೯೮೭.

೬೪.ಬೋರಲಿಂಗಯ್ಯ ಹಿ.ಚಿ.,**ಕಾಡು ಕಾಂಕ್ರಿಟ್ ಮತ್ತು ಜಾನಪದ,**ಅಕ್ಷರಪ್ರಕಾಶನ, ಹೆಗ್ಗೋಡು, -೧೯೯೫

೬೫.ಬೋರಲಿಂಗಯ್ಯಹಿ.ಚಿ.,**ನಮ್ಮೊಳಗೊಂದು ಪುಟ್ಟ ಆಫ್ರಿಕಾ,**ಸಿವಿಜಿ ಪಬ್ಲಿಕೇಷನ್,ಬೆಂ- ೨೦೦೪

೬೬.ಬೋರಲಿಂಗಯ್ಯಹಿ.ಚಿ.ಹುಚ್ಚಪ್ಪಮಾಸ್ತರ್(ಸಂ):**ಕಾಗೋಡು ಚಳವಳಿಸುವರ್ಣ ಸಂಪುಟ,** ಮಲೆನಾಡು ಜಾನಪದ,ಗಾಂಧಿಮಂದಿರ,ಸಾಗರ.-೨೦೦೨

೬೭.ಭೂಮಿಗೌಡ, **ಕನ್ನಡ ಕಾದಂಬರಿಗಳಲ್ಲಿ ದಲಿತ ಜಗತ್ತು,** ಚೇತನ ಬುಕ್‌ಹೌಸ್,೨೦೦೪ ಪ್ರ, ಮು, ಮೈಸೂರು.

೬೮.ಭಟ್ ಎಂ.ಕೆ.,**ರೈತ ಕಾರ್ಮಿಕ ಮತ್ತು ಸಮಾಜ ಬದಲಾವಣೆ,**ಸಮುದಾಯ ಪ್ರಕಾಶನ, ಬೆಂ.೧೯೭೯.

೬೯.ಭವಾನಿ ಶಂಕರ್ ಬಿ.ಎಸ್.,**ಬಾಗೂರು ನವಿಲೆ ಗ್ರಾಮ ಸಮೂಹದ ಬವಣೆಗಳು,**ಅಖಿಲಭಾರತ ಕಿಸಾನ್ ಸಭಾ ಪ್ರಕಟಣೆ,ಬೆಂಗಳೂರು.೧೯೯೯.

೭೦.ಮಹಾಬಲೇಶ್ವರರಾವ್, **ಸಂಶೋಧನ ಮಾರ್ಗ,** ನವಕರ್ನಾಟಕ ಪ್ರಕಾಶನ, ಬೆಂಗಳೂರು೧೯೯೬.

೨೧.ಮರುಳಸಿದ್ದಯ್ಯ, ಸಂಶೋಧನೆಯ ಎರಡು ಹೆಜ್ಜೆಗಳು, ಪ್ರಸಾರಾಂಗ,ಕನ್ನಡ ವಿಶ್ವವಿದ್ಯಾಲಯ,
೨೨.ಮಹಾದೇವಯ್ಯ.ಪಿ.,(ಸಂ):ದಲಿತರು ಮತ್ತು ಪರ್ಯಾಯ ರಾಜಕಾರಣ, ಪ್ರಸಾರಾಂಗ,ಕನ್ನಡ
ವಿಶ್ವವಿದ್ಯಾಲಯ, ಹಂಪಿ ೨೦೦೫.
೨೩.ಮಲ್ಲಿಕಾರ್ಜುನ ಜಿ.ಎನ್.,ಬೆಳಗಿನ ಬೆರಗು, ಲೋಹಿಯಾ ಪ್ರಕಾಶನ, ಬಳ್ಳಾರಿ ೨೦೦೪
೨೪.ಮಲ್ಲಿಕಾರ್ಜುನ ಕೂಡ್ಲಿಗೆರೆ,ಕಾಗೋಡು ಚಳವಳಿ, ಪ್ರತಿಭಾವಂತ ಸಂಸದೀಯ ಪಟುಗಳ ಬದುಕು
ಬರಹಮಾಲಿಕೆ, ವಿಧಾನಮಂಡಲ ಗ್ರಂಥಾಲಯ ಉಪಸಮಿತಿ, ವಿಧಾನಸೌಧ,ಬೆಂ. ೨೦೦೫.
೨೫.ಮೊಗಳ್ಳಿಗಣೇಶ್(ಸಂ):ದಲಿತ ಚಿಂತನೆ, ಪ್ರಸಾರಾಂಗ,ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೨
೨೬.ಮೋಹನಕೃಷ್ಣರೈ ಕೆ., ಪ್ರಭುತ್ವ ಮತ್ತು ಜನತೆ,ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ,ಹಂಪಿ-೨೦೦೪
೨೭.ಮೋಹನ್ ಕೃಷ್ಣರೈ ಕೆ.,ಪರಿಸರ ಚಳವಳಿಗಳು,ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,-೧೯೯೯
೨೮.ಮಾಧವ ಐತಾಳ್ (ಕನ್ನಡಕ್ಕೆ)ಮೂಲ: ವಂದನಾ ಶಿವಬತ್ತದ ಚಿಲುಮೆ,ಪ್ರಸಾರಾಂಗ,ಕನ್ನಡ
ವಿಶ್ವವಿದ್ಯಾಲಯ,೨೦೦೫,ಹಂಪಿ
೨೯.ಪ್ರೊ.ಲಕ್ಷ್ಮಣ್ ತೆಲಗಾವಿ,ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು,ಪ್ರಸಾರಾಂಗ, ಕನ್ನಡ
ವಿಶ್ವವಿದ್ಯಾಲಯ, ಹಂಪಿ-೧೯೯೯
೩೦.ಲಕ್ಕಪ್ಪಗೌಡ ಎಚ್.ಜೆ.,ಸಂ:ಬಂಡಾಯ ಸಾಹಿತ್ಯ ಚಳುವಳಿ೧೦ವರ್ಷ, ಕನ್ನಡ ಅಧ್ಯಯನ
ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ ೧೯೯೦.
೩೧.ರಹಮತ್ ತರೀಕೆರೆ, ಪ್ರತಿಸಂಸ್ಕೃತಿ, ಕನ್ನಡ ಸಂಘ,ಕ್ರೈಸ್ಟ್‌ಕಾಲೇಜ್,ಬೆಂಗಳೂರು.೧೯೯೩.
೩೨.ರಹಮತ್ ತರೀಕೆರೆ,ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ,ಬೆಂಗಳೂರು- ೨೦೦೪
೩೩.ರಾಮಚಂದ್ರಪ್ಪ ಬರಗೂರು, ಸಾಹಿತ್ಯ ಮತ್ತು ರಾಜಕಾರಣ, ಅಂಕಿತ ಪ್ರಕಾಶನ,ಬೆಂಗಳೂರು-೧೯೯೮
೩೪.ರಾಮಚಂದ್ರಪ್ಪ ಬರಗೂರು,ಬಂಡಾಯ ಸಾಹಿತ್ಯ ಮೀಮಾಂಸೆ, ಅಂಕಿತ ಪ್ರಕಾಶನ,ಬೆಂಗಳೂರು.
೩೫.ರಾಮಚಂದ್ರಪ್ಪ ಬರಗೂರು ,ಸಂಸ್ಕೃತಿ ಮತ್ತು ಸೃಜನಶೀಲತೆ, ಅಂಕಿತ ಪ್ರಕಾಶನ, ಬೆಂ-೧೯೮೯
೩೬.ರಾಮಭದ್ರಯ್ಯ ಸಿ. ಕರ್ನಾಟಕ ಪ್ರಾಂತರೈತ ಸಂಘ ಚರಿತ್ರೆ, ಕರ್ನಾಟಕ ಪ್ರಾಂತ ರೈತ ಸಂಘ,
ಬೆಂಗಳೂರು೧೯೯೦.
೩೭.ರಾಜಶೇಖರ್ ಜಿ.,ಕಾಗೋಡು ಸತ್ಯಾಗ್ರಹ,ಅಕ್ಷರ ಪ್ರಕಾಶನ, ಹೆಗ್ಗೋಡು,ಸಾಗರ-೧೯೮೦
೩೮.ರಾಜಶೇಖರ್ ಜಿ.ಅನು, ರೇಮಂಡ್ ವಿಲಿಯಮ್ಸ್ ಅವರ ಪರಿಸರ ರಕ್ಷಣೆ ಮತ್ತು ಸಮಾಜವಾದ,
ಅಕ್ಷರ ಪ್ರಕಾಶನ,ಹೆಗ್ಗೋಡು,ಸಾಗರ.೧೯೮೫.
೩೯.ರಜನೀಕಾಂತ್ ಎಂ.ಎಸ್.(ಸಂ):ಭೂಸುಧಾರಣೆ ಒಂದು ಚರ್ಚೆ, ಬೆಂಗಳೂರು-೧೯೮೨
೪೦.ರಾಜರಾಮಹೆಗಡೆ,ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ, ಕರ್ನಾಟಕ ಸಾಹಿತ್ಯ
ಅಕಾಡೆಮಿ, ಬೆಂಗಳೂರು-೨೦೦೪
೪೧.ರಾಜನ್ ಎಂ.ಎ.ಎಸ್., ಕರ್ನಾಟಕದಲ್ಲಿ ಭೂಸುಧಾರಣೆ ನಾನೂ ಸಹ ಹತ್ತಿರದಿಂದ ಕಂಡೆ,
ಐಬಿಎಚ್ ಪ್ರಕಾಶನ,ಬೆಂಗಳೂರು.೧೯೯೭.
೪೨.ರಾಮಕೃಷ್ಣ ಜಿ.ಮತ್ತು ಎಸ್.ಗಾಯತ್ರಿ,ಹೋರಾಟದ ಹಾದಿಯಲ್ಲಿ ಬಾಗೂರು ನವಿಲೆ ರೈತರು,
ಅಖಿಲಭಾರತ ಕಿಸಾನ್‌ಸಭಾ ಪ್ರಕಟಣೆ,ಬೆಂಗಳೂರು.೧೯೯೮
೪೩.ರಾಮಕೃಷ್ಣ ಹೆಚ್.(ಸಂ):ಒಕ್ಕಲತಿ, ಮಧುಗಿರಿ ತಾಲ್ಲೂಕು ರೈತ ಸಂಘ,ಮಧುಗಿರಿ.
೪೪.ರಾಮಚಂದ್ರನ್ ಸಿ.ಎನ್.:ವಸಾಹತೋತ್ತರ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ,
ಬೆಂಗಳೂರು.೨೦೦೨
೪೫.ಪ್ರೊ.ರಾಮಚಂದ್ರನ್ ಸಿ.ಎನ್., ಬಯಲು ರೂಪ. ಸಪ್ನ ಬುಕ್‌ಹೌಸ್,ಬೆಂಗಳೂರು.೨೦೦೬
೪೬.ರೈತ ಚಳುವಳಿ-೨೦೦೦ ಮತ್ತೆ ಪರ್ಯಾಯ ಸರ್ಕಾರದೆಡೆಗೆ,ಕರ್ನಾಟಕ ರಾಜ್ಯ ರೈತ ಸಂಘ,೨೦೦೦
೪೭.ವಡ್ಡರ್ಸೆರಘುರಾಮಶೆಟ್ಟಿ, ಬಹುರೂಪಿ ಅರಸು, ಸಪ್ನ ಬುಕ್‌ಹೌಸ್,ಬೆಂಗಳೂರು.

೯೮.ವಿಧಾನ ಸಭೆಯಲ್ಲಿ ರೈತ ಸಂಘ೧೯೯೦-೯೧ ಕರ್ನಾಟಕ ರಾಜ್ಯ ರೈತ ಸಂಘ, ಶಿವಮೊಗ್ಗ ೧೯೯೧
೯೯. ವೆಂಕಪ್ಪಗೌಡ ಕೋಣಂದೂರು,ಜೀವಂತಜ್ವಾಲೆ,ಯಶಸ್ವಿ ಪ್ರಕಾಶನ, ಬೆಂಗಳೂರು-೧೯೮೧
೧೦೦. ವೆಂಕಪ್ಪಗೌಡ ಕೋಣಂದೂರು,ಕಾಗೋಡು ಹೋರಾಟದ ರೂವಾರಿ,ಯಶಸ್ವಿಪ್ರಕಾಶನ, ಬೆಂಗಳೂರು. ೨೦೦೧.
೧೦೧.ವೆಂಕಪ್ಪಗೌಡ ಕೋಣಂದೂರು,ಭೂಸುಧಾರಣೆ ಸಾಧಕ ಎನ್.ಹುಚ್ಚಮಾಸ್ತಿಗೌಡರ ಜೀವನ ಚರಿತ್ರೆ, ಮಾನಸ ಪ್ರಕಾಶನ,ಬೆಂಗಳೂರು.
೧೦೨.ಪ್ರೊ.ವೆಂಕಟಸುಬ್ಬಯ್ಯ ಜಿ., ಕನ್ನಡ ಕ್ಲಿಷ್ಟಪದಕೋಶ,ಪ್ರಿಸಮ್‌ಬುಕ್‌ಪ್ರೈಲಿ.,ಬೆಂಗಳೂರು.೨೦೦೬
೧೦೩.ವಿರೂಪಾಕ್ಷಿ ಪೂಜಾರಹಳ್ಳಿ:ಜಲಸಂಬಂಧಿ ಚಳುವಳಿಗಳು,ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೯
೧೦೪.ವಿಷ್ಣುನಾಯ್ಕ,ದುಡಿಯುವ ಕೈಗಳ ಹೋರಾಟದ ಕತೆ, ಡಾ.ದಿನಕರ ದೇಸಾಯಿ ಸ್ಮಾರಕ ಪ್ರತಿಷ್ಠಾನ (ರಿ), ಅಂಕೋಲ(ಉ.ಕ.)-೨೦೦೪
೧೦೫. ವಿಷ್ಣುಮೂರ್ತಿ ಹೆಚ್.ಸಿ.(ಸಂ):ಗೋಪಾಲಗೌಡರ ಡೈರಿ ಪತ್ರಗಳು ಇತ್ಯಾದಿ, ಅನನ್ಯ ಪ್ರಕಾಶನ, ಮೈಸೂರು-೧೯೮೨
೧೦೬.ವಿಷ್ಣುಮೂರ್ತಿ ಹೆಚ್.ಸಿ.(ಸಂ):ಗೋಪಾಲಗೌಡ ಶಾಂತವೇರಿ ಅಂತರಂಗ ಬಹಿರಂಗ, ಅನನ್ಯ ಪ್ರಕಾಶನ, ಧಾರವಾಡ-೧೯೯೯
೧೦೭.ವೀರಣ್ಣ ಸಿ.,೧೨ನೇ ಶತಮಾನದ ಕಾಯಕ ಜೀವಿಗಳ ಚಳವಳಿ, ೧೯೭೫, ಬೆಂಗಳೂರು ವಿಶ್ವವಿದ್ಯಾಲಯ.
೧೦೮.ಡಾ.ವಿನಾಯಕ ಗೋವಿಲ್‌ಕರ್.ಮೂಲ. ಕನ್ನಡಕ್ಕೆ ಪ್ರೊ.ಕುಮಾರಸ್ವಾಮಿ, ವಿಶೇಷ ಆರ್ಥಿಕ ವಲಯಗಳು ವರವೋ ಅಥವಾ ಶಾಪವೋ,ಸ್ವದೇಶಿ ಜಾಗೃತಿ ಪ್ರಕಾಶನ,ಬೆಂಗಳೂರು.೨೦೦೭.
೧೦೯.ಶೇಷಗಿರಿರಾವ್ ಎಲ್.ಎಸ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತಪುಸ್ತಕ ಪ್ರಕಾಶನ,ಬೆಂ- ೨೦೦೨
೧೧೦.ಶಿವರಾಮಪಡಿಕ್ಕಲ್, ನಾಡು ನುಡಿಯ ರೂಪಕ,ಪ್ರಸಾರಾಂಗ, ಮಂಗಳೂರು ವಿ.ವಿ.- ೨೦೦೧
೧೧೧.ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ,ಬೆಂ- ೨೦೦೦
೧೧೨. ಶಿವಾನಂದಗುಬ್ಬಣ್ಣವರ,ನರಗುಂದ ನವಲಗುಂದ ರೈತ ಹೋರಾಟ, ಅಕ್ಷಯ ಪ್ರಕಾಶನ, ಧಾರವಾಡ ೧೯೯೫
೧೧೩.ಶಾರದಾ ಬಿ.ಎನ್. (ಸಂ):ಸಮಾಜವಾದವೇ ಪರ್ಯಾಯ, ಸಂಬುದ್ಧ ಪ್ರಕಾಶನ,ಬೆಂಗಳೂರು೨೦೦೪.
೧೧೪.ಸಂಗಮೇಶ ಸವದತ್ತಿ, ಕನ್ನಡ ಸಂಶೋಧನಾ ಕೈಪಿಡಿ, ವಿದ್ಯಾನಿಧಿ ಪ್ರಕಾಶನ, ಗದಗ.೧೧೯೩
೧೧೫.ಸೀತರಾಮ ಅಯ್ಯಂಗಾರ್ ಎನ್.ಕೆ.(ಸಂ):ಕಾಗೋಡು ಕ್ರಾಂತಿ ನೆನಪಿನ ಸಂಚಿಕೆ, ಸಾಗರ-೧೯೮೧
೧೧೬.ಹನುಮಂತ ,ಸಂಡೂರು ಹೋರಾಟ, ಜನಪ್ರಕಾಶನ, ಬೆಂಗಳೂರು-೧೯೮೦
೧೧೭.ಹನುಮಂತ(ಸಂ):ಸಮಾಜವಾದ, ಜನಪ್ರಕಾಶನ, ಬೆಂಗಳೂರು-೧೯೮೧.
೧೧೮.ಹನುಮಂತಯ್ಯಎಲ್., ಕಥಾಕಥನ(ಬಂಡಾಯಕಥೆಗಳಲ್ಲಿ ದಲಿತಪ್ರಜ್ಞೆ), ಸಿ.ವಿ.ಜಿ., ಬೆಂ.೧೯೯೯.
೧೧೯.ಹೊನ್ನಯ್ಯ ಸಿ.ಬಿ., ಕನ್ನಡ ಸಣ್ಣ ಕತೆಗಳಲ್ಲಿ ದಲಿತ ಸಂಸ್ಕೃತಿ, ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಬೆಗಳೂರು-೨೦೦೪
೧೨೦.ಕ್ಷೀರಸಾಗರ,ದಿಕ್ಕುತಪ್ಪಿದ ಕರ್ನಾಟಕ ಭೂಸುಧಾರಣೆ, ಸಿಯಡ್ಸ್,ಬೆಂಗಳೂರು-೧೯೮೫

## ೧.೩ ಪರಾಮರ್ಶನ ಲೇಖನಗಳು

೧. ಅರಿವು ಬರಹ, ರೈತ ಸಂಘಟನೆ ಮತ್ತು ಭಾರತದ ಎಡಪಂಥೀಯ ರಾಜಕಾರಣ, ನಂ. ೭,೧೯೨೫-೪೭-೧೯೯೪

೨.ಈಶ್ವರ್,ಇದು ಸರ್ಕಾರಿ ಲ್ಯಾಂಡ್ ಮಾಫಿಯಾ ಮನೆಹಾಳರ ಕೈಗಾರಿಕಾ ನೀತಿ, ಅಗ್ನಿ, ಸೆಪ್ಟೆಂಬರ್ ೭, ೨೦೦೬.

೩.ಕುಲಕರ್ಣಿ ಡಿ.ಕೆ. ಯವರ "ಶಿವಮೊಗ್ಗ ಜಿಲ್ಲೆಯಲ್ಲಿ ರೈತ ಸಂಘಟನೆ ಮತ್ತು ಚಳುವಳಿಗಳು" ಇತಿಹಾಸ ದರ್ಶನ ಸಂಪುಟ ೫,೧೯೯೦

೪. ಪ್ರೊ.ಕುರುಪ್ ಕೆ.ಎನ್, ಭೂಸ್ವಾಮ್ಯ ಮತ್ತು ಸಾಮಾಜಿಕ ಬದಲಾವಣೆ:ವಸಾಹತುಶಾಹಿಯ ಸಂದರ್ಭದಲ್ಲಿ ದಕ್ಷಿಣ ಕನ್ನಡ" ಕರ್ನಾಟಕ ಚರಿತ್ರೆ ಸಂಪುಟ ೬ ಕನ್ನಡ ವಿಶ್ವವಿದ್ಯಾಲಯ ಚರಿತ್ರೆ

೫. ಪ್ರೊ.ಬಿ.ಎಂ.ಕುಮಾರಸ್ವಾಮಿ. (ಅನು),ಮೂಲ ವಿನಾಯಕ ಗೋವಿಲ್‌ಕರ್, ವಿಶೇಷ ಆರ್ಥಿಕ ವಲಯಗಳು ವರವೋ ಅಥವಾ ಶಾಪವೋ ಸ್ವದೇಶಿ ಜಾಗೃತಿ ಪ್ರಕಾಶನ,ಬೆಂಗಳೂರು.೨೦೦೭ ಪುಟ ೬

ಮಾಲೆ ೧೯೯೭.

೬.ಜನತಾ ಸರ್ಕಾರದಲ್ಲಿ ರೈತರ ಮೇಲೆ ಪೊಲೀಸ್ ದೌರ್ಜನ್ಯ ,ಕರ್ನಾಟಕ ರಾಜ್ಯ ರೈತ ಸಂಘ,ಬೆಂಗಳೂರು.

೭.ನಟರಾಜ ಹುಳಿಯಾರ್, ರೈತ ಚಳವಳಿ:ನ್ಯಾಯಬದ್ಧ ಕನಸುಗಳು" ಲಂಕೇಶ್ ಪತ್ರಿಕೆ, ಡಿಸೆಂಬರ್ ೮, ೧೯೯೮.

೮.ನಾಗಭೂಷಣ ಪಾಟೀಲ್, ಜಾಗತೀಕರಣ ಮತ್ತು ಭಾರತದ ರೈತ" ಪ್ರಜಾವಾಣಿ ೩೧.೧೨.೧೯೯೮

೯.ಓ.ಎಲ್.ನಾಗಭೂಷಣಸ್ವಾಮಿ, ಕನ್ನಡಕ್ಕೆ ಮೂಲ: ವೀಣಾದಾಸ್, ಸಬಾಲ್ಟ್ರನ್ ಅಧ್ಯಯನಗಳು ಚಿಂತನೆಗೊಂದು ಹೊಸ ಚೌಕಟ್ಟು, ಬುಡಕಟ್ಟು ಅಧ್ಯಯನ,ಕನ್ನಡ ವಿಶ್ವವಿದ್ಯಾಲಯ, ೨೦೦೫

೧೦.ಪರ್ಯಾಯ ಕೃಷಿ ನೀತಿ, ಕರ್ನಾಟಕ ಪ್ರಾಂತ ರೈತ ಸಂಘ ಹಾಗೂ ಕರ್ನಾಟಕ ಪ್ರಾಂತ ಕೃಷಿ ಕೂಲಿಕಾರರ ಸಂಘ ೨೦೦೩

೧೧.ಮುಜಾಫರ್ ಅಸ್ಸಾದಿ, ಭಾರತದ ಪ್ರಜಾಪ್ರಭುತ್ವ ಮತ್ತು ರೈತ ಹೋರಾಟ" ರುಜುವಾತು ಅಕ್ಟೋಬರ್ ಡಿಸೆಂಬರ್ ೧೯೮೨

೧೨.ಮುಜಾಫರ್ ಅಸ್ಸಾದಿ, ರೈತರ ಆತ್ಮಹತ್ಯೆ ಯಾಕೆ ನಡೆದವು?", ಕನ್ನಡ ಅಧ್ಯಯನ ಗಾಳಿ ಸಂಚಿಕೆ ೧೯೯೯, ಕನ್ನಡ ವಿಶ್ವವಿದ್ಯಾಲಯ

೧೩.ರಾಜಶೇಖರ ಜಿ.,ಶಿವಮೊಗ್ಗ ರೈತ ಚಳವಳಿಯ ತಾತ್ವಿಕ ನೆಲೆಗಳು" ರುಜುವಾತು ಅಕ್ಟೋಬರ್ ಡಿಸೆಂಬರ್ ೧೯೮೨

೧೪.ರಹಮತ್‌ತರೀಕೆರೆ "ಗಣಪತಿಯಪ್ಪ"ರವರ ಸಂದರ್ಶನ, ಕನ್ನಡ ಅಧ್ಯಯನ ಸಂಚಿಕೆ, ಕನ್ನಡ ವಿಶ್ವವಿದ್ಯಾಲಯ ಗಾಳಿ ಸಂಚಿಕೆ,ಹಂಪಿ.

೧೫.ರೈತ ಚಳವಳಿ-೨೦೦೦ಮತ್ತೆ ಪರ್ಯಾಯ ಸರ್ಕಾರದೆಡೆಗೆ" ರೈತ ಚಳವಳಿಯ ಆತ್ಮಾವಲೋಕನ ೧೯೮೦- ೨೦೦೦

೧೬.ಸೆಬಾಸ್ಟಿನ್ ಜೋಸೆಫ್ ಎಂ. "ನಗರ ಡಿವಿಷನ್ನಿನಲ್ಲಿ ನಡೆದ ರೈತರ ದಂಗೆ:ಒಂದು ವಿವೇಚನೆ" ಸಾಧನೆ ಬೆಂಗಳೂರು.೧೯೮೦

೧೭.ಸೆಬಾಸ್ಟಿನ್ ಜೋಸೆಫ್, ಯತೀಶ್‌ಕುಮಾರ್ "ರೈತ ಬಂಡಾಯ:ಕೆಳಕೊಡಗು ಮತ್ತು ದಕ್ಷಿಣ ಕನ್ನಡಗಳಲ್ಲಿ" ಕರ್ನಾಟಕ ಚರಿತ್ರೆ ಸಂಪುಟ ೬, ೧೯೯೭ , ಕನ್ನಡ ವಿಶ್ವವಿದ್ಯಾಲಯ.

೧೮.ಯತಿರಾಜು ಸಿ. "ನಕ್ಸಲ್ ಬಾರಿ ರೈತ ದಂಗೆ :ಒಂದು ಚಾರಿತ್ರಿಕ ವಿಶ್ಲೇಷಣೆ" ಸಂಕ್ರಮಣ ಸಂಪುಟ ೧೭, ಡಿಸೆಂಬರ್ ೧೯೮೧

